ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

ಶ್ರೀ

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೆ

(ಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
- ೧೯೫೨

# ಶ್ರೀಸ್ಕಾಂದಮಹಾಪುರಾಣಂ

೬

## ನಾಗರಖಂಡ

ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ (ಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

ಓ

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ

(ಭಾಗ ೧)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೫೨

# ಅರಿಕೆ

ಈ ಇಪ್ಪತ್ತನಾಲ್ಕನೆಯ ಸಂಪುಟದಿಂದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ಖಂಡವಾದ ನಾಗರಖಂಡವು ಉಪಕ್ರಮವಾಗಿದೆ. ಈ ಖಂಡದಲ್ಲಿ "ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೆ" ಎಂಬ ಒಂದೇ ಪ್ರಕರಣವಿರುವುದು. ಇದು ೨೫೦ ಅಧ್ಯಾಯಗಳುಳ್ಳುದಾಗಿದೆ. ಈ ಸಂಪುಟದಲ್ಲಿ ಅದರಲ್ಲಿಯ ೭೫ ಅಧ್ಯಾಯಗಳನ್ನು ಮಾತ್ರ ಕೊಟ್ಟಿದೆ. ಉಳಿದ ಭಾಗವೆಲ್ಲ ಇನ್ನೆರಡು ಸಂಪುಟಗಳಲ್ಲಿ ಮುಗಿಯುತ್ತದೆ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಪ್ರಾರ್ಥಿಸುತ್ತೇನೆ.

ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಸ ಧೂರ್ಜಟಿಜಟಾಜೂಟೋ ಜಾಯತಾಂ ವಿಜಯಾಯ ವಃ ।**
**ಯತ್ರೈಕಪಲಿತಭ್ರಾಂತಿಂ ಕರೋತ್ಯದ್ಯಾಽಪಿ ಜಾಹ್ನವೀ ॥**

**ತಾತ್ಪರ್ಯ**

ಗಂಗಾದೇವಿ (ನದಿ)ಯು,
ಯಾವ ಜಟಾಜೂಟದಲ್ಲಿ ನೆಲಸಿ ಅವರಲ್ಲಿ ಒಂದೇ ಒಂದು
ನೆರೆಗೂದಲಿರುವುದೆಂಬ ಭ್ರಾಂತಿಯನ್ನು ಇಂದಿಗೂ ಉಂಟುಮಾಡುತ್ತಿರುವಳೋ
ಆ ಧೂರ್ಜಟಿಯ ಜಟಾಜೂಟವು ಭಕ್ತರಾದ ನಮ್ಮ
ವಿಜಯಕ್ಕಾಗಿ ನೆರವಾಗಲಿ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಷಷ್ಠೇ ನಾಗರಖಂಡೇ
## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರವೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಪ್ರಥಮೋಽಧ್ಯಾಯಃ

#### ಲಿಂಗೋತ್ಪತ್ತಿವರ್ಣನಂ

ಋಷಯ ಊಚುಃ:—
ಹರಸ್ಯ ಪೂಜ್ಯತೇ ಲಿಂಗಂ ಕಸ್ಮಾದೇತನ್ಮಹಾಮತೇ ।
ವಿಶೇಷಾತ್ಸಂಪರಿತ್ಯಜ್ಯ ಶೇಷಾಂಗಾನಿ ಸುರಾಸುರೈಃ ॥ ೧ ॥
ತಸ್ಮಾದೇತನ್ಮಹಾಬಾಹೋ ಯಥಾವದ್ವಕ್ತುಮರ್ಹಸಿ ।
ಸಾಂಪ್ರತಂ ಸೂತ ಕಾರ್ತ್ಸ್ನ್ಯೇನ ಪರಂ ಕೌತೂಹಲಂ ಹಿನಃ ॥ ೨ ॥

---

### ಕನ್ನಡದ ಅನುವಾದ

#### ಲಿಂಗೋತ್ಪತ್ತಿವರ್ಣನ

೧. ಋಷಿಗಳು ಕೇಳುತ್ತಾರೆ:—ಎಲೈ ಸೂತಪುರಾಣಿಕನೆ, ಪರಮೇಶ್ವರನ ಉಳಿದ ಅಂಗಗಳೆಲ್ಲವನ್ನೂ ಬಿಟ್ಟು, ಸುರಾಸುರರೆಲ್ಲರೂ ಲಿಂಗವನ್ನೇ ಪೂಜಿಸುವರೇಕೆಂಬ ವಿಚಾರವನ್ನು ಮಹಾಬುದ್ಧಿಶಾಲಿಯಾದ ನೀನು ನಮಗೆ ತಿಳಿಸುವ ಅನುಗ್ರಹವನ್ನು ಮಾಡು.

೨. ಎಲೈ ಮಹಾಬಾಹುವೆ, ಪ್ರಕೃತದಲ್ಲಿ ನೀನು ಈ ವಿಷಯವನ್ನು ಸಂಪೂರ್ಣವಾಗಿಯೂ ವಿಶದವಾಗಿಯೂ ನಮಗೆ ತಿಳಿಯಹೇಳಬೇಕು. ಇದನ್ನು ಕೇಳಲು ನಮಗೆ ತುಂಬ ಕುತೂಹಲವಾಗಿರುವುದು.

ಸೂತ ಉವಾಚ:—

ಪ್ರಶ್ನಭಾರೋ ಮಹಾನೇಷ ಯೋ ಭವದ್ಭಿರುದಾಹೃತಃ ।
ಕೀರ್ತಯಿಷ್ಯೇ ತಥಾಽಪ್ಯೇನಂ ನಮಸ್ಕೃತ್ಯ ಸ್ವಯಂಭುವೇ ॥ ೩ ॥
ಆನರ್ತವಿಷಯೇ ಚಾಸ್ತಿ ವನಂ ಮುನಿಜನಾಶ್ರಯಂ ।
ಮನೋಜ್ಞಂ ಸರ್ವಸತ್ವಾನಾಂ ಸರ್ವರ್ತುಫಲಿತದ್ರುಮಂ ॥ ೪ ॥
ತತ್ರಾಶ್ರಮಪದಂ ರಮ್ಯಂ ಸೌಮ್ಯಸತ್ವನಿಷೇವಿತಂ ।
ಅಸ್ತಿ ತಾಪಸಸಂಕೀರ್ಣಂ ವೇದಧ್ವನಿವಿರಾಜಿತಂ ॥ ೫ ॥
ಅಬ್ಭಕ್ಷೈರ್ವಾಯುಭಕ್ಷೈಶ್ಚ ಶೀರ್ಣಪರ್ಣಾಶಿಭಿಸ್ತಥಾ ।
ದಂತೋಲೂಖಲಿಭಿರ್ವಿಪ್ರೈಃ ಸೇವಿತಂ ಚಾಶ್ಮಕುಟ್ಟಕೈಃ ॥ ೬ ॥
ಸ್ನಾನಹೋಮಪರೈಶ್ಚೈವ ಜಪಸ್ವಾಧ್ಯಾಯತತ್ಪರೈಃ ।
ವಾನಪ್ರಸ್ಥೈಸ್ತ್ರಿದಂಡ್ಯೈಶ್ಚ ಹಂಸೈಶ್ಚಾಽಪಿ ಕುಟೀಚಕೈಃ ॥ ೭ ॥
ಸ್ನಾತಕೈರ್ಯತಿಭಿರ್ದಾಂತೈಸ್ತಥಾ ಪಂಚಾಽಗ್ನಿಸಾಧಕೈಃ ।
ಕಸ್ಯಚಿತ್ತ್ವಥ ಕಾಲಸ್ಯ ಭಗವಾಂಸ್ತ್ರಿಪುರಾಂತಕಃ ॥ ೮ ॥

---

೩. ಸೂತನು ಹೇಳುತ್ತಾನೆ:—ಅಯ್ಯಾ ಮಹರ್ಷಿಗಳಿರಾ, ನೀವು ಈಗ ಕೇಳಿದ ಪ್ರಶ್ನೆಯು ಬಹಳ ದೊಡ್ಡದು. ಆದರೂ ಸ್ವಯಂಭುವಾದ ಆ ಸ್ವಯಂಭುವನ್ನು ನಮಸ್ಕರಿಸಿ ಈ ವಿಷಯವನ್ನು ಕೀರ್ತಿಸುತ್ತೇನೆ.

೪. ಆನರ್ತದೇಶದಲ್ಲಿ ಮುನಿಜನಗಳಿಗೆ ಮಾತ್ರವೆ ಅಲ್ಲದೆ, ಸಮಸ್ತ ಪ್ರಾಣಿಗಳಿಗೂ ಆಶ್ರಯವಾಗಿ ಸಮಸ್ತ ಋತುಗಳಲ್ಲಿಯೂ ಫಲಗಳನ್ನು ಬಿಡುವ ಗಿಡಮರಗಳಿಂದ ತುಂಬಿ ಮನೋಹರವಾಗಿರುವ ಒಂದು ವನಪ್ರದೇಶವುಂಟು.

೫. ಅಲ್ಲಿಯೇ ರಮಣೀಯವಾದೊಂದು ಆಶ್ರಮವಿರುವುದು. ಅನೇಕ ಸಾಧುಪ್ರಾಣಿಗಳಿಂದ ನಿಷೇವಿತವಾಗಿ, ತಾಪಸರಿಂದ ನಿಬಿಡವಾಗಿ, ವೇದಧ್ವನಿಗಳಿಂದ ವಿರಾಜಿತವಾಗಿ ಆ ಆಶ್ರಮವು ಬಹು ಪವಿತ್ರವಾಗಿರುವುದು.

೬. ಕೇವಲ ಜಲಪಾನ ಮಾಡಿಕೊಂಡೇ ತಪಸ್ಸನ್ನೆಸಗುವವರೂ, ವಾಯುಭಕ್ಷಕರೂ, ಮರದಿಂದ ತಾನಾಗಿಯೇ ಉದುರಿದ ಹಣ್ಣೆಲೆಗಳಿಂದ ತಪೋಜೀವನವನ್ನು ಮಾಡುವವರೂ, ಹಲ್ಲು, ಒರಳು, ಕಲ್ಲುಗಳಿಂದಲೆ ಧಾನ್ಯಾದಿಗಳನ್ನು ಸೇವಿಸುವವರೂ ಆದ ತಪಸ್ವಿಗಳು ಅಲ್ಲಿ ನೆಲಸಿರುವರು.

೭. ಸ್ನಾನ, ಹೋಮ, ಜಪ, ವೇದಾಧ್ಯಯನಗಳಲ್ಲಿ ನಿರತರಾಗಿರುವ ವಾನಪ್ರಸ್ಥರಿಂದಲೂ, ತ್ರಿದಂಡಿಸನ್ಯಾಸಿಗಳಿಂದಲೂ, ಪರಮಹಂಸರಿಂದಲೂ, ಕುಟೀಚಕರಿಂದಲೂ ಆ ಆಶ್ರಮವು ಕಂಗೊಳಿಸುತ್ತಿರುವುದು.

೮–೯. ವಿದ್ಯಾವ್ರತಸ್ನಾತರಿಂದಲೂ ಇಂದ್ರಿಯನಿಗ್ರಹವುಳ್ಳ ಯತಿಶ್ರೇಷ್ಠರಿಂದಲೂ ಪಂಚಾಗ್ನಿಸಾಧಕರಿಂದಲೂ ಅದು ತುಂಬಿ ತುಳುಕುತ್ತಿರುವುದು.

ಸತೀವಿಯೋಗಸಂತಪ್ತೋ ಭ್ರಮಮಾಣ ಇತಸ್ತತಃ ।
ತಸ್ಮಿನ್ವನೇ ಸಮಾಯಾತಃ ಸೌಮ್ಯಸತ್ವನಿಷೇವಿತೇ ॥ ೯ ॥
ಕ್ರೀಡಂತಿ ಸಕುಲಾ ಯತ್ರ ಸಾರ್ಧಂ ಸರ್ವೈಃ ಪ್ರಹರ್ಷಿತಾಃ ।
ಪಂಚಾನನಾಶ್ಚ ಮಾತಂಗೈರ್ಪೃಷದಂಶಾಸ್ತ್ವಥಾಖುಭಿಃ ।
ಕಾಕಾಃ ಕೌಶಿಕಸಂಘೈಶ್ಚ ವೈರಭಾವವಿವರ್ಜಿತಾಃ ॥ ೧೦ ॥
ತತಶ್ಚ ಭಗವಾನ್ ರುದ್ರೋ ದೃಷ್ಟ್ವಾಶ್ರಮಪದಂ ತದಾ ।
ನಗ್ನಃ ಕಪಾಲಮಾದಾಯ ಭಿಕ್ಷಾರ್ಥಂ ಪ್ರವಿವೇಶ ಸಃ ॥ ೧೧ ॥
ಅಥ ತಸ್ಯ ಸಮಾಲೋಕ್ಯ ರೂಪಂ ಗಾತ್ರಸಮುದ್ಭವಂ ।
ಅದೃಷ್ಟಪೂರ್ವಂ ತಾಪಸ್ಯಃ ಸರ್ವಾಃ ಕಾಮವಶಂಗತಾಃ ॥ ೧೨ ॥
ಗೃಹಕರ್ಮ ಪರಿತ್ಯಜ್ಯ ಗುರುಶುಶ್ರೂಷಣಾನಿ ಚ ।
ಮಿಥಃ ಸಂಭಾಷಣಂ ಚಕ್ರುಃ ಸ್ಥಾನೇ ಸ್ಥಾನೇ ಚ ತಾಃ ಸ್ಥಿತಾಃ ॥ ೧೩ ॥
ಏಕಾ ಸಾ ಕಾಽಪಿ ಧನ್ಯಾ ಯಾ ಚಕ್ರೇ ತಸ್ಯಾಽವಗೂಹನಂ ।
ವಿಶ್ರಬ್ಧಾ ಸರ್ವಗಾತ್ರೇಷು ತಾಪಸಸ್ಯ ಮಹಾತ್ಮನಃ ॥ ೧೪ ॥

---

ಹೀಗಿರುವಲ್ಲಿ ಒಮ್ಮೆ ಷಡ್ಗುಣೈಶ್ವರ್ಯಸಂಪನ್ನನಾದ ತ್ರಿಪುರಾಂತಕನು ಸತೀದೇವಿಯ ವಿಯೋಗದಿಂದ ಸಂತಪ್ತಹೃದಯನಾಗಿ ಅಲ್ಲಲ್ಲಿ ಸಂಚರಿಸುತ್ತ ಸೌಮ್ಯವಾದ ಪ್ರಾಣಿಸಮೂಹಗಳಿಂದ ಸಂಸೇವಿತವಾಗಿದ್ದ ಆ ತಪೋವನಕ್ಕೆ ಬಂದನು.

೧೦. ಆ ವನದಲ್ಲಿಯಾದರೋ ಮುಂಗಸಿಗಳು ಸರ್ಪಗಳೊಡನೆಯೂ, ಸಿಂಹಗಳು ಮದದಾನೆಗಳೊಡನೆಯೂ, ಬೆಕ್ಕುಗಳು ಇಲಿಗಳೊಡನೆಯೂ, ಕಾಗೆಗಳು ಗೂಬೆಗಳೊಡನೆಯೂ ವೈರಭಾವವನ್ನು ತೊರೆದು ಸಂತೋಷವಾಗಿ ಕ್ರೀಡಿಸುತ್ತಿದ್ದವು.

೧೧. ಭಗವಾನ್ ರುದ್ರನು ಅಂತಹ ಆಶ್ರಮಪದವನ್ನು ಕಂಡು ದಿಗಂಬರನಾಗಿಯೇ ಕಪಾಲವನ್ನು ಹಿಡಿದು ಭಿಕ್ಷಾರ್ಥಿಯಾಗಿ ಅದನ್ನು ಪ್ರವೇಶಿಸಿದನು.

೧೨. ತರುವಾಯ ಹಿಂದಾವಾಗಲೂ ಕಂಡರಿಯದಿದ್ದ ಆ ಪರಮೇಶ್ವರನ ದೇಹಸೌಂದರ್ಯವನ್ನು ಕಂಡು ತಪೋವನದ ತಾಪಸಿಯರೆಲ್ಲರೂ ಕಾಮವಿಕಾರಕ್ಕೊಳಗಾದರು.

೧೩. ಅವರು ಮನೆಗೆಲಸಗಳನ್ನು ತೊರೆದು, ಪತಿ ಶುಶ್ರೂಷೆಯನ್ನೂ ಲೆಕ್ಕಿಸದೆ ಅಲ್ಲಲ್ಲಿ ನಿಂತು ಪರಸ್ಪರವಾಗಿ ಮಾತನಾಡತೊಡಗಿದರು.

೧೪. ಅವರಲ್ಲಿ ಒಬ್ಬಾನೊಬ್ಬ ಪುಣ್ಯವಂತೆಯು ಧೈರ್ಯವನ್ನು ತಂದುಕೊಂಡು ಮಹಾತ್ಮನಾದ ಆ ತಪಸ್ವಿಶಿವನ ಸರ್ವಗಾತ್ರಗಳನ್ನು ಆಲಂಗಿಸಿದಳು.

ತಥಾಽನ್ಯಾಃ ಕೌತುಕಾವಿಷ್ಟಾ ಧಾವಂತ್ಯಃ ಸರ್ವತೋ ದಿಶಂ ।
ದೃಶ್ಯಂತೇ ತಂ ಸಮುದ್ದಿಶ್ಯ ವಿಸ್ತಾರಿತವಿಲೋಚನಾಃ ॥ ೧೫ ॥
ಕಾಶ್ಚಿದರ್ಧಾನುಲಿಪ್ತಾಂಗ್ಯಃ ಕಾಶ್ಚಿದೇಕಾಂಚಿತೇಕ್ಷಣಾಃ ।
ಅರ್ಧಸಂಯಮಿತೈಃ ಕೇಶೈಸ್ತಥಾಽನ್ಯಾಸ್ತ್ಯಕ್ತಬಾಲಕಾಃ ॥ ೧೬ ॥
ಏವಮಾಲೋಕ್ಯಮಾನಃ ಸ ಕಾಮಿನೀಭಿರ್ಮಹೇಶ್ವರಃ ।
ಬಭ್ರಾಮ ರಾಜಮಾರ್ಗೇಣ ಭಿಕ್ಷಾಂ ದೇಹೀತಿ ಕೀರ್ತಯನ್ ॥ ೧೭ ॥
ಅಥ ತೇ ಮುನಯೋ ದೃಷ್ಟ್ವಾ ತಂ ತಥಾ ವಿಗತಾಂಬರಂ ।
ಕಾಮೋದ್ಭವಕರಂ ಸ್ತ್ರೀಣಾಂ ಪ್ರೋಚುಃ ಕೋಪಾರುಣೇಕ್ಷಣಾಃ ॥ ೧೮ ॥
ಯಸ್ಮಾತ್ಪಾಪ ತ್ವಯಾಽಸ್ಮಾಕಮಾಶ್ರಮೋಽಯಂ ವಿಡಂಬಿತಃ ।
ತಸ್ಮಾಲ್ಲಿಂಗಂ ಪತತ್ವಾಶು ತವೈವ ವಸುಧಾತಲೇ ॥ ೧೯ ॥
ಏತಸ್ಮಿನ್ನಂತರೇ ಭೂಮೌ ಲಿಂಗಂ ತಸ್ಯ ಪಪಾತ ತತ್ ।
ಭಿತ್ವಾಽಥ ಧರಣೀಪೃಷ್ಠಂ ಪಾತಾಲಂ ಪ್ರವಿವೇಶ ಹ ॥ ೨೦ ॥

---

೧೫. ಅಂತೆಯೆ ಇತರ ಸ್ತ್ರೀಯರೂ ಕೌತುಕಾವಿಷ್ಟರಾಗಿ ಎಲ್ಲ ದಿಕ್ಕುಗಳಿಂದಲೂ ಓಡಿಬಂದು ಅರಳುಗಂಗಳಿಂದ ಆ ಪರಮೇಶ್ವರನನ್ನು ನೋಡತೊಡಗಿದರು.

೧೬. ಅವರಲ್ಲಿ ಕೆಲವರು ಅರೆಬರೆಯಾಗಿ ಅಂಗಲೇಪನವನ್ನು ಮಾಡಿಕೊಂಡಿದ್ದರು; ಇನ್ನು ಕೆಲವರು ವಾರೆನೋಟಗಳಿಂದ ಆ ಶಿವನನ್ನು ನೋಡುತ್ತಿದ್ದರು. ಮತ್ತೆ ಕೆಲವರು ಅರ್ಧಮರ್ಧವಾಗಿ ತುರುಬುಗಳನ್ನು ಹೆಣೆದುಕೊಂಡಿದ್ದರು. ಕೆಲವರು ಮಕ್ಕಳನ್ನೇ ಬಿಟ್ಟುಬಂದಿದ್ದರು.

೧೭. ಹೀಗೆ ಆ ಕಾಮಿನಿಯರೆಲ್ಲರೂ ಕಾಮವಿಕಾರಕ್ಕೊಳಗಾದ ದೃಷ್ಟಿಯಿಂದ ತನ್ನನ್ನೇ ನೋಡುತ್ತಿರಲು ಆ ಮಹೇಶ್ವರನು ಯಾವ ವಿಕಾರಕ್ಕೂ ಒಳಗಾಗದೆ ಅಲ್ಲಿಯ ರಾಜಮಾರ್ಗದಲ್ಲಿ 'ಭಿಕ್ಷಾಂದೇಹಿ' ಎಂದು ಸಾರಿ ಹೇಳುತ್ತ ನಡೆತಂದನು.

೧೮. ಬಳಿಕ ಆಶ್ರಮದ ಸ್ತ್ರೀಯರೆಲ್ಲರಿಗೂ ಕಾಮವಿಕಾರವನ್ನುಂಟುಮಾಡುವಂತೆ ದಿಗಂಬರನಾಗಿ ಬರುತ್ತಿರುವ ಆತನನ್ನು ಕಂಡ ಅಲ್ಲಿಯ ಮುನಿಗಳೆಲ್ಲರೂ ಕೋಪದಿಂದ ಕಣ್ಣುಗಳನ್ನು ಕೆಂಪಾಗಿಸಿಕೊಂಡು ಆತನನ್ನು ಕುರಿತು :—

೧೯. "ಎಲಾ ಪಾಪಿಯೆ, ನೀನು ನಮ್ಮ ಆಶ್ರಮವನ್ನು ಅಪವಿತ್ರಗೊಳಿಸಿದೆ. ಈ ಕಾರಣದಿಂದ ನಿನ್ನ ಲಿಂಗವು ಜಾಗ್ರತೆಯಾಗಿ ಭೂಮಿಗೆ ಬಿದ್ದು ಹೋಗಲಿ" ಎಂದರು.

೨೦. ಮುನಿಗಳು ಹೀಗೆ ಹೇಳಿದೊಡನೆಯೇ ಆ ಪಾರಮೇಶ್ವರ ಲಿಂಗವು ಭೂಮಿಗೆ ಬಿದ್ದು ಅದನ್ನು ಭೇದಿಸಿಕೊಂಡು ಪಾತಾಳವನ್ನು ಸೇರಿತು.

ಸೋಽಪಿ ಲಿಂಗಪರಿತ್ಯಕ್ತೋ ಲಜ್ಜಾಯುಕ್ತೋ ಮಹೇಶ್ವರಃ ।
ಗರ್ತಾಂ ಗುರ್ವಿಂ ಸಮಾಶ್ರಿತ್ಯ ಭ್ರೂಣರೂಪಃ ಸಮಾವಿಶತ್ ॥ ೨೧ ॥
ಅಥ ಲಿಂಗಸ್ಯ ಪಾತೇನ ತ್ರೈಲೋಕ್ಯಭಯಶಂಸಿನಃ ।
ಉತ್ಪಾತಾ ದಾರುಣಾಸ್ತಸ್ಥುಃ ಸರ್ವತ್ರ ದ್ವಿಜಸತ್ತಮಾಃ ॥ ೨೨ ॥
ಶೀರ್ಯಂತೇ ಗಿರಿಶೃಂಗಾಣಿ ಪತಂತ್ಯುಲ್ಕಾ ದಿವಾಽಪಿ ಚ ।
ತ್ಯಜಂತಿ ಸಾಗರಾಃ ಸರ್ವೇ ಮರ್ಯಾದಾಂ ಚ ಶನೈಃ ಶನೈಃ ॥ ೨೩ ॥
ಅಥ ದೇವಗಣಾಃ ಸರ್ವೇ ಭಯಸಂತ್ರಸ್ತಮಾನಸಾಃ ।
ಶಕ್ರವಿಷ್ಣುಮುಖಾ ಜಗ್ಮುರ್ಯತ್ರ ದೇವಃ ಪಿತಾಮಹಃ ॥ ೨೪ ॥
ಪ್ರೋಚುಶ್ಚ ಪ್ರಣತಾಃ ಸ್ತುತ್ವಾ ಸ್ತೋತ್ರೈಃ ಸಂಶ್ರುತಿಸಂಭವೈಃ ।
ತ್ರೈಲೋಕ್ಯೇ ಸೃಷ್ಟಿರೂಪಂ ಯತ್ಕಮಲಾಸನಸಂಸ್ಥಿತಂ ॥ ೨೫ ॥
ಕಿಮಿದಂ ಕಿಮಿದಂ ದೇವ ವರ್ತತೇ ಹ್ಯಧರೋತ್ತರಂ ।
ತ್ರೈಲೋಕ್ಯಂ ಸಕಲಂ ಯೇನ ವ್ಯಾಕುಲತ್ವಮುಪಾಗತಂ ॥ ೨೬ ॥
ಪ್ರಲಯಸ್ಯೇವ ಚಿಹ್ನಾನಿ ದೃಶ್ಯಂತೇ ಪದ್ಮಸಂಭವ ।
ಕಿಂ ಸಾಂಪ್ರತಮಕಾಲೇಽಪಿ ಭವಿಷ್ಯತಿ ಪರಿಕ್ಷಯಃ ॥ ೨೭ ॥

---

೨೧–೨೨. ಆ ಮಹೇಶ್ವರನಾದರೋ ಲಿಂಗವಿಹೀನನಾದುದರಿಂದ ಬಹುವಾಗಿ ನಾಚಿ ದೊಡ್ಡದೊಂದು ಹಳ್ಳವನ್ನು ಸೇರಿ ಅಲ್ಲಿ ಭ್ರೂಣರೂಪವನ್ನು ತಳೆದು ಒಳಹೊಕ್ಕನು. ಹೀಗೆ ಪರಮೇಶ್ವರನ ಲಿಂಗವು ಭೂಮಿಗೆ ಬಿದ್ದೊಡನೆ ಮೂರು ಲೋಕಗಳಿಗೂ ಭಯವನ್ನುಂಟುಮಾಡುವ ಅತ್ಯುಗ್ರವಾದ ಉತ್ಪಾತಗಳು ತಲೆದೋರಿದುವು.

೨೩. ಪರ್ವತಗಳ ಕೋಡುಗಲ್ಲುಗಳೆಲ್ಲವೂ ಸಿಡಿದುಹೋಗಲಾರಂಭಿಸಿದುವು. ಆಕಾಶದಿಂದ ಕೊಳ್ಳಿಗಳು ಬೀಳತೊಡಗಿದುವು. ಸಪ್ತ ಸಮುದ್ರಗಳೂ ಮೆಲ್ಲಮೆಲ್ಲನೆ ದಡಮೀರಿ ಬರತೊಡಗಿದುವು.

೨೪–೨೭. ಈ ಉತ್ಪಾತಗಳನ್ನು ಕಂಡು ದೇವತೆಗಳೆಲ್ಲರೂ ಭಯದಿಂದ ತತ್ತಳಿಸಿದ ಮನಸ್ಸುಳ್ಳವರಾಗಿ ಮಹೇಂದ್ರನನ್ನೂ, ಮಹಾವಿಷ್ಣುವನ್ನೂ ಮುಂದುಮಾಡಿಕೊಂಡು ಪಿತಾಮಹನಾದ ಬ್ರಹ್ಮದೇವನಿದ್ದಲ್ಲಿಗೆ ಬಂದು, ಆತನನ್ನು ನಮಸ್ಕರಿಸಿ ವೇದೋಕ್ತ ಸ್ತೋತ್ರಗಳಿಂದ ಸ್ತುತಿಸಿ, "ಎಲೈ ಕಮಲಾಸನನೆ, ಇದೇನಿದೇನು? ಈವರೆಗೂ ಸ್ಥಿರವಾಗಿದ್ದ ಈ ಮೂರು ಲೋಕಗಳ ಸೃಷ್ಟಿಯೂ ಇದ್ದಕ್ಕಿದ್ದಂತೆಯೇ ತಲೆಕೆಳಗಾಗುತ್ತಿರುವುದಲ್ಲಾ! ಯಾವ ಕಾರಣದಿಂದ ಈ ಜಗತ್ತ್ರಯವೆಲ್ಲ ವ್ಯಾಕುಲಗೊಂಡಿದೆ? ಓ ಪದ್ಮಸಂಭವ, ಈ ಉತ್ಪಾತಗಳೆಲ್ಲವನ್ನೂ ನೋಡಿದಲ್ಲಿ ಪ್ರಳಯದ ಚಿಹ್ನೆಯಂತೆಯೇ ಕಾಣುವುದು. ಈಗ ಪ್ರಳಯಕಾಲವಲ್ಲದಿದ್ದರೂ ಜಗತ್ತು ನಾಶವಾಗುತ್ತದೆಯೆ?" ಎಂದು ಪ್ರಶ್ನಿಸಿದರು.

ಸರ್ವೇಷಾಂ ಸುರಮರ್ತ್ಯಾನಾಂ ದೈತ್ಯಾನಾಂ ಮಂತ್ರಕೋವಿದಃ ।
ಗತಿರ್ಭಯಾರ್ತದೇಹಾನಾಂ ಸರ್ವಲೋಕಪಿತಾಮಹಃ ॥ ೨೮ ॥
ತೇಷಾಂ ತದ್ವಚನಂ ಶ್ರುತ್ವಾ ದೇವಾನಾಂ ಚತುರಾನನಃ ।
ಉವಾಚ ಸುಚಿರಂ ಧ್ಯಾತ್ವಾ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೨೯ ॥
ಪ್ರಳಯಸ್ಯ ನ ಕಾಲೋಽಯಂ ಸಾಂಪ್ರತಂ ಸುರಸತ್ತಮಾಃ ।
ಶೃಣುಧ್ವಂ ಯನ್ನಿಮಿತ್ತೋತ್ಥಾ ಮಹೋತ್ಪಾತಾ ಭವಂತ್ಯಮೀ ॥ ೩೦ ॥
ಋಷಿಭಿಃ ಪಾತಿತಂ ಲಿಂಗಂ ದೇವದೇವಸ್ಯ ಶೂಲಿನಃ ।
ಶಾಪೇನಾನರ್ತಕೇ ದೇಶೇ ಕಲತ್ರಾರ್ಥೇ ಮಹಾತ್ಮಭಿಃ ॥ ೩೧ ॥
ತೇನೈತದ್ವ್ಯಾಕುಲೀಭೂತಂ ತ್ರೈಲೋಕ್ಯಂ ಸಚರಾಚರಂ ।
ತಸ್ಮಾದ್ಗಚ್ಛಾಮಹೇ ತತ್ರ ಯತ್ರ ದೇವೋ ಮಹೇಶ್ವರಃ ॥ ೩೨ ॥
ಯೇನಾಸ್ಮದ್ವಚನಾಚ್ಛೀಘ್ರಂ ತಲ್ಲಿಂಗಂ ನಿದಧಾತಿ ಸಃ ।
ನೋ ಚೇದ್ಭವಿಷ್ಯತಿ ವ್ಯಕ್ತಮಕಾಲೇ ಚಾಽಪಿ ಸಂಕ್ಷಯಃ ।
ತ್ರೈಲೋಕ್ಯಸ್ಯಾಽಪಿ ಕೃತ್ಸ್ನಸ್ಯ ಸತ್ಯಮೇತನ್ಮಯೋದಿತಂ ॥ ೩೩ ॥
ಅಥ ದೇವಗಣಾಃ ಸರ್ವೇ ಬ್ರಹ್ಮವಿಷ್ಣುಪುರಃಸರಾಃ ।
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾಸ್ತಥಾಶ್ವಿನೌ ॥ ೩೪ ॥

---

೨೮–೨೯. ಮಂತ್ರಾಲೋಚನೆಯಲ್ಲಿ ಬಹು ಸಮರ್ಥನೆನಿಸಿದ ಆ ಪಿತಾಮಹನು ದೇವಮಾನವ ದೈತ್ಯರ ಆ ಮಾತುಗಳನ್ನು ಕೇಳಿ, ಬಹುಕಾಲ ಧ್ಯಾನಿಸಿ, ದಿವ್ಯಚಕ್ಷುಸ್ಸಿನಿಂದ ನೋಡಿ ಹೀಗೆಂದನು.

೩೦–೩೩. "ಅಯ್ಯಾ ಸುರಶ್ರೇಷ್ಠರೆ, ಪ್ರಕೃತದಲ್ಲಿ ಪ್ರಳಯ ಸಮಯವೇನೂ ಒದಗಿಲ್ಲ. ಈ ಮಹೋತ್ಪಾತಗಳೆಲ್ಲವೂ ಏತಕ್ಕಾಗಿ ತಲೆದೋರಿರುವುವೆಂಬುದನ್ನು ಹೇಳುತ್ತೇನೆ ಕೇಳಿರಿ. ಆನರ್ತದೇಶದಲ್ಲಿ ಮಹಾತ್ಮರಾದ ಮಹರ್ಷಿಗಳೆಲ್ಲರೂ ತಮ್ಮ ಗೃಹಿಣಿಯರ ಸಲುವಾಗಿ ಪರಮೇಶ್ವರನನ್ನು ಶಪಿಸಿ ಆತನ ಲಿಂಗವನ್ನು ಬೀಳಿಸಿರುವರು. ಅದರಿಂದ ಚರಾಚರಾತ್ಮಕವಾದ ಈ ಜಗತ್ತ್ರಯವು ವ್ಯಾಕುಲಗೊಂಡಿದೆ. ಈಗ ನಾವು ಆ ಪರಮೇಶ್ವರನಿರುವಲ್ಲಿಗೆ ಹೋಗೋಣ. ಹೋಗಿ ಆ ಲಿಂಗವನ್ನು ಮತ್ತೆ ಧರಿಸುವಂತೆ ಅವನನ್ನು ಪ್ರಾರ್ಥಿಸೋಣ. ನಮ್ಮ ಮಾತಿನಂತೆ ಆತನು ಲಿಂಗವನ್ನು ಮತ್ತೆ ಧರಿಸದಿದ್ದಲ್ಲಿ ಈ ಅಕಾಲದಲ್ಲಿಯೂ ಪ್ರಳಯವೇ ಸಂಭವಿಸುತ್ತದೆಯೆಂಬುದರಲ್ಲಿ ಸಂಶಯವಿಲ್ಲ. ಈ ಪ್ರಳಯವು ಒಂದು ಲೋಕಕ್ಕೆ ಮಾತ್ರವಲ್ಲ, ಮೂರು ಲೋಕಕ್ಕೂ ಆಗುತ್ತದೆಂಬ ನನ್ನ ಮಾತು ಸತ್ಯವಾದುದು."

೩೪–೩೭. ತರುವಾಯ ಆದಿತ್ಯರೂ, ವಸುಗಳೂ, ರುದ್ರರೂ, ವಿಶ್ವೇದೇವತೆಗಳೂ, ಅಶ್ವಿನೀ ಕುಮಾರರೂ ಇತರ ಸಮಸ್ತ ದೇವತಾಸಮೂಹಗಳೂ,

ಪ್ರಜಗ್ಮು ಸ್ತ್ವರಿತಾಸ್ತತ್ರ ಯತ್ರ ದೇವೋ ಮಹೇಶ್ವರಃ ।
ಗರ್ತಮಧ್ಯಗತಃ ಸುಪ್ತೋ ಲಜ್ಜಯಾ ಪರಯಾ ವೃತಃ ॥ ೩೫ ॥
ದೇವಾ ಊಚುಃ :—
ನಮಸ್ತೇ ದೇವದೇವೇಶ ಭಕ್ತಾನಾಮಭಯಪ್ರದ ।
ನಮಸ್ತೇ ಜಗದಾಧಾರ ಶಶಿರಾಜಿತಶೇಖರ ॥ ೩೬ ॥
ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮಾಪಸ್ತ್ವಂ ಮಹೀ ವಿಭೋ ।
ತ್ವಯಾ ಸೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೩೭ ॥
ತ್ವಂ ಪಾಸಿ ಚ ಸುರಶ್ರೇಷ್ಠ ತಥಾ ನಾಶಂ ನಯಿಷ್ಯಸಿ ।
ತ್ವಂ ವಿಷ್ಣುಸ್ತ್ವಂ ಚತುರ್ವಕ್ತ್ರಸ್ತ್ವಂ ಚಂದ್ರಸ್ತ್ವಂ ದಿವಾಕರಃ ॥ ೩೮ ॥
ತ್ವಯಾ ವಿನಾ ಮಹಾದೇವ ನ ಕಿಂಚಿದಿಹ ವಿದ್ಯತೇ ।
ಅಪಿ ಕೃತ್ವಾ ಮಹತ್ಪಾಪಂ ನರೋ ದೇವ ಧರಾತಲೇ ॥ ೩೯ ॥
ತವ ನಾಮಾಽಪಿ ಸಂಕೀರ್ತ್ಯ ಪ್ರಯಾತಿ ತ್ರಿದಿವಾಲಯಂ ।
ಮಹಾದೇವ ಮಹಾದೇವ ಮಹಾದೇವೇತಿ ಕೀರ್ತನಾತ್ ॥ ೪೦ ॥

---

ಬ್ರಹ್ಮವಿಷ್ಣುಗಳನ್ನು ಮುಂದುಮಾಡಿಕೊಂಡು ಪರಮೇಶ್ವರನು ಗರ್ತಮಧ್ಯಗತನಾಗಿ ಅಪರಿಮಿತವಾದ ಲಜ್ಜೆಯಿಂದ ಮಲಗಿದ್ದ ಪ್ರದೇಶಕ್ಕೆ ಬಹು ತ್ವರೆಯಿಂದೈತಂದರು.

೩೬. ದೇವತೆಗಳು ಹೇಳುತ್ತಾರೆ:—ಎಲೈ ದೇವದೇವೇಶ್ವರನೆ, ಭಕ್ತರಿಗೆ ಅಭಯಪ್ರದಾಯಕನಾಗಿರುವ ನಿನಗೆ ನಮಸ್ಕಾರವು! ಎಲೈ ಶಶಿಶೇಖರನೆ, ನೀನು ಈ ಜಗತ್ತಿಗೆಲ್ಲ ಆಧಾರವಾಗಿರುವವನು. ಇದೊ ನಿನಗೆ ನಮಸ್ಕಾರವು!

೩೭. ಎಲೈ ಸ್ವಾಮಿಯೆ, ಯಜ್ಞಸ್ವರೂಪನೂ ನೀನೆ. ವಷಟ್ಕಾರವೂ ನೀನೆ. ಜಲವೂ ಭೂಮಿಯೂ ನೀನೇ ಆಗಿರುವೆ. ಚರಾಚರಾತ್ಮಕವಾದ ಈ ಜಗತ್ರಯವನ್ನೂ ನೀನೇ ಸೃಜಿಸಿರುವೆ.

೩೮. ಹೀಗೆ ನಿನ್ನಿಂದ ಸೃಷ್ಟವಾಗಿರುವ ಈ ಜಗತ್ತನ್ನು ನೀನೇ ಪಾಲಿಸುವೆ. ಓ ಸುರಶ್ರೇಷ್ಠ! ಅಂತೆಯೆ ಈ ಜಗತ್ತನ್ನು ನಾಶಗೊಳಿಸುವವನೂ ನೀನೇ. ವಿಷ್ಣುವೂ ಚತುರ್ಮುಖ ಬ್ರಹ್ಮನೂ ಚಂದ್ರ ಸೂರ್ಯರೂ ನೀನೇ.

೩೯—೪೦. ಓ ಮಹಾದೇವ; ನಿನ್ನನ್ನುಳಿದು ಈ ಪ್ರಪಂಚದಲ್ಲಿ ಏನೂ ಇರುವುದಿಲ್ಲ. ಮಾನವನು ಈ ಧರಾತಲದಲ್ಲಿ ಮಹಾಪಾಪಗಳನ್ನು ಮಾಡಿದರೂ ನಿನ್ನ ದಿವ್ಯನಾಮವನ್ನೊಮ್ಮೆ "ಮಹಾದೇವ" ಎಂದು ಸಂಕೀರ್ತನೆ ಮಾಡಿದರೆ ಸಾಕು ; ಸ್ವರ್ಗಲೋಕವನ್ನು ಸೇರುತ್ತಾನೆ.

ಕೋಟಿಯೋ ಬ್ರಹ್ಮಹತ್ಯಾನಾಮಗಮ್ಯಾಗಮಕೋಟಿಯಃ ।
ಸದ್ಯಃ ಪ್ರಲಯಮಾಯಾಂತಿ ಮಹಾದೇವೇತಿ ಕೀರ್ತನಾತ್ ॥ ೪೧ ॥
ವಿಪ್ರೋ ಯಥಾ ಮನುಷ್ಯಾಣಾಂ ನದೀನಾಂ ವಾ ಮಹಾರ್ಣವಃ ।
ತಥಾ ತ್ವಂ ಸರ್ವದೇವಾನಾಮಾಧಿಪತ್ಯೇ ವ್ಯವಸ್ಥಿತಃ ॥ ೪೨ ॥
ನಕ್ಷತ್ರಾಣಾಂ ಯಥಾ ಚಂದ್ರಃ ಪ್ರದೀಪ್ತಾನಾಂ ದಿವಾಕರಃ ।
ತಥಾ ತ್ವಂ ಸರ್ವದೇವಾನಾಮಾಧಿಪತ್ಯೇ ವ್ಯವಸ್ಥಿತಃ ॥ ೪೩ ॥
ಧಾತೂನಾಂ ಕಾಂಚನಂ ಯದ್ವದ್ಗಂಧರ್ವಾಣಾಂ ಚ ನಾರದಃ ।
ತಥಾ ತ್ವಂ ಸರ್ವದೇವಾನಾಮಾಧಿಪತ್ಯೇ ವ್ಯವಸ್ಥಿತಃ ॥ ೪೪ ॥
ಓಷಧೀನಾಂ ಯಥಾ ಸಸ್ಯಂ ನಗಾನಾಂ ಹೇಮಪರ್ವತಃ ।
ತಥಾ ತ್ವಂ ಸರ್ವದೇವಾನಾಮಾಧಿಪತ್ಯೇ ವ್ಯವಸ್ಥಿತಃ ॥ ೪೫ ॥
ತಸ್ಮಾತ್ಕುರು ಪ್ರಸಾದಂ ನಃ ಸರ್ವೇಷಾಂ ಚ ನೃಣಾಂ ವಿಭೋ ।
ಸಂಧಾರಯ ಪುನರ್ಲಿಂಗಂ ಸ್ವಕೀಯಂ ಸುರಸತ್ತಮ ॥ ೪೬ ॥
ನೋ ಚೇಜ್ಜಗತ್ತ್ರಯಂ ದೇವ ನೂನಂ ನಾಶಮುಪೇಷ್ಯತಿ ।
ಯದ್ಯೇತದ್ಭೂತಲೇ ಲಿಂಗಂ ಪತತಿ ಸ್ಥಾಸ್ಯತಿ ಪ್ರಭೋ ॥ ೪೭ ॥

---

೪೧. 'ಮಹಾದೇವ' ಎಂಬ ನಿನ್ನ ನಾಮವನ್ನುಚ್ಚರಿಸುವುದರಿಂದ ಕೋಟಿ ಬ್ರಹ್ಮಹತ್ಯೆಗಳೂ ಕೋಟಿಗಟ್ಟಲೆಯ ಅಗಮ್ಯಾಗಮನ ಪಾಪಗಳೂ ಕೂಡಲೆ ನಾಶವನ್ನೈದುತ್ತವೆ.

೪೨. ಮನುಷ್ಯರಿಗೆಲ್ಲ ವಿಪ್ರನು ಹೇಗೋ, ನದಿಗಳಿಗೆಲ್ಲ ಸಮುದ್ರವು ಹೇಗೋ ಹಾಗೆ ನೀನು ಸಮಸ್ತ ದೇವತೆಗಳಿಗೂ ಒಡೆಯನಾಗಿರುವೆ.

೪೩. ನಕ್ಷತ್ರಗಳಿಗೆ ಚಂದ್ರನೂ, ಇತರ ತೇಜಸ್ಸುಗಳಿಗೆಲ್ಲ ಸೂರ್ಯನೂ ಹೇಗೆ ಪ್ರಭುಗಳೋ ಹಾಗೆಯೇ ದೇವತೆಗಳಿಗೆಲ್ಲ ನೀನು ಪ್ರಭುವಾಗಿ ವ್ಯವಸ್ಥಿಗೊಂಡಿರುವೆ.

೪೪. ಲೋಹಗಳಿಗೆಲ್ಲ ಸುವರ್ಣವೂ, ಗಂಧರ್ವರಿಗೆಲ್ಲ ನಾರದನೂ ಹೇಗೆಯೋ ಹಾಗೆ ದೇವತೆಗಳಾದ ನಮ್ಮೆಲ್ಲರಿಗೂ ನೀನೇ ಅಧಿಪತಿಯು.

೪೫. ಓಷಧಿಗಳಲ್ಲಿ ಸಸ್ಯವೆಂತೋ, ಪರ್ವತಗಳಲ್ಲಿ ಮೇರುಪರ್ವತವೆಂತೋ ಅಂತೆಯೆ ನೀನು ನಮ್ಮೆಲ್ಲರಿಗೂ ಸ್ವಾಮಿಯಾಗಿ ವ್ಯವಸ್ಥೆಗೊಂಡಿರುವೆ.

೪೬. ಆದುದರಿಂದ ಎಲೈ ವಿಭುವೆ, ಸುರಸತ್ತಮನಾದ ನೀನು ಈ ಲಿಂಗವನ್ನು ಪುನಃ ಧರಿಸಿ ದೇವತೆಗಳಾದ ನಮಗೂ ಮಾನವರಿಗೂ ಅನುಗ್ರಹ ಮಾಡುವವನಾಗು.

೪೭. ಪ್ರಕೃತದಲ್ಲಿ ಭೂಮಿಯಲ್ಲಿ ಬಿದ್ದಿರುವ ಈ ಲಿಂಗವು ಹಾಗೆಯೇ ಇರುವುದಾದರೆ ಮೂರು ಲೋಕಗಳೂ ನಾಶವಾಗುವುದೆಂಬುದು ದಿಟವು.

ಸೂತ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಭಗವಾನ್ ವೃಷಭಧ್ವಜಃ ।
ಪ್ರೋವಾಚ ಪ್ರಣತಾನ್ ಸರ್ವಾಂಸ್ತಾನ್ದೇವಾನ್ವ್ರೀಡಯಾನ್ವಿತಃ ॥ ೪೮ ॥
ಮಯಾ ಸತೀ ವಿಯೋಗಾರ್ತಿಯುಕ್ತೇನ ಸುರಸತ್ತಮ ।
ಲಿಂಗಮೇತತ್ಪರಿತ್ಯಕ್ತಂ ಶಾಪವ್ಯಾಜಾದ್ದ್ವಿಜನ್ಮನಾಂ ॥ ೪೯ ॥
ಕೋಽಲಂ ಪಾತಯಿತುಂ ಲಿಂಗಂ ಮನ್ಯೈತದ್ಭುವನತ್ರಯೇ ।
ದೇವೋ ವಾ ಬ್ರಾಹ್ಮಣೋ ವಾಽಪಿ ವೇತ್ಥ ಯೂಯಮಪಿ ಸ್ಫುಟಂ॥ ೫೦ ॥
ತಸ್ಮಾನ್ನೈವ ಧರಿಷ್ಯಾಮಿ ಲಿಂಗಮೇತದ್ಧರಾತಲಾತ್ ।
ಕಿಮನೇನ ಕರಿಷ್ಯಾಮಿ ಭಾರ್ಯಯಾ ಪರಿವರ್ಜಿತಃ ॥ ೫೧ ॥

ದೇವಾ ಊಚುಃ :—

ತವ ಕಾಂತಾ ಸತೀನಾಮ ಯಾ ಮೃತಾ ಪ್ರಾಕ್ಸುರೋತ್ತಮ ।
ಸಾ ಜಾತಾ ಮೇನಕಾಗರ್ಭೇ ಗೌರೀ ನಾಮ ಹಿಮಾಚಲಾತ್ ॥ ೫೨ ॥
ಭವಿಷ್ಯತಿ ಪುನರ್ಭಾರ್ಯಾ ತವೈವ ತ್ರಿಪುರಾಂತಕ ।
ತಸ್ಮಾಲ್ಲಿಂಗಂ ಸಮಾದಾಯ ಕುರು ಕ್ಷೇಮಂ ದಿವೌಕಸಾಂ ॥ ೫೩ ॥

---

೪೮. ಸೂತನು ಹೇಳುತ್ತಾನೆ:—ಭಗವಾನ್ ವೃಷಭಧ್ವಜನು ಈ ಮಾತನ್ನು ಕೇಳಿ, ಲಜ್ಜಾಸಮನ್ವಿತನಾಗಿ ಪ್ರಣತರಾಗಿದ್ದ ಅವರೆಲ್ಲರನ್ನೂ ಕುರಿತು, ಅವರಲ್ಲಿಯೂ ಬ್ರಹ್ಮನನ್ನುದ್ದೇಶಿಸಿ ಹೀಗೆಂದನು.

೪೯. "ಅಯ್ಯಾ ಸುರಶ್ರೇಷ್ಠನೆ, ಸತೀದೇವಿಯ ವಿಯೋಗದಿಂದ ಕೇವಲ ದುಃಖಿತನಾದ ನಾನು ಆ ಬ್ರಾಹ್ಮಣರ ಶಾಪನಿಮಿತ್ತದಿಂದ ಈ ಲಿಂಗವನ್ನು ತೊರೆದಿದ್ದೇನೆ.

೫೦. ಹಾಗಲ್ಲದಿದ್ದರೆ ನನ್ನ ಲಿಂಗವನ್ನು ಬೀಳಿಸಲು ಭುವನತ್ರಯದಲ್ಲಿರುವ ದೇವತೆಗಳಾಗಲಿ, ಬ್ರಾಹ್ಮಣರಾಗಲಿ ಯಾರುತಾನೆ ಸಮರ್ಥರು? ಈ ವಿಷಯವನ್ನು ನೀನೂ ಈ ದೇವತೆಗಳೂ ಸ್ಪಷ್ಟವಾಗಿಯೇ ಬಲ್ಲವರಾಗಿರುವಿರಿ.

೫೧. ಭಾರ್ಯಾವರ್ಜಿತನಾದ ನನಗೆ ಈ ಲಿಂಗದಿಂದೇನು? ಆದುದರಿಂದ ಧರಾತಲವನ್ನು ಸೇರಿರುವ ಇದನ್ನು ನಾನು ಖಂಡಿತವಾಗಿಯೂ ಧರಿಸುವುದಿಲ್ಲ."

೫೨. ದೇವತೆಗಳು ಹೇಳುತ್ತಾರೆ:—ಎಲೈ ಸುರೋತ್ತಮನೆ! ಸತೀನಾಮಕಳಾದ ಯಾವ ನಿನ್ನ ಕಾಂತೆಯು ದಕ್ಷಾಧ್ವರದಲ್ಲಿ ಮೃತಿಹೊಂದಿದಳೋ, ಅವಳೇ ಹಿಮವಂತನ ಪತ್ನಿಯಾದ ಮೇನಾದೇವಿಯ ಗರ್ಭದಿಂದ ಗೌರಿಯೆಂಬ ಹೆಸರನ್ನೊಡಗೊಂಡು ಜನಿಸಿದ್ದಾಳೆ.

೫೩. ತ್ರಿಪುರಾಂತಕನೆ, ಆ ಗೌರಿಯು ನಿನಗೆ ಮತ್ತೆ ಭಾರ್ಯೆಯಾಗುವಳು. ಆದುದರಿಂದ ಈ ಲಿಂಗವನ್ನು ಧರಿಸಿ ದಿವೌಕಸರೆಲ್ಲರಿಗೂ ಕ್ಷೇಮವನ್ನುಂಟುಮಾಡು.

ದೇವ ದೇವ ಉವಾಚ :—

ಅದ್ಯ ಪ್ರಭೃತಿ ಮೇ ಲಿಂಗಂ ಯದಿ ದೇವಾ ದ್ವಿಜಾತಯಃ ।
ಪೂಜಯಂತಿ ಪ್ರಯತ್ನೇನ ತರ್ಹೀದಂ ಧಾರಯಾಮ್ಯಹಂ ॥ ೩೪ ॥

ಬ್ರಹ್ಮೋವಾಚ :—

ಅಹಂ ತವ ಸ್ವಯಂ ಲಿಂಗಂ ಪೂಜಯಿಷ್ಯಾಮಿ ಶಂಕರ ।
ತಥಾಽನ್ಯೇ ವಿಬುಧಾಃ ಸರ್ವೇ ಕಿಂ ಪುನರ್ಭುವಿ ಮಾನವಾಃ ॥ ೩೫ ॥
ತತಃ ಪ್ರವಿಶ್ಯ ಪಾತಾಲಂ ದೇವೈಃ ಸಾರ್ಧಂ ಪಿತಾಮಹಃ ।
ಸ್ವಯಮೇವಾಽಕರೋತ್ಪೂಜಾಂ ತಸ್ಯ ಲಿಂಗಸ್ಯ ಭಕ್ತಿತಃ ॥ ೩೬ ॥
ತಸ್ಮಾದನಂತರಂ ವಿಷ್ಣುಃ ಶ್ರದ್ಧಾಪೂತೇನ ಚೇತಸಾ ।
ತಥಾಽನ್ಯೇ ವಿಬುಧಾಃ ಸರ್ವೇ ಶಕ್ರಾದ್ಯಾಃ ಶ್ರದ್ಧಯಾನ್ವಿತಾಃ ॥ ೩೭ ॥
ತತಸ್ತುಷ್ಟೋ ಮಹಾದೇವಃ ಪಿತಾಮಹಮಿದಂ ವಚಃ ।
ಪ್ರೋವಾಚ ವಾಸುದೇವಂ ಚ ವಿನಯಾಽವನತಂ ಸ್ಥಿತಂ ॥ ೩೮ ॥
ಭವದ್ಭ್ಯಾಂ ಪರಿತುಷ್ಟೋಽಸ್ಮಿ ತಸ್ಮಾನ್ಮತ್ತಃ ಪ್ರಗೃಹ್ಯತಾಂ ।
ವರಮಿಷ್ಟಂ ಮಹಾಭಾಗೌ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩೯ ॥

---

೩೪. ದೇವದೇವನು ಹೇಳುತ್ತಾನೆ:— ದೇವತೆಗಳಿರಾ, ಇದು ಮೊದಲುಗೊಂಡು ದೇವತೆಗಳು ಬ್ರಾಹ್ಮಣರು ನನ್ನ ಈ ಲಿಂಗವನ್ನು ಪೂಜಿಸುವುದಾದರೆ ನಾನು ಇದನ್ನು ಧರಿಸುತ್ತೇನೆ.

೩೫. ಬ್ರಹ್ಮನು ಹೇಳುತ್ತಾನೆ:—ಶಂಕರ, ಈಗ ನಾನೇ ಸಾಕ್ಷಾತ್ತಾಗಿ ನಿನ್ನ ಲಿಂಗವನ್ನು ಪೂಜಿಸುತ್ತೇನೆ. ಹಾಗೆಯೇ ಈ ಇತರ ದೇವತೆಗಳೂ ಪೂಜಿಸುತ್ತಾರೆ ಎಂದ ಬಳಿಕ ಭೂಲೋಕದಲ್ಲಿ ಮಾನವರ ವಿಷಯವನ್ನು ಹೇಳಲೇನು. ಅವರೂ ಪೂಜಿಸುತ್ತಾರೆ.

೩೬. ತರುವಾಯ ಬ್ರಹ್ಮದೇವನು ಆ ದೇವತೆಗಳನ್ನೊಡಗೊಂಡು ಪಾತಾಳವನ್ನು ಸೇರಿ ತಾನೇ ಭಕ್ತಿಪೂರ್ವಕವಾಗಿ ಆ ಲಿಂಗವನ್ನು ಪೂಜಿಸಿದನು.

೩೭. ಆಮೇಲೆ ವಿಷ್ಣುವು ಶ್ರದ್ಧಾಪೂರಿತವಾದ ಮನಸ್ಸಿನಿಂದ ಪೂಜಿಸಿದನು. ಹಾಗೆಯೇ ಇಂದ್ರಾದಿ ಸಮಸ್ತ ದೇವತೆಗಳುಸಹ ಶ್ರದ್ಧೆಯಿಂದ ಆ ಶಿವಲಿಂಗವನ್ನಾರಾಧಿಸಿದರು.

೩೮–೩೯. ಇದಾದ ಬಳಿಕ ಮಹಾದೇವನು ಪಿತಾಮಹನನ್ನೂ, ವಿನಯದಿಂದ ತಲೆಬಾಗಿ ನಿಂತಿದ್ದ ವಾಸುದೇವನನ್ನೂ ಕುರಿತು, “ ಅಯ್ಯಾ ಬ್ರಹ್ಮವಿಷ್ಣುಗಳಿರಾ, ನೀವು ಮಾಡಿದ ಈ ಪೂಜೆಯಿಂದ ನಾನು ಸಂತೋಷಗೊಂಡಿದ್ದೇನೆ. ಭಾಗ್ಯಶಾಲಿಗಳಾದ ನೀವು ಎಷ್ಟೇ ದುರ್ಲಭವಾದುದಾಗಲಿ ನಿಮಗಿಷ್ಟ ಬಂದ ವರಗಳನ್ನು ನನ್ನಿಂದ ಪಡೆಯುವವರಾಗಿ ” ಎಂದನು.

ತಾವೂಚತುಃ :—

ಯದಿ ತುಷ್ಟೋಽಸಿ ದೇವೇಶ ತ್ರಿಭಾಗೇನ ಸಮಾಶ್ರಯಂ ।
ಆವಾಭ್ಯಾಂ ದೇಹಿ ಲಿಂಗೇನ ಯೇನೈಕತ್ರಾಶ್ರಯೋ ಭವೇತ್ ॥ ೬೦ ॥

ಸೂತ ಉವಾಚ :—

ಸ ತಥೇತಿ ಪ್ರತಿಜ್ಞಾಯ ಲಿಂಗಮಾದಾಯ ಚ ಪ್ರಭುಃ ।
ಸ್ಥಾನೇ ನಿಯೋಜಯಾಮಾಸ ಸರ್ವದೇವಾಧಿಪೂಜಿತಂ ॥ ೬೧ ॥
ತತೋ ಹಾಟಕಮಾದಾಯ ತದಾಕಾರಂ ಪಿತಾಮಹಃ ।
ಕೃತ್ವಾ ಲಿಂಗಂ ಸ್ವಯಂ ತತ್ರ ಸ್ಥಾಪಯಾಮಾಸ ಹರ್ಷಿತಃ ॥ ೬೨ ॥
ಪ್ರೋವಾಚ ಚಾಽಥ ಭೋ ವಿಪ್ರಾಃ ಸಾಧುನಾದೇನ ನಾದಯನ್ ।
ಲೋಕತ್ರಯಂ ಸಮಸ್ತಾನಾಂ ಶೃಣ್ವತಾಂ ತ್ರಿದಿವೌಕಸಾಂ ॥ ೬೩ ॥
ಮಯಾ ಪ್ರಾದ್ಯಂ ತ್ವಿದಂ ಲಿಂಗಂ ಹಾಟಕೇನ ವಿನಿರ್ಮಿತಂ ।
ಖ್ಯಾತಿಂ ಯಾಸ್ಯತಿ ಸರ್ವತ್ರ ಪಾತಾಲೇ ಹಾಟಕೇಶ್ವರಂ ॥ ೬೪ ॥
ತಥಾಽನ್ಯೇ ಮನುಜಾ ಯೇಚ ಹಾಟಕಾದೀನಿ ಭಕ್ತಿತಃ ।
ಮಣಿಮುಕ್ತಾತ್ಸುರತ್ನೈಶ್ಚ ಕೃತ್ವಾ ಲಿಂಗಾನಿ ಕೃತ್ಸ್ನಶಃ ॥ ೬೫ ॥

---

೬೦. ಬ್ರಹ್ಮ ವಿಷ್ಣುಗಳು ಹೇಳುತ್ತಾರೆ:—ಎಲೈ ದೇವೇಶ್ವರನೆ, ನೀನು ನಮ್ಮ ವಿಷಯದಲ್ಲಿ ಸಂತೋಷಗೊಂಡಿರುವೆಯೇ ಆದರೆ, ಯಾವೊಂದೆಡೆಯಲ್ಲಿಯೇ ಎಲ್ಲರಿಗೂ ಆಶ್ರಯವೆಂಬುದು ದೊರೆಯುತ್ತದೆಯೋ ಆ ಲಿಂಗದ ತ್ರಿಭಾಗದಿಂದ ನಮ್ಮಿರ್ವರಿಗೂ ಆಶ್ರಯವನ್ನು ಕೊಡುವವನಾಗು.

೬೧. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳಿರಾ, ಆ ಪರಮೇಶ್ವರನು ಅಂತೆಯೇ ಆಗಲೆಂದು ಮಾತುಕೊಟ್ಟು, ಸಮಸ್ತ ದೇವತೆಗಳಿಂದಲೂ ಪೂಜಿತವಾದ ಆ ಲಿಂಗವನ್ನು ಯಥಾಸ್ಥಾನದಲ್ಲಿ ಧರಿಸಿದನು.

೬೨—೬೩. ಬಳಿಕ ಬ್ರಹ್ಮದೇವನು ಸ್ವರ್ಣವನ್ನು ತಂದು ಆ ಲಿಂಗದಂತೆಯೆ ಮತ್ತೊಂದು ಲಿಂಗವನ್ನು ನಿರ್ಮಿಸಿ ಪಾತಾಳದಲ್ಲಿ ಪ್ರತಿಷ್ಠಿಸಿ ಹರ್ಷಗೊಂಡು ಸಾಧುವಾದಗಳನ್ನು ನುಡಿಯುತ್ತ ಇಂತೆಂದನು. ಆತನ ಮಾತನ್ನು ಸಮಸ್ತ ದೇವತೆಗಳೂ ಮೂರು ಲೋಕದ ಸಕಲ ಚರಾಚರ ಪ್ರಾಣಿಗಳೂ ಆಲಿಸಿದರು.

೬೪. ಬ್ರಹ್ಮನು ಹೇಳುತ್ತಾನೆ:—ನಾನು ಪ್ರಕೃತದಲ್ಲಿ ಪ್ರತಿಷ್ಠಿಸಿರುವ ಹಾಟಕ (ಸುವರ್ಣ) ನಿರ್ಮಿತವಾದ ಈ ಲಿಂಗವು ಮೊಟ್ಟಮೊದಲಿನದಾಗಿ ಈ ಪಾತಾಳ ಲೋಕದಲ್ಲೆಲ್ಲ ಹಾಟಕೇಶ್ವರ*ವೆಂದು ಪ್ರಸಿದ್ಧವಾಗುತ್ತದೆ.

೬೫—೬೬. ಹೀಗೆಯೇ ಯಾವ ಮಾನವರು ಭಕ್ತಿಯಿಂದ ಸುವರ್ಣ, ಮಣಿ, ಮುಕ್ತಾದಿಗಳಿಂದಲೂ, ವಿವಿಧ ರತ್ನಗಳಿಂದಲೂ ಶಿವಲಿಂಗಗಳನ್ನು ನಿರ್ಮಿಸಿ ತ್ರಿಕಾಲ

---

* ಗೂರ್ಜರ ಪ್ರಾಂತದಲ್ಲಿ ಬಢನಗರ ಎಂಬುದು ಈ ಹಾಟಕೇಶ್ವರ ಕ್ಷೇತ್ರವೆಂದೂ ಇದರ ಬಳಿಯಲ್ಲಿಯೇ ಇರುವ ಉಂಝಾ ಎಂಬುದೇ ಉಮಾಪುರವೆಂದೂ ತಿಳಿದುಬರುತ್ತದೆ.

ತ್ರಿಕಾಲಂ ಪೂಜಯಿಷ್ಯಂತಿ ತೇ ಯಾಸ್ಯಂತಿ ಪರಾಂ ಗತಿಂ ।
ಮೃಣ್ಮಯಂ ಸಂಪರಿತ್ಯಜ್ಯ ನೀಚಧಾತುಮಯಂ ತಥಾ ॥ ೬೬ ॥
ಏವಮುಕ್ತ್ವಾ ಚತುರ್ವಕ್ತ್ರಃ ಸಹ ಸರ್ವೈರ್ದಿವಾಲಯೈಃ ।
ಜಗಾಮ ತ್ರಿದಿವಂ ಸೋಽಪಿ ಕೈಲಾಸಂ ಶಶಿಶೇಖರಃ ॥ ೬೭ ॥
ಏತಸ್ಮಾತ್ಕಾರಣಾಲ್ಲಿಂಗಂ ಪೂಜ್ಯತೇಽತ್ರ ಸುರಾಸುರೈಃ ।
ಹರಸ್ಯ ಚೋತ್ತಮಾಂಗಾನಿ ಪರಿತ್ಯಜ್ಯ ವಿಶೇಷತಃ ॥ ೬೮ ॥
ತತಃ ಪ್ರಭೃತಿ ತಲ್ಲಿಂಗಂ ಸ್ವಯಂ ಬ್ರಹ್ಮಾ ವ್ಯವಸ್ಥಿತಃ ।
ಭಗವಾನ್ ವಾಸುದೇವಶ್ಚ ತೇನ ಪೂಜ್ಯಂ ಶಿವಂ ಹಿ ತತ್ ॥ ೬೯ ॥
ಯಸ್ತು ಪೂಜಯತೇ ನಿತ್ಯಂ ಶ್ರದ್ಧಾಯುಕ್ತೇನ ಚೇತಸಾ ।
ತ್ರ್ಯಂಬಕಾಽಚ್ಯುತ ಬ್ರಹ್ಮಾದ್ಯಾಸ್ತೇನ ಸ್ಯುಃ ಪೂಜಿತಾಸ್ತ್ರಯಃ ॥ ೭೦ ॥
ತಸ್ಮಾತ್ಸರ್ವಪ್ರಯತ್ನೇನ ಶಿವಲಿಂಗಂ ಪ್ರಪೂಜಯೇತ್ ।
ಸ್ಪರ್ಶಯೇದೀಕ್ಷಯೇನ್ನಿತ್ಯಂ ಕೀರ್ತಯೇಚ್ಚ ದ್ವಿಜೋತ್ತಮಾಃ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಲಿಂಗೋತ್ಪತ್ತಿವರ್ಣನಂ" ನಾಮ
ಪ್ರಥಮೋಽಧ್ಯಾಯಃ

---

ಗಳಲ್ಲಿಯೂ ಪೂಜಿಸುತ್ತಾರೆಯೋ ಅವರು ಪರಮಗತಿಯನ್ನು ಹೊಂದುತ್ತಾರೆ. ಆದರೆ ಮಣ್ಣಿನಿಂದಲೂ ನೀಚ ಲೋಹಗಳಿಂದಲೂ ಶಿವಲಿಂಗವನ್ನು ನಿರ್ಮಿಸಬಾರದು.

೬೭–೬೮. ಈ ಪ್ರಕಾರವಾಗಿ ನುಡಿದು ಆ ಚತುರ್ವಕ್ತ್ರನು ದೇವತೆಗಳೊಡನೆ ಸ್ವರ್ಗಲೋಕಕ್ಕೆ ಹೊರಟುಹೋದನು. ಶಶಿಶೇಖರನು ಸಹ ಕೈಲಾಸಕ್ಕೆ ತೆರಳಿದನು. ಆದುದರಿಂದ ಎಲೈ ಮಹರ್ಷಿಗಳಿರಾ, ದೇವಮಾನವ ದಾನವಾದಿಗಳೆಲ್ಲರೂ ಶಿವನ ಉತ್ತಮಾಂಗಗಳೆಲ್ಲವನ್ನೂ ಬಿಟ್ಟು ಲಿಂಗವೊಂದನ್ನೇ ಪೂಜಿಸುತ್ತಾರೆ.

೬೯. ಅದು ಮೊದಲಾಗಿ ಆ ಲಿಂಗವನ್ನು ಬ್ರಹ್ಮನೂ, ವಿಷ್ಣುವೂ ಪೂಜಿಸಿದರು. ಅಲ್ಲದೆ ಅವರೀರ್ವರೂ ಆ ಲಿಂಗದಲ್ಲಿಯೇ ವ್ಯವಸ್ಥಿತರಾದರು. ಆದುದರಿಂದ ಅದು ಪೂಜ್ಯವೂ ಮಂಗಳಕರವೂ ಆಗಿರುವುದು.

೭೦–೭೧. ಯಾವನು ಶ್ರದ್ಧಾಸಮನ್ವಿತವಾದ ಮನಸ್ಸಿನಿಂದ ಶಿವಲಿಂಗವನ್ನರ್ಚಿಸುತ್ತಾನೆಯೋ ಅವನು ತ್ರ್ಯಂಬಕ ಅಚ್ಯುತ ಬ್ರಹ್ಮರೆಂಬ ತ್ರಿಮೂರ್ತಿಗಳನ್ನೂ ಅರ್ಚಿಸಿದಂತಾಗುವುದು. ಆದುದರಿಂದ ಓ ದ್ವಿಜೋತ್ತಮರೆ, ಸರ್ವಪ್ರಯತ್ನದಿಂದಲೂ ಶಿವಲಿಂಗವನ್ನು ಪೂಜಿಸಬೇಕು, ಸ್ಪರ್ಶಿಸಬೇಕು. ಅಲ್ಲದೆ ಸಂದರ್ಶಿಸಲೂ ಬೇಕು, ಸ್ತುತಿಸಲೂ ಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಲಿಂಗೋತ್ಪತ್ತಿವರ್ಣನ"ವೆಂಬ
ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ತ್ರಿಶಂಕೂಪಾಖ್ಯಾನೇ–ತ್ರಿಶಂಕುವಸಿಷ್ಠ ಸಂವಾದವರ್ಣನಂ

ಸೂತ ಉವಾಚ :—

ತಸ್ಮಿನ್ನುತ್ಪಾಟಿತೇ ಲಿಂಗೇ ಭೂತಲಾದ್ದ್ವಿಜಸತ್ತಮಾಃ ।
ಪಾತಾಲಾಜ್ಜಾಹ್ನವೀತೋಯಂ ತೇನ ಮಾರ್ಗೇಣ ನಿಃಸೃತಂ ।
ಸರ್ವಪಾಪಹರಂ ನೃಣಾಂ ಸರ್ವಕಾಮಪ್ರದಾಯಕಂ ॥ ೧ ॥
ತತ್ರ ಸ್ವಯಮನುಭೂತಪೂರ್ವಂ ಯತ್ತದ್ದ್ವಿಜವರೋತ್ತಮಾಃ ।
ಶೃಣುಧ್ವಂ ವದತೋ ಮೇಽದ್ಯ ಲೋಕವಿಸ್ಮಯಕಾರಕಂ ॥ ೨ ॥
ತ್ರಿಶಂಕುರ್ನಾಮ ರಾಜೇಂದ್ರಶ್ಚಂಡಾಲತ್ವಂ ಸಮಾಗತಃ ।
ತತ್ರ ಸ್ನಾತಃ ಪುನರ್ಲೇಭೇ ಶರೀರಂ ಪಾರ್ಥಿವೋಚಿತಂ ॥ ೩ ॥

ಋಷಯ ಊಚುಃ :—

ಚಂಡಾಲತ್ವಂ ಕಥಂ ಪ್ರಾಪ್ತಸ್ತ್ರಿಶಂಕುರ್ನೃಪಸತ್ತಮಃ ।
ಏತತ್ತ್ವಂ ಸರ್ವಮಾಚಕ್ಷ್ವ ವಿಸ್ತರಾತ್ಸೂತನಂದನ ॥ ೪ ॥

---

## ಕನ್ನಡದ ಅನುವಾದ

### ತ್ರಿಶಂಕೂಪಾಖ್ಯಾನ–ತ್ರಿಶಂಕುವಸಿಷ್ಠಸಂವಾದವರ್ಣನ

೧. ಸೂತನು ಹೇಳುತ್ತಾನೆ :—ದ್ವಿಜಸತ್ತಮ, ಭೂತಲದಿಂದ ಆ ಪರಶಿವನು ಲಿಂಗವನ್ನು ಮೇಲೆತ್ತಿದಾಗ ಪಾತಾಳದಿಂದ ಗಂಗಾಜಲವು ಉಕ್ಕಿಬಂದು ಆ ಮಾರ್ಗವಾಗಿಯೇ ಹೊರಹರಿಯಿತು. ಅದು ಮಾನವರಿಗೆ ಸರ್ವಪಾಪ ಪರಿಹಾರಕವೂ, ಸರ್ವ ಕಾಮಪ್ರದಾಯಕವೂ ಆಗಿರುವುದು.

೨. ಎಲೈ ವಿಪ್ರಶ್ರೇಷ್ಠರೆ, ಆ ಪ್ರದೇಶದಲ್ಲಿ, ಪೂರ್ವದಲ್ಲಿ ಲೋಕವನ್ನೇ ವಿಸ್ಮಯಗೊಳಿಸುವ ಒಂದು ಸಂಗತಿಯು ತಾನಾಗಿಯೇ ನಡೆಯಿತು. ಅದನ್ನು ಹೇಳುತ್ತೇನೆ, ಕೇಳಿರಿ.

೩. ತ್ರಿಶಂಕುವೆಂಬ ರಾಜೇಂದ್ರನು ಚಂಡಾಲತ್ವವನ್ನು ಪಡೆದಿದ್ದು ಆ ಗಂಗಾ ಜಲದಲ್ಲಿ ಸ್ನಾನಮಾಡಿ ಮತ್ತೆ ರಾಜೋಚಿತವಾದ ಶರೀರವನ್ನು ಪಡೆದನು.

೪. ಋಷಿಗಳು ಕೇಳುತ್ತಾರೆ :—ಎಲೈ ಮುನಿವರ್ಯನೆ, ನೃಪಶ್ರೇಷ್ಠನಾದ ಆ ತ್ರಿಶಂಕುವು ಚಂಡಾಲತ್ವವನ್ನು ಪಡೆದುದು ಹೇಗೆ? ಈ ವಿಷಯವನ್ನು ವಿಸ್ತಾರ ವಾಗಿ ನಮಗೆ ತಿಳಿಸುವವನಾಗು.

ಸೂತ ಉವಾಚ :—
ಅಹಂ ವಃ ಕೀರ್ತಯಿಷ್ಯಾಮಿ ಕಥಾಮೇತಾಂ ಪುರಾತನೀಂ ।
ಸರ್ವಪಾಪಹರಾಂ ಮೇಧ್ಯಾಂ ತ್ರಿಶಂಕುನೃಪಸಂಭವಾಂ ॥ ೫ ॥
ಸೂರ್ಯವಂಶೋದ್ಭವಃ ಪೂರ್ವಂ ತ್ರಿಶಂಕುರಿತಿ ವಿಶ್ರುತಃ ।
ಆಸೀತ್ಪಾರ್ಥಿವಶಾರ್ದೂಲಃ ಶಾರ್ದೂಲಸಮವಿಕ್ರಮಃ ॥ ೬ ॥
ವಸಿಷ್ಠಸ್ಯ ಮುನೇಃ ಶಿಷ್ಯೋ ಯಜ್ವಾ ದಾನಪತಿಃ ಪ್ರಭುಃ ।
ತೇನೇಷ್ಟಂ ಚ ಮಖೈಃ ಸರ್ವೈರಗ್ನಿಷ್ಟೋಮಾದಿಭಿಃ ಸದಾ ॥ ೭ ॥
ಸಂಪೂರ್ಣದಕ್ಷಿಣೈರೇವ ವತ್ಸರಂ ವತ್ಸರಂ ಪ್ರತಿ ।
ತಥಾ ದಾನಾನಿ ಸರ್ವಾಣಿ ಪ್ರದತ್ತಾನಿ ಮಹಾತ್ಮನಾ ॥ ೮ ॥
ಬ್ರಾಹ್ಮಣೇಭ್ಯೋ ವಿಶಿಷ್ಟೇಭ್ಯೋ ದೀನೇಭ್ಯಶ್ಚ ವಿಶೇಷತಃ ।
ವ್ರತಾನಿ ಚ ಪ್ರಚೀರ್ಣಾನಿ ರಕ್ಷಿತಾಃ ಶರಣಾಗತಾಃ ॥ ೯ ॥
ಪುತ್ರವಲ್ಲಾಲಿತಾ ಲೋಕಾಃ ಶತ್ರುವಶ್ಚ ನಿಷೂದಿತಾಃ ।
ಭ್ರಾಂತಾನಿ ಭೂತಲೇ ಯಾನಿ ತೀರ್ಥಾನ್ಯಾಯತನಾನಿ ಚ ।
ತಪಸ್ವಿಭ್ಯೋ ಯಥಾಕಾಮಂ ಯಚ್ಛತಾ ವಾಂಛಿತಂ ಧನಂ ॥ ೧೦ ॥

---

೫. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಬಹು ಪುರಾತನವೂ, ಸಮಸ್ತ ಪಾಪಗಳನ್ನು ಕಳೆಯುವುದೂ, ಪವಿತ್ರವಾದುದೂ ಆದ ತ್ರಿಶಂಕು ಮಹಾರಾಜನ ಈ ಕಥೆಯನ್ನು ನಿಮಗೆ ಹೇಳುತ್ತೇನೆ.

೬. ಸೂರ್ಯವಂಶದಲ್ಲಿ ಜನಿಸಿ ತ್ರಿಶಂಕುವೆಂದು ಪ್ರಖ್ಯಾತನಾದ ಮಹಾ ಪರಾಕ್ರಮಿಯಾದ ಒಬ್ಬ ರಾಜಶ್ರೇಷ್ಠನಿದ್ದನು.

೭. ಯಾಜ್ಞಿಕನೂ ದಾನಶೀಲನೂ ಆದ ಈ ಮಹಾರಾಜನು ವಸಿಷ್ಠ ಮುನಿಗೆ ಶಿಷ್ಯನಾಗಿದ್ದನು. ಇವನು ಅಗ್ನಿಷ್ಟೋಮಾದಿ ಸಕಲ ಯಾಗಗಳನ್ನೂ ಮಾಡಿದ್ದನು.

೮–೯. ಪ್ರತಿ ಸಂವತ್ಸರವೂ ಈತನು ಸಂಪೂರ್ಣ ದಕ್ಷಿಣೆಗಳಿಂದ ಹಾಗೆ ಯಾಗಗಳನ್ನು ಮಾಡುತ್ತಿದ್ದನಲ್ಲದೆ, ಶ್ರೇಷ್ಠರಾದ ಬ್ರಾಹ್ಮಣರಿಗೂ, ದೀನ ದರಿದ್ರರಿಗೂ ವಿಶೇಷವಾಗಿ ವಿತರಣೆಯಿಂದ ಸಕಲ ದಾನಗಳನ್ನೂ ನೀಡುತ್ತಿದ್ದ ಮಹಾತ್ಮನಾಗಿದ್ದನು. ಅನೇಕ ವ್ರತಗಳನ್ನು ಮಾಡಿದ್ದನಲ್ಲದೆ ಶರಣೆಂದು ಬಂದವರನ್ನು ರಕ್ಷಿಸುತ್ತಿದ್ದನು.

೧೦. ಪ್ರಜೆಗಳನ್ನು ಮಕ್ಕಳಂತೆ ಪೋಷಿಸಿ ಹಗೆಗಳನ್ನು ಸದೆದು ಭೂಮಂಡಲದಲ್ಲಿರುವ ಸಮಸ್ತ ತೀರ್ಥಕ್ಷೇತ್ರಗಳಿಗೂ ದೇವಾಯತನಗಳಿಗೂ ಯಾತ್ರೆಗಳನ್ನು ಮಾಡಿ ತಪಸ್ವಿಗಳಾದವರಿಗೆ ಅವರ ಇಷ್ಟಾನುಸಾರವಾಗಿ ಧನವನ್ನು ಕೊಡುತ್ತಿದ್ದನು.

ಕಸ್ಯಚಿತ್ತ್ವಥ ಕಾಲಸ್ಯ ವಸಿಷ್ಠೋ ಭಗವಾನ್ಮುನಿಃ ।
ತೇನ ಪ್ರೋಕ್ತಃ ಸಭಾಮಧ್ಯೇ ಸಂಸ್ಥಿತೋ ನತಿಪೂರ್ವಕಂ ॥ ೧೧ ॥

ತ್ರಿಶಂಕುರುವಾಚ :—

ಭಗವನ್ ಯಷ್ಟುಮಿಚ್ಛಾಮಿ ತೇನ ಯಜ್ಞೇನ ಸಾಂಪ್ರತಂ ।
ಗಮ್ಯತೇ ತ್ರಿದಿವಂ ಯೇನ ಸಶರೀರೇಣ ಸತ್ವರಂ ॥ ೧೨ ॥
ತಸ್ಮಾತ್ಕುರು ಪ್ರಸಾದಂ ಮೇ ಸಂಭಾರಾನಾಹರ ದ್ರುತಂ ।
ತಸ್ಯ ಯಜ್ಞಸ್ಯ ಸಿದ್ಧ್ಯರ್ಥಂ ಯಥಾರ್ಹಾನ್ಬ್ರಾಹ್ಮಣಾಂಸ್ತಥಾ ॥ ೧೩ ॥

ವಸಿಷ್ಠ ಉವಾಚ :—

ನ ಸ ಕಶ್ಚಿತ್ಕ್ರತುರ್ಯೇನ ಗಮ್ಯತೇ ತ್ರಿದಿವಂ ನೃಪ ।
ಅನೇನೈವ ಶರೀರೇಣ ಸತ್ಯಮೇತದ್ಬ್ರವೀಮ್ಯಹಂ ॥ ೧೪ ॥
ಅಗ್ನಿಷ್ಟೋಮಾದಯೋ ಯಜ್ಞಾ ಯೇ ಪ್ರೋಕ್ತಾಃ ಪ್ರಾಕ್ ಸ್ವಯಂಭುವಾ ।
ಅನ್ಯದೇಹಾಂತರೇ ಸ್ವರ್ಗಃ ಪ್ರಾಪ್ಯತೇ ತೈಃ ಕೃತೈರ್ನೃಪ ॥ ೧೫ ॥
ಯದಿ ವಾ ಪೃಥಿವೀಪಾಲ ತ್ವಯಾ ಯಜ್ಞಪ್ರಭಾವತಃ ।
ಪಾರ್ಥಿವೋ ವಾ ದ್ವಿಜೋ ವಾಽಥ ವೈಶ್ಯೋ ವಾಽನ್ಯತರೋಽಪಿ ವಾ ॥ ೧೬ ॥
ಸ್ವಯಂ ದೃಷ್ಟಃ ಶ್ರುತೋ ವಾಽಪಿ ಸಂಜಾತೋಽತ್ರ ಧರಾತಲೇ ।
ಸ್ವರ್ಗಂ ಗತಃ ಶರೀರೇಣ ಸಹಿತಸ್ತತ್ಪ್ರಕೀರ್ತಯ ॥ ೧೭ ॥

---

೧೧. ಒಂದಾನೊಂದು ದಿನ ಈ ತ್ರಿಶಂಕುವು ಸಭಾಮಧ್ಯದಲ್ಲಿ ಕುಳಿತವನಾಗಿ ತನ್ನ ಗುರುವಾದ ವಸಿಷ್ಠ ಮುನಿಯನ್ನು ನಮಸ್ಕರಿಸಿ ಈ ರೀತಿ ಹೇಳಿದನು.

೧೨–೧೩. ತ್ರಿಶಂಕುವು ಹೇಳುತ್ತಾನೆ:—ಭಗವನ್, ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಲು ಸಾಧಕವಾದ ಯಜ್ಞವನ್ನು ಮಾಡಬಯಸುತ್ತೇನೆ. ಆದುದರಿಂದ ನನ್ನಲ್ಲಿ ಅನುಗ್ರಹವನ್ನು ತೋರಿ ಅದಕ್ಕೆ ಬೇಕಾದ ಸಮಸ್ತ ಸಂಭಾರಗಳನ್ನೂ ಸಿದ್ಧಗೊಳಿಸು. ಆ ಯಜ್ಞ ನಿರ್ವಹಣಕ್ಕಾಗಿ ಅರ್ಹರಾದ ಬ್ರಾಹ್ಮಣರನ್ನು ಆಹ್ವಾನಿಸು.

೧೪. ವಸಿಷ್ಠನು ಹೇಳುತ್ತಾನೆ:— ಅಯ್ಯಾ ದೊರೆಯೆ, ಇದೇ ಶರೀರದಿಂದಲೆ ಸ್ವರ್ಗಲೋಕಕ್ಕೆ ಹೋಗಗೊಳಿಸುವ ಯಾವ ಯಾಗವೂ ಇರುವುದಿಲ್ಲ. ಇದನ್ನು ಸತ್ಯವಾಗಿಯೂ ಹೇಳುತ್ತಿದ್ದೇನೆ.

೧೫. ಬ್ರಹ್ಮನು ಬೇರೊಂದು ದಿವ್ಯದೇಹವನ್ನು ಪಡೆದು ಸ್ವರ್ಗಲೋಕವನ್ನು ಸೇರುವಂತಹ ಅಗ್ನಿಷ್ಟೋಮಾದಿ ಯಾಗಗಳನ್ನು ಹೇಳಿರುತ್ತಾನೆ.

೧೬–೧೭. ಎಲೈ ಪೃಥ್ವೀಪಾಲನೆ, ದೊರೆಯಾಗಲಿ, ವಿಪ್ರನಾಗಲಿ, ವೈಶ್ಯನಾಗಲಿ, ಮತ್ತಾರೇ ಆಗಲಿ ಯಜ್ಞ ಪ್ರಭಾವದಿಂದ ಸ್ವಶರೀರದಿಂದಲೆ ಸ್ವರ್ಗಕ್ಕೆ ಹೋದವನು ಈ ಭೂಮಂಡಲದಲ್ಲಿ ಹುಟ್ಟಿದ್ದನೆಂಬುದನ್ನು ನೀನು ಕೇಳಿಯಾಗಲಿ ಕಂಡಾಗಲಿ ಇರುವುದುಂಟೆ?

ತ್ರಿಶಂಕುರುವಾಚ :—
ನಾಽಸಾಧ್ಯಂ ವಿದ್ಯತೇ ಬ್ರಹ್ಮಂಸ್ತವಾಽಹಂ ವೇದ್ಮಿ ತತ್ತ್ವತಃ ।
ತಸ್ಮಾತ್ಕುರು ಪ್ರಸಾದಂ ಮೇ ಯಥಾಸ್ಯಾನ್ಮನಸೇಪ್ಸಿತಂ ॥ ೧೮ ॥
ವಸಿಷ್ಠ ಉವಾಚ :—
ಅನೃತಂ ನೋಕ್ತಪೂರ್ವಂ ಮೇ ಸ್ವೈರೇಷ್ವಪಿ ಹಿ ಜಿಹ್ವಯಾ ।
ತಸ್ಮಾನ್ನಾಽಸ್ತಿ ಮಖಃ ಕಶ್ಚಿತ್ಸತ್ಯಂ ತ್ವಂ ಯಷ್ಟುಮಿಚ್ಛಸಿ ॥ ೧೯ ॥
ತ್ರಿಶಂಕುರುವಾಚ :—
ಯದಿ ಮಾಂ ವಿಪ್ರಶಾರ್ದೂಲ ಸ ತ್ವಂ ಯಾಜಯಿತುಂ ಕ್ಷಮಃ ।
ಸ್ವರ್ಗಪ್ರದೇನ ಯಜ್ಞೇನ ವಪುಷಾಽನೇನ ವೈ ವಿಭೋ ॥ ೨೦ ॥
ತತ್ಕಿಂ ತೇ ತಪಸಃ ಶಕ್ತ್ಯಾ ಬ್ರಾಹ್ಮಣಸ್ಯ ವಿಚಕ್ಷಣ ।
ಅಪರಂ ಶೃಣು ಮೇ ವಾಕ್ಯಂ ಯದ್ಬ್ರವೀಮಿ ಪರಿಸ್ಫುಟಂ ।
ಶೃಣ್ವತಾಂ ಮುನಿವೃಂದಾನಾಂ ತಥಾಽನ್ಯೇಷಾಂ ದ್ವಿಜೋತ್ತಮ ॥ ೨೧ ॥
ಯದಿ ಮೇ ನ ಕರೋಷಿ ತ್ವಂ ವಚನಂ ವದತೋಽಸಕೃತ್ ।
ತೇನ ಯಜ್ಞೇನ ಯಕ್ಷ್ಯೇಽಹಂ ತತ್ಕೃತ್ವಾಽನ್ಯಂ ದ್ವಿಜಂ ಗುರುಂ ॥ ೨೨ ॥

---

೧೮. ತ್ರಿಶಂಕುವು ಹೇಳುತ್ತಾನೆ:—ಎಲೈ ಬ್ರಹ್ಮಜ್ಞಾನಿಯೆ, ದಿಟವಾಗಿಯೂ ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂಬುದನ್ನು ನಾನು ಬಲ್ಲೆ. ಆದುದರಿಂದ ನನ್ನ ಮನೋಭೀಷ್ಟವು ನೆರವೇರುವಂತೆ ನನ್ನಲ್ಲಿ ಅನುಗ್ರಹವನ್ನು ತೋರು. ಪ್ರಸನ್ನನಾಗು.

೧೯. ವಸಿಷ್ಠನು ಹೇಳುತ್ತಾನೆ:—ಮಹಾರಾಜ, ನಾನು ಸ್ವೇಚ್ಛಾಚಾರಿಗಳಾದ ಜನರಲ್ಲಿಯೂ ಈ ನಾಲಗೆಯಿಂದ ಹಿಂದಾವಾಗಲೂ ಅನೃತವನ್ನು ನುಡಿದವನಲ್ಲ. ಇನ್ನು ನಿನ್ನಲ್ಲಿ ಆಡುವೆನೆ? ನೀನು ಅನುಷ್ಠಿಸಬೇಕೆಂದಿರುವ ಅಂಥ ಯಾಗವು ಸತ್ಯವಾಗಿಯೂ ಇರುವುದಿಲ್ಲ.

೨೦–೨೧. ತ್ರಿಶಂಕುವು ಹೇಳುತ್ತಾನೆ:—ಎಲೈ ವಿಪ್ರಶ್ರೇಷ್ಠನೆ, ಈ ಶರೀರದಿಂದಲೆ ಸ್ವರ್ಗವನ್ನು ಸೇರುವಂತೆ ಮಾಡುವ ಯಾಗವನ್ನು ಮಾಡಿಸಲು ಮಹಾತ್ಮನಾದ ನಿನಗೆ ಸಾಮರ್ಥ್ಯವಿಲ್ಲದಿದ್ದರೆ, ಬ್ರಾಹ್ಮಣನಾಗಿ, ವಿಚಕ್ಷಣನಾಗಿ, ಅಪಾರವಾದ ತಪಶ್ಶಕ್ತಿಯಿದ್ದು ಏನು ಪ್ರಯೋಜನವಾದಂತಾಯಿತು? ಅಯ್ಯಾ ಮುನಿಯೆ, ಈ ಸಭೆಯಲ್ಲಿ ನೆರೆದಿರುವ ಮುನಿಗಳೂ, ಇತರರೂ ಕೇಳುವಂತೆ ನಾನು ಈಗ ಸ್ಫುಟವಾಗಿ ಆಡುವ ಮಾತನ್ನು ಕೇಳು.

೨೨. ಅಡಿಗಡಿಗೂ ನಾನು ಪ್ರಾರ್ಥನೆ ಮಾಡುತ್ತಿದ್ದರೂ ನೀನು ಅಂಥ ಯಜ್ಞವನ್ನು ನನ್ನಿಂದ ಮಾಡಿಸದಿದ್ದಲ್ಲಿ ನಾನು ಬೇರೊಬ್ಬ ಬ್ರಾಹ್ಮಣನನ್ನು ಗುರುವನ್ನಾಗಿ ಪಡೆದು ಅದೇ ಯಜ್ಞವನ್ನು ಮಾಡಲುಳ್ಳವನು.

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ವಸಿಷ್ಠೋ ಭಗವಾಂಸ್ತತಃ ।
ತಮುವಾಚ ವಿಹಸ್ಯೋಚ್ಚೈಃ ಕುರುಷ್ವೈವಂ ಮಹೀಪತೇ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ತ್ರಿಶಂಕೂಪಾಖ್ಯಾನೇ—ತ್ರಿಶಂಕುವಸಿಷ್ಠಸಂವಾದವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

೨೩. ಸೂತನು ಹೇಳುತ್ತಾನೆ:—ಭಗವಾನ್ ವಸಿಷ್ಠಮುನಿಯು ತ್ರಿಶಂಕುವಿನ ಆ ಮಾತನ್ನು ಕೇಳಿ ಗಟ್ಟಿಯಾಗಿ ನಗುತ್ತ, "ಅಯ್ಯಾ ದೊರೆಯೆ, ಹಾಗೆಯೇ ಮಾಡು" ಎಂದು ಹೇಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ತ್ರಿಶಂಕೂಪಾಖ್ಯಾನ—ತ್ರಿಶಂಕುವಸಿಷ್ಠಸಂವಾದವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ತ್ರಿಶಂಕೂಪಾಖ್ಯಾನೇ–ಹರಿಶ್ಚಂದ್ರರಾಜ್ಯೋಪಲಂಭನವರ್ಣನಂ

ಸೂತ ಉವಾಚ :—

ತತಃ ಪ್ರಣಮ್ಯ ಭೂಯಃ ಸ ವಸಿಷ್ಠಂ ಮುನಿಪುಂಗವಂ ।
ಯಯೌ ತತ್ರ ಸುತಾಸ್ತಸ್ಯ ಯತ್ರ ತೇ ಶತಸಂಖ್ಯಕಾಃ ॥ ೧ ॥
ತಾನಪಿ ಪ್ರಾಹ ನತ್ವಾ ಸ ತಮೇವಾರ್ಥಂ ನರಾಧಿಪಃ ।
ವಸಿಷ್ಠವಚನಂ ಕೃತ್ಸ್ನಂ ತಸ್ಯ ತೈರಪಿ ಶಂಸಿತಂ ॥ ೨ ॥
ತತಸ್ತಾನ್ ಸ ಪುನಃ ಪ್ರಾಹ ಯುಷ್ಮಾಕಂ ಜನಕೋಽಧುನಾ ।
ಅಶಕ್ತೋ ಮಾಂ ದಿವಂ ನೇತುಂ ಸಶರೀರಂ ವಿಸರ್ಜಿತಃ ॥ ೩ ॥
ತಸ್ಮಾದ್ಯದಿ ಸ ಮಾಂ ಯೂಯಂ ಯಾಜಯಿಷ್ಯಥ ಸಾಂಪ್ರತಂ ।
ಪರಿತ್ಯಜ್ಯ ಕರಿಷ್ಯಾಮಿ ಶೀಘ್ರಮನ್ಯಂ ಪುರೋಹಿತಂ ॥ ೪ ॥
ಯೋ ಮಾಂ ಯಜ್ಞಪ್ರಭಾವೇನ ನಯಿಷ್ಯತಿ ಸುರಾಲಯಂ ।
ಅನೇನೈವ ಶರೀರೇಣ ಸಹಿತಂ ಗುರುಪುತ್ರಕಾಃ ॥ ೫ ॥

---

### ಕನ್ನಡದ ಅನುವಾದ

#### ತ್ರಿಶಂಕೂಪಾಖ್ಯಾನ–ಹರಿಶ್ಚಂದ್ರರಾಜ್ಯೋಪಲಂಭನವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳಿರಾ, ತರುವಾಯ ಆ ಭೂಪತಿಯು ಮುನಿಪುಂಗವನಾದ ವಸಿಷ್ಠನನ್ನು ನಮಸ್ಕರಿಸಿ ಅಲ್ಲಿಂದ ಆ ಮುನಿಯ ನೂರು ಮಂದಿ ಮಕ್ಕಳಿದ್ದೆಡೆಗೆ ಬಂದನು.

೨. ಆ ದೊರೆಯು ಅವರೆಲ್ಲರನ್ನೂ ನಮಸ್ಕರಿಸಿ, ತಾನು ವಸಿಷ್ಠಮಹರ್ಷಿಯಲ್ಲಿ ಪ್ರಸ್ತಾಪಿಸಿದ್ದ ಸಶರೀರ ಸ್ವರ್ಗಪ್ರಾಪಕವಾದ ಯಾಗದ ವಿಚಾರವನ್ನೆಲ್ಲ ಅವರಲ್ಲಿ ಅರಿಕೆಮಾಡಿಕೊಂಡನು. ಅವರಾದರೊ ಆ ಮಹರ್ಷಿಯಂತೆಯೆ ಉತ್ತರವನ್ನು ಕೊಟ್ಟರು.

೩. ತರುವಾಯ ತ್ರಿಶಂಕುವು ಮತ್ತೆ ಆ ಮುನಿಕುಮಾರರನ್ನು ಕುರಿತು, "ಅಯ್ಯಾ, ನಿಮ್ಮ ತಂದೆಯು ನನ್ನನ್ನು ಸಶರೀರವಾಗಿ ಸ್ವರ್ಗಕ್ಕೆ ಕಳಿಸಲು ಅಶಕ್ತನಾಗಿ ಹೋದನು. ಈ ಕಾರಣದಿಂದ ನಾನು ಆತನನ್ನು ತೊರೆದಿದ್ದೇನೆ.

೪. ನೀವೂ ಅಂತಹ ಯಾಗವನ್ನು ಮಾಡಿಸದಿದ್ದಲ್ಲಿ ನಿಮ್ಮನ್ನೂ ವಿಸರ್ಜಿಸಿ ಬೇರೊಬ್ಬನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳುತ್ತೇನೆ.

೫. ಎಲೈ ಗುರುಪುತ್ರರಿರಾ, ಯಾವನು ನನ್ನನ್ನು ಶರೀರದಿಂದಲೆ ಸ್ವರ್ಗಕ್ಕೆ ಸೇರಿಸುವ ಯಾಗವನ್ನು ನನ್ನಿಂದ ಮಾಡಿಸುವನೋ ಅಂಥವನನ್ನೇ ಪುರೋಹಿತನನ್ನಾಗಿ ಆರಿಸಿಕೊಳ್ಳುವೆನು, ನೋಡುತ್ತಿರಿ" ಎಂದು ಹೇಳಿದನು.

ತಸ್ಯ ತದ್ವಚನಂ ಶ್ರುತ್ವಾ ಸರ್ವೇ ತೇ ಮುನಿಸತ್ತಮಾಃ ।
ಪರಂ ಕೋಪಂ ಸಮಾವಿಷ್ಟಾಸ್ತಮೂಚುಃ ಪರುಷಾಕ್ಷರೈಃ ॥ ೬ ॥
ಯಸ್ಮಾತ್ತ್ವಯಾ ಗುರುಸ್ತ್ಯಕ್ತೋ ಹಿತಕೃತ್ಪಾಪವಾನಸಿ ।
ತಸ್ಮಾದ್ಭವಾಽಧುನಾ ಪಾಪ ಚಂಡಾಲೋ ಲೋಕನಿಂದಿತಃ ॥ ೭ ॥
ಅಥ ತದ್ವಚನಾಂತೇ ಸ ತತ್ಕ್ಷಣಾತ್ಪೃಥಿವೀಪತಿಃ ।
ಬಭೂವಾಂತ್ಯಜರೂಪಾಢ್ಯೋ ವಿಕೃತಾಕಾರ ದೇಹಭೃತ್ ॥ ೮ ॥
ಯುವಮಧ್ಯಃ ಕೃಶಗ್ರೀವಃ ಪಿಂಗಾಕ್ಷೋ ಭುಗ್ನನಾಸಿಕಃ ।
ಕೃಷ್ಣಾಂಗಃ ಶಂಕುವರ್ಣಶ್ಚ ದುರ್ಗಂಧೇನ ಸಮಾವೃತಃ ॥ ೯ ॥
ಅಥಾತ್ಮಾನಂ ಸಮಾಲೋಕ್ಯ ವಿಕೃತಂ ಸ ನರಾಧಿಪಃ ।
ಚಂಡಾಲಧರ್ಮಿಣಂ ಸದ್ಯೋ ಲಜ್ಜಯಾಽಧೋಮುಖಃ ಸ್ಥಿತಃ ॥ ೧೦ ॥
ಯಾಹಿ ಯಾಹೀತಿ ವಿಪ್ರೈಸ್ತೈರ್ಭರ್ತ್ಸ್ಯಮಾನೋ ಮುಹುರ್ಮುಹುಃ ।
ಸರ್ವತಃ ಸಾರಮೇಯೈಶ್ಚ ಕ್ಲಿಶ್ಯಮಾನೋ ನಿರರ್ಗಲೈಃ ।
ಕಾಕ ಕೋಕಿಲಸಂಕಾಶೋ ಜೀರ್ಣವಸ್ತ್ರಾವಗುಂಠಿತಃ ॥ ೧೧ ॥

---

೬. ಎಲೈ ಮುನಿಸತ್ತಮರೆ, ವಸಿಷ್ಠ ಮುನಿಕುಮಾರರೆಲ್ಲರೂ ತ್ರಿಶಂಕುವಿನ ಈ ಮಾತುಗಳನ್ನು ಕೇಳಿ ಬಹಳವಾಗಿ ಕೆರಳಿ, ಅವನನ್ನು ಕುರಿತು ಬಹು ಕಠಿಣ ವಾಗಿ ಈ ರೀತಿ ನುಡಿದರು.

೭. "ಎಲಾ ತ್ರಿಶಂಕುವೆ, ನೀನು ನಿನ್ನ ಹಿತವನ್ನೇ ಬಯಸಿ ಎಲ್ಲ ಕಾರ್ಯ ಗಳನ್ನೂ ಮಾಡುತ್ತಿದ್ದ ಗುರುವನ್ನು ತ್ಯಜಿಸಿದೆಯಾದುದರಿಂದ ನೀನು ಪಾಪಿ ಯಾದೆ. ಎಲವೊ ಪಾಪಿಷ್ಠನೆ, ಇದೇ ಕಾರಣದಿಂದ ಈಗ ನೀನು ಎಲ್ಲ ಜನಗಳೂ ನಿಂದಿಸುವ ಚಂಡಾಲನಾಗು."

೮. ಇಂತು ಆ ಮುನಿಪುತ್ರರು ನುಡಿದ ಮಾತು ಮುಗಿದೊಡನೆಯೆ ಆ ಪೃಥ್ವೀಪತಿಯು ವಿಕಾರ ದೇಹವುಳ್ಳ ಅಂತ್ಯಜನ ರೂಪವನ್ನು ತಾಳಿದನು.

೯. ಯುವದಂತೆ ಸಣ್ಣ ನಡುವು, ಕೃಶವಾದ ಕುತ್ತಿಗೆ, ಪಿಂಗಲ ವರ್ಣದ ಕಣ್ಣುಗಳು, ನಡ್ಡಿಯಾದ ಮೂಗು, ಕಪ್ಪನೆಯ ಮೈ, ಪಾಪಪೂರಿತವಾದ ವರ್ಣ, ಹೊರಬಡಿಯುತ್ತಿರುವ ನಾತ—ಇವುಗಳನ್ನೊಳಗೊಂಡ ಆ ದೊರೆಯು ಬಹು ಅಸಹ್ಯವಾಗಿ ತೋರುತ್ತಿದ್ದನು.

೧೦. ಆ ನರಾಧಿಪನು ಈ ರೀತಿ ವಿಕಾರವೂ ಚಂಡಾಲಧರ್ಮವನ್ನೊಳ ಗೊಂಡುದೂ ಆದ ತನ್ನ ದೇಹವನ್ನು ತಾನೇ ನೋಡಿ ಬಹುವಾಗಿ ನಾಚಿ ತಲೆ ತಗ್ಗಿಸಿ ನಿಂತನು.

೧೧. ಆಗ ಆ ವಾಸಿಷ್ಠರು, "ಛಿ, ಹೋಗು ಹೋಗು" ಎಂದು ಅಡಿಗಡಿಗೂ ಅವನನ್ನು ಧಿಕ್ಕರಿಸಿದರು. ಕಾಗೆ ಕೋಗಿಲೆಗಳ ಬಣ್ಣದಂತಹ ಮೈಬಣ್ಣ,

ತತಃ ಸ ಚಿಂತಯಾಮಾಸ ದುಃಖೇನ ಮಹತಾವೃತಃ ।
ಕಿಂಕರೋಮಿ ಕ್ವಗಚ್ಛಾಮಿ ಕಥಂ ಶಾಂತಿರ್ಭವಿಷ್ಯತಿ ॥ ೧೨ ॥
ಕಿಂ ಮಯೈತತ್ಸಮೂರ್ಖೇಣ ವಾಂಛಿತಂ ದುರ್ಲಭಂ ಪದಂ ।
ತತ್ಪ್ರಭಾವೇನ ವಿಭ್ರಷ್ಟಃ ಕುಲಧರ್ಮೋಽಪಿ ಮೇ ಸ್ವಕಃ ॥ ೧೩ ॥
ಕಿಂ ಜಲಂ ಪ್ರವಿಶಾಮ್ಯದ್ಯ ಕಿಂ ವಾ ದೀಪ್ತಂ ಹುತಾಶನಂ ।
ಭಕ್ಷಯಾಮಿ ವಿಷಂ ಕಿಂ ವಾ ಕಥಂ ಸ್ಯಾನ್ಮೃತ್ಯುರದ್ಯಮೇ ॥ ೧೪ ॥
ಅನೇನ ವಪುಷಾ ದಾರಾನ್ವೀಕ್ಷಯಿಷ್ಯಾಮಿ ತಾನ್ ಕಥಂ ।
ತಾದೃಶೇನ ಶರೀರೇಣ ಯಾಭಿಃ ಸಂಕ್ರೀಡಿತಂ ಮಯಾ ॥ ೧೫ ॥
ಕಥಂ ಪುತ್ರಾಂಸ್ತಥಾ ಪೌತ್ರಾನ್ ಸುಹೃತ್ಸಂಬಂಧಿಬಾಂಧವಾನ್ ।
ವೀಕ್ಷಯಿಷ್ಯಾಮಿ ತಾನ್ ಭೂಯಸ್ತಥಾಽನ್ಯಂ ಸೇವಕಂ ಜನಂ ॥ ೧೬ ॥
ಯೇ ಮಯಾ ನಿರ್ಜಿತಾಃ ಸರ್ವೇ ರಿಪವಃ ಸಂಗರೇ ಪುರಾ ।
ತೇಽದ್ಯ ಮಾಮಿಾದೃಶಂ ಶ್ರುತ್ವಾ ಹರ್ಷಂ ಯಾಸ್ಯಂತಿ ನಿರ್ಭಯಾಃ॥ ೧೭ ॥
ಯೇ ಮಯಾತರ್ಪಿತಾ ದಾನೈರ್ಬ್ರಾಹ್ಮಣಾ ವೇದಪಾರಗಾಃ ।
ತೇಽದ್ಯ ಮಾಮಿಾದೃಶಂ ಶ್ರುತ್ವಾ ಸಂಭವಿಷ್ಯಂತಿ ದುಃಖಿತಾಃ ॥ ೧೮ ॥

---

ವುಳ್ಳವನಾಗಿ, ಮಾಸಿ ಹರಿದ ಬಟ್ಟೆಯನ್ನುಟ್ಟು ವಿಕಾರವಾಗಿ ಕಾಣುತ್ತಿದ್ದ ಆ ಭೂಪತಿಯನ್ನು ಕಂಡು ಎಲ್ಲೆಡೆಗಳಿಂದಲೂ ನಾಯಿಗಳು ಅಟ್ಟಬಂದು ಒಂದೇ ಸಮನೆ ಪೀಡಿಸತೊಡಗಿದುವು.

೧೨—೨೪. ಆಗ ಅವನು ಮಹತ್ತರವಾದ ದುಃಖಕ್ಕೊಳಗಾಗಿ "ಅಯ್ಯೊ, ಏನುಮಾಡಲಿ, ಎಲ್ಲಿಗೆ ಹೋಗಲಿ? ನನಗೆ ಶಾಂತಿಯುಂಟಾಗುವುದೆಂತು? ಮೂರ್ಖನಾದ ನಾನು ದುರ್ಲಭವಾದ ಆ ಪದವಿಯನ್ನೇಕಾದರೂ ಆಶಿಸಿದೆನೊ! ಈಗ ನನಗಿದ್ದ ಕ್ಷಾತ್ರತೇಜಸ್ಸೂ ಅದರ ಪ್ರಭಾವವೂ ಭ್ರಷ್ಟವಾಗಿ ಹೋದುವು. ನನ್ನ ಕುಲಧರ್ಮವೂ ಜಾರಿಬಿದ್ದಿತು. ನೀರಿನಲ್ಲಿ ಧುಮುಕಲೆ? ಬೆಂಕಿಯಲ್ಲಿ ಬೀಳಲೆ? ವಿಷವನ್ನು ಕುಡಿಯಲೆ? ಏನು ಮಾಡಿದರೆ ನನಗೆ ಸಾವು ದೊರೆತೀತು? ಅಕಟಾ, ಈ ದೇಹದಿಂದ ಆ ನನ್ನ ಮಡದಿಯರನ್ನು ಹೇಗೆ ತಾನೆ ನೋಡಲಿ? ಅಂತಹ ಕಾಂತಿಯುಕ್ತವಾದ ಸುಂದರ ಶರೀರದಿಂದ ಅವರೊಡನೆ ಕ್ರೀಡಿಸುತ್ತಿದ್ದ ನಾನು ಈಗ ಈ ಶರೀರದಿಂದ ಅವರನ್ನು ನೋಡಲೆ? ಪುತ್ರರನ್ನೂ ಪೌತ್ರರನ್ನೂ ನೆಂಟರಿಷ್ಟರನ್ನೂ ಕಡೆಗೆ ಸೇವಕ ಜನರನ್ನೂ ಈಗ ಹೇಗೆ ತಾನೆ ಕಂಡೇನು? ಅಯ್ಯೊ, ಹಿಂದೆ ಯಾರನ್ನು ರಣಾಂಗಣಗಳಲ್ಲಿ ಜಯಿಸಿದ್ದೆನೊ ಆ ಹಗೆದೊರೆಗಳು ಈಗ ಈ ರೂಪದಿಂದಿರುವ ನನ್ನನ್ನು ಕಂಡು ಏನೊಂದೂ ಹೆದರಿಕೆಯಿಲ್ಲದೆ ಸಂತೋಷವನ್ನು ಪಡೆಯುವರಲ್ಲವೆ? ವೇದಪಾರಂಗತರಾದ ಯಾವ ಬ್ರಾಹ್ಮಣರು ನಾನೆಸಗಿದ ದಾನಧರ್ಮಾದಿಗಳಿಂದ ತೃಪ್ತರಾದರೊ ಅವರು ಇದೀಗ ಚಂಡಾಲನಾಗಿರುವ ನನ್ನನ್ನು ಕಂಡು ಅದೆಷ್ಟು ದುಃಖಪಡುವರೊ! ನನಗೆ ತುಂಬ ಇಷ್ಟ

ತಥಾ ಯೇ ಸುಹೃದೋಽಭೀಷ್ಟಾ ನಿತ್ಯಂ ಮಮ ಹಿತೇ ರತಾಃ ।
ಕಾಮವಸ್ಥಾಂ ಪ್ರಯಾಸ್ಯಂತಿ ದೃಷ್ಟ್ವಾ ಮಾಂ ಸ್ಥಿತಮೀದೃಶಂ ॥ ೧೯ ॥
ಭದ್ರಜಾತ್ಯಾ ಗಜಾ ಯೇ ಮೇ ಮದಾಂಧಾಃ ಷಷ್ಟಿಹಾಯನಾಃ ।
ಮಯಾ ವಿನಾ ಮಿಥೋ ಯುದ್ಧೇ ಕಸ್ತಾನದ್ಯ ನಿಯೋಕ್ಷ್ಯತಿ ॥ ೨೦ ॥
ಅಶ್ವಾಸ್ತಿತ್ತಿರಕಲ್ಮಾಷಾಃ ಸುದಾಂತಾಃ ಸಾದಿಭಿರ್ದೃಢೈಃ ।
ಕಸ್ತಾಂಶ್ಚಿತ್ರಪದನ್ಯಾಸೈರ್ನಿಯಾಸ್ಯತಿ ಮಯಾ ವಿನಾ ॥ ೨೧ ॥
ತಥಾ ಮೇ ಭೃತ್ಯವರ್ಗಾಸ್ತೇ ಕುಲೀನಾ ಯುದ್ಧದುರ್ಮದಾಃ ।
ಮಾಂ ವಿನಾ ಕಸ್ಯ ಯಾಸ್ಯಂತಿ ಸಮೀಪೇಽದ್ಯ ಸುದುಃಖಿತಾಃ ॥ ೨೨ ॥
ಸಂಖ್ಯಾಹೀನಸ್ತಥಾ ಕೋಶಸ್ತಾದೃಙ್ಮೇ ಬಹುರತ್ನಭಾಕ್ ।
ಕಸ್ಯ ಯಾಸ್ಯತಿ ಸಂಭೋಗಂ ಮಯಾ ಹೀನಸ್ತು ರಕ್ಷಿತಃ ॥ ೨೩ ॥
ತಥಾ ಮೇ ಸಂಖ್ಯಯಾ ಹೀನಂ ಧಾನ್ಯಂ ಗೋಧೂಮಿಕಂ ಮಹತ್ ।
ಭವಿಷ್ಯತಿ ಕಥಂ ಹೀನಂ ಮಯಾಽಭೀಷ್ಟೈಸ್ತು ರಕ್ಷಿತಂ ॥ ೨೪ ॥
ಏವಂ ಬಹುವಿಧಂ ರಾಜಾ ಸ ವಿಲಪ್ಯ ಚ ದುಃಖಿತಃ ।
ಜಗಾಮ ನಗರಾಭ್ಯಾಶಂ ಪದ್ಭ್ಯಾಮೇವ ಶನೈಃ ಶನೈಃ ॥ ೨೫ ॥

---

ಹಾಗಿ ಯಾವಾಗಲೂ ನನ್ನ ಹಿತದಲ್ಲಿಯೆ ಆಸಕ್ತರಾಗಿದ್ದ ನನ್ನ ಗೆಳೆಯರು ಈ ರೀತಿ ಇರುವ ನನ್ನನ್ನು ಕಂಡು ಯಾವ ಅವಸ್ಥೆಗೊಳಗಾಗುವರೊ! ಭದ್ರವೆಂಬ ಜಾತಿಯಲ್ಲಿ ಜನಿಸಿದುವೂ, ಆರೇ ವರ್ಷಗಳ ವಯಸ್ಸಿನವೂ, ಮದಿಸಿರುವುವೂ, ಯುದ್ಧಗಳಲ್ಲಿ ನನ್ನನ್ನು ಹೊರತು ಮತ್ತಾರೂ ನಡೆಸಲಸದಳಗಳೂ ಆದ ನನ್ನ ಆನೆಗಳನ್ನು ಈಗ ಯಾರು ಉಪಯೋಗಿಸುವರೊ! ತಿತ್ತಿರ ಪಕ್ಷಿಗಳಂತೆ ಕೃಷ್ಣ ವರ್ಣವುಳ್ಳುವಾಗಿ ಒಳ್ಳೆಯ ದಾರ್ಢ್ಯವನ್ನೊಳಗೊಂಡು, ಬಲಶಾಲಿಗಳಾದ ರಾವುತರ ಪರಿಚರ್ಯೆಯುಳ್ಳ, ಚಮತ್ಕಾರಪೂರ್ಣವಾದ ನಡುಗೆಯ ಆ ನನ್ನ ಕುದುರೆಗಳನ್ನು ನನ್ನನ್ನುಳಿದು ಯಾರು ನಿಯೋಜಿಸಿಕೊಳ್ಳುವರೊ ಏನೊ! ಅಂತೆಯೆ, ಸತ್ಕುಲಪ್ರಸೂತರು ರಣದುರ್ಮದರೂ ಆದ ನನ್ನ ಭೃತ್ಯರು ನಾನಿಲ್ಲದಿರುವುದರಿಂದ ಬಹಳವಾದ ದುಃಖಕ್ಕೊಳಗಾಗಿ ಯಾರನ್ನು ಅನುಸರಿಸಿ ಹೋಗುವರೊ! ನಾನು ಸಂರಕ್ಷಿಸಿಟ್ಟದ್ದ ಬಹುರತ್ನಸಮನ್ವಿತವಾಗಿ ಅಸಂಖ್ಯಾತವೂ ಆಗಿರುವ ಅಂತಹ ನನ್ನ ಕೋಶವನ್ನು ನಾನಿಲ್ಲದಿರುವಾಗ ಯಾರು ಅನುಭೋಗಿಸುವರೊ! ಹಾಗೆಯೆ ನಾನು ಕೂಡಿಟ್ಟಿರುವ ಗೋಧುವೆಯೇ ಮೊದಲಾದ ಅಸಂಖ್ಯಾತ ಧಾನ್ಯಗಳ ಕೋಶವು ನನಗೆ ಇಷ್ಟರಾದವರ ರಕ್ಷಣೆಗೊಳಗಾಗಿದ್ದು ಈಗ ಹೇಗೆ ಅಳಿದುಹೋಗುವುದೊ! ಎಂದು ಪ್ರಲಪಿಸಿದನು.

೨೫. ಎಲೈ ಮಹರ್ಷಿಗಳಿರಾ, ಆ ತ್ರಿಶಂಕುವು ಹೀಗೆ ಬಗೆಬಗೆಯಾಗಿ ವಿಲಪಿಸುತ್ತ ಬಹುವಾಗಿ ದುಃಖಿಗೊಂಡು ಕಾಲ್ನಡಗೆಯಿಂದಲೆ ಮೆಲ್ಲನೆ ತನ್ನ ಪಟ್ಟಣದ ಬಳಿಗೈದಿದ್ದನು.

ತತೋ ರಾತ್ರೌ ಸಮಾಸಾದ್ಯ ಸ್ವಂ ಪುರಂ ಜನವರ್ಜಿತಂ ।
ದ್ವಾರೇ ಸ್ಥಿತ್ವಾ ಸಮಾಹೂಯ ಪುತ್ರಂ ಮಂತ್ರಿಭಿರನ್ವಿತಂ ॥ ೨೬ ॥
ಕಥಯಾಮಾಸ ವೃತ್ತಾಂತಂ ಸರ್ವಂ ಶಾಪಸಮುದ್ಭವಂ ।
ದೂರೇ ಸ್ಥಿತಃ ಸ ಪುತ್ರಾಣಾಂ ವಸಿಷ್ಠಸ್ಯ ಮಹಾತ್ಮನಃ ॥ ೨೭ ॥
ವಜ್ರಪಾತೋಪಮಂ ವಾಕ್ಯಂ ತೇಽಪಿ ತಸ್ಯ ನಿಶಮ್ಯ ತತ್ ।
ಬಾಷ್ಪಪರ್ಯಾಕುಲೈರಾಸ್ಯೈ ರುರುದುಃ ಶೋಕಸಂಯುತಾಃ ॥ ೨೮ ॥
ಹಾನಾಥ ಹಾಮಹಾರಾಜ ಹಾನಿತ್ಯಂ ಧರ್ಮವತ್ಸಲ ।
ತ್ವಯಾ ಹೀನಾ ಭವಿಷ್ಯಾಮಃ ಕಥಮದ್ಯ ಸುದುಃಖಿತಾಃ ॥ ೨೯ ॥
ಕಿಮೇತದ್ಯುಜ್ಯತೇ ತೇಷಾಂ ವಾಸಿಷ್ಠಾನಾಂ ದುರಾತ್ಮನಾಂ ।
ಶಾಪಂ ದದುಃ ಸ್ವಯಾಜ್ಯಸ್ಯ ವಿಶೇಷಾದ್ವಿನತಸ್ಯ ಚ ॥ ೩೦ ॥
ತೇ ವಯಂ ರಾಜಶಾರ್ದೂಲ ಪರಿತ್ಯಜ್ಯ ಗೃಹಾದಿಕಂ ।
ಅಂತ್ಯಜತ್ವಂ ಗಮಿಷ್ಯಾಮಸ್ತ್ವಯಾ ಸಾರ್ಧಮಸಂಶಯಂ ॥ ೩೧ ॥

ತ್ರಿಶಂಕುರುವಾಚ :—

ಭಕ್ತಿಶ್ಚೇದಸ್ತಿ ಯುಷ್ಮಾಕಂ ಮಮೋಪರಿ ನಿರರ್ಗಲಾ ।
ತನ್ಮೇ ಪುತ್ರಸ್ಯ ಮಂತ್ರಿತ್ವಂ ಸರ್ವೇ ಕುರುತ ಸಾಂಪ್ರತಂ ॥ ೩೨ ॥

---

೨೬-೨೭. ಬಳಿಕ ರಾತ್ರಿಯಲ್ಲಿ ಜನರಾರೂ ಇಲ್ಲದಿರುವ ಸಮಯದಲ್ಲಿ ಪಟ್ಟಣವನ್ನು ಪ್ರವೇಶಮಾಡಿ ದ್ವಾರದಲ್ಲಿಯೆ ನಿಂತು, ಮಂತ್ರಿಸಮನ್ವಿತನಾದ ತನ್ನ ಮಗನನ್ನು ಕರೆದು ದೂರದಲ್ಲಿಯೆ ನಿಂತು, ಮಹಾತ್ಮರಾದ ವಸಿಷ್ಠರ ಪುತ್ರರಿಂದ ತನಗೆ ಸಂಭವಿಸಿದ ಶಾಪವೃತ್ತಾಂತವೆಲ್ಲವನ್ನೂ ತಿಳಿಸಿದನು.

೨೮-೨೯. ವಜ್ರಪಾತಕ್ಕೆಣೆಯಾದ ಈ ನುಡಿಯನ್ನು ಕೇಳಿ ಮಂತ್ರಿಗಳೂ ಆ ರಾಜಕುಮಾರನೂ ಕಂಬನಿದುಂಬಿದ ಮುಖವುಳ್ಳವರಾಗಿ, ಬಹಳವಾಗಿ ದುಃಖಗೊಂಡು ಅಳತೊಡಗಿದರು. "ಅಕ್ಕಟಾ, ಪ್ರಭುವೆ, ಓ ಮಹಾರಾಜನೆ, ನಿರಂತರವೂ ಧರ್ಮವತ್ಸಲನಾಗಿ ರಾಜ್ಯವನ್ನಾಳಿದ ಮಹಾ ಪ್ರಭುವೆ, ನಿನ್ನಿಂದ ಅಗಲಿ ದುಃಖಕ್ಕೊಳಗಾಗಿ ನಾವೆಲ್ಲರೂ ಹೇಗೆ ತಾನೆ ಜೀವಿಸಿಯೇವು?

೩೦. ಅಯ್ಯೋ, ದುರಾತ್ಮರಾದ ಆ ವಸಿಷ್ಠಪುತ್ರರಿಗೆ ಇದು ನ್ಯಾಯವೆ? ಶಿಷ್ಯನೂ ವಿನೀತನೂ ಆದ ನಿನ್ನನ್ನೇ ಈ ರೀತಿ ಶಪಿಸಬಹುದೆ?

೩೧. ಎಲೈ ರಾಜಶಾರ್ದೂಲನೆ, ನಾವೆಲ್ಲರೂ ನಮ್ಮ ಮನೆಮಠಗಳನ್ನು ತೊರೆದು ಯಾವ ಶಂಕೆಯೂ ಇಲ್ಲದೆ ನಿನ್ನೊಡನೆಯೇ ಅಂತ್ಯಜರಾಗಿ ನಿನ್ನನ್ನೇ ಅನುಸರಿಸಿ ಬರುವೆವು."

೩೨. ತ್ರಿಶಂಕುವು ಹೇಳುತ್ತಾನೆ:—"ಎಲೈ ಸಚಿವರೆ, ನಿಮಗೆ ನನ್ನಲ್ಲಿ ಅನನ್ಯವಾದ ಭಕ್ತಿಯಿರುವುದೇ ಆದರೆ, ಪ್ರಕೃತದಲ್ಲಿ ನನ್ನ ಮಗನಿಗೆ ಮಂತ್ರಿತ್ವವನ್ನು ಮಾಡಿಕೊಂಡಿರಿ.

ಹರಿಶ್ಚಂದ್ರಃ ಸುಪುತ್ರೋऽಯಂ ಮಮ ಜ್ಯೇಷ್ಠಃ ಸುವಲ್ಲಭಃ ।
ನಿಯೋಜಯಧ್ವಮವ್ಯಗ್ರಾಃ ಪದವ್ಯಾಂ ಮಮ ಸತ್ವರಂ ॥ ೩೩ ॥
ಅಹಂ ಪುನಃ ಕರಿಷ್ಯಾಮಿ ಯನ್ಮೇ ಮನಸಿ ಸಂಸ್ಥಿತಂ ।
ಮೃತ್ಯುಂ ವಾ ಸಂಪ್ರಯಾಸ್ಯಾಮಿ ಸದೇಹೋ ವಾ ಸುರಾಲಯಂ ॥ ೩೪ ॥
ಏವಮುಕ್ತ್ವಾ ಪರಿತ್ಯಜ್ಯ ಸರ್ವಾಂಸ್ತಾನ್ ಸ ಮಹೀಪತಿಃ ।
ಜಗಾಮಾರಣ್ಯಮಾಶ್ರಿತ್ಯ ಪದ್ಭ್ಯಾಮೇವ ಶನೈಃ ಶನೈಃ ॥ ೩೫ ॥
ತೇಽಪಿ ಸನ್ಮಂತ್ರಿಣಸ್ತೂರ್ಣಂ ಪುತ್ರಂ ತಸ್ಯ ಸುಸಂಮತಂ ।
ರಾಜ್ಯೇ ನಿಯೋಜಯಾಮಾಸುರ್ನಾದಪಾದಿತ್ರನಿಃಸ್ವನೈಃ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತ್ರಿಶಂಕೂಪಾಖ್ಯಾನೇ—ಹರಿಶ್ಚಂದ್ರರಾಜ್ಯೋಪಲಂಭನವರ್ಣನಂ"
ನಾಮ ತೃತೀಯೋಽಧ್ಯಾಯಃ

---

೩೩. ಈ ಹರಿಶ್ಚಂದ್ರನು ನನ್ನ ಸುಪುತ್ರನು. ಇವನು ಜ್ಯೇಷ್ಠನೂ, ನನಗೆ ಅತ್ಯಂತ ಪ್ರಿಯತಮನೂ ಆಗಿದ್ದಾನೆ. ಇವನನ್ನು ಯಾವ ಸಂಶಯವೂ ಇಲ್ಲದೆ ಜಾಗ್ರತೆಯಾಗಿ ನನ್ನ ಪದವಿಯಲ್ಲಿ ನಿಯೋಜಿಸಿರಿ.

೩೪. ನಾನಾದರೊ ನನ್ನ ಮನಸ್ಸಿನಲ್ಲಿರುವ ಕಾರ್ಯವನ್ನು ಸಾಧಿಸುತ್ತೇನೆ. ಅಥವಾ ಮೃತ್ಯುವನ್ನಾದರೂ ಪಡೆಯುತ್ತೇನೆ. ಹಾಗಿಲ್ಲದಿದ್ದರೆ ಸದೇಹನಾಗಿಯೆ ಸುರಾಲಯವನ್ನಾದರೂ ಸೇರುತ್ತೇನೆ."

೩೫. ಎಲೈ ಋಷಿಗಳಿರಾ, ಆ ಮಹೀಪತಿಯು ಈ ಪ್ರಕಾರವಾಗಿ ನುಡಿದ ತರುವಾಯ ಅವರೆಲ್ಲರನ್ನೂ ತೊರೆದು ಮೆಲ್ಲಮೆಲ್ಲನೆ ಕಾಲ್ನಡೆಯಲ್ಲಿಯೇ ಅರಣ್ಯವನ್ನು ಸೇರಿದನು.

೩೬. ಇತ್ತ ಮಂತ್ರಿಗಳಾದರೊ ಜಾಗ್ರತೆಯಾಗಿಯೆ ಆ ತ್ರಿಶಂಕುವಿಗೆ ಬಹು ಸಮ್ಮತನಾದ ಅವನ ಮಗ ಹರಿಶ್ಚಂದ್ರನನ್ನು ಮಂಗಳವಾದ್ಯಗಳು ಘೋರ್ಗರೆಯುತ್ತಿರಲು ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯಾಭಿಷೇಕವನ್ನು ಮಾಡಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತ್ರಿಶಂಕೂಪಾಖ್ಯಾನ—ಹರಿಶ್ಚಂದ್ರರಾಜ್ಯೋಪಲಂಭನವರ್ಣನ" ವೆಂಬ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ತ್ರಿಶಂಕೂಪಾಖ್ಯಾನೇ – ವಿಶ್ವಾಮಿತ್ರಕೃತ ತ್ರಿಶಂಕುಯಾಜನೋಪಕ್ರಮವರ್ಣನಂ

ಸೂತ ಉವಾಚ :—

ತ್ರಿಶಂಕುರಿತಿ ಸಂಚಿಂತ್ಯ ವಿಶ್ವಾಮಿತ್ರಂ ಮಹಾಮುನಿಂ ।
ಮನಸಾ ಸುಚಿರಂ ಕಾಲಂ ತತಶ್ಚಕ್ರೇ ವಿನಿಶ್ಚಯಂ ॥ ೧ ॥
ವಿಶ್ವಾಮಿತ್ರಂ ಪರಿತ್ಯಜ್ಯ ನಾಽನ್ಯೋಽಸ್ತಿ ಭುವನತ್ರಯೇ ।
ಯಃ ಕುರ್ಯಾನ್ಮೇ ಪರಿತ್ರಾಣಂ ದುಃಖಾದಸ್ಮಾತ್ಸುದಾರುಣಾತ್ ॥ ೨ ॥
ಕುರುಕ್ಷೇತ್ರಂ ಸಮುದ್ದಿಶ್ಯ ಪ್ರತಸ್ಥೇ ಸತತಃ ಪರಂ ।
ಸುಶ್ರಾಂತಃ ಕ್ಷುತ್ಪಿಪಾಸಾರ್ತೋ ಮಾರ್ಗಪೃಚ್ಛಾಪರಾಯಣಃ ॥ ೩ ॥
ತತಃ ಕಾಲೇನ ಸಂಪ್ರಾಪ್ಯ ಕುರುಕ್ಷೇತ್ರಂ ಸ ಪಾರ್ಥಿವಃ ।
ಯತ್ನೇನಾನ್ವೇಷಯಾಮಾಸ ವಿಶ್ವಾಮಿತ್ರಾಶ್ರಮಂ ತತಃ ॥ ೪ ॥

---

## ಕನ್ನಡದ ಅನುವಾದ

### ತ್ರಿಶಂಕೂಪಾಖ್ಯಾನ – ವಿಶ್ವಾಮಿತ್ರಕೃತ ತ್ರಿಶಂಕುಯಾಜನೋಪಕ್ರಮ ವರ್ಣನೆ

೧. ಸೂತನು ಹೇಳುತ್ತಾನೆ :—ಎಲೈ ತಪೋಧನರೆ, ಅರಣ್ಯವನ್ನು ಸೇರಿದ ಮೇಲೆ ಆ ತ್ರಿಶಂಕುವು ಮನಸ್ಸಿನಲ್ಲಿಯೆ ವಿಶ್ವಾಮಿತ್ರ ಮಹಾಮುನಿಯನ್ನು ಬಹಳ ಕಾಲ ಸ್ಮರಿಸುತ್ತಿದ್ದು ಈ ರೀತಿ ನಿಶ್ಚಯಿಸಿದನು.

೨. "ಮಹಾ ಭಯಂಕರವಾದ ಈ ದುಃಖದಲ್ಲಿ ಮುಳುಗಿರುವ ನನ್ನನ್ನು ಸಂರಕ್ಷಿಸುವವನು ವಿಶ್ವಾಮಿತ್ರಮುನಿಯನ್ನುಳಿದು ಜಗತ್ತ್ರಯದಲ್ಲಿ ಮತ್ತಾವನೂ ಇರುವುದಿಲ್ಲ."

೩. ಇಂತು ನಿಶ್ಚಯಿಸಿದ ತರುವಾಯ ಆ ಭೂಪತಿಯು ಕುರುಕ್ಷೇತ್ರವನ್ನು ಕುರಿತು ಹೊರಟನು. ಅವನು ಹಸಿವು ಬಾಯಾರಿಕೆಗಳಿಂದ ಬಹುವಾಗಿ ಬಳಲಿ ಬೇಸತ್ತು ಕುರುಕ್ಷೇತ್ರಕ್ಕೆ ದಾರಿಯನ್ನು ಅಲ್ಲಲ್ಲಿಯ ಜನಗಳನ್ನು ಕೇಳುತ್ತ ಮುಂದು ವರಿದನು.

೪. ಬಹಳ ಕಾಲದಮೇಲೆ ಆ ಪಾರ್ಥಿವನು ಕುರುಕ್ಷೇತ್ರವನ್ನು ಸೇರಿ ಬಹು ಕಷ್ಟಪಟ್ಟು ವಿಶ್ವಾಮಿತ್ರಮಹರ್ಷಿಯ ಆಶ್ರಮವನ್ನು ಹುಡುಕತೊಡಗಿದನು.

ಏವಂ ಚಾಽನ್ವೇಷಮಾಣೇನ ತೇನ ಭೂಮಿಭೃತಾ ತದಾ ।
ಸುದೂರಾದೇವ ಸಂದೃಷ್ಟಂ ನೀಲದ್ರುಮಕದಂಬಕಂ ॥ ೫ ॥
ಉಪರಿಷ್ಟಾದ್ಬಕೈರ್ಹಂಸೈರ್ಭ್ರಮಮಾಣೈಃ ಸಮಂತತಃ ।
ಅಟದ್ಭಿರ್ಗೃಧ್ರಭಿಶ್ಚೈವ ಸಮಂತಾಜ್ಜಲಪಕ್ಷಿಭಿಃ ॥ ೬ ॥
ಸ ಮತ್ವಾ ಸಲಿಲಂ ತತ್ರ ಪಿಪಾಸಾರ್ತೋ ಮಹೀಪತಿಃ ।
ಪ್ರತಸ್ಥೇ ಸತ್ವರೋ ಹೃಷ್ಟೋ ಜಲವಾತಹೃತಕ್ಲಮಃ ॥ ೭ ॥
ಅಥಾಽಪಶ್ಯನ್ಮನೋಹಾರಿ ಸೌಮ್ಯಸತ್ವನಿಷೇವಿತಂ ।
ಆಶ್ರಮಂ ನದೀತೀರಸ್ಥಂ ಮನಃಶೋಕವಿನಾಶನಂ ॥ ೮ ॥
ಪುಷ್ಪಿತೈಃ ಫಲಿತೈರ್ವೃಕ್ಷೈಃ ಸಮಂತಾತ್ಪರಿವಾರಿತಂ ।
ವಿವಿಧೈರ್ಮಧುರಾರಾವೈರ್ನಾದಿತಂ ವಿಹಗೋತ್ತಮೈಃ ॥ ೯ ॥
ಕ್ರೀಡಂತಿ ನಕುಲಾಃ ಸರ್ಪೈರುಲೂಕಾ ಯತ್ರ ವಾಯಸೈಃ ।
ಮೂಷಕೈರ್ವೃಷದಂಶಾಶ್ಚ ದ್ವೀಪಿನೋ ವಿವಿಧೈರ್ಮೃಗೈಃ ॥ ೧೦ ॥

---

೫. ಈ ರೀತಿ ಆಶ್ರಮವನ್ನು ಅನ್ವೇಷಿಸುತ್ತ ಆ ದೊರೆಯು ಒಂದಾನೊಂದೆಡೆ ಯಲ್ಲಿ ದಟ್ಟವಾದ ಕಪ್ಪನೆಯ ನೆರಳೊಡಗೂಡಿದ್ದ ಮರಗಳ ಗುಂಪೊಂದನ್ನು ಬಹು ದೂರದಿಂದಲೆ ಕಂಡನು.

೬. ಆ ಮರಗಳ ಮೇಲೆ ಬಕಪಕ್ಷಿಗಳು, ಹಂಸಗಳು, ಸುತ್ತ ಹಾರು ತ್ತಿದ್ದುವು. ಗೃಧ್ರಗಳೂ ಇತರ ಜಲಪಕ್ಷಿಗಳೂ ಅಲ್ಲಿ ಹಾರಾಡುತ್ತಿದ್ದುವು.

೭. ಬಾಯಾರಿದ್ದ ಆ ಭೂಪತಿಯು ಇದನ್ನು ಕಂಡು ಅಲ್ಲಿ ನೀರಿರಬಹು ದೆಂದು ಎಣಿಸಿ ತ್ವರೆಯಿಂದ ಅಲ್ಲಿಗೆ ಹೋಗಿ ನೀರು ಗಾಳಿಯಿಂದ ತನ್ನ ಆಯಾಸ ವೆಲ್ಲವೂ ಕಳೆಯಲು ಸಂತುಷ್ಟಾಂತರಂಗನಾದನು.

೮. ಬಳಿಕ ಆ ನದೀತೀರದಲ್ಲಿಯೆ ಸಾಧು ಪ್ರಾಣಿಗಳಿಂದ ಸಂಸೇವಿತವಾಗಿ, ಮನಸ್ಸಿನ ಶೋಕವೆಲ್ಲವನ್ನೂ ನೀಗಿಸುವುದಾಗಿ, ಬಹು ಸುಂದರವಾಗಿ ವಿರಾಜಿಸು ತ್ತಿದ್ದ ಆಶ್ರಮವನ್ನು ಕಂಡನು.

೯. ಆ ಆಶ್ರಮವಾದರೊ ಹೂ ಹಣ್ಣುಗಳ ಸಿರಿಯಿಂದ ಕಂಗೊಳಿಸುತ್ತಿರುವ ಗಿಡಮರಗಳಿಂದ ಸುತ್ತುವರಿದು, ಮಧುರ ಮಧುರವಾಗಿ ನಿನದಿಸುತ್ತಿದ್ದ ವಿವಿಧ ವಿಹಂಗಮಗಳಿಂದ ವಿರಾಜಿಸುತ್ತಿದ್ದಿತು.

೧೦. ನಕುಲಗಳೊಡನೆ ಸರ್ಪಗಳೂ ಗೂಬೆಗಳೊಡನೆ ಕಾಗೆಗಳೂ ಬೆಕ್ಕುಗಳೂ ಹುಲಿಗಳೊಡನೆ ಜಾತಿ ಜಾತಿಯ ಜಿಂಕೆಗಳೂ ಚೆಲ್ಲಾಟವಾಡು ತ್ತಿದ್ದುವು.

ಅಥಾಽಪಶ್ಯನ್ನದೀತೀರೇ ಸತಪಸ್ವಿಗಣಾವೃತಂ ।
ಸ್ವಾಧ್ಯಾಯನಿರತಂ ದಾಂತಂ ವಿಶ್ವಾಮಿತ್ರಂ ತಪೋನಿಧಿಂ ॥ ೧೧ ॥
ತೇಜಸಾ ತಪಸಾಽತೀವ ದೀಪ್ಯಮಾನಮಿವಾಽನಲಂ ।
ಚೀರವಲ್ಕಲಸಂವೀತಂ ಶಾಲವೃಕ್ಷಂ ಸಮಾಶ್ರಿತಂ ॥ ೧೨ ॥
ಅಥ ಗತ್ವಾ ಸ ರಾಜೇಂದ್ರೋ ದೂರಸ್ಥೋಽಪಿ ಪ್ರಣಮ್ಯ ತಂ ।
ಅಷ್ಟಾಂಗೇನ ಪ್ರಣಾಮೇನ ಸ್ವನಾಮ ಪರಿಕೀರ್ತಯನ್ ॥ ೧೩ ॥
ತಥಾಽನ್ಯಾನಪಿ ತಚ್ಛಿಷ್ಯಾನ್ಕೃತಾಂಜಲಿಪುಟಃ ಸ್ಥಿತಃ ।
ಯಥಾಕ್ರಮಂ ಯಥಾ ಜ್ಯೇಷ್ಠಂ ಶ್ರದ್ಧಯಾ ಪರಯಾ ಯುತಃ ॥ ೧೪ ॥
ಧೂಳಿಧೂಸರಿತಾಂಗಂ ತಂ ತೇತು ದೃಷ್ಟ್ವಾ ಮಹೀಪತಿಂ ।
ಚಂಡಾಲ ಇತಿ ಮನ್ವಾನಾಶ್ಚಿಹ್ನೈರ್ಗಾತ್ರ ಸಮುದ್ಭವೈಃ ॥ ೧೫ ॥
ಭರ್ತ್ಸಯಾಮಾಸುರೇವಾಽಥ ವಚನೈಃ ಪರುಷಾಕ್ಷರೈಃ ।
ಧಿಕ್ಛಬ್ದೈಶ್ಚ ತಥೈವಾಽನ್ಯೇ ಯಾಹಿ ಯಾಹೀತಿ ಚಾಽಸಕೃತ್ ॥ ೧೬ ॥

---

೧೧. ಇವುಗಳನ್ನು ನೋಡಿ ಹೃಷ್ಟನಾಗಿ ಮುನ್ನಡೆದ ಆ ಮಹೀಪತಿಯು ನದೀತೀರದಲ್ಲಿ ತಾಪಸವೃಂದ ಪರಿವೃತನಾಗಿ ವೇದಾಧ್ಯಯನದಲ್ಲಿ ನಿರತನಾಗಿ ಕುಳಿತಿದ್ದ, ಅಂತರಿಂದ್ರಿಯನಿಗ್ರಹಸಂಪನ್ನನೂ, ಮಹಾ ತಪೋನಿಧಿಯೂ ಆದ ವಿಶ್ವಾಮಿತ್ರ ಮುನಿಪುಂಗವನನ್ನು ಕಂಡನು.

೧೨. ಆ ಮುನಿಯು ತಪೋಮಯವಾದ ತೇಜಸ್ಸಿನಿಂದ ಸಾಕ್ಷಾತ್ ಯಜ್ಞಪುರುಷನಂತೆ ಬೆಳಗುತ್ತ ನಾರುಡೆಯುಟ್ಟು ಶಾಲವೃಕ್ಷವೊಂದರಡಿಯಲ್ಲಿ ಸುಖಾಸೀನನಾಗಿದ್ದನು.

೧೩. ಆಗ ತ್ರಿಶಂಕುರಾಜೇಂದ್ರನು ದೂರದಿಂದಲೆ ಆ ಮಹಾಮುನಿಗೆ ಪ್ರಣಾಮವನ್ನು ಮಾಡಿ ಮತ್ತೆ ಸ್ವನಾಮೋಚ್ಚಾರಪೂರ್ವಕವಾಗಿ ಸಾಷ್ಟಾಂಗಪೂರ್ವಕವಾಗಿಯೂ ನಮಸ್ಕರಿಸಿದನು.

೧೪. ಅಂತೆಯೆ ಅವನು ಜ್ಯೇಷ್ಠಾನುಕ್ರಮದಿಂದ ಆ ವಿಶ್ವಾಮಿತ್ರಮುನಿಯ ಶಿಷ್ಯರಿಗೂ ಪರಮ ಶ್ರದ್ಧೆಯಿಂದ ನಮಸ್ಕಾರವನ್ನು ಮಾಡಿ ಕೃತಾಂಜಲಿಪುಟನಾಗಿ ನಿಂತನು.

೧೫–೧೬. ಧೂಳುಮುಚ್ಚಿ ಬೂದುಬೂದಾಗಿ ಕಾಣುತ್ತಿದ್ದ ಆ ಮಹೀಪತಿಯನ್ನು ಕಂಡು ಅಲ್ಲಿದ್ದ ಮುನಿಪುಂಗವರೆಲ್ಲರೂ ಅವನ ಶರೀರದ ಲಕ್ಷಣಗಳಿಂದಲೆ ಅವನು ಚಂಡಾಲನೆಂಬುದನ್ನು ಅರಿತು ಕಠಿನವಾದ ಮಾತುಗಳಿಂದ ಅವನನ್ನು ಗದರಿಸಿದರು. ಕೆಲವರು ಧಿಕ್ಕಾರ ಶಬ್ದಗಳಿಂದಲೂ ಇನ್ನು ಕೆಲವರು ಬಾರಿಬಾರಿಗೂ 'ಹೋಗು, ಹೊರಟುಹೋಗು' ಎಂದೂ ಅವನನ್ನು ತಿರಸ್ಕರಿಸಿದರು.

ಕಸ್ತ್ವಂ ಪಾಪೇಹ ಸಂಪ್ರಾಪ್ತೋ ಮುನೀನಾಮಾಶ್ರಮೋತ್ತಮೇ ।
ವೇದಧ್ವನಿಸಮಾಕೀರ್ಣೇ ಸಾಧೂನಾಮಪಿ ದುರ್ಲಭೇ ॥ ೧೭ ॥
ತಸ್ಮಾದ್ಗಚ್ಛದ್ರುತಂ ಯಾವನ್ನಕಶ್ಚಿತ್ತಾಪಸಸ್ತವ ।
ದತ್ವಾ ಶಾಪಂ ಕರೋತ್ಯಾಶು ಪ್ರಾಣಾನಾಮಪಿ ಸಂಕ್ಷಯಂ ॥ ೧೮ ॥

ತ್ರಿಶಂಕುರುವಾಚ :—

ತ್ರಿಶಂಕುರ್ನಾಮ ಭೂಪೋಽಹಂ ಸೂರ್ಯವಂಶಸಮುದ್ಭವಃ ।
ಶಪ್ತೋ ವಸಿಷ್ಠಪುತ್ರೈಶ್ಚ ಚಂಡಾಲತ್ವೇ ನಿಯೋಜಿತಃ ॥ ೧೯ ॥
ಸೋಽಹಂ ಶರಣಮಾಪನ್ನಃ ಶಾಪಮುಕ್ತ್ಯೈ ದ್ವಿಜೋತ್ತಮಾಃ ।
ವಿಶ್ವಾಮಿತ್ರಂ ಜಗನ್ಮಿತ್ರಂ ನಾಽನ್ಯಾ ಮೇಽಸ್ತಿ ಗತಿಃ ಪರಾ ॥ ೨೦ ॥

ವಿಶ್ವಾಮಿತ್ರ ಉವಾಚ :—

ವಸಿಷ್ಠಸ್ಯ ಭವಾನ್ಯಾಜ್ಯಸ್ತತ್ಪುತ್ರಾಣಾಂ ವಿಶೇಷತಃ ।
ತತ್ಕಸ್ಮಾದೀದೃಶೇ ಪಾಪೇ ತೈಸ್ತ್ವಮದ್ಯ ನಿಯೋಜಿತಃ ॥ ೨೧ ॥
ಕೋಽಪರಾಧಸ್ತ್ವಯಾ ತೇಷಾಂ ಕೃತಃ ಪಾರ್ಥಿವಸತ್ತಮ ।
ಪ್ರಾಣದ್ರೋಹಃ ಕೃತಃ ಕಿಂ ವಾ ದಾರಧರ್ಷಣ ಸಂಭವಃ ॥ ೨೨ ॥

---

೧೭–೧೮. ಕೆಲವರು "ಎಲಾ ಪಾಪಿಷ್ಠನೆ, ಯಾರು ನೀನು? ವೇದಧ್ವನಿಯಿಂದ ತುಂಬಿದುದಾಗಿ, ಸತ್ಪುರುಷರಿಗೂ ದುರ್ಲಭವಾಗಿರುವ ಈ ಉತ್ತಮ ಋಷ್ಯಾಶ್ರಮಕ್ಕೆ ಏಕಾದರೂ ಬಂದೆ? ಹೊರಟುಹೋಗು. ಜಾಗ್ರತೆಯಾಗಿ ಹೊರಟುಹೋಗು. ಈ ತಪಸ್ವಿಗಳಲ್ಲಿ ಯಾರಾದರೂ ನಿನಗೆ ಶಾಪವನ್ನು ಕೊಟ್ಟು ನಿನ್ನ ಪ್ರಾಣಗಳಿಗೂ ಸಂಚಕಾರವನ್ನು ತಂದಾರು, ಹೊರಡು" ಎಂದು ಹೇಳಿದರು.

೧೯. ತ್ರಿಶಂಕುವು ಹೇಳುತ್ತಾನೆ:—ಎಲೈ ದ್ವಿಜೋತ್ತಮರೆ, ನಾನು ತ್ರಿಶಂಕು ಮಹಾರಾಜನು. ಸೂರ್ಯವಂಶದಲ್ಲಿ ಹುಟ್ಟಿದವನು. ವಸಿಷ್ಠಪುತ್ರರು ನನ್ನನ್ನು ಶಪಿಸಲು ನಾನು ಚಂಡಾಲತ್ವವನ್ನು ಹೊಂದಿದೆನು.

೨೦. ಇಂದು ನಾನು ಶಾಪಮೋಕ್ಷಕ್ಕಾಗಿ ಜಗನ್ಮಿತ್ರನಾದ ವಿಶ್ವಾಮಿತ್ರನಲ್ಲಿಗೆ ಶರಣುಬಂದಿದ್ದೇನೆ. ನನಗೆ ಈತನಿಗಿಂತಲೂ ಶ್ರೇಷ್ಠವಾದ ಬೇರಾವ ಗತಿಯೂ ಇರುವುದಿಲ್ಲ.

೨೧. ವಿಶ್ವಾಮಿತ್ರನು ಹೇಳುತ್ತಾನೆ:—ಅಯ್ಯಾ ನೀನು ವಸಿಷ್ಠನಿಗೂ ಅವನ ಮಕ್ಕಳಿಗೂ ಶಿಷ್ಯನು, ಯಾಜ್ಯನಾದವನು. ಹೀಗಿರುವಲ್ಲಿ ಅವರು ನಿನ್ನನ್ನು ಯಾವ ಕಾರಣಕ್ಕಾಗಿ ಈ ಪಾಪಕ್ಕೊಳಗಾಗಿಸಿದರು?

೨೨. ಎಲೈ ಪಾರ್ಥಿವಶ್ರೇಷ್ಠನೆ, ಅವರಿಗೆ ನೀನು ಮಾಡಿದ ಅಪರಾಧವಾದರೂ ಏನು? ಅವರ ಪ್ರಾಣಗಳಿಗೇನಾದರೂ ದ್ರೋಹವನ್ನೆಸಗಿದೆಯಾ? ಅಥವಾ ಅವರ ಹೆಂಡಿರುಗಳನ್ನೇನಾದರೂ ಕೆಡಿಸಿದೆಯೊ?

ತ್ರಿಶಂಕುರುವಾಚ :—
ಅನೇನೈವ ಶರೀರೇಣ ಸ್ವರ್ಗಾಯ ಗಮನಂ ಪ್ರತಿ ।
ಮಯಾ ಸಂಪ್ರಾರ್ಥಿತೋ ಯಜ್ಞೋ ವಸಿಷ್ಠಾನ್ಮುನಿಸತ್ತಮಾತ್ ॥ ೨೩ ॥
ತೇನೋಕ್ತಂ ನ ಸ ಯಜ್ಞೋಽಸ್ತಿ ಯೇನ ಸ್ವರ್ಗೇ ಪ್ರಗಮ್ಯತೇ ।
ಅನೇನೈವ ಶರೀರೇಣ ಮುಕ್ತ್ವಾ ದೇಹಾಂತರಂ ನೃಪ ॥ ೨೪ ॥
ತಚ್ಛ್ರುತ್ವಾ ಸಮಯಾ ಪ್ರೋಕ್ತೋ ಯದಿ ಮಾಂ ನ ಸಯಿಷ್ಯತಿ ।
ಸ್ವರ್ಗಂ ಚಾಽನೇನ ಕಾಯೇನ ಸದ್ಯೋ ಯಜ್ಞಪ್ರಭಾವತಃ ॥ ೨೫ ॥
ತದನ್ಯಂ ಗುರುಮೇವಾಽದ್ಯ ಕರ್ತಾಽಹಂ ನಾಽಸ್ತಿ ಸಂಶಯಃ ।
ಏತಜ್ಜ್ಞಾತ್ವಾ ಮುನಿಃ ಪ್ರಾಹ ಯತ್ಕ್ಷೇಮಂ ತತ್ಸಮಾಚರ ॥ ೨೬ ॥
ತತೋಽಹಂ ತೇನ ಸಂತ್ಯಕ್ತಸ್ತತ್ಪುತ್ರಾನ್ಪ್ರಾಪ್ಯ ನಿಷ್ಠುರಾನ್ ।
ಪ್ರೋಕ್ತವಾನಥ ತತ್ಸರ್ವಂ ಯದ್ವಸಿಷ್ಠಸ್ಯ ಕೀರ್ತಿತಂ ॥ ೨೭ ॥
ತತಸ್ತೈಃ ಶೋಕಸಂತಪ್ತೈಃ ಶಪ್ತೋಽಸ್ಮಿ ಮುನಿಸತ್ತಮ ।
ನೀತಶ್ಚೇಮಾಂ ದಶಾಂ ಪಾಪಾಂ ಚಂಡಾಲತ್ವೇ ನಿಯೋಜಿತಃ ॥ ೨೮ ॥
ಸೋಽಹಂ ತ್ವಾಂ ಮನಸಾ ಧ್ಯಾತ್ವಾ ಸುದೂರಾದಿಹ ಸಂಗತಃ ।
ಆಶಾಂ ಗರೀಯಸೀಂ ಕೃತ್ವಾ ಕುರುಕ್ಷೇತ್ರೇ ಮುನೀಶ್ವರ ॥ ೨೯ ॥

---

೨೩–೨೪. ತ್ರಿಶಂಕುವು ಹೇಳುತ್ತಾನೆ:—ಎಲೈ ಮಹರ್ಷಿಯೆ, ನಾನು ಇದೇ ಶರೀರದಿಂದಲೆ ಸ್ವರ್ಗಕ್ಕೆ ಹೋಗುವಂತಹ ಯಾಗಕ್ಕೋಸ್ಕರವಾಗಿ ಮುನಿಶ್ರೇಷ್ಠನಾದ ಆ ವಸಿಷ್ಠನನ್ನು ಪ್ರಾರ್ಥಿಸಿದೆನು. ಅದಕ್ಕೆ ಆತನು, "ಅಯ್ಯಾ ಮಹಾರಾಜನೆ, ದೇಹಾಂತರದಿಂದಲ್ಲದೆ ಈ ದೇಹದಿಂದಲೆ ಸ್ವರ್ಗವನ್ನು ದೊರಕಿಸುವ ಅಂತಹ ಯಜ್ಞವಾವುದೂ ಇರುವುದಿಲ್ಲ" ಎಂದು ಹೇಳಿದನು.

೨೫–೨೬. ಅದನ್ನು ಕೇಳಿ "ನಾನು ಯಜ್ಞಪ್ರಭಾವದಿಂದ ಈ ಶರೀರ ದಿಂದಲೆ ಸ್ವರ್ಗಕ್ಕೆ ಹೋಗುವಂತೆ ಮಾಡಲು ನಿಮ್ಮಿಂದ ಸಾಧ್ಯವಾಗದಿದ್ದರೆ ನಾನು ಬೇರೊಬ್ಬನನ್ನು ಗುರುವಾಗಿ ಮಾಡಿಕೊಳ್ಳಲುಳ್ಳವನು. ಇವರಲ್ಲಿ ಸಂಶಯ ವಿಲ್ಲ" ಎಂದೆನು. ಇದನ್ನು ಕೇಳಿ ಆ ವಸಿಷ್ಠಮುನಿಯು, "ಮಹಾರಾಜ, ನಿನಗೆ ಹೇಗೆ ಕ್ಷೇಮವುಂಟಾಗುವುದೊ ಹಾಗೆ ಮಾಡುವವನಾಗು" ಎಂದು ಹೇಳಿದನು.

೨೭–೨೮. ಎಲೈ ಮುನಿಯೆ, ತರುವಾಯ ನಾನು ಆತನಿಂದ ಬೀಳ್ಕೊಂಡು ನಿಷ್ಠುರರಾದ ಆತನ ಮಕ್ಕಳಲ್ಲಿಗೆ ಬಂದು ಆ ಮುನಿಯು ಹೇಳಿದುದೆಲ್ಲವನ್ನೂ ಅವರಿಗೆ ತಿಳಿಸಿದೆನು. ಅವರಾದರೊ ಕೇವಲ ಶೋಕಸಂತಪ್ತರಾಗಿ ನನ್ನನ್ನು ಶಪಿಸಿ, ಈ ಚಂಡಾಲದಶೆಗೂ ತಂದರು.

೨೯. ಆ ನಾನು ಮನಸ್ಸಿನಲ್ಲಿ ನಿನ್ನನ್ನೇ ಧ್ಯಾನಿಸಿ ಬಹುದೂರದಿಂದ ಇಲ್ಲಿಗೆ ಬಂದೆನು. ಎಲೈ ಮುನೀಶ್ವರನೆ, ನಾನು ಬಹುದೊಡ್ಡದಾದ ಆಶೆಯನ್ನಿಟ್ಟು ಕೊಂಡು ಈ ಕುರುಕ್ಷೇತ್ರಕ್ಕೈತಂದಿರುವೆನು.

ನಾಽಸಾಧ್ಯಂ ವಿದ್ಯತೇ ಕಿಂಚಿತ್ರಿಷುಲೋಕೇಷು ತೇ ಮುನೇ ।
ತಸ್ಮಾತ್ಕುರುಪ್ರತೀಕಾರಂ ದುಃಖಿತಸ್ಯ ಮಮಾಽಧುನಾ ॥ ೩೦ ॥
ಸೂತ ಉವಾಚ :—
ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋ ಮುನೀಶ್ವರಃ ।
ವಸಿಷ್ಠಸ್ಪರ್ಧಯೋವಾಚ ಮುನಿಮಧ್ಯೇ ವ್ಯವಸ್ಥಿತಃ ॥ ೩೧ ॥
ಅಹಂ ತ್ವಾಂ ಯಾಜಯಿಷ್ಯಾಮಿ ತೇನ ಯಜ್ಞೇನ ಪಾರ್ಥಿವ ।
ಗಚ್ಛಸಿ ತ್ರಿದಿವಂ ಯೇನ ಇಷ್ಟಮಾತ್ರೇಣ ತತ್ಕ್ಷಣಾತ್ ॥ ೩೨ ॥
ತ್ವಮೇವಂ ವಿಹಿತೋ ಭೂಪ ವಾಸಿಷ್ಠೈರಂತ್ಯಜಸ್ತ್ವತೈಃ ।
ಮಯಾ ಭೂಯೋಽಪಿ ಭೂಪಾಲಃ ಕರ್ತವ್ಯೋ ನಾಽತ್ರ ಸಂಶಯಃ ॥ ೩೩ ॥
ತಸ್ಮಾದಾಗಚ್ಛ ಭೂಪಾಲ ತೀರ್ಥಯಾತ್ರಾಂ ಮಯಾ ಸಹ ।
ಕುರು ತೀರ್ಥಪ್ರಭಾವೇಣ ಯೇನ ತ್ವಂ ಸ್ಯಾಃ ಶುಚಿಃ ಪುನಃ ॥ ೩೪ ॥
ತಥಾ ಯಜ್ಞಕ್ರಿಯಾರ್ಹಶ್ಚ ಚಂಡಾಲತ್ವವಿವರ್ಜಿತಃ ।
ನಾಽಸ್ತಿ ತತ್ಪಾತಕಂ ಯಚ್ಚ ತೀರ್ಥಸ್ನಾನಾನ್ನ ನಶ್ಯತಿ ॥ ೩೫ ॥

---

೩೦. ಎಲೈ ಮುನಿಯೆ, ಮೂರು ಲೋಕಗಳಲ್ಲಿಯೂ ನಿನಗೆ ಅಸಾಧ್ಯವಾದದ್ದು ಏನೂ ಇರುವುದಿಲ್ಲ. ಆದುದರಿಂದ ದುಃಖಿತನಾಗಿರುವ ನನಗೆ ಈಗ ಅಭಯವನ್ನಿತ್ತು ಈ ಶಾಪಕ್ಕೆ ಪ್ರತೀಕಾರವನ್ನು ಮಾಡುವವನಾಗು.

೩೧. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಮುನೀಶ್ವರನಾದ ಆ ವಿಶ್ವಾಮಿತ್ರನು ತ್ರಿಶಂಕುವಿನ ಆ ಮಾತುಗಳನ್ನು ಕೇಳಿ ವಸಿಷ್ಠನ ಮೇಲಣ ಸ್ಪರ್ಧೆಯಿಂದ ಆ ಮುನಿಮಂಡಲದ ಮಧ್ಯದಲ್ಲಿ ಕುಳಿತೇ ಹೀಗೆ ಹೇಳಿದನು.

೩೨. "ಓ ಪಾರ್ಥಿವ, ನಾನು ನಿನ್ನಿಂದ ಅಂಥ ಸ್ವರ್ಗಪ್ರಾಪಕವಾದ ಯಾಗವನ್ನು ಮಾಡಿಸುತ್ತೇನೆ. ಅದರ ಪ್ರಭಾವದಿಂದ ಇಷ್ಟ ಬಂದ ಕ್ಷಣದಲ್ಲಿಯೆ ಸ್ವರ್ಗಕ್ಕೆ ಹೋಗಲು ನೀನು ಸಮರ್ಥನಾಗುವೆ.

೩೩. ವಸಿಷ್ಠ ಪುತ್ರರು ನಿನ್ನನ್ನು ಚಂಡಾಲನನ್ನಾಗಿಸಿದರಷ್ಟೆ. ನಾನು ನಿನ್ನ ಈ ಚಂಡಾಲತ್ವವು ಕಳೆದುಹೋಗುವಂತೆ ಮಾಡಿ ಮತ್ತೆ ನಿನ್ನನ್ನು ಭೂಪಾಲನನ್ನಾಗಿಯೆ ಮಾಡಬೇಕು.

೩೪. ಆದುದರಿಂದ ನನ್ನೊಡನೆ ಬಾ. ನನ್ನೊಡನೆಯೆ ತೀರ್ಥಯಾತ್ರೆಗಳನ್ನು ಮಾಡು. ಆ ತೀರ್ಥಪ್ರಭಾವದಿಂದ ನೀನು ಮತ್ತೆ ಪರಿಶುದ್ಧನಾಗುವೆ.

೩೫. ಅಲ್ಲದೆ, ಚಂಡಾಲತ್ವವನ್ನು ಕಳೆದುಕೊಂಡು ಯಜ್ಞಮಾಡಲು ಅರ್ಹತೆಯುನ್ನು ಪಡೆಯುವೆ. ದೊರೆಯೆ, ತೀರ್ಥಸ್ನಾನಗಳಿಂದ ಕಳೆದುಹೋಗದಿರುವ ಪಾತಕಗಳೆಂಬುದೇ ಇರುವುದಿಲ್ಲ."

ಸೂತ ಉವಾಚ :—

ಏವಂ ಸ ನಿಶ್ಚಯಂ ಕೃತ್ವಾ ಗಾಧಿಪುತ್ರೋ ಮುನೀಶ್ವರಃ ।
ತ್ರಿಶಂಕುಂ ಪೃಷ್ಠತಃ ಕೃತ್ವಾ ತೀರ್ಥಯಾತ್ರಾಮಥಾವ್ರಜತ್ ॥ ೩೬ ॥
ಕುರುಕ್ಷೇತ್ರೇ ಸರಸ್ವತ್ಯಾಂ ಪ್ರಭಾಸೇ ಕುರುಜಾಂಗಲೇ ।
ಪೃಥೂದಕೇ ಗಯಾಶೀರ್ಷೇ ನೈಮಿಷೇ ಪುಷ್ಕರತ್ರಯೇ ॥ ೩೭ ॥
ವಾರಾಣಸ್ಯಾಂ ಪ್ರಯಾಗೇ ಚ ಕೇದಾರೇ ಶ್ರವಣೇ ಸದೇ ।
ಚಿತ್ರಕೂಟೇ ಚ ಗೋಕರ್ಣೇ ಶಾಲಿಗ್ರಾಮೇಽಚಲೇಶ್ವರೇ ॥ ೩೮ ॥
ಶುಕ್ಲತೀರ್ಥೇ ಸುರಾಜ್ಯಾಖ್ಯೇ ದೃಷದ್ವತಿನದೇ ಶುಭೇ ।
ಅಥಾಽನ್ಯೇಷು ಸುಪುಣ್ಯೇಷು ತೀರ್ಥೇಷ್ವಾಯತನೇಷು ಚ ॥ ೩೯ ॥
ಏವಂ ತಸ್ಯ ನರೇಂದ್ರಸ್ಯ ಸಾರ್ಥಂ ತೇನ ಮಹಾತ್ಮನಾ ।
ಅತಿಕ್ರಾಂತೋ ಮಹಾನ್ಕಾಲೋ ಭ್ರಮಮಾಣಸ್ಯ ಭೂತಲೇ ॥ ೪೦ ॥
ಮುಚ್ಯತೇ ನ ಚ ಪಾಪೇನ ಚಂಡಾಲತ್ವೇನ ಸ ದ್ವಿಜಾಃ ।
ಏವಂ ವಿಧೇಷು ತೀರ್ಥೇಷು ಸ್ನಾತೋಽಪಿ ಚ ಪೃಥಕ್ ಪೃಥಕ್ ॥ ೪೧ ॥
ತತಃ ಕ್ರಮಾತ್ಸಮಾಯಾತಃ ಸೋಽರ್ಬುದಂ ಪರ್ವತಂ ಪ್ರತಿ ।
ತತ್ರಾರುಹ್ಯ ಸಮಾಲೋಕ್ಯ ಪಾಪಘ್ನಮಚಲೇಶ್ವರಂ ॥ ೪೨ ॥

---

೩೬. ಸೂತನು ಹೇಳುತ್ತಾನೆ:—ಮುನಿಶ್ರೇಷ್ಠನಾದ ಆ ಗಾಧಿಪುತ್ರನು ಈ ರೀತಿ ನಿಶ್ಚಯಿಸಿ ತ್ರಿಶಂಕುವನ್ನು ಹಿಂದಿಟ್ಟುಕೊಂಡು ತೀರ್ಥಯಾತ್ರೆಗಳಿಗೆ ಹೊರಟನು.

೩೭—೩೯. ಕುರುಕ್ಷೇತ್ರ, ಸರಸ್ವತಿ, ಪ್ರಭಾಸ, ಕುರುಜಾಂಗಲ, ಪೃಥೂದಕ, ಗಯಾಶೀರ್ಷ, ನೈಮಿಷ, ಪುಷ್ಕರತ್ರಯ, ವಾರಾಣಸಿ, ಪ್ರಯಾಗ, ಕೇಧಾರ ಶ್ರವಣಸದ, ಚಿತ್ರಕೂಟ, ಗೋಕರ್ಣ, ಶಾಲಿಗ್ರಾಮ, ಅಚಲೇಶ್ವರ, ಶುಕ್ಲತೀರ್ಥ, ಸುರಾಜ್ಯ, ದೃಷದ್ವತೀನದಿ ಮುಂತಾದ ಪುಣ್ಯಕರವಾದ ತೀರ್ಥಕ್ಷೇತ್ರಗಳಲ್ಲಿಯೂ ಇತರ ಪುಣ್ಯಪ್ರದೇಶಗಳಲ್ಲಿಯೂ ಆ ಮುನಿಪುಂಗವನು ತ್ರಿಶಂಕುವಿನೊಡನೆ ಯಾತ್ರೆ ಮಾಡಿದನು.

೪೦—೪೧. ಹೀಗೆ ಆ ಮಹಾತ್ಮನು ಆ ನರೇಂದ್ರನೊಡನೆ ತೀರ್ಥಯಾತ್ರೆಗಳನ್ನು ಮಾಡುತ್ತ ಭೂಮಂಡಲದಲ್ಲಿ ಭ್ರಮಿಸುತ್ತಿರಲು ಬಹಳ ಕಾಲವು ಕಳೆದು ಹೋಯಿತು. ಎಲೈ ವಿಪ್ರರೆ, ಇಷ್ಟಾದರೂ ಇಷ್ಟೊಂದು ತೀರ್ಥಗಳಲ್ಲಿ ಬೇರೆ ಬೇರೆಯಾಗಿ ವಿಧ್ಯುಕ್ತ ಸ್ನಾನಗಳನ್ನಾಚರಿಸಿದರೂ ಆ ತ್ರಿಶಂಕುವು ವಿಪಾಪ್ಮನಾಗಿ ಪರಿಶುದ್ಧತೆಯನ್ನು ಪಡೆಯಲಿಲ್ಲ.

೪೨—೪೩. ತರುವಾಯ ವಿಶ್ವಾಮಿತ್ರಮುನಿಯು ಕ್ರಮವಾಗಿ ತೀರ್ಥಯಾತ್ರೆಯನ್ನು ಮಾಡುತ್ತಲೆ ಅರ್ಬುದ ಪರ್ವತವನ್ನು ಏರಿ, ಅಲ್ಲಿ ಪಾಪನಿವಾರಕ

ಯಾವದಾಯತನಾತ್ತಸ್ಮಾನ್ನಿರ್ಗಚ್ಛತಿ ಮುನೀಶ್ವರಃ ।
ತಾವತ್ತೇನೇಕ್ಷಿತೋ ನಾಮ ಮಾರ್ಕಂಡೋ ಮುನಿಸತ್ತಮಃ ॥ ೪೩ ॥
ಸೋಽಪಿ ದೃಷ್ಟ್ವಾ ಜಗನ್ಮಿತ್ರಂ ವಿಶ್ವಾಮಿತ್ರಂ ಮುನೀಶ್ವರಂ ।
ಪ್ರೋವಾಚಾಽಥ ಕುತಃ ಪ್ರಾಪ್ತಃ ಸಾಂಪ್ರತಂ ತ್ವಂ ಮುನೀಶ್ವರ ॥ ೪೪ ॥
ಕೋಽಯಂ ತವಾಽನುಗೋ ರೌದ್ರೋ ದೃಶ್ಯತೇ ಚಾಂತ್ಯಜಾಕೃತಿಃ ।
ಏತತ್ಸರ್ವಂ ಸಮಾಚಕ್ಷ್ವ ಪೃಚ್ಛತೋ ಮಮ ಸನ್ಮುನೇ ॥ ೪೫ ॥

ವಿಶ್ವಾಮಿತ್ರ ಉವಾಚ:—

ಏಷ ಪಾರ್ಥಿವ ಶಾರ್ದೂಲಸ್ತ್ರಿಶಂಕುರಿತಿ ವಿಶ್ರುತಃ ।
ವಸಿಷ್ಠಸ್ಯ ಸುತೈರ್ನೀತಶ್ಚಂಡಾಲತ್ವಂ ಪ್ರಕೋಪತಃ ॥ ೪೬ ॥
ಮಯಾ ಚಾಸ್ಯ ಪ್ರತಿಜ್ಞಾತಂ ಸಪ್ತದ್ವೀಪವತೀಂ ಮಹೀಂ ।
ಪ್ರಭ್ರಮಿಷ್ಯಾಮ್ಯಹಂ ಯಾವನ್ಮೇಧ್ಯತ್ವಂ ತ್ವಮುಪೇಷ್ಯಸಿ ॥ ೪೭ ॥
ಭ್ರಾಂತೋಽಹಂ ಭೂತಲೇ ಯಾನಿ ತೀರ್ಥಾನ್ಯಾಯತನಾನಿ ಚ ।
ನ ಚೈಷ ಮೇಧ್ಯತಾಂ ಪ್ರಾಪ್ತಃ ಪರಿಶ್ರಾಂತೋಽಸ್ಮಿ ಸಾಂಪ್ರತಂ ॥ ೪೮ ॥

---

ನಾದ ಅಚಲೇಶ್ವರನನ್ನು ಸಂದರ್ಶಿಸಿಕೊಂಡು ಹಿಂತಿರುಗುವಷ್ಟರಲ್ಲಿಯೆ ಮುನಿಸತ್ತಮನಾದ ಮಾರ್ಕಂಡನನ್ನು ಕಂಡನು.

೪೪–೪೫. ಆ ಮಾರ್ಕಂಡ ಮುನಿಯು ಜಗನ್ಮಿತ್ರನಾದ ವಿಶ್ವಾಮಿತ್ರನನ್ನು ಕಂಡು, "ಎಲೈ ಮುನೀಶ್ವರನೆ, ಈಗ ನೀನು ಎಲ್ಲಿಂದ ಬಂದೆ? ನಿನ್ನ ಹಿಂದೆ ಬರುತ್ತಿರುವ ಇವನಾರು? ಬಹು ಭಯಂಕರನೂ ಚಂಡಾಲಾಕೃತಿಯುಳ್ಳವನೂ ಆದ ಇವನ ವಿಚಾರವೇನು? ಇದೆಲ್ಲವನ್ನೂ ಕುರಿತು ಪ್ರಶ್ನಿಸುತ್ತಿರುವ ನನಗೆ ವಿಸ್ತಾರವಾಗಿ ಉತ್ತರವನ್ನು ಕೊಡುವವನಾಗು," ಎಂದನು.

೪೬. ವಿಶ್ವಾಮಿತ್ರನು ಹೇಳುತ್ತಾನೆ:—"ಎಲೈ ಮುನಿಯೆ, ತ್ರಿಶಂಕುವೆಂದು ಪ್ರಸಿದ್ಧನಾದ ರಾಜಶ್ರೇಷ್ಠನೇ ಇವನು. ಇವನನ್ನು ವಸಿಷ್ಠಮುನಿಯ ಪುತ್ರರು ಕೋಪಗೊಂಡು ಶಪಿಸಿ ಚಂಡಾಲನನ್ನಾಗಿಸಿದ್ದಾರೆ.

೪೭. 'ನೀನು ಪರಿಶುದ್ಧನಾಗುವವರೆಗೂ ನಿನ್ನೊಡನೆ ನಾನು ಸಪ್ತದ್ವೀಪಸಮನ್ವಿತವಾದ ಈ ಭೂಮಂಡಲದಲ್ಲೆಲ್ಲ ಸಂಚರಿಸುವೆನೆ'ಂದು ಪ್ರತಿಜ್ಞೆಮಾಡಿದ್ದೇನೆ.

೪೮. ಭೂಮಂಡಲದಲ್ಲಿರುವ ಸಮಸ್ತ ತೀರ್ಥಗಳನ್ನೂ, ದೇವಾಯತನಗಳನ್ನೂ ಸುತ್ತಿ ಬಂದುದಾಯಿತು. ಆದರೂ ಇವನು ಪರಿಶುದ್ಧನಾಗಲಿಲ್ಲ. ನಾನಾದರೊ ಈಗ ಬಹಳವಾಗಿ ಬಳಲಿದ್ದೇನೆ.

ತಸ್ಮಾತ್ಸರ್ವಾಂ ಮಹೀಂತ್ಯಕ್ತ್ವಾ ಲಜ್ಜಯಾ ಪರಯಾಯುತಃ ।
ದ್ವೀಪಾನ್ಮಹಾರ್ಣವಾಂಸ್ತ್ಯಕ್ತ್ವಾ ಸಂಪ್ರಯಾಸ್ಯಾಮ್ಯತಃ ಪರಂ ॥ ೪೯ ॥
ಮಾ ವಸಿಷ್ಠಸ್ಯ ಪುತ್ರಾಣಾಮುಪಹಾಸಪದಂ ಗತಃ ।
ಪ್ರತಿಜ್ಞಾರಹಿತೋ ವಿಪ್ರ ಸತ್ಯಮೇತದ್ಬ್ರವೀಮ್ಯಹಂ ॥ ೫೦ ॥

ಶ್ರೀ ಮಾರ್ಕಂಡೇಯ ಉವಾಚ :—

ಯದ್ಯೇವಂ ಮುನಿಶಾರ್ದೂಲ ಕುರುಷ್ವ ವಚನಂ ಮಮ ।
ಸಪ್ತದ್ವೀಪವತೀಂ ಪೃಥ್ವೀಂ ಮಾ ತ್ಯಕ್ತ್ವಾ ಕುತ್ರಚಿದ್ದ್ವಿಜ ॥ ೫೧ ॥
ಏತಸ್ಮಾತ್ಪರ್ವತಾತ್ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ಅಸ್ತಿ ನೈರ್ಋತದಿಗ್ಭಾಗೇ ದೇಶೇ ಚಾನರ್ತಸಂಜ್ಞಕೇ ॥ ೫೨ ॥
ತತ್ರಾದ್ಯಂ ಸ್ಥಾಪಿತಂ ಲಿಂಗಂ ಹಾಟಕೇನ ಸುರೋತ್ತಮೈಃ ।
ಯತ್ತತ್ಸಂಕೀರ್ತ್ಯತೇ ಲೋಕೇ ಪಾತಾಳೇ ಹಾಟಕೇಶ್ವರಂ ॥ ೫೩ ॥
ಪಾತಾಲಜಾಹ್ನವೀ ತೋಯಂ ಯತ್ರೈವಾಽಸ್ತಿ ದ್ವಿಜೋತ್ತಮ ।
ಉದ್ಧೃತೇ ಶಂಭುನಾ ಲಿಂಗೇ ವಿನಿಷ್ಕ್ರಾಂತಂ ರಸಾತಲಾತ್ ॥ ೫೪ ॥

---

೪೯. ಆದುದರಿಂದ ಕೇವಲ ಲಜ್ಜೆಗೊಂಡು ಈ ಭೂಮಂಡಲವನ್ನೂ, ದ್ವೀಪಗಳನ್ನೂ, ಮಹಾರ್ಣವಗಳನ್ನೂ ತೊರೆದು ಇಲ್ಲಿಂದ ಹೊರಟು ಹೋಗುತ್ತೇನೆ.

೫೦. ಪ್ರತಿಜ್ಞೆಯು ಈಡೇರದಿರುವುದರಿಂದ ಆ ವಸಿಷ್ಠನ ಪುತ್ರರಿಗೆ ನಾನು ಹಾಸ್ಯಾಸ್ಪದನಾಗಕೂಡದು. ಇದನ್ನು ಸತ್ಯವಾಗಿಯೂ ಹೇಳುತ್ತಿದ್ದೇನೆ.”

೫೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಎಲೈ ಮುನಿ ಶಾರ್ದೂಲನೆ, ಹಾಗಾದರೆ ಈಗ ನಾನು ಹೇಳುವಂತೆ ಮಾಡು. ಹಾಗೆ ಮಾಡಿದರೆ ನೀನು ಸಪ್ತದ್ವೀಪವತಿಯಾದ ಈ ಭೂಮಂಡಲವನ್ನು ತೊರೆದು ಎಲ್ಲಿಗೂ ಹೋಗಬೇಕಾಗುವುದಿಲ್ಲ.

೫೨. ಈ ಅರ್ಬುದ ಪರ್ವತಕ್ಕೆ ನೈರ್ಋತ್ಯ ದಿಕ್ಕಿನಲ್ಲಿ ಆನರ್ತವೆಂಬ ದೇಶದಲ್ಲಿ ಹಾಟಕೇಶ್ವರವಿರುವುದು.

೫೩. ಅಲ್ಲಿ ಸುರೋತ್ತಮರು ಮೊಟ್ಟಮೊದಲು ಹಾಟಕನಿರ್ಮಿತವಾದ ಲಿಂಗವನ್ನು ಸ್ಥಾಪನೆಮಾಡಿದರು. ಆ ಕಾರಣದಿಂದಲೆ ಪಾತಾಲ ಲೋಕದಲ್ಲಿರುವ ಲಿಂಗವನ್ನು ಹಾಟಕೇಶ್ವರವೆಂದು ಕರೆಯುತ್ತಾರೆ.

೫೪. ಅಯ್ಯಾ ದ್ವಿಜೋತ್ತಮನೆ, ಅಲ್ಲಿ ಯಾವ ಪಾತಾಲಗಂಗಾಜಲವಿರುವುದೊ ಅದು ರಸಾತಲದಿಂದ ಶಿವಲಿಂಗವನ್ನು ಉದ್ಧರಿಸುವಾಗ ನಿಷ್ಕ್ರಮಿಸಿದ್ದು.

ತತ್ರ ಪ್ರವಿಶ್ಯ ಯತ್ನೇನ ಪಾತಾಲಂ ವಸುಧಾಽಧಿಪಃ ।
ಕರೋತು ಜಾಹ್ನವೀತೋಯೇ ಸ್ನಾನಂ ಶ್ರದ್ಧಾಸಮನ್ವಿತಃ ॥ ೫೫ ॥
ಪಶ್ಚಾತ್ಪಶ್ಯತು ತಲ್ಲಿಂಗಂ ಹಾಟಕೇಶ್ವರಸಂಜ್ಞಿತಂ ।
ಭವಿಷ್ಯತಿ ತತಃ ಶುದ್ಧಶ್ಚಂಡಾಲತ್ವವಿವರ್ಜಿತಃ ॥ ೫೬ ॥
ತ್ವಮಪಿ ಪ್ರಾಪ್ಸ್ಯಸಿ ಶ್ರೇಯಃ ಪರಂ ಹೃದಯಸಂಸ್ಥಿತಂ ।
ತತೋಽನ್ಯದಪಿ ಯತ್ಕಿಂಚಿತ್ತತ್ರೈವ ತಪಸಿ ಸ್ಥಿತಃ ॥ ೫೭ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ವಿಶ್ವಾಮಿತ್ರೋ ಮುನೀಶ್ವರಃ ।
ತ್ರಿಶಂಕುನಾ ಸಮಾಯುಕ್ತೋ ಗತಸ್ತತ್ರ ದ್ರುತಂ ತತಃ ॥ ೫೮ ॥
ಪಾತಾಲೇ ದೇವಮಾರ್ಗೇಣ ಪ್ರವಿಶ್ಯ ನೃಪಸತ್ತಮಂ ।
ತ್ರಿಶಂಕುಂ ಸ್ನಾಪಯಾಮಾಸ ವಿಧಿದೃಷ್ಟೇನ ಕರ್ಮಣಾ ॥ ೫೯ ॥
ಸ್ನಾತಮಾತ್ರೋಽಥ ರಾಜಾ ಸ ಹಾಟಕೇಶ್ವರದರ್ಶನಾತ್ ।
ಚಂಡಾಲತ್ವೇನ ನಿರ್ಮುಕ್ತೋ ಬಭೂವಾಽರ್ಕಸಮದ್ಯುತಿಃ ॥ ೬೦ ॥

---

೫೫. ಅಲ್ಲಿ ಈ ವಸುಧಾಧಿಪನು ಪ್ರಯತ್ನಪೂರ್ವಕವಾಗಿ ಆ ಪಾತಾಲವನ್ನು ಪ್ರವೇಶಿಸಿ ಜಾಹ್ನವೀ ಜಲದಲ್ಲಿ ಶ್ರದ್ಧಾಸಮನ್ವಿತವಾಗಿ ಸ್ನಾನವನ್ನಾಚರಿಸಲಿ.

೫೬. ಸ್ನಾನಾನಂತರದಲ್ಲಿ ಅಲ್ಲಿರುವ ಹಾಟಕೇಶ್ವರಲಿಂಗವನ್ನು ಸಂದರ್ಶಿಸಲಿ. ಅದರಿಂದ ಈ ಭೂಪನು ಚಂಡಾಲತ್ವದಿಂದ ಬಿಡುಗಡೆ ಹೊಂದಿ ಪರಿಶುದ್ಧನಾಗುತ್ತಾನೆ.

೫೭. ನೀನು ಆ ಪಾತಾಳಗಂಗಾ ಸ್ನಾನದಿಂದಲೂ ಹಾಟಕೇಶ್ವರ ಸಂದರ್ಶನದಿಂದಲೂ ಮನೋಭೀಷ್ಟವಾದ ಉತ್ತಮಶ್ರೇಯಸ್ಸನ್ನು ಪಡೆಯುವೆಯಲ್ಲದೆ, ಅಲ್ಲಿಯೇ ನಿಂತು ಅಲ್ಪಸ್ವಲ್ಪ ತಪಸ್ಸನ್ನೆಸಗಿದರೂ ಇನ್ನೂ ಇತರ ಶ್ರೇಯಸ್ಸುಗಳನ್ನು ಹೊಂದುವೆ.

೫೮. ಸೂತನು ಹೇಳುತ್ತಾನೆ:—ತರುವಾಯ ಮುನಿಶ್ರೇಷ್ಠನಾದ ಆ ವಿಶ್ವಾಮಿತ್ರನು ಮಾರ್ಕಂಡೇಯನ ಆ ಮಾತುಗಳನ್ನು ಕೇಳಿ ತ್ರಿಶಂಕು ಸಹಿತನಾಗಿ ಬಹುತ್ವರೆಯಿಂದ ಅಲ್ಲಿಗೆ ಹೋದನು.

೫೯. ಆಮೇಲೆ ದೇವಮಾರ್ಗದಿಂದ ಆ ನೃಪಶ್ರೇಷ್ಠನನ್ನು ಪಾತಾಳಕ್ಕೆ ಪ್ರವೇಶಗೊಳಿಸಿ ಶಾಸ್ತ್ರೋಕ್ತವಾದ ರೀತಿಯಿಂದ ಅವನಿಗೆ ಆ ಗಂಗಾಜಲದಲ್ಲಿ ಸ್ನಾನವನ್ನು ಮಾಡಿಸಿದನು.

೬೦. ಸ್ನಾನಮಾಡಿ ಹಾಟಕೇಶ್ವರನನ್ನುಸಂದರ್ಶಿಸಿದೊಡನೆಯೇ ಆ ದೊರೆಯು ಚಂಡಾಲತ್ವದಿಂದ ಮೋಕ್ಷವನ್ನು ಪಡೆದು ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾದನು.

ತತಸ್ತಂ ಸ ಮುನಿಃ ಪ್ರಾಹ ಪ್ರಣತಂ ಗತಕಲ್ಮಷಂ ।
ದಿಷ್ಟ್ಯಾ ಮುಕ್ತೋಽಸಿ ರಾಜೇಂದ್ರ ಚಂಡಾಲತ್ವೇನ ಸಾಂಪ್ರತಂ ॥ ೬೧ ॥
ದಿಷ್ಟ್ಯಾ ಪ್ರಾಪ್ತಃ ಪರಂ ತೇಜೋ ದಿಷ್ಟ್ಯಾ ಪ್ರಾಪ್ತಃ ಪರಂ ತಪಃ ।
ತಸ್ಮಾದ್ಯಜಸ್ವ ಸತ್ರೇಣ ವಿಧಿವದ್ದಕ್ಷಿಣಾವತಾ ॥ ೬೨ ॥
ಯೇನ ಸಂಪ್ರಾಪ್ಸ್ಯಸೇ ಸಿದ್ಧಿಂ ನಿತ್ಯಂ ಯಾ ಹೃದಯೇ ಸ್ಥಿತಾ ।
ತ್ವತ್ಕೃತೇ ಪ್ರಾರ್ಥಯಿಷ್ಯಾಮಿ ಸ್ವಯಂ ಗತ್ವಾ ಪಿತಾಮಹಂ ॥ ೬೩ ॥
ಮಖಾಂಶಂ ಸರ್ವದೇವಾದ್ಯೋ ಯೇನ ಗೃಹ್ಣಾತಿ ತೇ ಮಖೇ ।
ತಸ್ಮಾದತ್ರೈವ ಸಂಭಾರಾನ್ ಸರ್ವಾನ್ ಯಜ್ಞಸಮುದ್ಭವಾನ್ ।
ಆನಯ ಬ್ರಹ್ಮಲೋಕಾಚ್ಚ ಯಾವದಾಗಮನಂ ಮಮ ॥ ೬೪ ॥
ಬಾಢಮಿತ್ಯೇವ ಸೋಽಪ್ಯಾಹ ಸಮುನಿಃ ಸಂಶಿತವ್ರತಃ ।
ಪಿತಾಮಹಮುಪಾಗಮ್ಯ ಪ್ರಣಿಪತ್ಯಾಬ್ರವೀದ್ವಚಃ ॥ ೬೫ ॥
ಯಾಜಯಿಷ್ಯಾಮ್ಯಹಂ ಭೂಪಂ ತ್ರಿಶಂಕುಂ ಪ್ರಪಿತಾಮಹ ।
ಮಾನುಷೇಣ ಶರೀರೇಣ ಯೇನ ಗಚ್ಛತಿ ತೇ ಪದಂ ॥ ೬೬ ॥

---

೬೧—೬೪. ತರುವಾಯ ಆ ಮುನಿಯು ಗತಕಲ್ಮಷನಾಗಿ ಕೈಮುಗಿದು ನಿಂತಿರುವ ಅವನನ್ನು ಕುರಿತು, "ರಾಜೇಂದ್ರ, ಅದೃಷ್ಟವಶದಿಂದ ನೀನು ಈ ಚಂಡಾಲತ್ವವನ್ನು ಕಳೆದುಕೊಂಡು ಪರಿಶುದ್ಧನಾದೆ. ಅದೃಷ್ಟವಶದಿಂದಲೇ ನಿನಗೆ ಉತ್ತಮವಾದ ತೇಜಸ್ಸು, ಶ್ರೇಷ್ಠವಾದ ತಪಃಫಲವೂ ಲಭಿಸಿದುವು. ಆದುದರಿಂದ ನೀನು ಪ್ರಕೃತದಲ್ಲಿ ಸಂಪೂರ್ಣ ದಕ್ಷಣೆಯನ್ನೊಡಗೊಂಡ ವಿಧಿ ವಿಹಿತವಾದ ಸತ್ರಯಾಗವನ್ನು ಮಾಡು. ಅದರಿಂದ ನಿನ್ನ ಮನಸ್ಸಿನಲ್ಲಿ ಸತತವೂ ಉದ್ದೇಶ್ಯವಾಗಿರುವ ಸಿದ್ಧಿಯು ದೊರೆಯುತ್ತದೆ. ನಾನು ನಿನಗೋಸ್ಕರವಾಗಿ ಬ್ರಹ್ಮದೇವನಲ್ಲಿಗೆ ಸಾಕ್ಷಾತ್ತಾಗಿ ಹೋಗಿ ಅವನನ್ನು ಪ್ರಾರ್ಥಿಸಿಕೊಳ್ಳುತ್ತೇನೆ. ಅದರಿಂದ ಆದಿದೇವನಾದ ಆ ಬ್ರಹ್ಮನು ನೀನು ನಡೆಸುವ ಈ ಯಜ್ಞದಲ್ಲಿ ಹವಿರ್ಭಾಗವನ್ನು ತೆಗೆದುಕೊಳ್ಳುತ್ತಾನೆ. ಆದುದರಿಂದ ನಾನು ಬ್ರಹ್ಮಲೋಕಕ್ಕೆ ಹೋಗಿ ಬರುವುದರೊಳಗಾಗಿ ನೀನು ಈ ಪ್ರದೇಶದಲ್ಲಿಯೇ ಇದ್ದು ಯಜ್ಞಕ್ಕೆ ಬೇಕಾದ ಸಂಭಾರಗಳೆಲ್ಲವನ್ನೂ ಸಿದ್ಧಪಡಿಸಿಕೋ" ಎಂದು ಹೇಳಿದನು.

೬೫. ಈ ಮಾತುಗಳನ್ನು ಕೇಳಿ ತ್ರಿಶಂಕುವು ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಸಂಶಿತವ್ರತನಾದ ಆ ವಿಶ್ವಾಮಿತ್ರಮುನಿಯಾದರೋ ಬ್ರಹ್ಮಲೋಕವನ್ನೈದಿ, ಪಿತಾಮಹನನ್ನು ಕಂಡು ನಮಸ್ಕರಿಸಿ ಅವನನ್ನು ಕುರಿತು ಹೀಗೆಂದನು.

೬೬. "ಎಲೈ ಬ್ರಹ್ಮದೇವನೆ, ಮಾನುಷಶರೀರದಿಂದಲೇ ನಿನ್ನ ಲೋಕವನ್ನು ಸೇರುವ ಫಲವನ್ನು ದೊರಕಿಸುವಂತಹ ಯಾಗವನ್ನು ತ್ರಿಶಂಕುಮಹಾರಾಜನಿಂದ ನಾನು ಮಾಡಿಸುವವನಾಗಿದ್ದೇನೆ.

ತಸ್ಮಾದಾಗಚ್ಛ ತತ್ರ ತ್ವಂ ಯಜ್ಞವಾಟಂ ಪಿತಾಮಹ ।
ಸರ್ವೈಃ ಸುರಗಣೈಃ ಸಾರ್ಧಂ ಶಿವವಿಷ್ಣು ಪುರಃ ಸರೈಃ ॥ ೬೭ ॥
ಪ್ರಗೃಹಾಣ ಸ್ವಹಸ್ತೇನ ಯಜ್ಞಭಾಗಂ ಯಥೋಚಿತಂ ।
ಸ ಶರೀರೋ ದಿವಂ ಯಾತಿ ಯೇನಾಽಸೌ ತ್ವತ್ಪ್ರಸಾದತಃ ॥ ೬೮ ॥

ಬ್ರಹ್ಮೋವಾಚ :—

ನ ಯಜ್ಞ ಕರ್ಮಣಾ ಸ್ವರ್ಗಃ ಸ್ವೇನ ಕಾಯೇನ ಲಭ್ಯತೇ ।
ಮುಕ್ತ್ವಾ ದೇಹಾಂತರಂ ಬ್ರಹ್ಮಂಸ್ತಸ್ಮಾನ್ಮೈವಂ ವದಸ್ವ ಮಾಂ ॥ ೬೯ ॥
ವಯಮಗ್ನಿಮುಖಾಃ ಸರ್ವೇ ಹವಿರ್ಗೃಹ್ಣಾಮಹೇ ಮಖೇ ।
ವೇದೋಕ್ತವಿಧಿನಾ ಸಮ್ಯಗ್ಯಜಮಾನ ಹಿತಾಯ ವೈ ॥ ೭೦ ॥
ತಸ್ಮಾದ್ವಹ್ನಿಮುಖೇ ಭೂಯಃ ಸ ಜುಹೋತು ಹವಿರ್ದ್ವಿಜ ।
ತತಃ ಸಂಪ್ರಾಪ್ಸ್ಯತಿ ಸ್ವರ್ಗಂ ತ್ವತ್ಪ್ರಸಾದಾದಸಂಶಯಂ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತ್ರಿಶಂಕೂಪಾಖ್ಯಾನೇ-ವಿಶ್ವಾಮಿತ್ರಕೃತ ತ್ರಿಶಂಕುಯಾಜನೋಪಕ್ರಮವರ್ಣನಂ"
ನಾಮ ಚತುರ್ಥೋಽಧ್ಯಾಯಃ

---

೬೭. ಆದುದರಿಂದ ಎಲೈ ಪಿತಾಮಹನೆ, ನೀನು ಶಿವವಿಷ್ಣುಪ್ರಮುಖರಾದ ಸಮಸ್ತ ದೇವತಾಗಣದಿಂದೊಡಗೂಡಿ ಆ ಯಜ್ಞವಾಟಕ್ಕೈತರುವವನಾಗು.

೬೮. ಅಲ್ಲಿ ನೀನು ಸ್ವಹಸ್ತದಿಂದಲೇ ಯಥೋಚಿತವಾಗಿ ಹವಿರ್ಭಾಗವನ್ನು ಸ್ವೀಕರಿಸುವವನಾಗು. ನಿನ್ನ ಪ್ರಸಾದದಿಂದಲೇ ಆ ಮಹಾರಾಜನು ಸಶರೀರನಾಗಿ ಸ್ವರ್ಗಲೋಕವನ್ನು ಸೇರಲಿ."

೬೯. ಬ್ರಹ್ಮನು ಹೇಳುತ್ತಾನೆ:—"ಎಲೈ ಮುನಿಯೆ, ಯಜ್ಞಕರ್ಮದಿಂದ ದೇಹಾಂತರದಿಂದಲ್ಲದೆ ಸ್ವದೇಹದಿಂದಲೇ ಸ್ವರ್ಗವು ದೊರಕುವುದಿಲ್ಲ. ನೀನು ನನ್ನಲ್ಲಿ ಇಂಥ ಮಾತುಗಳನ್ನಾಡಬೇಡ.

೭೦–೭೧. ದೇವತೆಗಳಾದ ನಾವು ಯಜಮಾನನ ಹಿತಕ್ಕಾಗಿ ಯಜ್ಞದಲ್ಲಿ ವೇದೋಕ್ತವಿಧಿಯಿಂದ ಸಮರ್ಪಿಸಿದ ಹವಿಸ್ಸನ್ನು ಅಗ್ನಿಮುಖದಿಂದ ಸ್ವೀಕರಿಸುತ್ತೇವೆ. ಆದುದರಿಂದ ಎಲೈ ದ್ವಿಜನೆ, ಆ ತ್ರಿಶಂಕುವು ಅಗ್ನಿಮುಖದಲ್ಲಿಯೆ ನಮ್ಮೆಲ್ಲರಿಗೂ ಹವಿಸ್ಸುಗಳನ್ನು ಹೋಮಮಾಡಲಿ. ಆ ಬಳಿಕ ನಿನ್ನ ಪ್ರಸಾದದಿಂದ ನಿಸ್ಸಂಶಯವಾಗಿಯೂ ಅವನು ಸ್ವರ್ಗವನ್ನು ಪಡೆಯುತ್ತಾನೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತ್ರಿಶಂಕೂಪಾಖ್ಯಾನ—ವಿಶ್ವಾಮಿತ್ರಕೃತ ತ್ರಿಶಂಕುಯಾಜನೋಪಕ್ರಮ
ವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಮೋಽಧ್ಯಾಯಃ

### ತ್ರಿಶಂಕೂಪಾಖ್ಯಾನೇ — ವಿಶ್ವಾಮಿತ್ರಕೃತ ತ್ರಿಶಂಕುಯಾಜನವರ್ಣನಂ

ಸೂತ ಉವಾಚ :—

ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ವಿಶ್ವಾಮಿತ್ರೋ ರುಷಾನ್ವಿತಃ ।
ಪಿತಾಮಹಮುವಾಚೇದಂ ಪಶ್ಯಮೇ ತಪಸೋ ಬಲಂ ॥ ೧ ॥
ಯಾಜಯಿತ್ವಾ ತ್ರಿಶಂಕುಂ ತಂ ವಿಧಿವದ್ದಕ್ಷಿಣಾವತಾ ।
ಯಜ್ಞೇನಾತ್ರಾನಯಿಷ್ಯಾಮಿ ಪಶ್ಯತಸ್ತೇ ಪಿತಾಮಹ ॥ ೨ ॥
ಏವಮುಕ್ತ್ವಾ ದ್ರುತಂ ಗತ್ವಾ ವಿಶ್ವಾಮಿತ್ರೋ ಧರಾತಲಂ ।
ಚಕಾರ ಯಾಜನೇ ಯತ್ನಂ ತ್ರಿಶಂಕೋಃ ಸುಮಹಾತ್ಮನಃ ॥ ೩ ॥
ದದೌ ದೀಕ್ಷಾಂ ಸಮಾಹೂಯ ಬ್ರಾಹ್ಮಣಾನ್ ವೇದಪಾರಗಾನ್ ।
ಯಜ್ಞಕರ್ಮೋಚಿತೇ ಕಾಲೇ ತಸ್ಮಿನ್ನೇವ ವನೇ ಶುಭೇ ॥ ೪ ॥
ಬಭೂವ ಸ ಸ್ವಯಂ ಧೀಮಾನಧ್ವರ್ಯುರ್ಯಜ್ಞಕರ್ಮಣಿ ।
ತಸ್ಮಿನ್ ಹೋತಾ ಚ ಶಾಂಡಿಲ್ಯೋ ಬ್ರಹ್ಮಾ ಗೌತಮ ಏವ ಚ ॥ ೫ ॥

---

### ಕನ್ನಡದ ಅನುವಾದ

#### ವಿಶ್ವಾಮಿತ್ರಕೃತ ತ್ರಿಶಂಕುಯಾಜನವರ್ಣನ

೧–೨. ಸೂತನು ಹೇಳುತ್ತಾನೆ :—ಎಲೈ ವಿಪ್ರರೆ, ಆ ವಿಶ್ವಾಮಿತ್ರನು ಬ್ರಹ್ಮನಾಡಿದ ಆ ಮಾತುಗಳನ್ನು ಕೇಳಿ ರೋಷಗೊಂಡು, ಅವನನ್ನು ಕುರಿತು, "ಎಲೈ ಬ್ರಹ್ಮದೇವನೆ, ನನ್ನ ತಪೋಬಲವನ್ನಾದರೂ ನೋಡು. ತ್ರಿಶಂಕುವಿನಿಂದ ವಿಧ್ಯುಕ್ತವೂ ದಕ್ಷಿಣಾಸಹಿತವೂ ಆದ ಯಾಗವನ್ನು ಮಾಡಿಸಿ ನೀನು ನೋಡುತ್ತಿರುವಂತೆಯೇ ಅವನನ್ನು ಇಲ್ಲಿಗೆ ಕರೆತರುತ್ತೇನೆ" ಎಂದು ಹೇಳಿದನು.

೩. ಈ ರೀತಿ ನುಡಿದ ತರುವಾಯ ಬಹು ತ್ವರೆಯಿಂದ ಧರಾತಳಕ್ಕೆ ನಡೆತಂದು ಮಹಾತ್ಮನಾದ ತ್ರಿಶಂಕುವಿನ ಯಾಗಕ್ಕಾಗಿ ಪ್ರಯತ್ನವನ್ನೆಸಗಿದನು.

೪. ಅದೇ ವನದಲ್ಲಿಯೆ ಯಜ್ಞಕರ್ಮೋಚಿತವಾದ ಶುಭಮುಹೂರ್ತದಲ್ಲಿ ಆ ಮುನಿಯು ವೇದಪಾರಂಗತರಾದ ಬ್ರಾಹ್ಮಣರೆಲ್ಲರನ್ನೂ ಆಹ್ವಾನಿಸಿ, ಆ ಮಹಾರಾಜನಿಗೆ ಯಜ್ಞದೀಕ್ಷೆಯನ್ನು ಕೊಟ್ಟನು.

೫. ಧೀಮಂತನಾದ ಆ ಮುನಿಯು ಆ ಯಜ್ಞಕರ್ಮದಲ್ಲಿ ತಾನೇ ಅಧ್ವರ್ಯುವಾದನು. ಶಾಂಡಿಲ್ಯನು ಹೋತೃವೂ, ಗೌತಮ ಮುನಿಯು ಬ್ರಹ್ಮನೂ ಆದರು.

ಆಗ್ನೀಧ್ರಶ್ಚ್ಯವನೋ ನಾಮ ಮೈತ್ರಾವರುಣಃ ಕಾರ್ಮಿಕಃ ।
ಉದ್ಗಾತಾ ಯಾಜ್ಞವಲ್ಕ್ಯಶ್ಚ ಪ್ರತಿಹರ್ತಾ ಚ ಜೈಮಿನಿಃ ॥ ೬ ॥
ಪ್ರಸ್ತೋತಾ ಶಂಕುವರ್ಣಶ್ಚ ತಥೋನ್ನೇತಾ ಚ ಗಾಲವಃ ।
ಪುಲಸ್ತ್ಯೋ ಬ್ರಾಹ್ಮಣಾಚ್ಛಂಸೀ ಹೋತಾ ಗರ್ಗೋ ಮುನೀಶ್ವರಃ ॥ ೭ ॥
ನೇಷ್ಟಾಚೈವ ತಥಾಽತ್ರಿಸ್ತು ಅಚ್ಛಾವಾಕೋ ಭೃಗುಃ ಸ್ವಯಂ ।
ತಾನ್ ಸರ್ವಾನೃತ್ವಿಜಶ್ಚಕ್ರೇ ತ್ರಿಶಂಕುಃ ಶ್ರದ್ಧಯಾನ್ವಿತಃ ॥ ೮ ॥
ವಾಸೋಭಿರ್ಮುಕುಟೈಶ್ಚೈವ ಕೇಯೂರೈಃ ಸಮಲಂಕೃತಾನ್ ।
ಕೃತ್ವಾ ಕೇಶಪರಿತ್ಯಾಗಂ ದಧತ್ಕೃಷ್ಣಾಜಿನಂ ತಥಾ ॥ ೯ ॥
ಏಣಶೃಂಗಸಮಾಯುಕ್ತಃ ಪಯೋವ್ರತಪರಾಯಣಃ ।
ದೀರ್ಘಸತ್ರಾಯ ತಾನ್ ಸರ್ವಾನ್ ಯೋಜಯಾಮಾಸ ವೈ ತತಃ ॥ ೧೦ ॥
ಏವಂ ತಸ್ಮಿನ್ ಪ್ರವೃತ್ತೇಽಚ ದೀರ್ಘಸತ್ರೇ ಯಥೋಚಿತೇ ।
ಆಜಗ್ಮುರ್ಬ್ರಾಹ್ಮಣಾ ದಿವ್ಯಾ ವೇದವೇದಾಂಗಪಾರಗಾಃ ॥ ೧೧ ॥
ತಥಾಽನ್ಯೇ ತಾರ್ಕಿಕಾಶ್ಚೈವ ಗೃಹಸ್ಥಾಃ ಕೌತುಕಾನ್ವಿತಾಃ ।
ದೀನಾಂಧಕೃಪಣಾಶ್ಚೈವ ಯೇಚಾಽನ್ಯೇ ನಟನರ್ತಕಾಃ ॥ ೧೨ ॥

---

೬. ಚ್ಯವನನು ಅಗ್ನೀಧ್ರನೂ, ಮೈತ್ರಾವರುಣನು ಕಾರ್ಮಿಕನೂ ಆದರು. ಯಾಜ್ಞವಲ್ಕ್ಯನೇ ಉದ್ಗಾತೃವು. ಜೈಮಿನಿಯು ಪ್ರತಿಹರ್ತೃವು.

೭-೮. ಶಂಕುವರ್ಣನು ಪ್ರಸ್ತೋತೃವೂ, ಗಾಲವನು ಉನ್ನೇತೃವೂ, ಪುಲಸ್ತ್ಯನು ಬ್ರಾಹ್ಮಣಾಚ್ಛಂಸಿಯೂ, ಮುನೀಶ್ವರನಾದ ಗರ್ಗ್ಯನು ಹೋತೃವೂ ಆದರು. ಅತ್ರಿಮುನಿಯು ನೇಷ್ಟೃವೂ, ಸ್ವಯಂ ಭೃಗುಮಹರ್ಷಿಯೇ ಅಚ್ಛಾವಾಕನೂ ಆದರು. ತ್ರಿಶಂಕುವು ಶ್ರದ್ಧಾಸಮನ್ವಿತನಾಗಿ ಇವರೆಲ್ಲರನ್ನೂ ಋತ್ವಿಜರನ್ನಾಗಿ ವರಣಮಾಡಿದನು.

೯-೧೦. ವಸ್ತ್ರಗಳಿಂದಲೂ, ಕಿರೀಟಗಳಿಂದಲೂ, ಭುಜಕೀರ್ತಿಗಳಿಂದಲೂ ಅವರೆಲ್ಲರನ್ನೂ ಅಲಂಕರಿಸಿದ ತರುವಾಯ ಆ ಮಹಾರಾಜನು ಕೇಶಪರಿತ್ಯಾಗವನ್ನೆಸಗಿ ಕೃಷ್ಣಾಜಿನವನ್ನುಟ್ಟು, ಜಿಂಕೆಯ ಕೊಂಬನ್ನು ಹಿಡಿದು ಪಯೋವ್ರತಪರಾಯಣನಾಗಿ ಆ ಮುನಿಪುಂಗವರೆಲ್ಲರನ್ನೂ ದೀರ್ಘಸತ್ರಯಾಗವನ್ನು ಉಪಕ್ರಮಿಸಿ ನಡೆಸಲು ನಿಯೋಜಿಸಿದನು.

೧೧-೧೨. ಹೀಗೆ ದೀರ್ಘಸತ್ರಯಾಗವು ಯಥೋಚಿತವಾಗಿ ನಡೆಯುತ್ತಿರಲು ವೇದವೇದಾಂಗಪಾರಂಗತರಾದ ಬ್ರಾಹ್ಮಣರೆಲ್ಲರೂ ಆ ಯಾಗಾವಲೋಕನಕ್ಕಾಗಿ ದಶದಿಶೆಗಳಿಂದಲೂ ಅಲ್ಲಿಗೆ ಬಂದರು. ಅಂತೆಯೆ ತಾರ್ಕಿಕರಾದ ಇತರ ಪಂಡಿತರೂ ಗೃಹಸ್ಥರೂ ದೀನಾಂಧಕೃಪಣರೂ ನಟನರ್ತಕರೂ ಯಜ್ಞವನ್ನು ನೋಡಲು ಕುತೂಹಲದಿಂದ ಅಲ್ಲಿಗೆ ಬಂದರು.

ದೀಯತಾಂ ದೀಯತಾಮಾಶು ಏತೇಷಾಮೇತದೇವ ಹಿ ।
ಭುಜ್ಯತಾಂ ಭುಜ್ಯತಾಂ ಲೋಕಾಃ ಪ್ರಸಾದಃ ಕ್ರಿಯತಾಮಿತಿ ॥ ೧೩ ॥
ಇತ್ಯೇಷ ನಿನದಸ್ತತ್ರ ಶ್ರೂಯತೇ ಸತತಂ ಮಹಾನ್ ।
ಯಜ್ಞವಾಟೇ ಸದಾ ತಸ್ಮಿನ್ನಾನ್ಯಶ್ಚೈವ ಕದಾಚನ ॥ ೧೪ ॥
ತತ್ರ ಭಕ್ಷ್ಯಮಯಾಃ ಶೈಲಾದೃಶ್ಯಂತೇ ಪರಿಕಲ್ಪಿತಾಃ ।
ಸುವರ್ಣಸ್ಯ ಚ ರೂಪ್ಯಸ್ಯ ರತ್ನಾನಾಂ ಚ ವಿಶೇಷತಃ ॥ ೧೫ ॥
ದಾನಾರ್ಥಂ ಬ್ರಾಹ್ಮಣೇಂದ್ರಾಣಾಮಸಂಖ್ಯಾಶ್ಚಾಽಪಿ ಧೇನವಃ ।
ತಥೈವ ವಾಜಿನೋ ದಾಂತಾ ಮದೋನ್ಮತ್ತಾ ಮಹಾಗಜಾಃ ॥ ೧೬ ॥
ಸಮಂತಾತ್ಕಲ್ಪಿತಾಸ್ತತ್ರ ದೃಶ್ಯಂತೇ ಪರ್ವತೋಪಮಾಃ ।
ವರ್ತಮಾನೇ ಮಹಾಯಜ್ಞೇ ತಸ್ಮಿನ್ನೇವ ಸುವಿಸ್ತರೇ ॥ ೧೭ ॥
ಆಹೂತಾ ಯಜ್ಞಭಾಗಾಯ ನಾಽಭಿಗಚ್ಛಂತಿ ದೇವತಾಃ ।
ಕೇವಲಂ ವಹ್ನಿವಕ್ತ್ರೇಣ ತಸ್ಯ ಗೃಹ್ಣಂತಿ ತದ್ಧವಿಃ ॥ ೧೮ ॥
ಏವಂ ದ್ವಾದಶವರ್ಷಾಣಿ ಯಜತಸ್ತಸ್ಯ ಭೂಪತೇಃ ।
ವ್ಯತೀತಾನಿ ನ ಸಂಪ್ರಾಪ್ತಮಭೀಷ್ಟಂ ಮನಸಃ ಫಲಂ ॥ ೧೯ ॥

---

೧೩–೧೪. "ಅಯ್ಯಾ ಇವರೆಲ್ಲರಿಗೂ ಜಾಗ್ರತೆಯಾಗಿ ಭೋಜನಾದಿಗಳನ್ನು ಕೊಡಿರಿ. ಇವರೆಲ್ಲರಿಗೂ ಈ ಈ ಪದಾರ್ಥಗಳನ್ನೇ ಕೊಡತಕ್ಕದ್ದು. ಎಲೈ ಜನಗಳಿರಾ, ಊಟಮಾಡಿರಿ. ಯಥಾಸಾವಕಾಶವಾಗಿ ಊಟವಾಗಲಿ. ನೀವೆಲ್ಲರೂ ತೃಪ್ತರಾಗಬೇಕು, ಅನುಗ್ರಹಿಸಬೇಕು," ಎಂಬೀ ಮಾತುಗಳು ಸತತವೂ ಕೋಲಾಹಲವಾಗಿ ಆ ಯಜ್ಞಮಂಟಪದಲ್ಲಿ ಕೇಳಬರುತ್ತಿದ್ದಿತಾಗಲಿ ಬೇರಾವುದೂ ಕೇಳಿಸುತ್ತಿರಲಿಲ್ಲ.

೧೫–೧೭. ಅಲ್ಲಿ ಅಡಿಗೆಮಾಡಿ ಸುರಿದಿದ್ದ ಅನ್ನರಾಶಿಗಳು ಪರ್ವತಗಳನ್ನೇ ಹೋಲುತ್ತಿದ್ದುವು. ಬ್ರಾಹ್ಮಣಶ್ರೇಷ್ಠರಿಗೆ ದಾನಮಾಡಲೋಸುಗ ಸಂಗ್ರಹಿಸಿಟ್ಟಿದ್ದ ಸುವರ್ಣರಾಶಿಗಳೂ ರಜತರಾಶಿಗಳೂ ರತ್ನಗಳೂ ಅಸಂಖ್ಯಾತವಾದ ಗೋವುಗಳೂ ಅಶ್ವಗಳೂ ಮದೋನ್ಮತ್ತಗಳಾದ ಮಹಾಗಜಗಳೂ ಪರ್ವತವನ್ನೇ ಹೋಲಿ ಕಂಗೊಳಿಸುತ್ತಿದ್ದುವು. ಹೀಗೆ ಆ ಮಹಾಯಜ್ಞವು ಬಹು ವಿಸ್ತಾರವಾಗಿ ಬಹು ಸಂಭ್ರಮದಿಂದ ನಡೆಯತೊಡಗಿತು.

೧೮–೧೯. ಎಲೈಮುನಿಗಳಿರಾ, ಇಂತಹ ಸತ್ರಯಾಗದಲ್ಲಿ ಯಜ್ಞಭಾಗವನ್ನು ಸ್ವೀಕರಿಸಲೋಸುಗ ದೇವತೆಗಳೆಲ್ಲರೂ ಆಹ್ವಾನಿತರಾದರೂ ಯಾರೂ ಪ್ರತ್ಯಕ್ಷವಾಗಿ ಅಲ್ಲಿಗೆ ಬರಲಿಲ್ಲ. ಕೇವಲ ವಹ್ನಿಮುಖದಿಂದಲೇ ಅವರು ಹವಿಸ್ಸುಗಳನ್ನು ಪರಿಗ್ರಹಿಸುತ್ತಿದ್ದರು. ಹೀಗೆ ಆ ಭೂಪತಿಯು ಯಾಗಮಾಡುತ್ತಿರಲು ಹನ್ನೆರಡು ವರ್ಷಗಳು ಕಳೆದುಹೋದುವು. ಇಷ್ಟಾದರೂ ಆತನ ಮನೋಭೀಷ್ಟವೇನೂ ನೆರವೇರಲಿಲ್ಲ.

ತತಶ್ಚಾಽವಭೃಥಸ್ನಾನಂ ಕೃತ್ವಾ ಸತ್ರ ಸಮಾಪ್ತಿಜಂ ।
ಋತ್ವಿಜಸ್ತರ್ಪಯಿತ್ವಾ ತಾನ್ ದಕ್ಷಿಣಾಭಿರ್ಯಥಾರ್ಹತಃ ॥ ೨೦ ॥
ವಿಸಸರ್ಜ ಸಮಸ್ತಾಂಶ್ಚ ತಥಾಽನ್ಯಾನಪಿ ಸಂಗತಾನ್ ।
ಸಂಬಂಧಿನೋ ವಯಸ್ಯಾಂಶ್ಚ ತ್ರಿಶಂಕುರ್ಮುನಿಸತ್ತಮಾಃ ॥ ೨೧ ॥
ತತಃ ಪ್ರೋವಾಚ ವಿನತೋ ವಿಶ್ವಾಮಿತ್ರಂ ಮುನೀಶ್ವರಂ ।
ಸ ಭೂಪೋ ವ್ರೀಡಯಾ ಯುಕ್ತಃ ಪ್ರಣಿಪಾತಪುರಃಸರಂ ॥ ೨೨ ॥
ತ್ವತ್ಪ್ರಸಾದಾನ್ಮಯಾ ಪ್ರಾಪ್ತಂ ದೀರ್ಘಸತ್ರಸಮುದ್ಭವಂ ।
ಪರಿಪೂರ್ಣಫಲಂ ಬ್ರಹ್ಮನ್ದುರ್ಲಭಂ ಸರ್ವಮಾನವೈಃ ॥ ೨೩ ॥
ತಥಾ ಜಾತಿಃ ಪುನರ್ಲಬ್ಧಾ ಭೂಯೋ ನಷ್ಟಾಽಪಿ ಸನ್ಮುನೇ ।
ತ್ವತ್ಪ್ರಸಾದೇನ ವಿಪ್ರರ್ಷೇ ಚಂಡಾಲತ್ವಂ ಪ್ರಣಾಶಿತಂ ॥ ೨೪ ॥
ಪರಂ ಮೇ ದುಃಖಮೇವೈಕಂ ಹೃದಿ ಶಲ್ಯಮಿವಾರ್ಪಿತಂ ।
ಅನೇನೈವ ಶರೀರೇಣ ಯನ್ನಪ್ರಾಪ್ತಂ ತ್ರಿವಿಷ್ಟಪಂ ॥ ೨೫ ॥
ಉಪಹಾಸಂ ಕರಿಷ್ಯಂತಿ ವಸಿಷ್ಠಸ್ಯ ಸುತಾ ಮುನೇ ।
ಅದ್ಯ ವ್ಯರ್ಥಶ್ರಮಂ ಶ್ರುತ್ವಾ ಮಾಮಪ್ರಾಪ್ತಂ ತ್ರಿವಿಷ್ಟಪಂ ॥ ೨೬ ॥

---

೨೦–೨೧. ತರುವಾಯ ಆ ತ್ರಿಶಂಕುವು ಅವಭೃಥಸ್ನಾನವನ್ನು ಮಾಡಿ ಸತ್ರಯಾಗವನ್ನು ಸಮಾಪ್ತಗೊಳಿಸಿ ಯೋಗ್ಯತಾನುಸಾರವಾಗಿ ಋತ್ವಿಜರೆಲ್ಲರಿಗೂ ದಕ್ಷಿಣೆಯನ್ನು ಕೊಟ್ಟು ಅವರನ್ನೇ ಅಲ್ಲದೆ ಅವರೊಡನೆ ಬಂದಿದ್ದ ಇತರರನ್ನೂ ನೆಂಟರಿಷ್ಟರನ್ನೂ ಉಚಿತ ಮರ್ಯಾದೆಗಳಿಂದ ಬೀಳ್ಕೊಟ್ಟನು.

೨೨. ತರುವಾಯ ಆ ಭೂಪತಿಯು ವಿಶ್ವಾಮಿತ್ರಮಹಾಮುನಿಗೆ ನಮಸ್ಕಾರ ಮಾಡಿ, ಲಜ್ಜೆಯೊಡಗೂಡಿ ನಮ್ರನಾಗಿ ಹೀಗೆ ಹೇಳಿದನು.

೨೩. "ಎಲೈ ಮಹಾಮುನಿಯೆ, ಬ್ರಹ್ಮಜ್ಞಾನಿಯಾದ ನಿನ್ನ ಅನುಗ್ರಹದಿಂದ ಈ ದೀರ್ಘಸತ್ರಯಾಗವನ್ನು ಮಾಡಿ ಇದರಿಂದ ದೊರೆಯುವ ಸಂಪೂರ್ಣ ಫಲವನ್ನು ಎಲ್ಲ ಮಾನವರಿಂದಲೂ ಹೇಗೆಯೋ ಹಾಗೆಯೇ ನನ್ನಿಂದಲೂ ಹೊಂದಲ್ಪಟ್ಟಿತು.

೨೪–೨೫. ಎಲೈ ಮುನಿಸತ್ತಮನೆ, ವಿಪ್ರರ್ಷಿಯಾದ ನೀನು ನನ್ನ ಚಂಡಾಲತ್ವವನ್ನು ಹೋಗಲಾಡಿಸಿದೆ. ನಿನ್ನ ಪ್ರಸಾದದಿಂದಲೇ ನನಗೆ ಮತ್ತೆ ಕ್ಷತ್ರಿಯತ್ವವು ದೊರೆಯಿತು. ಆದರೆ ಇದೇ ಶರೀರದಿಂದಲೇ ಸ್ವರ್ಗಲೋಕಕ್ಕೆ ಹೋಗಬೇಕೆಂಬ ನನ್ನ ಸಂಕಲ್ಪವು ಈಡೇರದೆ ಆ ಚಿಂತೆಯು ಮುಳ್ಳಿನಂತೆ ನನ್ನೆದೆಯಲ್ಲಿ ನಾಟಿಹೋಗಿದೆ.

೨೬. ಈಗ ನಮ್ಮ ಶ್ರಮವೆಲ್ಲವೂ ನಿಷ್ಫಲವಾಗಿ ನಾನು ಸ್ವರ್ಗಕ್ಕೆ ಹೋಗದಿರುವುದನ್ನು ಕಂಡು ಆ ವಸಿಷ್ಠಮುನಿಕುಮಾರರು ಹಾಸ್ಯಮಾಡಿಕೊಂಡು ನಗುವರು.

ತಥಾ ತದ್ವಚನಂ ಸತ್ಯಂ ವಸಿಷ್ಠಸ್ಯ ವ್ಯವಸ್ಥಿತಂ ।
ಯತ್ತೇನೋಕ್ತಂ ನ ಯಜ್ಞೇನ ಸದೇಹೈರ್ಗಮ್ಯತೇ ದಿವಿ ॥ ೨೭ ॥
ಸೋಽಹಂ ತಪಃ ಕರಿಷ್ಯಾಮಿ ಸಾಂಪ್ರತಂ ವನಮಾಶ್ರಿತಃ ।
ನ ಕರಿಷ್ಯಾಮಿ ಭೂಯೋಽಪಿ ರಾಜ್ಯಂ ಪುತ್ರನಿವೇದಿತಂ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತ್ರಿಶಂಕೂಪಾಖ್ಯಾನೇ — ವಿಶ್ವಾಮಿತ್ರಕೃತ ತ್ರಿಶಂಕುಯಾಜನವರ್ಣನಂ"
ನಾಮ ಪಂಚಮೋಽಧ್ಯಾಯಃ

---

೨೭. ಸದೇಹರಾಗಿ ಸ್ವರ್ಗಕ್ಕೆ ಹೋಗಲಾಗುವುದಿಲ್ಲ ಎಂದು ಆ ವಸಿಷ್ಠ ಮಹರ್ಷಿಯು ಹೇಳಿದ ಮಾತು ದಿಟವಾಯಿತು.

೨೮. ಹೀಗೆ ಭಗ್ನಮನೋರಥನಾದ ನಾನು ವನವನ್ನಾಶ್ರಯಿಸಿ ತಪಸ್ಸನ್ನಾಚರಿಸುವೆನು. ಮಗನಿಗಾಗಿ ಬಿಟ್ಟುಕೊಟ್ಟು ಬಂದಿರುವ ರಾಜ್ಯಕ್ಕೆ ಹೋಗಿ ಮತ್ತೆ ಆಳ್ವಿಕೆಯನ್ನು ನಾನು ನಡೆಸುವುದಿಲ್ಲ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಶ್ವಾಮಿತ್ರಕೃತ ತ್ರಿಶಂಕುಯಾಜನವರ್ಣನ"ವೆಂಬ
ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ವಿಶ್ವಾಮಿತ್ರವರಪ್ರಾಪ್ತಿವರ್ಣನಂ

ಸೂತ ಉವಾಚ :—

ತಚ್ಛ್ರುತ್ವಾ ವಚನಂ ತಸ್ಯ ತ್ರಿಶಂಕೋರ್ಮುನಿಪುಂಗವಃ ।
ವಿಶ್ವಾಮಿತ್ರೋಽಬ್ರವೀದ್ವಾಕ್ಯಂ ಕಿಂಚಿಲ್ಲಜ್ಜಾಸಮನ್ವಿತಃ ॥ ೧ ॥
ಮಾ ವಿಷಾದಂ ಮಹೀಪಾಲ ವಿಷಯೇಽತ್ರ ಕರಿಷ್ಯಸಿ ।
ಅನೇನೈವ ಶರೀರೇಣ ತ್ವಾಂ ನಯಿಷ್ಯಾಮ್ಯಹಂ ದಿವಂ ॥ ೨ ॥
ತತ್ತತ್ಕರ್ಮ ಕರಿಷ್ಯಾಮಿ ಸ್ವರ್ಗಾರ್ಥೇ ನೃಪಸತ್ತಮ ।
ತವಾಽಭೀಷ್ಟಂ ಕರಿಷ್ಯಾಮಿ ಕಿಂವಾ ಯಾಸ್ಯಾಮಿ ಸಂಕ್ಷಯಂ ॥ ೩ ॥
ಏವಮುಕ್ತ್ವಾ ಪರಂ ಕೋಪಂ ಕೃತ್ವೋಪರಿ ದಿವೌಕಸಾಂ ।
ಉವಾಚ ಚ ತತೋ ರೌದ್ರಂ ಪ್ರತ್ಯಕ್ಷಂ ತಸ್ಯ ಭೂಪತೇಃ ॥ ೪ ॥
ಯಥಾ ಮಯಾ ದ್ವಿಜತ್ವಂ ಹಿ ಸ್ವಯಮೇವಾರ್ಜಿತಂ ಬಲಾತ್ ।
ತಥಾ ಸೃಷ್ಟಿಂ ಕರಿಷ್ಯಾಮಿ ಸ್ವಕೀಯಾಂ ನಾಽತ್ರಸಂಶಯಃ ॥ ೫ ॥

---

## ಕನ್ನಡದ ಅನುವಾದ

### ವಿಶ್ವಾಮಿತ್ರವರಪ್ರಾಪ್ತಿವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಶೌನಕಾದಿಗಳಿರಾ, ಈ ಪ್ರಕಾರವಾಗಿ ನುಡಿದ ಆ ತ್ರಿಶಂಕುವಿನ ಮಾತುಗಳನ್ನು ಕೇಳಿ ಮುನಿಪುಂಗವನಾದ ವಿಶ್ವಾಮಿತ್ರನು ಸ್ವಲ್ಪ ನಾಚಿ ಅವನನ್ನು ಕುರಿತು ಹೇಳಿದನು.

೨. "ಓ ಮಹೀಪಾಲ, ಈ ವಿಷಯದಲ್ಲಿ ನೀನಾವ ಚಿಂತೆಯನ್ನೂ ಮಾಡಬೇಡ. ಇದೇ ಶರೀರದಿಂದಲೇ ನಿನ್ನನ್ನು ಸ್ವರ್ಗಲೋಕಕ್ಕೆ ಕಳುಹಿಸುತ್ತೇನೆ.

೩. ಅಯ್ಯಾ ನೃಪಶ್ರೇಷ್ಠನೆ, ನಿನ್ನ ಸ್ವರ್ಗಪ್ರಾಪ್ತಿಗಾಗಿ ಯಾವ ಯಾವ ಕಾರ್ಯಗಳನ್ನು ಮಾಡಬೇಕೋ ಅವನ್ನು ನಾನು ಮಾಡಲುಳ್ಳವನು. ನಾನು ನಿನ್ನ ಅಭೀಷ್ಟವನ್ನು ನೆರವೇರಿಸುತ್ತೇನೆ; ಇಲ್ಲವೆ, ನಾಶವನ್ನಾದರೂ ಪಡೆಯುತ್ತೇನೆ."

೪. ಈ ಪ್ರಕಾರವಾಗಿ ನುಡಿದು ಆ ವಿಶ್ವಾಮಿತ್ರಮುನಿಯು ದೇವತೆಗಳ ಮೇಲೆ ಕೋಪಗೊಂಡು, ತ್ರಿಶಂಕುರಾಜನ ಸಮಕ್ಷಮದಲ್ಲಿಯೇ ಬಹು ಭಯಂಕರವಾಗಿ ಹೀಗೆ ನುಡಿದನು.

೫. "ನಾನು ಯಾರೊಬ್ಬರ ಸಹಾಯವೂ ಇಲ್ಲದೆ ಕೇವಲ ನನ್ನ ತಪೋಬಲದಿಂದಲೆ ವಿಪ್ರತ್ವವನ್ನು ಹೇಗೆ ಪಡೆದೆನೋ ಹಾಗೆಯೇ ಈಗ ನನ್ನದೇ ಆದ ಸೃಷ್ಟಿಯನ್ನೂ ಮಾಡುತ್ತೇನೆ. ಇದರಲ್ಲಿ ಸಂಶಯವಿಲ್ಲ."

ತತಸ್ತಂ ಸ ಸಮಾಲೋಕ್ಯ ಶಂಕರಂ ಶಶಿಶೇಖರಂ ।
ಪ್ರಣಮ್ಯ ವಿಧಿವದ್ಭಕ್ತ್ಯಾ ಸ್ತುತಿಂ ಚಕ್ರೇ ಮಹಾಮುನಿಃ ॥ ೬ ॥
ವಿಶ್ವಾಮಿತ್ರ ಉವಾಚ :—
ಜಯದೇವ ಜಯಾಽಚಿಂತ್ಯ ಜಯಪಾರ್ವತಿವಲ್ಲಭ ।
ಜಯಕೃಷ್ಣ ಜಗನ್ನಾಥ ಜಯಕೃಷ್ಣ ಜಗದ್ಗುರೋ ॥ ೭ ॥
ಜಯಾಽಚಿಂತ್ಯ ಜಯಾಮೇಯ ಜಯಾಽನಂತ ಜಯಾಽಚ್ಯುತ ।
ಜಯಾಽಮರ ಜಯಾಽಜೇಯ ಜಯಾಽವ್ಯಯ ಸುರೇಶ್ವರ ॥ ೮ ॥
ಜಯ ಸರ್ವಗ ಸರ್ವೇಶ ಜಯ ಸರ್ವಸುರಾಶ್ರಯ ।
ಜಯ ಸರ್ವಜನಧ್ಯೇಯ ಜಯಸರ್ವಾಽಘ ನಾಶನ ॥ ೯ ॥
ತ್ವಂ ಧಾತಾಚ ವಿಧಾತಾಚ ತ್ವಂ ಕರ್ತಾ ತ್ವಂಚ ರಕ್ಷಕಃ ।
ಚತುರ್ವಿಧಸ್ಯ ದೇವೇಶ ಭೂತಗ್ರಾಮಸ್ಯ ಶಂಕರ ॥ ೧೦ ॥
ಯಥಾ ತಿಲಸ್ಥಿತಂ ತೈಲಂ ಯಥಾ ದಧಿಗತಂ ಘೃತಂ ।
ತಥೈವಾಧಿಷ್ಠಿತಂ ಕೃತ್ಸ್ನಂ ತ್ವಯಾ ಗುಪ್ತೇನ ವೈ ಜಗತ್ ॥ ೧೧ ॥

---

೬. ತರುವಾಯ ಅವನು ಶಶಿಮೌಳಿಯಾದ ಶಂಕರನನ್ನು ಕಂಡು ವಿಧಿವತ್ತಾಗಿಯೂ ಭಕ್ತಿಯಿಂದಲೂ ಆತನನ್ನು ನಮಸ್ಕರಿಸಿ ಈ ರೀತಿ ಸ್ತುತಿಸಿದನು.

೭. ವಿಶ್ವಾಮಿತ್ರನು ಹೇಳುತ್ತಾನೆ:—"ದೇವ, ಇಂತೆಂದು ಯೋಚಿಸಲೂ ಆಗದ ಚಿತ್ಸ್ವರೂಪವುಳ್ಳ ನಿನಗೆ ಜಯಜಯ. ಓ ಪಾರ್ವತೀವಲ್ಲಭನೆ, ನೀನೇ ಕೃಷ್ಣನೂ, ಜಗನ್ನಾಥನೂ, ಜಗದ್ಗುರುವೂ ಆಗಿರುವೆ. ಭಕ್ತರ ಉದ್ಧಾರಕ್ಕಾಗಿ ಜಯಶೀಲನಾಗು.

೮. ಅಚಿಂತ್ಯನೂ, ಅಮೇಯನೂ, ಅನಂತನೂ, ಅಚ್ಯುತನೂ, ಅಮರ ಶ್ರೇಷ್ಠನೂ, ಅಜೇಯನೂ, ಅವ್ಯಯನೂ, ಸುರೇಶ್ವರೇಶ್ವರನೂ ಆದ ಓ ಸ್ವಾಮಿಯೆ! ಜಯಿಸು, ಜಯಿಸು.

೯. ಸರ್ವವ್ಯಾಪಿಯಾಗಿ, ಸರ್ವಕ್ಕೂ ಈಶ್ವರನೆನಿಸಿ, ಸರ್ವಸುರರಿಗೂ ಆಶ್ರಯವಾಗಿ, ಸರ್ವಜನರಿಗೂ ಧ್ಯಾನಕರ್ಮಕ್ಕೆ ಲಕ್ಷ್ಯನಾಗಿ, ಸರ್ವ ಪಾಪಗಳನ್ನೂ ಕಳೆಯುವವನಾಗಿರುವ ಓ ಪರಮೇಶ್ವರ, ಜಯತು ಜಯತು.

೧೦. ದೇವ, ನೀನೇ ಜಗದ್ಭರಣಶೀಲನೂ, ಚತುರ್ಮುಖ ಬ್ರಹ್ಮನೂ, ಆ ಬ್ರಹ್ಮನಿಗೂ ಬ್ರಹ್ಮನಾಗಿ ಜಗತ್ಕರ್ತೃವೂ, ಚತುರ್ವಿಧ ಭೂತಗಳ ಸೃಷ್ಟಿ ಸ್ಥಿತಿ ಲಯಕಾರಕನೂ, ನಂಬಿದ ಭಕ್ತರಿಗೆ ಅಭೀಷ್ಟ ಪ್ರಧಾನದಿಂದ ಮನಸ್ಸಂತೋಷವನ್ನುಂಟುಮಾಡುವವನೂ ಆದವನು.

೧೧. ತಿಲದಲ್ಲಿರುವ ತೈಲದಂತೆಯೂ, ಮೊಸರಿನಲ್ಲಿರುವ ತುಪ್ಪದಂತೆಯೂ ಬಹು ಗೋಪ್ಯವಾಗಿರುವ ನೀನು ಈ ಜಗತ್ತೆಲ್ಲವನ್ನೂ ಅಧಿಷ್ಠಿಸಿರುತ್ತೀಯೆ.

ತ್ವಂ ಬ್ರಹ್ಮಾ ತ್ವಂ ಹೃಷೀಕೇಶಸ್ತ್ವಂ ಶಕ್ರಸ್ತ್ವಂ ಹುತಾಶನಃ ।
ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮಿಂದುಸ್ತ್ವಂ ದಿವಾಕರಃ ॥ ೧೨ ॥
ಅಥವಾ ಬಹುನೋಕ್ತೇನ ಕಿಂ ಸ್ತವೇನ ತವ ಪ್ರಭೋ ।
ಸಮಾಸಾದೇವ ವಕ್ಷ್ಯಾಮಿ ವಿಭೂತಿಂ ಶ್ರುತಿನೋದಿತಾಂ ॥ ೧೩ ॥
ಯತ್ಕಿಂಚಿತ್ರಿಷು ಲೋಕೇಷು ಸ್ಥಾವರಂ ಜಂಗಮಂ ವಿಭೋ ।
ತತ್ಸರ್ವಂ ಭವತಾ ವ್ಯಾಪ್ತಂ ಕಾಷ್ಠಂ ಹವ್ಯಭುಜಾ ಯಥಾ ॥ ೧೪ ॥

ಶ್ರೀ ಭಗವಾನುವಾಚ :—

ಪರಿತುಷ್ಟೋಽಸ್ಮಿ ಭದ್ರಂತೇ ವರಂ ಪ್ರಾರ್ಥಯ ಸನ್ಮುನೇ ।
ಯತ್ತೇ ಹೃದಿ ಸ್ಥಿತಂ ನಿತ್ಯಂ ಸರ್ವಂ ದಾಸ್ಯಾಮ್ಯಸಂಶಯಂ ॥ ೧೫ ॥

ವಿಶ್ವಾಮಿತ್ರ ಉವಾಚ :—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ತನ್ಮೇ ಸ್ಯಾತ್ಸೃಷ್ಟಿಮಾಹಾತ್ಮ್ಯಂ ತ್ವತ್ಪ್ರಸಾದಾನ್ಮಹೇಶ್ವರ ॥ ೧೬ ॥

---

೧೨. ಬ್ರಹ್ಮನೂ ನೀನೇ, ವಿಷ್ಣುವೂ ನೀನೇ, ಇಂದ್ರನೂ ನೀನೇ, ಅಗ್ನಿಯೂ ನೀನೇ, ಯಜ್ಞವೂ ವಷಟ್ಕಾರವೂ ನೀನೇ ಆಗಿರುವೆ. ಸೂರ್ಯ ಚಂದ್ರರೂ ನೀನಲ್ಲದೆ ಬೇರಾರೂ ಅಲ್ಲ.

೧೩. ಅಥವಾ ನಿನ್ನ ವಿಷಯವಾಗಿ ಹೆಚ್ಚಿಗೆ ಹೇಳುವುದರಿಂದಾಗಲಿ ನಿನ್ನನ್ನು ಕುರಿತು ಬಹಳವಾಗಿ ಸ್ತುತಿಸುವುದರಿಂದಾಗಲಿ ನಿನಗಾಗಬೇಕಾದು ದೇನು? ಶ್ರುತಿಪ್ರತಿಪಾದಿತನಾದ ನಿನ್ನ ಪರಮೈಶ್ವರ್ಯವನ್ನೂ, ಮಾಹಾತ್ಮ್ಯ ವನ್ನೂ ಸಂಗ್ರಹವಾಗಿ ಅರಿಕೆಮಾಡುತ್ತೇನೆ.

೧೪. ಈ ಮೂರುಲೋಕಗಳಲ್ಲಿ ಜಂಗಮಸ್ಥಾವರಗಳಾವುವುಂಟೋ ಅವು ಗಳಲ್ಲೆಲ್ಲ ವಿಭುವಾದ ನೀನು ಕಟ್ಟಿಗೆಯಲ್ಲಿ ಬೆಂಕಿಯು ಹೇಗೋ ಹಾಗೆ ನಿಗೂಢ ವಾಗಿ ವ್ಯಾಪಿಸಿಕೊಂಡಿರುತ್ತೀಯೆ."

೧೫. ಶ್ರೀ ಭಗವಂತನು ಹೇಳುತ್ತಾನೆ:—ಅಯ್ಯಾ ಮುನಿಯೆ, ನಿನ್ನ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವನ್ನು ವರವನ್ನಾಗಿ ಕೇಳಿಕೊ. ಅದೆಲ್ಲವನ್ನೂ ನಿಸ್ಸಂಶಯವಾಗಿ ನಿನಗೆ ಕೊಡುತ್ತೇನೆ.

೧೬. ವಿಶ್ವಾಮಿತ್ರನು ಹೇಳುತ್ತಾನೆ:—ದೇವೇಶ್ವರಾ, ನೀನು ನನ್ನ ವಿಷಯ ದಲ್ಲಿ ಸಂತೋಷಗೊಂಡಿರುವುದಾದರೆ, ವರವನ್ನು ಕೊಡುವುದಾದರೆ, ನಿನ್ನ ಪ್ರಸಾದ ದಿಂದ ನನಗೆ ಸೃಷ್ಟಿಮಾಹಾತ್ಮ್ಯವುಂಟಾಗಲಿ.

ಏವಮಸ್ತ್ವಿತಿ ತಂಚೋಕ್ತ್ವಾ ಭಗವಾನ್ವೃಷಭಧ್ವಜಃ ।
ಸರ್ವೈರ್ಗಣೈಃ ಸಮಾಯುಕ್ತ ಸ್ತತಶ್ಚಾದರ್ಶನಂ ಗತಃ ॥ ೧೭ ॥
ವಿಶ್ವಾಮಿತ್ರೋಽಪಿ ತತ್ರೈವ ಸ್ಥಿತೋ ಧ್ಯಾನಪರಾಯಣಃ ।
ಚಕ್ರೇ ಚತುರ್ವಿಧಾಂ ಸೃಷ್ಟಿಂ ಸ್ಪರ್ಧಯಾ ಹಂಸಗಾಮಿನಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಶ್ವಾಮಿತ್ರವರಪ್ರಾಪ್ತಿವರ್ಣನಂ"
ನಾಮ ಷಷ್ಠೋಽಧ್ಯಾಯಃ

---

೧೭. ಎಲೈ ಮುನಿಗಳಿರಾ, ವಿಶ್ವಾಮಿತ್ರನು ಈ ರೀತಿ ವರವನ್ನು ಕೇಳಲು ಭಗವಾನ್ ವೃಷಭಧ್ವಜನು ಹಾಗೆಯೇ ಆಗಲೆಂದು ಹೇಳಿ, ತನ್ನ ಗಣಗಳೊಡನೆ ಅಲ್ಲಿಯೇ ಅಂತರ್ಧಾನನಾದನು.

೧೮. ವಿಶ್ವಾಮಿತ್ರನಾದರೋ ಅಲ್ಲಿಯೇ ನಿಂತು ಧ್ಯಾನಪರಾಯಣನಾಗಿ ಬ್ರಹ್ಮನ ಮೇಲಿನ ಹುರುಪಿನಿಂದ ಚತುರ್ವಿಧ ಭೂತಗಳ ಸೃಷ್ಟಿಯನ್ನು ಮಾಡ ತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಶ್ವಾಮಿತ್ರವರಪ್ರಾಪ್ತಿವರ್ಣನ"ವೆಂಬ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ತ್ರಿಶಂಕುಸ್ವರ್ಗಪ್ರಾಪ್ತಿವರ್ಣನಂ

ಸೂತ ಉವಾಚ :—

ತೇನೈವಂ ಧ್ಯಾಯಮಾನೇನ ಜಲಮಾವಿಶ್ಯ ಕಾಮ್ಯಯಾ ।
ಸೃಷ್ಟಂ ಸಂಧ್ಯಾದ್ವಯಂ ತಚ್ಚ ದೃಶ್ಯತೇಽದ್ಯಾಪಿ ವೈ ದ್ವಿಜಾಃ ॥ ೧ ॥
ತತೋ ದೇವಗಣಾಃ ಸರ್ವೇ ಸೃಷ್ಟಾಸ್ತೇನ ಮಹಾತ್ಮನಾ ।
ವೈಮಾನಿಕಾಶ್ಚ ಯೇ ಕೇಚಿನ್ನಕ್ಷತ್ರಾಣಿ ಗ್ರಹಾಸ್ತಥಾ ॥ ೨ ॥
ಮನುಷ್ಯೋರಗರಕ್ಷಾಂಸಿ ವೀರುಧೋ ವೃಕ್ಷಸಂಯುತಾಃ ।
ಸಪ್ತರ್ಷಯೋ ಧ್ರುವಾದ್ಯಾಶ್ಚ ಯೇಚಾಽನ್ಯೇ ಗಗನೇಚರಾಃ ॥ ೩ ॥
ಏವಂಹಿ ಭಗವಾನ್ ಸೃಷ್ಟ್ವಾ ವಿಶ್ವಾಮಿತ್ರಃ ಸಮನ್ಯುಮಾನ್ ।
ಸ್ವಕೀಯೇಷ್ವಥ ಕೃತ್ಯೇಷು ಯೋಜಯಾಮಾಸ ತಾಂಸ್ತತಃ ॥ ೪ ॥
ಏತಸ್ಮಿನ್ನೇವ ಕಾಲೇತು ದ್ವೌ ಸೂರ್ಯೌ ಯುಗಪದ್ದಿವಿ ।
ಉದಿತೌ ರಾತ್ರಿನಾಥೌ ಚ ಜಾತಾಶ್ಚ ದ್ವಿಗುಣಾ ಗ್ರಹಾಃ ।
ದ್ವಿಗುಣಾನಿ ಚ ಭಾನ್ಯೇವ ಸಹ ಸಪ್ತರ್ಷಿಭಿರ್ದ್ವಿಜಾಃ ॥ ೫ ॥

---

### ಕನ್ನಡದ ಅನುವಾದ

#### ತ್ರಿಶಂಕುಸ್ವರ್ಗಪ್ರಾಪ್ತಿವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಆ ಮುನಿಯು ಧ್ಯಾನಿಸುತ್ತಲೇ ಸೃಷ್ಟಿ ಕಾಮನೆಯಿಂದ ಜಲಪ್ರವೇಶಮಾಡಿ ಇಂದಿಗೂ ಕಾಣುತ್ತಿರುವ ಸಂಧ್ಯಾದ್ವಯ ವನ್ನು ಸೃಜಿಸಿದನು.

೨. ತರುವಾಯ ಆ ಮಹಾತ್ಮನು ಎಲ್ಲ ದೇವಗಣಗಳನ್ನೂ, ವೈಮಾನಿಕ ರನ್ನೂ, ಕೆಲವು ನಕ್ಷತ್ರಗಳನ್ನೂ, ಗ್ರಹಗಳನ್ನೂ ನಿರ್ಮಾಣಮಾಡಿದನು.

೩–೪. ಮನುಷ್ಯ, ಉರಗ, ರಕ್ಷಸ್ಸುಗಳು, ಮರಗಳೊಡಗೂಡಿದ ಲತೆಗಳು, ಗಗನಸಂಚಾರಿಗಳಾದ ಸಪ್ತರ್ಷಿಗಳು, ಧ್ರುವಾದಿಗಳು ಮೊದಲಾದುವುಗಳನ್ನು ನಿರ್ಮಿಸಿದನು. ಹೀಗೆ ಷಡ್ಗುಣೈಶ್ವರ್ಯಸಂಪನ್ನನಾದ ವಿಶ್ವಾಮಿತ್ರನು ಕೋಪ ಗೊಂಡು ಎಲ್ಲವನ್ನೂ ಸೃಷ್ಟಿಮಾಡಿ ಅವುಗಳೆಲ್ಲವನ್ನೂ ಆಯಾಯ ಕಾರ್ಯಗಳಲ್ಲಿ ನಿಯೋಜಿಸಿದನು.

೫. ಇದೇ ಸಮಯದಲ್ಲಿಯೇ ಹಗಲಿನಲ್ಲಿ ಏಕಕಾಲದಲ್ಲಿಯೇ ಸೂರ್ಯದ್ವಯ ಗಳೂ, ರಾತ್ರಿಯ ಕಾಲದಲ್ಲಿ ಅಂತೆಯೇ ಚಂದ್ರದ್ವಯಗಳೂ, ಇಮ್ಮಡಿಯಾದ ಗ್ರಹ ಗಳೂ, ನಕ್ಷತ್ರಗಳೂ, ಜ್ಯೋತಿರ್ಮಯರಾದ ಸಪ್ತರ್ಷಿಗಳೊಡನೆ ಜನಿಸಿದುವು.

ಏವಂ ನಿಯತಿ ತೇ ಸರ್ವೇ ಸ್ಪರ್ಧಮಾನಾಃ ಪರಸ್ಪರಂ ।
ದೃಶ್ಯಂತೇ ದ್ವಿಗುಣೀಭೂತಾ ಜನವಿಭ್ರಮಕಾರಕಾಃ ॥ ೬ ॥
ಏತಸ್ಮಿನ್ನಂತರೇ ಶಕ್ರಃ ಸಹ ಸರ್ವೈರ್ದಿವಾಲಯೈಃ ।
ಜಗಾಮ ತತ್ರ ಯತ್ರಾಸ್ತೇ ಭಗವಾನ್ ಕಮಲಾಸನಃ ॥ ೭ ॥
ಪ್ರೋವಾಚಾಥ ಪ್ರಣಮ್ಯೋಚ್ಚೈಃ ಕೃತಾಂಜಲಿಪುಟಃ ಸ್ಥಿತಃ ।
ಸ್ತುತಿಂ ಕೃತ್ವಾ ಸುರೈಃ ಸಾರ್ಧಂ ವೇದೋಕ್ತೈಸ್ತವನೈರ್ದ್ವಿಜಾಃ ॥ ೮ ॥
ಸೃಷ್ಟಿಃಕೃತಾ ಸುರಶ್ರೇಷ್ಠ ವಿಶ್ವಾಮಿತ್ರೇಣ ಸಾಂಪ್ರತಂ ।
ಮನುಷ್ಯ ಯಕ್ಷ ಸರ್ಪಾಣಾಂ ದೇವಗಂಧರ್ವ ರಕ್ಷಸಾಂ ॥ ೯ ॥
ತಸ್ಮಾದ್ವಾರಯ ತಂ ಗತ್ವಾ ಸ್ವಯಮೇವ ಪಿತಾಮಹ ।
ಯಾವನ್ನ ವ್ಯಾಪ್ಯತೇ ಸರ್ವಂ ತತ್ಸೃಷ್ಟ್ಯೇದಂ ಚರಾಚರಂ ॥ ೧೦ ॥
ತಸ್ಯ ತದ್ವಚನಂ ಶ್ರುತ್ವಾ ತೇನೈವ ಸಹಿತೋ ವಿಧಿಃ ।
ಗತ್ವೋವಾಚ ಜಗನ್ಮಿತ್ರಂ ವಿಶ್ವಾಮಿತ್ರಂ ಮುನೀಶ್ವರಂ ॥ ೧೧ ॥
ನಿವೃತ್ತಿಂ ಕುರು ವಿಪ್ರರ್ಷೇ ಸಾಂಪ್ರತಂ ವಚನಾನ್ಮಮ ।
ಸೃಷ್ಟ್ಯೈರ್ಯಾವನ್ನ ನಶ್ಯಂತಿ ಸರ್ವೇ ದೇವಾಃ ಸವಾಸವಾಃ ॥ ೧೨ ॥

---

೬. ಹೀಗೆ ಆಕಾಶದಲ್ಲಿ ಈ ಸೂರ್ಯ ಚಂದ್ರರೂ ಗ್ರಹನಕ್ಷತ್ರಗಳೂ ದ್ವಿಗುಣೀಭೂತವಾಗಿ ಎಲ್ಲ ಜನರಿಗೂ ಭ್ರಾಂತಿಯುಂಟುಮಾಡತೊಡಗಿದುವು.

೭. ಇದೇ ಸಮಯದಲ್ಲಿಯೇ ದೇವೇಂದ್ರನು ಸಮಸ್ತ ದೇವತಾಸಮೂಹಗಳಿಂದಲೂ ಕೂಡಿದವನಾಗಿ ಭಗವಾನ್ ಕಮಲಾಸನನಿದ್ದೆಡೆಗೈತಂದನು.

೮. ಆತನಿಗೆ ನಮಸ್ಕಾರಮಾಡಿ, ಬದ್ಧಾಂಜಲಿಪುಟನಾಗಿ ನಿಂತು, ವೇದೋಕ್ತ ಸ್ತವಗಳಿಂದ ದೇವತೆಗಳೊಡಗೂಡಿ ಆತನನ್ನು ಸ್ತುತಿಸಿ ಇಂತೆಂದನು.

೯–೧೦. "ಎಲೈ ಸುರಶ್ರೇಷ್ಠನೆ, ಈಗ ವಿಶ್ವಾಮಿತ್ರಮುನಿಯು ದೇವ ಗಂಧರ್ವ ಯಕ್ಷ ರಾಕ್ಷಸ ಮನುಷ್ಯರೆಲ್ಲರನ್ನೂ ಸೃಷ್ಟಿಮಾಡಿರುತ್ತಾನೆ. ಆದುದರಿಂದ ಆತನ ಸೃಷ್ಟಿಯಿಂದಲೇ ಈ ಚರಾಚರ ಜಗತ್ತೆಲ್ಲವೂ ವ್ಯಾಪ್ತವಾಗುವಷ್ಟರಲ್ಲಿಯೇ ನೀನೇ ಪ್ರತ್ಯಕ್ಷವಾಗಿ ಹೋಗಿ ಅವನನ್ನು ನಿವಾರಿಸುವವನಾಗು."

೧೧–೧೨. ಎಲೈ ಮುನಿಗಳಿರಾ, ಮಹೇಂದ್ರನ ಈ ಮಾತುಗಳನ್ನು ಕೇಳಿ ಅವನೊಡಗೂಡಿಯೇ ಕಮಲಾಸನನು ವಿಶ್ವಾಮಿತ್ರನಿದ್ದೆಡೆಗೆ ಬಂದು ಜಗನ್ಮಿತ್ರನಾದ ಆತನನ್ನು ಕುರಿತು, ಅಯ್ಯಾ ವಿಪ್ರರ್ಷಿಯೆ, ನಿನ್ನ ಸೃಷ್ಟಿಯಿಂದ ಮಹೇಂದ್ರಸಹಿತರಾದ ದೇವತೆಗಳೆಲ್ಲರೂ ನಾಶವಾಗುವುದರೊಳಗಾಗಿ ನೀನು ಈ ಸೃಷ್ಟಿಕಾರ್ಯವನ್ನು ನನ್ನ ಮಾತಿನ ಮೇಲಣ ಗೌರವದಿಂದ ನಿಲ್ಲಿಸುವವನಾಗು" ಎಂದು ಹೇಳಿದನು.

ವಿಶ್ವಾಮಿತ್ರ ಉವಾಚ :—
ಅನೇನೈವ ಶರೀರೇಣ ತ್ರಿಶಂಕುರ್ನೃಪಸತ್ತಮಃ ।
ಯದಿ ಗಚ್ಛತಿ ತೇ ಲೋಕೇ ತತ್ಸೃಷ್ಟಿಂ ನಕರೋಮ್ಯಹಂ ॥ ೧೩ ॥
ಬ್ರಹ್ಮೋವಾಚ :—
ಏಷ ಗಚ್ಛತು ಭೂಪಾಲೋ ಮಯಾಸಹ ತ್ರಿವಿಷ್ಟಪಂ ।
ಅನೇನೈವ ಶರೀರೇಣ ತ್ವತ್ಪ್ರಸಾದಾನ್ಮುನೀಶ್ವರ ॥ ೧೪ ॥
ವಿರಾಮಂ ಕುರು ಸೃಷ್ಟೇಸ್ತ್ವಂ ನೈತದನ್ಯಃ ಕರಿಷ್ಯತಿ ।
ನ ಕೃತಂ ಕೇನಚಿಲ್ಲೋಕೇ ತತ್ಕರ್ಮ ಭವತಾ ಕೃತಂ ॥ ೧೫ ॥
ವಿಶ್ವಾಮಿತ್ರ ಉವಾಚ :—
ಯನ್ಮಯಾ ಕೋಪಯುಕ್ತೇನ ಕೃತೇಯಂ ಸೃಷ್ಟಿರಬ್ಜಜ ।
ತತ್ಕ್ಷಂತವ್ಯಂ ತ್ವಯಾ ದೇವ ಸರ್ವಲೋಕ ಪಿತಾಮಹ ॥ ೧೬ ॥
ತಥಾಽಕ್ಷಯಾಽಸ್ತು ಮೇ ದೇವ ಸೃಷ್ಟಿಸ್ತವ ಪ್ರಸಾದತಃ ।
ಯಾ ಕೃತಾ ನ ಕರಿಷ್ಯಾಮಿ ಭೂಯೋಽನ್ಯಾಂ ಪದ್ಮಸಂಭವ ॥ ೧೭ ॥
ಬ್ರಹ್ಮೋವಾಚ :—
ಭವಿಷ್ಯತಿ ಧ್ರುವಾ ಸೃಷ್ಟಿರ್ಯಾ ಭವತಾ ಕೃತಾ ।
ಪರಂ ಸರ್ವೇಷು ಕೃತ್ಯೇಷು ಯಜ್ಞಾರ್ಹಾ ನಭವಿಷ್ಯತಿ ॥ ೧೮ ॥

---

೧೩. ವಿಶ್ವಾಮಿತ್ರನು ಹೇಳುತ್ತಾನೆ :—"ಎಲೈ ಬ್ರಹ್ಮದೇವನೆ, ನೃಪಶ್ರೇಷ್ಠನಾದ ಈ ತ್ರಿಶಂಕುವು ಈ ಶರೀರದಿಂದಲೇ ನಿನ್ನ ಲೋಕಕ್ಕೆ ಹೋಗುವುದಾದರೆ ಮಾತ್ರ ನಾನು ಈ ಸೃಷ್ಟಿಯನ್ನು ಮುಂದುವರಿಸುವುದಿಲ್ಲ."

೧೪–೧೫. ಬ್ರಹ್ಮನು ಹೇಳುತ್ತಾನೆ:—"ಎಲೈ ಮುನೀಶ್ವರನೆ, ನಿನ್ನ ಅನುಗ್ರಹದಿಂದ ಈ ಭೂಪಾಲನು ನನ್ನೊಡನೆ ಸಶರೀರನಾಗಿಯೇ ತ್ರಿವಿಷ್ಟಪಕ್ಕೆ ಹೊರಡಲಿ. ಇನ್ನು ನೀನು ಈ ಸೃಷ್ಟಿಕಾರ್ಯದಿಂದ ವಿರಮಿಸು. ಇಂತಹ ಕಾರ್ಯವನ್ನು ಮುಂದೆ ಯಾರೂ ಮಾಡುವುದಿಲ್ಲ. ಹಿಂದೆ ಯಾರೂ ಮಾಡಲಿಲ್ಲ. ಅಂಥದನ್ನು ನೀನು ಮಾತ್ರ ಮಾಡಿದೆ.

೧೬–೧೭. ವಿಶ್ವಾಮಿತ್ರನು ಹೇಳುತ್ತಾನೆ:—ಸಮಸ್ತ ಲೋಕಗಳಿಗೂ ಪಿತಾಮಹನಾದ ಓ ಕಮಲಾಸನನೆ, ಕೋಪಯುಕ್ತನಾಗಿ ನಾನು ಮಾಡಿರುವ ಈ ಸೃಷ್ಟಿಯನ್ನು ಮನ್ನಿಸು. ಓ ದೇವದೇವನೆ, ನಿನ್ನ ಪ್ರಸಾದದಿಂದ ಈಗ ನಾನು ಮಾಡಿರುವ ಸೃಷ್ಟಿಯೆಲ್ಲವೂ ಅಕ್ಷಯವಾಗಿರಲಿ. ಇನ್ನು ಮುಂದೆ ನಾನು ಯಾವ ಸೃಷ್ಟಿಯನ್ನೂ ಮಾಡುವುದಿಲ್ಲ.

೧೮. ಬ್ರಹ್ಮನು ಹೇಳುತ್ತಾನೆ:—ಅಯ್ಯಾ ವಿಪ್ರನೆ, ನೀನು ಮಾಡಿರುವ ಈ ಸೃಷ್ಟಿಯೆಲ್ಲವೂ ಅಕ್ಷಯವಾಗಿಯೇ ಇರುತ್ತದೆ. ಆದರೆ, ನಿನ್ನಿಂದ ಸೃಷ್ಟರಾದ ದೇವತೆಗಳಿಗೆ ಯಜ್ಞಾದಿ ಕಾರ್ಯಗಳಲ್ಲಿ ಹವಿರ್ಭಾಗವಿರುವುದಿಲ್ಲ.

ಏವಮುಕ್ತ್ವಾ ಸಮಾದಾಯ ತ್ರಿಶಂಕುಂ ಪ್ರಪಿತಾಮಹಃ ।
ಬ್ರಹ್ಮಲೋಕಂ ಗತೋ ಹೃಷ್ಟೋ ಮುನಿಸ್ತತ್ರೈವ ಸಂಸ್ಥಿತಃ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತ್ರಿಶಂಕುಸ್ವರ್ಗಪ್ರಾಪ್ತಿವರ್ಣನಂ"
ನಾಮ ಸಪ್ತಮೋಽಧ್ಯಾಯಃ

---

೧೯. ಎಲೈ ವಿಪ್ರರೆ, ಪಿತಾಮಹನು ವಿಶ್ವಾಮಿತ್ರನಿಗೆ ಈ ರೀತಿ ಹೇಳಿ ಅನುಗ್ರಹವನ್ನು ಮಾಡಿದ ತರುವಾಯ ತ್ರಿಶಂಕುವನ್ನು ಕರೆದುಕೊಂಡು ತನ್ನ ಲೋಕಕ್ಕೆ ಹೊರಟುಹೋದನು. ಆ ಮುನಿಪುಂಗವನಾದರೋ ಹಾಟಕೇಶ್ವರ ಕ್ಷೇತ್ರದಲ್ಲಿಯೇ ನಿಂತನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತ್ರಿಶಂಕುಸ್ವರ್ಗಪ್ರಾಪ್ತಿವರ್ಣನ"ವೆಂಬ
ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ವೃತ್ರವಧವರ್ಣನಂ

ಸೂತ ಉವಾಚ :—

ಏವಂ ಸ್ವರ್ಗಮನುಪ್ರಾಪ್ತೇ ತ್ರಿಶಂಕೌ ನೃಪಸತ್ತಮೇ ।
ಸಶರೀರೇ ದ್ವಿಜಶ್ರೇಷ್ಠಾ ವಿಶ್ವಾಮಿತ್ರಸಮುದ್ಯಮಾತ್ ॥ ೧ ॥
ತತ್ತೀರ್ಥಂ ಖ್ಯಾತಿಮಾಯಾತಂ ಸಮಸ್ತೇ ಭುವನತ್ರಯೇ ।
ತತಃ ಪ್ರಭೃತಿ ಲೋಕಾನಾಂ ಧರ್ಮಕಾಮಾರ್ಥಮೋಕ್ಷದಂ ॥ ೨ ॥
ಅಸ್ಪೃಷ್ಟಂ ಕಲಿದೋಷೇಣ ತಥಾಽನ್ಯೈರುಪಪಾತಕೈಃ ।
ಬ್ರಹ್ಮಹತ್ಯಾದಿಕೈಶ್ಚೈವ ತ್ರಿಪುರಾರೇಃ ಪ್ರಭಾವತಃ ॥ ೩ ॥
ಯಸ್ತತ್ರ ತ್ಯಜತಿ ಪ್ರಾಣಾಂಛ್ರದ್ಧಾಯುಕ್ತೇನ ಚೇತಸಾ ।
ಸ ಮೋಕ್ಷಮಾಪ್ನುಯಾನ್ಮರ್ತ್ಯೋ ಯದ್ಯಪಿ ಸ್ಯಾತ್ಸುಪಾಪಕೃತ್ ॥ ೪ ॥
ಕೃಮಿಪಕ್ಷಿಪತಂಗಾ ಯೇ ಪಶವಃ ಪಕ್ಷಿಣೋ ಮೃಗಾಃ ।
ತೇಽಪಿ ತತ್ರ ಮೃತಾ ಯಾಂತಿ ಶಿವಲೋಕಮಸಂಶಯಂ ॥ ೫ ॥

---

## ಕನ್ನಡದ ಅನುವಾದ

### ವೃತ್ರವಧವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ದ್ವಿಜಶ್ರೇಷ್ಠರೆ, ಮಹಾಮುನಿಯಾದ ವಿಶ್ವಾಮಿತ್ರನ ಉದ್ಯಮದ ಪ್ರಭಾವದಿಂದ ರಾಜಶ್ರೇಷ್ಠನಾದ ಆ ತ್ರಿಶಂಕುವು ಸಶರೀರನಾಗಿಯೇ ಸ್ವರ್ಗವನ್ನು ಸೇರಿದ ತರುವಾಯ ಆ ಪಾತಾಳಗಂಗಾತೀರ್ಥವು ಅದು ಮೊದಲುಗೊಂಡು ಜಗತ್ರಯ ನಿವಾಸಿಗಳಾದ ಸಮಸ್ತರಿಗೂ ಧರ್ಮಾರ್ಥ ಕಾಮ ಮೋಕ್ಷ ಪ್ರದಾಯಕವಾದ ಪುಣ್ಯತೀರ್ಥವಾಗಿ ಪ್ರಸಿದ್ಧಿಯನ್ನೈದಿತು.

೩. ಬ್ರಹ್ಮಹತ್ಯಾದಿ ಮಹಾಪಾತಕಗಳಿಂದಲೂ, ಇತರ ಉಪಪಾತಕಗಳಿಂದಲೂ, ಕಲಿದೋಷದಿಂದಲೂ ಆ ತೀರ್ಥವು ಈಗ ಪರಮೇಶ್ವರನ ಪ್ರಭಾವದಿಂದಲೇ ಅಸ್ಪೃಷ್ಟವಾಗಿದೆ.

೪. ಯಾವ ಮಾನವನು ಶ್ರದ್ಧಾಯುಕ್ತವಾದ ಮನಸ್ಸಿನಿಂದ ಈ ಹಾಟಕೇಶ್ವರ ಕ್ಷೇತ್ರದಲ್ಲಿ ಪ್ರಾಣಗಳನ್ನು ತ್ಯಜಿಸುತ್ತಾನೆಯೋ ಅವನು ಮಹಾಪಾಪಿಯಾದರೂ ಮೋಕ್ಷವನ್ನೇ ಪಡೆಯುತ್ತಾನೆ.

೫. ಹುಳುಹುಪ್ಪಟೆಗಳು, ಹಕ್ಕಿಗಳು, ಪಶುಗಳು, ಮೃಗಗಳು ಈ ಕ್ಷೇತ್ರದಲ್ಲಿ ಮೃತಿಹೊಂದಿದುವಾದರೆ ನಿಸ್ಸಂಶಯವಾಗಿಯೂ ಶಿವಲೋಕವನ್ನೈದುತ್ತವೆ.

ಸ್ನಾನಂ ಯೇ ತತ್ರ ಕುರ್ವಂತಿ ಶ್ರದ್ಧಾಪೂತೇನ ಚೇತಸಾ ।
ತ್ರಿಶಂಕುರಿವ ತೇ ಸ್ವರ್ಗೇ ಪ್ರಯಾಂತ್ಯಪಿ ವಿಧರ್ಮಿಣಃ ॥ ೬ ॥
ಘರ್ಮಾರ್ತಾ ವಾ ತೃಷಾರ್ತಾ ವಾ ಯೇಽವಗಾಹಂತಿ ತಜ್ಜಲಂ ।
ತೇಽಪಿ ಯಾಂತಿ ಪರಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೭ ॥
ವಿಶ್ವಾಮಿತ್ರೋಽಪಿ ತದ್ದೃಷ್ಟ್ವಾ ತೀರ್ಥಮಾಹಾತ್ಮ್ಯಮುತ್ತಮಂ ।
ಕುರುಕ್ಷೇತ್ರಂ ಪರಿತ್ಯಜ್ಯ ತತ್ರ ವಾಸಮಥಾಽಕರೋತ್ ॥ ೮ ॥
ತಥಾಽನ್ಯೇ ಮುನಯಃ ಶಾಂತಾಸ್ತ್ಯಕ್ತ್ವಾ ತೀರ್ಥಾನಿ ದೂರತಃ ।
ತತ್ರಾಶ್ರಮಪದಂ ಕೃತ್ವಾ ಪ್ರಯಾತಾಃ ಪರಮಂ ಪದಂ ॥ ೯ ॥
ತಥೈವ ಮನುಜಾಃ ಸರ್ವೇ ದೂರಾದಾಗತ್ಯ ಸತ್ವರಾಃ ।
ತತ್ರ ಸ್ನಾತ್ವಾ ದಿವಂ ಯಾಂತಿ ಕೃತ್ವಾಪಾಪಶತಾನ್ಯಪಿ ॥ ೧೦ ॥
ಏವಂ ತಸ್ಯ ಪ್ರಭಾವೇಣ ತೀರ್ಥಸ್ಯ ದ್ವಿಜಸತ್ತಮಾಃ ।
ಗಚ್ಛಮಾನೇಷು ಲೋಕೇಷು ಸುಖೇನ ತ್ರಿದಿವಾಲಯಂ ॥ ೧೧ ॥

---

೬. ಎಲೈ ಮುನಿಗಳಿರಾ, ಈ ಪಾತಾಳಜಾಹ್ನವೀ ಜಲದಲ್ಲಿ ಯಾವ ಮಾನವರು ಶ್ರದ್ಧಾಪೂತವಾದ ಮನಸ್ಸಿನಿಂದ ಸ್ನಾನವನ್ನು ಮಾಡುತ್ತಾರೆಯೋ ಅವರು ಧರ್ಮಬಾಹಿರರಾದರೂ ನೀಚಕುಲೋತ್ಪನ್ನರಾದರೂ ವಿಧರ್ಮೀಯರೇ ಆದರೂ ತ್ರಿಶಂಕುವಿನಂತೆ ಸ್ವರ್ಗಕ್ಕೆ ಹೋಗುತ್ತಾರೆ.

೭. ಬಿಸಿಲಿನ ಬೇಗೆಯಿಂದ ಬೇಸತ್ತಾಗಲಿ, ಬಾಯಾರಿ ಬಳಲಿಯಾಗಲಿ, ಈ ತೀರ್ಥದಲ್ಲಿ ಜಲಸ್ಪರ್ಶವನ್ನು ಮಾಡಿದವರು ಸಹ ಮಹೇಶ್ವರನಿರುವವೆಡೆಗೆ ಸಾರುತ್ತಾರೆ.

೮. ಎಲೈ ದ್ವಿಜಪುಂಗವರೆ, ವಿಶ್ವಾಮಿತ್ರಮುನಿಯು ಇಂತಹ ಮಾಹಾತ್ಮ್ಯವುಳ್ಳ ಆ ಉತ್ತಮತೀರ್ಥವನ್ನು ಕಂಡು ತನ್ನ ವಾಸಭೂಮಿಯಾದ ಕುರುಕ್ಷೇತ್ರವನ್ನು ತೊರೆದು ಅಲ್ಲಿಯೇ ನೆಲಸಿದನು.

೯. ಅಂತೆಯೇ ಶಾಂತಚಿತ್ತರಾದ ಇತರ ಮುನಿಗಳೂ ಇತರ ಎಲ್ಲಾ ತೀರ್ಥಗಳನ್ನೂ ದೂರೀಕರಿಸಿ ಈ ಕ್ಷೇತ್ರಕ್ಕೇ ಬಂದು ಆಶ್ರಮಗಳನ್ನು ಕಟ್ಟಿಕೊಂಡು ನೆಲಸಿದ್ದು ಅಂತ್ಯದಲ್ಲಿ ಪರಮಪದವನ್ನು ಸೇರಿದರು.

೧೦. ಈ ರೀತಿಯಾಗಿಯೇ ಭೂಮಂಡಲದ ಎಲ್ಲ ಮಾನವರೂ ಬಹು ದೂರ ಪ್ರದೇಶಗಳಿಂದ ಈ ಕ್ಷೇತ್ರಕ್ಕೆ ತ್ವರೆಯಿಂದೈತಂದು ಜಾಹ್ನವೀತೀರ್ಥದಲ್ಲಿ ಮಿಂದು, ನೂರಾರು ಪಾಪಗಳನ್ನು ಮಾಡಿದ್ದರೂ ಪರಿಶುದ್ಧರಾಗಿ ದೇವಲೋಕಕ್ಕೆ ಹೋಗುತ್ತಿದ್ದರು.

೧೧–೧೪. ಎಲೈ ದ್ವಿಜಸತ್ತಮರೆ, ಈ ಪ್ರಕಾರವಾಗಿ ಈ ತೀರ್ಥದ ಪ್ರಭಾವದಿಂದ ಜನಗಳು ಯಾವ ಕಷ್ಟವೂ ಇಲ್ಲದೆ ಬಹು ಸುಲಭವಾಗಿ ತ್ರಿದಿವಾಲಯ

ಅಗ್ನಿಷ್ಟೋಮಾದಿಕಾಃ ಸರ್ವಾಃ ಸಮುಚ್ಛೇದಂ ಗತಾಃ ಕ್ರಿಯಾಃ ।
ನ ಕಶ್ಚಿದ್ಯಜತೇ ಮರ್ತ್ಯೋ ನ ವ್ರತಂ ಕುರುತೇ ನರಃ ॥ ೧೨ ॥
ನ ಯಚ್ಛತಿ ತಥಾ ದಾನಂ ನ ಚ ತೀರ್ಥಂ ನಿಷೇವತೇ ।
ಕೇವಲಂ ಕುರುತೇ ಸ್ನಾನಂ ಲಿಂಗಭೇದೇ ಸಮಾಹಿತಃ ॥ ೧೩ ॥
ತತಃ ಪ್ರಗಚ್ಛತಿ ಸ್ವರ್ಗಂ ವಿಮಾನವರಮಾಶ್ರಿತಃ ॥ ೧೪ ॥
ತತಃ ಪ್ರಪೂರಿತಾಃ ಸರ್ವೇ ಸ್ವರ್ಗಲೋಕಾ ನರೈರ್ದ್ವಿಜಾಃ ।
ಬ್ರಹ್ಮವಿಷ್ಣುಶಿವೇಂದ್ರಾದೀನ್ ಸ್ಪರ್ಧಮಾನೈಃ ಸುರೋತ್ತಮಾನ್ ॥ ೧೫ ॥
ತತೋ ದೇವಗಣಾಃ ಸರ್ವೇ ಯಜ್ಞಭಾಗವಿವರ್ಜಿತಾಃ ।
ಕೃಚ್ಛ್ರಂ ಪರಮನುಪ್ರಾಪ್ತಾ ಮಂತ್ರಂ ಚಕ್ರುಃ ಪರಸ್ಪರಂ ॥ ೧೬ ॥
ಹಾಟಕೇಶ್ವರಮಾಹಾತ್ಮ್ಯಾತ್ಸ್ವರ್ಗಲೋಕಂ ಪ್ರಪೂರಿತಃ ।
ಊರ್ಧ್ವಬಾಹುಭಿರಾಕೀರ್ಣಃ ಸ್ಪರ್ಧಮಾನೈಃ ಸಮಂತತಃ ॥ ೧೭ ॥
ತಸ್ಮಾತ್ತತ್ಕ್ರಿಯತಾಂ ಕರ್ಮ ಯೇನೋಚ್ಛೇದಂ ಪ್ರಗಚ್ಛತಿ ।
ತೀರ್ಥಮೇತದ್ಧರಾಪೃಷ್ಠೇ ಹಾಟಕೇಶ್ವರ ಸಂಜ್ಞಿತಂ ॥ ೧೮ ॥

---

ವನ್ನು ಕುರಿತು ಹೋಗುತ್ತಿರಲು ಭೂಲೋಕದಲ್ಲಿ ಅಗ್ನಿಷ್ಟೋಮಾದಿ ಸಕಲ ಯಜ್ಞಕ್ರಿಯೆಗಳೂ ನಿಂತುಹೋದುವು. ಯಾವ ಮಾನವನೂ ಯಜ್ಞವನ್ನು ಮಾಡುತ್ತಿರಲಿಲ್ಲ. ಯಾವನೂ ವ್ರತಗಳನ್ನು ಆಚರಿಸುತ್ತಿರಲಿಲ್ಲ. ಯಾವನೂ ಯಾರೊಬ್ಬರಿಗೂ ಏನನ್ನೂ ದಾನಮಾಡುತ್ತಿರಲಿಲ್ಲ. ಅಂತೆಯೇ ಪುಣ್ಯಕರಗಳಾದ ಇತರ ತೀರ್ಥಗಳನ್ನೂ ಸೇವಿಸುತ್ತಿರಲಿಲ್ಲ. ಕೇವಲವಾಗಿ, ಶಿವಲಿಂಗವನ್ನು ಉತ್‌ಕ್ಷೇಪಮಾಡಿದ ಸಮಯದಲ್ಲಿ ಉದ್ಭವಿಸಿದ ಪಾತಾಳಜಾಹ್ನವೀತೀರ್ಥದಲ್ಲಿ ಸಮಾಹಿತ ಚಿತ್ತದಿಂದ ಮಿಂದು ಉತ್ತಮೋತ್ತಮವಾದ ದಿವ್ಯ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ಹೋಗುತ್ತಿದ್ದರು.

೧೫. ತರುವಾಯ ಹೀಗೆ ಹೋದ ಮಾನವರಿಂದ ಸ್ವರ್ಗಲೋಕಗಳೆಲ್ಲವೂ ತುಂಬಿಹೋಯಿತು. ಅವರೆಲ್ಲರೂ ಆ ಲೋಕಗಳಲ್ಲಿ ಬ್ರಹ್ಮ ವಿಷ್ಣು ಶಿವೇಂದ್ರಾದಿ ಸುರೋತ್ತಮರನ್ನೇ ಹುರುಡಿಸುತ್ತ ನಿಂತರು.

೧೬. ತರುವಾಯ ಯಜ್ಞಭಾಗಗಳೇ ದೊರಕದಂತಾಗಲು ದೇವತೆಗಳೆಲ್ಲರೂ ಮಹತ್ತರವಾದ ಕಷ್ಟಕ್ಕೊಳಗಾಗಿ ಪರಸ್ಪರವಾಗಿ ಹೀಗೆ ಆಲೋಚಿಸಿದರು.

೧೭–೧೮. "ಈ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಿಂದ ಊರ್ಧ್ವಬಾಹುಗಳಾಗಿ ಎತ್ತೆತ್ತಲೂ ಸ್ಪರ್ಧಿಸುತ್ತಿರುವ ಮಾನವರಿಂದಲೇ ಈ ಸ್ವರ್ಗಲೋಕವು ತುಂಬಿಹೋಯಿತು! ಆದುದರಿಂದ ಹಾಟಕೇಶ್ವರವೆಂಬ ಈ ಕ್ಷೇತ್ರವು ಭೂಮಂಡಲದಲ್ಲಿಯೇ ಇಲ್ಲದಂತೆ ಮಾಡಲು ಯಾವುದಾದರೂ ಕಾರ್ಯವನ್ನು ಕೈಕೊಳ್ಳುವುದಾಗಲಿ."

ತತಃ ಸಂವರ್ತಕೋ ವಾಯುಃ ಶಕ್ರಾದೇಶಾತ್ಸಮಂತತಃ ।
ತತ್ಕ್ಷೇತ್ರಂ ಪೂರಯಾಮಾಸ ಪಾಂಸುಭಿರ್ದ್ವಿಜಸತ್ತಮಾಃ ॥ ೧೯ ॥
ಏವಂ ನಾಶಮನುಪ್ರಾಪ್ತೇ ತಸ್ಮಿಂಸ್ತೀರ್ಥೇ ಸ್ಥಲೋಚ್ಚಯೇ ।
ಜಾತೇ ಜಾತಾಃ ಕ್ರಿಯಾಃ ಸರ್ವಾ ಭೂಯೋಽಪಿ ಕ್ರತುಸಂಭವಾಃ ॥ ೨೦ ॥
ತತಃ ಕಾಲೇನ ಮಹತಾ ವಲ್ಮೀಕಃ ಸಮುಪದ್ಯತ ।
ತಸ್ಮಿನ್ ಕ್ಷೇತ್ರೇ ಸಪಾತಾಲೇ ಸಂಪ್ರಯಾತಃ ಶನೈಃ ಶನೈಃ ॥ ೨೧ ॥
ಅಥ ಪಾತಾಲತೋ ನಾಗಾಸ್ತೇನ ಮಾರ್ಗೇಣ ಕೌತುಕಾತ್ ।
ಮರ್ತ್ಯಲೋಕಂ ಸಮಾಯಾಂತಿ ಭ್ರಮಂತಿಚ ಧರಾತಲೇ ॥ ೨೨ ॥
ತತ್ರ ತೇ ಮಾನವಾನ್ ಭೋಗಾನ್ ಭುಕ್ತ್ವಾ ಚೈವ ಯಥೇಚ್ಛಯಾ ।
ಪುನರ್ನಿರ್ಯಾಂತಿ ತೇನೈವ ಮಾರ್ಗೇಣ ನಿಜಮಂದಿರಂ ॥ ೨೩ ॥
ತತೋ ನಾಗಬಿಲಃ ಖ್ಯಾತಃ ಸ ಸರ್ವಸ್ಮಿನ್ ಧರಾತಲೇ ।
ಗತಾಗತೇನ ನಾಗಾನಾಂ ಸ ವಲ್ಮೀಕೋ ದ್ವಿಜೋತ್ತಮಾಃ ॥ ೨೪ ॥
ಕಸ್ಯಚಿತ್ತ್ವಥ ಕಾಲಸ್ಯ ಭಗವಾನ್ ಪಾಕಶಾಸನಃ ।
ಬ್ರಹ್ಮಹತ್ಯಾ ಸಮೋಪೇತೋ ನಿಸ್ತೇಜಾಃ ಸಮಪದ್ಯತ ॥ ೨೫ ॥

---

೧೯. ಹೀಗೆ ಆಲೋಚಿಸಿದ ತರುವಾಯ ಮಹೇಂದ್ರನು ಸಂವರ್ತಕವೆಂಬ ಪ್ರಳಯ ಮಾರುತನಿಗೆ ಆಜ್ಞೆಮಾಡಲು ಅವನು ಆ ಕ್ಷೇತ್ರವನ್ನೆಲ್ಲ ಧೂಳಿನಿಂದ ಮುಚ್ಚಿದನು.

೨೦. ಹೀಗೆ ಆ ಪಾತಾಳಜಾಹ್ನವೀತೀರ್ಥವು ಭೂಮಂಡಲದಲ್ಲಿ ನಷ್ಟವಾಗಿ ಹೋಗಲು ಎಂದಿನಂತೆ ಯಜ್ಞಾದಿ ಕ್ರಿಯೆಗಳು ನಡೆಯುತೊಡಗಿದವು.

೨೧. ಬಹಳ ಕಾಲವಾದಮೇಲೆ ಆ ಪ್ರದೇಶದಲ್ಲಿ ಒಂದು ಹುತ್ತವು ಬೆಳೆಯಿತು. ಅದು ಮೆಲ್ಲಮೆಲ್ಲಗೆ ಪಾತಾಳದವರೆಗೂ ವ್ಯಾಪಿಸಿತು.

೨೨–೨೩. ತರುವಾಯ ಪಾತಾಳಲೋಕದ ನಾಗರು ಆ ಮಾರ್ಗವಾಗಿ ಕುತೂಹಲಗೊಂಡು ಮರ್ತ್ಯಲೋಕಕ್ಕೆ ಬಂದು ಧರಾತಲದಲ್ಲೆಲ್ಲ ಸಂಚರಿಸ ತೊಡಗಿದರು. ಹೀಗೆ ಪಾತಾಳಲೋಕದಿಂದ ಭೂಲೋಕಕ್ಕೆ ಬಂದ ಆ ನಾಗರು ಇಲ್ಲಿ ಮಾನುಷ ಭೋಗಗಳೆಲ್ಲವನ್ನೂ ಅನುಭವಿಸುತ್ತಿದ್ದು ತಮಗೆ ಇಷ್ಟಬಂದಂತೆ ಮತ್ತೆ ತಮ್ಮಲೋಕಕ್ಕೇ ಆ ವಲ್ಮೀಕದ ಮೂಲಕವಾಗಿಯೇ ಹೊರಟುಹೋಗುತ್ತಿದ್ದರು.

೨೪. ಎಲೈ ಬ್ರಾಹ್ಮಣೋತ್ತಮರೆ, ಹೀಗೆ ಪಾತಾಳ ಲೋಕದ ನಾಗರು ವಲ್ಮೀಕ ಮಾರ್ಗವಾಗಿ ಬಂದು ಹೋಗುತ್ತಿದ್ದುದರಿಂದ ಅದು ಭೂಮಂಡಲ ದಲ್ಲೆಲ್ಲ ನಾಗಬಿಲವೆಂದು ಪ್ರಖ್ಯಾತವಾಯಿತು.

೨೫. ಹೀಗಿರಲು ಒಂದಾನೊಂದು ಕಾಲದಲ್ಲಿ ಮಹಾತ್ಮನಾದ ಮಹೇಂದ್ರನು ಬ್ರಹ್ಮಹತ್ಯಾದೋಷಕ್ಕೊಳಗಾಗಿ ಕಾಂತಿಹೀನನಾದನು.

ತತಃ ಪಿತಾಮಹಾದೇಶಂ ಲಬ್ಧ್ವಾ ಮಾರ್ಗೇಣ ತೇನ ಸಃ ।
ಪ್ರವಿಶ್ಯ ಚೇಕ್ಷಯಾಮಾಸ ಪಾತಾಲೇ ಹಾಟಕೇಶ್ವರಂ ॥ ೨೬ ॥
ಅಥಾಽಭೂತ್ಪಾಪನಿರ್ಮುಕ್ತಸ್ತತ್ಕ್ಷಣಾತ್ತಸ್ಯ ದರ್ಶನಾತ್ ।
ತೇಜಸಾ ಚ ಸಮಾಯುಕ್ತಃ ಪುನಃ ಪ್ರಾಪ ತ್ರಿವಿಷ್ಟಪಂ ॥ ೨೭ ॥
ಸ ದೃಷ್ಟ್ವಾ ತತ್ಪ್ರಭಾವಂ ತಲ್ಲಿಂಗಂ ದೇವಸ್ಯ ಶೂಲಿನಃ ।
ಹಾಟಕೇಶ್ವರಸಂಜ್ಞಸ್ಯ ಭಯಂ ಚಕ್ರೇ ನರೋದ್ಭವಂ ॥ ೨೮ ॥
ಯದಿ ಕಶ್ಚಿತ್ ಪುಮಾನತ್ರ ತ್ರಿಶಂಕುರಿವ ಭೂಪತಿಃ ।
ಪೂಜಯಿಷ್ಯತಿ ತಲ್ಲಿಂಗಂ ವಿಪಾಪ್ಮಾ ಶ್ರದ್ಧಯಾ ಸಹ ॥ ೨೯ ॥
ಯಾಪಯಿಷ್ಯತಿ ತನ್ನೂನಂ ಮಾಮಸ್ಮಾತ್ತ್ರಿದಶಾಲಯಾತ್ ।
ತಸ್ಮಾತ್ಸಂಪೂರಯಾಮ್ಯೇನಂ ಮಾರ್ಗಂ ಪಾತಾಲಸಂಭವಂ ॥ ೩೦ ॥
ತತಶ್ಚ ತ್ವರಯಾ ಯುಕ್ತೋ ರಕ್ತಶೃಂಗಂ ನಗೋತ್ತಮಂ ।
ಪ್ರಚಿಕ್ಷೇಪ ಬಿಲೇ ತಸ್ಮಿನ್ ಸ್ವಯಮೇವ ಶತಕ್ರತುಃ ॥ ೩೧ ॥

---

೨೬. ಅವನು ಬ್ರಹ್ಮನ ಅಪ್ಪಣೆಯಂತೆ ಆ ನಾಗಬಿಲದ ಮಾರ್ಗವಾಗಿಯೇ ಪಾತಾಳಲೋಕಕ್ಕೆ ಹೋಗಿ ಆ ಹಾಟಕೇಶ್ವರನನ್ನು ಸಂದರ್ಶಿಸಿದನು.

೨೭. ಹೀಗೆ ಆ ಸ್ವಾಮಿಯನ್ನು ಸಂದರ್ಶಿಸಿದ ಕೂಡಲೆ ಅವನು ಆ ಬ್ರಹ್ಮಹತ್ಯೆಯಿಂದ ವಿಮುಕ್ತನಾಗಿ ಮೊದಲಿನ ತನ್ನ ತೇಜಸ್ಸನ್ನು ಮತ್ತೆ ಪಡೆದುಕೊಂಡು ಸ್ವರ್ಗಲೋಕಕ್ಕೆ ಹೊರಟುಹೋದನು.

೨೮. ದೇವಲೋಕವನ್ನು ಸೇರಿದಮೇಲೆ ಆ ದೇವರಾಜನು ಪಾತಾಳಲೋಕದಲ್ಲಿ ನೆಲಸಿದ್ದ ಹಾಟಕೇಶ್ವರ ನಾಮಕವಾದ ಶಿವಲಿಂಗದ ಪ್ರಭಾವವನ್ನು ಯೋಚಿಸಿ, ಮುಂದೆ ತನಗೆ ಮಾನವರಿಂದ ಯಾವುದಾದರೂ ಭಯವು ಸಂಭವಿಸೀತೆಂದು ಶಂಕಿಸಿದನು.

೨೯–೩೦. "ತ್ರಿಶಂಕುಮಹಾರಾಜನಂತೆ ಯಾವ ಮಾನವನಾದರೂ ಈ ಹಾಟಕೇಶ್ವರ ಕ್ಷೇತ್ರಕ್ಕೆ ಹೋಗಿ ಶ್ರದ್ಧಾಭಕ್ತಿಗಳಿಂದ ಆ ಶಿವಲಿಂಗವನ್ನು ಪೂಜಿಸಿದುದಾದರೆ ಒಂದು ವೇಳೆ ಅವನು ಅಪೇಕ್ಷಿಸಿದರೆ ನನ್ನನ್ನೇ ಈ ತ್ರಿದಶಾಲಯದಿಂದ ಹೊರಡಿಸಬಹುದೆಂಬುದರಲ್ಲಿ ಸಂದೇಹವಿರುವುದಿಲ್ಲ. ಆದುದರಿಂದ ಪಾತಾಳಕ್ಕೆ ಹೋಗಲು ಇರುವ ಈ ಮಾರ್ಗವನ್ನು ಮುಚ್ಚುತ್ತೇನೆ" ಎಂದು ಯೋಚಿಸಿದನು.

೩೧. ತರುವಾಯ ಆ ಶತಕ್ರತುವು ತ್ವರೆಗೊಂಡವನಾಗಿ ರಕ್ತಶೃಂಗಪರ್ವತವನ್ನು ತಂದು ಆ ಬಿಲದ ಮೇಲೆ ಇಟ್ಟನು.

ಋಷಯ ಊಚುಃ:—

ಬ್ರಹ್ಮಹತ್ಯಾ ಕಥಂ ಜಾತಾ ದೇವೇಂದ್ರಸ್ಯ ಮಹಾತ್ಮನಃ ।
ಕಸ್ಮಿನ್ಕಾಲೇ ಚ ಸರ್ವಂ ನೋ ವಿಸ್ತರಾತ್ಸೂತ ಕೀರ್ತಯ ॥ ೩೨ ॥
ರಕ್ತಶೃಂಗೋ ಗಿರಿಃ ಕೋಽಯಂ ಸಂಕ್ಷಿಪ್ತಸ್ತತ್ರ ತೇನ ಯಃ ।
ಮಾನುಷಾಣಾಂ ಭಯಂ ತಸ್ಯ ಕತಮಸ್ಯ ಶಚೀಪತೇಃ ॥ ೩೩ ॥

ಸೂತ ಉವಾಚ:—

ಪುರಾತ್ವಷ್ಟ್ರಾ ದ್ವಿಜಶ್ರೇಷ್ಠಾ ಹಿರಣ್ಯಕಶಿಪೋಸ್ಸುತಾ ।
ವಿವಾಹಿತಾ ರಮಾ ನಾಮ ಶ್ರೇಷ್ಠರೂಪಗುಣಾನ್ವಿತಾ ॥ ೩೪ ॥
ಅಥ ತಸ್ಯಾ ಯಯೌ ಕಾಲಸ್ಸುಪ್ರಭೂತಸ್ಸುತಂ ವಿನಾ ।
ತತೋ ವೈರಾಗ್ಯಸಂಪನ್ನಾ ಸುತಾರ್ಥಂ ತಪಸಿ ಸ್ಥಿತಾ ॥ ೩೫ ॥
ಧ್ಯಾಯಮಾನಾ ಸುರಾಧೀಶಂ ದೇವದೇವಂ ಮಹೇಶ್ವರಂ ।
ಬಲಿಪೂಜೋಪಹಾರೇಣ ಸಮ್ಯಕ್ ಶ್ರದ್ಧಾಸಮನ್ವಿತಾ ॥ ೩೬ ॥
ನಿಯತಾ ನಿಯತಾಹಾರಾ ಸ್ನಾನಜಪ್ಯಪರಾಯಣಾ ।
ಯಚ್ಛಮಾನಾ ದ್ವಿಜಾಗ್ರ್ಯೇಭ್ಯೋ ದಾನಾನಿ ವಿವಿಧಾನಿ ಚ ॥ ೩೭ ॥

---

೩೨—೩೩. ಋಷಿಗಳು ಕೇಳುತ್ತಾರೆ:—ಎಲೈ ಸೂತಪುರಾಣಿಕನೆ, ಮಹಾತ್ಮನಾದ ದೇವೇಂದ್ರನಿಗೆ ಬ್ರಹ್ಮಹತ್ಯಾದೋಷವು ಬಂದುದು ಹೇಗೆ? ಯಾವಾಗ? ಈ ವಿಷಯವನ್ನು ನಮಗೆ ವಿಸ್ತಾರವಾಗಿ ತಿಳಿಸಬೇಕು. ಈ ಮಹೇಂದ್ರನು ನಾಗಬಿಲದ ಮೇಲೆ ತಂದಿಟ್ಟ ರಕ್ತಶೃಂಗಪರ್ವತವಾದರೂ ಯಾವುದು? ಎಷ್ಟನೆಯವನಾದ ಆ ಮಹೇಂದ್ರನಿಗೆ ಮನುಷ್ಯರಿಂದ ಭಯವೆಂಬುದು ಸಂಭವಿಸಿತು?

೩೪. ಸೂತನು ಹೇಳುತ್ತಾನೆ:—ಎಲೈ ದ್ವಿಜಶ್ರೇಷ್ಠರೆ, ಪೂರ್ವದಲ್ಲಿ ಶ್ರೇಷ್ಠವಾದ ರೂಪದಿಂದಲೂ ಗುಣದಿಂದಲೂ ಕೂಡಿದ ರಮೆ ಎಂಬುವಳನ್ನು ತ್ವಷ್ಟೃವು ಮದುವೆಯಾದನು. ಈ ರಮೆಯು ಹಿರಣ್ಯಕಶಿಪುವಿನ ಮಗಳು.

೩೫. ಅವಳಿಗೆ ಬಹುಕಾಲ ಮಕ್ಕಳಿಲ್ಲದೆಯೇ ಇರಲು ಅವಳು ವೈರಾಗ್ಯಸಂಪನ್ನಳಾಗಿ ಪುತ್ರಲಾಭಕ್ಕೋಸುಗ ತಪಸ್ಸಿನಲ್ಲಿ ನಿಂತಳು.

೩೬—೩೭. ಅತಿಶಯವಾದ ಭಕ್ತಿ ಶ್ರದ್ಧೆಗಳೊಡಗೂಡಿ ಆ ರಮೆಯು ದೇವದೇವನಾದ ಮಹೇಶ್ವರನನ್ನು ಬಲಿಪೂಜೋಪಹಾರಗಳಿಂದ ಸೇವಿಸಿ ಧ್ಯಾನಿಸುತ್ತ ನಿಯಮಪರಳಾಗಿ ನಿಯತವಾದ ಆಹಾರವನ್ನು ತೆಗೆದುಕೊಳ್ಳುತ್ತ ಸ್ನಾನ ಜಪಗಳಲ್ಲಿ ಆಸಕ್ತಳಾಗಿ, ಬ್ರಾಹ್ಮಣರಿಗೆ ವಿವಿಧ ದಾನಗಳನ್ನು ಕೊಡುತ್ತಿದ್ದಳು.

ತತೋ ವರ್ಷಸಹಸ್ರಾಂತೇ ತಸ್ಯಾಸ್ತುಷ್ಟೋ ಮಹೇಶ್ವರಃ ।
ಉವಾಚ ವರದೋಽಸ್ಮೀತಿ ವೃಣುಷ್ವ ಯದಭೀಪ್ಸಿತಮ್ ॥ ೩೮ ॥
ಸಾ ವವ್ರೇ ಮಮ ಪುತ್ರೋಽಸ್ತು ಭಗವಂಸ್ತ್ವತ್ಪ್ರಸಾದತಃ ।
ಶೂರಶ್ಶಸ್ತ್ರೈರವಧ್ಯಶ್ಚ ವಿಪ್ರದಾನವರೂಪಧೃಕ್ ॥ ೩೯ ॥
ವೇದಾಧ್ಯಯನ ಸಂಪನ್ನೋ ಯಜ್ಞಕರ್ಮ ಸಮುದ್ಯತಃ ।
ತೇಜಸಾ ಯಶಸಾ ಖ್ಯಾತಃ ಸರ್ವೇಷಾಮಪಿ ದೇಹಿನಾಮ್ ॥ ೪೦ ॥

ಭಗವಾನುವಾಚ :—

ಭವಿಷ್ಯತಿ ನ ಸಂದೇಹಃ ಪುತ್ರಸ್ತೇ ಬಲವಾನ್ ಸುಧೀಃ ।
ಅವಧ್ಯಸ್ಸರ್ವಶಸ್ತ್ರಾಣಾಂ ಮಹಾತೇಜೋಭಿರನ್ವಿತಃ ॥ ೪೧ ॥
ಯಜ್ವಾ ದಾನಪತಿ ಶ್ಶೂರೋ ವೇದವೇದಾಂಗಪಾರಗಃ ।
ಬ್ರಾಹ್ಮಣೋಕ್ತಾಃ ಕ್ರಿಯಾ ಸ್ಸರ್ವಾಃ ಕರಿಷ್ಯತಿ ಸ ಕೃತ್ಸ್ನಶಃ ।
ಅಜೇಯಸ್ಸಂಗರೇ ಚೈವ ಕೃತ್ಸ್ನೈರಪಿ ಸುರಾಸುರೈಃ ॥ ೪೨ ॥

---

೩೮. ಹೀಗೆ ಆಕೆಯು ತಪಸ್ಸು ಮಾಡುತ್ತಿರಲು ಒಂದು ಸಾವಿರ ವರ್ಷಗಳು ಕಳೆದುಹೋದುವು. ತರುವಾಯ ಅವಳ ತಪಸ್ಸಿಗೆ ಮೆಚ್ಚಿ ಮಹೇಶ್ವರನು ಪ್ರತ್ಯಕ್ಷನಾಗಿ ಬಂದು, "ಎಲೌ, ನಿನ್ನ ತಪಸ್ಸಿನಿಂದ ಸಂತೋಷಗೊಂಡು ನಾನೀಗ ವರದನಾಗಿ ನಿನಗೆ ಪ್ರತ್ಯಕ್ಷನಾಗಿದ್ದೇನೆ. ನಿನ್ನ ಮನೋಭೀಷ್ಟವನ್ನು ಕೇಳು" ಎಂದು ಹೇಳಿದನು.

೩೯–೪೦. ಆ ರಮೆಯಾದರೋ "ಭೋ ಭಗವನ್, ನಿನ್ನ ಅನುಗ್ರಹದಿಂದ ಶೂರನೂ, ಯಾವ ಶಸ್ತ್ರಗಳಿಂದಲೂ ಮೃತಿಹೊಂದದವನೂ, ವಿಪ್ರದಾನವ ರೀರ್ವರ ರೂಪಗಳನ್ನೂ ಒಳಗೊಂಡವನೂ, ವೇದಾಧ್ಯಯನಸಂಪನ್ನನಾಗಿ, ಯಜ್ಞ ಕರ್ಮಗಳಲ್ಲಿ ನಿಷ್ಣಾತನಾಗಿ, ತೇಜಸ್ಸಿನಿಂದಲೂ ಯಶಸ್ಸಿನಿಂದಲೂ ಎಲ್ಲರಿಗೂ ಉತ್ತಮನೆಂದು ಪ್ರಸಿದ್ಧನಾಗುವವನೂ ಆದ ಒಬ್ಬ ಪುತ್ರನು ನನಗುಂಟಾಗಲಿ" ಎಂದು ವರವನ್ನು ಕೇಳಿಕೊಂಡಳು.

೪೧–೪೨. ಭಗವಂತನು ಹೇಳುತ್ತಾನೆ:—"ಎಲೌ ರಮೆಯೆ, ನಿನಗೆ ಅಂಥ ಪುತ್ರನು ಉಂಟಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಅವನು ಮಹಾ ಬಲಿಷ್ಠನೂ ಒಳ್ಳೆಯ ಪಂಡಿತನೂ ಆಗಿರುವನಲ್ಲದೆ, ಎಲ್ಲ ಶಸ್ತ್ರಗಳಿಂದಲೂ ಅವಧ್ಯನೆನಿಸಿ ಮಹತ್ತರವಾದ ತೇಜಸ್ಸಿನಿಂದ ಬೆಳಗುತ್ತ, ಯಾಗ ಮಾಡುವವನೂ ಮಹಾದಾನಿಯೂ ಶೂರನೂ ವೇದವೇದಾಂಗಪಾರಂಗತನೂ ಆಗಿ, ಬ್ರಾಹ್ಮಣಗಳಲ್ಲಿ ಉಕ್ತಗಳಾಗಿರುವ ಎಲ್ಲ ಕ್ರಿಯೆಗಳನ್ನೂ ಸಮಗ್ರವಾಗಿ ನಡೆಸಿ ದೇವಾಸುರರೆಲ್ಲ ರಿಂದಲೂ ರಣಾಂಗಣದಲ್ಲಿ ಅಜೇಯನೆನಿಸುತ್ತಾನೆ."

ಏವಮುಕ್ತ್ವಾ ಸದೇವೇಶೋ ತತಶ್ಚಾಽದರ್ಶನಂ ಗತಃ ।
ಋತೌ ಸಾಽಪಿ ದಧೇ ಗರ್ಭಂ ಸಕಾಶಾದ್ವಿಶ್ವಕರ್ಮಣಃ ॥ ೪೩ ॥
ತತಶ್ಚ ಸುಷುವೇ ಪುತ್ರಂ ದಶಮೇ ಮಾಸಿ ಶೋಭನಂ ।
ದ್ವಾದಶಾರ್ಕಪ್ರತೀಕಾಶಂ ಸರ್ವಲಕ್ಷಣಲಕ್ಷಿತಂ ॥ ೪೪ ॥
ತಸ್ಯ ಚಕ್ರೇ ಪಿತಾ ನಾಮ ಪ್ರಾಪ್ತೇ ದ್ವಾದಶಮೇ ದಿನೇ ।
ಪ್ರಸಿದ್ಧಂ ವೃತ್ರ ಇತ್ಯೇವ ಪೂಜಯಿತ್ವಾ ದ್ವಿಜೋತ್ತಮಾನ್ ॥ ೪೫ ॥
ಅಥಾಽಸೌ ವವೃಧೇ ಬಾಲಃ ಶುಕ್ಲಪಕ್ಷೇ ಯಥೋಡುರಾಟ್ ।
ಪಿತೃಮಾತೃಕೃತಾನಂದೋ ಬಂಧುವರ್ಗೇಣ ಲಾಲಿತಃ ॥ ೪೬ ॥
ತತೋಽಸ್ಯ ಪ್ರದದೌ ಕಾಲೇ ವ್ರತಂ ವಿಪ್ರಜನೋಚಿತಂ ।
ಸಮಭ್ಯೇತ್ಯ ಸ್ವಯಂ ಶುಕ್ರೋ ದಾನವಸ್ಯಾಪಿ ಸ ದ್ವಿಜಃ ॥ ೪೭ ॥
ಸ ಚಾಽಪಿ ಚತುರೋ ವೇದಾನ್ಬ್ರಹ್ಮಚಾರಿವ್ರತೇ ಸ್ಥಿತಃ ।
ವೇದಾಂಗೈಸ್ಸಹಿತಾನ್ಸ್ಪೃತ್ರಃ ಪಪಾಠ ಗುರುವತ್ಸಲಃ ॥ ೪೮ ॥

---

೪೩. ಎಲೈ ವಿಪ್ರರೆ, ಈ ಪ್ರಕಾರವಾಗಿ ನುಡಿದು ಆ ದೇವೇಶ್ವರನು ಅಲ್ಲಿಯೇ ಅಂತರ್ಧಾನವನ್ನೈದಿದನು. ತರುವಾಯ ಆ ರಮೆಯು ಋತು ಸಮಯದಲ್ಲಿ ವಿಶ್ವಕರ್ಮನಿಂದ ಗರ್ಭವನ್ನು ಧರಿಸಿದಳು.

೪೪. ಆ ಬಳಿಕ ಹತ್ತನೆಯ ತಿಂಗಳಲ್ಲಿ ಮಂಗಳಕರನಾಗಿ, ದ್ವಾದಶ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳವನಾಗಿ, ಸಮಸ್ತ ಶುಭಲಕ್ಷಣಗಳಿಂದ ಕೂಡಿದ ಮಗನನ್ನು ಪ್ರಸವಿಸಿದಳು.

೪೫. ಹೀಗೆ ಪುತ್ರೋತ್ಸವವಾದಮೇಲೆ ಹನ್ನೆರಡನೆಯ ದಿನದಲ್ಲಿ ತಂದೆಯಾದ ಆ ವಿಶ್ವಕರ್ಮನು ಬ್ರಾಹ್ಮಣೋತ್ತಮರೆಲ್ಲರನ್ನೂ ಪೂಜಿಸಿ ಮಗುವಿಗೆ ವೃತ್ರನೆಂಬ ಹೆಸರನ್ನಿಟ್ಟನು.

೪೬. ಬಳಿಕ ಆ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ದಿನ ದಿನವೂ ಬೆಳೆದು ತಂದೆತಾಯಿಗಳಿಗೆ ಆನಂದವನ್ನುಂಟುಮಾಡುತ್ತ ಬಂಧುವರ್ಗದಿಂದ ಲಾಲಿತನಾದನು.

೪೭. ತರುವಾಯ ಅಸುರಗುರುವಾದ ಶುಕ್ರಾಚಾರ್ಯನು ಉಚಿತವಾದ ಸಮಯದಲ್ಲಿ ಬ್ರಾಹ್ಮಣರೊಡನೆ ಆ ವಿಶ್ವಕರ್ಮನ ಮನೆಗೈತಂದು ಅವನ ಕುಮಾರನಾದ ವೃತ್ರನಿಗೆ, ಅವನು ದಾನವನಾದರೂ ಅವನಿಗೆ ವಿಪ್ರಜನೋಚಿತವಾದ ಸಂಸ್ಕಾರವನ್ನು ಮಾಡಿಸಿದನು."

೪೮. ಹೀಗೆ ಉಪನಯನವಾದ ತರುವಾಯ ಆ ವೃತ್ರನು ಬ್ರಹ್ಮಚರ್ಯ ವ್ರತದಲ್ಲಿದ್ದು ಗುರೂಪಸರ್ಪಣವನ್ನು ಮಾಡಿ, ಆ ಗುರುವಿಗೆ ಪ್ರಿಯನೆನಿಸಿ ನಾಲ್ಕೂ ವೇದಗಳನ್ನು ಷಡಂಗಸಹಿತವಾಗಿ ವ್ಯಾಸಂಗ ಮಾಡಿದನು.

ತತೋ ಯೌವನಮಾಸಾದ್ಯ ಭೂಮಿಪಾಲಾನಶೇಷತಃ ।
ಜಿತ್ವಾ ಧರಾಂ ವಶೇ ಚಕ್ರೇ ಪಾತಾಲಂ ತದನಂತರಂ ॥ ೪೯ ॥
ತತಶ್ಚೇಂದ್ರಜಯಾಕಾಂಕ್ಷೀ ಸಮಾಸಾದ್ಯ ಸುರಾಲಯಂ ।
ಸಹಸ್ರಾಕ್ಷಮುಖಾನ್ದೇವಾನ್ ಯುದ್ಧೇ ಚಕ್ರೇ ಪರಾಙ್ಮುಖಾನ್ ॥ ೫೦ ॥
ಅಥ ತೇನ ಸಮಂ ವಜ್ರೀ ಚಕ್ರೇಽಷ್ಟಾದಶ ಸಂಯುಗಾನ್ ।
ಏಕಸ್ಮಿನ್ನಪಿ ನೋ ಲೇಭೇ ವಿಜಯಂ ದ್ವಿಜಸತ್ತಮಾಃ ॥ ೫೧ ॥
ಹತಶೇಷೈಸ್ಸುರೈಸ್ಸಾರ್ಧಂ ಸರ್ವಾಂಗಕ್ಷತವಿಕ್ಷತೈಃ ।
ತತೋ ಜಗಾಮ ವಿತ್ರಸ್ತೋ ಬ್ರಹ್ಮಲೋಕಂ ದಿವಾಲಯಾತ್ ॥ ೫೨ ॥
ವೃತ್ರೋಽಪಿ ಬುಭುಜೇ ಕೃತ್ಸ್ನಂ ತ್ರೈಲೋಕ್ಯಂ ಸಚರಾಚರಂ ।
ಶಾಕ್ರಂ ಪದಂ ಸಮಾಸ್ಥಾಯ ನಿಹತಾಶೇಷಕಂಟಕಂ ॥ ೫೩ ॥
ಯಜ್ಞಭಾಗಭುಜಶ್ಚಕ್ರೇ ದಾನವಾನ್ಬಲಗರ್ವಿತಾನ್ ।
ದೇವಸ್ಥಾನೇಷು ಸರ್ವೇಷು ಯಥೋಕ್ತೇಷು ಮಹಾಬಲಃ ॥ ೫೪ ॥

---

೪೯. ಬಳಿಕ ಅವನು ಯೌವನಕ್ಕೆ ಬಂದು ಭೂಮಂಡಲದ ಸಮಸ್ತ ರಾಜರನ್ನೂ ಗೆದ್ದು ಭೂಲೋಕವೆಲ್ಲವನ್ನೂ ವಶಪಡಿಸಿಕೊಂಡು, ಆ ತರುವಾಯ ಪಾತಾಳ ಲೋಕವನ್ನು ತನ್ನದಾಗಿಸಿಕೊಂಡನು.

೫೦. ಇದಾದಮೇಲೆ ಅವನಿಗೆ ಮಹೇಂದ್ರನನ್ನು ಜಯಿಸಬೇಕೆಂಬ ಕಾಂಕ್ಷೆಯಾಯಿತು. ದೇವಲೋಕಕ್ಕೆ ಹೋಗಿ ಅವನು ಮಹೇಂದ್ರನೇ ಮೊದಲಾದ ಸಮಸ್ತ ದೇವತೆಗಳನ್ನೂ ರಣಾಂಗಣದಲ್ಲಿ ಹಿಮ್ಮೆಟ್ಟಿಸಿದನು.

೫೧. ಮಹೇಂದ್ರನಾದರೋ ಆ ವೃತ್ರನೊಡನೆ ಹದಿನೆಂಟು ಯುದ್ಧಗಳನ್ನು ಮಾಡಿದನಾದರೂ ಒಂದರಲ್ಲೂ ವಿಜಯವನ್ನು ಪಡೆಯಲಿಲ್ಲ.

೫೨. ಅವನು ಅಂಗಾಂಗಗಳೂ ಕ್ಷತವಿಕ್ಷತವಾಗಿ ಹೋಗಿರಲು ಉಳಿದುಳಿದ್ದ ದೇವತೆಗಳೆಲ್ಲರನ್ನೂ ಹಿಂದಿಟ್ಟುಕೊಂಡು ಆ ಅಸುರನ ಭೀತಿಯಿಂದ ಅಮರಾವತಿಯನ್ನೇ ತೊರೆದು ಬ್ರಹ್ಮಲೋಕಕ್ಕೆ ಹೋದನು.

೫೩. ವೃತ್ರನಾದರೋ ಮಹೇಂದ್ರಪದವಿಯನ್ನು ಹೊಂದಿ ಸಮಸ್ತ ಶತ್ರುಗಳನ್ನೂ ನಿಗ್ರಹಿಸಿ ಚರಾಚರಾತ್ಮಕವಾದ ಜಗತ್ತ್ರಯವನ್ನು ಏಕಚ್ಛತ್ರಾಧಿಪತ್ಯದಿಂದ ಆಳಿ ಅನುಭವಿಸತೊಡಗಿದನು.

೫೪. ಆ ಮಹಾಬಲನು ಸಮಸ್ತ ದೇವತಾಸ್ಥಾನಗಳಲ್ಲಿಯೂ ಬಲಗರ್ವಿತರಾದ ದಾನವರನ್ನೇ ನೇಮಿಸಿ ಅವರನ್ನೇ ಹವಿರ್ಭಾಗಗಳನ್ನು ಸ್ವೀಕರಿಸುವಂತೆ ಮಾಡಿದನು.

ಏವಂ ತ್ರೈಲೋಕ್ಯರಾಜ್ಯೇಽಪಿ ಲಬ್ಧೇ ತಸ್ಯ ದ್ವಿಜೋತ್ತಮಾಃ ।
ನ ಸಂತೋಷಶ್ಚ ಸಂಜಜ್ಞೇ ಬ್ರಹ್ಮಲೋಕಾಭಿಕಾಂಕ್ಷಯಾ ॥ ೩೫ ॥
ತತಶ್ಶುಕ್ರಂ ಸಮಾಹೂಯ ಪ್ರೋವಾಚ ಮಧುರಂ ವಚಃ ।
ವಿನಯಾವನತೋ ಭೂತ್ವಾ ಚತುರ್ಭಿಸ್ಸಚಿವೈಸ್ಸಹ ॥ ೩೬ ॥

ವೃತ್ರ ಉವಾಚ:—

ಬ್ರಹ್ಮಲೋಕಂ ಗತಃ ಶಕ್ರೋ ಭಯಾದ್ಗುರುಕುಲೋದ್ವಹ ।
ಕಥಂ ಗತಿರ್ಭವೇತ್ತತ್ರ ಮಮ ಬ್ರೂಹಿ ಯಥಾತಥಂ ॥ ೩೭ ॥
ಯೇನ ಶಕ್ರಂ ವಿರಿಂಚಿಂ ಚ ಸೂದಯಿಷ್ಯೇ ತಥಾಽಖಿಲಂ ।
ತುಭ್ಯಂ ದತ್ವಾ ಬ್ರಹ್ಮಲೋಕಂ ಭೋಕ್ಷ್ಯಾಮಿ ತ್ರಿದಿವಂ ಸ್ವಯಂ ॥ ೩೮ ॥

ಶುಕ್ರ ಉವಾಚ:—

ನ ಗತಿರ್ವಿದ್ಯತೇ ತತ್ರ ತವ ದಾನವಸತ್ತಮ ।
ತಸ್ಮಾತ್ತ್ರೈಲೋಕ್ಯರಾಜ್ಯೇನ ಸಂತೋಷಂ ಕರ್ತುಮರ್ಹಸಿ ॥ ೩೯ ॥

ವೃತ್ರ ಉವಾಚ:—

ಯಾವತ್ತಿಷ್ಠತಿ ಸುತ್ರಾಮಾ ತಾವನ್ನಾಽಸ್ತಿ ಸುಖಂ ಮಮ ।
ತಸ್ಮಾನ್ನಿಷ್ಕಂಟಕಾರ್ಥಾಯ ಯತಿಷ್ಯೇಽಹಂ ದ್ವಿಜೋತ್ತಮ ॥ ೪೦ ॥

---

೩೫—೩೬. ಹೀಗೆ ತ್ರೈಲೋಕಾಧಿಪತ್ಯವನ್ನು ಪಡೆದರೂ ಆ ಅಸುರನು ಸಂತೋಷವನ್ನು ಹೊಂದಲಿಲ್ಲ. ಅವನಿಗೆ ಸ್ವರ್ಗದಿಂದ ಬ್ರಹ್ಮಲೋಕಕ್ಕೆ ಹೋಗ ಬೇಕೆಂಬ ಕಾಂಕ್ಷೆಯಿದ್ದಿತು. ಆದುದರಿಂದ ಅವನು ಅಸುರಗುರುವಾದ ಶುಕ್ರಾಚಾರ್ಯನನ್ನು ಕರೆದು ತನ್ನ ನಾಲ್ವರು ಮಂತ್ರಿಗಳೊಡಗೂಡಿ ವಿನಯ ದಿಂದ ಮಧುರವಾದ ಈ ಮಾತನ್ನು ಹೇಳಿದನು.

೩೭. ವೃತ್ರನು ಹೇಳುತ್ತಾನೆ:—ಎಲೈ ಆಚಾರ್ಯಶ್ರೇಷ್ಠನಾದ ಶುಕ್ರನೆ, ಶಕ್ರನು ಬ್ರಹ್ಮಲೋಕಕ್ಕೆ ಹೊರಟುಹೋಗಿದ್ದಾನೆ. ಅಲ್ಲಿಗೆ ಹೋಗಬೇಕಾದರೆ ಮಾರ್ಗವಾವುದೆಂಬುದನ್ನು ತಿಳಿಸು.

೩೮. ನಾನು ಅಲ್ಲಿಗೆ ಹೋಗಿ, ಆ ಮಹೇಂದ್ರನನ್ನು ಕೊಂದು ಸಂಪೂರ್ಣ ವಾದ ಆ ಬ್ರಹ್ಮಲೋಕವನ್ನು ಗೆದ್ದು ನಿನಗೆ ಅದನ್ನು ದಾನಮಾಡಿ, ನಾನು ಈ ದೇವಲೋಕವನ್ನೂ ಇತರ ಲೋಕಗಳನ್ನೂ ಭೋಗಿಸುತ್ತೇನೆ.

೩೯. ಶುಕ್ರನು ಹೇಳುತ್ತಾನೆ:—ಎಲೈ ದಾನವಸತ್ತಮನೆ, ಬ್ರಹ್ಮಲೋಕಕ್ಕೆ ಹೋಗಲು ನಿನಗೆ ಮಾರ್ಗವು ದೊರೆಯುವುದಿಲ್ಲ. ಆದುದರಿಂದ ಈ ತ್ರೈಲೋಕ್ಯ ರಾಜ್ಯಾಧಿಪತ್ಯದಿಂದಲೇ ನೀನು ತೃಪ್ತನಾಗಿರು.

೪೦. ವೃತ್ರನು ಹೇಳುತ್ತಾನೆ:—ಎಲೈ ದ್ವಿಜೋತ್ತಮನೆ, ಸುತ್ರಾಮನು ಜೀವಂತನಾಗಿರುವವರೆಗೂ ನನಗೆ ಸುಖವಿಲ್ಲ. ಆದುದರಿಂದ ನನ್ನ ರಾಜ್ಯವು ನಿಷ್ಕಂಟಕವಾಗಲೋಸುಗ ಪ್ರಯತ್ನಿಸುತ್ತೇನೆ.

ಕಥಂ ಶಕ್ರಸ್ಯ ಸಂಜಾತಾ ಗತಿಸ್ತತ್ರ ಭೃಗೂದ್ವಹ ।
ನ ಭವಿಷ್ಯತಿ ಮೇ ಬ್ರೂಹಿ ಕಥಂ ಸಾಽದ್ಯ ಮಹಾಮತೇ ॥ ೬೧ ॥
ಶುಕ್ರ ಉವಾಚ :—
ತೇನ ಪೂರ್ವಂ ತಪಸ್ತಪ್ತಂ ನೈಮಿಷೇ ದಾನವೋತ್ತಮ ।
ಯಾವದ್ವರ್ಷಸಹಸ್ರಾಂತಂ ಧ್ಯಾಯಮಾನೇನ ಶಂಕರಂ ॥ ೬೨ ॥
ತತ್ಪ್ರಭಾವಾದ್ಗತಿಸ್ತಸ್ಯ ತತ್ರ ಜಾತಾ ಸದೈವ ಹಿ ।
ಸಭೃತ್ಯಪರಿವಾರಸ್ಯ ನಾಽನ್ಯದಸ್ತೀಹ ಕಾರಣಂ ॥ ೬೩ ॥
ಯೋಽನ್ಯೋಽಪಿ ನೈಮಿಷಾಽರಣ್ಯೇ ತದ್ರೂಪಂ ಕುರುತೇ ತಪಃ ।
ಬ್ರಹ್ಮಲೋಕೇ ಗತಿಸ್ತಸ್ಯ ಜಾಯತೇ ನಾಽತ್ರ ಸಂಶಯಃ ॥ ೬೪ ॥
ಸೂತ ಉವಾಚ :—
ತಚ್ಛ್ರುತ್ವಾ ಸತ್ವರಂ ಗತ್ವಾ ನೈಮಿಷಂ ತೀರ್ಥಮುತ್ತಮಂ ।
ತಪಶ್ಚಕ್ರೇ ತತಸ್ತೀವ್ರಂ ಧ್ಯಾಯಮಾನೋ ಮಹೇಶ್ವರಂ ॥ ೬೫ ॥
ತ್ರೈಲೋಕ್ಯರಕ್ಷಣಾರ್ಥಾಯ ಸನ್ನಿರೂಪ್ಯ ದನೂತ್ತಮಾನ್ ।
ಮಹಾಬಲಸಮೋಪೇತಾಂಛಕ್ರಾಧಿಕ ಪರಾಕ್ರಮಾನ್ ॥ ೬೬ ॥

---

೬೧. ಓ ಭೃಗೂದ್ವಹ, ಆ ಶಕ್ರನಿಗೆ ಬ್ರಹ್ಮಲೋಕಗಮನ ಶಕ್ತಿಯುಂಟಾದುದು ಹೇಗೆ, ನನಗೆ ಉಂಟಾಗದಿರುವುದು ಹೇಗೆ? ಎಂಬುದನ್ನು ಮಹಾಬುದ್ಧಿಶಾಲಿಯಾದ ನೀನು ನನಗೆ ಇದೀಗ ಹೇಳಬೇಕು.

೬೨. ಶುಕ್ರನು ಹೇಳುತ್ತಾನೆ:—ಅಯ್ಯಾ ದಾನವೋತ್ತಮನೆ, ಪೂರ್ವದಲ್ಲಿ ಈ ಮಹೇಂದ್ರನು ನೈಮಿಷಕ್ಷೇತ್ರದಲ್ಲಿ ಒಂದು ಸಹಸ್ರ ವರ್ಷಗಳ ಕಾಲ ಪರಮೇಶ್ವರನನ್ನು ಕುರಿತು ತಪಸ್ಸನ್ನೆಸಗಿರುವನು.

೬೩. ಆ ತಪಸ್ಸಿನ ಪ್ರಭಾವದಿಂದ ಭೃತ್ಯಪರಿವಾರಸಹಿತನಾದ ಅವನೊಬ್ಬನಿಗೆ ಮಾತ್ರವೇ ಬ್ರಹ್ಮಲೋಕಕ್ಕೆ ಹೋಗಲು ಶಕ್ತಿಯುಂಟಾಯಿತಾಗಲಿ ಬೇರಾವನಿಗೂ ಇರುವುದಿಲ್ಲ.

೬೪. ನೈಮಿಷಾರಣ್ಯದಲ್ಲಿ ಆ ಮಹೇಂದ್ರನೆಸಗಿದಂತೆಯೇ ಇತರನೂ ತಪಸ್ಸನ್ನು ಮಾಡಿದರೆ ಅವನಿಗೂ ಬ್ರಹ್ಮಲೋಕವಾಸವು ಲಭಿಸುತ್ತದೆಯೆಂಬುದರಲ್ಲಿ ಸಂಶಯವಿಲ್ಲ.

೬೫—೬೬. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ, ಈ ಮಾತನ್ನು ಕೇಳಿ ಆ ದಾನವಾಧಿಪನು ತ್ರೈಲೋಕ್ಯರಕ್ಷಣಾರ್ಥವಾಗಿ ದಾನವೋತ್ತಮರನ್ನು ನೇಮಿಸಿ ಮಹೇಶ್ವರನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತ ತೀರ್ಥೋತ್ತಮವಾದ ನೈಮಿಷಕ್ಕೆ ಬಂದು ತಪಸ್ಸಿಗೆ ಕುಳಿತನು.

ವರ್ಷಾಸ್ವಾಕಾಶಸ್ಥಾಯೀ ಸ ಹೇಮಂತೇ ಸಲಿಲಾಶ್ರಯಃ ।
ಪಂಚಾಗ್ನಿಸಾಧಕೋ ಗ್ರೀಷ್ಮೇ ಸ ಬಭೂವಾಽನಿಲಾಽಶನಃ ॥ ೬೭ ॥
ಏವಂ ತಸ್ಯ ವ್ರತಸ್ಥಸ್ಯ ಜಗ್ಮುರ್ವರ್ಷಶತಾನಿ ಚ ।
ತತ್ರ ಭೀತಾಸ್ತತೋ ದೇವಾ ಬ್ರಹ್ಮವಿಷ್ಣುಪುರಃಸರಾಃ ॥ ೬೮ ॥
ಚಕ್ರುಶ್ಚ ಸತತಂ ಮಂತ್ರಂ ತದ್ವಿನಾಶಾಯ ಕೇವಲಂ ।
ವೀಕ್ಷಯಂತಿ ಚ ಛಿದ್ರಾಣಿ ನ ಚ ಪಶ್ಯಂತಿ ದುಃಖಿತಾಃ ॥ ೬೯ ॥
ಅಥಾಽಬ್ರವೀತ್ಸ್ವಯಂ ವಿಷ್ಣುಶ್ಚಿರಂ ನಿಶ್ಚಿತ್ಯ ಚೇತಸಾ ।
ವಧೋಪಾಯಂ ಸಮಾಲೋಕ್ಯ ವೃತ್ರಸ್ಯ ಪ್ರಮುದಾನ್ವಿತಃ ॥ ೭೦ ॥

ವಿಷ್ಣುರುವಾಚ :—

ತಸ್ಯ ಶಕ್ರವಧೋಪಾಯೋ ಮಯಾ ಜ್ಞಾತೋಽಧುನಾ ಧ್ರುವಂ ।
ತಚ್ಛ್ರುತ್ವಾ ಕುರು ಶೀಘ್ರಂ ತ್ವಮುಪಾಯೋ ನಾಽಸ್ತಿ ಕಶ್ಚನ ॥ ೭೧ ॥
ಅವಧ್ಯಃ ಸರ್ವಶಸ್ತ್ರಾಣಾಂ ಸಕೃತಃ ಶೂಲಪಾಣಿನಾ ।
ತಸ್ಮಾದಸ್ಥಿಮಯಂ ವಜ್ರಂ ತದ್ವಧಾರ್ಥಂ ನಿರೂಪಯ ॥ ೭೨ ॥

---

೬೭. ಮಳೆಗಾಲದಲ್ಲಿ ಬಯಲಿನಲ್ಲಿಯೂ ಚಳಿಗಾಲದಲ್ಲಿ ಜಲದಲ್ಲಿಯೂ ಬಿಸಿಲುಗಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ ಕೇವಲ ವಾಯುವನ್ನೇ ಆಹಾರವನ್ನಾಗಿ ಸ್ವೀಕರಿಸುತ್ತ ಆ ವೃತ್ರನು ತಪಸ್ಸನ್ನೆಸಗಿದನು.

೬೮–೭೦. ಹೀಗೆ ವ್ರತವನ್ನು ತೊಟ್ಟು ತಪಸ್ಸನ್ನು ಮಾಡುತ್ತಿರಲು ನೂರಾರು ವರ್ಷಗಳು ಕಳೆದುಹೋದುವು. ಈ ಅಸುರನ ತಪಸ್ಸನ್ನು ಕಂಡು ಬ್ರಹ್ಮ ವಿಷ್ಣು ಪ್ರಮುಖರಾದ ದೇವತೆಗಳೆಲ್ಲರೂ ಭೀತರಾದರು. ಅವರೆಲ್ಲರೂ ಆ ದಾನವನ ವಿನಾಶಕ್ಕೋಸ್ಕರವಾಗಿಯೇ ಪರಸ್ಪರವಾಗಿ ಮಂತ್ರಾಲೋಚನೆಯನ್ನು ಮಾಡಿದರು. ಬಹಳ ಕಷ್ಟಪಟ್ಟು ಅವನೆಸಗುತ್ತಿದ್ದ ತಪಸ್ಸಿನಲ್ಲಿ ಛಿದ್ರಗಳನ್ನು ಹುಡುಕತೊಡಗಿದರು. ಅವು ಯಾವುವೂ ಕಾಣದಿರಲು ಅವರೆಲ್ಲರೂ ಬಹು ದುಃಖಿತರಾದರು. ಆಗ ವಿಷ್ಣುವು ಬಹಳಕಾಲ ಆಲೋಚಿಸಿ ಆ ವೃತ್ರನ ವಧೆಗೆ ಉಪಾಯವೊಂದನ್ನು ಹುಡುಕಿ ಮಹೇಂದ್ರನನ್ನು ಕುರಿತು ಸಂತೋಷದಿಂದ ಹೇಳತೊಡಗಿದನು.

೭೧. ವಿಷ್ಣುವು ಹೇಳುತ್ತಾನೆ:—ಅಯ್ಯಾ ಶಕ್ರನೆ, ಈ ದಾನವನ ವಧೆಗೆ ಉಪಾಯವು ತಿಳಿಯಿತು. ಅದನ್ನೀಗ ನಿನಗೆ ಹೇಳುತ್ತೇನೆ. ಕೇಳಿ ಅದರಂತೆ ಶೀಘ್ರವಾಗಿ ಕಾರ್ಯವನ್ನು ಸಾಧಿಸು. ಈ ಉಪಾಯವೊಂದನ್ನುಳಿದು ಬೇರಾವ ಉಪಾಯವೂ ಇರುವುದಿಲ್ಲವೆಂಬುದು ದಿಟ.

೭೨. ಪರಮೇಶ್ವರನು ಈ ಅಸುರನನ್ನು ಸಮಸ್ತಶಸ್ತ್ರಗಳಿಗೂ ಅವಧ್ಯನನ್ನಾಗಿ ಮಾಡಿದ್ದಾನೆ. ಆದುದರಿಂದ ಇವನನ್ನು ಕೊಲ್ಲಲೋಸುಗ ಅಸ್ಥಿಮಯವಾದ ವಜ್ರಾಯುಧವನ್ನು ಸಂಪಾದಿಸು.

ಇಂದ್ರ ಉವಾಚ :—

ಅಸ್ಥಿಭಿಃ ಕಸ್ಯ ಜೀವಸ್ಯ ವಜ್ರಂ ದೇವ ಭವಿಷ್ಯತಿ ।
ಗಜಸ್ಯ ಶರಭಸ್ಯಾಽಥ ಕಿಂವಾಽನ್ಯಸ್ಯ ವದಸ್ವಮೇ ॥ ೭೩ ॥

ವಿಷ್ಣುರುವಾಚ :—

ಶತಹಸ್ತಪ್ರಮಾಣಂ ತತ್ಕ್ಷಡಶ್ರಿ ಚ ಸುರಾಽಧಿಪ ।
ಮಧ್ಯೇ ಕ್ಷಾಮಂ ತು ಪಾರ್ಶ್ವಾಭ್ಯಾಂ ಸ್ಥೂಲಂ ರೌದ್ರ ಸಮಾಕೃತಿ ॥ ೭೪ ॥

ಇಂದ್ರ ಉವಾಚ :—

ನ ತಾದೃಗ್ದೃಶ್ಯತೇ ಸತ್ವಂ ತ್ರೈಲೋಕ್ಯೇಽಪಿ ಸುರೇಶ್ವರ ।
ಯಸ್ಯಾಽಸ್ಥಿಭಿರ್ವಿಧೀಯೇತ ವಜ್ರಮೇವಂ ವಿಧಾಕೃತಿ ॥ ೭೫ ॥

ವಿಷ್ಣುರುವಾಚ :—

ದಧೀಚಿರ್ನಾಮ ವಿಪ್ರೋಽಸ್ತಿ ತಪಃ ಪರಮಮಾಸ್ಥಿತಃ ।
ದ್ವಿಗುಣಂ ಚ ತಥಾ ದೀರ್ಘಃ ಸರಸ್ವತ್ಯಾಂ ಕೃತಾಶ್ರಮಃ ॥ ೭೬ ॥
ತಂ ಗತ್ವಾ ಪ್ರಾರ್ಥಯಾಶು ತ್ವಂ ಸ್ವಾನ್ಯಸ್ಥೀನಿ ಪ್ರದಾಸ್ಯತಿ ।
ನಾಽದೇಯಂ ವಿದ್ಯತೇ ಕಿಂಚಿತ್ತಸ್ಯ ಸಂಪ್ರಾರ್ಥಿತಸ್ಯ ಹಿ ॥ ೭೭ ॥

---

೭೩. ಇಂದ್ರನು ಹೇಳುತ್ತಾನೆ:—ದೇವಾ, ಯಾವ ಪ್ರಾಣಿಯ ಅಸ್ಥಿಗಳಿಂದ ವಜ್ರಾಯುಧವಾಗುತ್ತದೆ? ಆನೆಯದೆ? ಶರಭಮೃಗದವುಗಳೆ? ಅನ್ಯ ಮೃಗಗಳವೆ? ಈ ವಿಷಯವನ್ನು ನನಗೆ ತಿಳಿಯಹೇಳುವವನಾಗು.

೭೪. ವಿಷ್ಣುವು ಹೇಳುತ್ತಾನೆ:—ಓ ಸುರಾಧಿಪ, ನೂರು ಹಸ್ತಗಳ ಪ್ರಮಾಣವುಳ್ಳದ್ದಾಗಿ ಷಟ್ಕೋಣ ಸಮನ್ವಿತವಾಗಿ ಮಧ್ಯಭಾಗದಲ್ಲಿ ಕೃಶವಾಗಿಯೂ ಎರಡೂ ಪಕ್ಕಗಳಲ್ಲಿ ದಪ್ಪವಾಗಿಯೂ ಬಹು ಭಯಂಕರವಾಗಿಯೂ ಆ ವಜ್ರಾಯುಧವು ಇರತಕ್ಕದ್ದು.

೭೫. ಇಂದ್ರನು ಹೇಳುತ್ತಾನೆ:—ಎಲೈ ಸುರೇಶ್ವರನೆ, ಈ ವಿಧವಾದ ವಜ್ರಾಯುಧವನ್ನು ಮಾಡಲನುಗುಣವಾದ ಅಸ್ಥಿಗಳನ್ನೊಳಗೊಂಡ ಪ್ರಾಣಿಯು ಮೂರು ಲೋಕಗಳಲ್ಲಿ ಯಾವುದೂ ಇರುವುದಿಲ್ಲವಲ್ಲಾ!

೭೬. ವಿಷ್ಣುವು ಹೇಳುತ್ತಾನೆ:—"ಮಹೇಂದ್ರ, ಈ ಪ್ರಮಾಣಕ್ಕೆ ದ್ವಿಗುಣವಾದ ದೈರ್ಘ್ಯವನ್ನು ಪಡೆದಿರುವ ದಧೀಚಿಯೆಂಬ ವಿಪ್ರನು ಸರಸ್ವತೀ ನದಿಯ ತೀರದಲ್ಲಿ ಆಶ್ರಮವನ್ನು ಮಾಡಿಕೊಂಡು ತಪಸ್ಸನ್ನೆಸಗುತ್ತಿರುವನು.

೭೭. ನೀನು ಜಾಗ್ರತೆಯಾಗಿ ಆತನಲ್ಲಿಗೆ ಹೋಗಿ ಆತನ ಅಸ್ಥಿಗಳಿಗಾಗಿ ಪ್ರಾರ್ಥಿಸುವವನಾಗು. ಆತನು ಅವುಗಳನ್ನು ನಿನಗೆ ಕೊಡುತ್ತಾನೆ. ತನ್ನನ್ನು ಪ್ರಾರ್ಥಿಸಿದಾತನಿಗೆ ಅದೇಯವೆನಿಸಿದ ಏನೂ ಅವನಲ್ಲಿರುವುದಿಲ್ಲ."

ತತಃ ಶಕ್ರಃ ಸುರೈಃ ಸಾರ್ಧಂ ಗತ್ವಾ ತಸ್ಯ ತದಾಶ್ರಮಂ ।
ಪ್ರಾಚೀ ಸರಸ್ವತೀ ತೀರೇ ಪುಷ್ಕರೇ ದ್ವಿಜಸತ್ತಮಾಃ ॥ ೭೮ ॥
ಅಥ ದೇವಾನ್ ಸಮಾಲೋಕ್ಯ ಸಂಪ್ರಾಪ್ತಾನ್ನಿಜಮಂದಿರೇ ।
ದಧೀಚಿಃ ಸಂಪ್ರಹೃಷ್ಟಾತ್ಮಾ ಸತ್ವರಃ ಸಮ್ಮುಖಂ ಯಯೌ ॥ ೭೯ ॥
ಸ ಪ್ರಣಮ್ಯ ಸಹಸ್ರಾಕ್ಷಂ ತಥಾಽನ್ಯಾನಪಿ ಸನ್ಮುನಿಃ ।
ಅರ್ಘ್ಯಾದಿಭಿಸ್ತತಃ ಪೂಜಾಂ ಚಕ್ರೇ ತೇಷಾಂ ತತಃ ಪರಂ ॥ ೮೦ ॥
ತತಃ ಪ್ರೋವಾಚ ಹೃಷ್ಟಾತ್ಮಾ ವಿನಯಾಽವನತಃ ಸ್ಥಿತಃ ।
ಸ್ವಯಮೇವ ಸಹಸ್ರಾಕ್ಷಂ ಪ್ರಣಿಪತ್ಯ ಮುಹುರ್ಮುಹುಃ ॥ ೮೧ ॥

ದಧೀಚಿರುವಾಚ :—

ಕಿಮರ್ಥಮಾಗತಾ ದೇವಾಃ ಕೃತ್ಯಂ ಚಾಶು ನಿವೇದ್ಯತಾಂ ।
ಧನ್ಯೋಽಹಮಾಗತೋ ಯಸ್ಯ ಗೃಹೇ ತ್ವಂ ಬಲಸೂದನ ॥ ೮೨ ॥

ಶಕ್ರ ಉವಾಚ :—

ವೃತ್ರೇಣ ನಿರ್ಜಿತಾಃ ಸರ್ವೇ ವಯಂ ಬ್ರಾಹ್ಮಣ ಸತ್ತಮ ।
ಸವಧ್ಯೋ ನಹಿ ಶಸ್ತ್ರಾಣಾಂ ಸರ್ವೇಷಾಂ ವರಪುಷ್ಟಿತಃ ॥ ೮೩ ॥

---

೭೮. ಎಲೈ ದಿಜಸತ್ತಮರೆ, ವಿಷ್ಣುವು ಈ ರೀತಿ ನುಡಿಯಲು ಶಕ್ರನು ದೇವತೆಗಳೆಲ್ಲರೊಡನೆಯೂ ಹೊರಟು ಸರಸ್ವತೀನದಿಯ ಪೂರ್ವತೀರದ ಪುಷ್ಕರ ಕ್ಷೇತ್ರದಲ್ಲಿ ನೆಲಸಿದ್ದ ಆ ಮಹರ್ಷಿಯ ಆಶ್ರಮಕ್ಕೈತಂದನು.

೭೯. ಹೀಗೆ ದೇವತೆಗಳೆಲ್ಲರೂ ತನ್ನ ಆಶ್ರಮಕ್ಕೆ ಬಂದುದನ್ನು ನೋಡಿ ಆ ದಧೀಚಿಮುನಿಯು ಪ್ರಹೃಷ್ಟಾಂತರಂಗನಾಗಿ ತ್ವರೆಯಿಂದ ಅವರನ್ನು ಎದುರ್ಗೊಂಡನು.

೮೦–೮೧. ತರುವಾಯ ಆ ಮುನಿಯು ಸಹಸ್ರಾಕ್ಷನನ್ನೂ ಇತರ ದೇವತೆಗಳನ್ನೂ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳಿಂದ ಎಲ್ಲರಿಗೂ ಉತ್ತಮ ಸತ್ಕಾರವನ್ನು ಸಲ್ಲಿಸಿದನು. ಇದಾದಮೇಲೆ ಆತನು ಬಹುವಾಗಿ ಸಂತೋಷಗೊಂಡು ಅಡಿಗಡಿಗೂ ಆ ಸಹಸ್ರಾಕ್ಷನನ್ನು ನಮಸ್ಕರಿಸುತ್ತ, ವಿನಯಾವನತನಾಗಿ ತಾನಾಗಿಯೇ ಆ ದೇವತೆಗಳನ್ನು ಕುರಿತು ಹೇಳತೊಡಗಿದನು.

೮೨. ದಧೀಚಿಯು ಹೇಳುತ್ತಾನೆ:—ಎಲೈ ದೇವತೆಗಳಿರಾ, ನೀವು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುವಿರೆಂಬುದನ್ನು ತಿಳಿಸಿರಿ. ಎಲೈ ಬಲಸೂದನನೆ, ನೀನು ನನ್ನ ಆಶ್ರಮಕ್ಕೆ ಬಂದೆಯಾಗಿ ಇದೀಗ ನಾನು ಧನ್ಯನಾದೆನು.

೮೩. ಶಕ್ರನು ಹೇಳುತ್ತಾನೆ:—ಓ ಬ್ರಾಹ್ಮಣಸತ್ತಮ, ನಾವೆಲ್ಲರೂ ವೃತ್ರಾಸುರನಿಂದ ನಿರ್ಜಿತರಾಗಿದ್ದೇವೆ. ಅವನಾದರೋ ವರಪುಷ್ಟನಾದುದರಿಂದ ಸಮಸ್ತ ಶಸ್ತ್ರಗಳಿಗೂ ಅವಧ್ಯನಾಗಿದ್ದಾನೆ.

ಸೋಽಸ್ತಿ ಸಂಭವವಜ್ರಸ್ಯ ವಧ್ಯಃ ಸ್ಯಾದಬ್ರವೀದ್ಧರಿಃ ।
ಶತಹಸ್ತ ಪ್ರಮಾಣಸ್ಯ ನ ಚ ಜೀವೋಽಸ್ತಿ ತಾದೃಶಃ ॥ ೮೪ ॥
ತ್ವಾಂ ಮುಕ್ತ್ವಾ ಬ್ರಾಹ್ಮಣಶ್ರೇಷ್ಠ ತಸ್ಮಾದಸ್ಥೀನಿ ಯಚ್ಛ ನಃ ।
ಸ್ವಕೀಯಾನಿ ಭವೇದ್ಯೇನ ವಜ್ರಂ ತಸ್ಯ ವಿನಾಶಕಂ ॥ ೮೫ ॥
ಕುರು ಕೃತ್ಯಂ ದ್ವಿಜಶ್ರೇಷ್ಠ ದೇವಾನಾಮಾರ್ತಿನಾಶನಂ ।
ಅನ್ಯಥಾ ವಿಬುಧಾಃ ಸರ್ವೇ ನಾಶಂ ಯಾಸ್ಯಂತಿ ಕೃತ್ಸ್ನಶಃ ॥ ೮೬ ॥

ಸೂತ ಉವಾಚ :—

ತಚ್ಛ್ರುತ್ವಾ ಸಂಪ್ರಹೃಷ್ಟಾತ್ಮಾ ದಧೀಚಿರ್ಭಗವಾನ್ ಮುನಿಃ ।
ಅತ್ಯಜಜ್ಜೀವಿತಂ ತೇಷಾಂ ಹಿತಾರ್ಥಾಯ ದಿವೌಕಸಾಂ ॥ ೮೭ ॥
ತತೋ ದೇವಾಃ ಪ್ರಹೃಷ್ಟಾಸ್ತೇ ಗೃಹೀತ್ವಾಸ್ಥೀನಿ ಕೃತ್ಸ್ನಶಃ ।
ತತಶ್ಚಕ್ರುರ್ಮಹಾವಜ್ರಂ ಯಾದೃಶಂ ವಿಷ್ಣುನೋದಿತಂ ॥ ೮೮ ॥
ಅಥ ಶಕ್ರಸ್ತದಾದಾಯ ನೈಮಿಷಾಭಿಮುಖೋ ಯಯೌ ।
ಭಯೇನ ಮಹತಾ ಯುಕ್ತೋ ವೇಪಮಾನೋ ನಿಶಾಗಮೇ ॥ ೮೯ ॥

---

೮೪–೮೬. ಶ್ರೀ ಹರಿಯು ಶತಹಸ್ತಪ್ರಮಾಣವುಳ್ಳ ಅಸ್ಥಿಯಿಂದಾದ ವಜ್ರಾಯುಧವೊಂದರಿಂದಲೇ ಆ ದನುಜನು ವಧ್ಯನಾಗುವನೆಂದು ಹೇಳಿದನು. ಆದರೆ ನಿನ್ನೊಬ್ಬನನ್ನುಳಿದು ಅಂತಹ ಪ್ರಾಣಿಯಾವುದೂ ಇರುವುದಿಲ್ಲ. ಆದುದರಿಂದ ಎಲೈ ಬ್ರಾಹ್ಮಣಶ್ರೇಷ್ಠನೆ, ನಿನ್ನ ಅಸ್ಥಿಗಳನ್ನು ನಮಗೆ ದಾನಮಾಡು. ಅವುಗಳಿಂದ ವೃತ್ರ ವಿನಾಶಕವಾದ ವಜ್ರಾಯುಧವಾಗುತ್ತದೆ. ಅಯ್ಯಾ ದ್ವಿಜಶ್ರೇಷ್ಠನೆ, ದೇವತೆಗಳೆಲ್ಲರಿಗೂ ಆರ್ತಿನಾಶಕವಾದ ಈ ಪುಣ್ಯಕಾರ್ಯವನ್ನು ಮಾಡು. ಇಲ್ಲದಿದ್ದರೆ ದೇವತೆಗಳೆಲ್ಲರೂ ಸಂಪೂರ್ಣವಾಗಿ ನಾಶವಾಗುತ್ತಾರೆ.

೮೭. ಸೂತನು ಹೇಳುತ್ತಾನೆ:—ಅಯ್ಯಾ ವಿಪ್ರರೆ, ಭಗವಾನ್ ದಧೀಚಿ ಮುನಿಯು ಈ ಮಾತನ್ನು ಕೇಳಿದೊಡನೆಯೇ ಪರಮ ಸಂತುಷ್ಟನಾಗಿ ಆ ದೇವತೆಗಳಿಗೆ ಹಿತವನ್ನುಂಟುಮಾಡಲೋಸುಗ ಜೀವಿತವನ್ನು ತೊರೆದನು.

೮೮. ತರುವಾಯ ದೇವತೆಗಳೆಲ್ಲರೂ ಪ್ರಹೃಷ್ಟರಾಗಿ ಆ ಮುನಿಯ ಅಸ್ಥಿಗಳೆಲ್ಲವನ್ನೂ ತೆಗೆದುಕೊಂಡು ಮಹಾವಿಷ್ಣುವು ನಿರೂಪಿಸಿದ ರೀತಿಯಲ್ಲಿ ಮಹಾವಜ್ರಾಯುಧವನ್ನು ನಿರ್ಮಿಸಿದರು.

೮೯. ವಜ್ರಾಯುಧವು ಸಿದ್ಧವಾದ ಬಳಿಕ ಶಕ್ರನು ಅದನ್ನು ತೆಗೆದುಕೊಂಡು ಆ ಸಂಧ್ಯಾಸಮಯದಲ್ಲಿಯೇ ಮಹತ್ತರವಾದ ಭಯಕ್ಕೊಳಗಾಗಿ ನಡುಗುತ್ತ ಆ ವೃತ್ರಾಸುರನು ತಪಸ್ಸನ್ನೆಸಗುತ್ತಿದ್ದ ನೈಮಿಷದ ಕಡೆಗೆ ಹೊರಟನು.

ತತ್ರ ಧ್ಯಾನಸಸ್ಥಿತಂ ವೃತ್ರಂ ದೂರಸ್ಥಸ್ತ್ರಿದಶಾಧಿಪಃ ।
ವಜ್ರೇಣ ತಾಡಯಾಮಾಸ ಪಲಾಯನ ಪರಾಯಣಃ ॥ ೯೦ ॥
ಸೋಽಪಿ ವಜ್ರಪ್ರಹಾರೇಣ ಭಸ್ಮಸಾತ್ಸಮುಪದ್ಯತ ।
ವೃತ್ರೋ ದಾನವಶಾರ್ದೂಲೋ ವಹ್ನಿಂ ಪ್ರಾಪ್ಯ ಪತಂಗವತ್ ॥ ೯೧ ॥
ಶಕ್ರೋಽಪಿ ಭಯಸಂತ್ರಸ್ತೋ ಗತ್ವಾ ಸಾಗರಮಧ್ಯಗಂ ।
ಪರ್ವತಂ ಸುದುರಾರೋಹಂ ತುಂಗಶೃಂಗಂ ಸಮಾಶ್ರಿತಃ ॥ ೯೨ ॥
ನ ಜಾನಾತಿ ಹತಂ ವೃತ್ರಂ ವಜ್ರಘಾತೇನ ತೇನ ತಂ ।
ಕೇವಲಂ ವೀಕ್ಷತೇ ಮಾರ್ಗಂ ವೃತ್ರಾಗಮನ ಸಂಭವಂ ॥ ೯೩ ॥
ಏತಸ್ಮಿನ್ನಂತರೇ ದೇವಾಃ ಸಂಪ್ರಹೃಷ್ಟತನೂರುಹಾಃ ।
ವೃತ್ರಂ ವಿನಿಹತಂ ದೃಷ್ಟ್ವಾ ತುಷ್ಟುವುಸ್ತ್ರಿದಶಾಧಿಪಂ ॥ ೯೪ ॥
ನ ಜಾನಂತಿ ಭಯಾನ್ನಷ್ಟಂ ತಸ್ಮಿನ್ ಸಾಗರಪರ್ವತೇ ।
ಅನ್ವಿಷ್ಯ ಚಿರಕಾಲೇನ ಕೃಚ್ಛ್ರಾತ್ಸಂಪ್ರಾಪ್ಯ ತಂ ತತಃ ॥ ೯೫ ॥
ವೀಕ್ಷಾಂಚಕ್ರುಃ ಸಮಾಸೀನಂ ವಿಷಮೇ ಗಿರಿಗಹ್ವರೇ ।
ತೇಜೋ ಹೀನಂ ತಥಾ ದೀನಂ ಬ್ರಹ್ಮಹತ್ಯಾಪರಿಪ್ಲುತಂ ॥ ೯೬ ॥

---

೯೦. ಅಲ್ಲಿಯಾದರೋ ಆ ತ್ರಿದಶಾಧಿಪನು ಧ್ಯಾನಸ್ಥನಾಗಿದ್ದ ಆ ವೃತ್ರನನ್ನು ದೂರದಲ್ಲಿದ್ದೇ ಆ ವಜ್ರಾಯುಧದಿಂದ ಹೊಡೆದು ಓಡಿಹೋದನು.

೯೧. ದಾನವಶಾರ್ದೂಲನಾದ ವೃತ್ರನಾದರೋ ಬೆಂಕಿಗೆ ಬಿದ್ದ ಪತಂಗದ ಹುಳುವಿನಂತೆ ಆ ವಜ್ರ ಪ್ರಹಾರದಿಂದ ಸುಟ್ಟು ಬೂದಿಯಾಗಿ ಹೋದನು.

೯೨. ಇತ್ತ ಶಕ್ರನು ಭಯದಿಂದ ತತ್ತಳಿಸಿ ಸಮುದ್ರ ಮಧ್ಯವನ್ನು ಸೇರಿ ಅಲ್ಲಿದ್ದ ದುರಾರೋಹವಾದ ಪರ್ವತದ ಉತ್ತುಂಗ ಶಿಖರವನ್ನು ಆಶ್ರಯಿಸಿದನು.

೯೩. ತಾನು ಪ್ರಯೋಗಮಾಡಿದ ವಜ್ರಾಯುಧದ ಘಾತದಿಂದ ವೃತ್ರನು ಹತನಾದುದು ಅವನಿಗೆ ತಿಳಿಯಲಿಲ್ಲ. ವೃತ್ರನು ಎಲ್ಲಿ ಅಟ್ಟಿ ಬರುವನೋ ಎಂಬ ಶಂಕೆಯಿಂದ ನಾಲ್ಕೂ ದಿಟ್ಟುಗಳನ್ನೂ ನಿರುಕಿಸುತ್ತ ಕೇವಲವಾಗಿ ಅವನು ಬರುವ ಮಾರ್ಗವನ್ನೇ ನಿರೀಕ್ಷಿಸುತ್ತಿದ್ದನು.

೯೪. ಇದೇ ಸಮಯದಲ್ಲಿ ದೇವತೆಗಳಾದರೋ ನಿಹತನಾದ ವೃತ್ರನನ್ನು ಕಂಡು ಸಂತೋಷದಿಂದ ರೋಮಾಂಚಿತಗಾತ್ರರಾಗಿ ತಮ್ಮ ಒಡೆಯನಾದ ಆ ಮಹೇಂದ್ರನನ್ನು ಬಹಳವಾಗಿ ಹೊಗಳಿದರು.

೯೫—೯೬. ಆದರೆ ಆ ಮಹೇಂದ್ರನು ಭಯದಿಂದ ಪಲಾಯನಗೈದು ಪರ್ವತದಲ್ಲಿ ಸೇರಿರುವ ಸಂಗತಿಯು ಅವರಾರಿಗೂ ಗೊತ್ತಾಗಲಿಲ್ಲ. ಅವನನ್ನು ಬಹಳ ಹೊತ್ತು ಹುಡುಕಿ ಕಡೆಗೆ ಬಹು ಇಕ್ಕಟ್ಟಾದ ಆ ಪರ್ವತದ ಒಂದು ಗುಹೆಯಲ್ಲಿ ಕುಳಿತಿದ್ದ ಅವನನ್ನು ಕಂಡರು. ಅವನು ಬ್ರಹ್ಮಹತ್ಯೆಗೊಳಗಾಗಿ

ಗಾತ್ರದುರ್ಗಂಧಿತಾಸಂಗ್ಯೈಃ ಪೂರಯಂತಂ ದಿಶೋ ದಶ ॥ ೯೭ ॥
ಅಥೋವಾಚ ಚತುರ್ವಕ್ತ್ರೋ ದೃಷ್ಟ್ವಾ ಶಕ್ರಂ ತಥಾವಿಧಂ ।
ಸಮಸ್ತಾನ್ದೇವಸಂಘಾತಾನ್ ದೂರಸ್ಥಃ ಪಾಪಶಂಕಯಾ ॥ ೯೮ ॥
ಶಕ್ರೋಽಯಂ ವಿಬುಧಶ್ರೇಷ್ಠಾ ಬ್ರಹ್ಮಹತ್ಯಾ ಪರಿಪ್ಲುತಃ ।
ತಸ್ಮಾತ್ತ್ಯಾಜ್ಯಃ ಸುದೂರೇಣ ನೋ ಚೇತ್ಪಾಪಮವಾಪ್ಸ್ಯಥ ॥ ೯೯ ॥
ಪಶ್ಯಧ್ವಂ ಸರ್ವಲಿಂಗಾನಿ ಬ್ರಹ್ಮಹತ್ಯಾನ್ವಿತಾನಿ ಚ ।
ಅಸ್ಯ ಗಾತ್ರೇಷು ದೃಶ್ಯಂತೇ ತಸ್ಮಾದ್ಗಚ್ಛಾಮಹೇ ದಿವಂ ॥ ೧೦೦ ॥
ಪಿತಾಮಹಮುಖಾನ್ ದೃಷ್ಟ್ವಾ ದೇವಾನ್ ಪ್ರಾಪ್ತಾನ್ ಸುರಾಧಿಪಃ ।
ಪರಾಙ್ಮುಖಾನಕಸ್ಮಾಚ್ಚ ಸಂಜಾತಾನ್ವಿಸ್ಮಯಾನ್ವಿತಃ ॥ ೧೦೧ ॥
ತತಃ ಪ್ರೋವಾಚ ಸಂಭ್ರಾಂತಃ ಕಿಮಿದಂ ಗಮ್ಯತೇ ಸುರಾಃ ।
ದೃಷ್ಟ್ವಾಽಪಿ ಮಾಮನಾಭಾಷ್ಯ ಕಚ್ಚಿತ್ಕ್ಷೇಮಂ ಗೃಹೇ ಮಮ ॥ ೧೦೨ ॥
ಕಚ್ಚಿತ್ಸ ನಿಹತಸ್ತೇನ ಮಮ ವಜ್ರೇಣ ದಾನವಃ ।
ಕಚ್ಚಿನ್ಮಾಂ ಸ ಯುದ್ಧಾರ್ಥಮನ್ವೇಷಯತಿ ದುರ್ಮತಿಃ ॥ ೧೦೩ ॥

---

ತೇಜಸ್ಸನ್ನು ಕಳೆದುಕೊಂಡು ದೀನನಾಗಿಹೋಗಿದ್ದನು. ಅವನ ಮೈಯಿಂದ ಹೊರಡುತ್ತಿದ್ದ ನಾತವು ದಶದಿಶೆಗಳನ್ನೂ ತುಂಬಿದ್ದಿತು.

೯೮. ಆಗ ಬ್ರಹ್ಮದೇವನು ಆ ಸ್ಥಿತಿಯಲ್ಲಿದ್ದ ದೇವೇಂದ್ರನನ್ನು ಕಂಡು ಪಾಪಶಂಕೆಯಿಂದ ದೂರದಲ್ಲೇ ನಿಂತು ಸಮಸ್ತ ದೇವಸಮೂಹಗಳನ್ನೂ ಕುರಿತು ಹೀಗೆ ಹೇಳಿದನು:

೯೯. "ಎಲೈ ವಿಬುಧಶ್ರೇಷ್ಠರೆ, ಇದೋ ಇವನೇ ಶಕ್ರನು. ಇವನು ಬ್ರಹ್ಮಹತ್ಯೆಗೊಳಗಾಗಿದ್ದಾನೆ. ಇವನನ್ನು ದೂರದಲ್ಲಿಯೇ ವರ್ಜಿಸತಕ್ಕದ್ದು. ಇಲ್ಲದಿದ್ದಲ್ಲಿ ನಿಮ್ಮೆಲ್ಲರಿಗೂ ಪಾಪವು ಸುತ್ತಿಕೊಳ್ಳುತ್ತದೆ.

೧೦೦. ಇದೋ ನೋಡಿರಿ, ಇವನ ಪ್ರತ್ಯಂಗಗಳಲ್ಲಿಯೂ ಬ್ರಹ್ಮಹತ್ಯೆಯ ಗುರುತುಗಳು ಕಂಡುಬರುತ್ತಿವೆ. ಆದುದರಿಂದ ನಾವಿಲ್ಲಿರತಕ್ಕುದಲ್ಲ, ನಡೆಯಿರಿ. ದೇವಲೋಕಕ್ಕೆ ಹೋಗೋಣ."

೧೦೧–೧೦೩. ಆಗ ಮಹೇಂದ್ರನು ಪಿತಾಮಹನೇ ಮೊದಲಾದ ಎಲ್ಲ ದೇವತೆಗಳೂ ಇದ್ದಕ್ಕಿದ್ದಂತೆಯೇ ಹಿಂತಿರುಗುತ್ತಿರುವುದನ್ನು ಕಂಡು ವಿಸ್ಮಯಗೊಂಡು ತಳಮಳಿಸಿ ಅವನನ್ನು ಕುರಿತು, "ಎಲೈ ದೇವತೆಗಳಿರಾ, ಇದೇನಿದು? ನನ್ನನ್ನು ನೋಡಿಯೂ ನನ್ನೊಡನೆ ಮಾತನಾಡದೆ ಹೊರಟುಹೋಗುತ್ತಿರುವಿರಲ್ಲ! ನನ್ನ ಮನೆಯಲ್ಲಿ ಎಲ್ಲವೂ ಕ್ಷೇಮವಾಗಿರುವುದೆ? ಆ ವೃತ್ರದಾನವನು ನನ್ನ ವಜ್ರಾಯುಧದಿಂದ ಮಡಿದನೇ ಇಲ್ಲವೆ, ಅಥವಾ ಆ ದುರ್ಮತಿಯು ಯುದ್ಧಾರ್ಥಿಯಾಗಿ ನನ್ನನ್ನು ಹುಡುಕುತ್ತಿರುವನೋ," ಎಂದು ಕೇಳಿದನು.

ಬ್ರಹ್ಮೋವಾಚ :—

ನಿಹತಃ ಸ ತ್ವಯಾ ಶಕ್ರ ಸ್ತೇನ ವಜ್ರೇಣ ದಾನವಃ ।
ಗತೋ ಮೃತ್ಯುವಶಂ ಪಾಪೋ ನ ಭಯಂ ಕರ್ತುಮರ್ಹಸಿ ॥ ೧೦೪ ॥
ಪರಂ ತಸ್ಯ ವಧಾಜ್ಜಾತಾ ಬ್ರಹ್ಮಹತ್ಯಾ ಸುಗರ್ಹಿತಾ ।
ತವ ಶಕ್ರ ನ ತೇನಾಽದ್ಯ ಸ್ಪೃಶಾಮೋಽಸ್ಪೃಶ್ಯತಾಂ ಗತಂ ॥ ೧೦೫ ॥

ಇಂದ್ರ ಉವಾಚ :—

ಮಯಾ ವಿನಿಹತಾಃ ಪೂರ್ವಂ ಬಹವಃ ಕಿಲ ದಾನವಾಃ ।
ಬ್ರಹ್ಮಹತ್ಯಾ ನ ಸಂಜಾತಾ ಮಮ ಹತ್ಯಾಽಧುನಾ ಕಥಂ ॥ ೧೦೬ ॥

ಬ್ರಹ್ಮೋವಾಚ :—

ತೇ ತ್ವಯಾ ನಿಹತಾ ಯುದ್ಧೇ ಕ್ಷಾತ್ರಧರ್ಮೇಣ ವಾಸವ ।
ವಿಶುದ್ಧಾ ದಾನವಾಃ ಸರ್ವೇ ತೇನ ಜಾತಂ ನ ಪಾತಕಂ ॥ ೧೦೭ ॥
ಏಷ ಯಜ್ಞೋಪವೀತಾಢ್ಯೋ ವಿಶೇಷಾತ್ತಪಸಿ ಸ್ಥಿತಃ ।
ಛಲೇನ ನಿಹತಃ ಶಕ್ರ ತೇನ ತ್ವಂ ಪಾಪಸಂಯುತಃ ॥ ೧೦೮ ॥

---

೧೦೪. ಬ್ರಹ್ಮನು ಹೇಳುತ್ತಾನೆ:—ಅಯ್ಯಾ ಶಕ್ರನೆ, ವೃತ್ರದಾನವನು ನೀನು ಪ್ರಯೋಗಮಾಡಿದ ವಜ್ರಾಯುಧದಿಂದ ಹತನಾಗಿ ಮೃತ್ಯುಮುಖ ವನ್ನು ಸೇರಿದನು. ಇನ್ನು ನೀನು ಆ ಪಾಪಿಷ್ಠನಿಗೆ ಏನೂ ಹೆದರ ಬೇಕಾಗಿಲ್ಲ.

೧೦೫. ಆದರೆ, ಅವನ ವಧೆಯಿಂದ ಬಹು ನಿಂದ್ಯವಾದ ಬ್ರಹ್ಮಹತ್ಯೆಯು ನಿನಗೆ ಪ್ರಾಪ್ತವಾಗಿದೆ. ನೀನು ನಮ್ಮೆಲ್ಲರಿಗೂ ಅಸ್ಪೃಶ್ಯನಾಗಿದ್ದೀಯೆ. ಆದುದ ರಿಂದ ನಾವು ನಿನ್ನನ್ನು ಸ್ಪರ್ಶಿಸುವುದಿಲ್ಲ.

೧೦೬. ಇಂದ್ರನು ಹೇಳುತ್ತಾನೆ:—ಎಲೈ ಬ್ರಹ್ಮನೆ, ಪೂರ್ವದಲ್ಲಿ, ನಾನು ಅನೇಕ ದಾನವರನ್ನು ವಧಿಸಿದ್ದೇನೆ. ಆದರೆ ಅದರಿಂದ ನನಗೆ ಯಾವ ಬ್ರಹ್ಮ ಹತ್ಯೆಯೂ ಉಂಟಾಗಲಿಲ್ಲ. ಈಗ ಈ ವೃತ್ರಾಸುರನ ವಧೆಯಿಂದ ಮಾತ್ರ ನನಗೆ ಬ್ರಹ್ಮಹತ್ಯೆಯುಂಟಾದುದು ಹೇಗೆ?

೧೦೭. ಬ್ರಹ್ಮನು ಹೇಳುತ್ತಾನೆ :—ಎಲೈ ವಾಸವನೆ, ನೀನು ಪೂರ್ವದಲ್ಲಿ ಕ್ಷಾತ್ರಧರ್ಮದಿಂದ ಕೇವಲ ಪಾಪಿಷ್ಠರಾದ ದಾನವರನ್ನು ರಣಾಂಗಣದಲ್ಲಿ ವಧಿಸಿದ್ದೀಯೆ. ಅದರಿಂದ ನಿನಗಾವ ಪಾತಕವೂ ಉಂಟಾಗಲಿಲ್ಲ.

೧೦೮. ವೃತ್ರದಾನವನಾದರೋ ಅವರಂತಲ್ಲ. ಇವನು ಯಜ್ಞೋಪವೀತಿ. ಅದರಲ್ಲಿಯೂ ತಪಸ್ಸಿನಲ್ಲಿದ್ದವನು. ಇಂಥವನನ್ನು ನೀನು ಕಪಟದಿಂದ ಕೊಂದೆ. ಅದರ ಫಲವಾಗಿ ಇದೀಗ ನೀನು ಪಾಪಕ್ಕೊಳಗಾಗಿರುವೆ.

ಇಂದ್ರ ಉವಾಚ :—

ಜಾನಾಮ್ಯಹಂ ಚತುರ್ವಕ್ತ್ರ ಸ್ವಂ ಕಾಯಂ ಪಾಪಸಂಯುತಂ ।
ಚಿಹ್ನೈರ್ಬ್ರಹ್ಮವಧೋದ್ಭೂತೈಸ್ತಸ್ಮಾಚ್ಛುದ್ಧಿಂ ವದಸ್ವ ಮೇ ॥ ೧೦೯ ॥
ಯಯಾ ಯಾತಿ ದ್ರುತಂ ಪಾಪಂ ಬ್ರಹ್ಮಹತ್ಯಾ ಸಮುದ್ಭವಂ ।
ಸ್ಪೃಶ್ಯೋ ಭವಾಮಿ ಸರ್ವೇಷಾಂ ದೇವಾನಾಂ ಪ್ರಪಿತಾಮಹ ॥ ೧೧೦ ॥

ಬ್ರಹ್ಮೋವಾಚ :—

ತೀರ್ಥಯಾತ್ರಾಂ ಸುರಶ್ರೇಷ್ಠ ತದರ್ಥಂ ಕರ್ತುಮರ್ಹಸಿ ।
ತಯಾ ವಿನಾ ನ ತೇ ಪಾಪಂ ನಾಶಮಾಯಾತಿ ಕೃತ್ಸ್ನಶಃ ॥ ೧೧೧ ॥

ಸೂತ ಉವಾಚ :—

ತತಸ್ತದ್ವಚನಾಚ್ಛಕ್ರಸ್ತೀರ್ಥಯಾತ್ರಾಪರಾಯಣಃ ।
ಬಭ್ರಾಮ ಸಕಲಾಂ ಪೃಥ್ವೀಂ ಸ್ನಾನಂ ಕುರ್ವನ್ ಪೃಥಕ್ ಪೃಥಕ್ ॥ ೧೧೨ ॥
ತೀರ್ಥೇಷು ಸುಪ್ರಸಿದ್ಧೇಷು ನದೀನದಯುತೇಷು ಚ ।
ವಾರಾಣಸ್ಯಾಂ ಪ್ರಯಾಗೇ ಚ ಪ್ರಭಾಸೇ ಕುರುಜಾಂಗಲೇ ॥ ೧೧೩ ॥

---

೧೦೯. ಇಂದ್ರನು ಹೇಳುತ್ತಾನೆ:—ಎಲೈ ಚತುರ್ವಕ್ತ್ರನೆ, ಬ್ರಹ್ಮವಧೆಯಿಂದುಂಟಾಗಿರುವ ಈ ಚಿಹ್ನೆಗಳಿಂದ ನನ್ನ ಶರೀರವು ಪಾಪಭೂಯಿಷ್ಠವಾಗಿರುವುದೆಂಬುದನ್ನು ನಾನು ಬಲ್ಲೆನು. ಆದುದರಿಂದ ಇವನ್ನು ಶುದ್ಧಿಗೊಳಿಸುವುದೆಂತೆಂಬುದನ್ನು ನನಗೆ ತಿಳಿಸು.

೧೧೦. ಎಲೈ ಪಿತಾಮಹನೆ, ಬ್ರಹ್ಮಹತ್ಯೆಯಿಂದುಂಟಾಗಿರುವ ಈ ಪಾಪವು ಜಾಗ್ರತೆಯಾಗಿ ಕಳೆದುಹೋಗಿ ದೇವತೆಗಳಾದ ನಿಮ್ಮೆಲ್ಲರಿಗೂ ನಾನು ಯಾವುದರಿಂದ ಸ್ಪೃಶ್ಯನಾಗುತ್ತೇನೆಯೋ ಅಂಥ ಉಪಾಯವನ್ನು ನನಗೆ ತಿಳಿಸುವವನಾಗು.

೧೧೧. ಬ್ರಹ್ಮನು ಹೇಳುತ್ತಾನೆ:—ಓ ಸುರಶ್ರೇಷ್ಠ, ನೀನು ಈ ಪಾಪಪರಿಹಾರಕ್ಕಾಗಿ ತೀರ್ಥಯಾತ್ರೆಯನ್ನು ಮಾಡಬೇಕು. ತೀರ್ಥಯಾತ್ರೆಯಿಲ್ಲದೆ ಈ ನಿನ್ನ ಬ್ರಹ್ಮಹತ್ಯಾ ದೋಷವು ಸಂಪೂರ್ಣವಾಗಿ ಕಳೆಯುವುದಿಲ್ಲ.

೧೧೨. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ, ಬ್ರಹ್ಮನಾಡಿದ ಈ ಮಾತುಗಳನ್ನು ಕೇಳಿ ಶಕ್ರನು ತೀರ್ಥಯಾತ್ರಾಪರಾಯಣನಾಗಿ ಭೂಮಂಡಲದ ಸಮಸ್ತ ತೀರ್ಥಕ್ಷೇತ್ರಗಳನ್ನೂ ಸುತ್ತಿ ಪ್ರತಿಯೊಂದರಲ್ಲಿಯೂ ಬೇರೆ ಬೇರೆಯಾಗಿಯೇ ಸ್ನಾನವನ್ನು ಮಾಡಿದನು.

೧೧೩–೧೧೪. ನದನದೀಸಹಿತವಾದ ಸುಪ್ರಸಿದ್ಧವಾದ ತೀರ್ಥಗಳಲ್ಲಿಯೂ ವಾರಾಣಸಿ, ಪ್ರಯಾಗ, ಪ್ರಭಾಸ, ಕುರುಜಾಂಗಲ ಮೊದಲಾದ ಕ್ಷೇತ್ರ

ತಥಾಽನ್ಯೇಷು ಸಹಸ್ರಾಕ್ಷೋ ವಿಪಾಪ್ಮಾ ನ ವ್ಯಜಾಯತ ।
ತತೋ ವೈರಾಗ್ಯಮಾಪನ್ನಶ್ಚಿಂತಯಾಮಾಸ ಚೇತಸಿ ॥ ೧೧೪ ॥
ಅಹಂ ಸ್ನಾತಃ ಸಮಸ್ತೇಷು ತೀರ್ಥೇಷು ಧರಣೀತಲೇ ।
ನ ಚ ಪಾಪೇನ ನಿರ್ಮುಕ್ತಃ ಕಿಂ ಕರೋಮಿ ಚ ಸಾಂಪ್ರತಂ ॥ ೧೧೫ ॥
ಕಿಂ ಪತಾಮಿ ಗಿರೇಃ ಶೃಂಗಾದ್ವಿಷಂ ವಾ ಭಕ್ಷಯಾಮಿ ಕಿಂ ।
ತ್ರೈಲೋಕ್ಯ ರಾಜ್ಯವಿಭ್ರಷ್ಟೋ ನಾಽಹಂ ಜೀವಿತುಮುತ್ಸಹೇ ॥ ೧೧೬ ॥
ಏವಂ ವೈರಾಗ್ಯಮಾಪನ್ನೋ ಗಿರಿಮಾರುಹ್ಯ ವಾಸವಃ ।
ಯಾವತ್ಕ್ಷಿಪತಿ ಚಾತ್ಮಾನಂ ಮರಣೇ ಕೃತನಿಶ್ಚಯಃ ॥ ೧೧೭ ॥
ತಾವದ್ದೇವೋತ್ಥಿತಾ ವಾಣೀ ಗಗನಾದ್ದ್ವಿಜಸತ್ತಮಾಃ ।
ಮಾ ಶಕ್ರ ಸಾಹಸಂ ಕಾರ್ಷೀರ್ವೈರಾಗ್ಯಂ ಪ್ರಾಪ್ಯ ಚೇತಸಿ ॥ ೧೧೮ ॥
ತ್ವಯಾ ರಾಜ್ಯಂ ಪ್ರಕರ್ತವ್ಯಂ ಸ್ವರ್ಗೇಽದ್ಯಾಽಪಿ ಯುಗಾಷ್ಟಕಂ ।
ತಸ್ಮಾತ್ಪಾಪವಿಶುದ್ಧ್ಯರ್ಥಂ ಶೃಣು ಶಕ್ರ ಸಮಾಹಿತಃ ॥ ೧೧೯ ॥
ಕುರುಷ್ವ ವಚನಂ ಶೀಘ್ರಂ ಭಾವನೀಯಂ ನ ಚಾಽನ್ಯಥಾ ।
ಯತ್ತ್ವಯಾ ಪಾಂಸುಭಿಃ ಪೂರ್ವಂ ವಿವರಃ ಪರಿಪೂರಿತಃ ॥ ೧೨೦ ॥

---

ಗಳಲ್ಲಿಯೂ ಮತ್ತು ಇತರ ಕ್ಷೇತ್ರಗಳಲ್ಲಿಯೂ ಆ ಸಹಸ್ರಾಕ್ಷನು ವಿಧ್ಯುಕ್ತವಾಗಿ ಸ್ನಾನಕರ್ಮವನ್ನಾಚರಿಸಿಯೂ ಪರಿಶುದ್ಧನಾಗಲಿಲ್ಲ. ಆಗ ಅವನಿಗೆ ವೈರಾಗ್ಯ ವುಂಟಾಗಿ ಮನಸ್ಸಿನಲ್ಲಿಯೇ ಈ ರೀತಿ ಯೋಚಿಸಿದನು.

೧೧೫–೧೧೬. "ನಾನು ಈ ಭೂಮಂಡಲದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದ್ದೇನೆ. ಆದರೂ ಪಾಪವಿಮುಕ್ತನಾಗಲಿಲ್ಲ. ಈಗೇನು ಮಾಡಲಿ? ಪರ್ವತ ಶಿಖರದಿಂದ ಕೆಳಕ್ಕೆ ಬೀಳಲೆ, ವಿಷವನ್ನು ಕುಡಿಯಲೆ? ತ್ರೈಲೋಕ್ಯ ರಾಜ್ಯದಿಂದ ಭ್ರಷ್ಟನಾಗಿರುವ ನಾನು ಜೀವದಿಂದಿರಲು ಅಪೇಕ್ಷಿಸುವುದಿಲ್ಲ."

೧೧೭–೧೨೩. ಹೀಗೆ ಆ ವಾಸವನು ವೈರಾಗ್ಯಗೊಂಡು ಪರ್ವತವೊಂದನ್ನೇರಿ ಸಾಯಲು ನಿಶ್ಚಯಿಸಿ ಅಲ್ಲಿಂದ ಬೀಳುವಷ್ಟರಲ್ಲಿಯೇ ಒಂದು ಬಾನುಲಿಯು ಕೇಳಿಸಿತು. "ಎಲೈ ಶಕ್ರನೆ, ಹೀಗೆ ಮನೋವೈರಾಗ್ಯದಿಂದ ಸಾಹಸವನ್ನು ಮಾಡಬೇಡ. ಈಗಲೂ ನೀನು ಇನ್ನೂ ಎಂಟು ಯುಗಗಳಕಾಲ ಸ್ವರ್ಗಾಧಿಪತ್ಯವನ್ನು ಮಾಡಬೇಕಾಗಿದೆ. ಆದುದರಿಂದ ಸಮಾಹಿತಮನಸ್ಕನಾಗಿ ಈ ಪಾಪ ನಿವಾರಣೆಯನ್ನು ಮಾಡಿಕೊಳ್ಳುವ ಉಪಾಯವನ್ನು ಕೇಳು. ಈಗ ನಾನು ಹೇಳಿದಂತೆ ಮಾಡಿ ಪೂತನಾಗಬೇಕು. ಹಿಂದೆ ನೀನು ಹಾಟಕೇಶ್ವರಕ್ಷೇತ್ರದಲ್ಲಿ ಯಾವ ವಿವರವನ್ನು ದೂಳಿನಿಂದ ಮುಚ್ಚಿದೆಯೋ, ಎಲ್ಲಿ ನಾಗಬಿಲವು ಏರ್ಪಟ್ಟು

ಹಾಟಕೇಶ್ವರಜೇ ಕ್ಷೇತ್ರೇ ಯತ್ರ ದೇವಃ ಸ್ವಯಂ ಹರಃ ।
ತತ್ರ ನಾಗಬಿಲೋ ಜಾತೋ ವಲ್ಮೀಕಾತ್ತ್ರಿದಶಾಧಿಪ ॥ ೧೨೧ ॥
ಯೇನ ನಾಗಾ ಧರಾಪೃಷ್ಠೇ ನಿರ್ಗಚ್ಛಂತಿ ವ್ರಜಂತಿ ಚ ।
ತೇನ ಮಾರ್ಗೇಣ ಗತ್ವಾ ತ್ವಂ ಪಾತಾಲೇ ಹಾಟಕೇಶ್ವರಂ ।
ಸ್ನಾತ್ವಾ ಪಾತಾಲಗಂಗಾಯಾಂ ಪೂಜಯಸ್ವ ಮಹೇಶ್ವರಂ ॥ ೧೨೨ ॥
ತತಃ ಪಾಪವಿನಿರ್ಮುಕ್ತೋ ಭವಿಷ್ಯಸಿ ನ ಸಂಶಯಃ ।
ಸಂಪ್ರಾಪ್ಸ್ಯಸಿ ಚ ಭೂಯೋಽಪಿ ದೇವರಾಜ್ಯಮಕಂಟಕಂ ॥ ೧೨೩ ॥

ಸೂತ ಉವಾಚ:—

ಅಥ ಶಕ್ರಃ ಸಮಾಕರ್ಣ್ಯ ತಾಂ ಗಿರಂ ಗಗನೋತ್ಥಿತಾಂ ।
ಜಗಾಮ ಸತ್ವರಂ ತತ್ರ ಯತ್ರ ನಾಗಬಿಲಃ ಸ ಚ ॥ ೧೨೪ ॥
ತತಃ ಪ್ರವಿಶ್ಯ ಪಾತಾಲಂ ಗಂಗಾತೋಯಪರಿಪ್ಲುತಃ ।
ಪೂಜಯಾಮಾಸ ತಲ್ಲಿಂಗಂ ಹಾಟಕೇಶ್ವರಸಂಜ್ಞಿತಂ ॥ ೧೨೫ ॥
ಅಥ ತಸ್ಯ ಕ್ಷಣಾಜ್ಜಾತಂ ಶರೀರಂ ಮಲವರ್ಜಿತಂ ।
ದುರ್ಗಂಧಶ್ಚ ಗತೋನಾಶಂ ತೇಜೋವೃದ್ಧಿರ್ಬಭೂವ ಹ ॥ ೧೨೬ ॥
ಏತಸ್ಮಿನ್ನಂತರೇ ಪ್ರಾಪ್ತಾ ಬ್ರಹ್ಮವಿಷ್ಣುಮುಖಾಃ ಸುರಾಃ ।
ಪ್ರೋಚುಶ್ಚ ದೇವರಾಜಂ ತಂ ಮುಕ್ತಪಾಪಂ ಪ್ರಹರ್ಷಿತಾಃ ॥ ೧೨೭ ॥

---

ಹುತ್ತವು ಬೆಳೆದು ಆ ಮಾರ್ಗವಾಗಿ ಪಾತಾಳದಿಂದ ನಾಗರೆಲ್ಲರೂ ಭೂಮಂಡಲಕ್ಕೆ ಬಂದು ಹೋಗುತ್ತಿದ್ದರೋ ಆ ಮಾರ್ಗವಾಗಿಯೇ ನೀನು ಪಾತಾಳಲೋಕಕ್ಕೆ ಹೋಗಿ ಪಾತಾಳಗಂಗೆಯಲ್ಲಿ ಮಿಂದು ಹಾಟಕೇಶ್ವರನನ್ನು ಪೂಜಿಸು. ಅದರಿಂದ ಪಾಪನಿರ್ಮುಕ್ತನಾಗುವೆಯೆಂಬುದರಲ್ಲಿ ಸಂಶಯವಿರುವುದಿಲ್ಲ. ಇಷ್ಟೇ ಅಲ್ಲದೆ ಮುಂದೆಯೂ ನೀನು ನಿಷ್ಕಂಟಕವಾದ ದೇವರಾಜ್ಯವನ್ನು ಪಡೆಯುತ್ತೀಯೆ."

೧೨೪–೧೨೫. ಸೂತನು ಹೇಳುತ್ತಾನೆ:— ತರುವಾಯ ಆ ಶಕ್ರನು ಈ ಬಾನುಲಿಯನ್ನು ಕೇಳಿ ನಾಗಬಿಲವಿದ್ದೆಡೆಗೆ ಜಾಗ್ರತೆಯಾಗಿ ಹೋಗಿ, ಪಾತಾಳ ಲೋಕವನ್ನು ಪ್ರವೇಶಿಸಿ, ಗಂಗಾಜಲದಲ್ಲಿ ಮಿಂದು ಆ ಹಾಟಕೇಶ್ವರ ಲಿಂಗವನ್ನು ಪೂಜಿಸಿದನು.

೧೨೬. ಒಡನೆಯೇ ಅವನ ಶರೀರದಲ್ಲಿದ್ದ ಮಲವೆಲ್ಲವೂ ಕಳೆದು ನಾತವು ನಾಶವಾಗಿ ಮೊದಲಿಗಿಂತಲೂ ಹೆಚ್ಚಿನ ತೇಜಸ್ಸುಂಟಾಯಿತು.

೧೨೭–೧೨೮. ಈ ಸಮಯಕ್ಕೆ ಸರಿಯಾಗಿ ಬ್ರಹ್ಮವಿಷ್ಣು ಪ್ರಮುಖರಾದ ಸಮಸ್ತ ದೇವತೆಗಳೂ ಅಲ್ಲಿಗೆ ಬಂದು ಮುಕ್ತಪಾಪನಾದ ಆ ದೇವರಾಜನನ್ನು

ಪ್ರಾಪ್ತಸ್ತು ಮೇಧ್ಯತಾಂ ಶಕ್ರ ವಿಮುಕ್ತೋ ಬ್ರಹ್ಮಹತ್ಯಯಾ ।
ತಸ್ಮಾದಾಗಚ್ಛ ಗಚ್ಛಾಮಃ ಸಹಿತಾಸ್ತ್ರಿದಶಾಲಯಂ ॥ ೧೨೮ ॥
ಏತನ್ನಾಗಬಿಲಂ ಶಕ್ರ ಪುನಃ ಪೂರಯಪಾಂಸುಭಿಃ ।
ನೋಚೇದಾಗತ್ಯ ಚಾಽನೇನ ಮಾನುಷಾಃ ಸಿದ್ಧಿಹೇತವಃ ॥ ೧೨೯ ॥
ಏತಲ್ಲಿಂಗಂ ಸಮಭ್ಯರ್ಚ್ಯ ಸ್ನಾತ್ವಾ ಭಾಗೀರಥೀಜಲೇ ।
ಅಪಿಪಾಪ ಸಮಾಯುಕ್ತಾ ಯಾಸ್ಯಂತಿ ಪರಮಾಂ ಗತಿಂ ॥ ೧೩೦ ॥
ತತಸ್ತೇ ತ್ರಿದಶಾಃ ಸರ್ವೇ ಸ ಚ ದೇವಂ ಶತಕ್ರತುಃ ।
ಪ್ರಣಿಪತ್ಯ ಪುನಃ ಪ್ರೋಚ್ಚೈಃ ಪ್ರಜಗ್ಮುಸ್ತ್ರಿದಶಾಲಯಂ ॥ ೧೩೧ ॥
ತತೋ ಜಜ್ಞೇ ಮಹಾಂಸ್ತತ್ರ ಸ್ವರ್ಗೇ ವೃತ್ರವಧೋತ್ಸವಃ ।
ದೇವೇಂದ್ರತ್ವಮನುಪ್ರಾಪ್ತೇ ಪುನಃ ಶಕ್ರೇ ದ್ವಿಜೋತ್ತಮಾಃ ॥ ೧೩೨ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಹಾಟಕೇಶ್ವರಸಂಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೧೩೩ ॥

---

ಕಂಡು ಸಂತೋಷಗೊಂಡು ಹೀಗೆ ಹೇಳಿದರು :—"ಶಕ್ರ, ಬ್ರಹ್ಮಹತ್ಯೆಯಿಂದ ವಿಮುಕ್ತನಾಗಿ ಈಗ ನೀನು ಪರಿಶುದ್ಧನಾದೆ. ಆದುದರಿಂದ ಹೊರಡು. ನಾವೆಲ್ಲರೂ ಒಡಗೂಡಿಯೆ ದೇವಲೋಕಕ್ಕೆ ಹೋಗೋಣ.

೧೨೯–೧೩೦. ಮಹೇಂದ್ರ, ಈ ನಾಗಬಿಲವನ್ನು ಮತ್ತೆ ದೂಳಿನಿಂದ ತುಂಬಿಬಿಡು. ಇಲ್ಲದಿದ್ದರೆ, ಮೋಕ್ಷಕಾಂಕ್ಷಿಗಳಾದ ಮಾನುಷರು ಇಲ್ಲಿಗೆ ಬರುತ್ತಾರೆ. ಬಂದು ಈ ಭಾಗೀರಥೀ ಜಲದಲ್ಲಿ ಸ್ನಾನಮಾಡಿ ಹಾಟಕೇಶ್ವರ ಲಿಂಗವನ್ನು ಪೂಜಿಸುತ್ತಾರೆ. ಹೀಗೆ ಪೂಜಿಸಿ ಪಾಪಿಷ್ಠರಾಗಿದ್ದರೂ ಪರಿಶುದ್ಧತೆಯನ್ನು ಪಡೆದು ಪರಮಗತಿಯನ್ನು ಹೊಂದುತ್ತಾರೆ."

೧೩೧. ತರುವಾಯ ಆ ಶತಕ್ರತುವೂ ಇತರ ದೇವತೆಗಳೂ ದೇವದೇವನಾದ ಹಾಟಕೇಶ್ವರನನ್ನು ನಮಸ್ಕರಿಸಿ ವೇದೋಕ್ತಸ್ತುತಿಗಳಿಂದ ಘಂಟಾಘೋಷವಾಗಿ ಸ್ತುತಿಸಿ ತ್ರಿದಶಾಲಯವನ್ನು ಸೇರಿದರು.

೧೩೨. ಅಯ್ಯಾ ದ್ವಿಜೋತ್ತಮರೆ, ಆ ತರುವಾಯ ಶಕ್ರನು ಮತ್ತೆ ದೇವೇಂದ್ರ ಪದವಿಯನ್ನು ಪಡೆಯಲು ಸ್ವರ್ಗಲೋಕದಲ್ಲಿ ವೃತ್ರವಧೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು.

೧೩೩. ಸೂತನು ಹೇಳುತ್ತಾನೆ :—ಎಲೈ ವಿಪ್ರರೆ, ಹೀಗೆ ಹಾಟಕೇಶ್ವರ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ವಪಾಪವಿನಾಶಕವಾದ ಮಾಹಾತ್ಮ್ಯವೆಲ್ಲವನ್ನೂ ನಿಮಗೆ ಹೇಳಿರುತ್ತೇನೆ.

ಯಶ್ಚೈತತ್ಕೀರ್ತಯೇದ್ಭಕ್ತ್ಯಾ ಶೃಣೋತಿ ಚ ಸಮಾಹಿತಃ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಮ್ ॥ ೧೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವೃತ್ರವಧವರ್ಣನಂ" ನಾಮಾಷ್ಟಮೋಽಧ್ಯಾಯಃ

---

೧೩೪. ಈ ಮಾಹಾತ್ಮ್ಯವನ್ನು ಭಕ್ತಿಯಿಂದ ಯಾರು ಹೇಳುತ್ತಾರೆಯೋ ಭಕ್ತಿಯಿಂದ ಯಾರು ಕೇಳುತ್ತಾರೆಯೋ ಅವರು ಜರಾಮರಣವರ್ಜಿತರಾಗಿ ಪರಮಪದವಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವೃತ್ರವಧವರ್ಣನ"ವೆಂಬ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ನವಮೋಽಧ್ಯಾಯಃ

## ನಾಗಬಿಲಪೂರ್ತಿವರ್ಣನಂ

ಸೂತ ಉವಾಚ :—

ಅಥ ಶಕ್ರಃ ಸಮಾಹೂಯ ಪ್ರೋಚೇ ಸಂವರ್ತಕಾಽನಿಲಂ ।
ಹಾಟಕೇಶ್ವರಜೇ ಕ್ಷೇತ್ರೇ ಮಹಾನ್ನಾಗಬಿಲೋಽಸ್ತಿವೈ ॥ ೧ ॥
ತಂ ಪೂರಯ ಮಮಾದೇಶಾದ್ದ್ರುತಂ ಗತ್ವಾಽಭಿಪಾಂಸುಭಿಃ ।
ಯೇನ ನಸ್ಯಾದ್ಗತಿಸ್ತತ್ರ ಕಸ್ಯಚಿನ್ಮೃತ್ಯುಧರ್ಮಿಣಃ ॥ ೨ ॥

ವಾಯುರುವಾಚ :—

ತವಾದೇಶಾನ್ಮಯಾ ಪೂರ್ವಂ ಪೂರಿತೋ ವಿವರೋ ಯದಾ ।
ಲಿಂಗೋದ್ಭವಸ್ತದಾ ಶಾಪಃ ಪ್ರದತ್ತೋ ಮೇ ಪುರಾಽರಿಣಾ ॥ ೩ ॥
ಯಸ್ಮಾಲ್ಲಿಂಗಂ ಮಮೈತದ್ವೈ ತ್ವಯಾ ಪಾಂಸುಭಿರಾವೃತಂ ।
ತಸ್ಮಾತ್ಸಮಾನಧರ್ಮಾ ತ್ವಂ ಗಂಧವಾಹೋ ಭವಿಷ್ಯಸಿ ॥ ೪ ॥

---

## ಕನ್ನಡದ ಅನುವಾದ

### ನಾಗಬಿಲಪೂರ್ತಿವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಮಹೇಂದ್ರನು ಸ್ವರ್ಗ ಲೋಕವನ್ನೈದಿ ಮತ್ತೆ ತನ್ನ ಪದವಿಯಲ್ಲಿ ಪ್ರತಿಷ್ಠಿತನಾದ ತರುವಾಯ ಸಂವರ್ತಕ ವಾಯುವನ್ನು ಕರೆದು, "ಅಯ್ಯಾ, ಹಾಟಕೇಶ್ವರ ಕ್ಷೇತ್ರದಲ್ಲಿ ದೊಡ್ಡದಾದ ನಾಗಬಿಲವಿರುವುದಷ್ಟೆ. ನೀನು ನನ್ನ ಅಪ್ಪಣೆಯಂತೆ ಅಲ್ಲಿಗೆ ಹೋಗಿ ಮೃತ್ಯು ಧರ್ಮವನ್ನೊಳಗೊಂಡ ಯಾವ ಮಾನವನಿಗೂ ಅಲ್ಲಿಗೆ ಪ್ರವೇಶವೇ ದೊರೆಯ ದಂತೆ ದೂಳಿನಿಂದ ಆ ಬಿಲವನ್ನು ತುಂಬಿ ಬರುವವನಾಗು" ಎಂದು ಅಪ್ಪಣೆ ಮಾಡಿದನು.

೩. ವಾಯುವು ಹೇಳುತ್ತಾನೆ:—ಮಹೇಂದ್ರ, ಪೂರ್ವದಲ್ಲಿ ನಿನ್ನ ಅಪ್ಪಣೆ ಯಂತೆ ಆ ನಾಗಬಿಲ ದೂಳಿನಿಂದ ತುಂಬಿದಾಗ ತ್ರಿಪುರಾರಿಯಾದ ಪರಮೇಶ್ವರನು ಆ ಹಾಟಕೇಶ್ವರ ಲಿಂಗಮಧ್ಯಗತನಾಗಿಯೇ ನನಗೆ ಶಾಪವನ್ನಿತ್ತನು.

೪–೫. "ಎಲೈ ಮಾರುತನೆ, ನನ್ನ ಈ ಲಿಂಗವನ್ನು ದೂಳಿನಿಂದ ತುಂಬಿದೆ ಯಾಗಿ ಯಾವಾಗ್ಯಲೂ ನೀನು ಈ ದೂಳಿನೊಡನೆಯೇ ಬೀಸುವ ಧರ್ಮವುಳ್ಳವ ನಾಗಿ ಗಂಧವಹನೆನಿಸುತ್ತೀಯೆ. ನೀನು ಕರ್ಪೂರದ ಸುವಾಸನೆಯನ್ನೆಂತು

ಯದ್ವತ್ಕರ್ಪೂರರಜಂ ಗಂಧಂ ಸಮುಗ್ರಂ ತ್ವಂ ಹಿ ವಕ್ಷ್ಯಸಿ ।
ಅಮೇಧ್ಯಸಂಭವಂ ತದ್ವನ್ಮಮವಾಕ್ಯಾದಸಂಶಯಂ ॥ ೫ ॥
ತಸ್ಮಾತ್ಕುರು ಪ್ರಸಾದಂ ಮೇ ವಿದಿತ್ವೈತತ್ಸುರೇಶ್ವರ ।
ಕೃತ್ಯೇಽಸ್ಮಿನ್ ಸ್ಮರ್ಯತಾಮನ್ಯಸ್ತ್ರಿಪುರಾರೇರ್ಬಿಭೇಮ್ಯಹಂ ॥ ೬ ॥
ತತಃ ಸಂಚಿಂತಯಾಮಾಸ ಪೂರಣಂ ತ್ರಿದಶಾಧಿಪಃ ।
ತಸ್ಯ ನಾಗಬಿಲಸ್ಯೈವ ನೈವ ಕಿಂಚಿದವೈಕ್ಷತ ॥ ೭ ॥
ತತಸ್ತಂ ಪ್ರಾಹ ದೇವೇಜ್ಯಃ ಸ್ವಯಮೇವ ಶತಕ್ರತುಂ ।
ಕಸ್ಮಾತ್ತ್ವಂ ವ್ಯಾಕುಲೀಭೂತಃ ಕೃತ್ಯೇಽಸ್ಮಿಂಸ್ತ್ರಿದಶಾಽಧಿಪ ॥ ೮ ॥
ಅಸ್ತಿ ಪರ್ವತಮುಖ್ಯೋಽತ್ರ ನಾಮ್ನಾ ಖ್ಯಾತೋ ಹಿಮಾಲಯಃ ।
ತಸ್ಯ ಪುತ್ರತ್ರಯಂ ಜಾತಂ ತಚ್ಚ ಶಕ್ರ ಶೃಣುಷ್ವಮೇ ॥ ೯ ॥
ಮೈನಾಕಃ ಪ್ರಥಮಃ ಪ್ರೋಕ್ತೋ ದ್ವಿತೀಯೋ ನಂದಿವರ್ಧನಃ ।
ರಕ್ತಶೃಂಗಸ್ತೃತೀಯಸ್ತು ಪರ್ವತಃ ಪರಿಕೀರ್ತಿತಃ ॥ ೧೦ ॥
ಸ ಮೈನಾಕಃ ಸಮುದ್ರಾಂತಃ ಪ್ರವಿಷ್ಟಃ ಶಕ್ರ ತೇ ಭಯಾತ್ ।
ಪಕ್ಷಾಭ್ಯಾಂ ಸಹಿತೋಽದ್ಯಾಽಪಿ ಸ ತತ್ರೈವ ವ್ಯವಸ್ಥಿತಃ ॥ ೧೧ ॥

---

ಹೊತ್ತು ತಿರುಗುವೆಯೋ ಅಂತೆಯೇ ಈಗ ನನ್ನ ಶಾಪವಚನದಂತೆ ಇಂದಿನಿಂದ ಅಮೇಧ್ಯದ ನಾತವನ್ನು ಹೊರುವವನಾಗುವೆ. ಇದರಲ್ಲಿ ಸಂಶಯವಿಲ್ಲ."

೬. ಆದುದರಿಂದ ಎಲೈ ಸುರೇಶ್ವರನೆ, ನನ್ನನ್ನು ಈ ಕಾರ್ಯದಲ್ಲಿ ತೊಡಗಿಸಬೇಡ, ಅನುಗ್ರಹಿಸು. ಆ ಪರಮೇಶ್ವರನಿಗೆ ನಾನು ಭಯಪಡುತ್ತೇನೆ. ಬೇರಾವನನ್ನಾದರೂ ಯೋಜಿಸು.

೭. ಎಲೈ ಮುನಿಗಳಿರಾ, ಮಾರುತನು ಈ ರೀತಿ ಹೇಳಿದ ತರುವಾಯ ಆ ತ್ರಿದಶಾಧಿಪನು ನಾಗಬಿಲವನ್ನು ಪೂರಣಮಾಡುವುದೆಂತೆಂದು ಬಹಳವಾಗಿ ಚಿಂತಿಸಿದನಾದರೂ ಯಾವ ಉಪಾಯವೂ ಅವನಿಗೆ ತೋರಲಿಲ್ಲ.

೮-೯. ತರುವಾಯ ದೇವಗುರುವಾದ ಬೃಹಸ್ಪತಿಯು ತಾನಾಗಿಯೆ ಆ ಶತಕ್ರತುವನ್ನು ಕುರಿತು, "ಮಹೇಂದ್ರ, ಈ ಕಾರ್ಯದಲ್ಲಿ ನೀನೇಕೆ ವ್ಯಾಕುಲನಾದೆ? ಭೂಮಂಡಲದಲ್ಲಿ ಪರ್ವತಗಳಲ್ಲೆಲ್ಲ ಶ್ರೇಷ್ಠನಾದ ಹಿಮವಂತ ನಿರುವನಷ್ಟೆ. ಅವನಿಗೆ ಮೂವರು ಮಕ್ಕಳುಂಟು. ಅದನ್ನೇ ಹೇಳುತ್ತೇನೆ ಕೇಳು.

೧೦. ಮೊದಲನೆಯವನು ಮೈನಾಕ. ಎರಡನೆಯವನೇ ನಂದಿವರ್ಧನ. ಮೂರನೆಯವನೇ ರಕ್ತಶೃಂಗನೆಂದು ಹೆಸರಾದವನು.

೧೧. ಮೊದಲನೆಯವನಾದ ಮೈನಾಕನು ನಿನ್ನ ಭಯದಿಂದ ಹಾರಿಹೋಗಿ ಸಮುದ್ರದಲ್ಲಿ ಅಡಗಿಕೊಂಡನು. ರೆಕ್ಕೆಗಳೊಡಗೂಡಿ ಇಂದಿಗೂ ಅವನು ಸಮುದ್ರದಲ್ಲಿ ಅಡಗಿದ್ದಾನೆ.

ನಂದಿವರ್ಧನ ಇತ್ಯೇಷ ದ್ವಿತೀಯಃ ಪರಿಕೀರ್ತಿತಃ ।
ವಸಿಷ್ಠಾಶ್ರಮಜೋ ರಂಧ್ರಸ್ತೇನ ಕೃತ್ಸ್ನಃ ಪ್ರಪೂರಿತಃ ॥ ೧೨ ॥
ಹಿಮಾಚಲ ಸಮಾದೇಶಾದ್ವಸಿಷ್ಠಸ್ಯ ಚ ಸನ್ಮುನೇಃ ।
ದೇವಭೂಮಿಂ ಪರಿತ್ಯಜ್ಯ ಸ ಗತಸ್ತತ್ರ ಸತ್ವರಂ ॥ ೧೩ ॥
ತೃತೀಯಸ್ತಿಷ್ಠತೇಽದ್ಯಾಽಪಿ ರಕ್ತಶೃಂಗಃ ಸ್ಮೃತೋತ್ತಮಃ ।
ತಮಾನಯ ಸಹಸ್ರಾಕ್ಷ ಬಿಲಂ ಸಾರ್ಪಂ ಪ್ರಪೂರಯ ॥ ೧೪ ॥
ನಾಽನ್ಯಥಾ ಪೂರಿತುಂ ಶಕ್ಯೋ ಬಿಲೋಽಯಂ ತ್ರಿದಶಾಧಿಪ ।
ತಂ ಮುಕ್ತ್ವಾ ಪರ್ವತಶ್ರೇಷ್ಠಂ ಸತ್ಯಮೇತನ್ಮಯೋದಿತಂ ॥ ೧೫ ॥

ಸೂತ ಉವಾಚ :—

ತಚ್ಛ್ರುತ್ವಾ ದೇವಪೂಜ್ಯಸ್ಯ ವಚನಂ ತ್ರಿದಶಾಧಿಪಃ ।
ಜಗಾಮ ಸತ್ವರಂ ತತ್ರ ಯತ್ರಾಸ್ತೇ ಸ ಹಿಮಾಲಯಃ ॥ ೧೬ ॥
ತತಃ ಪ್ರೋವಾಚ ತಂ ಗತ್ವಾ ಸಾಮಪೂರ್ವಮಿದಂ ವಚಃ ।
ಹಿಮಾಚಲಂ ಗಿರಿಶ್ರೇಷ್ಠಂ ಸಿದ್ಧಚಾರಣಸೇವಿತಂ ॥ ೧೭ ॥

---

೧೨. ಎರಡನೆಯವನಾದ ನಂದಿವರ್ಧನನು ವಸಿಷ್ಠಾಶ್ರಮದಲ್ಲಿದ್ದ ರಂಧ್ರವನ್ನು ಸಂಪೂರ್ಣವಾಗಿ ಮುಚ್ಚಿದನು.

೧೩. ಹಿಮವಂತನ ಮತ್ತು ವಸಿಷ್ಠನ ಆಜ್ಞೆಯಿಂದಲೇ ಆ ನಂದಿವರ್ಧನನು ಆ ರೀತಿ ಆತನ ಆಶ್ರಮಕ್ಕೆ ಹೋಗಿ ಆ ಕಾರ್ಯವನ್ನು ಮಾಡಿದುದು. ವಿಪ್ರರ್ಷಿಯ ಸಲುವಾಗಿ ನಂದಿವರ್ಧನನು ಅಂತಹ ದೇವಭೂಮಿಯನ್ನು ಪರಿತ್ಯಜಿಸಿ ಅಲ್ಲಿಗೆ ಹೋದನು.

೧೪–೧೫. ಇನ್ನು ಆ ಹಿಮವಂತನ ಮೂರನೆಯ ಮಗನಾದ ರಕ್ತಶೃಂಗನೆಂಬುವನು ಈಗಲೂ ಅಲ್ಲಿಯೇ ಇರುವನು. ಎಲೈ ಸಹಸ್ರಾಕ್ಷನೆ, ನೀನು ಆ ಪರ್ವತಶ್ರೇಷ್ಠನನ್ನು ತೆಗೆದುಕೊಂಡುಬಂದು ಈ ನಾಗಬಿಲವನ್ನು ಮುಚ್ಚುವವನಾಗು. ಈ ರಕ್ತಶೃಂಗಪರ್ವತವನ್ನುಳಿದು ಬೇರಾವುದರಿಂದಲೂ ಈ ಬಿಲ ಪೂರಣವು ಸಾಧ್ಯವಾಗುವುದಿಲ್ಲವೆಂಬ ನನ್ನ ಮಾತು ಸತ್ಯವಾದುದು" ಎಂದು ಹೇಳಿದನು.

೧೬. ಸೂತನು ಹೇಳುತ್ತಾನೆ:—ದೇವಪೂಜ್ಯನಾದ ಬೃಹಸ್ಪತಿಯ ಮಾತುಗಳನ್ನು ಕೇಳಿ ಆ ತ್ರಿದಶೇಶ್ವರನು ಹಿಮವಂತನೆಡೆಗೆ ಬಹು ತ್ವರೆಯಾಗಿ ಹೋದನು.

೧೭. ಸಿದ್ಧರಿಂದಲೂ ಚಾರಣರಿಂದಲೂ ಸಂಸೇವಿತನಾಗಿ ಪರ್ವತೋತ್ತಮನೆಂದು ಪ್ರಸಿದ್ಧನಾದ ಆ ಹಿಮವಂತನನ್ನು ಕಂಡು ಮಹೇಂದ್ರನು ಸಾಮೋಪಾಯ ಪೂರ್ವಕವಾಗಿಯೇ ಅವನನ್ನು ಕುರಿತು ಹೀಗೆ ಹೇಳಿದನು.

ಇಂದ್ರ ಉವಾಚ :—

ಹಾಟಕೇಶ್ವರಜೇ ಕ್ಷೇತ್ರೇ ಮಹಾನ್ನಾಗಬಿಲಃ ಸ್ಥಿತಃ ।
ತೇನ ಗತ್ವಾ ನರಾ ದೇವಂ ಪಾತಾಲೇ ಹಾಟಕೇಶ್ವರಂ ॥ ೧೮ ॥
ಪೂಜಯಿಷ್ಯಂತಿ ಯೇ ಕೇಚಿದಪಿ ಪಾಪಪರಾಯಣಾಃ ।
ಮಯಾ ಸಾರ್ಧಂ ಕರಿಷ್ಯಂತಿ ತತಃ ಸ್ಪರ್ಧಾಂ ನಗೋತ್ತಮ ॥ ೧೯ ॥
ತಸ್ಮಾತ್ಸುತ್ರಮಿಮಂ ತತ್ರ ರಕ್ತಶೃಂಗಂ ಹಿಮಾಲಯ ।
ಪ್ರೇಷಯಸ್ವ ಬಿಲೋ ಯೇನ ಪೂರ್ಯತೇ ಸೋಽಹಿ ಸಂಭವಃ ॥ ೨೦ ॥
ಕುರುಷ್ವ ತ್ವಂ ಮಮಾತಿಥ್ಯಂ ಗೃಹಪ್ರಾಪ್ತಸ್ಯ ಪರ್ವತ ।
ಆತ್ಮ ಪುತ್ರಪ್ರದಾನೇನ ಕೀರ್ತಿಂ ಪ್ರಾಪ್ಸ್ಯಸ್ವ ಲೌಕಿಕೀಂ ॥ ೨೧ ॥
ಬಾಢಮಿತ್ಯೇವ ಸೋಽಪ್ಯುಕ್ತ್ವಾ ಪೂಜಯಿತ್ವಾಚ ದೇವಪಂ ।
ತತಃ ಪ್ರೋವಾಚ ತಂಪುತ್ರಂ ರಕ್ತಶೃಂಗಂ ಹಿಮಾಲಯಃ ॥ ೨೨ ॥
ತವಾರ್ಥಾಯ ಸಹಸ್ರಾಕ್ಷಃ ಪುತ್ರ ಪ್ರಾಪ್ತೋ ಮಮಾಂತಿಕಂ ।
ತಸ್ಮಾದ್ಗಚ್ಛ ದ್ರುತಂ ತತ್ರ ಯತ್ರ ನಾಗಬಿಲಃ ಸ್ಥಿತಃ ॥ ೨೩ ॥
ಪೂರಯಿತ್ವಾ ಮಮಾದೇಶಾತ್ತಂ ತ್ವಂ ಶಕ್ರಸ್ಯ ಕೃತ್ಸ್ನಶಃ ।
ಸುಖೀಭವ ಸಹಾಽನೇನ ತಥಾಽನ್ಯೈಃ ಸುರಸತ್ತಮೈಃ ॥ ೨೪ ॥

---

೧೮–೧೯. ಇಂದ್ರನು ಹೇಳುತ್ತಾನೆ:—ಎಲೈ ಹಿಮವಂತನೆ, ಹಾಟಕೇಶ್ವರ ಕ್ಷೇತ್ರದಲ್ಲಿ ದೊಡ್ಡದೊಂದು ನಾಗಬಿಲವಿರುವುದು. ಭೂಲೋಕದ ಹಲಕೆಲವು ಮಾನವರು ಆ ಬಿಲದ ಮಾರ್ಗವಾಗಿ ಪಾತಾಳಕ್ಕೆ ಹೋಗಿ ಕೇವಲ ಪಾಪಿಷ್ಠ ರಾಗಿದ್ದರೂ ಅಲ್ಲಿನ ಹಾಟಕೇಶ್ವರ ಲಿಂಗವನ್ನು ಪೂಜಿಸಿ ನನ್ನೊಡನೆ ಸಮ ಸಮ ವಾಗಿ ಹುರುಡಿಸುವಷ್ಟುಮಟ್ಟಿಗೆ ಪುಣ್ಯಶಾಲಿಗಳಾಗುತ್ತಾರೆ.

೨೦–೨೧. ಆದುದರಿಂದ ನೀನು ಈ ನಿನ್ನ ಮಗನಾದ ರಕ್ತಶೃಂಗನನ್ನು ಅಲ್ಲಿಗೆ ಕಳುಹಿಸು. ಅವನು ಆ ನಾಗಬಿಲವನ್ನು ತುಂಬಿ ನಿಲ್ಲಲಿ. ಎಲೈ ಪರ್ವತ ರಾಜನೆ, ನಿನ್ನ ಮನೆಗೆ ನಾನಾಗಿಯೇ ಅತಿಥಿಯಾಗಿ ಬಂದಿರುವೆನು. ಪ್ರಕೃತದಲ್ಲಿ ಈ ಆತಿಥ್ಯವನ್ನು ನನಗೆ ಸಲ್ಲಿಸು. ನಿನ್ನ ಮಗನನ್ನು ಈ ರೀತಿ ದಾನಮಾಡು ವುದರಿಂದ ಲೋಕದಲ್ಲಿ ನಿನಗೆ ಅನುಪಮವಾದ ಕೀರ್ತಿಯು ಲಭಿಸುತ್ತದೆ.

೨೨. ಆ ಹಿಮವಂತನು ಸಹ ಹಾಗೆಯೇ ಆಗಲೆಂದು ಹೇಳಿ ಆ ದೇವಪತಿ ಯನ್ನು ಸತ್ಕರಿಸಿ ಮಗನಾದ ರಕ್ತಶೃಂಗನನ್ನು ಕುರಿತು ಹೀಗೆಂದನು.

೨೩–೨೪. "ವತ್ಸ, ಈ ಸಹಸ್ರಾಕ್ಷನು ನಿನಗಾಗಿಯೇ ನನ್ನಲ್ಲಿಗೆ ಬಂದಿದ್ದಾನೆ. ಆದುದರಿಂದ ನೀನು ಆ ನಾಗಬಿಲವಿರುವೆಡೆಗೆ ಜಾಗ್ರತೆಯಾಗಿ ಹೋಗು. ನನ್ನ ಅಪ್ಪಣೆಯಂತೆ ಈ ಶಕ್ರನ ಅಭೀಷ್ಟವಾದ ಆ ಬಿಲಪೂರಣವನ್ನು ಮಾಡು. ಇವನೊಡನೆಯೂ ಇತರ ದೇವತೆಗಳೊಡನೆಯೂ ಸುಖವಾಗಿರು."

ರಕ್ತಶೃಂಗ ಉವಾಚ :—

ನಾಽಹಂ ತತ್ರ ಗಮಿಷ್ಯಾಮಿ ಮರ್ತ್ಯಭೂಮೌ ಕಥಂಚನ ।
ಯತ್ರ ಕಂಟಕಿನೋ ವೃಕ್ಷಾ ರೂಕ್ಷಾಃ ಫಲವಿವರ್ಜಿತಾಃ ॥ ೨೫ ॥
ನ ಸಿದ್ಧಾ ನ ಚ ಗಂಧರ್ವಾ ನ ದೇವಾ ನ ಚ ಕಿನ್ನರಾಃ ।
ನ ಚ ತೀರ್ಥಾನಿ ರಮ್ಯಾಣಿ ನ ನದ್ಯೋ ವಿಮಲೋದಕಾಃ ॥ ೨೬ ॥
ತಥಾ ಪಾಪಸಮಾಚಾರಾ ಮನುಷ್ಯಾಃ ಶೀಲವರ್ಜಿತಾಃ ।
ದುಷ್ಟಚಿತ್ತಾಃ ಸದಾ ಸರ್ವೇ ತಿರ್ಯಗ್ಯೋನಿಗತಾ ಅಪಿ ॥ ೨೭ ॥
ತಥಾ ಮಮ ನಗಶ್ರೇಷ್ಠ ಪಕ್ಷೌ ದ್ವಾವಪಿ ಕರ್ತಿತೌ ।
ಶಕ್ರೇಣ ತೇನ ನೋ ಶಕ್ತಿರ್ಗಂತುಮಸ್ತಿ ಕಥಂಚನ ॥ ೨೮ ॥
ತಸ್ಮಾತ್ಕಂಚಿತ್ಸಹಸ್ರಾಕ್ಷ ಉಪಾಯಂ ತತ್ಕೃತೇ ಪರಂ ।
ಚಿಂತಯತ್ವೇವ ಮಾಂ ಮುಕ್ತ್ವಾ ಸತ್ಯಮೇತನ್ಮಯೋದಿತಂ ॥ ೨೯ ॥

ಶಕ್ರ ಉವಾಚ :—

ಅಹಂ ತ್ವಾಂ ತತ್ರ ನೇಷ್ಯಾಮಿ ಸ್ವಹಸ್ತೇನ ವಿಧಾರಿತಂ ।
ತತ್ರಾಽಪಿ ಸುಶುಭಾ ವೃಕ್ಷಾ ಭವಿಷ್ಯಂತಿ ತವಾಶ್ರಯಾಃ ॥ ೩೦ ॥

---

೨೫. ರಕ್ತಶೃಂಗನು ಹೇಳುತ್ತಾನೆ:—"ತಂದೆಯೆ, ಕೇವಲ ಮರ್ತ್ಯಭೂಮಿಯೆನಿಸಿರುವ ಆ ಪ್ರದೇಶಕ್ಕೆ ಏನಾದರೂ ನಾನು ಹೋಗುವುದಿಲ್ಲ. ಅಲ್ಲಿರುವುದೆಲ್ಲ ಫಲಪುಷ್ಪರಹಿತವಾದ ಕಂಟಕ ವೃಕ್ಷಗಳೇ.

೨೬. ಸಿದ್ಧರಾಗಲಿ ಗಂಧರ್ವರಾಗಲಿ ದೇವತೆಗಳಾಗಲಿ ಕಿನ್ನರರಾಗಲಿ ಯಾರೂ ಅಲ್ಲಿರುವುದಿಲ್ಲ. ಮನೋಹರವಾದ ತೀರ್ಥಗಳೂ ನಿರ್ಮಲೋದಕವುಳ್ಳ ನದಿಗಳೂ ಆ ಪ್ರದೇಶದಲ್ಲಿ ಇರುವುದೇ ಇಲ್ಲ.

೨೭. ಇದರ ಮೇಲೆ ಅಲ್ಲಿರುವ ಮಾನವರೆಲ್ಲರೂ ಶೀಲವಿಲ್ಲದವರೂ ಪಾಪಕರ್ಮಗಳಲ್ಲಿಯೇ ನಿರತರೂ ಆಗಿರುತ್ತಾರೆ. ಕಡೆಗೆ ಅಲ್ಲಿ ವಾಸಮಾಡುವ ಪಶುಪಕ್ಷಿ ಮೃಗಾದಿಗಳು ಕೂಡ ಬಹು ಕೆಟ್ಟ ಮನಸ್ಸಿನವುಗಳು.

೨೮. ಹಾಗೂ ನಿನ್ನ ಅಪ್ಪಣೆಯಂತೆ ಹೋಗೋಣವೆಂದರೆ ಈ ಶಕ್ರನು ಮೊದಲೇ ನನ್ನ ರೆಕ್ಕೆಗಳನ್ನು ಕಡಿದುಹಾಕಿರುವನು. ಈ ಕಾರಣದಿಂದ ಅಲ್ಲಿಗೆ ಹೋಗುವುದಕ್ಕೆ ನನಗೆ ಸ್ವಲ್ಪವೂ ಶಕ್ತಿಯಿರುವುದಿಲ್ಲ.

೨೯. ಆದುದರಿಂದ ಎಲೈ ಪೂಜ್ಯನೆ, ಈ ಸಹಸ್ರಾಕ್ಷನು ಈ ಕಾರ್ಯಸಾಧನೆಗಾಗಿ ನನ್ನೊಬ್ಬನನ್ನುಳಿದು ಮತ್ತಾವುದಾದರೂ ಒಂದು ಉಪಾಯವನ್ನು ಆಲೋಚಿಸಲಿ. ಇದನ್ನು ನಾನು ದಿಟವಾಗಿ ಹೇಳುತ್ತಿದ್ದೇನೆ."

೩೦. ಶಕ್ರನು ಹೇಳುತ್ತಾನೆ:—ಎಲೈ ರಕ್ತಶೃಂಗನೆ, ನಿನ್ನನ್ನು ನಾನೇ ಕೈಯಾರ ಎತ್ತಿಕೊಂಡು ಹೋಗುತ್ತೇನೆ. ಆ ಪ್ರದೇಶದಲ್ಲಿ ನಿನ್ನನ್ನು ಆಶ್ರಯಿಸುವ ವೃಕ್ಷಗಳೆಲ್ಲವೂ ಬಹು ಮಂಗಳಕರಗಳಾಗಿರುತ್ತವೆ.

ತಥಾ ಪುಣ್ಯಾನಿ ತೀರ್ಥಾನಿ ದೇವತಾಯತನಾನಿ ಚ ।
ಸಮಂತಾತ್ತೇ ಭವಿಷ್ಯಂತಿ ಮುನೀನಾಮಾಶ್ರಮಾಸ್ತಥಾ ॥ ೩೧ ॥
ಅತ್ರಸ್ಥಸ್ಯ ಪ್ರಭಾವೋ ಯಸ್ತವ ಪರ್ವತನಂದನ ।
ಮದ್ವಾಕ್ಯಾತ್ತತ್ರ ಸಂಸ್ಥಸ್ಯ ಕೋಟಿಸಂಖ್ಯೋ ಭವಿಷ್ಯತಿ ॥ ೩೨ ॥
ತಥಾ ಯೇ ಮಾನವಾಸ್ತತ್ರ ಪಾಪಾತ್ಮಾನೋऽಪಿ ಭೂತಲೇ ।
ವಿಪಾಪ್ಮಾನೋ ಭವಿಷ್ಯಂತಿ ಸಹಸಾ ತವ ದರ್ಶನಾತ್ ॥ ೩೩ ॥
ತಸ್ಮಾದ್ಗಚ್ಛ ದ್ರುತಂ ತತ್ರ ಮಯಾ ಸಾರ್ಧಂ ನಗಾತ್ಮಜ ।
ನಚೇದ್ವಜ್ರಪ್ರಹಾರೇಣ ಕರಿಷ್ಯಾಮಿ ಸಹಸ್ರಧಾ ॥ ೩೪ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ರಕ್ತಶೃಂಗೋ ಭಯಾನ್ವಿತಃ ।
ಪ್ರವಿಷ್ಟಃ ಸಹಸಾಗತ್ಯ ತಸ್ಮಿನ್ನಾಗಬಿಲೇ ಗತಃ ॥ ೩೫ ॥
ನಿಮಗ್ನೋ ಬ್ರಾಹ್ಮಣಶ್ರೇಷ್ಠಾ ನಾಸಾಗ್ರಂ ಯಾವ ದೇವಹಿ ।
ಶೃಂಗೈರ್ಮನೋರಮೈಸ್ತುಂಗೈಃ ಸಮಗ್ರೈಃ ಸಹಿತಸ್ತದಾ ।
ವೃಕ್ಷಗುಲ್ಮಲತಾಕೀರ್ಣೈ ರಮ್ಯಪಕ್ಷಿನಿಷೇವಿತೈಃ ॥ ೩೬ ॥

---

೩೧. ಹಾಗೂ ಪುಣ್ಯತೀರ್ಥಗಳೂ ದೇವಾಯತನಗಳೂ ಸುತ್ತಮುತ್ತಲೂ ಋಷ್ಯಾಶ್ರಮಗಳೂ ಆಗುತ್ತವೆ.

೩೨. ಎಲೈ ಪರ್ವತನಂದನನೆ, ನನ್ನ ಈ ಮಾತಿನಿಂದ ಇಲ್ಲಿ ಯಾವ ಪ್ರಭಾವವಿರುವುದೋ ಅದು ಆ ಪ್ರದೇಶದಲ್ಲಿ ಒಂದು ಕೋಟಿ ಪಾಲು ಹೆಚ್ಚಾಗಿರುತ್ತದೆ.

೩೩. ಅಂತೆಯೆ, ಭೂಮಂಡಲದಲ್ಲಿರುವ ಮಾನವರು ಪಾಪಿಗಳೇ ಆದರೂ ನಿನ್ನ ದರ್ಶನದಿಂದ ಪುಣ್ಯವಂತರೆನಿಸುತ್ತಾರೆ.

೩೪. ಎಲೈ ರಕ್ತಶೃಂಗನೆ, ಇನ್ನು ನೀನು ಜಾಗ್ರತೆಯಾಗಿ ನನ್ನೊಡನೆ ಹೊರಡು. ಇಷ್ಟು ಹೇಳಿಯೂ ನೀನು ಒಲ್ಲೆನೆಂದರೆ ಈ ವಜ್ರಾಯುಧದಿಂದ ನಿನ್ನನ್ನು ಸಾವಿರ ಹೋಳುಗಳಾಗಿ ಸಿಗಿದುಹಾಕುವೆನು.

೩೫. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ, ವಾಸವನಾಡಿದ ಈ ಮಾತುಗಳನ್ನು ಕೇಳಿ ಆ ರಕ್ತಶೃಂಗನು ಭಯಾನ್ವಿತನಾಗಿ ತತ್ಕ್ಷಣದಲ್ಲಿಯೇ ನಾಗಬಿಲವಿರುವೆಡೆಗೆ ಬಂದು ಅದನ್ನು ಪ್ರವೇಶಿಸಿದನು.

೩೬. ಅವನು ನಾಸಾಗ್ರದವರೆಗೂ ಆ ಬಿಲದಲ್ಲಿ ಹುಗಿದು ಮೇಲ್ಭಾಗದಲ್ಲಿಯ ಸಮಗ್ರವೂ ಮನೋಹರವೂ ಆದ ಉನ್ನತ ಶಿಖರಗಳೊಡಗೂಡಿ ವೃಕ್ಷಗುಲ್ಮಲತೆಗಳಿಂದ ತುಂಬಿ ಮನೋಹರವಾದ ಪಕ್ಷಿಗಳಿಂದ ಸಂಸೇವಿತನಾಗಿ ಶೋಭಿಸಿದನು.

ಏವಂ ಸಂಸ್ಥಾಪ್ಯ ತಂ ಶಕ್ರೋ ಹಿಮಾಚಲಸುತಂ ನಗಂ ।
ತತಃ ಪ್ರೋವಾಚ ಸಂಹೃಷ್ಟೋ ವರೋ ಮತ್ತಃ ಪ್ರಗೃಹ್ಯತಾಂ ॥ ೩೭ ॥

ರಕ್ತಶೃಂಗ ಉವಾಚ :—

ಏಷ ಏವ ವರೋಽಸ್ಮಾಕಂ ಯತ್ತ್ವಂ ತುಷ್ಟಃ ಸುರೇಶ್ವರ ।
ಕಿಂ ವರೇಣ ಕರಿಷ್ಯಾಮಿ ತ್ವತ್ಪ್ರಸಾದಾದಹಂ ಸುಖೀ ॥ ೩೮ ॥

ಇಂದ್ರ ಉವಾಚ :—

ನ ವೃಥಾ ದರ್ಶನಂ ಮೇ ಸ್ಯಾದಪಿ ಸ್ವಪ್ನೇ ನಗಾತ್ಮಜ ।
ಕಿಂ ಪುನರ್ದರ್ಶನೇ ಜಾತೇ ಕೃತೇ ಕೃತ್ಯೇ ವಿಶೇಷತಃ ॥ ೩೯ ॥

ರಕ್ತಶೃಂಗ ಉವಾಚ :—

ಅವಶ್ಯಂ ಯದಿ ದೇಯೋ ಮೇ ವರಃ ಸರ್ವಸುರಾಧಿಪ ।
ವಿಭವೋ ಮೇ ದ್ವಿಜಾರ್ಥಾಯ ಸರ್ವಃ ಸ್ಯಾತ್ಸರ್ವದಾ ವಿಭೋ ॥ ೪೦ ॥

ಇಂದ್ರ ಉವಾಚ :—

ಭವಿಷ್ಯತಿ ಮಹೀಪಾಲಶ್ಚಮತ್ಕಾರ ಇತಿ ಸ್ಮೃತಃ ।
ತವ ಮೂರ್ಧನಿ ವಿಪ್ರಾರ್ಥಂ ಸ ಪುರಂ ಸ್ಥಾಪಯಿಷ್ಯತಿ ॥ ೪೧ ॥

---

೩೭. ಹೀಗೆ ಆ ಶಕ್ರನು ಹಿಮವಂತನ ಮಗನಾದ ಆ ರಕ್ತಶೃಂಗನನ್ನು ನಾಗಬಿಲವಿದ್ದೆಡೆಯಲ್ಲಿ ಪ್ರತಿಷ್ಠಿಸಿ ಆ ಬಳಿಕ ಪ್ರಹೃಷ್ಟಾಂತರಂಗನಾಗಿ ಅವನನ್ನು ಕುರಿತು, "ಅಯ್ಯಾ ಗಿರಿಶ್ರೇಷ್ಠನೆ, ಈಗ ನನ್ನಿಂದ ವರವನ್ನು ಪಡೆ" ಎಂದು ಹೇಳಿದನು.

೩೮. ರಕ್ತಶೃಂಗನು ಹೇಳುತ್ತಾನೆ:—ಎಲೈ ಸುರೇಶ್ವರನೆ, ನೀನು ಸಂತುಷ್ಟನಾದೆಯಷ್ಟೆ. ಇದೇ ನಮಗೊಂದು ವರವು. ಇನ್ನು ಬೇರೆ ವರದಿಂದ ನನಗೆ ಆಗಬೇಕಾದುದೇನು. ನಿನ್ನ ಅನುಗ್ರಹದಿಂದ ನಾನು ಸುಖಿಯೆ!

೩೯. ಇಂದ್ರನು ಹೇಳುತ್ತಾನೆ:— ಪರ್ವತನಂದನಾ, ಸ್ವಪ್ನದಲ್ಲಿಯೂ ನನ್ನ ದರ್ಶನವು ವ್ಯರ್ಥವಾಗತಕ್ಕುದಲ್ಲ ಎಂದಮೇಲೆ ನನ್ನ ದರ್ಶನವೂ ನಿನಗೆ ಸಾಕ್ಷಾತ್ತಾಗಿಯೇ ಆಗಿ ನಿನ್ನಿಂದ ನನಗಾಗಬೇಕಾದ ಕಾರ್ಯವೂ ಆಗಿರುವಾಗ ಏನು ಹೇಳತಕ್ಕದ್ದು ?

೪೦. ರಕ್ತಶೃಂಗನು ಹೇಳುತ್ತಾನೆ:—ಎಲೈ ಸುರಾಧಿಪನೆ, ನೀನು ನನಗೆ ಅವಶ್ಯವಾಗಿ ವರವನ್ನು ಕೊಡಲೇಬೇಕಾದರೆ, ಇದೊಂದು ವರವನ್ನು ಮಾತ್ರ ಕೊಡು. ನನ್ನ ಸಮಸ್ತ ಸಂಪತ್ತೂ ಎಲ್ಲ ಕಾಲಗಳಲ್ಲಿಯೂ ದ್ವಿಜರಿಗೋಸ್ಕರವಾಗಿಯೇ ವಿನಿಯೋಗವಾಗಲಿ.

೪೧–೪೩. ಇಂದ್ರನು ಹೇಳುತ್ತಾನೆ:—ಅಯ್ಯಾ ರಕ್ತಶೃಂಗನೆ, ಮುಂದೆ ಚಮತ್ಕಾರನೆಂಬ ಮಹೀಪಾಲನೊಬ್ಬನು ಹುಟ್ಟುತ್ತಾನೆ. ಅವನು ನಿನ್ನ ಶಿರಃ

ತತ್ರ ಬ್ರಾಹ್ಮಣಶಾರ್ದೂಲಾ ವೇದವೇದಾಂಗಪಾರಗಾಃ ।
ವಿಭವಂ ತವ ನಿಃಶೇಷಂ ಭಜಿಷ್ಯಂತಿ ಪ್ರಹರ್ಷಿತಾಃ ॥ ೪೨ ॥
ತಥಾಽಹಂ ಚೈತ್ರಮಾಸಸ್ಯ ಚತುರ್ದಶ್ಯಾಂ ನಗಾತ್ಮಜ ।
ಕೃಷ್ಣಾಯಾಂ ಸ್ವಯಮಾಗತ್ಯ ಶೃಂಗೇ ಮುಖ್ಯತಮೇ ತವ ॥ ೪೩ ॥
ಪೂಜಯಿಷ್ಯಾಮಿ ದೇವೇಶಂ ಹಾಟಕೇಶ್ವರ ಸಂಜ್ಞಿತಂ ।
ಸರ್ವೈರ್ದೇವಗಣೈಃ ಸಾರ್ಧಂ ತಥಾ ಕಿನ್ನರಗುಹ್ಯಕೈಃ ॥ ೪೪ ॥
ತಮೇಕಂ ದಿವಸಂ ಚಾಽತ್ರ ಶೃಂಗೇ ತವ ಹರಃ ಸ್ವಯಂ ।
ಅಸ್ಮಾಭಿಃ ಸಹಿತಸ್ತುಷ್ಟೋ ನಿವಾಸಂ ಪ್ರಕರಿಷ್ಯತಿ ॥ ೪೫ ॥
ಪ್ರಭಾವಸ್ತೇನ ತೇ ಮುಖ್ಯಸ್ತ್ರೈಲೋಕ್ಯೇಽಪಿ ಭವಿಷ್ಯತಿ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಂಪ್ರತಂ ತ್ರಿದಿವಾಲಯಂ ॥ ೪೬ ॥

ಸೂತ ಉವಾಚ :—

ಏವಮುಕ್ತ್ವಾ ಸಹಸ್ರಾಕ್ಷಸ್ತತಃ ಪ್ರಾಪ್ತಸ್ತ್ರಿವಿಷ್ಟಪಂ ।
ರಕ್ತಶೃಂಗೋಽಪಿ ತಸ್ಥೌ ಚ ವ್ಯಾಪ್ಯ ನಾಗಬಿಲಂ ತದಾ ॥ ೪೭ ॥

---

ಪ್ರದೇಶದಲ್ಲಿ ವಿಪ್ರರಿಗಾಗಿಯೇ ಒಂದು ಪಟ್ಟಣವನ್ನು ನಿರ್ಮಿಸಿ ಸ್ಥಾಪಿಸುತ್ತಾನೆ. ಅಲ್ಲಿ ವಾಸಮಾಡುವ ಬ್ರಾಹ್ಮಣ ಶ್ರೇಷ್ಠರೆಲ್ಲರೂ ವೇದವೇದಾಂಗ ಪಾರಂಗತರಾಗಿರುತ್ತಾರೆ. ಅವರು ನಿನ್ನ ಈ ಅಖಂಡೈಶ್ವರ್ಯವನ್ನು ಅನುಭವಿಸುತ್ತ ಸದಾ ಹರ್ಷಚಿತ್ತರಾಗಿರುತ್ತಾರೆ.

೪೩–೪೪. ನಾನು ಸಹ ಪ್ರತಿವರ್ಷದ ಚೈತ್ರ ಬಹುಳ ಚತುರ್ದಶಿಯಂದು ನಿನ್ನ ಮುಖ್ಯ ಶಿಖರದಲ್ಲಿ ನಿಂತು ಹಾಟಕೇಶ್ವರ ಸ್ವಾಮಿಯನ್ನು ಸಮಸ್ತ ದೇವತಾ ಗಣಗಳಿಂದಲೂ ಕಿನ್ನರ ಗುಹ್ಯಕ ಸಮೂಹಗಳಿಂದಲೂ ಸಹಿತನಾಗಿ ಪೂಜಿಸುತ್ತೇನೆ.

೪೫–೪೬. ಆ ಒಂದು ದಿವಸ ಪರಮೇಶ್ವರನು ನಮ್ಮ ಪೂಜೆಯನ್ನು ಸ್ವೀಕರಿಸಿ ನಮ್ಮೆಲ್ಲರೊಡನೆಯೂ ನಿನ್ನ ಶಿಖರದಲ್ಲಿ ವಾಸಮಾಡುತ್ತಾನೆ. ಈ ಒಂದು ಪ್ರಭಾವದಿಂದ ನೀನು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗುವೆ. ನಿನಗೆ ಒಳ್ಳೆಯದಾಗಲಿ. ಇನ್ನು ನಾನು ದೇವಲೋಕಕ್ಕೆ ತೆರಳುತ್ತೇನೆ.

೪೭. ಸೂತನು ಹೇಳುತ್ತಾನೆ:— ಎಲೈ ಶೌನಕಾದಿ ಮಹರ್ಷಿಗಳಿರಾ, ಆ ಸಹಸ್ರಾಕ್ಷನು ಈ ಪ್ರಕಾರವಾಗಿ ನುಡಿದು ದೇವಲೋಕಕ್ಕೆ ಹೊರಟು ಹೋದನು. ರಕ್ತಶೃಂಗ ಪರ್ವತವಾದರೋ ಆ ನಾಗಬಿಲವೆಲ್ಲವನ್ನೂ ವ್ಯಾಪಿಸಿ ಅಲ್ಲಿಯೇ ನಿಂತಿತು.

ತಸ್ಯೋಪರಿ ಸುಮುಖ್ಯಾನಿ ತೀರ್ಥಾನ್ಯಾಯತನಾನಿ ಚ ।
ಸಂಜಾತಾನಿ ಮುನೀನಾಂ ಚ ಸಂಜಾತಾಶ್ಚ ತಥಾಽಶ್ರಮಾಃ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇಃ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗಬಿಲಪೂರ್ತಿವರ್ಣನಂ"ನಾಮ
ನವಮೋಽಧ್ಯಾಯಃ

---

೪೮. ಆ ಪರ್ವತದ ಮೇಲೆ ಬಹು ಮುಖ್ಯವಾದ ಅನೇಕ ತೀರ್ಥಗಳೂ ಮಹರ್ಷಿಗಳ ಅನೇಕ ಪುಣ್ಯಾಶ್ರಮಗಳೂ ಉಂಟಾದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗಬಿಲಪೂರ್ತಿವರ್ಣನ"ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಶಂಖತೀರ್ಥಮಾಹಾತ್ಮ್ಯಂ—ಚಮತ್ಕಾರನೃಪತಿ ಕುಷ್ಠನಿವೃತ್ತಿವೃತ್ತಾಂತವರ್ಣನಂ

ಸೂತ ಉವಾಚ :—

ಆನರ್ತಾಧಿಪತಿರ್ಭೂಪಶ್ಚಮತ್ಕಾರ ಇತಿ ಸ್ಮೃತಃ ।
ಏತಸ್ಮಿನ್ನಂತರೇ ಪ್ರಾಪ್ತಸ್ತತ್ರ ಹಂತುಂ ವನೇ ಮೃಗಾನ್ ॥ ೧ ॥
ಸ ದದರ್ಶ ಮೃಗೀಂ ದೂರಾನ್ನಿಶ್ಚಲಾಂಗೀಂ ತರೋರಧಃ ।
ಸ್ತನಂ ಸುತಾಯ ಯಚ್ಛಂತೀಂ ವಿಶ್ವಸ್ತಾಮಕುತೋಭಯಾಂ ॥ ೨ ॥
ಅಥ ತಾಂ ಪಾರ್ಥಿವಸ್ತೂರ್ಣಂ ಶರೇಣಾನತಪರ್ವಣಾ ।
ಜಘಾನಾಕರ್ಣಕೃಷ್ಟೇನ ಮರ್ಮಸ್ಥಾನೇ ಪ್ರಹರ್ಷಿತಃ ॥ ೩ ॥
ಸಹಸಾ ತೇನ ಸಾ ಹತಾ ಗಾರ್ಧ್ರಪತ್ರೇಣ ಪತ್ರಿಣಾ ।
ದಿಶೋ ವಿಲೋಕಯಾಮಾಸ ಸಮಂತಾದ್ವ್ಯಥಯಾರ್ದಿತಾ ॥ ೪ ॥

---

## ಕನ್ನಡದ ಅನುವಾದ

### ಶಂಖತೀರ್ಥಮಾಹಾತ್ಮ್ಯ—ಚಮತ್ಕಾರನೃಪತಿ ಕುಷ್ಠನಿವೃತ್ತಿವೃತ್ತಾಂತ ವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳಿರಾ, ಇದೇ ಸಮಯದಲ್ಲಿ ಆನರ್ತ ದೇಶಾಧಿಪತಿಯಾದ ಚಮತ್ಕಾರನೆಂಬ ದೊರೆಯು ಅಲ್ಲಿಗೆ ಬೇಟೆಗಾಗಿ ಬಂದನು.

೨. ಅವನು ಆ ಪ್ರದೇಶದಲ್ಲಿ ಒಂದಾನೊಂದು ಮರದ ಕೆಳಗೆ ಮರಿಗೆ ಹಾಲು ಕುಡಿಸುತ್ತ ಯಾವ ಭಯವೂ ಇಲ್ಲವೆಂಬ ನಂಬುಗೆಯಿಂದ ನಿಶ್ಚಲವಾಗಿ ನಿಂತಿದ್ದ ಹೆಣ್ಣು ಜಿಂಕೆಯೊಂದನ್ನು ಕಂಡನು.

೩. ಆ ಪಾರ್ಥಿವನು ಅದನ್ನು ಕಂಡು ಬಹು ಸಂತೋಷಗೊಂಡು ಬಹು ಮೊನೆಚಾದ ಬಾಣವೊಂದನ್ನು ಬಿಲ್ಲಿಗೇರಿಸಿ ಕಿವಿಯವರೆಗೆ ಎಳೆದು ಆ ಮೃಗದ ಮರ್ಮಸ್ಥಾನಕ್ಕೆ ಹೊಡೆದನು.

೪. ಹೀಗೆ ಇದ್ದಕ್ಕಿದ್ದಂತೆಯೇ ಬಾಣಾಹತವಾದ ಆ ಮೃಗವು ಭಯದಿಂದ ತತ್ತಳಿಸಿ ನಾಲ್ಕು ದಿಕ್ಕುಗಳನ್ನೂ ಸುತ್ತಲೂ ಒಮ್ಮೆ ನೋಡಿತು.

ಅಥ ದೃಷ್ಟ್ವಾ ಮಹೀಪಾಲಂ ನಾಽತಿದೂರೇ ಧನುರ್ಧರಂ ।
ಪ್ರೋವಾಚಾಽಶ್ರುಪರಿಕ್ಲಿನ್ನವದನಾ ಸುತವತ್ಸಲಾ ॥ ೫ ॥

ಮೃಗ್ಯುವಾಚ :—

ಅಯುಕ್ತಂ ಪೃಥ್ವೀಪಾಲ ಯತ್ತ್ವಯೈತದನುಷ್ಠಿತಂ ।
ಹತಾಽಹಂ ಬಾಲವತ್ಸಾಽದ್ಯ ಶರೇಣಾನತಪರ್ವಣಾ ॥ ೬ ॥
ನಾಽಹಂ ಶೋಚಾಮಿ ಭೂಪಾಲ ಮರಣಂ ಸ್ವಶರೀರಗಂ ।
ಯಥೇಮಂ ಬಾಲಕಂ ದೀನಂ ಕ್ಷೀರಾಸ್ವಾದನಲಂಪಟಂ ॥ ೭ ॥
ಯಸ್ಮಾತ್ತ್ವಯೇದೃಶಂ ಕರ್ಮ ನಿರ್ದಯಂ ಸಮನುಷ್ಠಿತಂ ।
ಕುಷ್ಠವ್ಯಾಧಿ ಸಮಾಯುಕ್ತಸ್ತಸ್ಮಾತ್ಸದ್ಯೋ ಭವಿಷ್ಯಸಿ ॥ ೮ ॥

ರಾಜೋವಾಚ :—

ಸ್ವಧರ್ಮ ಏಷ ಭೂಪಾನಾಂ ಕುರ್ವಂತಿ ಮೃಗಸಂಕ್ಷಯಂ ।
ತಸ್ಮಾತ್ಸ್ವಧರ್ಮಸಂಯುಕ್ತಂ ನಮಾಂ ತ್ವಂ ಶಪ್ತುಮರ್ಹಸಿ ॥ ೯ ॥

ಮೃಗ್ಯುವಾಚ :—

ಸತ್ಯಮೇತನ್ಮಹೀಪಾಲ ಯತ್ತ್ವಯಾ ಪರಿಕೀರ್ತಿತಂ ।
ಕ್ಷತ್ರಿಯಾಣಾಂ ವಧಾರ್ಥಾಯ ಮೃಗಾಃ ಸೃಷ್ಟಾಃ ಸ್ವಯಂಭುವಾ॥ ೧೦ ॥

---

೫. ಆಗ ಬಹಳ ಸಮೀಪದಲ್ಲಿಯೇ ಧನುರ್ಧಾರಿಯಾಗಿ ನಿಂತಿದ್ದ ಆ ಭೂಪಾಲನು ಕಾಣಿಸಿದನು. ಆ ಸಮಯದಲ್ಲಿ ಸುತವತ್ಸಲೆಯಾದ ಆ ಮೃಗಿಯು ಕಂಬನಿದುಂಬಿದ ಮುಖದಿಂದ ಅವನನ್ನೇ ನೋಡುತ್ತ ಹೀಗೆಂದಿತು.

೬–೭. ಹೆಣ್ಣು ಜಿಂಕೆಯು ಹೇಳುತ್ತದೆ:—ಎಲೈ ಮಹೀಪಾಲನೆ, ಎಳೆ ಮರಿಯ ತಾಯಿಯಾದ ನನ್ನನ್ನು ನೀನು ಕೂರಂಬಿನಿಂದ ಹೊಡೆದುದು ಅಯುಕ್ತ. ಭೂಪಾಲ, ನಾನು ನನ್ನ ಮರಣಕ್ಕಾಗಿ ದುಃಖಿಸುವುದಿಲ್ಲ. ನನ್ನಿಂದ ಜನಿಸಿ ಸ್ತನ್ಯಪಾನದಲ್ಲಿ ಆಸಕ್ತವಾಗಿರುವ ಈ ಮರಿಗಾಗಿ ದುಃಖಿಸುತ್ತೇನೆ.

೮. ನೀನು ಇಂತಹ ನಿರ್ದಯವಾದ ಕಾರ್ಯವನ್ನು ಮಾಡಿದೆಯಾಗಿ ಈ ಕ್ಷಣದಲ್ಲಿಯೇ ಕುಷ್ಠರೋಗಿಯಾಗುವೆ.

೯. ರಾಜನು ಹೇಳುತ್ತಾನೆ:—ಎಲೈ ಮೃಗವೆ, ಮೃಗಗಳನ್ನು ಬೇಟೆಯಾಡುವುದು ರಾಜರ ಧರ್ಮ. ಆದುದರಿಂದ ನನ್ನ ಧರ್ಮದಂತೆ ನಡೆದಿರುವ ನನ್ನನ್ನು ಈ ರೀತಿ ಶಪಿಸಬೇಡ.

೧೦. ಹೆಣ್ಣು ಜಿಂಕೆಯು ಹೇಳುತ್ತದೆ:—ಮಹೀಪತಿಯೆ, ನೀನು ಹೇಳಿದ್ದು ದಿಟವೆ. ಕ್ಷತ್ರಿಯರು ಬೇಟೆಯಾಡಿ ಕೊಲ್ಲಲೋಸುಗವೆ ಆ ಬ್ರಹ್ಮದೇವನು ಜಿಂಕೆಗಳನ್ನು ನಿರ್ಮಿಸಿದ್ದಾನೆ. ಇದು ದಿಟವೇ ಆಗಲಿ.

ಪರಂ ತೇನ ವಿಧಿಸ್ತೇಷಾಂ ಕೃತೋ ಯಸ್ತಂ ಮಹೀಪತೇ ।
ಶೃಣುಷ್ವಾವಹಿತೋ ಭೂತ್ವಾ ವದಂತ್ಯಾ ಮಮ ಸಾಂಪ್ರತಂ ॥ ೧೧ ॥
ಸುಪ್ತಂ ಮೈಥುನಸಂಯುಕ್ತಂ ಸ್ತನಪಾನ ಕ್ರಿಯೋದ್ಯತಂ ।
ಹತ್ವಾ ಮೃಗಂ ಜಲಾಸಕ್ತಂ ನರಃ ಪಾಪೇನ ಲಿಪ್ಯತೇ ॥ ೧೨ ॥
ಏತಸ್ಮಾತ್ಕಾರಣಾಚ್ಛಾಪಸ್ತವ ದತ್ತೋ ಮಯಾ ನೃಪ ।
ನ ಕಾಮತೋ ನ ಮೃತ್ಯೋರ್ವಾ ಸತ್ಯೇನಾತ್ಮಾನಮಾಲಭೇ ॥ ೧೩ ॥
ಏವಮುಕ್ತ್ವಾ ಮೃಗೀ ಪ್ರಾಣಾನ್ ಸಾ ಮುಮೋಚ ವ್ಯಥಾನ್ವಿತಾ ।
ಕುಷ್ಠವ್ಯಾಧಿ ಸಮಾಯುಕ್ತಃ ಸೋಽಪಿ ರಾಜಾ ಬಭೂವಹ ॥ ೧೪ ॥
ಸ ದೃಷ್ಟ್ವಾ ಕುಷ್ಠಸಂಯುಕ್ತಂ ಪಾರ್ಥಿವಃ ಸ್ವಂ ಕಲೇವರಂ ।
ತತಃ ಸ್ವಾನ್ ಸೇವಕಾನಾಹ ಸಮಾಹೂಯ ಸುದುಃಖಿತಃ ॥ ೧೫ ॥
ಅಹಂ ತಪಶ್ಚರಿಷ್ಯಾಮಿ ಪೂಜಯಿಷ್ಯಾಮಿ ಶಂಕರಂ ।
ತಾವದ್ಯಾವತ್ಪ್ರಣಾಶೋ ಮೇ ಕುಷ್ಠವ್ಯಾಧೇರ್ಭವಿಷ್ಯತಿ ॥ ೧೬ ॥
ಯತ್ಕಿಂಚಿತ್ತ್ರಿಷು ಲೋಕೇಷು ಪ್ರಾರ್ಥಯಂತಿ ನರಾಃ ಸುಖಂ ।
ತತ್ಸರ್ವಂ ತಪಸಾ ಸಾಧ್ಯಂ ತಸ್ಮಾತ್ಕಾರ್ಯಂ ಮಯಾ ತಪಃ ॥ ೧೭ ॥

---

೧೧. ಆದರೆ, ಹಾಗೆ ಬೇಟೆಯಾಡಿ ಕೊಲ್ಲುವುದಕ್ಕೂ ಒಂದು ನಿಯಮ ವುಂಟು. ಹೇಳುತ್ತೇನೆ, ಸಾವಧಾನಮನಸ್ಕನಾಗಿ ಕೇಳು.

೧೨–೧೩. ಮಲಗಿ ನಿದ್ರಿಸುತ್ತಿರುವಾಗ, ಮೈಥುನ ಕ್ರಿಯೆಯಲ್ಲಿ ತೊಡಗಿರುವಾಗ, ಮೊಲೆಯೂಡಿಸುತ್ತಿರುವಾಗ, ನೀರು ಕುಡಿಯುತ್ತಿರುವಾಗ ಮಾನವನು ಮೃಗವನ್ನು ಕೊಂದುದಾದರೆ ಪಾಪಿಯಾಗುತ್ತಾನೆ. ಎಲೈ ಮಹಾರಾಜನೆ, ಈ ಕಾರಣದಿಂದ ನಾನು ನಿನಗೆ ಶಾಪವನ್ನು ಕೊಟ್ಟಿದ್ದೇನೆಯಲ್ಲದೆ ಕಾಮದಿಂದಾಗಲಿ ಮೃತ್ಯುವಿಗೆ ಹೆದರಿಯಾಗಲಿ ಅಲ್ಲವೆಂಬುದನ್ನು ಇದೋ ಸತ್ಯವಾಗಿ ನನ್ನ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ.

೧೪. ಎಲೈ ವಿಪ್ರರೆ, ಆ ಮೃಗಿಯು ಈ ರೀತಿ ನುಡಿದು ಬಹುವಾಗಿ ವ್ಯಥೆಗೊಂಡು ಪ್ರಾಣಗಳನ್ನು ತೊರೆಯಿತು. ಆ ಚಮತ್ಕಾರಮಹೀಪತಿಯಾದರೋ ಒಡನೆಯೇ ಕುಷ್ಠರೋಗಿಯಾದನು.

೧೫. ಅವನು ತನ್ನ ಮೈಯೆಲ್ಲವೂ ಕುಷ್ಠ ಹಿಡಿದುದನ್ನು ಕಂಡು ಬಳಿಯಲ್ಲಿದ್ದ ಸೇವಕರೆಲ್ಲರನ್ನೂ ಕರೆದು ಬಹು ದುಃಖಿತನಾಗಿ ಹೀಗೆಂದನು.

೧೬–೧೭. "ಅಯ್ಯಾ, ನನಗೆ ಈಗ ಸಂಭವಿಸಿರುವ ಈ ಕುಷ್ಠವ್ಯಾಧಿಯು ನಿವಾರಣೆಯಾಗುವವರೆಗೂ ನಾನು ತಪಸ್ಸನ್ನು ಮಾಡಿ ಶಂಕರನನ್ನು ಪೂಜಿಸುತ್ತೇನೆ. ಮಾನವನು ಮೂರು ಲೋಕಗಳಲ್ಲಿಯೂ ಪ್ರಾರ್ಥಿಸುವ ಸುಖಸಂಪತ್ತುಗಳೆಲ್ಲವೂ ತಪಸ್ಸಿನಿಂದ ಸಾಧ್ಯವಾಗುತ್ತದೆ. ಆದುದರಿಂದ ನಾನು ತಪಸ್ಸನ್ನು ಮಾಡಬೇಕು.

ಅಥುನೈಕೋಽಹನೋಕಾಽಹನೋಕೈಕಸ್ಮಿನ್ ವನಸ್ಪತೌ ।
ಚರನ್ ಭೈಕ್ಷಂತು ನಿಯಮೈಶ್ಚರಿಷ್ಯಾಮಿ ಧರಾತಲೇ ॥ ೧೮ ॥
ಪಾಂಸುನಾ ಸಮವಚ್ಛನ್ನೇ ಶೂನ್ಯಾಗಾರೇ ಪ್ರತಿಶ್ರಯಃ ।
ವೃಕ್ಷಮೂಲನಿಕೇತೇ ವಾ ಮುಕ್ತಸರ್ವಪ್ರಿಯಾಪ್ರಿಯಃ ॥ ೧೯ ॥
ಸಮಃ ಶತ್ರುಷು ಮಿತ್ರೇಷು ಸಮಲೋಷ್ಟಾಶ್ಮಕಾಂಚನಃ ।
ಭೂತ್ವಾ ಕಾಲಂ ನಯಿಷ್ಯಾಮಿ ಯಾವತ್ಕಾಲಸ್ಯ ಸಂಸ್ಥಿತಿಃ ॥ ೨೦ ॥
ಏವಂ ತಾನ್ ಸೇವಕಾನ್ ಭೂಪಃ ಸೋಽಭಿಧಾಯ ವಿಸೃಜ್ಯ ಚ ।
ತೀರ್ಥಯಾತ್ರಾಪರೋ ಭೂತ್ವಾ ಬಭ್ರಾಮ ವಸುಧಾತಲೇ ॥ ೨೧ ॥
ತತಃ ಕಾಲೇನ ಮಹತಾ ಪ್ರಾಪ್ಯ ವಿಪ್ರಸಮುದ್ಭವಂ ।
ಉಪದೇಶಂ ನೃಪಃ ಪ್ರಾಪ್ತಃ ಶಂಖತೀರ್ಥಂ ಮಹೋದಯಂ ॥ ೨೨ ॥
ಹಾಟಕೇಶ್ವರಜೇ ಕ್ಷೇತ್ರೇ ಸರ್ವವ್ಯಾಧಿ ವಿನಾಶಕಂ ।
ವಿಖ್ಯಾತಂ ತ್ರಿಷು ಲೋಕೇಷು ಪೂರಿತಂ ಸ್ವಚ್ಛವಾರಿಣಾ ॥ ೨೩ ॥

---

೧೮. ಈಗ ಈ ಅರಣ್ಯದಲ್ಲಿ ಒಂದೊಂದು ಮರದಡಿಯಲ್ಲಿಯೂ ಒಂದೊಂದು ದಿನದಂತೆ ಭಿಕ್ಷೆಯನ್ನು ಮಾಡುತ್ತ ಎಲ್ಲ ನೇಮಗಳನ್ನೂ ಅನುಸರಿಸಿ ನೆಲದ ಮೇಲೆಯೇ ಕುಳಿತು ತಪಸ್ಸನ್ನು ಮಾಡುತ್ತೇನೆ.

೧೯–೨೦. ಪ್ರಿಯಾಪ್ರಿಯಗಳೆಲ್ಲವನ್ನೂ ತೊರೆದು ಮನೆಮಠಗಳಿಲ್ಲದೆ ವೃಕ್ಷಮೂಲವೊಂದನ್ನೇ ಮನೆಯನ್ನಾಗಿ ನೆಮ್ಮಿ ಧೂಳು ಮುಚ್ಚಿದ ಮೈಯುಳ್ಳವನಾಗಿ ಹಗೆಯರಲ್ಲಿಯೂ ಗೆಳೆಯರಲ್ಲಿಯೂ ಕಲ್ಲಿನಲ್ಲಿಯೂ ಚಿನ್ನದಲ್ಲಿಯೂ ಸಮಾನ ಬುದ್ಧಿಯುಳ್ಳವನಾಗಿ ಈ ಕುಷ್ಠರೋಗ ನಿವಾರಣೆಯ ಕಾಲವು ಬರುವ ವರೆಗೂ ತಪಸ್ಸನ್ನು ಮಾಡುತ್ತೇನೆ.”

೨೧. ಈ ಪ್ರಕಾರವಾಗಿ ಆ ಚಮತ್ಕಾರ ಭೂಪಾಲನು ಸೇವಕರಿಗೆ ಹೇಳಿ ಅವರನ್ನು ಬೀಳ್ಕೊಟ್ಟು ತೀರ್ಥಯಾತ್ರೆಯಲ್ಲಿ ತೊಡಗಿ ವಸುಧಾತಲವನ್ನೆಲ್ಲ ಸಂಚರಿಸಿದನು.

೨೨. ಬಹಳ ಕಾಲವಾದ ತರುವಾಯ ಆ ದೊರೆಯು ವಿಪ್ರರ ಉಪದೇಶದಂತೆ ಮಹಾಪುಣ್ಯಕರವಾದ ಶಂಖತೀರ್ಥವನ್ನು ಹೊಂದಿದನು.

೨೩. ಆ ಶಂಖತೀರ್ಥವಾದರೋ ಹಾಟಕೇಶ್ವರ ಕ್ಷೇತ್ರದಲ್ಲಿರುವುದಾಗಿ ಸಮಸ್ತ ವ್ಯಾಧಿಗಳನ್ನೂ ಕಳೆಯತಕ್ಕುದೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದ್ದಿತು. ಬಹುನಿರ್ಮಲವಾದ ಜಲಸಮೃದಿಯುಳ್ಳದ್ದಾಗಿ ಶೋಭಿಸುತ್ತಿದ್ದಿತು.

ತತ್ರಾಽಸೌ ಸ್ನಾನಮಾತ್ರೇಣ ತತ್ಕ್ಷಣಾತ್ಪಾರ್ಥಿವೋತ್ತಮಃ ।
ಕುಷ್ಠವ್ಯಾಧಿವಿನಿರ್ಮುಕ್ತಃ ಸಂಜಾತಃ ಸುಮಹಾದ್ಯುತಿಃ ॥ ೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಂಖತೀರ್ಥಮಾಹಾತ್ಮ್ಯಂ — ಚಮತ್ಕಾರನೃಪತಿ ಕುಷ್ಠನಿವೃತ್ತಿವೃತ್ತಾಂತ
ವರ್ಣನಂ"ನಾಮ ದಶಮೋಽಧ್ಯಾಯಃ

---

೨೪. ಅಲ್ಲಿ ಈ ಚಮತ್ಕಾರ ರಾಜನು ಸ್ನಾನವನ್ನು ಮಾಡಿದನು. ಒಡನೆಯೇ ಅವನು ಕುಷ್ಠವ್ಯಾಧಿಯಿಂದ ಬಿಡುಗಡೆ ಹೊಂದಿ ಮುನ್ನಿನಂತೆಯೇ ಮಹಾ ತೇಜಸ್ಸಂಪನ್ನನಾಗಿ ಪಾರ್ಥಿವೋತ್ತಮನೆನಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಂಖತೀರ್ಥಮಾಹಾತ್ಮ್ಯ—ಚಮತ್ಕಾರನೃಪತಿ ಕುಷ್ಠನಿವೃತ್ತಿವೃತ್ತಾಂತ
ವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ಶಂಖತೀರ್ಥೋತ್ಪತ್ತಿಃ—ಚಮತ್ಕಾರಭೂಪತಿಕೃತ ವಿಪ್ರನಗರನಿರ್ಮಾಣವರ್ಣನಂ

ಋಷಯ ಊಚುಃ:—

ಚಮತ್ಕಾರಃ ಕಥಂ ರಾಜಾ ಮುಕ್ತಃ ಕುಷ್ಠೇನ ಸೂತಜ ।
ಕಥಂ ತೇನ ತಪಸ್ತಪ್ತಂ ಕಿಯತ್ಕಾಲಂ ಚ ಭೂಭುಜಾ ॥ ೧ ॥
ಕತಮೇ ಬ್ರಾಹ್ಮಣಾಸ್ತೇ ವೈ ಶಂಖತೀರ್ಥಂ ಪ್ರದರ್ಶಿತಂ ।
ಯೈಸ್ತಸ್ಯ ರೋಗಮುಕ್ತ್ಯರ್ಥಂ ದುಃಖಿತಸ್ಯ ಮಹಾತ್ಮನಃ ॥ ೨ ॥
ಕತಮಂ ಶಂಖತೀರ್ಥಂ ತತ್ಕಸ್ಮಿನ್ ಸ್ಥಾನೇ ವ್ಯವಸ್ಥಿತಂ ।
ಕಿಂ ಪ್ರಭಾವಂ ಚ ನಿಃಶೇಷಂ ಸರ್ವಂ ವಿಸ್ತರತೋ ವದ ॥ ೩ ॥

ಸೂತ ಉವಾಚ:—

ಅಹಂ ವಃ ಕೀರ್ತಯಿಷ್ಯಾಮಿ ಕಥಾಮೇತಾಂ ಮನೋಹರಾಂ ।
ಸರ್ವಪಾಪಹರಾಂ ವಿಪ್ರಾಶ್ಚಮತ್ಕಾರ ನೃಪೋದ್ಭವಾಂ ॥ ೪ ॥

---

## ಕನ್ನಡದ ಅನುವಾದ

### ಶಂಖತೀರ್ಥಮಾಹಾತ್ಮ್ಯ—ಚಮತ್ಕಾರಭೂಪತಿಕೃತ ವಿಪ್ರನಗರನಿರ್ಮಾಣವರ್ಣನ

೧. ಋಷಿಗಳು ಕೇಳುತ್ತಾರೆ:—ಅಯ್ಯಾ ಸೂತಪುರಾಣಿಕನೆ, ಚಮತ್ಕಾರ ರಾಜನು ಕುಷ್ಠರೋಗದಿಂದ ವಿಮುಕ್ತನಾದುದು ಹೇಗೆ? ಅವನು ಹೇಗೆ ಮತ್ತು ಎಷ್ಟುಕಾಲ ತಪಸ್ಸನ್ನು ಮಾಡಿದನು?

೨. ಬ್ರಾಹ್ಮಣರು ದುಃಖಿತನಾಗಿದ್ದ ಅವನ ರೋಗಮುಕ್ತಿಗಾಗಿ ಶಂಖತೀರ್ಥವನ್ನು ಅವನಿಗೆ ತೋರಿಸಿದ್ದು ಎಷ್ಟನೆಯ ವರ್ಷದಲ್ಲಿ?

೩. ಹಾಟಕೇಶ್ವರಕ್ಷೇತ್ರದ ಯಾವೆಡೆಯಲ್ಲಿ ಆ ಶಂಖತೀರ್ಥವಿರುವುದು? ಅಲ್ಲಿರುವ ತೀರ್ಥಗಳಲ್ಲಿ ಅದು ಎಷ್ಟನೆಯದು? ಅದರ ಪ್ರಭಾವವೇನು? ಈ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿಯೂ ವಿಸ್ತಾರವಾಗಿಯೂ ನಮಗೆ ತಿಳಿಸುವವನಾಗು.

೪. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಸಕಲಪಾಪಗಳನ್ನೂ ಕಳೆಯುವುದಾಗಿ, ಬಹು ಮನೋಹರವಾಗಿಯೂ ಇರುವ ಈ ಚಮತ್ಕಾರ ನೃಪತಿಯ ಕಥೆಯನ್ನು ನಿಮಗೆ ಹೇಳುತ್ತೇನೆ ಕೇಳಿರಿ.

ಸ ಭ್ರಾಂತಃ ಸರ್ವತೀರ್ಥಾನಿ ಪ್ರಭಾಸಾದ್ಯಾನಿ ಕೃತ್ಸ್ನಶಃ ।
ತಪಸ್ವೀ ನಿಯತಾಹಾರೋ ಭಿಕ್ಷಾನ್ನಕೃತಭೋಜನಃ ॥ ೫ ॥
ಪೃಚ್ಛಮಾನೋ ಭಿಷಗ್ಮುಖ್ಯಾನೌಷಧಾನಿ ಮುಹುರ್ಮುಹುಃ ।
ಮಂತ್ರಾನ್ ಮಂತ್ರವಿದಶ್ಚೈವ ರೋಗನಾಶಾಯ ನಿತ್ಯಶಃ ॥ ೬ ॥
ನ ಲೇಭೇ ಕಿಂಚಿದಿಷ್ಟಂ ವಾ ಸ ಮಂತ್ರಂ ಭೇಷಜಂ ಚ ವಾ ।
ತೀರ್ಥಂ ವಾ ನೃಪಶಾರ್ದೂಲೋ ಯೇನ ಸ್ಯಾದ್ವ್ಯಾಧಿಸಂಕ್ಷಯಃ ॥ ೭ ॥
ತತಶ್ಚ ಪಾರ್ಥಿವಶ್ರೇಷ್ಠೋ ವೈರಾಗ್ಯಂ ಪರಮಂ ಗತಃ ।
ಏಕಾಕೀ ಯತಚಿತ್ತಾತ್ಮಾ ಸರ್ವಸತ್ವವಿರಾಜಿತೇ ॥ ೮ ॥
ನಿವಾಸಮಕರೋತ್ತಸ್ಮಿನ್ ಕ್ಷೇತ್ರೇ ಪುಣ್ಯತಮೇ ಚಿರಂ ।
ಶೀರ್ಣಪರ್ಣಫಲಾಹಾರೋ ಭೂಮೌ ಶೇತೇ ಸದಾ ನಿಶಿ ।
ಅನ್ಯಸ್ಯಾನ್ಯಸ್ಯ ವೃಕ್ಷಸ್ಯ ಮದಾಹಂಕಾರ ವರ್ಜಿತಃ ॥ ೯ ॥
ತತಃ ಕತಿಪಯಾಹಸ್ಯ ಭ್ರಮಮಾಣೋ ಮಹೀಪತಿಃ ।
ಸೋಽಪಶ್ಯದ್ಬ್ರಾಹ್ಮಣಶ್ರೇಷ್ಠಾಂಸ್ತೀರ್ಥಯಾತ್ರಾಶ್ರಯಾನ್ಬಹೂನ್ ॥೧೦॥

---

೫-೬. ಆ ಚಮತ್ಕಾರನು ತಪಸ್ವಿಯೂ ನಿಯತವಾದ ಆಹಾರವುಳ್ಳವನೂ ಭಿಕ್ಷಾನ್ನದಿಂದಲೇ ಭೋಜನವನ್ನು ನೀಗಿಸುತ್ತಿದ್ದವನೂ ಆಗಿ, ಅಲ್ಲಲ್ಲಿರುವ ವೈದ್ಯಶ್ರೇಷ್ಠರನ್ನು ಅಡಿಗಡಿಗೂ ಔಷಧಿಗಳನ್ನು ವಿಚಾರಿಸುತ್ತ, ಮಂತ್ರವಾದಿಗಳನ್ನು ಕುಷ್ಠರೋಗ ನಾಶಕವಾದ ಮಂತ್ರಗಳಿಗಾಗಿ ಯಾವಾಗಲೂ ಪ್ರಶ್ನಿಸುತ್ತ, ಪ್ರಭಾಸವೇ ಮೊದಲಾದ ಭೂಮಂಡಲದಲ್ಲಿಯ ಸಮಸ್ತ ತೀರ್ಥಗಳನ್ನೂ ಸಂಚರಿಸಿದನು.

೭. ಆದರೆ, ಅವನ ರೋಗವು ನಿವಾರಣೆಯಾಗುವಂತಹ ಹಿತಕರವಾದ ಮಂತ್ರವಾಗಲಿ ಔಷಧವಾಗಲಿ ತೀರ್ಥವಾಗಲಿ ಯಾವುದೂ ಅವನಿಗೆ ದೊರಕಲಿಲ್ಲ.

೮-೯. ತರುವಾಯ ಆ ಪಾರ್ಥಿವಶ್ರೇಷ್ಠನು ಬಹಳವಾಗಿ ವೈರಾಗ್ಯವನ್ನು ಹೊಂದಿ ಸ್ಥಿರಮನಸ್ಕನಾಗಿ, ಸಮಸ್ತ ಪ್ರಾಣಿಗಳಿಂದಲೂ ತುಂಬಿ ಶೋಭಿಸುತ್ತಿರುವ ಬಹು ಪುಣ್ಯಕರವಾದ ಹಾಟಕೇಶ್ವರ ಕ್ಷೇತ್ರದಲ್ಲಿಯೇ ಒಬ್ಬಂಟಿಗನಾಗಿ ಬಹಳಕಾಲ ನಿಂತನು. ಅಲ್ಲಿ ಅವನು ಮದಾಹಂಕಾರಗಳನ್ನು ತೊರೆದು ಒಂದೊಂದು ದಿನವೂ ಒಂದೊಂದು ಮರದಡಿಯಲ್ಲಿ ನೆಲಸಿ ಉದುರಿದ ಎಲೆಗಳನ್ನು ಮಾತ್ರ ಆಹಾರವಾಗಿ ಸ್ವೀಕರಿಸುತ್ತ ರಾತ್ರಿಯೆಲ್ಲ ನೆಲದಮೇಲೆಯೇ ಮಲಗುತ್ತಿದ್ದನು.

೧೦. ಹೀಗೆ ಆ ಮಹೀಪತಿಯು ಕೆಲವು ದಿನಗಳು ಸಂಚಾರಮಾಡುತ್ತಿರಲು ಒಂದಾನೊಂದು ದಿನ ತೀರ್ಥಯಾತ್ರೆಗಾಗಿ ಹೋಗುತ್ತಿದ್ದ ಹಲವು ಮಂದಿ ಬ್ರಾಹ್ಮಣಶ್ರೇಷ್ಠರನ್ನು ಕಂಡನು.

ತತಃ ಪ್ರಣಮ್ಯ ತಾನ್ಸಿಪ್ರಾನುಪವಿಷ್ಟಾನ್ಧರಾತಲೇ ।
ವಿಶ್ವಾಮಿತ್ರಾಶ್ರಮಸ್ಯಾಂತೇ ಪ್ರೋವಾಚ ವಿನಯಾನ್ವಿತಃ ॥ ೧೧ ॥

ರಾಜೋವಾಚ :—

ಅಹಂ ನಾಮ್ನಾ ಚಮತ್ಕಾರಃ ಪಾರ್ಥಿವಃ ಸೂರ್ಯವಂಶಜಃ ।
ಆನರ್ತಾಽಧಿಪತಿರ್ವ್ಯಾಪ್ತಃ ಕುಷ್ಠೇನ ದ್ವಿಜಸತ್ತಮಾಃ ॥ ೧೨ ॥
ಅಸ್ತಿ ಕಶ್ಚಿದುಪಾಯೋಽತ್ರ ದೈವೋ ವಾ ಮಾನುಷೋಽಪಿ ವಾ ।
ಭೇಷಜಂ ವಾಽಥ ಮಂತ್ರೋ ವಾ ಯೇನ ಕುಷ್ಠಂ ಪ್ರಶಾಮ್ಯತಿ ॥ ೧೩ ॥
ಮಮೋಪರಿ ದಯಾಂ ಕೃತ್ವಾ ವದಧ್ವಂ ದ್ವಿಜಸತ್ತಮಾಃ ।
ಕುಷ್ಠಗ್ರಸ್ತಶರೀರಂ ಚ ಪರಂ ಕೃಚ್ಛ್ರಮುಪಾಗತಂ ॥ ೧೪ ॥
ಅಥವಾ ವಿತ್ಥ ನೋ ಯೂಯಂ ತ್ಯಕ್ಷ್ಯಾಮ್ಯಹ ಕಲೇವರಂ ।
ಪ್ರವಿಶ್ಯಾಽಗ್ನಿಂ ಜಲಂ ವಾಽಪಿ ಭಕ್ಷಯಿತ್ವಾಽಥವಾ ವಿಷಂ ॥ ೧೫ ॥
ತಸ್ಯ ತದ್ವಚನಂ ಶ್ರುತ್ವಾ ಸರ್ವೇ ತೇ ದ್ವಿಜಸತ್ತಮಾಃ ।
ಪ್ರೋಚುಃ ಕೃಪಾಸಮಾವಿಷ್ಟಾಸ್ತತಸ್ತಂ ಪೃಥಿವೀಶ್ವರಂ ॥ ೧೬ ॥
ಅಸ್ತಿ ಪಾರ್ಥಿವ ಶಾರ್ದೂಲ ಸ್ಥಾನಾದಸ್ಮಾದದೂರತಃ ।
ಶಂಖತೀರ್ಥಮಿತಿ ಖ್ಯಾತಂ ಸರ್ವರೋಗಕ್ಷಯಾವಹಂ ॥ ೧೭ ॥

---

೧೧. ಅವರೆಲ್ಲರೂ ವಿಶ್ವಾಮಿತ್ರ ಮಹರ್ಷಿಯ ಆಶ್ರಮದ ಬಳಿ ನೆಲದಲ್ಲಿಯೇ ವಿಶ್ರಮಿಸಿಕೊಳ್ಳಲೋಸುಗ ಕುಳಿತುಕೊಂಡಿರಲು ಚಮತ್ಕಾರನು ಅವರೆಲ್ಲರನ್ನೂ ನಮಸ್ಕರಿಸಿ ನಮ್ರನಾಗಿ ಅವರನ್ನು ಕುರಿತು ಹೀಗೆಂದನು.

೧೨. "ಎಲೈ ದ್ವಿಜಸತ್ತಮರೆ, ನಾನು ಚಮತ್ಕಾರನೆಂಬ ದೊರೆಯು. ನನ್ನ ವಂಶವು ಸೂರ್ಯವಂಶ. ಆನರ್ತದೇಶಕ್ಕೆ ನಾನು ಒಡೆಯನು. ನನಗೆ ಈ ಕುಷ್ಠರೋಗವು ಸಂಭವಿಸಿದೆ.

೧೩–೧೫. ಇದರ ನಿವಾರಣೆಗೆ ದೈವಿಕವಾದ ಅಥವಾ ಮಾನುಷವಾದ ಮಂತ್ರ ತಂತ್ರಗಳಾಗಲಿ ಔಷಧವಾಗಲಿ ಇದ್ದರೆ, ನನ್ನ ಮೇಲೆ ಕೃಪೆಯಿಟ್ಟು ಹೇಳಬೇಕು. ಈ ಕುಷ್ಠರೋಗದಿಂದ ಬಹುವಾಗಿ ಕಷ್ಟಪಡುತ್ತಿದ್ದೇನೆ. ಪುಣ್ಯಾತ್ಮರಾದ ನೀವೂ ಇದರ ನಿವಾರಣೆಯ ಉಪಾಯವನ್ನು ತಿಳಿದಿಲ್ಲದಿದ್ದರೆ ನಾನು ಅಗ್ನಿ ಪ್ರವೇಶಮಾಡಿಯಾಗಲಿ, ನೀರಿನಲ್ಲಿ ಮುಳುಗಿಯಾಗಲಿ, ವಿಷವನ್ನು ಕುಡಿದಾಗಲಿ ಪ್ರಾಣವನ್ನು ತೊರೆಯುತ್ತೇನೆ."

೧೬. ಎಲೈ ವಿಪ್ರರೆ, ಚಮತ್ಕಾರನಾಡಿದ ಈ ಮಾತುಗಳನ್ನು ಕೇಳಿ ಆ ಬ್ರಾಹ್ಮಣರೆಲ್ಲರೂ ಅವನ ವಿಷಯದಲ್ಲಿ ದಯುಗೊಂಡು ಇಂತೆಂದರು.

೧೭. ಎಲೈ ಪಾರ್ಥಿವಶ್ರೇಷ್ಠನೆ, ಈ ಪ್ರದೇಶಕ್ಕೆ ಬಹು ಸಮೀಪದಲ್ಲಿಯೇ ಶಂಖತೀರ್ಥವೆಂದು ಪ್ರಸಿದ್ಧವಾದ ಒಂದು ತೀರ್ಥವಿರುವುದು. ಅದು ಸರ್ವ ರೋಗಗಳನ್ನೂ ನಿವಾರಣೆಮಾಡುವಂಥದೆಂದು ಹೆಸರಾಗಿದೆ.

ಯೇ ನರಾ ವ್ಯಾಧಿನಾಗ್ರಸ್ತಾಃ ಕಾಣಾಶ್ಚಾಂಧಾಸ್ತಥಾ ಜಡಾಃ ।
ಹೀನಾಂಗಾಶ್ಚಾಽಧಿಕಾಂಗಾಶ್ಚ ಕುರೂಪಾ ವಿಕೃತಾನನಾಃ ॥ ೧೮ ॥
ತೇಽಪಿ ಚೈತ್ರಸ್ಯ ಕೃಷ್ಣಾದೌ ಸ್ನಾತಾಸ್ತತ್ರಾಕೃತಾಶನಾಃ ।
ಭವಂತಿ ನೀರುಜಃ ಸದ್ಯಶ್ಚಿತ್ರಾಸಂಸ್ಥೇ ನಿಶಾಕರೇ ॥ ೧೯ ॥
ಅಸ್ಮಾಭಿಃ ಶತಶೋ ದೃಷ್ಟಾ ದ್ವಾದಶಾರ್ಕಸಮಪ್ರಭಾಃ ।
ಕಾಮದೇವಸಮಾಕಾರಾಸ್ತೇಜೋವೀರ್ಯಸಮಾಯುತಾಃ ॥ ೨೦ ॥

ರಾಜೋವಾಚ :—

ಶಂಖತೀರ್ಥಂ ಕಥಂ ಜ್ಞೇಯಂ ಮಯಾ ಬ್ರಾಹ್ಮಣಸತ್ತಮಾಃ ।
ಕಥಂ ಚೈವ ಸಮುತ್ಪನ್ನಂ ವದಧ್ವಂ ಮಮ ವಿಸ್ತರಾತ್ ॥ ೨೧ ॥

ಬ್ರಾಹ್ಮಣಾ ಊಚುಃ :—

ಆಸೀತ್ಪೂರ್ವಂ ಮುನಿಶ್ರೇಷ್ಠೋ ಲಿಖಿತಾಖ್ಯೋ ಮಹೀತಲೇ ।
ಶಾಂಡಿಲ್ಯಸ್ಯ ಮುನೇಃ ಪುತ್ರಸ್ತಪೋವೀರ್ಯ ಸಮನ್ವಿತಃ ॥ ೨೨ ॥
ಅಥತಸ್ಯಾಽನುಜೋ ಜಜ್ಞೇ ಶಂಖಾಖ್ಯೋ ಧರ್ಮಶಾಸ್ತ್ರವಿತ್ ।
ಕಂದಮೂಲಫಲಾಹಾರಃ ಸದೈವ ತಪಸಿ ಸ್ಥಿತಃ ॥ ೨೩ ॥

---

೧೮—೧೯. ವ್ಯಾಧಿಗ್ರಸ್ತರೂ ಕುಂಟರೂ ಕುರುಡರೂ ಹುಚ್ಚರೂ ಇತರ ಅಂಗಹೀನರೂ ಅಧಿಕಾಂಗವುಳ್ಳವರೂ ಕುರೂಪಿಗಳೂ ಸೊಟ್ಟಮೋರೆಯವರೂ ಆದ ಮಾನವರು ಚೈತ್ರ ಕೃಷ್ಣ ಪ್ರಥಮ ತಿಥಿಯಲ್ಲಿ ಚಂದ್ರನು ಚಿತ್ರಾನಕ್ಷತ್ರ ದಲ್ಲಿದ್ದಂದು ಅಲ್ಲಿ ಸ್ನಾನಮಾಡಿ ಉಪವಾಸವನ್ನು ಮಾಡಿದ್ದಾದರೆ ಆರೋಗ್ಯವನ್ನು ಪಡೆಯುತ್ತಾರೆ.

೨೦. ಎಲೈ ಮಹಾರಾಜನೆ, ಮೇಲೆ ಹೇಳಿದಂತಹ ನೂರಾರುಮಂದಿ ಮಾನವರು ಆ ಶಂಖತೀರ್ಥದಲ್ಲಿ ಮಿಂದು ದ್ವಾದಶಾರ್ಕರ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳವರಾಗಿ ಮನ್ಮಥನಂತೆ ಸುಂದರವಾದ ದೇಹಗಳಿಂದೊಪ್ಪಿ ಮಹಾ ವೀರ್ಯಸಂಪನ್ನರಾದುದನ್ನು ನಾವು ಕಣ್ಣಾರೆ ಕಂಡಿದ್ದೇವೆ.

೨೧. ರಾಜನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮರೆ, ಆ ಶಂಖ ತೀರ್ಥವನ್ನು ತಿಳಿದುಕೊಳ್ಳುವ ಬಗೆ ಹೇಗೆ? ಆ ತೀರ್ಥವು ಉತ್ಪನ್ನವಾದು ದೆಂತು? ಈ ವಿಷಯವನ್ನು ನನಗೆ ವಿಸ್ತಾರವಾಗಿ ತಿಳಿಸಿ ಅನುಗ್ರಹಿಸಬೇಕು.

೨೨. ಬ್ರಾಹ್ಮಣರು ಹೇಳುತ್ತಾರೆ:—ಅಯ್ಯಾ ದೊರೆಯೆ, ಪೂರ್ವದಲ್ಲಿ ಈ ಭೂಮಂಡಲದಲ್ಲಿ ಲಿಖಿತನೆಂಬ ಮುನಿಶ್ರೇಷ್ಠನೋರ್ವನಿದ್ದನು. ತಪೋವೀರ್ಯ ಸಮನ್ವಿತನಾದ ಆ ಮುನಿಯು ಶಾಂಡಿಲ್ಯನ ಮಗನು.

೨೩. ಈ ಲಿಖಿತನಿಗೆ ಶಂಖನೆಂಬ ಒಬ್ಬ ತಮ್ಮನಿದ್ದನು. ಇವನು ಧರ್ಮ ಶಾಸ್ತ್ರಗಳಲ್ಲಿ ಮಹಾಪಂಡಿತನು. ಇವನು ಕಂದಮೂಲಫಲಗಳನ್ನು ಮಾತ್ರ ಆಹಾರವಾಗಿ ಸ್ವೀಕರಿಸುತ್ತ ಯಾವಾಗಲೂ ತಪಸ್ಸು ಮಾಡುತ್ತಿದ್ದನು.

ಕಸ್ಯಚಿತ್ತ್ವಥ ಕಾಲಸ್ಯ ಲಿಖಿತಸ್ಯಾಶ್ರಮಂ ಯಯೌ ।
ಶಂಖಃ ಸ್ವಾದುಫಲಾರ್ಥಾಯ ಪೀಡಿತೋಽತಿಬುಭುಕ್ಷಯಾ ॥ ೨೪ ॥
ಸ ಶೂನ್ಯಮಾಶ್ರಮಂ ಪ್ರಾಪ್ಯ ಲಿಖಿತಸ್ಯ ಮಹಾತ್ಮನಃ ।
ಆತ್ಮೀಯಾನೀತಿ ಮನ್ವಾನಃ ಫಲಾನಿ ಜಗೃಹೇ ತತಃ ॥ ೨೫ ॥
ಭಕ್ಷಯಾಮಾಸ ಭೂರೀಣಿ ಪಕ್ವಾನಿ ಮಧುರಾಣಿ ಚ ।
ಏತಸ್ಮಿನ್ನಂತರೇ ಪ್ರಾಪ್ತೋ ಲಿಖಿತಃ ಶಿಷ್ಯಸಂಯುತಃ ॥ ೨೬ ॥
ಸ ಗೃಹೀತಫಲಂ ದೃಷ್ಟ್ವಾ ಶಂಖಂ ಪ್ರೋವಾಚ ಕೋಪತಃ ॥ ೨೭ ॥
ಅದತ್ತಾನಿ ಮಯಾ ಪಾಪ ಫಲಾನಿ ಹೃತವಾನಸಿ ।
ಕಸ್ಮಾತ್ತ್ವಂ ಚೌರ್ಯರೂಪೇಣ ನಾನುಬಂಧಮವೇಕ್ಷಸೇ ॥ ೨೮ ॥

ಶಂಖ ಉವಾಚ:—

ಸತ್ಯಮೇತದ್ದ್ವಿಜಶ್ರೇಷ್ಠ ಯತ್ತ್ವಯಾ ಪರಿಕೀರ್ತಿತಂ ।
ಫಲಾನಿ ಪ್ರಗೃಹೀತಾನಿ ವಿಜನೇಽತ್ರ ತವಾಶ್ರಮೇ ॥ ೨೯ ॥
ತಸ್ಮಾತ್ಕುರು ಯಥಾರ್ಹಂ ಮೇ ನಿಗ್ರಹಂ ಚೌರ್ಯಸಂಭವಂ ।
ಇಹಲೋಕಃ ಪರಶ್ಚೈವ ಯೇನ ಮೇ ಸ್ಯಾತ್ಸುಖಾವಹಃ ॥ ೩೦ ॥

---

೨೪. ಕೆಲವುಕಾಲವಾದ ಮೇಲೆ ಒಂದು ದಿನ ಈ ಶಂಖನು ಹಸಿವಿನಿಂದ ಬಳಲಿ ರುಚಿಕರವಾದ ಫಲವು ದೊರೆತೀತೆಂದು ಅಣ್ಣನಾದ ಲಿಖಿತನ ಆಶ್ರಮಕ್ಕೆ ಬಂದನು.

೨೫-೨೬. ಮಹಾತ್ಮನಾದ ಆ ಲಿಖಿತನ ಆಶ್ರಮದಲ್ಲಿ ಯಾರೂ ಇಲ್ಲದಿದ್ದುದನ್ನು ಕಂಡು ಶಂಖನು ಅಲ್ಲಿಯ ಫಲಗಳನ್ನು ತನ್ನವೆಂದೇ ತಿಳಿದು ಚೆನ್ನಾಗಿ ಪಕ್ವವೂ ರುಚಿಕರವೂ ಆಗಿದ್ದ ಬಹಳ ಹಣ್ಣುಗಳನ್ನು ತಿಂದನು. ಇದೇ ಸಮಯದಲ್ಲಿಯೇ ಲಿಖಿತಮುನಿಯು ಶಿಷ್ಯರೊಡನೆ ಅಲ್ಲಿಗೆ ಬಂದನು.

೨೭-೨೮. ಅವನು ಹಣ್ಣುಗಳನ್ನು ತೆಗೆದುಕೊಂಡಿರುವ ಶಂಖನನ್ನು ನೋಡಿ ಕೋಪದಿಂದ ಅವನನ್ನು ಕುರಿತು "ಎಲವೋ ಪಾಪಿಯೆ, ನಾನು ಕೊಡದೆ ಇರುವ ಈ ಫಲಗಳನ್ನು ನೀನು ಅಪಹರಿಸಬಹುದೆ? ನೀನು ಈ ಕಳ್ಳತನವನ್ನೇಕೆ ಮಾಡಿದೆ? ಇದರಿಂದ ನಿನಗೆ ಪಾಪಶಂಕೆಯಾಗಲಿಲ್ಲವೆ?" ಎಂದು ಕೇಳಿದನು.

೨೯-೩೦. ಶಂಖನು ಹೇಳುತ್ತಾನೆ:—ದ್ವಿಜಶ್ರೇಷ್ಠ, ನೀನು ಹೇಳಿದುದು ಸತ್ಯ. ನಿನ್ನ ಆಶ್ರಮದಲ್ಲಿ ಯಾರೂ ಇಲ್ಲದಿದ್ದ ವೇಳೆಯಲ್ಲಿ ಹಣ್ಣುಗಳನ್ನು ತೆಗೆದುಕೊಂಡೆನು. ಇದು ಕಳ್ಳತನವೇ. ಆದುದರಿಂದ ನನಗೆ ಇಹಪರಗಳಲ್ಲಿ ಸುಖವುಂಟಾಗುವಂತೆ ಈ ಪಾಪಕ್ಕೆ ತಕ್ಕ ಶಿಕ್ಷೆಯನ್ನು ಮಾಡು.

ತತಃ ಸ ಹಸ್ತಮಾದಾಯ ಹಸ್ತೇ ಶಂಖಸ್ಯ ತತ್ಕ್ಷಣಾತ್ ।
ಚಕರ್ತ ಕೋಪಸಮಾವಿಷ್ಟೋ ವಾರ್ಯಮಾಣೋಽಪಿ ತಾಪಸೈಃ ॥ ೩೧ ॥
ಛಿನ್ನಹಸ್ತೋಽಪಿ ಶಂಖಸ್ತು ತಪಶ್ಚಕ್ರೇ ಸುದಾರುಣಂ ।
ವಿಶೇಷೇಣ ಸಮಾಸಾದ್ಯ ಸ್ವಾಶ್ರಮೇ ಭೂಯ ಏವ ತು ॥ ೩೨ ॥
ತತಸ್ತುಷ್ಟೋ ಮಹಾದೇವಸ್ತಸ್ಯ ಕಾಲೇನ ಕೇನಚಿತ್ ।
ಪ್ರೋವಾಚ ದರ್ಶನಂ ದತ್ವಾ ತಂ ಚ ಶಂಖಮುನೀಶ್ವರಂ ॥ ೩೩ ॥
ಮಹೇಶ್ವರ ಉವಾಚ :—
ಭೋ ಭೋ ಮುನೇ ಮಹಾಸತ್ವ ದುಷ್ಕರಂ ಕೃತವಾನಸಿ ।
ವರಂ ಗೃಹಾಣ ಮತ್ತಸ್ತ್ವಂ ಮನಸಾ ಸಮಭೀಪ್ಸಿತಂ ॥ ೩೪ ॥
ಶಂಖ ಉವಾಚ :—
ಯದಿ ತುಷ್ಟೋಽಸಿ ಮೇ ದೇವ ವರಂ ಚೇದ್ಯಚ್ಛಸಿ ಪ್ರಭೋ ।
ಸ್ಯಾತಾಂ ಮೇ ತಾದೃಶೌ ಹಸ್ತೌ ಭೂಯೋಽಪಿ ಸುರಸತ್ತಮ ॥ ೩೫ ॥
ತಥೇದಂ ಮಮ ನಾಮಾಂಕಂ ತೀರ್ಥಂ ಸ್ಯಾತ್ಸುರಸತ್ತಮ ।
ವಿಖ್ಯಾತಂ ಸರ್ವಲೋಕೇಷು ಸರ್ವಪಾಪಹರಂ ನೃಣಾಂ ॥ ೩೬ ॥
ಹೀನಾಂಗೋ ವಾಽಧಿಕಾಂಗೋ ವಾ ವ್ಯಾಧಿನಾ ಗ್ರಸ್ತ ಏವ ಚ ।
ಅತ್ರ ಸ್ನಾನಂ ಕರೋತ್ಯಾಶು ಸಭೂಯಃ ಸ್ಯಾತ್ಪುನರ್ನವಃ ॥ ೩೭ ॥

---

೩೧. ಆ ತರುವಾಯ ಕೋಪಕ್ಕೆ ತುತ್ತಾಗಿದ್ದ ಆ ಲಿಖಿತನು ಒಡನೆಯೇ ಶಂಖನ ಎರಡೂ ಕೈಗಳನ್ನು ಅಲ್ಲಿದ್ದ ತಾಪಸರೆಲ್ಲರೂ ಬೇಡ ಬೇಡವೆಂದು ತಡೆಯುತ್ತಿದ್ದರೂ ಲಕ್ಷಿಸದೆ ಕಡಿದುಹಾಕಿದನು.

೩೨. ಛಿನ್ನಹಸ್ತನಾದ ಶಂಖನು ಇದಾದಮೇಲೆ ತನ್ನ ಆಶ್ರಮಕ್ಕೆ ಹಿಂತಿರುಗಿ ಬಹು ಭಯಂಕರವಾದ ತಪಸ್ಸನ್ನು ಮಾಡಿದನು.

೩೩. ಕೆಲವು ಕಾಲವಾದ ಬಳಿಕ ಮಹಾದೇವನು ಆ ಮುನೀಶ್ವರನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅವನನ್ನು ಕುರಿತು ಹೀಗೆಂದನು.

೩೪. ಮಹೇಶ್ವರನು ಹೇಳುತ್ತಾನೆ:—ಎಲೈ ಮಹಾತ್ಮನೆ, ಅಸಾಧ್ಯವಾದ ತಪಸ್ಸನ್ನೇ ಮಾಡಿದೆ. ಅಭೀಷ್ಟವಾದ ವರವನ್ನು ಬೇಡಿ ತೆಗೆದುಕೊ.

೩೫—೩೭. ಶಂಖನು ಹೇಳುತ್ತಾನೆ:—ಮಹಾದೇವ, ನೀನು ನನ್ನ ತಪಸ್ಸಿನಿಂದ ಸಂತೋಷಗೊಂಡಿರುವೆಯಾದರೆ, ವರವನ್ನು ಅನುಗ್ರಹಿಸುವುದಾದರೆ, ಓ ಸುರಸತ್ತಮ, ನನಗೆ ಮೊದಲಿನಂತೆಯೇ ಕೈಗಳುಂಟಾಗಲಿ. ಅಂತೆಯೆ ಈ ತೀರ್ಥವು ನನ್ನ ಹೆಸರಿನಿಂದ ಶಂಖತೀರ್ಥವೆಂದು ಪ್ರಖ್ಯಾತವಾಗಿ ಸಮಸ್ತ ಲೋಕಗಳಲ್ಲಿಯೂ ಸರ್ವರ ಪಾಪಗಳನ್ನು ಪರಿಹರಿಸುವುದಾಗಲಿ. ಹೀನಾಂಗನಾಗಲಿ ಅಧಿಕಾಂಗನಾಗಲಿ ವ್ಯಾಧಿಗ್ರಸ್ತನೇ ಆಗಲಿ ಯಾವ ಮಾನವನಾದರೂ ಈ ತೀರ್ಥದಲ್ಲಿ ಸ್ನಾನವನ್ನಾಚರಿಸಿದ್ದಾದರೆ ಅವನು ಪುನರ್ನವನಾಗಲಿ.

ಭಗವಾನುವಾಚ :—
ಏತತ್ತೀರ್ಥಂತು ವಿಖ್ಯಾತಂ ತವ ನಾಮ್ನಾ ಭವಿಷ್ಯತಿ ।
ಅದ್ಯ ಪ್ರಭೃತಿ ವಿಪ್ರೇಂದ್ರ ದೇಹಿನಾಂ ಪಾಪನಾಶನಂ ॥ ೩೮ ॥
ಹೀನಾಂಗೋ ವಾಽಧಿಕಾಂಗೋಽವಾ ಯೋಽತ್ರಸ್ನಾನಂ ಕರಿಷ್ಯತಿ ।
ಚೈತ್ರೇ ಶುಕ್ಲೇ ನಿರಾಹಾರಶ್ಚಿತ್ರಾಸಂಸ್ಥೇ ನಿಶಾಕರೇ ।
ಸುವರ್ಣಾಂಗಃ ಸ ತೇಜಸ್ವೀ ಭವಿಷ್ಯತಿ ನ ಸಂಶಯಃ ॥ ೩೯ ॥
ಸಕಾಮೋ ಯದಿ ವಿಪ್ರೇಂದ್ರ ಧ್ಯಾಯಮಾನಃ ಸುರೂಪತಾಂ ।
ನಿಷ್ಕಾಮೋ ವಾ ಪರಂ ಸ್ಥಾನಂ ಗಮಿಷ್ಯತಿ ಶಿವಾತ್ಮಕಂ ॥ ೪೦ ॥
ಅತ್ರ ಶ್ರಾದ್ಧೇ ಕೃತೇ ಬ್ರಹ್ಮಂಶ್ಚತುರ್ದಶ್ಯಾಂ ನಿಶಾಕರೇ ।
ಚಿತ್ರಾಸ್ಥಿತೇ ಪ್ರಯಾಸ್ಯಂತಿ ಪಿತರಸ್ತೃಪ್ತಿಮುತ್ತಮಾಂ ॥ ೪೧ ॥
ಅದ್ಯೈವ ವಿಪ್ರಶಾರ್ದೂಲ ಚೈತ್ರಶುಕ್ಲಾಂತ ಉತ್ತಮಃ ।
ಅಪರಾಹ್ಣೇ ನಿಶಾನಾಥಶ್ಚಿತ್ರಾಯೋಗಂ ಪ್ರಯಾಸ್ಯತಿ ॥ ೪೨ ॥
ತತ್ರೋಽಪವಾಸಯುಕ್ತಸ್ಯ ಸಮ್ಯಕ್ ಸ್ನಾತಸ್ಯ ತತ್ಕ್ಷಣಾತ್ ।
ಸ್ಯಾತಾಂ ಹಸ್ತೌ ಸುರೂಪಾಢ್ಯೌ ಯಥಾಪೂರ್ವಂ ತಥಾಹಿತೌ ॥ ೪೩ ॥

---

೩೮–೩೯. ಭಗವಂತನು ಹೇಳುತ್ತಾನೆ:—"ಎಲೈ ವಿಪ್ರೇಂದ್ರನೆ, ಇಂದು ಮೊದಲುಗೊಂಡು ಈ ತೀರ್ಥವು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಿ ಸಮಸ್ತರಿಗೂ ಪಾಪನಾಶಕವಾದ ತೀರ್ಥವಾಗುವುದು. ಚೈತ್ರ ಶುಕ್ಲಪಕ್ಷದಲ್ಲಿ ಚಂದ್ರನು ಚಿತ್ರಾನಕ್ಷತ್ರದಲ್ಲಿರಲು ಇಲ್ಲಿ ಹೀನಾಂಗರೂ ಅಧಿಕಾಂಗರೂ ಆದ ಯಾವ ಮಾನವರು ಸ್ನಾನಮಾಡುತ್ತಾರೆಯೋ ಅವರು ಸ್ವರ್ಣಶರೀರಗಳೂ ಮಹಾತೇಜಸ್ವಿಗಳೂ ಆಗುವರೆಂಬುದರಲ್ಲಿ ಸಂದೇಹವಿಲ್ಲ.

೪೦. ಎಲೈ ವಿಪ್ರನೆ, ಈ ತೀರ್ಥದಲ್ಲಿ ಸೌಂದರ್ಯವನ್ನಪೇಕ್ಷಿಸಿ ಸ್ನಾನ ಮಾಡಿದವನು ಸೌಂದರ್ಯವನ್ನೇ ಪಡೆಯುತ್ತಾನೆ. ಯಾವ ಕಾಮನೆಯೂ ಇಲ್ಲದೆ ಕೇವಲ ಪಾರಮಾರ್ಥಿಕವಾಗಿ ಸ್ನಾನವನ್ನೆಸಗಿದವನು ಶ್ರೇಷ್ಠವಾದ ಕೈಲಾಸವನ್ನು ಸೇರುತ್ತಾನೆ.

೪೧. ಅದೇ ಚೈತ್ರ ಶುಕ್ಲ ಚತುರ್ದಶಿಯಲ್ಲಿ ಈ ತೀರ್ಥದಲ್ಲಿ ಪಿತೃಶ್ರಾದ್ಧವನ್ನು ಮಾಡಿದುದಾದರೆ ಪಿತೃಗಳೆಲ್ಲರೂ ಪರಮತೃಪ್ತರಾಗುತ್ತಾರೆ.

೪೨–೪೩. ಎಲೈ ವಿಪ್ರಶಾರ್ದೂಲನೆ, ಇಂದೇ ಚೈತ್ರ ಶುಕ್ಲ ಪೂರ್ಣಿಮೆಯು. ಇಂದಿನ ಅಪರಾಹ್ಣದಲ್ಲಿಯೆ ನಿಶಾನಾಥನು ಚಿತ್ರಾನಕ್ಷತ್ರಯೋಗವನ್ನು ಪಡೆಯುತ್ತಾನೆ. ಆದುದರಿಂದ ನೀನು ಈ ತೀರ್ಥದಲ್ಲಿ ಉಪವಾಸ ವ್ರತವನ್ನು ಮಾಡಿ ವಿಧಿಯನ್ನನುಸರಿಸಿ ಸ್ನಾನವನ್ನು ಮಾಡಿದೊಡನೆಯೇ ನಿನಗೆ ಹಿಂದಿನಂತೆಯೇ ಸುರೂಪಾಢ್ಯಗಳಾದ ಈ ಕೈಗಳು ಬರುತ್ತವೆ."

ಏವಮುಕ್ತ್ವಾ ಸ ಭಗವಾಂಸ್ತತ್ರೈವಾಽದರ್ಶನಂ ಗತಃ ।
ಶಂಖೋಽಪಿ ಕುತಪೇ ಕಾಲೇ ತತ್ರ ಸ್ನಾನಮಥಾಽಕರೋತ್ ॥ ೪೪ ॥
ತತಶ್ಚ ತತ್ಕ್ಷಣಾಜ್ಜಾತೌ ಹಸ್ತೌ ತಸ್ಯ ಯಥಾ ಪುರಾ ।
ರಕ್ತೋತ್ಪಲನಿಭೌ ಕಾಂತೌ ಮತ್ಸ್ಯಚಿಹ್ನೇನ ಚಾಂಕಿತೌ ॥ ೪೫ ॥

ಬ್ರಾಹ್ಮಣಾ ಊಚುಃ:—

ಏವಂ ತದ್ಧರಣೀಪೃಷ್ಠೇ ತೀರ್ಥಂ ಜಾತಂ ನೃಪೋತ್ತಮ ।
ಪ್ರಭಾವಾದ್ದೇವದೇವಸ್ಯ ಚಾಂದ್ರಾಂ ಕಸ್ಯ ಶುಭಾವಹಂ ॥ ೪೬ ॥
ತಸ್ಮಾತ್ತ್ವಮಪಿ ರಾಜೇಂದ್ರ ತತ್ರ ಸ್ನಾನಂ ಸಮಾಚರ ।
ಚೈತ್ರೇ ಶುಕ್ಲಚತುರ್ದಶ್ಯಾಂ ಚಿತ್ರಾಸಂಸ್ಥೇ ನಿಶಾಕರೇ ॥ ೪೭ ॥
ಭವಿಷ್ಯಸಿ ನ ಸಂದೇಹಃ ಸರ್ವರೋಗವಿವರ್ಜಿತಃ ।
ವಯಂ ತೇ ದರ್ಶಯಿಷ್ಯಾಮಃ ಪ್ರಾಪ್ತೇ ಕಾಲೇ ಯಥೋದಿತೇ ॥ ೪೮ ॥

ಸೂತ ಉವಾಚ:—

ತತಃ ಕತಿಪಯಾಽಹೇನ ಚೈತ್ರಕೃಷ್ಣಾದಿರಾಗತಃ ।
ಚಿತ್ರಾಸಂಸ್ಥೇ ನಿಶಾನಾಥೇ ಸಂಪ್ರಾಪ್ತಾ ಚ ಚತುರ್ದಶೀ ॥ ೪೯ ॥

---

೪೪. ಎಲೈ ವಿಪ್ರರೆ, ಭಗವಾನ್ ಮಹೇಶ್ವರನು ಈ ರೀತಿ ಶಂಖನಿಗೆ ಹೇಳಿ ಅಲ್ಲೇ ಅಂತರ್ಧಾನವನ್ನೈದಿನು. ತರುವಾಯ ಆ ಮುನಿಯು ಅಂದಿನ ಕುತುಪ ಕಾಲದಲ್ಲಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದನು.

೪೫. ಒಡನೆಯೇ ಅವನಿಗೆ ಮೊದಲಿನಂತೆಯೇ ಕೆಂದಾವರೆಯ ಕಾಂತಿಗಳನ್ನೊಳಗೊಂಡು ಮತ್ಸ್ಯಚಿಹ್ನೆಯಿಂದ ಕಂಗೊಳಿಸುವ ಎರಡೂ ಕೈಗಳು ಬಂದುವು.

೪೬. ಬ್ರಾಹ್ಮಣರು ಹೇಳುತ್ತಾರೆ:—ಎಲೈ ದೊರೆಯೆ, ಈ ಪ್ರಕಾರವಾಗಿ ಶಂಖತೀರ್ಥವು ಈ ಭೂಮಂಡಲದಲ್ಲಿ ಶಶಿಶೇಖರನಾದ ಪರಮೇಶ್ವರನ ಪ್ರಭಾವದಿಂದ ಉಂಟಾಯಿತು.

೪೭—೪೮. ಆದುದರಿಂದ ಎಲೈ ರಾಜೇಂದ್ರನೆ, ನೀನು ಚೈತ್ರ ಶುಕ್ಲ ಚತುರ್ದಶಿಯಂದು ಚಂದ್ರನು ಚಿತ್ರಾಯೋಗದಲ್ಲಿರುವಾಗ ಆ ತೀರ್ಥದಲ್ಲಿ ಸ್ನಾನವನ್ನು ಮಾಡು. ನೀನು ನಿಸ್ಸಂದೇಹವಾಗಿಯೂ ಸರ್ವರೋಗವಿವರ್ಜಿತನಾಗುತ್ತೀಯೆ. ಆ ಪುಣ್ಯದಿನವು ಬಂದಂದು ನಾವು ನಿನಗೆ ತೋರಿಸುತ್ತೇವೆ.

೪೯. ಸೂತನು ಹೇಳುತ್ತಾನೆ:—ತರುವಾಯ ಕೆಲವು ದಿನಗಳಲ್ಲಿಯೇ, ಚೈತ್ರ ಕೃಷ್ಣ ಪ್ರಥಮಾ ತಿಥಿಯು ಬಂದಿತು. ನಿಶಾಕರನು ಚಿತ್ರಾನಕ್ಷತ್ರದಲ್ಲಿರಲು ಚತುರ್ದಶಿ ತಿಥಿಯು ಬಂದಿತು.

ತತಸ್ತೇ ಬ್ರಾಹ್ಮಣಾ ಭೂಪಂ ಸಮಾದಾಯ ಚ ತತ್ಕ್ಷಣಾತ್ ।
ಶಂಖತೀರ್ಥಂ ಸಮುದ್ದಿಶ್ಯ ಗತಾಸ್ತಸ್ಯ ಹಿತೈಷಿಣಃ ॥ ೫೦ ॥
ತತಃ ಸ ಮನಸಿ ಧ್ಯಾತ್ವಾ ಕುಷ್ಠವ್ಯಾಧಿಪರಿಕ್ಷಯಂ ।
ಸ್ನಾನಂ ಚಕ್ರೇ ಯಥಾನ್ಯಾಯಂ ಶ್ರದ್ಧಯಾ ಪರಯಾ ಯುತಃ ॥ ೫೧ ॥
ತತಃ ಕುಷ್ಠವಿನಿರ್ಮುಕ್ತೋ ದ್ವಾದಶಾರ್ಕಸಮಪ್ರಭಃ ।
ನಿಷ್ಕ್ರಾಂತಃ ಸಲಿಲಾತ್ತಸ್ಮಾದ್ಧರ್ಷೇಣ ಮಹತಾನ್ವಿತಃ ॥ ೫೨ ॥
ತತಃ ಪ್ರಣಮ್ಯ ತಾನ್ ಸರ್ವಾನ್ಬ್ರಾಹ್ಮಣಾನ್ವೇದಪಾರಗಾನ್ ।
ಕೃತಾಂಜಲಿಪುಟೋ ಭೂತ್ವಾ ವಾಕ್ಯಮೇತದುವಾಚ ಹ ॥ ೫೩ ॥
ಪ್ರಸಾದೇನಹಿ ಯುಷ್ಮಾಕಂ ಮುಕ್ತೋಽಹಂ ಬ್ರಾಹ್ಮಣೋತ್ತಮಾಃ ।
ಕುಷ್ಠವ್ಯಾಧೇರ್ಮಹಾಕಾಲಂ ಗರ್ಹಿತೋಽಸ್ಮ್ಯೇವ ದೇಹಿನಾಂ ॥ ೫೪ ॥
ತಸ್ಮಾನ್ನಾಽಹಂ ಕರಿಷ್ಯಾಮಿ ರಾಜ್ಯಂ ಬ್ರಾಹ್ಮಣಸತ್ತಮಾಃ ।
ತೀರ್ಥೇಽತ್ರೈವಾಽಧುನಾ ನಿತ್ಯಂ ಚರಿಷ್ಯಾಮಿ ಮಹತ್ತಪಃ ॥ ೫೫ ॥
ಏತದ್ರಾಜ್ಯಂ ಚ ದೇಶಂ ಚ ಹಸ್ತ್ಯಶ್ವಾದಿ ತಥಾಪರಂ ।
ಯತ್ಕಿಂಚಿದ್ವಿದ್ಯತೇ ಮಹ್ಯಂ ತದ್ಗೃಹ್ಣಂತು ದ್ವಿಜೋತ್ತಮಾಃ ॥ ೫೬ ॥

---

೫೦. ಆಗ ಆ ಬ್ರಾಹ್ಮಣರೆಲ್ಲರೂ ಕೂಡಲೆ ಆ ಚಮತ್ಕಾರಭೂಪನನ್ನು ಕರೆದುಕೊಂಡು ಅವನಿಗೆ ಹಿತವನ್ನುಂಟುಮಾಡುವವರಾಗಿ ಶಂಖತೀರ್ಥಕ್ಕೆ ಬಂದರು.

೫೧. ಆಗ ದೊರೆಯು ತನಗೆ ಕುಷ್ಠರೋಗ ನಿವಾರಣೆಯಾಗಲೆಂದು ಮನಸ್ಸಿನಲ್ಲಿಯೇ ಧ್ಯಾನಿಸಿ ಶಾಸ್ತ್ರವಿಧಿಯಂತೆ ಪರಮಶ್ರದ್ಧೆಯಿಂದ ಆ ತೀರ್ಥದಲ್ಲಿ ಸ್ನಾನಮಾಡಿದನು.

೫೨. ಒಡನೆಯೇ ಅವನು ಕುಷ್ಠರೋಗದಿಂದ ವಿಮುಕ್ತನಾಗಿ ದ್ವಾದಶಾರ್ಕರಿಗೆ ಸದೃಶವಾದ ತೇಜಸ್ಸುಳ್ಳವನಾಗಿ ಆ ತೀರ್ಥದಿಂದ ಮಹಾ ಸಂತೋಷಸಮನ್ವಿತನಾಗಿ ಹೊರಕ್ಕೆ ಬಂದನು.

೫೩. ತರುವಾಯ ಅವನು ವೇದಪಾರಂಗತರಾದ ಸಕಲ ಬ್ರಾಹ್ಮಣರನ್ನೂ ಕುರಿತು ಬದ್ಧಾಂಜಲಿಪುಟನಾಗಿ ಈ ಮಾತನ್ನು ಹೇಳಿದನು.

೫೪. "ಎಲೈ ಬ್ರಾಹ್ಮಣೋತ್ತಮರೆ, ನಾನು ಬಹಳಕಾಲ ಕುಷ್ಠಪೀಡಿತನಾಗಿ ಎಲ್ಲ ಪ್ರಾಣಿಗಳಿಗೂ ತಿರಸ್ಕಾರಯೋಗ್ಯನಾಗಿದ್ದೆನು. ಈಗ ನಿಮ್ಮ ಅನುಗ್ರಹದಿಂದ ನನಗೆ ಈ ರೋಗ ನಿವಾರಣೆಯಾಯಿತು.

೫೫. ಇನ್ನು ಮೇಲೆ ನಾನು ರಾಜ್ಯಭಾರವನ್ನು ಮಾಡುವುದಿಲ್ಲ. ಈಗಿನಿಂದ ಈ ತೀರ್ಥದಲ್ಲಿಯೇ ಇದ್ದುಕೊಂಡು ಮಹತ್ತರವಾದ ತಪಸ್ಸನ್ನು ಮಾಡುತ್ತೇನೆ.

೫೬–೫೭. ಈ ರಾಜ್ಯ, ಈ ದೇಶ, ಹಸ್ತ್ಯಶ್ವಾದಿ ಇತರ ಸಮಸ್ತ ಸಂಪತ್ತುಗಳು—ಈ ಎಲ್ಲವನ್ನೂ ಬ್ರಾಹ್ಮಣೋತ್ತಮರಾದ ನೀವು ನನ್ನಲ್ಲಿ ಕೃಪೆಯಿಟ್ಟು ನನ್ನ

ಮನ್ಯೈವಾಽನುಗ್ರಹಾರ್ಥಾಯ ದಯಾಂ ಕೃತ್ವಾ ಬೃಹತ್ತರಾಂ ।
ದೀನಸ್ಯ ಭಕ್ತಿಯುಕ್ತಸ್ಯ ವಿರಕ್ತಸ್ಯ ವಿಶೇಷತಃ ॥ ೫೭ ॥

ಬ್ರಾಹ್ಮಣಾ ಊಚುಃ:—

ನ ವಯಂ ರಕ್ಷಿತುಂ ಶಕ್ತಾ ರಾಜ್ಯಂ ಪಾರ್ಥಿವಸತ್ತಮ ।
ತತ್ಕಿಂ ತೇನ ಗೃಹೀತೇನ ಯೇನ ಸ್ಯಾದ್ರಾಜ್ಯವಿಪ್ಲವಃ ॥ ೫೮ ॥
ಜಾಮದಗ್ನ್ಯೇನ ರಾಮೇಣ ಪುರಾ ದತ್ತಾ ವಸುಂಧರಾ ।
ತ್ರಿಃಸಪ್ತ ಕ್ಷತ್ರಿಯೈರ್ಹೀನಾಂ ಕೃತ್ವಾಽಸ್ಮಾಕಂ ನೃಪೋತ್ತಮ ॥ ೫೯ ॥
ಸಾ ಭೂಯೋಽಪಿ ಹೃತಾಽಸ್ಮಾಕಂ ಕ್ಷತ್ರಿಯೈರ್ಬಲವತ್ತರೈಃ ।
ತಿರಸ್ಕೃತ್ಯ ದ್ವಿಜಾನ್ ಸರ್ವಾಂಲ್ಲೀಲಯಾಽಪಿ ಮುಹುರ್ಮುಹುಃ ॥ ೬೦ ॥

ರಾಜೋವಾಚ:—

ಅಹಂ ವಃ ಪ್ರಕರಿಷ್ಯಾಮಿ ರಕ್ಷಾಂ ಬ್ರಾಹ್ಮಣಸತ್ತಮಾಃ ।
ತಪಃಸ್ಥಿತೋಽಪಿ ಕಾರ್ಯೇಽತ್ರ ನಭೀಃ ಕಾರ್ಯಾ ಕಥಂಚನ ॥ ೬೧ ॥

ಬ್ರಾಹ್ಮಣಾ ಊಚುಃ:—

ಅವಶ್ಯಂ ಯದಿ ತೇ ಶ್ರದ್ಧಾ ವಿದ್ಯತೇ ದಾನಸಂಭವಾ ।
ಕ್ಷೇತ್ರೇಽತ್ರಾಽಪಿ ಮಹಾಪುಣ್ಯೇ ಕೃತ್ವಾ ದೇಹಿ ಪುರೋತ್ತಮಂ ॥ ೬೨ ॥

---

ಅನುಗ್ರಹಾರ್ಥವಾಗಿಯೇ ಸ್ವೀಕರಿಸಬೇಕು. ದೀನನಾಗಿ, ಭಕ್ತಿಯುಕ್ತನಾಗಿ, ಅದರಲ್ಲಿಯೂ ವಿಶೇಷವಾಗಿ ವೈರಾಗ್ಯವನ್ನು ಹೊಂದಿರುವ ನಿಮ್ಮನ್ನು ಪ್ರಾರ್ಥಿಸುತ್ತೇನೆ.

೫೮. ಬ್ರಾಹ್ಮಣರು ಹೇಳುತ್ತಾರೆ:—ಅಯ್ಯಾ ರಾಜಶ್ರೇಷ್ಠನೆ, ನಾವು ರಾಜ್ಯವನ್ನಾಳಲು ಸಮರ್ಥರಲ್ಲ. ನಾವು ಅದನ್ನು ದಾನವಾಗಿ ತೆಗೆದುಕೊಂಡರೆ ರಾಜ್ಯವಿಪ್ಲವವೇ ಆಗುತ್ತದೆ. ಆದುದರಿಂದ ನಮಗೆ ರಾಜ್ಯಪರಿಗ್ರಹವು ಬೇಡ.

೫೯. ಅಯ್ಯಾ ನೃಪೋತ್ತಮನೆ, ಪೂರ್ವದಲ್ಲಿ ಜಮದಗ್ನಿಯ ಮಗನಾದ ಪರಶುರಾಮನು ಇಪ್ಪತ್ತೊಂದಾವೃತ್ತಿ ಕ್ಷತ್ರಿಯರನ್ನೆಲ್ಲ ಧ್ವಂಸಮಾಡಿ, ಬ್ರಾಹ್ಮಣರಿಗೆ ಅಖಂಡವಾದ ಈ ಭೂಮಂಡಲವನ್ನೇ ದಾನಮಾಡಿದನು.

೬೦. ಮುಂದೇನಾಯಿತು? ಬಲಿಷ್ಠರಾದ ಕ್ಷತ್ರಿಯರು ಬ್ರಾಹ್ಮಣರೆಲ್ಲರನ್ನೂ ತಿರಸ್ಕರಿಸಿ ಆಗಿಂದಾಗ್ಗೆ ಬಹು ಸುಲಭವಾಗಿಯೇ ಸ್ವಲ್ಪ ಸ್ವಲ್ಪವಾಗಿ ಅದನ್ನು ಕಸಿದುಕೊಂಡರು. ಆದುದರಿಂದ ನಮಗೆ ರಾಜ್ಯವು ಬೇಡ.

೬೧. ರಾಜನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ, ನಾನು ತಪಸ್ಸಿನಲ್ಲಿದ್ದರೂ ನಿಮ್ಮನ್ನು ಸಂರಕ್ಷಿಸುತ್ತೇನೆ. ನೀವು ಭಯಪಡಬೇಕಾದುದಿಲ್ಲ.

೬೨–೬೩. ಬ್ರಾಹ್ಮಣರು ಹೇಳುತ್ತಾರೆ:—ಅಯ್ಯಾ ಮಹಾರಾಜ, ದಾನದಲ್ಲಿಯೇ ನಿನಗೆ ಅನಿರ್ವಾಹವಾದ ಶ್ರದ್ಧೆಯಿರುವುದಾದರೆ ಹೀಗೆ ಮಾಡು. ಮಹಾ

ಸರ್ವೇಷಾಂ ಬ್ರಾಹ್ಮಣೇಂದ್ರಾಣಾಂ ಪ್ರಾಕಾರಪರಿಖಾನ್ವಿತಂ ।
ಸುಖೇನ ಯೇನ ತಿಷ್ಠಾಮಃ ಸ್ನಾತ್ವಾ ತೀರ್ಥೈಃ ಪೃಥಗ್ವಿಧೈಃ ।
ಗೃಹಸ್ಥಧರ್ಮಿಣಃ ಸರ್ವೇ ಸ್ವಾಧ್ಯಾಯನಿರತಾಃ ಸದಾ ॥ ೬೩ ॥

ಸೂತ ಉವಾಚ :—

ತಚ್ಛ್ರುತ್ವಾ ಸ ಮಹೀಪಾಲಸ್ತಥೇತ್ಯುಕ್ತ್ವಾ ಪ್ರಹರ್ಷಿತಃ ।
ನಗರಂ ಕಲ್ಪಯಾಮಾಸ ಸ್ಥಾನೇ ತತ್ರ ಮಹತ್ತಮಂ ॥ ೬೪ ॥
ಪ್ರಾಕಾರೇಣ ಸುತುಂಗೇನ ಪರಿಖಾದ್ಯೇನ ಸರ್ವತಃ ।
ಆಯಾಮವ್ಯಾಸತಶ್ಚೈವ ಕ್ರೋಶಮಾತ್ರಂ ಮನೋಹರಂ ॥ ೬೫ ॥
ತ್ರಿಕಚತ್ವರ ಸಂಶುದ್ಧಂ ಶೋಭಿತಂ ಸರ್ವತೋ ಧ್ವಜೈಃ ।
ಪ್ರಾಸಾದೈಃ ಪ್ರೋನ್ನತೈಃ ಕಾಂತೈಃ ಸಮಂತಾತ್ಸುಧಯಾ ವೃತೈಃ ॥ ೬೬ ॥
ಮತ್ತವಾರಣಕೋಪೇತೈರ್ಬಹುಭಿರ್ಭೂಭಿರೇವ ಚ ।
ಸಂಪೂರ್ಣಂ ಸತ್ಯಕಾಮಾದ್ಯೈಃ ಸಾಧುಲೋಕಪ್ರಶಂಸಿತೈಃ ॥ ೬೭ ॥
ತತೋ ಗೃಹಾಣಿ ಸರ್ವಾಣಿ ಪೂರಯಿತ್ವಾ ಸ ಭೂಮಿಪಃ ।
ಸುವರ್ಣಮಣಿಮುಕ್ತಾದಿಪದಾರ್ಥೈರಪರೈರಪಿ ॥ ೬೮ ॥

---

ಪುಣ್ಯಕರವಾದ ಈ ಕ್ಷೇತ್ರದಲ್ಲಿಯೇ ಉತ್ತಮವಾದ ಒಂದು ಪಟ್ಟಣವನ್ನು ಕಟ್ಟಿ ನಮ್ಮೆಲ್ಲರಿಗೂ ದಾನಮಾಡು. ಆ ಪಟ್ಟಣಕ್ಕೆ ಸುತ್ತಲೂ ಕೋಟೆ ಕಂದಕಗಳಿರಲಿ. ಬ್ರಾಹ್ಮಣರಾದ ನಾವು ಈ ಕ್ಷೇತ್ರದ ಬೇರೆ ಬೇರೆ ತೀರ್ಥಗಳಲ್ಲಿ ಸುಖವಾಗಿ ಸ್ನಾನಮಾಡಿಕೊಂಡು ಗೃಹಸ್ಥಧರ್ಮದಲ್ಲಿದ್ದು ಸತತವೂ ವೇದಾಧ್ಯಯನ ಸಂಪನ್ನರಾಗಿ ವಾಸಮಾಡುತ್ತೇವೆ.

೬೪. ಸೂತನು ಹೇಳುತ್ತಾನೆ:—ಬ್ರಾಹ್ಮಣರ ಈ ಮಾತನ್ನು ಕೇಳಿ ಚಮತ್ಕಾರ ಮಹೀಪಾಲನು ಪರಮಹರ್ಷಿತನಾಗಿ ಹಾಗೆಯೇ ಆಗಲೆಂದು ನುಡಿದು ಆ ಪ್ರದೇಶದಲ್ಲಿಯೇ ದೊಡ್ಡದೊಂದು ಪಟ್ಟಣವನ್ನು ನಿರ್ಮಿಸಿದನು.

೬೫–೬೭. ಹೀಗೆ ಎತ್ತರವಾದ ಪ್ರಕಾರದಿಂದಲೂ ಕಂದಕದಿಂದಲೂ ಸುತ್ತುವರಿದು ಉದ್ದಳತೆಯೂ ಅಡ್ಡಳತೆಯೂ ಒಂದು ಕ್ರೋಶ ಮಾತ್ರವಿರುವುದಾಗಿ ಚಚ್ಚೌಕವಾದ ಅಂಗಳಗಳಿಂದ ಶುದ್ಧವಾಗಿ ಎಲ್ಲೆಡೆಗಳಲ್ಲಿಯೂ ಧ್ವಜಗಳಿಂದ ಶೋಭಿಸಿ, ಉನ್ನತಗಳೂ ಮನೋಹರಗಳೂ ಆದ ಉಪ್ಪರಿಗೆಗಳಿಂದ ಕೂಡಿ, ಎಲ್ಲೆಡೆಗಳಲ್ಲಿಯೂ ಸುಣ್ಣ ಬಣ್ಣಗಳಿಂದಲೂ, ಸಾರಣೆಕಾರಣೆಗಳಿಂದಲೂ ಸೊಗಸುಗೊಂಡು, ಅನೇಕ ಮದದಾನೆಗಳಿಂದ ತುಂಬಿ, ಸತ್ಯಕಾಮನೇ ಮೊದಲಾದ ಸಾಧುಸಜ್ಜನರಿಂದ ಪ್ರಶಂಸಿತವಾಗಿ ಆ ಪಟ್ಟಣವು ಬಹುವಾಗಿ ಒಪ್ಪಿದ್ದಿತು.

೬೮–೭೦. ತರುವಾಯ, ಆ ಚಮತ್ಕಾರರಾಜನು ಆ ಪಟ್ಟಣದ ಮನೆಗಳನ್ನೆಲ್ಲ ಸುವರ್ಣಮಣಿ ಮುಕ್ತಾದಿ ಪದಾರ್ಥಗಳಿಂದಲೂ ನಿತ್ಯ ಸಂಸಾರಕೆ

ಬ್ರಾಹ್ಮಣೇಭ್ಯಃ ಕುಲೀನೇಭ್ಯೋ ವೇದವಿದ್ಭ್ಯೋ ವಿಶೇಷತಃ ।
ಶ್ರೋತ್ರಿಯೇಭ್ಯಶ್ಚ ದಾಂತೇಭ್ಯಃ ಸತು ಶ್ರದ್ಧಾಸಮನ್ವಿತಃ ॥ ೬೯ ॥
ಯಥಾ ಜ್ಯೇಷ್ಠಂ ಯಥಾ ಶ್ರೇಷ್ಠಂ ಪ್ರಕ್ಷಾಲ್ಯ ಚರಣೌ ತತಃ ।
ಶಾಸ್ತ್ರೋಕ್ತೇನ ವಿಧಾನೇನ ಪ್ರದದೌ ದ್ವಿಜಸತ್ತಮಾಃ ॥ ೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಂಖತೀರ್ಥೋತ್ಪತ್ತಿಃ–ಚಮತ್ಕಾರಭೂಪತಿಕೃತ ವಿಪ್ರ ನಗರ ನಿರ್ಮಾಣ
ವರ್ಣನಂ" ನಾಮೈಕಾದಶೋಽಧ್ಯಾಯಃ

---

ಬೇಕಾದ ಇತರ ಸಾಮಗ್ರಿಗಳಿಂದಲೂ ತುಂಬಿ, ಒಳ್ಳೆಯ ವಂಶಗಳಲ್ಲಿ ಜನಿಸಿ ವೇದವಿತ್ತುಗಳೂ ಶ್ರೋತ್ರಿಯರೂ ಇಂದ್ರಿಯ ನಿಗ್ರಹವುಳ್ಳವರೂ ಆದ ಬ್ರಾಹ್ಮಣರನ್ನು ಜ್ಯೇಷ್ಠಾನುಕ್ರಮದಿಂದಲೂ ಶ್ರೇಷ್ಠಾನುಕ್ರಮದಿಂದಲೂ ಶ್ರದ್ಧಾಸಮನ್ವಿತನಾಗಿ ಪಾದಪ್ರಕ್ಷಾಲನೆ ಮೊದಲುಗೊಂಡು ಎಲ್ಲ ಸತ್ಕಾರವನ್ನೂ ಶಾಸ್ತ್ರೋಕ್ತರೀತಿಯಿಂದ ನಿರ್ವಹಿಸಿ ಶಾಸ್ತ್ರವಿಧಿಯಿಂದಲೇ ಅವರಿಗೆ ದಾನಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಹಾತ್ಮ್ಯದಲ್ಲಿ "ಶಂಖತೀರ್ಥಮಾಹಾತ್ಮ್ಯ–ಚಮತ್ಕಾರಭೂಪತಿಕೃತ
ವಿಪ್ರ ನಗರ ನಿರ್ಮಾಣ ವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಚಮತ್ಕಾರಭೂಪೇನ ಪುರಸ್ಥಿತ್ಯರ್ಥಂ ನಿಜಪುತ್ರಾದೀನಾಮುಪದೇಶಕರಣವರ್ಣನಂ

ಸೂತ ಉವಾಚ :—

ಏವಂ ಸ ವಸುಧಾಪಾಲೋ ಬ್ರಾಹ್ಮಣೇಭ್ಯಃ ಸ್ವಶಕ್ತಿತಃ ।
ದದೌತು ನಗರಂ ಕೃತ್ವಾ ಪುರಂದರಪುರೋಪಮಂ ॥ ೧ ॥
ಮುಕ್ತಾಪ್ರವಾಲವೈಡೂರ್ಯರತ್ನಹೇಮವಿಚಿತ್ರಿತೈಃ ।
ಭ್ರಾಜಮಾನಂ ಗೃಹಶ್ರೇಷ್ಠೈರ್ದ್ಯೌರ್ನಕ್ಷತ್ರಗಣೈರಿವ ॥ ೨ ॥
ಪ್ರಾಸಾದೈಃ ಸ್ಫಾಟಿಕೈಶ್ಚೈವ ಕೈಲಾಸ ಶಿಖರೋಪಮೈಃ ।
ಪತಾಕಾಶೋಭಿತೈರ್ದಿವ್ಯೈಃ ಸಮಂತಾತ್ಪರಿವಾರಿತಂ ॥ ೩ ॥
ಕಾಂಚನೈಃ ಸುವಿಚಿತ್ರೈಶ್ಚ ಪ್ರೋನ್ನತೈರಮಲೈಃ ಶುಭೈಃ ।
ತೋರಣಾನಾಂ ಸಹಸ್ರೈಶ್ಚ ಶೋಭಿತಂ ಸುಮನೋಹರಂ ॥ ೪ ॥
ಮಣಿಸೋಪಾನ ಶೋಭಾಭಿರ್ದೀರ್ಘಿಕಾಭಿಃ ಸಮಂತತಃ ।
ಆರಾಮಕೂಪಯಂತ್ರಾದ್ಯೈಃ ಸರ್ವೋಪಕರಣೈರ್ಯುತಂ ।
ನಿವೇದ್ಯ ಬ್ರಾಹ್ಮಣೇಂದ್ರಾಣಾಂ ಕೃತಕೃತ್ಯೋ ಬಭೂವ ಸಃ ॥ ೫ ॥

---

## ಕನ್ನಡದ ಅನುವಾದ

### ಚಮತ್ಕಾರಭೂಪಕೃತ ನಿಜಪುತ್ರಹಿತೋಪದೇಶವರ್ಣನ

೧. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ, ಈ ಪ್ರಕಾರವಾಗಿ ಆ ಚಮತ್ಕಾರ ಮಹಾರಾಜನು ಪುರಂದರ ಪುರೋಪಮವಾದ ಆ ನಗರವನ್ನು ನಿರ್ಮಾಣಮಾಡಿ ಅದನ್ನು ಬ್ರಾಹ್ಮಣರಿಗೆ ಶಕ್ತ್ಯನುಸಾರ ದಾನವನ್ನು ಮಾಡಿದನು.

೨. ಆ ನಗರವಾದರೋ ಮುತ್ತು, ಹವಳ, ವೈಡೂರ್ಯಾದಿ ರತ್ನಗಳ, ಸುವರ್ಣಗಳ ಕೆತ್ತನೆಯನ್ನೊಳಗೊಂಡು ನಕ್ಷತ್ರ ಸಮೂಹಗಳಿಂದ ಬೆಳಗುತ್ತಿರುವ ಆಕಾಶದಂತೆ ಚಿತ್ರವಿಚಿತ್ರವಾದ ಉತ್ತಮ ಭವನಗಳಿಂದ ಕಂಗೊಳಿಸುತ್ತಿದ್ದಿತು.

೩. ಕೈಲಾಸಪರ್ವತದ ಶಿಖರಕ್ಕೆಣೆಯಾದ ಅಮೃತಶಿಲಾಪ್ರಾಸಾದಗಳು ದಿವ್ಯತರವಾದ ಪತಾಕೆಗಳಿಂದೊಪ್ಪಿ ಆ ನಗರದ ಸುತ್ತಲೂ ವಿರಾಜಿಸುತ್ತಿದ್ದುವು.

೪. ಬಹುಮಂಗಳಕರಗಳೂ, ಶುಭ್ರಗಳೂ, ಬಗೆಬಗೆಯ ಚಿತ್ರವಿನ್ಯಾಸವನ್ನೊಳಗೊಂಡವುಗಳೂ ಆದ ಉನ್ನತವಾದ ಸಾವಿರಾರು ಕಾಂಚನ ತೋರಣಗಳಿಂದ ಆ ನಗರವು ಬಹು ಮನೋಹರವಾಗಿ ಶೋಭಿಸುತ್ತಿದ್ದಿತು.

೫. ಸ್ಫಟಿಕಮಣಿಗಳ ಸೋಪಾನಗಳಿಂದೊಪ್ಪಿರುವ ಕೊಳಗಳಿಂದಲೂ, ತೋಟ ತಡಿಕೆಗಳಿಂದಲೂ, ಏತದ ಬಾವಿಗಳಿಂದಲೂ ಎಲ್ಲೆಡೆಗಳಲ್ಲಿಯೂ ಎಲ್ಲ ಉಪಕರಣ ಸಾಮಗ್ರಿಗಳಿಂದಲೂ ಸಂಪೂರ್ಣವಾಗಿದ್ದ ಆ ನಗರವನ್ನು ಚಮತ್ಕಾರ ಭೂಪಾಲನು ಬ್ರಾಹ್ಮಣಶ್ರೇಷ್ಠರಿಗೆ ನಿವೇದಿಸಿ ಕೃತಕೃತ್ಯನಾದನು.

ಶಂಖತೀರ್ಥೇ ಸ್ಥಿತೋ ನಿತ್ಯಂ ಸಮಾಹೂಯ ತತಃ ಸುತಾನ್ ।
ಪುತ್ರಾನ್ಪೌತ್ರಾಂಸ್ತಥಾ ಭೃತ್ಯಾನ್ವಾಕ್ಯಮೇತದುವಾಚ ಹ ॥ ೬ ॥
ಏತತ್ಪುರಂ ಮಯಾ ಕೃತ್ವಾ ಬ್ರಾಹ್ಮಣೇಭ್ಯೋ ನಿವೇದಿತಂ ।
ಭವದ್ಭಿರ್ಮಮ ವಾಕ್ಯೇನ ರಕ್ಷಣೀಯಂ ಪ್ರಯತ್ನತಃ ॥ ೭ ॥
ಯಥಾಸ್ಯುರ್ಬ್ರಾಹ್ಮಣಾಃ ಸರ್ವೇ ಸುಖಿನೋ ಹೃಷ್ಟಮಾನಸಾಃ ।
ಯುಷ್ಮಾಭಿಃ ಪಾಲನಂ ಕಾರ್ಯಂ ತಥಾ ಸರ್ವೈಃ ಸಮಾಹಿತೈಃ ॥ ೮ ॥
ಯಶ್ಚೈತಾನ್ ಭಕ್ತಿಸಂಯುಕ್ತಃ ಪಾಲಯಿಷ್ಯತಿ ಭೂಮಿಪಃ ।
ಅನ್ಯೋಽಪಿ ಪರಮಂ ತೇಜಃ ಸ ಸಂಪ್ರಾಪ್ಸ್ಯತಿ ಭೂತಲೇ ॥ ೯ ॥
ಅಜೇಯಃ ಸರ್ವಶತ್ರೂಣಾಂ ಪ್ರತಾಪೀ ಸ್ಫೀತಿಸಂಯುತಃ ।
ಭವಿಷ್ಯತಿ ನ ಸಂದೇಹೋ ಬ್ರಾಹ್ಮಣಾನಾಂ ಸ ಪಾಲನಾತ್ ॥ ೧೦ ॥
ಪುತ್ರಪೌತ್ರ ಸುಭೃತ್ಯಾಢ್ಯೋ ದೀರ್ಘಾಯುಃ ರೋಗವರ್ಜಿತಃ ।
ಬ್ರಾಹ್ಮಣಾನಾಂ ಪ್ರಸಾದೇನ ಮಮ ವಾಕ್ಯಾದ್ಭವಿಷ್ಯತಿ ॥ ೧೧ ॥

---

೬. ಹೀಗೆ ಆ ಪಟ್ಟಣವನ್ನು ಬ್ರಾಹ್ಮಣರಿಗೆ ದಾನಮಾಡಿದ ತರುವಾಯ ಅವನು ಶಂಖತೀರ್ಥದಲ್ಲಿಯೇ ಯಾವಾಗಲೂ ವಾಸಮಾಡುತ್ತಿದ್ದು ಒಮ್ಮೆ ತನ್ನ ಮಕ್ಕಳು ಮೊಮ್ಮಕ್ಕಳುಗಳನ್ನೂ ಭೃತ್ಯವರ್ಗದವರನ್ನೂ ತನ್ನಲ್ಲಿಗೆ ಕರೆಸಿಕೊಂಡು ಅವರಿಗೆ ಈ ಮಾತನ್ನು ಹೇಳಿದನು.

೭. "ಎಲೈ ಮಕ್ಕಳಿರಾ, ನಾನು ಈ ನಗರವನ್ನು ನಿರ್ಮಿಸಿ ಬ್ರಾಹ್ಮಣರಿಗೆ ನಿವೇದಿಸಿದ್ದೇನೆ. ನನ್ನ ಅಪ್ಪಣೆಯಂತೆ ಇನ್ನು ಮುಂದೆ ನೀವು ಇದನ್ನು ಪ್ರಯತ್ನ ಪೂರ್ವಕವಾಗಿ ರಕ್ಷಿಸಿಕೊಂಡು ಬರಬೇಕು.

೮. ಇಲ್ಲಿರುವ ಬ್ರಾಹ್ಮಣರೆಲ್ಲರೂ ಸಂತೋಷಚಿತ್ತರಾಗಿ ಸುಖವಾಗಿ ಜೀವನ ವನ್ನು ನಡೆಸುವಂತೆ ನೀವೆಲ್ಲರೂ ಸಮಾಹಿತಮನಸ್ಕರಾಗಿ ಇವರನ್ನು ಕಾಪಾಡಿ ಕೊಂಡು ಬರಬೇಕು.

೯. ನೀವೇ ಅಲ್ಲದೆ ಬೇರೊಬ್ಬ ದೊರೆಯಾದರೂ ಭಕ್ತಿ ಶ್ರದ್ಧೆಗಳೊಡಗೂಡಿ ಈ ವಿಪ್ರರನ್ನು ಪಾಲಿಸಿದ್ದಾದರೆ ಭೂಮಂಡಲದಲ್ಲಿಯೇ ಉತ್ತಮೋತ್ತಮವಾದ ತೇಜಸ್ಸನ್ನೂ ಯಶಸ್ಸನ್ನೂ ಪಡೆಯುತ್ತಾನೆ.

೧೦–೧೧. ಅಂಥ ಮಹೀಪತಿಯು ಸಮಸ್ತ ಶತ್ರುಗಳಿಗೂ ಅಜೇಯನೆನಿಸಿ, ಪರಾಕ್ರಮಿಯೆನಿಸಿ, ಸರ್ವೈಶ್ವರ್ಯಸಮೃದ್ಧಿಯುಳ್ಳವನಾಗಿ! ಪ್ರಸಿದ್ಧನಾಗುವ ನೆಂಬುದರಲ್ಲಿ ಸಂಶಯವಿರುವುದಿಲ್ಲ. ಬ್ರಾಹ್ಮಣ ಸಂರಕ್ಷಣೆಯನ್ನು ಮಾಡುವುದ ರಿಂದ ಅವರ ಅನುಗ್ರಹದಿಂದಲೂ ಈಗ ನಾನು ಹೇಳುತ್ತಿರುವ ಮಾತಿನಂತೆಯೂ ಆ ಭೂಪತಿಯು ಪುತ್ರಪೌತ್ರಭೃತ್ಯಪರಿವಾರಸಂಪನ್ನನಾಗಿ ಯಾವ ರೋಗರುಜಿನ ಗಳೂ ಇಲ್ಲದೆ ದೀರ್ಘಾಯುವಾಗುತ್ತಾನೆ.

ಯಃ ಪುನರ್ದ್ವೇಷಸಂಯುಕ್ತಃ ಸಂತಾಪಂ ಚೈವ ನೇಷ್ಯತಿ ।
ಏತಾನ್ಬ್ರಾಹ್ಮಣ ಶಾರ್ದೂಲಾನ್ನರಕಂ ಸ ಪ್ರಯಾಸ್ಯತಿ ॥ ೧೨ ॥
ತಥಾ ದುಃಖಾನಿ ಸಂಪ್ರಾಪ್ಯ ದೃಷ್ಟ್ವಾನೈಕಾನ್ ಪರಾಭವಾನ್ ।
ವಿಯೋಗಾನಿಷ್ಟಬಂಧೂನಾಂ ವ್ಯಾಧಿಗ್ರಸ್ತೋ ವಿಗರ್ಹಿತಃ ॥ ೧೩ ॥
ವಂಶೋಚ್ಛೇದಂ ಸಮಾಸಾದ್ಯ ಗಮಿಷ್ಯತಿ ಯಮಾಲಯಂ ।
ತಸ್ಮಾತ್ಸರ್ವಪ್ರಯತ್ನೇನ ರಕ್ಷಣೀಯಮಿದಂ ಪುರಂ ।
ಮಮ ವಾಕ್ಯಾದ್ವಿಶೇಷೇಣ ಹಿತಮಿಚ್ಛದ್ಭಿರಾತ್ಮನಃ ॥ ೧೪ ॥
ಏವಂ ಸ ಭೂಪತಿಃ ಸರ್ವಾಂಸ್ತಾನುಕ್ತ್ವಾ ತಪಸಿಸ್ಥಿತಃ ।
ತೇಽಪಿ ಸರ್ವೇ ತಥಾ ಚಕ್ರುರ್ಯಥಾ ತೇನ ಚ ಶಿಕ್ಷಿತಾಃ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಮತ್ಕಾರಭೂಪೇನ ಪುರಸ್ಥಿತ್ಯರ್ಥಂ ನಿಜಪುತ್ರಾದೀನಾಮುಪದೇಶಕರಣ
ವರ್ಣನಂ"ನಾಮ ದ್ವಾದಶೋಽಧ್ಯಾಯಃ

---

೧೨. ಯಾವನಾದರೂ ದ್ವೇಷಬುದ್ಧಿಯುಳ್ಳವನಾಗಿ ಈ ಬ್ರಾಹ್ಮಣರನ್ನು ದುಃಖಕ್ಕೊಳಗಾಗಿಸಿದುದಾದರೆ ಅವನು ನರಕವನ್ನೇ ಸೇರುತ್ತಾನೆ.

೧೩–೧೪. ಇಷ್ಟೇ ಅಲ್ಲದೆ, ಬದುಕಿರುವಾಗಲೇ ಅನೇಕ ದುಃಖಗಳನ್ನು ಹೊಂದಿ ಹಲವುಬಾರಿ ಪರಾಭವವನ್ನು ಪಡೆದು ಇಷ್ಟಬಂಧುಗಳ ವಿಯೋಗ ವನ್ನು ಹೊಂದಿ ರೋಗಪೀಡಿತನಾಗಿ ಎಲ್ಲರ ನಿಂದೆಗೂ ಪಾತ್ರನಾಗುವುದಲ್ಲದೆ ವಂಶನಾಶವನ್ನೂ ಪಡೆದು ಯಮಾಲಯವನ್ನು ಸೇರುತ್ತಾನೆ. ಆದ್ದುದರಿಂದ ತನಗೆ ಹಿತವನ್ನು ಅಪೇಕ್ಷಿಸುವ ಭೂಮಿಪಾಲನು ಮುಖ್ಯವಾಗಿ ನನ್ನ ಮಾತಿನಂತೆ ಸರ್ವಪ್ರಯತ್ನದಿಂದಲೂ ಈ ಪಟ್ಟಣವನ್ನು ರಕ್ಷಿಸತಕ್ಕದ್ದು.

೧೫. ಎಲೈ ವಿಪ್ರರೆ, ಈ ಪ್ರಕಾರವಾಗಿ ಆ ಚಮತ್ಕಾರನು ಅವರೆಲ್ಲರನ್ನೂ ಕುರಿತು ಅಪ್ಪಣೆಮಾಡಿ ತಪಸ್ಸಿಗೆ ಕುಳಿತನು. ಅವರೂ ಆ ದೊರೆಯು ಹೇಳಿ ದಂತೆಯೇ ಆ ಪಟ್ಟಣದ ಸಂರಕ್ಷಣೆಯನ್ನು ಮಾಡತೊಡಗಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಮತ್ಕಾರಭೂಪಕೃತ ನಿಜಪುತ್ರಹಿತೋಪದೇಶವರ್ಣನ"ವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಅಚಲೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏವಂ ನಿವೇದ್ಯ ಪುತ್ರಾಣಾಂ ಸ ರಾಜ್ಯಂ ಪೃಥಿವೀಪತಿಃ ।
ಪುರಂ ಚ ತದ್ದ್ವಿಜಾತಿಭ್ಯಃ ಪ್ರದಾಯ ಸ್ವಯಮೇವ ಹಿ ॥ ೧ ॥
ತತ ಆರಾಧಯಾಮಾಸ ದೇವದೇವಂ ಮಹೇಶ್ವರಂ ।
ಕೃತ್ವಾ ತದಾಶ್ರಮಂ ತತ್ರ ಶ್ರದ್ಧಯಾ ಪರಯಾ ಯುತಃ ॥ ೨ ॥
ಸ ಬಭೂವ ಫಲಾಹಾರೋ ಯಾವದ್ವರ್ಷಶತಂ ನೃಪಃ ।
ಶೀರ್ಣಪರ್ಣಾಶನಃ ಪಶ್ಚಾತ್ತಾವತ್ಕಾಲಂ ಸಮಾಹಿತಃ ॥ ೩ ॥
ತತಃ ಪರಂ ಜಲಾಹಾರೋ ಜಾತೋ ವರ್ಷಶತಂ ಹಿ ಸಃ ।
ವಾಯುಭಕ್ಷಸ್ತತೋಽಭೂತ್ಸ ಯಾವದ್ವರ್ಷಶತಂ ಪರಂ ॥ ೪ ॥
ತತಸ್ತುಷ್ಟೋ ಮಹಾದೇವಸ್ತಸ್ಯ ವರ್ಷಶತೇ ಗತೇ ।
ಚತುರ್ಥೇ ವಾಯುಭಕ್ಷಸ್ಯ ದರ್ಶನೇ ಸಮುಪಸ್ಥಿತಃ ॥ ೫ ॥

---

## ಕನ್ನಡದ ಅನುವಾದ

### ಅಚಲೇಶ್ವರಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ಮಹರ್ಷಿಗಳಿರಾ, ಆ ಪೃಥ್ವೀಪತಿಯು ಮಕ್ಕಳಿಗೆ ಈ ರೀತಿ ಹಿತೋಪದೇಶವನ್ನು ಮಾಡಿದ ಮೇಲೆ ರಾಜ್ಯವನ್ನು ಅವರಿಗೊಪ್ಪಿಸಿ, ಬ್ರಾಹ್ಮಣರಿಗೆ ಆ ಪಟ್ಟಣವನ್ನು ದಾನಮಾಡಿದ ತರುವಾಯ ಶಂಖತೀರ್ಥದ ಸಮೀಪದಲ್ಲಿಯೇ ಆಶ್ರಮವೊಂದನ್ನು ಮಾಡಿಕೊಂಡು ಪರಮ ಶ್ರದ್ಧೆಯಿಂದ ದೇವದೇವನಾದ ಮಹೇಶ್ವರನನ್ನು ಪೂಜಿಸತೊಡಗಿದನು.

೩–೪. ಅವನು ಒಂದು ನೂರು ವರ್ಷಗಳ ಕಾಲ ಕೇವಲ ಫಲಾಹಾರವನ್ನು ಮಾಡಿಕೊಂಡು ಆ ತರುವಾಯ ಸ್ಥಿರಚಿತ್ತನಾಗಿ ಒಂದುನೂರು ವರ್ಷಕಾಲ ಮರಗಳಿಂದ ಉದುರಿದ ಎಲೆಗಳನ್ನು ಆಹಾರವನ್ನಾಗಿ ಸ್ವೀಕರಿಸುತ್ತಲೂ, ಅದಾದ ಮೇಲೆ ಮತ್ತೆ ನೂರುವರ್ಷಗಳ ಕಾಲ ಕೇವಲ ಜಲವನ್ನೇ ಸ್ವೀಕರಿಸುತ್ತಲೂ, ಅದೂ ಆದ ಮೇಲೆ ಮತ್ತೂ ಒಂದು ನೂರು ವರ್ಷಗಳ ಕಾಲ ವಾಯುಭಕ್ಷಕನಾಗಿಯೂ ಮಹೇಶ್ವರನನ್ನು ಪೂಜಿಸಿ ತಪಸ್ಸನ್ನೆಸಗಿದನು.

೫–೬. ಹೀಗೆ ನಾಲ್ಕು ನೂರು ವರ್ಷಗಳಾದ ತರುವಾಯ ಕೇವಲ ವಾಯುಭಕ್ಷಕನಾಗಿಯೇ ತಪಸ್ಸನ್ನೆಸಗುತ್ತಿದ್ದ ಆ ಚಮತ್ಕಾರ ಭೂಪಾಲನ ವಿಷಯದಲ್ಲಿ ಮಹಾದೇವನು ಸುಪ್ರೀತನಾಗಿ ಅವನಿಗೆ ದರ್ಶನವನ್ನಿತ್ತು ಹೀಗೆಂದನು:

ಪ್ರೋವಾಚ ಪರಿತುಷ್ಟೋಽಸ್ಮಿ ಮತ್ತಃ ಪ್ರಾರ್ಥಯ ವಾಂಛಿತಂ ।
ಅಹಂ ತೇ ಸಂಪ್ರದಾಸ್ಯಾಮಿ ದುರ್ಲಭಂ ತ್ರಿದಶೈರಪಿ ॥ ೬ ॥

ರಾಜೋವಾಚ :—

ಏತತ್ಪುಣ್ಯತಮಂ ಕ್ಷೇತ್ರಂ ನಾನಾತೀರ್ಥ ಸಮಾಶ್ರಯಂ ।
ಹಾಟಕೇಶ್ವರಮಾಹಾತ್ಮ್ಯಾತ್ಸರ್ವಪಾಪಕ್ಷಯಾಪಹಂ ॥ ೭ ॥
ತಸ್ಮಾತ್ತ್ವತ್ರ ನಿವಾಸೇನ ಭೂಯಾನ್ಮೇಧ್ಯತಮಂ ಪುನಃ ।
ಏತನ್ಮೇ ವಾಂಛಿತಂ ದೇವ ದೇಹಿ ತುಷ್ಟಿಂ ಗತೋ ಯದಿ ॥ ೮ ॥
ಮಯೈತದಗ್ರ್ಯಂ ನಿರ್ಮಾಯ ಬ್ರಾಹ್ಮಣೇಭ್ಯೋ ನಿವೇದಿತಂ ।
ಪುರಂ ಶರ್ವಾಽಮರಾಧೀಶ ಶ್ರದ್ಧಾಪೂತೇನ ಚೇತಸಾ ॥ ೯ ॥
ತಸ್ಮಿಂಸ್ತ್ವಯಾ ಸದಾ ವಾಸಃ ಕರ್ತವ್ಯೋ ಮಮ ವಾಕ್ಯತಃ ।
ನಿಶ್ಚಲತ್ವೇನ ಯೇನಸ್ಯಾದ್ಗುಣೈಃ ಸರ್ವೈಃ ಸಮನ್ವಿತಂ ॥ ೧೦ ॥

ಭಗವಾನುವಾಚ :—

ಅಚಲೋಽಹಂ ಭವಿಷ್ಯಾಮಿ ಸ್ಥಾನೇಽತ್ರ ತವ ಭೂಮಿಪ ।
ಅಚಲೇಶ್ವರ ಇತ್ಯೇವ ನಾಮ್ನಾ ಖ್ಯಾತೋ ಜಗತ್ರಯೇ ॥ ೧೧ ॥

---

"ಎಲೈ ದೊರೆಯೆ, ನಾನು ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ವರವನ್ನು ಬೇಡು. ನಿನ್ನ ವಾಂಛಿತವು ದೇವತೆಗಳಿಂದಲೂ ಪಡೆಯಲ್ಪು ದುರ್ಲಭವಾದುದಾಗಿದ್ದರೂ ಅದನ್ನು ಕೊಡುತ್ತೇನೆ" ಎಂದು ಹೇಳಿದನು.

೭. ರಾಜನು ಹೇಳುತ್ತಾನೆ:—ಎಲೈ ಪರಮೇಶ್ವರನೆ, ಹಾಟಕೇಶ್ವರನ ಮಾಹಾತ್ಮ್ಯದಿಂದ ಅನೇಕ ತೀರ್ಥಗಳಿಗೆ ಆಶ್ರಯವಾಗಿ ಈ ಕ್ಷೇತ್ರವು ಸಮಸ್ತ ಪಾಪಗಳನ್ನೂ ಪರಿಹರಿಸುವುದಾಗಿರುವುದು.

೮. ಆದುದರಿಂದ ನೀನು ಇಲ್ಲಿ ನೆಲೆಗೊಂಡು ಈ ಕ್ಷೇತ್ರವು ಮತ್ತೂ ಪವಿತ್ರ ವಾದುದಾಗಲಿ. ಎಲೈ ಸ್ವಾಮಿಯೆ, ಇದೇ ನನಗಿರುವ ವಾಂಛೆ. ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ಈ ವರವನ್ನೇ ನನಗೆ ಕೊಡುವವನಾಗು.

೯. ಸಮಸ್ತದೇವತೆಗಳಿಗೂ ಒಡೆಯನಾದ ಓ ಮಹೇಶ್ವರನೆ, ಶ್ರದ್ಧಾ ಪೂತವಾದ ಬುದ್ಧಿಯಿಂದ ನಾನು ಈ ಶ್ರೇಷ್ಠವಾದ ಪಟ್ಟಣವನ್ನು ನಿರ್ಮಿಸಿ ಬ್ರಾಹ್ಮಣರಿಗೆ ದಾನಮಾಡಿದ್ದೇನೆ.

೧೦. ಈ ಪಟ್ಟಣದಲ್ಲಿ ನೀನು ನನ್ನ ಪ್ರಾರ್ಥನೆಯಂತೆ ಸಮಸ್ತ ಮಾಹಾತ್ಮ್ಯ ಗುಣದಿಂದ ಒಡಗೂಡಿ ಸ್ಥಿರವಾಗಿ ನಿಲ್ಲಬೇಕು.

೧೧. ಭಗವಂತನು ಹೇಳುತ್ತಾನೆ:—ಎಲೈ ದೊರೆಯೆ, ನಿನ್ನ ಈ ಸ್ಥಾನದಲ್ಲಿ ನಾನು ಅಚಲನಾಗಿಯೇ ಇರುವೆನು. ಇಲ್ಲಿರುವ ನನ್ನ ಹೆಸರು ಅಚಲೇಶ್ವರನೆಂದೇ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗುತ್ತದೆ.

ಯೋ ಮಾಮತ್ರ ಸ್ಥಿತಂ ಮರ್ತ್ಯೋ ವೀಕ್ಷಯಿಷ್ಯತಿ ಭಕ್ತಿತಃ ।
ಭವಿಷ್ಯಂತ್ಯಚಲಾಸ್ತಸ್ಯ ಸರ್ವದೈವ ವಿಭೂತಯಃ ॥ ೧೨ ॥
ಮಾಘಶುಕ್ಲಚತುರ್ದಶ್ಯಾಂ ಮಮ ಲಿಂಗಸ್ಯ ಯೋ ನರಃ ।
ಶ್ರದ್ಧಯಾ ಪರಯಾ ಯುಕ್ತಃ ಕರ್ತಾ ಯೋ ಘೃತಕಂಬಲಂ ॥ ೧೩ ॥
ಬಾಲ್ಯೇ ವಯಸಿ ಯತ್ಪಾಪಂ ವಾರ್ಧಕೇ ಯೌವನೇಽಪಿ ವಾ ।
ತದ್ಯಾಸ್ಯತಿ ಕ್ಷಯಂ ತಸ್ಯ ತಮಃ ಸೂರ್ಯೋದಯೇ ಯಥಾ ॥ ೧೪ ॥
ತಸ್ಮಾತ್ಸ್ಥಾಪಯ ಮೇ ಲಿಂಗಂ ತ್ವಮತ್ರೈವ ಮಹೀಪತೇ ।
ಅಹಂ ಯೇನ ಕರೋಮ್ಯೇವ ತತ್ರ ವಾಸಂ ಸದಾಽಚಲಃ ॥ ೧೫ ॥

ಸೂತ ಉವಾಚ :—

ಏವಮುಕ್ತ್ವಾ ಸ ದೇವೇಶಸ್ತತಶ್ಚಾಽದರ್ಶನಂ ಗತಃ ।
ಸೋಽಪಿ ರಾಜಾ ಚಕಾರಾಶು ಪ್ರಾಸಾದಂ ಸುಮನೋಹರಂ ॥ ೧೬ ॥
ತತ್ರ ಸಂಸ್ಥಾಪಯಾಮಾಸ ಲಿಂಗಂ ದೇವಸ್ಯ ಶೂಲಿನಃ ।
ಶ್ರದ್ಧಯಾ ಪರಯಾ ಯುಕ್ತಃ ಸರ್ವಲಕ್ಷಣಲಕ್ಷಿತಂ ॥ ೧೭ ॥
ಯಸ್ಮಿನ್ ದೃಷ್ಟೇಽಥವಾ ಸ್ಪೃಷ್ಟೇ ಧ್ಯಾತೇ ವಾ ಪೂಜಿತೇಽಪಿ ವಾ ।
ನರೋ ವಿಮುಚ್ಯತೇ ಪಾಪಾದಾಜನ್ಮಮರಣಾಂತಿಕಾತ್ ॥ ೧೮ ॥

---

೧೨. ಯಾವನು ನನ್ನನ್ನು ಇಲ್ಲಿ ಭಕ್ತಿಯಿಂದ ಸಂದರ್ಶಿಸುತ್ತಾನೆಯೋ ಅವನ ಸಕಲ ಸಂಪತ್ತುಗಳೂ ಸರ್ವಕಾಲಗಳಲ್ಲಿಯೂ ಅಚಲಗಳಾಗಿರುತ್ತವೆ.

೧೩–೧೪. ಮಾಘಶುಕ್ಲ ಚತುರ್ದಶಿಯಂದು ಈ ನನ್ನ ಅಚಲೇಶ್ವರ ಲಿಂಗಕ್ಕೆ ಯಾವ ಮಾನವನು ಪರಮಶ್ರದ್ಧೆಯಿಂದ ಘೃತಕಂಬಲವನ್ನು ದಾನ ಮಾಡುತ್ತಾನೆಯೋ ಅವನು ಬಾಲ್ಯ ಯೌವನ ವಾರ್ಧಕ್ಯಗಳಲ್ಲಿ ಮಾಡಿದ ಪಾಪಗಳೆಲ್ಲವೂ ಸೂರ್ಯೋದಯದಲ್ಲಿ ಮಂಜು ಹೇಗೋ ಹಾಗೆ ಕ್ಷಯಿಸಿಹೋಗುತ್ತವೆ.

೧೫. ಆದುದರಿಂದ ಎಲೈ ಮಹೀಪತಿಯೆ, ನೀನು ನನ್ನ ಲಿಂಗವನ್ನು ಇದೇ ಪ್ರದೇಶದಲ್ಲಿಯೇ ಪ್ರತಿಷ್ಠಿಸುವವನಾಗು. ಆ ಲಿಂಗದಲ್ಲಿ ನಾನು ಸರ್ವಕಾಲಗಳಲ್ಲಿಯೂ ಅಚಲನಾಗಿ ನೆಲಸಿರುತ್ತೇನೆ.

೧೬. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಆ ದೇವೇಶ್ವರನು ಈ ರೀತಿಯಾಗಿ ನುಡಿದು ಅಲ್ಲಿಯೇ ಅಂತರ್ಧಾನವಾದನು. ತರುವಾಯ ಚಮತ್ಕಾರ ರಾಜನು ಆ ಪ್ರದೇಶದಲ್ಲಿ ಬಹುಮನೋಹರವಾದ ದೇವಾಯತನವನ್ನು ಜಾಗ್ರತೆಯಾಗಿಯೇ ನಿರ್ಮಿಸಿದನು.

೧೭. ಹೀಗೆ ದೇವಾಲಯ ನಿರ್ಮಾಣವಾದೊಡನೆಯೇ ಅವನು ಪರಮಶ್ರದ್ಧೆಯಿಂದ ಸರ್ವಲಕ್ಷಣ ಲಕ್ಷಿತವಾದ ಪಾರಮೇಶ್ವರಲಿಂಗವನ್ನು ಅಲ್ಲಿ ಸ್ಥಾಪಿಸಿದನು.

೧೮–೧೯. ಆ ಲಿಂಗವನ್ನು ಸಂದರ್ಶಿಸಿದರಾಗಲಿ ಸ್ಪರ್ಶಿಸಿದರಾಗಲಿ ಧ್ಯಾನಿಸಿದರಾಗಲಿ ಅರ್ಚಿಸಿದರಾಗಲಿ ಮಾನವನು ಹುಟ್ಟಿದಂದಿನಿಂದ ಮೃತಿ

ತತಃ ಸಂಚಿಂತಯಾಮಾಸ ಭೂಪಾಲಃ ಕಿಂ ಮಹೇಶ್ವರಃ ।
ಸಾನ್ನಿಧ್ಯಂ ನಿಶ್ಚಲೋ ಭೂತ್ವಾ ಲಿಂಗೇಽತ್ರೈವ ಕರಿಷ್ಯತಿ ॥ ೧೯ ॥
ಏತಸ್ಮಿನ್ನಂತರೇ ಜಾತಾ ವಾಣೀ ಗಗನ ಗೋಚರಾ ।
ಹರ್ಷಯಂತೀ ಮಹೀಪಾಲಂ ಚಮತ್ಕಾರಂ ಸುನಿಃಸ್ವನಾ ॥ ೨೦ ॥
ಮಾ ತ್ವಂ ಭೂಮಿಪಶಾರ್ದೂಲ ಕಾರ್ಯಚಿಂತಾಂ ಕರಿಷ್ಯಸಿ ।
ಅಸ್ಮಿನ್ವಾಸಂ ಸದಾಽತ್ರೈವ ಲಿಂಗೇ ಕರ್ತಾಽಸ್ಮಿ ನಿತ್ಯಶಃ ॥ ೨೧ ॥
ತಥಾಽನ್ಯದಪಿ ತೇ ವಚ್ಮಿ ಪ್ರತ್ಯಯಾರ್ಥಂ ವಚೋ ನೃಪ ।
ತಚ್ಛ್ರುತ್ವಾ ನಿರ್ವೃತಿಂ ಗಚ್ಛ ವೀಕ್ಷಸ್ವೈವ ಚ ಯತ್ನತಃ ॥ ೨೨ ॥
ಸದಾ ಮೇ ನಿಶ್ಚಲಾ ಛಾಯಾ ಲಿಂಗಸ್ಯಾಽಸ್ಯ ಭವಿಷ್ಯತಿ ।
ಏಕೈವ ಪೃಷ್ಠದೇಶಸ್ಥಾ ನದಿಕ್ ಸಂಸ್ಥಾ ಭವಿಷ್ಯತಿ ॥ ೨೩ ॥

ಸೂತ ಉವಾಚ:—

ತತಃ ಸ ವೀಕ್ಷಯಾಮಾಸ ತಾಂ ಛಾಯಾಂ ಲಿಂಗಸಂಭವಾಂ ।
ತದ್ರೂಪಾಂ ನಿಶ್ಚಲಾಂ ನಿತ್ಯಂ ತದ್ದಿಕ್ ಸಂಸ್ಥೇ ದಿವಾಕರೇ ॥ ೨೪ ॥

---

ಹೊಂದುವವರೆಗೂ ಮಾಡಿದ ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ. ತರುವಾಯ ಆ ಭೂಮಿಪಾಲನು "ನಾನು ಪ್ರತಿಷ್ಠಿಸಿದ ಈ ಲಿಂಗದಲ್ಲಿಯೇ ಪರಮೇಶ್ವರನು ನಿಶ್ಚಲನಾಗಿ ನೆಲಸಿ ಸಾನ್ನಿಧ್ಯವನ್ನುಂಟುಮಾಡುವನೆ" ಎಂದು ಚಿಂತಿಸಿದನು.

೨೦. ಇದೇ ಸಮಯದಲ್ಲಿಯೇ ಆಕಾಶವಾಣಿಯು ಆ ಮಹಾರಾಜನನ್ನು ಸಂತೋಷಗೊಳಿಸುತ್ತ ಸ್ಫುಟವಾದ ಮಾತುಗಳಿಂದ ಈ ರೀತಿ ನುಡಿಯಿತು.

೨೧. "ಎಲೈ ಚಮತ್ಕಾರ ಭೂಪಾಲನೆ, ನೀನು ಮಾಡಿರುವ ಈ ಕಾರ್ಯವನ್ನು ಕುರಿತು ಈ ರೀತಿಯಾಗಿ ಚಿಂತಿಸಲೇಬೇಡ. ನಾನು ಇದೇ ಲಿಂಗದಲ್ಲಿಯೇ ಸತತವೂ ವಾಸವಾಗಿರುತ್ತೇನೆ.

೨೨. ಅಲ್ಲದೆ ನಿನ್ನ ನಂಬಿಕೆಗಾಗಿ ಇನ್ನೊಂದು ವಿಷಯವನ್ನು ಹೇಳುವೆನು. ಅದನ್ನು ಕೇಳಿ ಸಮಾಧಾನವನ್ನು ಪಡೆ. ಈಗ ನಾನು ಹೇಳುವ ಮಾಹಾತ್ಮ್ಯವನ್ನು ಪ್ರಯತ್ನಪೂರ್ವಕವಾಗಿ ನೋಡುವವನಾಗು.

೨೩. ನಾನು ನೆಲಸಿರುವ ಈ ಲಿಂಗದ ನೆಳಲು ಹಿಂಭಾಗವೊಂದರಲ್ಲಿಯೇ ಗೋಚರವಾಗುವುದಲ್ಲದೆ ಯಾವ ಇತರ ದಿಕ್ಕಿನಲ್ಲಿಯೂ ಕಾಣಿಸುವುದಿಲ್ಲ."

೨೪. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಈ ರೀತಿ ಆಕಾಶವಾಣಿಯು ನುಡಿದನಂತರ ಆ ಚಮತ್ಕಾರ ಭೂಪತಿಯು ಅಂತೆಯೇ ನಿಶ್ಚಲವಾಗಿ ಆ ಲಿಂಗದ ರೂಪವನ್ನೇ ಒಳಗೊಂಡು ಪೂರ್ವದಿಕ್ಕಿಗೇ ಇರುವ ಶಿವಲಿಂಗದ ನೆಳಲನ್ನು ಕಂಡನು.

ತತೋ ಹರ್ಷಂ ಪರಂ ಗತ್ವಾ ಪ್ರಣಿಪತ್ಯ ಚ ತಂ ಭುವಿ ।
ಕೃತಕೃತ್ಯಮಿವಾತ್ಮಾನಂ ಸ ಮೇನೇ ಪಾರ್ಥಿವೋತ್ತಮಃ ॥ ೨೫ ॥
ಅದ್ಯಾಽಪಿ ದೃಶ್ಯತೇ ಛಾಯಾ ತಾದೃಗ್ರೂಪಾ ಸದಾ ಹಿ ಸಾ ।
ತಸ್ಯ ಲಿಂಗಸ್ಯ ವಿಪ್ರೇಂದ್ರಾ ಜಾತಾ ವಿಸ್ಮಯಕಾರಿಣೀ ॥ ೨೬ ॥
ಷಣ್ಮಾಸಾಭ್ಯಂತರೇ ಮೃತ್ಯುರ್ಯಸ್ಯಸ್ಯಾದ್ಭುವಿ ಭೋ ದ್ವಿಜಾಃ ।
ನ ಸ ಪಶ್ಯತಿ ತಾಂ ಛಾಯಾಮೇಷೋಽನ್ಯಃ ಪ್ರತ್ಯಯಃ ಪರಃ ॥ ೨೭ ॥

ಸೂತ ಉವಾಚ:—

ಏವಂ ಸ ಭಗವಾಂಸ್ತತ್ರ ಸರ್ವದೈವ ವ್ಯವಸ್ಥಿತಃ ।
ಅಚಲೇಶ್ವರ ರೂಪೇಣ ಚಮತ್ಕಾರ ಪುರಾಂತಿಕೇ ॥ ೨೮ ॥
ನಿಶ್ಚಲತ್ವೇನ ದೇವೇಶೋ ಹ್ಯಷ್ಟಷಷ್ಟಿಷು ಮಧ್ಯಮಃ ।
ಕ್ಷೇತ್ರಾಣಾಂ ವಸತೇ ತತ್ರ ತಸ್ಯ ನಾಕ್ಯಾನ್ಮಹೇಶ್ವರಃ ॥ ೨೯ ॥
ತೇನ ತತ್ಪಾವನಂ ಕ್ಷೇತ್ರಂ ಸರ್ವೇಷಾಮಿಹ ಕೀರ್ತಿತಂ ।
ಕಾಮದಂ ಮುಕ್ತಿದಂ ಚೈವ ಜಾಯತೇ ಸರ್ವದೇಹಿನಾಂ ॥ ೩೦ ॥
ತಥಾಽನ್ಯದಪಿ ಯದ್ವೃತ್ತಂ ವೃತ್ತಾಂತಂ ತತ್ಪ್ರಭಾವಜಂ ।
ತದಹಂ ಸಂಪ್ರವಕ್ಷ್ಯಾಮಿ ಶ್ರೂಯತಾಂ ದ್ವಿಜಸತ್ತಮಾಃ ॥ ೩೧ ॥

---

೨೫. ಈ ರೀತಿ ಕಂಡೊಡನೆ ಆ ಪಾರ್ಥಿವೋತ್ತಮನು ಪರಮಸಂತುಷ್ಟನಾಗಿ ಆ ಪರಮೇಶ್ವರನಿಗೆ ಮಣಿದು ತಾನು ಕೃತಾರ್ಥನಾದನೆಂದು ಭಾವಿಸಿದನು.

೨೬. ಈಗಲೂ ಅದೇ ರೂಪದಿಂದಿರುವ ಆ ಲಿಂಗಚ್ಛಾಯೆಯು ಹಾಗೆಯೇ ಎಲ್ಲರಿಗೂ ಕಾಣಿಸುವುದಾಗಿ ವಿಸ್ಮಯವನ್ನುಂಟುಮಾಡುತ್ತಿದೆ.

೨೭. ಎಲೈ ದ್ವಿಜರೆ, ಆರು ತಿಂಗಳೊಳಗಾಗಿ ಮೃತಿಹೊಂದುವ ಮಾನವರು ಮಾತ್ರ ಆ ಶಿವಲಿಂಗದ ಛಾಯೆಯನ್ನು ಕಾಣುವುದಿಲ್ಲ. ಇದು ಅಲ್ಲಿಯ ಮತ್ತೊಂದು ಮಾಹಾತ್ಮ್ಯವು.

೨೮. ಹೀಗೆ ಪರಮೇಶ್ವರನು ಆ ಚಮತ್ಕಾರ ಪಟ್ಟಣದ ಬಳಿಯಲ್ಲಿ ಅಚಲೇಶ್ವರ ರೂಪದಿಂದ ಸರ್ವಕಾಲದಲ್ಲಿಯೂ ನೆಲಸುವವನಾದನು.

೨೯. ಎಲೈ ವಿಪ್ರರೆ, ಈ ಪ್ರಕಾರವಾಗಿ ದೇವೇಶ್ವರನಾದ ಆ ಮಹಾದೇವನು ಅರುವತ್ತೆಂಟು ಕ್ಷೇತ್ರಗಳಲ್ಲಿ ಒಂದೆನಿಸಿದ ಆ ಚಮತ್ಕಾರ ಪಟ್ಟಣದಲ್ಲಿ ನಿಶ್ಚಲನಾಗಿ ಅಚಲೇಶ್ವರನಾಮದಿಂದ ನಿಂತನು.

೩೦. ಈ ಕಾರಣದಿಂದ ಪಾವನವಾದ ಆ ಕ್ಷೇತ್ರವು ಸಮಸ್ತಮಾನವರಿಗೂ ಇಷ್ಟಾರ್ಥದಾಯಕವೂ ಮುಕ್ತಿಪ್ರದಾಯಕವೂ ಆಗಿರುವುದೆಂದು ಹೇಳಲಾಗಿದೆ.

೩೧. ಈ ಅಚಲೇಶ್ವರ ಮಾಹಾತ್ಮ್ಯಕ್ಕೆ ಸಂಬಂಧಿಸಿದ ಮತ್ತೊಂದು ನಡೆದ ವೃತ್ತಾಂತವನ್ನು ಹೇಳುತ್ತೇನೆ, ಕೇಳಿ.

ಅಚಲೇಶ್ವರಮಾಹಾತ್ಮ್ಯಾತ್ತಸ್ಮಿನ್ ಕ್ಷೇತ್ರೇ ನರಾ ದ್ರುತಂ ।
ವಾಂಛಿತಂ ಮನಸಃ ಸರ್ವೇ ಲಭಂತೇ ಸಕಲಂ ಫಲಂ ॥ ೩೨ ॥
ಸ್ವರ್ಗಮೇಕೇ ಪರೇ ಮೋಕ್ಷಂ ಧನಧಾನ್ಯ ಸುತಾಂಸ್ತಥಾ ।
ಯೋ ಯಂ ಕಾಮಮಭಿಧ್ಯಾಯ ಪೂಜಯೇದಚಲೇಶ್ವರಂ ।
ತಂ ತಂ ಸ ಲಭತೇ ಮರ್ತ್ಯಃ ಸ್ವಲ್ಪಾಯಾಸೇನ ಚ ದ್ರುತಂ ॥ ೩೩ ॥
ಅಥ ದೃಷ್ಟ್ವಾ ಸಹಸ್ರಾಕ್ಷಃ ಸರ್ವೇ ಪಾಪನರಾ ಭುವಿ ।
ಸ್ವರ್ಗಂ ಯಾಂತಿ ತಥಾ ಮೋಕ್ಷಂ ಪ್ರಾಪ್ನುವಂತಿ ಚ ಸಂಮುಖಂ ॥ ೩೪ ॥
ತತಃ ಕ್ರೋಧಂ ಚ ಕಾಮಂ ಚ ಲೋಭಂ ದ್ವೇಷಂ ಭಯಂ ರತಿಂ ।
ಮೋಹಂ ಚ ವ್ಯಸನಂ ದುರ್ಗಂ ಮತ್ಸರಂ ರಾಗಮೇವ ಚ ॥ ೩೫ ॥
ಸರ್ವಾನ್ ಮೂರ್ತಾನ್ ಸಮಾಹೂಯ ತತಃ ಪ್ರೋವಾಚ ಸಾದರಂ ।
ಸ್ವಯಮೇವ ಸಹಸ್ರಾಕ್ಷೋ ರಹಸ್ಯೇ ದ್ವಿಜಸತ್ತಮಾಃ ॥ ೩೬ ॥
ನರೋ ವಾ ಯದಿ ವಾ ನಾರೀ ಚಮತ್ಕಾರಪುರಂ ಪ್ರತಿ ।
ಯೋ ಗಚ್ಛತಿ ಧರಾಪೃಷ್ಠೇ ಯುಷ್ಮಾಭಿರ್ವಾರ್ಯ ಏವ ಸಃ ॥ ೩೭ ॥

---

೩೨. ಈ ಕ್ಷೇತ್ರದಲ್ಲಿ ಅಚಲೇಶ್ವರನ ಅನುಗ್ರಹದಿಂದ ಮಾನವರು ಬಹು ಬೇಗನೆ ಸಮಸ್ತ ಮನೋಭೀಷ್ಟಗಳನ್ನೂ ಪಡೆಯುತ್ತಿದ್ದರು.

೩೩. ಕೆಲವರು ಸ್ವರ್ಗವನ್ನೂ ಕೆಲವರು ಮೋಕ್ಷವನ್ನೂ ಕೆಲವರು ಧನಧಾನ್ಯ ಸಮೃದ್ಧಿಯನ್ನೂ ಸಂತಾನವನ್ನೂ ಪಡೆಯುತ್ತಿದ್ದರು. ಅಚಲೇಶ್ವರನನ್ನು ಯಾವ ಇಷ್ಟಾರ್ಥಪ್ರಾಪ್ತಿಗಾಗಿ ಮಾನವನು ಪೂಜಿಸುತ್ತಿದ್ದನೋ ಅದೆಲ್ಲವನ್ನೂ ಯಾವ ಆಯಾಸವೂ ಇಲ್ಲದೆ ಜಾಗ್ರತೆಯಾಗಿಯೇ ಪಡೆಯುತ್ತಿದ್ದನು.

೩೪–೩೬. ಹೀಗೆ ಪಾಪಿಗಳಾದ ಮಾನವರು ಬಹು ಸುಲಭವಾಗಿಯೇ ಸ್ವರ್ಗಕ್ಕೆ ಬರುವುದನ್ನೂ ಮೋಕ್ಷವನ್ನು ಪಡೆಯುವುದನ್ನೂ ತನ್ನ ಬಳಿಗೇ ಬರುತ್ತಿರುವುದನ್ನೂ ಕಂಡು ಸ್ವರ್ಗಾಧಿಪತಿಯಾದ ಸಹಸ್ರಾಕ್ಷನು ಕಾಮ, ಕ್ರೋಧ, ಲೋಭ, ದ್ವೇಷ, ಭಯ, ರತಿ, ಮೋಹ, ವ್ಯಸನ, ದುರ್ಗ, ಮತ್ಸರ, ರಾಗ ಮೊದಲಾದವರೆಲ್ಲರನ್ನೂ ಕರೆದು, ಅವರನ್ನು ತಾನೇ ಸಾಕ್ಷಾತ್ತಾಗಿ ಆದರಿಸಿ ರಹಸ್ಯವಾಗಿ ಹೀಗೆ ಹೇಳಿದನು.

೩೭. "ಎಲೈ! ನೀವೆಲ್ಲರೂ ಈಗಲೇ ಚಮತ್ಕಾರಪುರಕ್ಕೆ ಹೋಗಿ ಭೂಮಂಡಲದಲ್ಲಿ ಗಂಡಸರಾಗಲಿ ಹೆಂಗಸರಾಗಲಿ ಯಾರು ಆ ಪಟ್ಟಣಕ್ಕೆ ಹೋಗುವರೋ ಅವರನ್ನು ತಡೆಯತಕ್ಕದ್ದು.

ತತ್ರೈವ ವಸಮಾನೋಽಪಿ ಯೋಽಗಚ್ಛೇದಚಲೇಶ್ವರಂ ।
ಸುದ್ವಾರ್ಯಾಕ್ಯಾತ್ಸ ವಿಶೇಷೇಣ ಸರ್ವೈರ್ವಾರ್ಯಃ ಪ್ರಯತ್ನತಃ ॥ ೩೮ ॥
ತೇ ತಥೇತಿ ಪ್ರತಿಜ್ಞಾಯ ಗತ್ವಾ ಶಕ್ರಸ್ಯ ಶಾಸನಾತ್ ।
ಚಕ್ರುಸ್ತತಃ ಸಮುಚ್ಛಿನ್ನಂ ತನ್ಮಾಹಾತ್ಮ್ಯಂ ಗತಂ ಭುವಿ ॥ ೩೯ ॥
ಏತದ್ವಃ ಸರ್ವಮಾಖ್ಯಾತಮಾಖ್ಯಾನಂ ಪಾಪನಾಶನಂ ।
ಅಚಲೇಶ್ವರದೇವಸ್ಯ ತಸ್ಮಿನ್ ಕ್ಷೇತ್ರೇ ನಿವಾಸಿನಃ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಅಚಲೇಶ್ವರಮಾಹಾತ್ಮ್ಯವರ್ಣನಂ " ನಾಮ
ತ್ರಯೋದಶೋಽಧ್ಯಾಯಃ

---

೩೮. ಆ ಪಟ್ಟಣದಲ್ಲಿಯೇ ವಾಸಮಾಡುವವನಾದರೂ ಯಾವನು ಅಚಲೇಶ್ವರನ ಸಂದರ್ಶನಕ್ಕಾಗಿ ಹೋಗುವನೋ ಅವನನ್ನು ನೀವು ಎಲ್ಲ ಪ್ರಯತ್ನಗಳನ್ನೂ ಮಾಡಿ ತಡೆಯಬೇಕು. ಇದು ನನ್ನ ಅಪ್ಪಣೆ."

೩೯. ಆ ಕಾಮಕ್ರೋಧಾದಿಗಳೆಲ್ಲರೂ ಶಕ್ರನ ಅಪ್ಪಣೆಯಂತೆ ಹಾಗೆಯೇ ಆಗಲೆಂದು ಒಪ್ಪಿಕೊಂಡು ಆ ಅಚಲೇಶ್ವರನ ಮಾಹಾತ್ಮ್ಯವನ್ನು ಅಳಿಸ ತೊಡಗಿದರು.

೪೦. ಎಲೈ ವಿಪ್ರರೆ, ಈ ಪ್ರಕಾರವಾಗಿ ಚಮತ್ಕಾರ ಕ್ಷೇತ್ರದಲ್ಲಿ ನೆಲೆಗೊಂಡಿರುವ ಅಚಲೇಶ್ವರದೇವನ ಪಾಪನಾಶಕವಾದ ಈ ಉಪಾಖ್ಯಾನವನ್ನು ನಿಮಗೆಲ್ಲರಿಗೂ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಅಚಲೇಶ್ವರಮಾಹಾತ್ಮ್ಯವರ್ಣನ "ವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಚಮತ್ಕಾರಪುರಪ್ರದಕ್ಷಿಣಾಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಯದನ್ಯತ್ತತ್ರ ಸಂಜಾತಮಾಶ್ಚರ್ಯಂ ದ್ವಿಜಸತ್ತಮಾಃ ।
ತದಹಂ ಕೀರ್ತಯಿಷ್ಯಾಮಿ ರಹಸ್ಯಂ ಹೃದಿಸಂಸ್ಥಿತಂ ॥ ೧ ॥
ಚಮತ್ಕಾರಪುರೇ ಕಶ್ಚಿದ್ವೈಶ್ಯಜಾತಿ ಸಮುದ್ಭವಃ ।
ಬಭೂವ ಪುರುಷೋ ಮೂಕೋ ದಾರಿದ್ರ್ಯೇಣ ಸಮನ್ವಿತಃ ॥ ೨ ॥
ಯೋ ದೌಃಸ್ಥ್ಯಾತ್ಸರ್ವಲೋಕಾನಾಂ ಕರೋತಿ ಪಶುರಕ್ಷಣಂ ।
ಕುಟುಂಬ ಭರಣಾರ್ಥಾಯ ಸಂತುಷ್ಟೋ ಯೇನ ಕೇನಚಿತ್ ॥ ೩ ॥
ಕದಾಚಿದ್ರಕ್ಷತಸ್ತಸ್ಯ ಪಶೂಂಸ್ತಾನ್ವನಭೂಮಿಷು ।
ಪಶುರೇಕೋ ವಿನಿಷ್ಕ್ರಾಂತಃ ಸ್ವಯೂಥಾತ್ತೃಣಲೋಭತಃ ॥ ೪ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ಚೈತ್ರಮಾಸೇ ದ್ವಿಜೋತ್ತಮಾಃ ।
ನ ತದಾ ಲಕ್ಷಿತಸ್ತೇನ ಗಚ್ಛಮಾನೋ ಯದೃಚ್ಛಯಾ ॥ ೫ ॥

---

## ಕನ್ನಡದ ಅನುವಾದ

### ಚಮತ್ಕಾರಪುರಪ್ರದಕ್ಷಿಣಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಆ ಚಮತ್ಕಾರಪುರದಲ್ಲಿ ನಡೆದ ಮತ್ತೊಂದು ಆಶ್ಚರ್ಯವನ್ನು ನಿಮಗೆ ಹೇಳುತ್ತೇನೆ. ಅದು ನನ್ನ ಹೃದಯದಲ್ಲಿಯೇ ರಹಸ್ಯವಾಗಿ ಉಳಿದಿದೆ.

೨. ಆ ಚಮತ್ಕಾರ ಪುರದಲ್ಲಿ ವೈಶ್ಯಜಾತಿಯಲ್ಲಿ ಹುಟ್ಟಿದ ಒಬ್ಬಾನೊಬ್ಬನು ಮೂಗನಾಗಿ ದಟ್ಟವರಿದ್ರದಶೆಗೆ ಬಂದನು.

೩. ಕೇವಲ ದಾರಿದ್ರ್ಯದಿಂದ ಪೀಡಿತನಾಗಿ ಅವನು ಸ್ವಕುಟುಂಬ ಪೋಷಣೆಗಾಗಿ ಆ ಊರಿನವರ ದನಗಳನ್ನು ಮೇಯಿಸುತ್ತ, ಬಂದ ಅಲ್ಪಸ್ವಲ್ಪ ಸಂಪಾದನೆಯಲ್ಲಿಯೇ ಸಂತೋಷಗೊಂಡಿದ್ದನು.

೪. ಒಂದಾನೊಂದು ದಿನ ಅವನು ಅರಣ್ಯದಲ್ಲಿ ದನಗಳನ್ನು ಮೇಯಿಸುತ್ತಿದ್ದಾಗ ಹಿಂಡಿನಲ್ಲಿ ಒಂದಾನೊಂದು ಆಕಳು ಹಸುರು ಹುಲ್ಲಿನ ಮೇಲಣ ಆಸೆಯಿಂದ ಹಿಂಡನ್ನಗಲಿ ಹೊರಟು ಹೋಯಿತು.

೫. ಅಂದು ಚೈತ್ರಮಾಸದ ಕೃಷ್ಣಪಕ್ಷದ ಚತುರ್ದಶಿ. ಅವನು ಹಿಂಡಿನೊಡನೆ ಮನೆಗೆ ಹೊರಟಾಗ ದುರದೃಷ್ಟವಶದಿಂದ ಆ ಆಕಳನ್ನು ನೋಡಿಕೊಳ್ಳಲಿಲ್ಲ.

ಅಥ ಯಾವದ್ಗೃಹಂ ಪ್ರಾಪ್ತಃ ಸಮೂಕಃ ಪಶುಪಾಲಕಃ ।
ತಾವತ್ತಸ್ಯ ಚ ಗೋಸ್ವಾಮಿಾ ಭರ್ತ್ಸಯನ್ ಸಮುಪಾಗತಃ ॥ ೬ ॥
ಕಿಂ ಪಾಪ ನ ಸಮಾಯಾತಃ ಪಶುರೇಕೋಽದ್ಯ ನೋ ಯಥಾ ।
ನೂನಂ ತ್ವಯಾ ಹತಃ ಸೋಽಪಿ ವಿಕ್ರೀತೋಽಪಿ ಹತೋಽಥವಾ ।
ತಸ್ಮಾದಾನಯ ಮೇ ಕ್ಷಿಪ್ರಂ ನಿರಾಹಾರೋಽಪಿ ಗಾಂ ತ್ವರಾತ್ ॥ ೭ ॥
ತಚ್ಛ್ರುತ್ವಾ ಭಯಸಂತ್ರಸ್ತಃ ಸಮೂಕಃ ಪಶುಪಾಲಕಃ ।
ನಿಷ್ಕ್ರಾಂತೋ ಯಷ್ಟಿಮಾದಾಯ ನಿರಾಹಾರೋಽಪಿ ಮಂದಿರಾತ್ ॥ ೮ ॥
ತತೋಽರಣ್ಯಂ ಸಮಾಸಾದ್ಯ ವೀಕ್ಷಾಂಚಕ್ರೇ ಸಮಂತತಃ ।
ಸೂಕ್ಷ್ಮದೃಷ್ಟ್ಯಾ ಸ ದುರ್ಗಾಣಿ ಗಹನಾನಿ ವನಾನಿ ಚ ॥ ೯ ॥
ಅಥ ತೇನ ಕ್ವಚಿದ್ದೃಷ್ಟಂ ಪದಂ ತಸ್ಯ ಪಶೋಃ ಸ್ಫುಟಂ ।
ಅಟವ್ಯಾಂ ಭ್ರಮಮಾಣೇನ ಪರಿಜ್ಞಾತಂ ಚ ಕೃತ್ಸ್ನಶಃ ॥ ೧೦ ॥
ತತಶ್ಚ ತತ್ಪದಾನ್ವೇಷೀ ಸ ಜಗಾಮ ವನಾದ್ವನಂ ।
ಚಮತ್ಕಾರಪುರಸ್ಯಾಸ್ಯ ಸಮಂತಾದ್ದ್ವಿಜಸತ್ತಮಾಃ ॥ ೧೧ ॥

---

೬–೭. ಮೂಗನಾದ ಆ ದನಕಾಯುವವನು ಮನೆಗೆ ಬಂದೊಡನೆಯೇ ತಪ್ಪಿಸಿಕೊಂಡು ಹೋದ ಆಕಳ ಒಡೆಯನು ಅವನನ್ನು ಭರ್ತ್ಸನೆಮಾಡುತ್ತ, "ಎಲಾ ಪಾಪಿ, ನನ್ನ ಆಕಳುಗಳಲ್ಲಿ ಒಂದು ಆಕಳು ಇಂದು ಹಿಂದಕ್ಕೆ ಬರಲಿಲ್ಲ. ನೀನು ಅದನ್ನು ಕೊಂದೋ ಮಾರಿಯೋ ಎಲ್ಲಿಯಾದರೂ ಬಚ್ಚಿಟ್ಟೋ ಇರಬೇಕು. ಜಾಗ್ರತೆಯಾಗಿ ಹೋಗಿ ಅದನ್ನು ಕರೆದುಕೊಂಡು ಬಾ. ನಿನಗೆ ಊಟವಿಲ್ಲದಿದ್ದರೂ ಚಿಂತೆಯಿಲ್ಲ. ಜಾಗ್ರತೆಯಾಗಿ ಹೋಗು" ಎಂದು ಹೇಳಿದನು.

೮. ಈ ಮಾತುಗಳನ್ನು ಕೇಳಿ ಆ ಮೂಗನು ಭಯದಿಂದ ತತ್ತರಿಸಿ ಕೋಲನ್ನು ಹಿಡಿದು ನಿರಾಹಾರನಾಗಿಯೇ ಮನೆಯನ್ನು ಬಿಟ್ಟು ಹೊರಟನು.

೯. ಅವನು ಅರಣ್ಯವನ್ನುಸೇರಿ ಅಲ್ಲಿಯ ಇಕ್ಕಟ್ಟಾದ ಪ್ರದೇಶಗಳನ್ನೂ ಪೊದೆಗಳನ್ನೂ ದಟ್ಟವಾಗಿ ಬೆಳೆದಿದ್ದ ಮರದ ಗುಂಪುಗಳನ್ನೂ ಬಹು ಸೂಕ್ಷ್ಮ ದೃಷ್ಟಿಯಿಂದ ಹುಡುಕಿನೋಡಿದನು.

೧೦–೧೧. ಎಲ್ಲಿಯೋ ಒಂದುಕಡೆ ಅವನು ಆ ದನದ ಗೊರಸಿನ ಗುರುತನ್ನು ಸ್ಫುಟವಾಗಿ ಕಂಡನು. ಅಡವಿಯನ್ನೆಲ್ಲ ತಿರುಗಿ ಬಹು ಕಷ್ಟಪಟ್ಟು ಕಡೆಗೆ ಆ ಆಕಳ ಗೊರಸಿನ ಗುರುತನ್ನು ಮಾತ್ರ ಕಂಡು ಅದನ್ನೇ ಅನುಸರಿಸಿ ಮುಂದುವರಿದು ಈ ಚಮತ್ಕಾರಪುರದ ಸುತ್ತಮುತ್ತಣ ಎಲ್ಲ ವನಗಳನ್ನೂ ಒಂದಾದ ಮೇಲೊಂದರಂತೆ ಸುತ್ತಿದನು.

ಏವಂ ಪ್ರದಕ್ಷಿಣಾದಸ್ಯ ಜಾತಾ ಪಶುದಿದೃಕ್ಷಯಾ ।
ಸ್ವಾಮಿನಸ್ಯ ಚೈವ ನಿರ್ದೇಶೇ ಪಶೋಶ್ಚಾಽಪಿ ದ್ವಿಜೋತ್ತಮಾಃ ॥ ೧೨ ॥
ಪ್ರದಕ್ಷಿಣಾಽವಸಾನೇ ಚ ಪಶುರ್ಲಬ್ಧೋಽಹಿ ತೇನ ಸಃ ।
ನಿಶಾಂತೇಽಥ ಗೃಹಂ ನೀತ್ವಾ ಸ್ವಾಮಿನೇ ವಿನಿವೇದಿತಃ ॥ ೧೩ ॥
ಚೈತ್ರೇ ಪುಣ್ಯತಮೇ ಮಾಸಿ ಕೃಷ್ಣಪಕ್ಷೇ ಚತುರ್ದಶೀಂ ।
ಕ್ಷೇತ್ರೇ ಪುಣ್ಯತಮೇ ದೇವಾಸ್ತೀರ್ಥಾನ್ಯಾಯಾಂತಿ ಸರ್ವಶಃ ॥ ೧೪ ॥
ಏವಮಜ್ಞಾನಭಾವೇನ ಕೃತಾ ತಾಭ್ಯಾಂ ಪ್ರದಕ್ಷಿಣಾ ।
ಪಶುಪಾಲಪಶುಭ್ಯಾಂ ವೈ ಸುಪುಣ್ಯೇ ತತ್ರ ವಾಸರೇ ॥ ೧೫ ॥
ನಿರಾಹಾರಸ್ಯ ಮೂಕಸ್ಯ ಸಾಹಾರಸ್ಯ ಪಶೋಸ್ತಥಾ ॥ ೧೬ ॥
ವಿನಾ ಸ್ನಾನೇನ ಭಕ್ಷ್ಯಾಚ್ಚ ದೈವಾದ್ದ್ವಿಜವರೋತ್ತಮಾಃ ।
ತತಃ ಕಾಲೇ ವ್ಯತಿಕ್ರಾಂತೇ ಕಿಯನ್ಮಾತ್ರೇ ಸ್ವಕರ್ಮತಃ ।
ಉಭೌ ಪಂಚತ್ವಮಾಪನ್ನೌ ಪೃಥಕ್ತ್ವೇನಾಯುಷಃ ಕ್ಷಯೇ ॥ ೧೭ ॥

---

೧೨-೧೩. ಹೀಗೆ ಆಕಳನ್ನು ನೋಡಲಪೇಕ್ಷೆಯುಳ್ಳವನಾಗಿ ಸುತ್ತುತ್ತಿರಲು ಆ ಪಶುಪಾಲಕನಿಗೆ ಪುರಪ್ರದಕ್ಷಿಣೆಯೇ ಆಯಿತು. ಹೀಗೆ ಪ್ರದಕ್ಷಿಣೆಯು ಮುಗಿದಮೇಲೆ ದನದ ಕೊಪ್ಪಲೊಂದರಲ್ಲಿ ಕಳೆದುಹೋಗಿದ್ದ ಆ ಆಕಳು ಅವನಿಗೆ ದೊರಕಿತು. ತರುವಾಯ ಆ ಗೋಪಾಲನು ಬೆಳಗಿನ ಝಾವದಲ್ಲಿ ಅದನ್ನು ಅದರ ಸ್ವಾಮಿಗೆ ಒಪ್ಪಿಸಿದನು.

೧೪. ಎಲೈ ವಿಪ್ರರೆ, ಚೈತ್ರ ಮಾಸದ ಕೃಷ್ಣಪಕ್ಷದ ಚತುರ್ದಶೀ ತಿಥಿಯಂದು ಪುಣ್ಯತಮವಾದ ಅಚಲೇಶ್ವರ ಕ್ಷೇತ್ರಕ್ಕೆ ಸ್ವರ್ಗಲೋಕದಿಂದ ದೇವತೆಗಳೆಲ್ಲರೂ ಅಲ್ಲದೆ ಎಲ್ಲೆಡೆಗಳಿಂದ ತೀರ್ಥಗಳೂ ಬರುತ್ತವೆ.

೧೫. ಇಂಥ ಪುಣ್ಯದಿನದಲ್ಲಿ ಕೇವಲ ಅಜ್ಞಾನಭಾವದಿಂದಲೇ ಆ ಪಶುವೂ ಆ ಪಶುಪಾಲಕನೂ ಇಬ್ಬರೂ ಚಮತ್ಕಾರಪುರದ ಪ್ರದಕ್ಷಿಣೆಯನ್ನು ಮಾಡಿದುವು.

೧೬. ಮೂಗನಾದ ಆ ದನಕಾಯುವವನು ನಿರಾಹಾರನಾಗಿದ್ದನು. ಹಸುವು ಹೊಟ್ಟೆತುಂಬ ಹುಲ್ಲು ಮೇದಿದ್ದಿತು.

೧೭. ಹೀಗೆ ಆ ದನಕಾಯುವವನಿಗೆ ಅದೃಷ್ಟವಶದಿಂದ ಯಾವ ತೀರ್ಥದಲ್ಲಿಯೂ ಸ್ನಾನವಿಲ್ಲದೆ ಇದ್ದರೂ ಭೋಜನವಿಲ್ಲದೆ ಪುರಪ್ರದಕ್ಷಿಣೆಯು ಲಭಿಸಿತು. ಕೆಲವು ಕಾಲವಾದಮೇಲೆ ಆ ಪಶುವೂ ಪಶುಪಾಲಕನೂ ತಮ್ಮ ತಮ್ಮ ಕರ್ಮಾನುಸಾರವಾಗಿ ಆಯುಸ್ಸು ತೀರಿ ಬೇರೆಬೇರೆಯಾಗಿ ಮೃತಿ ಹೊಂದಿದರು.

ತತಶ್ಚ ಪಶುಪಾಲಸ್ತು ದಶಾರ್ಣಾಽಧಿಪತೇಃ ಸುತಃ ।
ಸಂಜಾತಸ್ತತ್ಪ್ರಭಾವೇನ ಪೂರ್ವಜಾತಿಮನುಸ್ಮರನ್ ॥ ೧೮ ॥
ಸೋಽಪಿ ಜಜ್ಞೇ ಪಶುಸ್ತಸ್ಯ ಸಚಿವೋ ದ್ವಿಜಸತ್ತಮಾಃ ।
ಜಾತಿಸ್ಮರೋ ಯಥಾ ರಾಜಾ ಸರ್ವದಾ ನೃಪಸಂಮತಃ ॥ ೧೯ ॥
ಅಥಾಗತ್ಯ ಸ ರಾಜೇಂದ್ರಸ್ತೇನೈವ ಸಹ ಮಂತ್ರಿಣಾ ।
ಕೃಷ್ಣಪಕ್ಷೇ ಚತುರ್ದಶ್ಯಾಂ ಪುರಸ್ತಸ್ಯಾಃ ಪ್ರದಕ್ಷಿಣಾಂ ॥ ೨೦ ॥
ಚಕ್ರೇ ಸಂವತ್ಸರಸ್ಯಾಂತೇ ಶ್ರದ್ಧಯಾ ಪರಯಾ ಯುತಃ ।
ನಿರಾಹಾರಶ್ಚ ಮೌನೇನ ಪದಾತಿರ್ದ್ವಿಜಸತ್ತಮಾಃ ॥ ೨೧ ॥
ಏಕದಾ ತತ್ರ ಚಾಯಾತಾ ಮುನಯಃ ಸಂಶಿತವ್ರತಾಃ ।
ತೀರ್ಥೇ ಪಾಪಹರೇ ಪುಣ್ಯೇ ವಿಶ್ವಾಮಿತ್ರಸಮುದ್ಭವೇ ॥ ೨೨ ॥
ಯಾಜ್ಞವಲ್ಕ್ಯೋ ಭರದ್ವಾಜಃ ಶುನಃಶೇಪೋಽಥ ಗಾಲವಃ ।
ದೇವಲೋ ಭಾಗುರಿರ್ಧೌಮ್ಯಃ ಕಶ್ಯಪಶ್ಚ್ಯವನೋ ಭೃಗುಃ ॥ ೨೩ ॥
ತಥಾಽನ್ಯೇ ಶಂಸಿತಾತ್ಮಾನೋ ಬ್ರಹ್ಮಚರ್ಯಪರಾಯಣಾಃ ।
ತೀರ್ಥಯಾತ್ರಾಪ್ರಸಂಗೇನ ತಸ್ಮಿನ್ ಕ್ಷೇತ್ರೇ ಸಮಾಗತಾಃ ॥ ೨೪ ॥

---

೧೮. ತರುವಾಯ ಆ ಪಶುಪಾಲಕನಾದರೋ ಅಂದು ತಾನೆಸಗಿದ್ದ ಚಮತ್ಕಾರ ಪುರಪ್ರದಕ್ಷಿಣ ಪ್ರಭಾವದಿಂದ ಪೂರ್ವಜನ್ಮದ ಸ್ಮರಣೆಯುಳ್ಳವನಾಗಿ ದಶಾರ್ಣ ದೇಶದ ಅರಸನಿಗೆ ಮಗನಾಗಿ ಹುಟ್ಟಿದನು.

೧೯. ಆ ಆಕಳು ದೊರೆಯಂತೆಯೇ ಪೂರ್ವಜನ್ಮದ ಸ್ಮರಣೆಯುಳ್ಳದ್ದಾಗಿ ಆ ಅರಸನಿಗೆ ಸಮ್ಮತನಾದ ಮಂತ್ರಿಯಾಗಿ ಹುಟ್ಟಿತು.

೨೦. ಬಳಿಕ ಆ ರಾಜೇಂದ್ರನು ಆ ಮಂತ್ರಿಯೊಡಗೂಡಿ ಚೈತ್ರ ಕೃಷ್ಣ ಚತುರ್ದಶೀತಿಥಿಯಂದು ಆ ಚಮತ್ಕಾರಪಟ್ಟಣಕ್ಕೆ ಬಂದು ಪುರಪ್ರದಕ್ಷಿಣೆಯನ್ನು ಮಾಡಿದನು.

೨೧. ಹೀಗೆ ಆ ರಾಜನೂ ಮಂತ್ರಿಯೂ ಪರಮಶ್ರದ್ಧೆಯುಳ್ಳವರಾಗಿ ನಿರಾಹಾರರಾಗಿಯೇ ಮೌನವಾಗಿ ಕಾಲ್ನಡಗೆಯಿಂದ ಪ್ರತಿವರ್ಷದ ಕಡೆಯಲ್ಲಿಯೂ ಬಂದು ಚೈತ್ರ ಕೃಷ್ಣ ಚತುರ್ದಶಿಯಂದು ಪುರಪ್ರದಕ್ಷಿಣೆಯನ್ನು ಮಾಡುತ್ತಿದ್ದರು.

೨೨–೨೪. ಹೀಗಿರಲು ಒಂದಾನೊಂದು ದಿನ ವಿಶ್ವಾಮಿತ್ರನಿಂದ ಸಂಭವಿಸಿದ ಪಾಪಪರಿಹಾರಕವಾದ ಪುಣ್ಯತೀರ್ಥದಲ್ಲಿ ಸ್ನಾನವನ್ನು ಮಾಡಲು ಮಹಾವ್ರತಿಗಳಾದ ಯಾಜ್ಞವಲ್ಕ್ಯ, ಭರದ್ವಾಜ, ಶುನಶ್ಶೇಫ, ಗಾಲವ, ದೇವಲ, ಭಾಗುರಿ, ಧೌಮ್ಯ, ಕಶ್ಯಪ, ಚ್ಯವನ, ಭೃಗು ಮೊದಲಾದವರೂ ಇನ್ನೂ ಇತರ ಮಹಾತ್ಮರೂ ಬ್ರಹ್ಮಚರ್ಯನಿರತರೂ ಆದ ಮುನಿಗಳೂ ಅಲ್ಲಿಗೆ ಬಂದರು. ಅವರೆಲ್ಲರೂ ತೀರ್ಥಯಾತ್ರೆಗೋಸ್ಕರವಾಗಿಯೇ ಆ ಕ್ಷೇತ್ರಕ್ಕೆ ಬಂದರು.

ತಾನ್ ದೃಷ್ಟ್ವಾ ಸ ಮಹೀಪಾಲಃ ಪ್ರಣಿಪತ್ಯ ಕೃತಾಂಜಲಿಃ ।
ಯಥಾಜ್ಯೇಷ್ಠಂ ಯಥಾಶ್ರೇಷ್ಠಂ ಪೂಜಯಾಮಾಸ ಭಕ್ತಿತಃ ॥ ೨೫ ॥
ತತಸ್ತೇಷಾಂ ಸ ಮಧ್ಯೇ ಚ ಸನ್ನಿವಿಷ್ಟೋ ಮಹೀಪತಿಃ ।
ತಥಾಗತಃ ಸ ಭೂಪಾಲಃ ಸರ್ವೈಸ್ತೈಶ್ಚಾಽಭಿನಂದಿತಃ ॥ ೨೬ ॥
ತತಶ್ಚಕ್ರುಃ ಕಥಾ ದಿವ್ಯಾ ಮುನಯಸ್ತೇ ಮಹೀಪತೇಃ ।
ಪುರತೋ ಮುನಿಮುಖ್ಯಾನಾಂ ಚರಿತಾನಿ ಮಹಾತ್ಮನಾಂ ॥ ೨೭ ॥
ರಾಜರ್ಷೀಣಾಂ ಪುರಾಣಾನಾಂ ಧರ್ಮಶಾಸ್ತ್ರಸಮುದ್ಭವಾಃ ।
ಆನಂದಂ ತಸ್ಯ ರಾಜರ್ಷೇರ್ಜನಯಂತೋ ದ್ವಿಜೋತ್ತಮಾಃ ॥ ೨೮ ॥
ಅಥ ಕ್ವಾಽಪಿ ಕಥಾಂತೇ ಸ ಪಾರ್ಥಿವಸ್ತೈರ್ಮಹರ್ಷಿಭಿಃ ।
ಪೃಷ್ಟಃ ಕೌತೂಹಲಾವಿಷ್ಟೈರ್ದತ್ವಾ ಶ್ರೌತೀಸ್ತದಾಶಿಷಃ ॥ ೨೯ ॥
ಋಷಯ ಊಚುಃ:–
ವರ್ಷೇ ವರ್ಷೇ ಮಹೀಪಾಲ ತ್ವಮುತ್ರಾಗತ್ಯ ಯತ್ನತಃ ।
ಕರೋಷಿ ಮಂತ್ರಿಣಾ ಸಾರ್ಧಂ ಪುರಸ್ಯಾಸ್ಯ ಪ್ರದಕ್ಷಿಣಾಂ ॥ ೩೦ ॥
ಅಸ್ಮಿನ್ ಕ್ಷೇತ್ರೇ ಸುತೀರ್ಥಾನಿ ಸಂತಿ ಪಾರ್ಥಿವಸತ್ತಮ ।
ತಥಾಽನ್ಯಾನಿ ಪ್ರಸಿದ್ಧಾನಿ ದೇವತಾಯತನಾನಿ ಚ ॥ ೩೧ ॥

---

೨೫. ದಶಾರ್ಣದೇಶದ ದೊರೆಯಾದರೋ ಇವರೆಲ್ಲರನ್ನೂ ಕಂಡು ನಮಸ್ಕರಿಸಿ ಬದ್ಧಾಂಜಲಿಪುಟನಾಗಿ ಜ್ಯೇಷ್ಠಾನುಕ್ರಮದಿಂದಲೂ ಶ್ರೇಷ್ಠಾನುಕ್ರಮದಿಂದಲೂ ಭಕ್ತಿಯಿಂದ ಎಲ್ಲರನ್ನೂ ಪೂಜಿಸಿದನು.

೨೬. ತರುವಾಯ ಆ ಮುನಿಗಳೆಲ್ಲರೂ ಆ ದೊರೆಯನ್ನು ತಮ್ಮ ಮಧ್ಯದಲ್ಲಿ ಕುಳ್ಳಿರಿಸಿಕೊಂಡು ಅವನನ್ನು ಬಹುವಾಗಿ ಅಭಿನಂದಿಸಿದರು.

೨೭–೨೮. ಇದಾದ ಬಳಿಕ ಆ ಮುನಿಪುಂಗವರು ಆ ದೊರೆಯ ಮುಂಗಡೆ ಹಲವು ಮುನಿಶ್ರೇಷ್ಠರ, ಮಹಾತ್ಮರ, ರಾಜರ್ಷಿಗಳ ದಿವ್ಯಚರಿತ್ರೆಗಳನ್ನು ಪುರಾಣಗಳಲ್ಲಿಯೂ ಧರ್ಮಶಾಸ್ತ್ರಗಳಲ್ಲಿಯೂ ಬರುವ ಪುಣ್ಯಕಥೆಗಳನ್ನೂ ಹೇಳಿ ಅವನನ್ನು ಸಂತೋಷಗೊಳಿಸಿದರು.

೨೯. ಹೀಗೆ ಕಥೆಗಳನ್ನು ಹೇಳಿದ ತರುವಾಯ ಆ ಮುನಿಗಳೆಲ್ಲರೂ ಆ ದಶಾರ್ಣರಾಜನನ್ನು ವೇದ ಮಂತ್ರಗಳಿಂದ ಆಶೀರ್ವದಿಸಿ ಕುತೂಹಲಾವಿಷ್ಟರಾಗಿ ಅವನನ್ನು ಪ್ರಶ್ನಿಸಿದರು.

೩೦. ಋಷಿಗಳು ಕೇಳುತ್ತಾರೆ:—ಎಲೈ ಮಹೀಪಾಲನೆ, ನೀನು ಪ್ರತಿ ವರ್ಷವೂ ಮಂತ್ರಿಯೊಡನೆ ಪ್ರಯತ್ನಪೂರ್ಣವಾಗಿ ಇಲ್ಲಿಗೆ ಬಂದು ಪುರಪ್ರದಕ್ಷಿಣೆಯನ್ನು ಮಾಡುತ್ತಿರುವೆಯಷ್ಟೆ.

೩೧–೩೨. ಈ ಕ್ಷೇತ್ರದಲ್ಲಿ ಪುಣ್ಯತೀರ್ಥಗಳು ಬಹಳವಾಗಿರುವುವು. ಹಾಗೆಯೇ ಪ್ರಸಿದ್ಧವಾದ ಅನೇಕ ದೇವಾಲಯಗಳೂ ಇವೆ. ಆದರೆ ನಿನಗೆ

ಆದರಸ್ತೇಷು ವೈರಾಜನ್ನಾಽಸ್ತಿ ಸ್ವಲ್ಪೋಽಪಿ ಕರ್ಹಿಚಿತ್ ।
ಏತನ್ನಃ ಕೌತುಕಂ ಜಾತಂ ನಚೇದ್ಗುಹ್ಯಂ ಪ್ರಕೀರ್ತಯ ॥ ೩೨ ॥

ಸೂತ ಉವಾಚ:—

ತೇಷಾಂ ತದ್ವಚನಂ ಶ್ರುತ್ವಾ ವಿನಯಾವನತಃ ಸ್ಥಿತಃ ।
ಸ ಪ್ರೋವಾಚ ವಚೋ ಭೂಪಃ ಕಿಂಚಿದ್ವ್ರೀಡಾಸಮನ್ವಿತಃ ॥ ೩೩ ॥
ಯತ್ಪೃಷ್ಟೋಽಸ್ಮಿ ದ್ವಿಜಶ್ರೇಷ್ಠಾ ಯುಷ್ಮಾಭಿಃ ಸಾಂಪ್ರತಂ ಮಮ ।
ತದ್ಗುಹ್ಯಂ ನ ಮಯಾಽಽಖ್ಯಾತಂ ಕಸ್ಯಚಿದ್ಧರಣೀತಲೇ ॥ ೩೪ ॥
ತಥಾಪಿ ಹಿ ಪ್ರಕರ್ತವ್ಯಂ ಯುಷ್ಮಾಕಂ ಸತ್ಯಮೇವ ಹಿ ।
ಅಪಿ ಗುಹ್ಯತಮಂ ಚೇತ್ಸ್ಯಾಚ್ಛೃಣ್ವಂತು ಮುನಿಸತ್ತಮಾಃ ॥ ೩೫ ॥

ಸೂತ ಉವಾಚ:—

ತತಃ ಸ ಕಥಯಾಮಾಸ ಪೂರ್ವಜಾತಿಸಮುದ್ಭವಂ ।
ವೃತ್ತಾಂತಂ ತನ್ಮುನೀಂದ್ರಾಣಾಂ ತೇಷಾಂ ಬ್ರಾಹ್ಮಣಸತ್ತಮಾಃ ॥ ೩೬ ॥
ಯಥಾ ನಷ್ಟಃ ಪಶುಸ್ತಸ್ಯ ಕೃತಾ ಯದ್ವದವೇಕ್ಷಣಾ ।
ಯಥಾ ಪ್ರದಕ್ಷಿಣಾ ಜಾತಾ ಚಮತ್ಕಾರಪುರಸ್ಯತು ॥ ೩೭ ॥

---

ಅವರಲ್ಲಿ ಸ್ವಲ್ಪವೂ ಆದರವೇ ಇರುವುದಿಲ್ಲ. ಇದು ನಮಗೆ ಆಶ್ಚರ್ಯವಾಗಿದೆ. ರಹಸ್ಯವಲ್ಲದಿದ್ದರೆ ಈ ವಿಷಯವನ್ನು ನಮಗೆ ತಿಳಿಸಬೇಕು.

೩೩. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಆ ಮುನಿಗಳ ಮಾತನ್ನು ಕೇಳಿ ದಶಾರ್ಣರಾಜನು ವಿನಯದಿಂದ ತಲೆಬಾಗಿ ನಿಂತು ಸ್ವಲ್ಪ ನಾಚಿಕೆಯೊಡಗೂಡಿ ಈ ರೀತಿ ಹೇಳಿದನು.

೩೪. "ಎಲೈ ದ್ವಿಜಶ್ರೇಷ್ಠರೆ, ನನ್ನನ್ನು ನೀವು ಈಗ ಪ್ರಶ್ನಿಸಿದ ವಿಷಯವು ದಿಟವಾಗಿಯೂ ರಹಸ್ಯವೇ. ಅದನ್ನು ನಾನು ಈ ಭೂಮಂಡಲದಲ್ಲಿ ಯಾರಿಗೂ ಹೇಳಿರುವುದಿಲ್ಲ.

೩೫. ಆದರೂ ಮುನಿಪುಂಗವರಾದ ನೀವು ಕೇಳಿದ ಮೇಲೆ ಸತ್ಯವನ್ನು ಮರೆಸಲಾಗುವುದಿಲ್ಲ. ಅದು ಗುಹ್ಯತಮವೇ ಆಗಿದ್ದರೂ ಅದನ್ನು ತಮ್ಮಲ್ಲಿ ಅರಿಕೆ ಮಾಡುತ್ತೇನೆ, ಕೇಳಿರಿ."

೩೬. ಸೂತನು ಹೇಳುತ್ತಾನೆ:—ಎಲೈ ದ್ವಿಜೋತ್ತಮರೆ, ತರುವಾಯ ಆ ದಶಾರ್ಣರಾಜನು ತನ್ನ ಪೂರ್ವಜನ್ಮದ ಕಥೆಯೆಲ್ಲವನ್ನೂ ಆ ಮುನೀಂದ್ರರಿಗೆ ಹೇಳಿದನು.

೩೭–೩೮. ಪಶುವು ಕಳೆದುಹೋದದ್ದು, ಅದನ್ನು ಹುಡುಕಲೋಸುಗ ತಾನು ತಿರುಗಿ ಆ ತಿರುಗಾಟವೇ ಚಮತ್ಕಾರಪುರ ಪ್ರದಕ್ಷಿಣವಾಗಿ ಪರಿಣಮಿಸಿದ್ದು, ಆ ಪ್ರಭಾವದಿಂದಲೇ ರಾಜ್ಯೈಶ್ವರ್ಯ ಪ್ರಾಪ್ತಿಯಾದದ್ದು, ಪೂರ್ವಜನ್ಮದ ಸ್ಮರಣೆ

ಜಾತಿಸ್ಮೃತಿರ್ಯಥಾ ಜಾತಾ ಪ್ರಾಕ್ತನೀ ತತ್ಪ್ರಭಾವತಃ ।
ರಾಜ್ಯಪ್ರಾಪ್ತಿರ್ವಿಭೂತಿಶ್ಚ ತಥೇಷ್ಟಾಪ್ತಿಃ ಪದೇಪದೇ । ॥ ೩೮ ॥
ತಚ್ಛ್ರುತ್ವಾ ಮುನಯಃ ಸರ್ವೇ ಪ್ರಹೃಷ್ಟಾಃ ಪೃಥಿವೀಪತೇಃ ।
ಆಶೀರ್ವಾದಾನ್ ಬಹೂನ್ ದತ್ವಾ ಸಾಧುಸಾಧ್ವಿತಿ ಚಾಬ್ರುವನ್ ॥ ೩೯ ॥
ಸಮುತ್ಥಾಯ ತತಶ್ಚಕ್ರುಃ ಪುರಸ್ತಸ್ಯಾಃ ಪ್ರದಕ್ಷಿಣಾಂ ।
ಯಥೋಕ್ತವಿಧಿನಾ ಸರ್ವೇ ಶ್ರದ್ಧಯಾ ಪರಯಾ ಯುತಾಃ ॥ ೪೦ ॥
ಗತಾಶ್ಚ ಪರಮಾಂ ಸಿದ್ಧಿಂ ತತ್ಪ್ರಭಾವಾತ್ಸುದುರ್ಲಭಾಂ ।
ಜಪಯಜ್ಞಪ್ರದಾನೈರ್ಯಾ ತೀರ್ಥಸೇವಾದಿಕೈರಪಿ ॥ ೪೧ ॥
ಸೋಽಪಿ ರಾಜಾ ಸ ಮಂತ್ರೀ ಚ ಜಾತೌ ವೈಮಾನಿಕೌ ಸುರೌ ।
ಅದ್ಯಾಽಪಿ ತೌ ಹಿ ದೃಶ್ಯೇತೇ ತಾರಾರೂಪೌ ನಭಸ್ತಲೇ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಮತ್ಕಾರಪುರಪ್ರದಕ್ಷಿಣಾಮಾಹಾತ್ಮ್ಯವರ್ಣನಂ"
ನಾಮ ಚತುರ್ದಶೋಽಧ್ಯಾಯಃ

---

ಯಿರುವುದು, ಅಡಿಗಡಿಗೂ ಇಷ್ಟಾರ್ಥಪ್ರಾಪ್ತಿಯಾಗುತ್ತಿರುವುದು ಮೊದಲಾದ ಎಲ್ಲ ವೃತ್ತಾಂತವನ್ನೂ ತಿಳಿಸಿದನು.

೩೯. ಇದೆಲ್ಲವನ್ನೂ ಕೇಳಿ ಆ ಮುನಿಗಳೆಲ್ಲರೂ ಬಹಳವಾಗಿ ಸಂತೋಷಗೊಂಡ ಆ ಅರಸನನ್ನು ಬಹುವಾಗಿ ಹರಸಿ, ಭಲೆ ಭಲೆ ಎಂದು ಶ್ಲಾಘಿಸಿದರು.

೪೦. ಇದಾದ ತರುವಾಯ ಅವರೆಲ್ಲರೂ ಎದ್ದು ಶಾಸ್ತ್ರೋಕ್ತವಿಧಿಯನ್ನು ಅನುಸರಿಸಿ ಪರಮಶ್ರದ್ಧೆಯಿಂದ ಪುರಪ್ರದಕ್ಷಿಣೆಯನ್ನು ಮಾಡಿದರು.

೪೧. ಈ ಪುರಪ್ರದಕ್ಷಿಣೆಯ ಪ್ರಭಾವದಿಂದ ಅವರೆಲ್ಲರೂ ಜಪತಪ ಯಜ್ಞದಾನ ಪುಣ್ಯತೀರ್ಥಗಳ ಸೇವನೆ ಮೊದಲಾದುವುಗಳಿಂದ ಯಾವ ಸಿದ್ಧಿಯನ್ನು ಪಡೆಯಬಹುದೋ ಅದಕ್ಕಿಂತಲೂ ಉತ್ತಮವಾದ ಸಿದ್ಧಿಯನ್ನೇ ಪಡೆದರು.

೪೨. ಆ ದಶಾರ್ಣರಾಜನೂ ಅವನ ಮಂತ್ರಿಯೂ ವಿಮಾನದಲ್ಲಿ ಸಂಚರಿಸುವ ದೇವತಾಮೂರ್ತಿಗಳಾಗಿ ಇಂದಿಗೂ ನಭೋಮಂಡಲದಲ್ಲಿ ನಕ್ಷತ್ರರೂಪದಿಂದ ಕಾಣುತ್ತಿದ್ದಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಮತ್ಕಾರಪುರಪ್ರದಕ್ಷಿಣಮಾಹಾತ್ಮ್ಯವರ್ಣನ"ವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಚಮತ್ಕಾರಪುರಪ್ರದಕ್ಷಿಣಾಮಾಹಾತ್ಮ್ಯವರ್ಣನಂ

**ಋಷಯ ಊಚುಃ:—**

ಕಿಮೇತತ್ಕಾರಣಂ ಸೂತ ಯೇನೈತತ್ಪ್ರಾಪ್ಯತೇ ನೃಭಿಃ ।
ಶ್ರೇಯಃ ಪರಂ ಪುರಸ್ಯಾಽಸ್ಯ ಸಕೃತ್ಕೃತ್ವಾ ಪ್ರದಕ್ಷಿಣಾಂ ॥ ೧ ॥
ಏತನ್ನಃ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮತೇ ।
ಅತ್ರ ಕೌತೂಹಲಂ ಜಾತಂ ಸರ್ವಂ ತ್ವಂ ವೇತ್ಸ್ಯಶೇಷತಃ ॥ ೨ ॥

**ಸೂತ ಉವಾಚ:—**

ರಕ್ತಶೃಂಗ ಇತಿಖ್ಯಾತೋ ಯಃ ಸ ಪರ್ವತಸತ್ತಮಃ ।
ತತ್ಪ್ರಭಾವಾದಿಹ ಶ್ರೇಯೋ ಲಭ್ಯತೇ ದ್ವಿಜಸತ್ತಮಾಃ ॥ ೩ ॥
ತತ್ರ ಕೃಷ್ಣ ಚತುರ್ದಶ್ಯಾಂ ಚೈತ್ರಮಾಸೇ ಸದೈವ ಹಿ ।
ಸಮಾಶ್ರಯಂ ಪ್ರಕುರ್ವಂತಿ ಬ್ರಹ್ಮವಿಷ್ಣುಶಿವಾದಯಃ ॥ ೪ ॥
ಸರ್ವೇ ದೇವಾಶ್ಚ ತೀರ್ಥಾನಿ ಸರ್ವಾಣ್ಯಾಯತನಾನಿ ಚ ।
ತಥಾ ನದ್ಯಃ ಸಮುದ್ರಾಶ್ಚ ಯಚ್ಚಾಽನ್ಯದಪಿ ಪಾವನಂ ॥ ೫ ॥

---

### ಕನ್ನಡದ ಅನುವಾದ

#### ಚಮತ್ಕಾರಪುರಪ್ರದಕ್ಷಿಣಮಾಹಾತ್ಮ್ಯವರ್ಣನ

೧-೨. ಋಷಿಗಳು ಕೇಳುತ್ತಾರೆ:—ಅಯ್ಯಾ ಸೂತಪುರಾಣಿಕನೆ, ಮಾನವರು ಒಮ್ಮೆಮಾತ್ರವೇ ಈ ಚಮತ್ಕಾರಪುರದ ಪ್ರದಕ್ಷಿಣೆಯನ್ನುಮಾಡಿ ಉತ್ತಮೋತ್ತಮವಾದ ಶ್ರೇಯಸ್ಸನ್ನು ಪಡೆಯುತ್ತಿರುವರಷ್ಟೆ. ಇದಕ್ಕೆ ಕಾರಣವೇನು? ಎಲೈ ಮಹಾಮತಿಯೆ, ಈ ಎಲ್ಲ ವಿಚಾರಗಳನ್ನೂ ನಮಗೆ ವಿಸ್ತಾರವಾಗಿ ತಿಳಿಯಹೇಳು. ನೀನು ಈ ವಿಷಯಗಳೆಲ್ಲವನ್ನೂ ವಿಶೇಷವಾಗಿ ತಿಳಿದಿರುತ್ತೀಯೆ. ನಮಗೂ ಇವುಗಳನ್ನು ಕೇಳಲು ಕುತೂಹಲವುಂಟಾಗಿದೆ.

೩. ಸೂತನು ಹೇಳುತ್ತಾನೆ:—ಅಯ್ಯಾ ಬ್ರಾಹ್ಮಣಶ್ರೇಷ್ಠರೆ, ಭೂಲೋಕದಲ್ಲಿ ಯಾವ ಪರ್ವತಶ್ರೇಷ್ಠವು ರಕ್ತಶೃಂಗವೆಂದು ಪ್ರಸಿದ್ಧವಾಗಿರುವುದೋ ಅದರ ಪ್ರಭಾವದಿಂದಲೇ ಸರ್ವರಿಗೂ ಶ್ರೇಯಸ್ಸು ದೊರೆಯುವುದು.

೪-೬. ಆ ಪರ್ವತದಲ್ಲಿ ಚೈತ್ರಮಾಸದ ಕೃಷ್ಣ ಚತುರ್ದಶೀ ದಿನದಲ್ಲಿ ಬ್ರಹ್ಮ ವಿಷ್ಣು ಶಿವಾದಿ ಸಕಲ ದೇವತೆಗಳೂ ಸರ್ವಕಾಲದಲ್ಲಿಯೂ ನೆಲಸಿರುತ್ತಾರೆ. ಸಮಸ್ತ ದೇವತೆಗಳೂ ಸಕಲ ತೀರ್ಥಗಳೂ ಪುಣ್ಯಾಯತನಗಳೂ ಪವಿತ್ರ ನದಿಗಳೂ ಸಪ್ತ ಸಮುದ್ರಗಳೇ ಅಲ್ಲದೆ ಜಗತ್ತಿನಲ್ಲೇ ಪಾವನವಾದ ಎಲ್ಲವೂ ಅಂದಿನ

ತತ್ಸರ್ವಂ ವಾಸರೇ ತಸ್ಮಿನ್ ಸಾನ್ನಿಧ್ಯಂ ತತ್ರ ಪರ್ವತೇ ।
ರಕ್ತಶೃಂಗೇ ಕರೋತ್ಯೇವ ತಸ್ಯಾದೇಶಾಚ್ಛತಕ್ರತೋಃ ॥ ೬ ॥
ಯದೇಂದ್ರೇಣ ಸಮಾನೀತಸ್ತಸ್ಮಿನ್ ದೇಶೇ ಸ ಪರ್ವತಃ ।
ತದಾ ಪ್ರೋಕ್ತೋ ದಿನೇ ದೇವಾಃ ಸಮೇಷ್ಯಂತಿ ತವಾಂತಿಕಂ ॥ ೭ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಚಮತ್ಕಾರಪುರಂ ತಸ್ಯ ಮುಖ್ಯಶೃಂಗೇ ವ್ಯವಸ್ಥಿತಂ ।
ತೇನ ತತ್ಪ್ರಾಪ್ಯತೇ ಶ್ರೇಯಃ ಸಕೃತ್ಕೃತ್ವಾ ಪ್ರದಕ್ಷಿಣಾಂ ॥ ೮ ॥
ತಸ್ಮಿನ್ ದಿನೇ ಚ ಯತ್ಕಿಂಚಿದ್ದೀಯತೇ ದಾನಮಾದರಾತ್ ।
ತದಕ್ಷಯಂ ಭವೇದ್ವಿಪ್ರಾ ಯಾವಚ್ಚಂದ್ರದಿವಾಕರೌ ॥ ೯ ॥
ಪರಮಾನ್ನೇನ ಯಃ ಕಶ್ಚಿದ್ಬ್ರಾಹ್ಮಣಾನ್ ಭೋಜಯೇನ್ನರಃ ।
ಪಿತ್ರೂನುದ್ದಿಶ್ಯ ಸದ್ಭಕ್ತ್ಯಾ ಸ ಗಯಾಫಲಮಾಪ್ನುಯಾತ್ ॥ ೧೦ ॥
ಯೋ ಯಂ ಕಾಮಮಭಿಧ್ಯಾಯನ್ಕುರುತೇಽತ್ರ ಪ್ರದಕ್ಷಿಣಾಂ ।
ಸ ತಂ ಕಾಮಮವಾಪ್ನೋತಿ ನಿಷ್ಕಾಮೋ ಮುಕ್ತಿಮಾನ್ ಭವೇತ್॥ ೧೧ ॥

---

ದಿನ ಆ ರಕ್ತಶೃಂಗಗಿರಿಯಲ್ಲಿ ಸಾನ್ನಿಧ್ಯವನ್ನು ತಳೆಯುತ್ತವೆ. ಈ ವಿಧವಾದ ಪವಿತ್ರ ತೀರ್ಥಾದಿಗಳ ಸಾನ್ನಿಧ್ಯವು ಮಹೇಂದ್ರನ ಆಜ್ಞೆಯಿಂದಲೆ ಅಲ್ಲಿ ಉಂಟಾಗಿರುವುದು.

೭–೯. ಪೂರ್ವದಲ್ಲಿ ದೇವೇಂದ್ರನು ಈ ರಕ್ತಶೃಂಗಗಿರಿಯನ್ನು ಹಿಮವತ್ಪ್ರಾಂತದಿಂದ ನಾಗಬಿಲದ ಪೂರಣಕ್ಕಾಗಿ ಕರೆತಂದುದು ಚೈತ್ರ ಕೃಷ್ಣ ಚತುರ್ದಶೀ ದಿನದಲ್ಲಿಯೆ. ಅಂದೇ ಆತನು "ಅಯ್ಯಾ ಪರ್ವತರಾಜನೆ, ಸಮಸ್ತ ದೇವತೆಗಳೂ ನಿನ್ನಲ್ಲಿಗೆ ಬರುವರಲ್ಲದೆ ಪೃಥಿವಿಯಲ್ಲಿರುವ ತೀರ್ಥಗಳೂ ಪುಣ್ಯಾಯತನಗಳೂ ಬಂದು ನೆಲಸುತ್ತವೆ" ಎಂದು ಹೇಳಿದ್ದನು. ಚಮತ್ಕಾರಪುರವಾದರೋ, ಆ ಪರ್ವತದ ಮುಖ್ಯ ಶಿಖರದಲ್ಲಿ ವ್ಯವಸ್ಥಿತವಾಗಿರುವುದು. ಈ ಕಾರಣದಿಂದಲೆ ಮಾನವನು ಒಮ್ಮೆ ಆ ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿದಲ್ಲಿ ಶ್ರೇಯಸ್ಸನ್ನು ಪಡೆಯುತ್ತಾನೆ. ಎಲೈ ವಿಪ್ರರೆ, ಆ ಚೈತ್ರ ಕೃಷ್ಣ ಚತುರ್ದಶಿಯಲ್ಲಿ ರಕ್ತಶೃಂಗ ಪರ್ವತದಲ್ಲಿ ಆದರಪೂರ್ವಕವಾಗಿ ಕೊಟ್ಟ ಅಲ್ಪ ಸ್ವಲ್ಪ ದಾನವೂ ಸೂರ್ಯ ಚಂದ್ರರಿರುವವರೆಗೂ ಅಕ್ಷಯವಾಗಿರುತ್ತದೆ.

೧೦. ಯಾವ ಮಾನವನು ಪಿತೃಗಳನ್ನುದ್ದೇಶಿಸಿ ಶ್ರದ್ಧಾಭಕ್ತಿಗಳಿಂದ ಬ್ರಾಹ್ಮಣರಿಗೆ ಪಂಚಭಕ್ಷ್ಯ ಪರಮಾನ್ನಗಳಿಂದ ಸಮಾರಾಧನೆ ಮಾಡುವನೋ ಅವನು ಗಯಾಶ್ರಾದ್ಧದ ಫಲವನ್ನು ಪಡೆಯುತ್ತಾನೆ.

೧೧. ಯಾವನು ಯಾವ ಕಾಮನೆಯನ್ನು ಬಯಸಿ ಈ ಗಿರಿಯ ಪ್ರದಕ್ಷಿಣವನ್ನು ಮಾಡಿದರೂ ಆ ಕಾಮನೆಯು ಈಡೇರುವುದಲ್ಲದೆ ಮಾನವನು ನಿಷ್ಕಾಮನಾಗಿ ಪ್ರದಕ್ಷಿಣೆಯನ್ನು ಮಾಡಿದುದಾದರೆ ಮುಕ್ತಿಯನ್ನೇ ಪಡೆಯುತ್ತಾನೆ.

ಯಸ್ತು ಸೋಪಸ್ಕರಾಂ ಧೇನುಂ ಪ್ರದದ್ಯಾದ್ಬ್ರಾಹ್ಮಣೋತ್ತಮೇ ।
ಸಂಪೂರ್ಣಪೃಥಿವೀದಾನಫಲಮಾಪ್ನೋತಿ ಪುಷ್ಕಲಂ ॥ ೧೨ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಪ್ರದಕ್ಷಿಣಾಕೃತಂ ಶ್ರೇಯೋ ಯಥಾ ಸಂಪ್ರಾಪ್ಯತೇ ನೃಭಿಃ ॥ ೧೩ ॥
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಾ ತಸ್ಯ ಪ್ರದಕ್ಷಿಣಾ ।
ಪುರಸ್ಯ ಚೈತ್ರಕೃಷ್ಣಾಯಾಂ ಚತುರ್ದಶ್ಯಾಂ ಸಮಾಹಿತೈಃ ॥ ೧೪ ॥
ಉಪವಾಸಪರೈಃ ಶಾಂತೈರ್ಮೌನವ್ರತಪರಾಯಣೈಃ ।
ಶುಚಿಭಿಃ ಶುಕ್ಲವಸ್ತ್ರೈಶ್ಚ ರಾಗದ್ವೇಷ ವಿವರ್ಜಿತೈಃ ॥ ೧೫ ॥
ಮೂಕತ್ವಾತ್ಪಶುಪಾಲಸ್ಯ ಮೌನಂ ಜಾತಂ ದ್ವಿಜೋತ್ತಮಾಃ ।
ಪಶೋರವಾಚಕತ್ವಾಚ್ಚ ಹ್ಯನಯೋಃ ಶ್ರದ್ಧಯಾ ವಿನಾ ॥ ೧೬ ॥
ಉಪವಾಸಶ್ಚ ಸಂಜಾತಃ ಪಶುಪಾಲಸ್ಯ ತಸ್ಯ ಚ ।
ಭಯೇನ ಪಶುಸಕ್ತಸ್ಯ ಸ್ವಾಮಿನಃ ಶ್ರದ್ಧಯಾ ನ ತು ॥ ೧೭ ॥

---

೧೨. ಯಾವನು ಇಲ್ಲಿ ಸೋಪಸ್ಕರವಾಗಿ ಬ್ರಾಹ್ಮಣನಿಗೆ ಗೋದಾನವನ್ನು ಮಾಡುವನೋ ಅವನು ಸಂಪೂರ್ಣ ಪೃಥಿವೀ ದಾನದಿಂದ ಲಭಿಸುವ ಮಹತ್ಫಲವನ್ನು ಹೊಂದುತ್ತಾನೆ.

೧೩–೧೪. ಅಯ್ಯಾ ದ್ವಿಜೋತ್ತಮರೆ, ನೀವು ಕೇಳಿದ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿದ್ದೇನೆ. ರಕ್ತಶೃಂಗಪರ್ವತದ ಪ್ರದಕ್ಷಿಣೆಯಿಂದ ಲಭಿಸುವ ಶ್ರೇಯಸ್ಸಿನ ವಿಷಯವನ್ನೂ ನಿಮಗೆ ತಿಳಿಸಿದ್ದೇನೆ. ಆದುದರಿಂದ ಮಾನವರು ಚೈತ್ರ ಕೃಷ್ಣ ಚತುರ್ದಶಿಯ ದಿನದಂದು ಸರ್ವ ಪ್ರಯತ್ನದಿಂದಲೂ ಈ ಗಿರಿಗೆ ಪ್ರದಕ್ಷಿಣೆಯನ್ನು ಮಾಡತಕ್ಕದ್ದು.

೧೫. ಹೀಗೆ ಪ್ರದಕ್ಷಿಣೆ ಮಾಡುವವರು ಉಪವಾಸವಿದ್ದು ಶಾಂತಮನಸ್ಕರಾಗಿ ಮೌನವ್ರತವನ್ನು ತಳೆದು ಶುಚಿಗಳೂ ಶುಕ್ಲ ವಸ್ತ್ರಧರರೂ ಆಗಿ ರಾಗದ್ವೇಷಗಳನ್ನು ಬಿಟ್ಟಿರಬೇಕು.

೧೬–೧೭. ಆ ಗೋಪಾಲನು ಮೂಗನೇ ಆಗಿದ್ದುದರಿಂದ ಆಕಸ್ಮಿಕವಾಗಿ ಸಂಭವಿಸಿದ ಪ್ರದಕ್ಷಿಣೆಯ ಸಮಯದಲ್ಲಿ ಅವನಿಗೆ ಮೌನವ್ರತವು ಲಭಿಸಿತಲ್ಲದೆ ಆ ಪಶುವೂ ಮಾತನಾಡದುದಾದುದರಿಂದ ಯಾವ ಶ್ರದ್ಧೆಯೂ ಇಲ್ಲದೆ ಅದಕ್ಕೂ ಮೌನವು ಸಿದ್ಧಿಸಿತು. ಸ್ವಾಮಿಯಲ್ಲಿನ ಭಕ್ತಿಯಿಂದ ಪಶುವನ್ನು ಹುಡುಕುವುದರಲ್ಲಿ ಮಾತ್ರವೇ ಆಸಕ್ತನಾಗಿದ್ದ ಆ ಪಶುಪಾಲಕನಿಗೆ ಉಪವಾಸವು ಸಹಜವಾಗಿ ಉಂಟಾಯಿತಲ್ಲದೆ ಶ್ರದ್ಧೆಯಿಂದಲ್ಲ. ಪಶುವನ್ನು ಹುಡುಕಿಕೊಂಡು ಹೋದ ಸಂದರ್ಭದಲ್ಲಿ ಅವನಿಗೆ ಗಿರಿ ಪ್ರದಕ್ಷಿಣೆಯಾಯಿತಲ್ಲದೆ ಉದ್ದಿಶ್ಯಪೂರ್ವಕವಾಗಿ

ಸಂಜಾತಾ ಭ್ರಮಮಾಣಸ್ಯ ಪಶೋರರ್ಥೇ ಪ್ರದಕ್ಷಿಣಾ ।
ತಥಾಽಪಿ ತಾದೃಶಂ ಜಾತಮುಭಾಭ್ಯಾಂ ಫಲಮುತ್ತಮಂ ॥ ೧೮ ॥
ಯಃ ಪುನಃ ಶ್ರದ್ಧಯೋಪೇತ ಉಪವಾಸ ಪರಾಯಣಃ ।
ಮೌನೇನ ಕುರುತೇ ಮರ್ತ್ಯಃ ಪುರಸ್ಯಾಽಸ್ಯ ಪ್ರದಕ್ಷಿಣಾಂ ।
ದಶಾರ್ಣಾಽಧಿಪವತ್ಸ್ವರ್ಗೇ ಸ ವಿಮಾನಚರೋ ಭವೇತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಮತ್ಕಾರಪುರಪ್ರದಕ್ಷಿಣಾಮಾಹಾತ್ಮ್ಯವರ್ಣನಂ"
ನಾಮ ಪಂಚದಶೋಽಧ್ಯಾಯಃ

---

ಅಲ್ಲ. ಹೀಗಾದರೂ ಆ ಪಶುಪಾಲಕನಿಗೂ ಪಶುವಿಗೂ ಇಬ್ಬರಿಗೂ ಶ್ರೇಯಸ್ಸು ಲಭಿಸಿತು. ಉತ್ತಮವಾದ ಫಲವೂ ದೊರಕಿತು.

೧೯. ಎಂದಮೇಲೆ ಮಾನವನು ಶ್ರದ್ಧೆಯೊಡಗೂಡಿ ಉಪವಾಸವಿದ್ದು ಮೌನವನ್ನವಲಂಬಿಸಿ ಈ ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿದಲ್ಲಿ ದಶಾರ್ಣ ದೇಶದ ದೊರೆಯಂತೆಯೇ ಸ್ವರ್ಗವನ್ನು ಸೇರಿ ದೇವ ವಿಮಾನಗಳಲ್ಲಿ ಸಂಚರಿಸುವವ ನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಮತ್ಕಾರಪುರಪ್ರದಕ್ಷಿಣಮಾಹಾತ್ಮ್ಯವರ್ಣನ"ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷೋಡಶೋಽಧ್ಯಾಯಃ

### ರಕ್ತಶೃಂಗಸಾನ್ನಿಧ್ಯಸೇವನಫಲವರ್ಣನಂ

ಸೂತ ಉವಾಚ :—

ತಸ್ಮಾತ್ಸರ್ವಪ್ರಯತ್ನೇನ ತ್ಯಕ್ತ್ವಾಽನ್ಯಾ ನಿಖಿಲಾಃ ಕ್ರಿಯಾಃ ।
ರಕ್ತಶೃಂಗಸ್ಯ ಸಾನ್ನಿಧ್ಯಂ ಸೇವನೀಯಂ ವಿಚಕ್ಷಣೈಃ ॥ ೧ ॥
ಕಿಂ ದಾನೈಃ ಕಿಂ ಕ್ರಿಯಾಕಾಂಡೈಃ ಕಿಂ ಯಜ್ಞೈಃ ಕಿಂ ವ್ರತೈರಪಿ ।
ತತ್ಕ್ಷೇತ್ರಂ ಸೇವಯೇದ್ಭಕ್ತ್ಯಾ ಹಾಟಕೇಶ್ವರಸಂಭವಂ ॥ ೨ ॥
ಅಗ್ನಿಷ್ಟೋಮಾದಯೋ ಯಜ್ಞಾಃ ಸರ್ವೇ ಸಂಪೂರ್ಣದಕ್ಷಿಣಾಃ ।
ತಸ್ಯ ಕ್ಷೇತ್ರಸ್ಯ ಪುರತಃ ಕಲಾಂ ನಾರ್ಹಂತಿ ಷೋಡಶೀಂ ॥ ೩ ॥
ಚಾಂದ್ರಾಯಣಾನಿ ಕೃಚ್ಛ್ರಾಣಿ ತಥಾ ಸಾಂತಪನಾನಿ ಚ ।
ತಸ್ಯ ಕ್ಷೇತ್ರಸ್ಯ ಪುರತಃ ಕಲಾಂ ನಾರ್ಹಂತಿ ಷೋಡಶೀಂ ॥ ೪ ॥
ಪ್ರಭಾಸಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ತಸ್ಯ ಕ್ಷೇತ್ರಸ್ಯ ಪುರತಃ ಕಲಾಂ ನಾರ್ಹಂತಿ ಷೋಡಶೀಂ ॥ ೫ ॥
ಭೂಮಿದಾನಾನಿ ಸರ್ವಾಣಿ ಧರ್ಮಾಃ ಸರ್ವೇ ದಯಾದಿಕಾಃ ।
ತಸ್ಯ ಕ್ಷೇತ್ರಸ್ಯ ಪುರತಃ ಕಲಾಂ ನಾರ್ಹಂತಿ ಷೋಡಶೀಂ ॥ ೬ ॥

---

## ಕನ್ನಡದ ಅನುವಾದ

### ರಕ್ತಶೃಂಗ ಸಾನ್ನಿಧ್ಯಸೇವನಫಲವರ್ಣನ

೧–೨. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಈ ಹಿಂದೆ ಹೇಳಿದ ಉತ್ತಮ ಫಲಗಳ ಸಲುವಾಗಿ ಮಾನವನು ಇತರ ಎಲ್ಲ ಸತ್ಕ್ರಿಯೆಗಳನ್ನೂ ತೊರೆದು, ವಿಚಕ್ಷಣನಾಗಿ ರಕ್ತಶೃಂಗಪರ್ವತದ ಸಾನ್ನಿಧ್ಯವನ್ನು ಸೇವಿಸತಕ್ಕದ್ದು. ದಾನಗಳಿಂದಲೂ ಕ್ರಿಯಾಕಾಂಡಗಳಿಂದಲೂ ಯಜ್ಞಗಳಿಂದಲೂ ವಿವಿಧವ್ರತಗಳಿಂದಲೂ ಏನು ಪ್ರಯೋಜನ? ಹಾಟಕೇಶ್ವರ ಸಂಭವವೆನಿಸಿದ ರಕ್ತಶೃಂಗ ಕ್ಷೇತ್ರವನ್ನು ಭಕ್ತಿಯಿಂದ ಸೇವಿಸಿದರೆ ಸಾಕು.

೩–೬. ಸಂಪೂರ್ಣ ದಕ್ಷಿಣೆಯುಳ್ಳ ಅಗ್ನಿಷ್ಟೋಮಾದಿ ಯಜ್ಞಗಳೆಲ್ಲವೂ ರಕ್ತಶೃಂಗಕ್ಷೇತ್ರದ ಹದಿನಾರನೆಯ ಒಂದು ಕಳೆಗೂ ಸಮನಲ್ಲ. ಬಹು ಕಷ್ಟಕರವಾದ ಚಾಂದ್ರಾಯಣ ವ್ರತಗಳೂ ಅಂತೆಯೇ ಸಾಂತಪನಾದಿ ವ್ರತಗಳೂ ಆ ಪರ್ವತದ ಮುಂಗಡೆ ಹದಿನಾರನೆಯ ಒಂದು ಭಾಗದಷ್ಟು ಮಾಹಾತ್ಮ್ಯವನ್ನೂ ಮೆರೆಯಲಾರವು. ಪ್ರಭಾಸವೇ ಮೊದಲಾದ ತೀರ್ಥಗಳೂ ಗಂಗಾದಿ ಪುಣ್ಯ ನದಿಗಳೂ ಅಂತೆಯೇ ಆ ಕ್ಷೇತ್ರದ ಮಾಹಾತ್ಮ್ಯದಲ್ಲಿ ಷೋಡಶಾಂಶದ ಮಾಹಾತ್ಮ್ಯಕ್ಕೂ ಅರ್ಹಗಳಲ್ಲ.

ತತ್ರ ರಾಜರ್ಷಯಃ ಪೂರ್ವಂ ಪ್ರಭೂತಾಃ ಸಿದ್ಧಿಮಾಗತಾಃ ।
ಪಶವಃ ಪಕ್ಷಿಣಃ ಸರ್ಪಾಃ ಸಿಂಹವ್ಯಾಘ್ರಾ ಮೃಗಾದಯಃ ॥ ೭ ॥
ತತ್ರ ಕಾಲವಶಾನ್ಮೃತ್ವಾಸ್ತೇಽಪಿ ಪ್ರಾಪ್ತಾ ದಿವಾಲಯಂ ।
ಯಸ್ತತ್ರ ವ್ರತಹೀನೋಽಪಿ ಕೃಷಿಕರ್ಮರತೋಽಪಿ ವಾ ॥ ೮ ॥
ನಿವಾಸಂ ಕುರುತೇ ವಿಪ್ರಾ ಮೃತಸ್ತತ್ರ ದಿವಂ ವ್ರಜೇತ್ ।
ಕಿಂ ವಾ ಚ ಬಹುನೋಕ್ತೇನ ಭೂಯೋ ಭೂಯೋ ದ್ವಿಜೋತ್ತಮಾಃ ॥ ೯ ॥
ಶ್ರೂಯತಾಂ ಪರಮಂ ಗುಹ್ಯಂ ತಸ್ಯ ಕ್ಷೇತ್ರಸ್ಯ ಸಂಭವಂ ।
ಪುನಂತಿ ಕ್ಷೇತ್ರ ತೀರ್ಥಾನಿ ಸಂವಾಸಾದಿಹ ಮಾನವಾನ್ ॥ ೧೦ ॥
ಹಾಟಕೇಶ್ವರಜಂ ಕ್ಷೇತ್ರಂ ಪುನಾತಿ ಸ್ಮರಣಾದಪಿ ।
ಕಿಂ ಪುನರ್ದರ್ಶನಾದ್ವಿಪ್ರಾಃ ಸ್ಪರ್ಶನಾಚ್ಚ ವಿಶೇಷತಃ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಕ್ತಶೃಂಗಸಾನ್ನಿಧ್ಯಸೇವನಫಲವರ್ಣನಂ"
ನಾಮ ಷೋಡಶೋಽಧ್ಯಾಯಃ

---

೭–೧೧. ಅಯ್ಯಾ ವಿಪ್ರರೆ, ಪೂರ್ವದಲ್ಲಿ ಆ ರಕ್ತಶೃಂಗ ಕ್ಷೇತ್ರದಲ್ಲಿ ಅನೇಕ ರಾಜರ್ಷಿಗಳು ಸಿದ್ಧಿಯನ್ನು ಪಡೆದರಲ್ಲದೆ ಪಶು ಪಕ್ಷಿಗಳೂ ಸರ್ಪಗಳೂ ಸಿಂಹ ವ್ಯಾಘ್ರ ಮೃಗಾದಿಗಳೂ ಕಾಲವಶಕ್ಕೊಳಗಾಗಿ ಮೃತಿ ಹೊಂದಿದ ಬಳಿಕ ದೇವ ಲೋಕವನ್ನು ಸೇರಿದುವು. ಅಲ್ಲಿ ಯಾವ ವ್ರತವೂ ಇಲ್ಲದೆ ಇರುವವನೂ ಭೂಮಿ ಯನ್ನುತ್ತು ಜೀವಿಸುವ ಕೃಷಿಕನೂ ಯಾರುಯಾರು ನೆಲಸಿರುವರೋ ಅವರೂ ಮೃತಿಹೊಂದಿದ ತರುವಾಯ ಸ್ವರ್ಗವನ್ನು ಸೇರುತ್ತಾರೆ. ಅಯ್ಯಾ ದ್ವಿಜೋತ್ತಮರೆ, ಮತ್ತೆಮತ್ತೆ ಬಹುವಾಗಿ ಹೇಳಿ ಪ್ರಯೋಜನವೇನು? ಈ ಕ್ಷೇತ್ರ ಸಂಬಂಧವಾದ ಪರಮ ರಹಸ್ಯವೊಂದನ್ನು ಹೇಳುತ್ತೇನೆ ಕೇಳಿರಿ. ಪ್ರಪಂಚದಲ್ಲಿ ಸಮಸ್ತ ತೀರ್ಥ ಕ್ಷೇತ್ರಗಳೂ ತಮ್ಮಲ್ಲಿ ವಾಸಮಾಡುವ ಮಾನವರನ್ನು ಮಾತ್ರವೇ ಪುನೀತ ರನ್ನಾಗಿಸುತ್ತವೆ. ಹಾಟಕೇಶ್ವರದಿಂದ ಉದ್ಭವಿಸಿರುವ ಈ ಕ್ಷೇತ್ರವಾದರೋ ಕೇವಲ ಸ್ಮರಣೆಯಿಂದಲೇ ಸಮಸ್ತರನ್ನೂ ಪವಿತ್ರಗೊಳಿಸುತ್ತದೆ ಎಂದ ಬಳಿಕ ಈ ಪರ್ವತದ ದರ್ಶನ ಸ್ಪರ್ಶನ ಮೊದಲಾದುವುಗಳಿಂದ ಎಂತಹ ಉತ್ತಮ ಫಲವು ದೊರಕುತ್ತದೆ ಯೆಂದು ಹೇಳಬೇಕಾದುದೇನಿದೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಕ್ತಶೃಂಗ ಸಾನ್ನಿಧ್ಯಸೇವನಫಲವರ್ಣನ"ವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ವಿದೂರಥವ್ಯಗಯಾವರ್ಣನಂ

ಋಷಯ ಊಚುಃ:—

ಚಮತ್ಕಾರಪುರೋತ್ಪತ್ತಿಃ ಶ್ರುತಾ ತ್ವತ್ತೋ ಮಹಾಮತೇ ।
ತತ್ಕ್ಷೇತ್ರಸ್ಯ ಪ್ರಮಾಣಂ ಯತ್ತದಸ್ಮಾಕಂ ಪ್ರಕೀರ್ತಯ ॥ ೧ ॥
ಯಾನಿ ತತ್ರ ಚ ಪುಣ್ಯಾನಿ ತೀರ್ಥಾನ್ಯಾಯತನಾನಿ ಚ ।
ಸಹಿತಾನಿ ಪ್ರಭಾವೇಣ ತಾನಿ ಸರ್ವಾಣಿ ಕೀರ್ತಯ ॥ ೨ ॥

ಸೂತ ಉವಾಚ:—

ಪಂಚಕ್ರೋಶ ಪ್ರಮಾಣೇನ ಕ್ಷೇತ್ರಂ ಬ್ರಾಹ್ಮಣಸತ್ತಮಾಃ ।
ಆಯಾಮವ್ಯಾಸತಶ್ಚೈವ ಚಮತ್ಕಾರಪುರೋತ್ತಮಂ ॥ ೩ ॥
ಪ್ರಾಚ್ಯಾಂ ತಸ್ಯ ಗಯಾಶೀರ್ಷಂ ಪಶ್ಚಿಮೇನ ಹರೇಃ ಪದಂ ।
ದಕ್ಷಿಣೋತ್ತರಯೋಶ್ಚೈವಂ ಗೋಕರ್ಣೇಶ್ವರ ಸಂಜ್ಞಿತೌ ॥ ೪ ॥
ಹಾಟಕೇಶ್ವರಸಂಜ್ಞಂ ತು ಪೂರ್ವಮಾಸೀದ್ದ್ವಿಜೋತ್ತಮಾಃ ।
ತತ್ಕ್ಷೇತ್ರಂ ಪ್ರಥಿತಂ ಲೋಕೇ ಸರ್ವಪಾತಕನಾಶನಂ ॥ ೫ ॥

---

## ಕನ್ನಡದ ಅನುವಾದ

### ವಿದೂರಥವ್ಯಗಯಾವರ್ಣನ

೧–೨. ಋಷಿಗಳು ಕೇಳುತ್ತಾರೆ:—ಅಯ್ಯಾ ಮಹಾಮತಿಯಾದ ಸೂತ ಪುರಾಣಿಕನೆ, ನಿನ್ನಿಂದ ಈ ಚಮತ್ಕಾರಪುರದ ಉತ್ಪತ್ತಿಯನ್ನು ಕೇಳಿದೆವು. ಇನ್ನು ಆ ಕ್ಷೇತ್ರದ ಪ್ರಮಾಣವನ್ನು ನಮಗೆ ಹೇಳುವವನಾಗು. ಅಲ್ಲಿರುವ ಪುಣ್ಯ ತೀರ್ಥಗಳು, ಆಯತನಗಳು, ಅವುಗಳ ಪ್ರಭಾವ—ಈ ಎಲ್ಲ ವಿಷಯಗಳನ್ನೂ ನಮಗೆ ತಿಳಿಯಹೇಳುವ ಅನುಗ್ರಹವನ್ನು ಮಾಡುವವನಾಗು.

೩. ಸೂತನು ಹೇಳುತ್ತಾನೆ:—ಎಲೈ ಬ್ರಾಹ್ಮಣಸತ್ತಮರೆ, ಆ ಕ್ಷೇತ್ರವು ಅಡ್ಡಳತೆ ಉದ್ದಳತೆಗಳಿಂದ ಐದು ಕ್ರೋಶಗಳ ಪ್ರಮಾಣವುಳ್ಳದ್ದಾಗಿರುವುದು. ಅದೇ ಉತ್ತಮವಾದ ಚಮತ್ಕಾರ ಪಟ್ಟಣವು.

೪. ಆ ಕ್ಷೇತ್ರಕ್ಕೆ ಪೂರ್ವದಲ್ಲಿ ಗಯಾ ಶೀರ್ಷವೂ ಪಶ್ಚಿಮಕ್ಕೆ ವಿಷ್ಣು ಪಾದವೂ ದಕ್ಷಿಣೋತ್ತರಗಳಲ್ಲಿ ಗೋಕರ್ಣೇಶ್ವರ ಕ್ಷೇತ್ರಗಳೂ ಇರುವುವು.

೫–೬. ಪೂರ್ವದಲ್ಲಿ ಈ ಕ್ಷೇತ್ರಕ್ಕೆ ಹಾಟಕೇಶ್ವರವೆಂದು ಹೆಸರಿದ್ದಿತು. ಆ ಕ್ಷೇತ್ರವು ಪೂರ್ವದಲ್ಲಿ ಸಮಸ್ತ ಪಾಪಗಳನ್ನೂ ನಿವಾರಿಸುವ ಮಹಾಕ್ಷೇತ್ರ

ಯತಃ ಪ್ರಭೃತಿ ವಿಪ್ರೇಭ್ಯೋ ದತ್ತಂ ತೇನ ಮಹಾತ್ಮನಾ ।
ಚಮತ್ಕಾರೇಣ ತತ್ಸ್ಥಾನಂ ನಾಮ್ನಾ ಖ್ಯಾತಿಂ ತತೋ ಗತಂ ॥ ೬ ॥

ಬ್ರಾಹ್ಮಣಾ ಊಚುಃ:—

ಯದೇತದ್ಭವತಾ ಪ್ರೋಕ್ತಂ ತಸ್ಯ ಪೂರ್ವೇ ಗಯಾಶಿರಃ ।
ಮಾಹಾತ್ಮ್ಯಂ ತಸ್ಯ ನೋ ಬ್ರೂಹಿ ಸೂತಪುತ್ರ ಸವಿಸ್ತರಂ ॥ ೭ ॥

ಸೂತ ಉವಾಚ:—

ಆಸೀದ್ವಿದೂರಥೋ ನಾಮ ಹೈಹಯಾಧಿಪತಿಃ ಪುರಾ ।
ಯೋ ವೈ ದಾನಪತಿರ್ದಕ್ಷಃ ಶತ್ರುಪಕ್ಷಕ್ಷಯಾವಹಃ ॥ ೮ ॥
ಸ ಕದಾಚಿನ್ಮೃಗಾನ್ ಹಂತುಂ ನೃಪಃ ಸೇನಾವೃತೋ ಯಯೌ ।
ನಾನಾವೃಕ್ಷಲತಾಕೀರ್ಣಂ ವನಂ ಶ್ವಾಪದಸಂಕುಲಂ ॥ ೯ ॥
ಸ ಜಘಾನ ಮೃಗಾಂಸ್ತತ್ರ ಶರೈರಾಶೀವಿಷೋಪಮೈಃ ।
ಮಹಿಷಾಂಶ್ಚ ವರಾಹಾಂಶ್ಚ ತರಕ್ಷೂಂಚ್ಛಂಬರಾನ್‌ರುರೂನ್ ॥ ೧೦ ॥
ಸಿಂಹಾನ್ ವ್ಯಾಘ್ರಾನ್ ಗಜಾನ್ ಮತ್ತಾಂಛತಶೋಽಥ ಸಹಸ್ರಶಃ ।
ಅಥ ತೇನ ಮೃಗೋ ವಿದ್ಧಃ ಶರೇಣಾನತಪರ್ವಣಾ ॥ ೧೧ ॥

---

ವೆಂದು ಪ್ರಸಿದ್ಧವಾಗಿದ್ದಿತು. ತರುವಾಯ ಚಮತ್ಕಾರ ಮಹಾರಾಜನು ಅದನ್ನು ವಿಪ್ರರಿಗೆ ದಾನಮಾಡಿದಂದಿನಿಂದ ಅದು ಮಹಾತ್ಮನಾದ ಆತನ ಹೆಸರಿನಿಂದಲೇ ಖ್ಯಾತಿಯನ್ನು ಪಡೆಯಿತು.

೭. ಬ್ರಾಹ್ಮಣರು ಕೇಳುತ್ತಾರೆ:—ಎಲೈ ಸೂತನೆ, ಈ ಚಮತ್ಕಾರ ಪಟ್ಟಣಕ್ಕೆ ಪೂರ್ವದಲ್ಲಿ ಗಯಾಶೀರ್ಷ ಕ್ಷೇತ್ರವಿರುವುದೆಂದು ಹೇಳಿದೆಯಷ್ಟೆ. ಅದರ ಮಾಹಾತ್ಮ್ಯವನ್ನು ಸವಿಸ್ತಾರವಾಗಿ ನಮಗೆ ತಿಳಿಸುವವನಾಗು.

೮. ಸೂತನು ಹೇಳುತ್ತಾನೆ:—ಎಲೈ ವಿಪ್ರರೆ, ಪೂರ್ವದಲ್ಲಿ ದಾನಪತಿಯೆಂದೂ, ದಕ್ಷನೆಂದೂ ಶತ್ರುಪಕ್ಷಗಳನ್ನು ಕ್ಷಯಗೊಳಿಸುವವನೆಂದೂ ಪ್ರಸಿದ್ಧನಾದ ಹೈಹಯ ದೇಶದ ಅರಸನಾದ ವಿದೂರಥನೆಂಬುವನೊಬ್ಬನಿದ್ದನು.

೯—೧೧. ಈ ವಿದೂರಥನು ಒಮ್ಮೆ ಸೇನಾಸಮನ್ವಿತನಾಗಿ ನಾನಾವೃಕ್ಷಲತಾಕೀರ್ಣವೂ ದುಷ್ಟಮೃಗಭೂಯಿಷ್ಠವೂ ಆದ ಅರಣ್ಯಕ್ಕೆ ಬೇಟೆಗಾಗಿ ಬಂದನು. ಅಲ್ಲಿ ಆ ದೊರೆಯು ವಿಷಸರ್ಪಗಳಿಗೆಣೆಯಾದ ಕೂರಂಬುಗಳಿಂದ ಕಾಡೆಮ್ಮೆ, ಹಂದಿ, ಕರಡಿ, ಶಂಬರ (ಜಿಂಕೆ), ಮೊಲ, ಸಿಂಹ, ಹುಲಿ, ಆನೆ ಮೊದಲಾದ ಮದಿಸಿದ ಸಹಸ್ರಾರು ಪ್ರಾಣಿಗಳನ್ನು ಬೇಟೆಯಾಡಿದನು. ಆ ಬಳಿಕ ಅವನು ಒಂದಾನೊಂದು ಜಿಂಕೆಯನ್ನು ಬಾಣದಿಂದ ಹೊಡೆದನು.

ನ ಪಪಾತ ಧರಾಪೃಷ್ಠೇ ಸ ಶರೋ ದುದ್ರುವೇ ದ್ರುತಂ ।
ತತಃ ಸ ಕೌತುಕಾವಿಷ್ಟಸ್ತಸ್ಯ ಪೃಷ್ಠೇ ಹಯೋತ್ತಮಂ ।
ಪ್ರೇರಯಾಮಾಸ ವೇಗೇನ ಮನೋ ಮಾರುತ ವೇಗಧೃಕ್ ॥ ೧೨ ॥
ತತಃ ಸೈನ್ಯಂ ಸಮುತ್ಸೃಜ್ಯ ಮೃಗಂ ಲಿಪ್ಸುರ್ಮಹೀಪತಿಃ ।
ಅನ್ಯದ್ವನಾಂತರಂ ಪ್ರಾಪ್ತೋ ರೌದ್ರಂ ಚಿತ್ತಭಯಾವಹಂ ॥ ೧೩ ॥
ಕಂಟಕೀ ಬದರೀಪ್ರಾಯಂ ಶಾಲ್ಮಲೀವನ ಸಂಕುಲಂ ।
ತಥಾಽನ್ಯೈಃ ಕಂಟಿಕಾಕೀರ್ಣೈ ರೂಕ್ಷೈ ವೃಕ್ಷೈಃ ಸಮನ್ವಿತಂ ॥ ೧೪ ॥
ತತ್ರ ರೂಕ್ಷಾಽಖಿಲಾ ಭೂಮಿರ್ನಿರ್ಜಲಾ ತಮಸಾ ವೃತಾ ।
ಚೀರಿಕೋಲೂಕ ಗೃಧ್ರಾಢ್ಯಾ ಶೀರ್ಷಚ್ಛಾಯಾ ವಿವರ್ಜಿತಾ ॥ ೧೫ ॥
ಗ್ರೀಷ್ಮೇ ಮಧ್ಯಗತೇ ಸೂರ್ಯೇ ಮೃಗಾಕೃಷ್ಟಃ ಸ ಪಾರ್ಥಿವಃ ।
ದೂರಾಧ್ವಾನಂ ಜಗಾಮಾಽಥ ಪ್ರಾಸಪಾಣಿರ್ವರಾಽಶ್ವಗಃ ॥ ೧೬ ॥
ತೇನ ತಸ್ಯಾಽನುಗಾ ಭೃತ್ಯಾಃ ಸರ್ವೇ ಸುಶ್ರಾಂತವಾಹನಾಃ ।
ಕ್ಷುತ್ಪಿಪಾಸಾಕುಲಾಃ ಶ್ರಾಂತಾಃ ಸ್ಥಾನೇ ಸ್ಥಾನೇ ಸಮಾಶ್ರಿತಾಃ ॥ ೧೭ ॥

---

೧೨. ಹೀಗೆ ಬಾಣಾಹತವಾದರೂ ಆ ಮೃಗವು ನೆಲಕ್ಕೆ ಬೀಳದೆ ನಟ್ಟ ಆ ಬಾಣದೊಡನೆಯೇ ಓಡಿತು. ಅರಸನಾದರೋ ಆಶ್ಚರ್ಯಭರಿತನಾಗಿ ಅದರ ಹಿಂದೆಯೇ ವಾಯುವೇಗದಿಂದ ತನ್ನ ಕುದುರೆಯನ್ನು ತರುಬಿದನು.

೧೩. ಆತನು ತನ್ನ ಸೇನೆಯನ್ನೆಲ್ಲ ತೊರೆದು ಆ ಮೃಗವನ್ನು ಹಿಡಿಯಲಪೇಕ್ಷೆಯುಳ್ಳವನಾಗಿ ಅದನ್ನು ಅಟ್ಟಿಹೋಗುತ್ತ ಮನಸ್ಸಿಗೆ ತುಂಬ ಭಯವನ್ನುಂಟುಮಾಡುವಂತಹುದಾದ ಬೇರೊಂದು ಕಾಡನ್ನು ಪ್ರವೇಶಿಸಿದನು.

೧೪–೧೫. ಆ ಕಾಡಾದರೋ ಬೋರೆ, ಕಾರೆ ಮತ್ತು ಎಳಚೆ ಪೊದೆಗಳ ಮುಳ್ಳುಗಳಿಂದ ತುಂಬಿ ಬಹಳ ಒರಟೊರಟಾದ ಹೆಮ್ಮರಗಳಿಂದ ತುಂಬಿ ಬೂರಗದ ತೋಪುಗಳಿಂದ ತುಂಬಿದ್ದಿತು. ನೆಲವಾದರೋ ಬಹಳ ಮೊರಟಾಗಿ ಎಲ್ಲಿಯೂ ನೀರಿನ ಸುಳಿವೇ ಇಲ್ಲದೆ ಕಗ್ಗತ್ತಲೆಯಿಂದ ತುಂಬಿದ್ದಿತು. ಕಾಡುಬೆಕ್ಕುಗಳು, ಕಾಡುಹಂದಿಗಳು, ರಣಹದ್ದುಗಳೂ ಅಲ್ಲಿ ಕಿಕ್ಕಿರಿದಿದ್ದುವು. ಎಲ್ಲಿಯೂ ತಲೆಗೆ ತಂಪನ್ನುಂಟುಮಾಡುವ ನೆರಳೇ ಇರಲಿಲ್ಲ.

೧೬–೧೭. ಆ ಬೇಸಗೆಯ ಸಮಯದಲ್ಲಿ ಸೂರ್ಯನು ನಡುನೆತ್ತಿಯಮೇಲೆ ಉರಿಯುತ್ತಿರುವ ಸಮಯದಲ್ಲಿ ಆ ರಾಜೇಂದ್ರನು ಆ ಜಿಂಕೆಯಿಂದ ಸೆಳೆಯಲ್ಪಟ್ಟವನಾಗಿ ಕೈಯಲ್ಲಿ ಕೊಡಲಿಯನ್ನು ಹಿಡಿದು ಕುದುರೆಯಮೇಲೆಯೇ ಬಹಳ ದೂರ ಹೋದನು. ಇದರಿಂದ ಅವನನ್ನು ಅನುಸರಿಸುತ್ತಿದ್ದ ಸೇವಕರೆಲ್ಲರೂ ತುಂಬ ಆಯಾಸಗೊಂಡ ವಾಹನಗಳುಳ್ಳವರಾಗಿ ಹಸಿವು ಬಾಯಾರಿಕೆಗಳಿಂದ ಸೊರಗಿ ಅಲ್ಲಲ್ಲಿಯೇ ವಿಶ್ರಾಂತಿಗಾಗಿ ನಿಂತುಹೋದರು.

ಸಿಂಹವ್ಯಾಘ್ರೈಸ್ತಥಾಚಾಽನ್ಯೈಃ ಪತಿತಾ ನಷ್ಟಚೇತನಾಃ ।
ಭಕ್ಷ್ಯಂತೇ ಚೇತಯಂತೋಽಪಿ ತಥಾಽನ್ಯೇ ಚಲನಾಕ್ಷಮಾಃ ॥ ೧೮ ॥
ತತಃ ಸೋಽಪಿ ಮಹೀಪಾಲಃ ಕ್ಷುತ್ಪಿಪಾಸಾಸಮಾಕುಲಃ ।
ದೃಷ್ಟ್ವಾ ತದ್ವ್ಯಸನಂ ಪ್ರಾಪ್ತಮಾತ್ಮನಃ ಸೇವಕೈಃ ಸಮಂ ॥ ೧೯ ॥
ಕಾಂತಾರಸ್ಯಾಂತಮನ್ವಿಚ್ಛನ್ ಪ್ರೇರಯಾಮಾಸ ತಂ ಹಯಂ ।
ಜಾತ್ಯಂ ಸರ್ವಗುಣೋಪೇತಂ ಕಶಾಘಾತೈಃ ಪ್ರತಾಡಯನ್ ॥ ೨೦ ॥
ತತಃ ಸ ನೃಪತಿಸ್ತೇನ ವಾಯುವೇಗೇನ ವಾಜಿನಾ ।
ನೀತೋ ದೂರಂ ದುರ್ಗಮಾರ್ಗಂ ಸರ್ವಜಂತುವಿವರ್ಜಿತಂ ॥ ೨೧ ॥
ಏವಂ ತಸ್ಯ ನರೇಂದ್ರಸ್ಯ ಕಾಂದಿಶೀಕೇಽನವಸ್ಥಿತೇ ।
ಸೋಽಶ್ವೋಽಪತದ್ಧರಾಪೃಷ್ಠೇ ಸೋಽಪ್ಯಥಸ್ತಾತ್ತುರಂಗಮಾತ್ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿದೂರಥಮೃಗಯಾವರ್ಣನಂ" ನಾಮ
ಸಪ್ತದಶೋಽಧ್ಯಾಯಃ

---

೧೮. ಅವರಲ್ಲಿ ಮೂರ್ಛಿತರಾದ ಕೆಲವರು ಬದುಕಿದ್ದಂತೆಯೇ ಹುಲಿ ಸಿಂಹಗಳಿಂದಲೂ, ಇತರ ಕ್ರೂರಪ್ರಾಣಿಗಳಿಂದಲೂ ಭಕ್ಷಿಸಲ್ಪಟ್ಟರು. ಇನ್ನು ಕೆಲವರು ತಾವಿದ್ದ ಕಡೆಯಿಂದ ಅತ್ತಿತ್ತ ಕದಲುವುದಕ್ಕೂ ಶಕ್ತಿಯಿಲ್ಲದವರಾದರು.

೧೯. ತರುವಾಯ ಹಸಿವು ನೀರಡಿಕೆಗಳಿಂದ ತೊಂದರೆಪಡುತ್ತಿದ್ದ ಆ ದೊರೆಯೂ ಸಹ ಸೇವಕರಂತೆಯೇ ತಾನೂ ಕಷ್ಟಕ್ಕೀಡಾದನು.

೨೦. ಅವನು ಹೇಗಾದರೂ ಕಾಡಿನಿಂದ ಪಾರಾಗಬಯಸಿ ತನ್ನ ಕುದುರೆಯನ್ನೂ ತನ್ನ ಜಾತ್ಯಶ್ವವನ್ನೂ ಕಶೆಯಿಂದ ಹೊಡೆದು ಇನ್ನೂ ವೇಗವಾಗಿ ಓಡಿಸಿದನು.

೨೧. ತರುವಾಯ ಆ ಜಾತ್ಯಶ್ವವು ಆ ದೊರೆಯನ್ನು ಸರ್ವಜಂತು ವಿವರ್ಜಿತವಾದ ದುಷ್ಪ್ರವೇಶ್ಯವಾದ ದೂರ ಪ್ರದೇಶವೊಂದನ್ನೈದಿಸಿತು.

೨೨. ಹೀಗೆ ಆ ನೃಪತಿಯು ದಿಕ್ಕೆಟ್ಟಿರುವ ಸಮಯದಲ್ಲಿಯೇ ಆ ಕುದುರೆಯೂ ಸಹ ದುರ್ಬಲವಾಗಿ ನೆಲಕ್ಕುರುಳಿ ಪ್ರಾಣವನ್ನು ತೊರೆಯಿತು. ದೊರೆಯೂ ನೆಲಕ್ಕುರುಳಿ ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿದೂರಥಮೃಗಯಾವರ್ಣನ"ವೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಽಷ್ಟದಶೋಽಧ್ಯಾಯಃ

ಮಾಂಸಾದವಚನಾದ್ಪ್ರಸ್ಯಾಶ್ರಮಪದಂ ಪ್ರಾಪ್ತಸ್ಯ ವಿದೂರಥಸ್ಯ ಮುನಿಭಿಃ ಸಹ ಸಂವಾದಪೂರ್ವಕ ಸಾಯಂತನಕರ್ಮಾದಿವಿಧಾನವರ್ಣನಂ

ಸೂತ ಉವಾಚ :—

ತತಃ ಸೋಽಪಿ ಮಹೀಪಾಲಃ ಕ್ಷುತ್ಪಿಪಾಸಾಸಮಾಕುಲಃ ।
ಪಪಾತ ಧರಣೀ ಪೃಷ್ಠೇ ಪದ್ಭ್ಯಾಂ ಗತ್ವಾ ವನಾಂತರಂ ॥ ೧ ॥
ಅಥಾಽಪಶ್ಯದ್ವಿಯತ್ಸ್ಥಾನಾತ್ಸ ತ್ರೀನ್ಪ್ರೇತಾನ್ ಸುದಾರುಣಾನ್ ।
ಊರ್ಧ್ವಕೇಶಾನ್ ಸುರಕ್ತಾಕ್ಷಾನ್ ಕೃಷ್ಣದಂತಾನ್ ಕೃಶೋದರಾನ್ ॥ ೨ ॥
ತಾನ್ ದೃಷ್ಟ್ವಾ ಭಯಸಂತ್ರಸ್ತೋ ವಿಶೇಷೇಣ ಸ ಭೂಪತಿಃ ।
ನಿರಾಶೋ ಜೀವಿತೇ ಕೃಚ್ಛ್ರಾದಿದಂ ವಚನಮಬ್ರವೀತ್ ॥ ೩ ॥
ಕೇ ಯೂಯಂ ವಿಕೃತಾಕಾರಾ ಮಯಾ ದೃಷ್ಟಾ ನ ಕರ್ಹಿಚಿತ್ ।
ಏವಂ ವಿಧಾ ನೃಲೋಕೇಽತ್ರ ಭ್ರಮತಾ ಪ್ರಾಗ್ವಿಭೀಷಣಾಃ ॥ ೪ ॥
ವಿದೂರಥೋ ನರೇಂದ್ರೋಽಹಂ ಕ್ಷುತ್ಪಿಪಾಸಾಽತಿಪೀಡಿತಃ ।
ಮೃಗಲಿಪ್ಸುರಿಹ ಪ್ರಾಪ್ತೋ ವನೇ ಜಂತುವಿವರ್ಜಿತೇ ॥ ೫ ॥
ತತಸ್ತೇಷಾಂತು ಯೋ ಜ್ಯೇಷ್ಠೋ ಮಾಂಸಾದಃ ಪ್ರತ್ಯುವಾಚ ತಂ ।
ಕೃತಾಂಜಲಿಪುಟೋ ಭೂತ್ವಾ ವಿನಯಾಽವನತಃ ಸ್ಥಿತಃ ॥ ೬ ॥

---

### ಕನ್ನಡದ ಅನುವಾದ

ವಿಧೂರಥಕೃತ ಸಾಯಂತನಕರ್ಮಾದಿವಿಧಾನವರ್ಣನ

೧–೩. ಸೂತನು ಹೇಳುತ್ತಾನೆ:—ತರುವಾಯ ಹಸಿವು ಬಾಯಾರಿಕೆಗಳಿಂದ ಬಳಲಿದ ಆ ವಿದೂರಥರಾಜನು ಭೂಮಿಯಮೇಲೆ ಬಿದ್ದು ಕಾಲ್ನಡಗೆಯಿಂದ ಕಾಡಿನ ಮಧ್ಯವನ್ನು ಸೇರಿ ಆಕಾಶದಲ್ಲಿ ಮೇಲ್ಮುಖವಾದ ಕೂದಲುಳ್ಳವೂ, ಕೆಂಪು ಕಣ್ಣುಳ್ಳವೂ, ಕೃಷ್ಣದಂತಗಳುಳ್ಳವೂ, ಕೃಶವಾದ ಹೊಟ್ಟೆಗಳುಳ್ಳವೂ ಆದ ಮೂರು ದಾರುಣ ಪ್ರೇತಗಳನ್ನು ಕಂಡು ಅತಿ ಭಯದಿಂದ ಬದುಕಿನಲ್ಲಿ ನಿರಾಶನಾಗಿ ಕಷ್ಟದಿಂದ ಹೀಗೆಂದನು.

೪. “ವಿಕಾರವಾದ ಆಕಾರವುಳ್ಳ ನೀವಾರು? ಭೂಲೋಕದಲ್ಲಿ ಸಂಚರಿಸುತ್ತಿರುವ ನಾನು ಹಿಂದೆ ಇಂತಹ ಭಯಂಕರ ರೂಪಗಳನ್ನು ಎಲ್ಲಿಯೂ ನೋಡಲಿಲ್ಲ.

೫. ವಿದೂರಥನೆಂಬ ನಾನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಮೃಗಗಳನ್ನು ಪಡೆಯಲು ಪ್ರಾಣಿಗಳಿಲ್ಲದ ಈ ಕಾಡಿಗೆ ಬಂದೆನು.”

೬. ಬಳಿಕ ಅವುಗಳಲ್ಲಿ ಜ್ಯೇಷ್ಠನಾದ ಮಾಂಸಾದನೆಂಬುವನು ಕೈಮುಗಿದು ಕೊಂಡು ವಿನಯದಿಂದ ಇಂತೆಂದನು:

ವಯಂ ಪ್ರೇತಾ ಮಹಾರಾಜ ನಿವಸಾಮೋಽತ್ರ ಕಾನನೇ ।
ಸ್ವಕರ್ಮಜನಿತಾದ್ದೋಷಾದ್ದುಃಖೇನ ಮಹತಾವೃತಾಃ ॥ ೭ ॥
ಅಹಂ ಮಾಂಸಾದಕೋ ನಾಮ ದ್ವಿತೀಯೋಽಯಂ ವಿದ್ಯೈವತಃ ।
ಕೃತಘ್ನಶ್ಚ ತೃತೀಯಸ್ತು ತ್ರಯಾಣಾಮೇಷ ಪಾಪಕೃತ್ ॥ ೮ ॥

ರಾಜೋವಾಚ :—

ಸರ್ವೇಷಾಂ ದೇಹಿನಾಂ ನಾಮ ಜಾಯತೇ ಪಿತೃಮಾತೃಜಂ ।
ಕಿಮೇತತ್ಕಾರಣಂ ಯೇನ ಸರ್ವೇ ಯೂಯಂ ಸ್ವನಾಮಕಾಃ ॥ ೯ ॥
ತಚ್ಛ್ರುತ್ವಾ ಪ್ರಾಹ ಮಾಂಸಾದಃ ಕರ್ಮ ನಾಮಾನಿ ಪಾರ್ಥಿವ ।
ಮಿಥಃ ಕೃತಾನಿ ಸಂಜ್ಞಾರ್ಥಮಸ್ಮಾಭಿಃ ಸ್ವಯಮೇವ ಹಿ ॥ ೧೦ ॥
ಶೃಣುಷ್ವಾವಹಿತೋ ಭೂತ್ವಾ ಸರ್ವೇಷಾಂ ನಃಪೃಥಕ್ ಪೃಥಕ್ ।
ಕರ್ಮಣಾ ಯೇನ ಸಂಜಾತಂ ಪ್ರೇತತ್ವಮಿಹ ಭೂಮಿಪ ॥ ೧೧ ॥
ವಯಂ ಹಿ ಬ್ರಾಹ್ಮಣಾ ಜಾತ್ಯಾ ವೈದಿಶಾಖ್ಯೇ ಪುರೇ ನೃಪ ।
ದೇವರಾತಸ್ಯ ವಿಪ್ರಸ್ಯ ಗೃಹೇ ಜಾತಾ ಮಹಾತ್ಮನಃ ॥ ೧೨ ॥
ನಾಸ್ತಿಕಾ ಭಿನ್ನಮರ್ಯಾದಾಃ ಪರದಾರರತಾಃ ಸದಾ ।
ಪಾಪಕರ್ಮರತಾಸ್ತತ್ರ ಶುಭಕರ್ಮ ವಿವರ್ಜಿತಾಃ ॥ ೧೩ ॥

---

೭. "ಮಹಾರಾಜ ! ಪ್ರೇತಗಳಾದ ನಾವು ನಮ್ಮ ಕರ್ಮದಿಂದ ಸಂಭವಿಸಿದ ಮಹಾದುಃಖದಿಂದ ಕೂಡಿ ಈ ಕಾಡಿನಲ್ಲಿ ವಾಸಮಾಡುತ್ತಿದ್ದೇವೆ.

೮. ನಾನು ಮಾಂಸಾದಕನು, ಈ ಎರಡನೆಯವನು ವಿದ್ಯೈವತನು, ಈ ಮೂರನೆಯವನೇ ಕೃತಘ್ನ. ಮೂವರಿಗೂ ಈ ಹೆಸರುಗಳು ಪಾಪದಿಂದ ಬಂದುವು."

೯. ರಾಜನು ಹೇಳುತ್ತಾನೆ:—ಸಕಲ ಜನರಿಗೂ ತಾಯಿತಂದೆಗಳಿಂದ ಹೆಸರುಂಟಾಗುವುದು. ನೀವೆಲ್ಲ ನಿಮ್ಮಿಂದಲೇ ಹೆಸರನ್ನು ಪಡೆದಿರಲು ಕಾರಣ ವೇನು ?

೧೦. ಅದನ್ನು ಕೇಳಿ ಮಾಂಸಾದನು ಹೀಗೆಂದನು. "ನಾವು ಕೇವಲ ಗುರುತಿಗಾಗಿ ಪರಸ್ಪರ ಈ ಕರ್ಮನಾಮಗಳನ್ನು ಇಟ್ಟುಕೊಂಡಿರುವೆವು.

೧೧. ದೊರೆಯೆ ! ನಮಗೆ ಯಾವ ಕರ್ಮದಿಂದ ಈ ಪ್ರೇತತ್ವವುಂಟಾಯಿತು ಎಂಬುದನ್ನು ಸಾವಧಾನಮನಸ್ಸಿನಿಂದ ಪ್ರತ್ಯೇಕವಾಗಿ ಕೇಳು.

೧೨. ಬ್ರಾಹ್ಮಣರಾದ ನಾವು ವೈದಿಶವೆಂಬ ಪಟ್ಟಣದಲ್ಲಿ ದೇವರಾತನೆಂಬ ಮಹಾತ್ಮನಾದ ಬ್ರಾಹ್ಮಣನ ಮನೆಯಲ್ಲಿ ಜನಿಸಿದೆವು.

೧೩. ಅಲ್ಲಿ ನಾವು ನಾಸ್ತಿಕರೂ, ಮರ್ಯಾದೆಯಿಲ್ಲದವರೂ, ಪರಪತ್ನಿಯಲ್ಲಿ ನಿರತರೂ, ಪಾಪಕರ್ಮಾಸಕ್ತರೂ, ಪುಣ್ಯಕರ್ಮರಹಿತರೂ ಆಗಿದ್ದೆವು.

ಜಿಹ್ವಾಲೌಲ್ಯಪ್ರಸಂಗೇನ ಮಯಾ ಭುಕ್ತಂ ಸದಾಮಿಷಂ ।
ತೇನ ಮೇ ಕರ್ಮಜಂ ನಾಮ ಮಾಂಸಾದಾಖ್ಯಂ ವ್ಯವಸ್ಥಿತಂ ॥ ೧೪ ॥
ದ್ವಿತೀಯೋಽಯಂ ಮಹಾರಾಜ ಯಸ್ತಿಷ್ಠತಿ ತವಾಽಗ್ರತಃ ।
ಅನೇನಾಽನ್ನಂ ಸದಾ ಭುಕ್ತಮಕೃತ್ವಾ ದೇವತಾರ್ಚನಂ ॥ ೧೫ ॥
ತೇನ ಕರ್ಮವಿಪಾಕೇನ ಪ್ರೇತಯೋನಿಂ ಸಮಾಶ್ರಿತಃ ।
ವಿದೈವತ ಇತಿ ಖ್ಯಾತೋ ದ್ವಿತೀಯೋಽಯಂ ಸುಪಾಪಕೃತ್ ॥ ೧೬ ॥
ಸದೈವಾಽನುಷ್ಠಿತಾಽನೇನ ಸುಪಾಪೇನ ಕೃತಘ್ನತಾ ।
ಕೃತಘ್ನಃ ಪ್ರೋಚ್ಯತೇ ತೇನ ಕರ್ಮಣಾ ನೃಪಸತ್ತಮ ॥ ೧೭ ॥

ರಾಜೋವಾಚ :—

ಆಹಾರೇಣ ನೃಲೋಕೇಽಸ್ಮಿನ್ ಸರ್ವೇ ಜೀವಂತಿ ಜಂತವಃ ।
ಯುಷ್ಮಾಕಂ ಕತಮೋ ಯೋಽತ್ರ ಪ್ರೋಚ್ಯತಾಂ ಮೇ ಸವಿಸ್ತರಂ ॥ ೧೮ ॥

ಮಾಂಸಾದ ಉವಾಚ :—

ಭೋಜ್ಯಕಾಲೇ ಗೃಹೇ ಯತ್ರ ಸ್ತ್ರೀಣಾಂ ಯುದ್ಧಂ ಪ್ರವರ್ತತೇ ।
ಅಪಿ ಮಂತ್ರೌಷಧೀಪ್ರಾಯಂ ಪ್ರೇತಾ ಭುಂಜಂತಿ ತತ್ರ ಹಿ ॥ ೧೯ ॥

---

೧೪. ನಾನು ಯಾವಾಗಲೂ ನಾಲಿಗೆಯ ಚಾಪಲ್ಯದಿಂದ ಮಾಂಸವನ್ನು ತಿನ್ನುತ್ತಿದ್ದುದರಿಂದ ಆ ನೀಚಕರ್ಮದಿಂದ ನನಗೆ ಮಾಂಸಾದನೆಂಬ ಹೆಸರು ಸ್ಥಿರವಾಯಿತು.

೧೫–೧೬. ಮಹಾರಾಜ! ನಿನ್ನ ಮುಂದಿರುವ ಈ ಎರಡನೆಯವನು ದೇವರ ಪೂಜೆಯನ್ನು ಮಾಡದೆ ಯಾವಾಗಲೂ ಅನ್ನವನ್ನು ತಿನ್ನುತ್ತಿದ್ದುದರಿಂದ ಆ ಕರ್ಮದ ಪರಿಣಾಮದಿಂದ ಪ್ರೇತಜಾತಿಯನ್ನು ಹೊಂದಿ ವಿದೈವತನೆಂದು ವಿಖ್ಯಾತನಾದನು.

೧೭. ಇವನು ಯಾವಾಗಲೂ ಕೃತಘ್ನತೆಯನ್ನಾಚರಿಸಿದ್ದರಿಂದ ಕೃತಘ್ನನೆಂಬ ನಾಮವನ್ನು ಪಡೆದನು."

೧೮. ರಾಜನು ಹೇಳುತ್ತಾನೆ:—ಈ ಲೋಕದಲ್ಲಿ ಸಕಲ ಪ್ರಾಣಿಗಳೂ ಆಹಾರದಿಂದ ಜೀವಿಸುತ್ತವೆ. ನಿಮಗೆ ಈ ಆಹಾರಗಳಲ್ಲಿ ಯಾವುದು ವಿಹಿತವಾಗಿರುವುವು? ವಿಸ್ತಾರವಾಗಿ ಹೇಳು.

೧೯. ಮಾಂಸಾದನು ಹೇಳುತ್ತಾನೆ:—ಯಾವ ಮನೆಯಲ್ಲಿ ಭೋಜನಕಾಲದಲ್ಲಿ ಹೆಂಗಸರು ಜಗಳವಾಡುವರೋ ಆ ಭೋಜನವು ಮಂತ್ರೌಷಧಿಗಳಿಂದ ಪವಿತ್ರವಾಗಿದ್ದರೂ ಅದನ್ನು ಪ್ರೇತಗಳು ಭುಂಜಿಸುವುವು.

ಭುಜ್ಯತೇ ಯತ್ರ ಭೂಪಾಲ ವೈಶ್ವದೇವಂ ವಿನಾ ನರೈಃ ।
ಪಾಕಸ್ಯಾಗ್ರಮದತ್ವಾ ಚ ಪ್ರೇತಾ ಭುಂಜಂತಿ ತತ್ರ ಚ ॥ ೨೦ ॥
ರಾತ್ರೌ ಯತ್ಕ್ರಿಯತೇ ಶ್ರಾದ್ಧಂ ದಾನಂ ವಾ ಪರ್ವವರ್ಜಿತಂ ।
ತತ್ಸರ್ವಂ ನೃಪಶಾರ್ದೂಲ ಪ್ರೇತಾನಾಂ ಭೋಜನಂ ಭವೇತ್ ॥ ೨೧ ॥
ಯಸ್ಮಿನ್ನೋ ಮಾರ್ಜನಂ ಹರ್ಮ್ಯೇ ಕ್ರಿಯತೇ ನೋಪಲೇಪನಂ ।
ನ ಮಾಂಗಲ್ಯಂ ಚ ಸತ್ಕಾರಃ ಪ್ರೇತಾ ಭುಂಜಂತಿ ತತ್ರ ಹಿ ॥ ೨೨ ॥
ಭಿನ್ನಭಾಂಡಪರಿತ್ಯಾಗೋ ಯತ್ರ ನ ಕ್ರಿಯತೇ ಗೃಹೇ ।
ನ ಚ ವೇದಧ್ವನಿರ್ಯತ್ರ ಪ್ರೇತಾ ಭುಂಜಂತಿ ತತ್ರ ಹಿ ॥ ೨೩ ॥
ಯಚ್ಛ್ರಾದ್ಧಂ ದಕ್ಷಿಣಾಹೀನಂ ಕ್ರಿಯಾಹೀನಂ ಚ ವಾ ನೃಪ ।
ತಥಾ ರಜಸ್ವಲಾದೃಷ್ಟಂ ತದಸ್ಮಾಕಂ ಪ್ರಜಾಯತೇ ॥ ೨೪ ॥
ಹೀನಾಂಗಾಹ್ಯಧಿಕಾಂಗಾ ವಾ ಯಸ್ಮಿನ್ಛ್ರಾದ್ಧೇ ದ್ವಿಜಾತಯಃ ।
ಭುಂಜತೇ ವೃಷಲೀನಾಥಾಸ್ತದಸ್ಮಾಕಂ ಪ್ರಜಾಯತೇ ॥ ೨೫ ॥
ಅತಿಥಿರ್ಯತ್ರ ಸಂಪ್ರಾಪ್ತಃ ಶ್ರಾದ್ಧಕಾಲ ಉಪಸ್ಥಿತೇ ।
ಅಪೂಜಿತೋ ಗೃಹಾದ್ಯಾತಿ ತಚ್ಛ್ರಾದ್ಧಂ ಪ್ರೇತತೃಪ್ತಿದಂ ॥ ೨೬ ॥

---

೨೦. ವೈಶ್ವದೇವನನ್ನು ಮಾಡದೆಯೂ, ಪಾಕವನ್ನು ಮೊದಲು ಬ್ರಾಹ್ಮಣರಿಗೆ ಬಡಿಸದೆಯೂ ಭುಂಜಿಸುವವನ ಮನೆಯಲ್ಲಿ ಪ್ರೇತಗಳು ಭೋಜನಮಾಡುವುವು.

೨೧. ಪರ್ವಕಾಲವಲ್ಲದೆ ರಾತ್ರಿವೇಳೆ ಮಾಡಿದ ಶ್ರಾದ್ಧವಾಗಲಿ, ದಾನವಾಗಲಿ ಪ್ರೇತಗಳಿಗೆ ಸೇರುವುವು.

೨೨. ಗುಡಿಸಿ ಸಾರಿಸಿ ರಂಗವಲ್ಲ್ಯಾದಿಗಳಿಂದ ಅಲಂಕಾರಮಾಡದ ಮನೆಯಲ್ಲಿ ಪ್ರೇತಗಳು ಭುಂಜಿಸುವುವು.

೨೩. ಒಡೆದು ಹೋದ ಪಾತ್ರೆಯನ್ನು ತ್ಯಜಿಸದ ಮನೆಯಲ್ಲಿಯೂ, ವೇದಧ್ವನಿಯು ಕೇಳಿಸದ ಮನೆಯಲ್ಲಿಯೂ ಪ್ರೇತಗಳು ಭುಂಜಿಸುವುವು.

೨೪. ದಕ್ಷಿಣಾದಿಕ್ರಿಯೆಗಳಿಲ್ಲದಿರುವುದೂ, ರಜಸ್ವಲೆಯು ನೋಡಿರುವುದೂ ಆದ ಶ್ರಾದ್ಧವು ನಮಗೆ ಸೇರುವುದು.

೨೫. ಅಂಗಹೀನರೂ, ಅಧಿಕಾಂಗರೂ ಅಥವಾ ವೃಷಲೀಪತಿಗಳೂ ಭುಂಜಿಸುವ ಶ್ರಾದ್ಧವು ನಮಗೆ ಸೇರುವುದು.

೨೬. ಶ್ರಾದ್ಧಕಾಲದಲ್ಲಿ ಬಂದ ಅತಿಥಿಯು ಅಪೂಜಿತನಾಗಿ ಮನೆಯಿಂದ ಹೊರಟುಹೋದರೆ ಆ ಶ್ರಾದ್ಧವು ಪ್ರೇತಗಳಿಗೆ ತೃಪ್ತಿಯನ್ನುಂಟುಮಾಡುವುದು.

ಕಿಂ ವಾ ತೇ ಬಹುನೋಕ್ತೇನ ಶೃಣು ಸಂಕ್ಷೇಪತೋ ನೃಪ ।
ಅಸ್ಮಾಕಂ ಭೋಜನಂ ನಿತ್ಯಂ ಯತ್ತ್ವಂ ಶ್ರುತ್ವಾ ವಿಗರ್ಹಸಿ ॥ ೨೭ ॥
ಯದನ್ನಂ ಕೇಶಮೂತ್ರಾಸ್ಥಿ ಶ್ಲೇಷ್ಮಾದಿಭಿರುಪಪ್ಲುತಂ ।
ಹೀನಜಾತ್ಯೈಶ್ಚ ಸಂಸ್ಪೃಷ್ಟಂ ತದಸ್ಮಾಕಂ ಪ್ರಜಾಯತೇ ॥ ೨೮ ॥

ರಾಜೋವಾಚ :—

ಕೇನ ಕರ್ಮವಿಪಾಕೇನ ಪ್ರೇತತ್ವಂ ಜಾಯತೇ ನೃಣಾಂ ।
ಏತನ್ಮೇ ಸರ್ವಮಾಚಕ್ಷ್ವ ಮಾಂಸಾದ ಮಮ ಪೃಚ್ಛತಃ ॥ ೨೯ ॥

ಮಾಂಸಾದ ಉವಾಚ :—

ಯೋ ಭವೇನ್ಮಾನವಃ ಕ್ಷುದ್ರಸ್ತಥಾ ಪೈಶುನ್ಯಸೂಚಕಃ ।
ಮೃಷ್ಟಮಾಂಸಾಽಶನೇ ಸಕ್ತಃ ಸ ಪ್ರೇತೋ ಜಾಯತೇ ನರಃ ॥ ೩೦ ॥
ಅಕೃತ್ವಾ ದೇವಕಾರ್ಯಂ ಚ ತಥಾ ಚ ಪಿತೃತರ್ಪಣಂ ।
ಯೋಽಶ್ನಾತ್ಯದತ್ವಾ ಭೃತ್ಯೇಭ್ಯಃ ಸ ಪ್ರೇತೋ ಜಾಯತೇ ನರಃ ॥ ೩೧ ॥
ಪರದಾರರತಶ್ಚೈವ ಪರವಿತ್ತಾಽಪಹಾರಕಃ ।
ಪರಾಽಪವಾದ ಸಂತುಷ್ಟಃ ಸ ಪ್ರೇತೋ ಜಾಯತೇ ನರಃ ॥ ೩೨ ॥
ಕನ್ಯಾಂ ಯಚ್ಛತಿ ವೃದ್ಧಾಯ ನೀಚಾಯ ಧನಲಿಪ್ಸಯಾ ।
ಕುರೂಪಾಯ ಕುಶೀಲಾಯ ಸ ಪ್ರೇತೋ ಜಾಯತೇ ನರಃ ॥ ೩೩ ॥

---

೨೭. ದೊರೆಯೆ! ಬಹು ಮಾತಿನಿಂದೇನು? ಸಂಕ್ಷೇಪವಾಗಿ ಕೇಳು. ನಮ್ಮ ನಿತ್ಯಭೋಜನವನ್ನು ಕೇಳಿ ನೀನು ನಿಂದಿಸುವೆ.

೨೮. ಕೇಶ, ಮೂತ್ರ, ಮೂಳೆ, ಕಫ ಇವುಗಳಿಂದ ಸೇರಿರುವುದೂ, ಹೀನ ಜಾತಿಯವರು ಮುಟ್ಟಿರುವುದೂ ಆದ ಅನ್ನವು ನಮಗೆ ಸಲ್ಲುವುದು.

೨೯. ರಾಜನು ಹೇಳುತ್ತಾನೆ:—ಮಾಂಸಾದ! ಮಾನವರಿಗೆ ಯಾವ ಕರ್ಮದ ಪರಿಣಾಮದಿಂದ ಪ್ರೇತತ್ವವುಂಟಾಗುವುದು? ಇದನ್ನೆಲ್ಲ ಕೇಳುತ್ತಿರುವ ನನಗೆ ಹೇಳು.

೩೦. ಮಾಂಸಾದನು ಹೇಳುತ್ತಾನೆ:—ಕ್ಷುದ್ರನೂ, ಚಾಡಿ ಹೇಳುವವನೂ, ಕದ್ದ ಮಾಂಸವನ್ನು ತಿನ್ನುವವನೂ ಆದ ಮನುಷ್ಯನು ಪ್ರೇತನಾಗುವನು.

೩೧. ದೇವಪೂಜೆ, ಪಿತೃತರ್ಪಣಗಳನ್ನು ಮಾಡದೆ, ಭೃತ್ಯರಿಗೆ ಅನ್ನವನ್ನು ನೀಡದೆ ಭುಂಜಿಸುವವನು ಪ್ರೇತನಾಗುವನು.

೩೨. ಪರಪತ್ನೀನಿರತನೂ ಪರರ ದ್ರವ್ಯಗಳನ್ನು ಅಪಹರಿಸುವವನೂ ಪರಾಪವಾದಗಳಿಂದ ಸಂತೋಷಗೊಳ್ಳುವವನೂ ಪ್ರೇತನಾಗುವನು.

೩೩. ದ್ರವ್ಯಾಶೆಯಿಂದ ಮುದುಕನೂ, ನೀಚನೂ, ಕುರೂಪಿಯೂ, ದುಶ್ಶೀಲನೂ ಆದ ವರನಿಗೆ ಕನ್ಯೆಯನ್ನು ದಾನಮಾಡುವವನು ಪ್ರೇತನಾಗುವನು.

ಕುಲೇ ಜಾತಾಂ ವಿನೀತಾಂ ಚ ಧರ್ಮಪತ್ನೀಂ ಸುಖೋಚ್ಛ್ರಿತಾಂ ।
ಯಸ್ತ್ಯಜೇದ್ದೋಷನಿರ್ಮುಕ್ತಾಂ ಸ ಪ್ರೇತೋ ಜಾಯತೇ ನರಃ ॥ ೩೪ ॥
ದೇವಸ್ತ್ರೀಗುರುವಿತ್ತಾನಿ ಯೋ ಗೃಹೀತ್ವಾ ನ ಯಚ್ಛತಿ ।
ವಿಶೇಷಾದ್ಬ್ರಾಹ್ಮಣಸ್ವಂ ಚ ಸ ಪ್ರೇತೋ ಜಾಯತೇ ನರಃ ॥ ೩೫ ॥
ಪರವ್ಯಸನಸಂತುಷ್ಟಃ ಕೃತಘ್ನೋ ಗುರುತಲ್ಪಗಃ ।
ದೂಷಕೋ ದೇವವಿಪ್ರಾಣಾಂ ಸ ಪ್ರೇತೋ ಜಾಯತೇ ನರಃ ॥ ೩೬ ॥
ದೀಯಮಾನಸ್ಯ ವಿತ್ತಸ್ಯ ಬ್ರಾಹ್ಮಣೇಭ್ಯಃ ಸುಪಾಪಕೃತ್ ।
ವಿಘ್ನಮಾರಭತೇ ಯಸ್ತು ಸ ಪ್ರೇತೋ ಜಾಯತೇ ನರಃ ॥ ೩೭ ॥
ಶೂದ್ರಾನ್ನೇನೋದರಸ್ಥೇನ ಬ್ರಾಹ್ಮಣೋ ಮ್ರಿಯತೇ ಯದಿ ।
ಸ ಪ್ರೇತೋ ಜಾಯತೇ ರಾಜನ್ ಯದ್ಯಪಿ ಸ್ಯಾತ್ ಷಡಂಗವಿತ್ ॥ ೩೮ ॥
ಕುಲದೇಶೋಚಿತಂ ಧರ್ಮಂ ಯಸ್ತ್ಯಕ್ತ್ವಾಽನ್ಯತ್ಸಮಾಚರೇತ್ ।
ಕಾಮಾದ್ವಾ ಯದಿ ವಾ ಲೋಭಾತ್ಸಪ್ರೇತೋ ಜಾಯತೇ ನರಃ ॥ ೩೯ ॥
ಏತತ್ತೇ ಸರ್ವಮಾಖ್ಯಾತಂ ಮಯಾ ಪಾರ್ಥಿವ ಸತ್ತಮ ।
ಯೇನ ಕರ್ಮವಿಪಾಕೇನ ಪ್ರೇತಃ ಸಂಜಾಯತೇ ನರಃ ॥ ೪೦ ॥

---

೩೪. ಸತ್ಕುಲೀನಳೂ, ವಿನೀತಳೂ, ಸುಖಸಮೃದ್ಧಿಯನ್ನು ನೀಡುವಳೂ, ದೋಷರಹಿತಳೂ ಆದ ಧರ್ಮಪತ್ನಿಯನ್ನು ತ್ಯಜಿಸುವವನು ಪ್ರೇತನಾಗುವನು.

೩೫. ದೇವತೆ, ಹೆಂಗಸು, ಗುರು ಇವರ ದ್ರವ್ಯಗಳನ್ನೂ, ವಿಶೇಷವಾಗಿ ಬ್ರಾಹ್ಮಣರ ದ್ರವ್ಯಗಳನ್ನೂ ತೆಗೆದುಕೊಂಡು ಹಿಂದಕ್ಕೆ ಕೊಡದಿರುವವನು ಪ್ರೇತನಾಗುವನು.

೩೬. ಪರರ ದುಃಖದಿಂದ ಸಂತೋಷಗೊಳ್ಳುವವನೂ, ಕೃತಘ್ನನೂ, ಗುರುಪತ್ನೀಗಮನ ಮಾಡುವವನೂ, ದೇವಬ್ರಾಹ್ಮಣರನ್ನು ದೂಷಿಸುವವನೂ ಪ್ರೇತನಾಗುವನು.

೩೭. ಬ್ರಾಹ್ಮಣರಿಗೆ ದ್ರವ್ಯವನ್ನು ದಾನಮಾಡುತ್ತಿರುವಾಗ ಅಡ್ಡಿಮಾಡುವ ಪಾಪಿಯು ಪ್ರೇತನಾಗುವನು.

೩೮. ಶೂದ್ರರ ಅನ್ನವನ್ನು ತಿಂದು ಮಡಿಯುವ ಬ್ರಾಹ್ಮಣನು ಸಾಂಗವೇದಾಧ್ಯಯನ ಮಾಡಿದ್ದರೂ ಪ್ರೇತನಾಗುವನು.

೩೯. ಕುಲದೇಶಗಳಿಗೆ ಯೋಗ್ಯವಾದ ಧರ್ಮವನ್ನು ಬಿಟ್ಟು ಅನ್ಯಧರ್ಮವನ್ನು ಕಾಮ ಅಥವಾ ಲೋಭದಿಂದ ಆಚರಿಸುವವನು ಪ್ರೇತನಾಗುವನು.

೪೦. ಮಹಾರಾಜ! ಮನುಷ್ಯನು ಯಾವ ಕರ್ಮದ ಪರಿಣಾಮದಿಂದ ಪ್ರೇತನಾಗುವನು ಎಂಬುದನ್ನೆಲ್ಲ ನಿನಗೆ ಹೇಳಿರುವೆನು.

ರಾಜೋವಾಚ :—

ಕೃತೇನ ಕರ್ಮಣಾ ಯೇನ ನ ಪ್ರೇತೋ ಜಾಯತೇ ನರಃ ।
ತನ್ಮೇ ಕೀರ್ತಯ ಮಾಂಸಾದ ವಿಸ್ತರೇಣ ವಿಶೇಷತಃ ॥ ೪೧ ॥

ಮಾಂಸಾದ ಉವಾಚ :—

ಮಾತೃವತ್ಪರದಾರಾನ್ಯಃ ಪರದ್ರವ್ಯಾನಿ ಲೋಷ್ಟವತ್ ।
ಯಃ ಪಶ್ಯತ್ಯಾತ್ಮವಜ್ಜಂತೂನ್ನ ಪ್ರೇತೋ ಜಾಯತೇ ನರಃ ॥ ೪೨ ॥
ಅನ್ನದಾನಪರೋ ನಿತ್ಯಂ ವಿಶೇಷೇಣಾಽತಿಥಿಪ್ರಿಯಃ ।
ಸ್ವಾಧ್ಯಾಯವ್ರತಶೀಲೋ ಯೋ ನ ಪ್ರೇತೋ ಜಾಯತೇ ನರಃ ॥ ೪೩ ॥
ಸಮಃ ಶತ್ರೌ ಚ ಮಿತ್ರೇ ಚ ಸಮಲೋಷ್ಟಾಽಶ್ಮಕಾಂಚನಃ ।
ಸಮೋ ಮಾನಾಽಪಮಾನೇಷು ನ ಪ್ರೇತೋ ಜಾಯತೇ ನರಃ ॥ ೪೪ ॥
ದಾನಧರ್ಮಪ್ರವೃತ್ತಾನಾಂ ಧರ್ಮಮಾರ್ಗಾಽನುಯಾಯಿನಾಂ ।
ಪ್ರೋತ್ಸಾಹಂ ವರ್ಧಯೇದ್ಯಸ್ತು ನ ಪ್ರೇತೋ ಜಾಯತೇ ನರಃ ॥ ೪೫ ॥
ಯೂಕಾಮತ್ಕುಣದಂಶಾದೀನ್ ಸರ್ವಸತ್ವಾನಿ ಯೋ ನರಃ ।
ಪುತ್ರವತ್ಪಾಲಯೇನ್ನಿತ್ಯಂ ನ ಪ್ರೇತೋ ಜಾಯತೇ ನರಃ ॥ ೪೬ ॥
ಸದಾ ಯಜ್ಞಕ್ರಿಯೋಪೇತಃ ಸದಾ ತೀರ್ಥಪರಾಯಣಃ ।
ಶಾಸ್ತ್ರ ಶ್ರವಣಸಂಯುಕ್ತೋ ನ ಪ್ರೇತೋ ಜಾಯತೇ ನರಃ ॥ ೪೭ ॥

---

೪೧. ರಾಜನು ಹೇಳುತ್ತಾನೆ :—ಮಾಂಸಾದ! ಮಾನವನು ಯಾವ ಕೆಲಸವನ್ನು ಮಾಡಿದರೆ ಪ್ರೇತನಾಗುವುದಿಲ್ಲ? ಅದನ್ನು ನನಗೆ ವಿಸ್ತಾರವಾಗಿ ಹೇಳು.

೪೨. ಮಾಂಸಾದನು ಹೇಳುತ್ತಾನೆ:—ಪರರ ಪತ್ನಿಯರನ್ನು ತಾಯಿಯಂತೆಯೂ, ಪರರ ದ್ರವ್ಯಗಳನ್ನು ಮಣ್ಣಿನ ಉಂಡೆಯಂತೆಯೂ, ಇತರ ಪ್ರಾಣಿಗಳನ್ನು ತನ್ನಂತೆಯೂ ಕಾಣುವವನು ಪ್ರೇತನಾಗುವುದಿಲ್ಲ.

೪೩—೪೪. ನಿತ್ಯವೂ ಅನ್ನದಾನಮಾಡುವವನೂ, ವಿಶೇಷವಾಗಿ ಅತಿಥಿಗಳಲ್ಲಿ ಪ್ರೀತಿಯುಳ್ಳವನೂ, ವೇದಾಧ್ಯಯನ ವ್ರತಗಳನ್ನಾಚರಿಸುವವನೂ ಪ್ರೇತನಾಗುವುದಿಲ್ಲ. ಶತ್ರುಮಿತ್ರರಲ್ಲಿಯೂ, ಕಲ್ಲುಚಿನ್ನಗಳಲ್ಲಿಯೂ, ಮಾನಾಪಮಾನಗಳಲ್ಲಿಯೂ ಸಮದೃಷ್ಟಿಯುಳ್ಳವನು ಪ್ರೇತನಾಗುವುದಿಲ್ಲ.

೪೫. ದಾನಧರ್ಮಗಳನ್ನು ಮಾಡುವವರಿಗೂ, ಧರ್ಮಮಾರ್ಗವನ್ನನುಸರಿಸುವವರಿಗೂ ಪ್ರೋತ್ಸಾಹವನ್ನು ಹೆಚ್ಚಿಸುವವನು ಪ್ರೇತನಾಗುವುದಿಲ್ಲ.

೪೬. ಹೇನು, ತಿಗಣೆ, ಸೊಳ್ಳೆ ಮೊದಲಾದ ಸಮಸ್ತ ಪ್ರಾಣಿಗಳನ್ನೂ ಮಕ್ಕಳಂತೆ ಪಾಲಿಸುವವನು ಪ್ರೇತನಾಗುವುದಿಲ್ಲ.

೪೭. ಯಜ್ಞಕ್ರಿಯೆಗಳನ್ನು ಅನುಷ್ಠಾನ ಮಾಡುವವನೂ, ತೀರ್ಥಯಾತ್ರಾನಿರತನೂ, ಶಾಸ್ತ್ರಶ್ರವಣ ಮಾಡಿದವನೂ ಪ್ರೇತನಾಗುವುದಿಲ್ಲ.

ವಾಪೀಕೂಪತಡಾಗಾನಾಮಾರಾಮಾಣಾಂ ವಿಶೇಷತಃ ।
ಆರೋಪಕಃ ಪ್ರಪಾಣಾಂ ಚ ನ ಪ್ರೇತೋ ಜಾಯತೇ ನರಃ ॥ ೪೮ ॥
ಏತದ್ವಃ ಸರ್ವಮಾಖ್ಯಾತಂ ಸ್ವಗುಹ್ಯಂ ವಸುಧಾಽಧಿಪ ।
ನಿರ್ವಿಣ್ಣಾಃ ಪ್ರೇತಭಾವೇನ ತಸ್ಮಾತ್ತ್ವಂ ನೋ ಗತಿರ್ಭವ ॥ ೪೯ ॥
ಗತ್ವಾ ಗಯಾಶಿರಃ ಪುಣ್ಯಮೇಕೈಕಸ್ಯ ಪೃಥಕ್ ಪೃಥಕ್ ।
ಶ್ರಾದ್ಧಂ ದೇಹಿ ಮಹೀಪಾಲ ತ್ರಯಾಣಾಮಪಿ ಸಾದರಂ ॥ ೫೦ ॥
ಪ್ರೇತತ್ವಂ ಯಾನಿ ಯೇನೇದಂ ತ್ವತ್ಪ್ರಸಾದಾತ್ಸುದಾರುಣಂ ।
ನಾಽನ್ಯಥಾ ಮುಕ್ತಿರಸ್ಮಾಕಂ ಭವಿಷ್ಯತಿ ಕಥಂಚನ ॥ ೫೧ ॥

ರಾಜೋವಾಚ :—

ಈದೃಗ್ಜಾತಿಸ್ಮೃತಿರ್ಯಸ್ಯಾಂ ಪ್ರೇತಯೋನೌ ಚ ಖೇಗತಿಃ ।
ಧರ್ಮಾಽಧರ್ಮ ಪರಿಜ್ಞಾನಂ ತಚ್ಚ ಕಸ್ಮಾತ್ಪ್ರನಿಂದಸಿ ॥ ೫೨ ॥

ಮಾಂಸಾದ ಉವಾಚ :—

ಪ್ರೇತಯೋನಿರಯಂ ರಾಜನ್ನವಮೀ ದೇವಸಂಜ್ಞಿತಾ ।
ಗುಣತ್ರಯ ಸಮಾಯುಕ್ತಾ ಶೇಷೈರ್ದೋಷೈಃ ಸಮಂತತಃ ॥ ೫೩ ॥
ಏಕಾ ಜಾತಿಸ್ಮೃತಿಃ ಸಮ್ಯಗಸ್ಯಾಮೇವ ಪ್ರಜಾಯತೇ ।
ಖೇಚರತ್ವಂ ತಥೈವಾಽನ್ಯದ್ಧರ್ಮಾಽಧರ್ಮ ವಿನಿಶ್ಚಯಃ ॥ ೫೪ ॥

---

೪೮. ವಾಪೀ, ಕೂಪ, ತಟಾಕ, ಉದ್ಯಾನ, ಅರವಟ್ಟಿಗೆ ಇವುಗಳನ್ನು ನಿರ್ಮಿಸುವವನು ಪ್ರೇತನಾಗುವುದಿಲ್ಲ.

೪೯. ಮಹಾರಾಜ! ನಾನು ವ್ಯಥೆಗೊಂಡು ನನ್ನ ರಹಸ್ಯವನ್ನೆಲ್ಲ ನಿನಗೆ ಹೇಳಿದ್ದೇನೆ. ಆದ್ದರಿಂದ ನೀನು ನನಗೆ ಸದ್ಗತಿಯನ್ನುಂಟುಮಾಡು.

೫೦. ನೀನು ಪುಣ್ಯಕರವಾದ ಗಯೆಗೆ ಹೋಗಿ ನಮ್ಮ ಮೂವರಿಗೂ ಪ್ರತ್ಯೇಕವಾಗಿ ಭಕ್ತಿಯಿಂದ ಶ್ರಾದ್ಧವನ್ನು ಮಾಡು.

೫೧. ನಿನ್ನ ಅನುಗ್ರಹದಿಂದ ನಡೆದ ಈ ಶ್ರಾದ್ಧದಿಂದ ನಮ್ಮ ಪ್ರೇತತ್ವವು ತೊಲಗುವುದು. ಹಾಗಿಲ್ಲದಿದ್ದರೆ ನಮಗೆ ಮೋಕ್ಷವಾಗುವುದಿಲ್ಲ.

೫೨. ರಾಜನು ಹೇಳುತ್ತಾನೆ:—ಈ ಪ್ರೇತ ಜಾತಿಯಲ್ಲಿ ಇಂತಹ ಜನ್ಮಾಂತರ ಸ್ಮರಣೆಯೂ, ಆಕಾಶಗಮನವೂ, ಧರ್ಮಾಧರ್ಮಜ್ಞಾನವೂ ಉಂಟಾಗುವುದರಿಂದ ಇದನ್ನು ಏಕೆ ನಿಂದಿಸುವೆ?

೫೩. ಮಾಂಸಾದನು ಹೇಳುತ್ತಾನೆ:—ಒಂಬತ್ತನೆಯ ದೇವತೆಯೆಂದು ಹೆಸರನ್ನು ಪಡೆದಿರುವ ಈ ಪ್ರೇತಜಾತಿಯು ಗುಣತ್ರಯಗಳಿಂದಲೂ, ಇತರ ದೋಷಗಳಿಂದಲೂ ಕೂಡಿರುವುದು.

೫೪. ಈ ಪ್ರೇತಜನ್ಮದಲ್ಲಿ ಹಿಂದಿನ ಜನ್ಮಸ್ಮರಣೆಯೂ, ಆಕಾಶಗಮನವೂ, ಧರ್ಮಾಧರ್ಮ ನಿಶ್ಚಯವೂ ಉಂಟಾಗುವುದು.

ಏತದ್ಗುಣತ್ರಯಂ ಪ್ರೋಕ್ತಂ ಪ್ರೇತಯೋನೌ ನೃಪೋತ್ತಮ ।
ದೋಷಾನಪಿ ಚ ತೇ ವಚ್ಮಿ ತಾಂ ಛೃಣುಷ್ವ ಸಮಾಹಿತಃ ॥ ೫೫ ॥
ಯದಿ ತಾವದ್ವನಾದಸ್ಮಾದ್ಯಾಮೋಽನ್ಯತ್ರ ವಯಂ ನೃಪ ।
ಅದೃಷ್ಟಮುದ್ಗರಾಘಾತೈರ್ನಾನಂ ಹನ್ಯಾಮಹೇ ತತಃ ॥ ೫೬ ॥
ತಥಾ ಧರ್ಮಕ್ರಿಯಾಃ ಸರ್ವಾ ಮಾನುಷಾಣಾಮುದಾಹೃತಾಃ ।
ನ ಪ್ರೇತಾನಾಂ ನ ದೇವಾನಾಂ ನಾಽನ್ಯೇಷಾಂ ಮಾನುಷಂ ವಿನಾ ॥ ೫೭ ॥
ಪಶ್ಯಾಮೋ ದೂರತೋ ರಾಜಂ ಜಲಪೂರ್ಣಾಂ ಜಲಾಶಯಾನ್ ।
ಪಿಪಾಸಾಕುಲಿತಾಃ ಶ್ರಾಂತಾಭಾಸ್ಕರೇ ವೃಷಸಂಸ್ಥಿತೇ ॥ ೫೮ ॥
ಗಚ್ಛಾಮಃ ಸನ್ನಿಧೌ ತೇಷಾಂ ಯದಿ ಪಾರ್ಥಿವಸತ್ತಮ ।
ಅದೃಷ್ಟಮುದ್ಗರಾಘಾತೈರ್ವಯಂ ಹನ್ಯಾಮಹೇ ತತಃ ॥ ೫೯ ॥
ತಥಾ ರಸವತೀಃ ಸಿದ್ಧಾಃ ಪಶ್ಯಾಮೋ ಧೂರಸಂಸ್ಥಿತಾಃ ।
ಕ್ಷುಧಾವಿಷ್ಟಾ ಗೃಹಸ್ಥಾನಾಂ ಗೃಹೇಷು ವಿವಿಧಾ ನೃಪ ॥ ೬೦ ॥
ತಥಾ ಸುಫಲಿನೋ ವೃಕ್ಷಾನ್ಸಕಲಪಕ್ಷಿಭಿರಾವೃತಾನ್ ।
ಸ್ನಿಗ್ಧಾನ್ ಸಚ್ಛಾಯಯೋಪೇತಾನ್ ಸೇವಿತುಂ ನ ಲಭಾಮಹೇ ॥ ೬೧ ॥

---

೫೫. ಮಹಾರಾಜ! ಇವು ಪ್ರೇತ ಜಾತಿಯಲ್ಲುಂಟಾಗುವ ಮೂರು ಗುಣಗಳು. ದೋಷಗಳನ್ನೂ ಹೇಳುವೆನು, ಕೇಳು.

೫೬. ನಾವು ಈ ವನದಿಂದ ಬೇರೆ ಕಡೆ ಹೋದರೆ ಯಾರಿಗೂ ಕಾಣದಂತೆ ನಮಗೆ ಮುದ್ಗರಾಯುಧದಿಂದ ಏಟು ಬೀಳುವುದು.

೫೭. ಮನುಷ್ಯರಿಗೆ ವಿಹಿತವಾದ ಧರ್ಮಕಾರ್ಯಗಳು ಮನುಷ್ಯರನ್ನು ಬಿಟ್ಟು ಪ್ರೇತಗಳಿಗೂ, ದೇವತೆಗಳಿಗೂ, ಇತರರಿಗೂ ವಿಹಿತವಾಗಲಿಲ್ಲ.

೫೮–೫೯. ಮಹಾರಾಜ! ನಾವು ದೂರದಲ್ಲಿಯೇ ನೀರಿನಿಂದ ತುಂಬಿರುವ ಕೆರೆಗಳನ್ನು ನೋಡುವೆವು. ಆದರೆ ವೃಷಭರಾಶಿಯನ್ನು ಸೂರ್ಯನು ಪ್ರವೇಶಿಸಲು ಬಾಯಾರಿಕೆಯಿಂದ ಬಳಲಿದ ನಾವು ಆ ಕೆರೆಗಳ ಹತ್ತಿರ ಹೋದರೆ ಯಾರಿಗೂ ಕಾಣದಂತೆ ಮುದ್ಗರ ಪ್ರಹಾರಗಳು ಬೀಳುವುವು.

೬೦. ಹಾಗೆಯೇ ಹಸಿವುಗೊಂಡ ನಾವು ಗೃಹಸ್ಥರ ಮನೆಗಳಲ್ಲಿ ಪಾಕದಿಂದ ಸಿದ್ಧವಾದ ನಾನಾವಿಧ ಪಾಕಶಾಲೆಗಳನ್ನು ನೋಡುವೆವು.

೬೧. ಹಾಗೆಯೇ ಒಳ್ಳೆ ಫಲಗಳಿಂದ ತುಂಬಿ, ಇಂಪಾಗಿ ಕೂಗುತ್ತಿರುವ ಪಕ್ಷಿಗಳಿಂದ ಕೂಡಿ, ಮನೋಹರವೂ, ಒಳ್ಳೆಯ ನೆರಳಿನಿಂದ ಕೂಡಿರುವುವೂ ಆದ ಮರಗಳನ್ನು ನೋಡುವೆವು. ಆದರೆ ಅವುಗಳನ್ನನುಭವಿಸುವುದಕ್ಕೆ ಸಮರ್ಥರಾಗುವುದಿಲ್ಲ.

ಕಿಂ ವಾ ತೇ ಬಹುನೋಕ್ತೇನ ಯದ್ಯತ್ಕರ್ಮ ವಿಗರ್ಹಿತಂ ।
ಕ್ಲೇಶದಂ ಚ ತದಸ್ಮಾಕಂ ಸ್ವಯಮೇವೋಪತಿಷ್ಠತೇ ॥ ೬೨ ॥
ನ ಛಿದ್ರೇಣ ವಿನಾಽಸ್ಮಾಕಂ ಪ್ರಾಣಯಾತ್ರಾ ಪ್ರಜಾಯತೇ ।
ನ ಜಲಾನಿ ನ ಚ ಛಾಯಾ ನ ಯಾನಂ ನ ಚ ವಾಹನಂ ॥ ೬೩ ॥
ಏತಸ್ಮಾತ್ಕಾರಣಾನ್ನಿತ್ಯಂ ಭ್ರಮಾಮಶ್ಛಿದ್ರಹೇತವೇ ।
ಪ್ರಾಪ್ತೇ ರಾತ್ರಿಮುಖೇ ರಾಜನ್ನಪ್ರಾತರ್ನ ಚ ವಾಸರೇ ॥ ೬೪ ॥
ಯತ್ತ್ವಂ ಶಂಸಸಿ ಚಾಽಸ್ಮಾಕಂ ಖೇಚರತ್ವಂ ಮಹೀಪತೇ ।
ವ್ಯರ್ಥಂ ತದಪಿ ನ ಶ್ರೇಯಃ ಶೃಣು ತತ್ರಾಽಪಿಕಾರಣಂ ॥ ೬೫ ॥
ಕ್ರಿಯತೇ ಖೇಚರತ್ವೇನ ಕಿಂ ಕಿಂ ಧರ್ಮಂ ವಿನಿಶ್ಚಯೈಃ ।
ಯತೋ ನ ಸಿದ್ಧ್ಯತೇ ಮೋಕ್ಷೋ ಜಾತಿಸ್ಮೃತ್ಯಾದಿಕಂ ತಥಾ ॥ ೬೬ ॥
ತಸ್ಮಾದ್ದೋಷಾದಿಮೇ ರಾಜನ್ಗುಣಾ ಯದ್ಯಪಿ ಕೀರ್ತಿತಾಃ ।
ಪ್ರೇತಾನಾಂ ಯಾನ್ ಸಮಾಶ್ರಿತ್ಯ ಕಾಚಿತ್ಸಿದ್ಧಿರ್ನಜಾಯತೇ ॥ ೬೭ ॥
ವಿಷಾದೋ ಜಾಯತೇ ಭೂಯೋ ಗುಣೈರೇತೈರ್ನರಾಧಿಪ ।
ಅಶಕ್ತಾಃ ಪ್ರೇತಯೋಗಾದ್ವೈ ಸರ್ವಸ್ಯ ಶುಭಕರ್ಮಣಃ ॥ ೬೮ ॥

---

೬೨. ನಿನಗೆ ಬಹುವಾಗಿ ಹೇಳಿ ಪ್ರಯೋಜನವೇನು? ಲೋಕದಲ್ಲಿ ನಿಂದ್ಯವೂ, ದುಃಖವನ್ನುಂಟುಮಾಡುವುದೂ ಆದ ಕಾರ್ಯವು ತಾನಾಗಿಯೇ ಒದಗುವುದು.

೬೩–೬೪. ಛಿದ್ರವಿಲ್ಲದೆ ನಮ್ಮ ಜೀವನವೇ ನಡೆಯುವುದಿಲ್ಲ. ನಾವು ನೀರು, ನೆರಳು, ಯಾನ, ವಾಹನಗಳನ್ನು ಹೊಂದದಿರುವುದರಿಂದ ರಾತ್ರಿಯಲ್ಲಿ ಛಿದ್ರಕ್ಕಾಗಿ ಸಂಚರಿಸುವೆವು. ಬೆಳಿಗ್ಗೆ ಮತ್ತು ಹಗಲು ಸಂಚರಿಸುವುದಿಲ್ಲ.

೬೫. ದೊರೆಯೆ! ನೀನು ನಮ್ಮ ಆಕಾಶಗಮನವನ್ನು ಹೊಗಳುವೆಯಷ್ಟೆ. ಅದೂ ವ್ಯರ್ಥವಾದುದು. ಶ್ರೇಯಸ್ಸಿಗೆ ಕಾರಣವಾದುದಲ್ಲ. ಅದಕ್ಕೆ ಕಾರಣ ವನ್ನು ಕೇಳು.

೬೬. ಖೇಚರತ್ವದಿಂದಾದರೂ ಸಿದ್ಧಿಸುವ ಧರ್ಮವಾವುದು. ಅದರಿಂದ ಮೋಕ್ಷವು ಲಭಿಸುವುದಿಲ್ಲ. ಜಾತಿ ಸ್ಮರಣಾದಿಗಳೂ ಹಾಗೆಯೇ.

೬೭. ರಾಜನೆ! ಆ ದೋಷದಿಂದ ಇವು ಗುಣಗಳಾಗಿದ್ದರೂ ಇವುಗಳಿಂದ ಪ್ರೇತಗಳಿಗೆ ಯಾವ ಸಿದ್ಧಿಯೂ ಉಂಟಾಗುವುದಿಲ್ಲ.

೬೮. ಈ ಗುಣಗಳಿಂದ ನಮಗೆ ವಿಷಾದವುಂಟಾಗುವುದು. ಪ್ರೇತರಾಗಿರು ವುದರಿಂದ ಸಕಲ ಶುಭಕಾರ್ಯಗಳಿಗೂ ಅಶಕ್ತರಾಗಿದ್ದೇವೆ.

ರಾಜೋವಾಚ :—

ಯದಿ ಯಾಸ್ಯಾಮಿ ಭೂಯೋಽಹಂ ಗೃಹಮಸ್ಮಾನ್ಮಹಾವನಾತ್ ।
ತತ್ಕರಿಷ್ಯಾಮಿ ಸರ್ವೇಷಾಂ ಗಯಾಶ್ರಾದ್ಧಮಸಂಶಯಂ ॥ ೯ ॥
ತಾರಯಿಷ್ಯಾಮಿ ಸರ್ವಾಂಶ್ಚ ಸರ್ವಪಾಪೈಃ ಪ್ರಯತ್ನತಃ ।
ಅಸ್ಯಾತ್ಮದೇಹದಾಹೇನ ಸತ್ಯೇನಾತ್ಮಾನಮಾಲಭೇ ॥ ೨೦ ॥
ತಸ್ಮಾದ್ಧೃದ್ಗತಶಂಕಾಮೇ ಹೃತಾ ಯುಷ್ಮಾಭಿರದ್ಯ ವೈ ।
ಯೇನ ತತ್ಪ್ರಾಪ್ಯಯುಷ್ಮಾಕಮುಪಕಾರಂ ಕರೋಮ್ಯಹಂ ॥ ೨೧ ॥

ಮಾಂಸಾದ ಉವಾಚ :—

ಇತಃ ಸ್ಥಾನಾನ್ಮಹಾರಾಜ ನಾಽತಿದೂರೇ ಜಲಾಶಯಃ ।
ಅಸ್ತಿ ನಾನಾದ್ರುಮೋಪೇತಶ್ಚಿತ್ತಾಹ್ಲಾದಕರಃ ಪರಃ ॥ ೨೨ ॥
ತಸ್ಮಾದುದಙ್ಮುಖೋ ಗಚ್ಛ ಯತ್ರ ತೇ ಜಲಪಕ್ಷಿಣಃ ।
ದೃಶ್ಯಂತೇ ವ್ಯೋಮಮಾರ್ಗೇಣ ಪ್ರಗಚ್ಛಂತಃ ಸಮಂತತಃ ॥ ೨೩ ॥

ಸೂತ ಉವಾಚ :—

ಅಥಾಽಸೌ ನೃಪಶಾರ್ದೂಲಃ ಸಮುತ್ಥಾಯ ಶನೈಃ ಶನೈಃ ।
ಸೌಮ್ಯಾಂ ದಿಶಂ ಸಮುದ್ದಿಶ್ಯ ಪ್ರತಸ್ಥೇ ಸ ತು ದುಃಖಿತಃ ॥ ೨೪ ॥

---

೯. ರಾಜನು ಹೇಳುತ್ತಾನೆ:—ನಾನು ಮರಳಿ ಈ ಮಹಾವನದಿಂದ ಮನೆಗೆ ಹೋದರೆ ಎಲ್ಲರಿಗೂ ಗಯಾ ಶ್ರಾದ್ಧವನ್ನು ನಿಶ್ಚಯವಾಗಿಯೂ ಮಾಡುವೆನು.

೨೦. ಎಲ್ಲರನ್ನೂ ನಿಜದೇಹವನ್ನು ಕೊಡುವುದರಿಂದಾದರೂ ಸಮಸ್ತ ಪಾಪಗಳಿಂದ ಉದ್ಧರಿಸುವೆನು.

೨೧. ನೀವು ನನ್ನ ಮನಸ್ಸಿನ ಶಂಕೆಯನ್ನು ಪರಿಹರಿಸಿದ್ದರಿಂದ ಆ ಗಯೆಯನ್ನು ಸೇರಿ ನಿಮಗೆ ನಾನು ಉಪಕಾರವನ್ನು ಮಾಡುವೆನು.

೨೨. ಮಾಂಸಾದನು ಹೇಳುತ್ತಾನೆ:—ಮಹಾರಾಜ! ಇಲ್ಲಿಂದ ಸಮೀಪದಲ್ಲಿಯೇ ಅನೇಕ ವೃಕ್ಷಗಳಿಂದ ಕೂಡಿರುವುದೂ, ಮನಸ್ಸಿಗೆ ಸಂತೋಷವನ್ನುಂಟುಮಾಡುವುದೂ ಆದ ಕೆರೆಯೊಂದಿದೆ.

೨೩. ಆದ್ದರಿಂದ ಉತ್ತರಾಭಿಮುಖವಾಗಿ ಹೋಗು. ಅಲ್ಲಿ ಆಕಾಶಮಾರ್ಗದಿಂದ ಹೋಗುತ್ತಿರುವ ಜಲಪಕ್ಷಿಗಳು ಕಾಣಿಸುವುವು.

೨೪. ಸೂತನು ಹೇಳುತ್ತಾನೆ:—ಬಳಿಕ ಈ ರಾಜನು ಮೆಲ್ಲನೆ ಎದ್ದು ದುಃಖದಿಂದ ಉತ್ತರದಿಕ್ಕನ್ನನುಸರಿಸಿ ಪ್ರಯಾಣಮಾಡಿದನು.

ಏವಂ ಪ್ರಗಚ್ಛತಾ ತೇನ ಕ್ಷುತ್ಪಿಪಾಸಾಕುಲೇನ ಚ ।
ಅದೂರಾದೇವ ಸಂದೃಷ್ಟಂ ನೀಲಂ ದ್ರುಮಕದಂಬಕಂ ।
ಭ್ರಮಮಾಣೈರ್ಬಕೈರ್ಹಂಸೈಃ ಸಾರಸೈರ್ಮದ್ಗುಭಿಸ್ತಥಾ ॥ ೭೫ ॥
ಸ ಗತ್ವಾ ಸಲಿಲಂ ತತ್ರ ತದ್ವಾತೇನ ಮಹೀಪತಿಃ ।
ಆಹೂತ ಇವ ಶೀತೇನ ಪ್ರಯಯೌ ತ್ವರಯಾನ್ವಿತಃ ॥ ೭೬ ॥
ಅಥಾಽಪಶ್ಯನ್ಮನೋಹಾರಿ ಸೌಮ್ಯಸತ್ವನಿಷೇವಿತಂ ।
ಆಶ್ರಮಂ ಹ್ರದತೀರಸ್ಥಂ ತಾಪಸೈಃ ಸರ್ವತೋ ವೃತಂ ॥ ೭೭ ॥
ಪುಷ್ಪಿತೈಃ ಫಲಿತೈರ್ವೃಕ್ಷೈಃ ಸಮಂತಾತ್ಪರಿವೇಷ್ಟಿತಂ ।
ವಿಚಿತ್ರೈರ್ಮಧುರಾರಾವೈರ್ನಾದಿತಂ ವಿಹಗೋತ್ತಮೈಃ ॥ ೭೮ ॥
ತತ್ರಾಽಪಶ್ಯನ್ನಗಾಽಧಸ್ತಾತ್ತಪಸ್ವಿಗಣಸೇವಿತಂ ।
ಶಿವಧರ್ಮಪರಂ ಶಾಂತಂ ಜೈಮಿನಿಂ ಮುನಿಸತ್ತಮಂ ॥ ೭೯ ॥
ಅಥ ಗತ್ವಾ ಸ ರಾಜೇಂದ್ರಃ ಪ್ರಣಿಪತ್ಯ ಮುನೀಶ್ವರಂ ।
ತಥಾಽನ್ಯಾನಪಿ ತಚ್ಛಿಷ್ಯಾನ್ನಿಪಪಾತ ಧರಾತಲೇ ॥ ೮೦ ॥
ತೇ ದೃಷ್ಟ್ವಾಽದೃಷ್ಟಪೂರ್ವಂ ತಂ ರಾಜಲಕ್ಷಣಲಕ್ಷಿತಂ ।
ಧೂಲಿಧೂಸರಿತಾಂಗಂ ಚ ಭಸ್ಮಾವೃತಮಿವಾಽಚಲಂ ॥ ೮೧ ॥

---

೭೫. ಹೀಗೆ ಹೋಗುತ್ತಿರುವ ಅವನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಹತ್ತಿರದಲ್ಲಿಯೇ ನೀಲವರ್ಣವೂ, ವೃಕ್ಷಗಳ ಸಮೂಹವುಳ್ಳದ್ದೂ, ಸಂಚರಿಸುವ ಬಕ, ಹಂಸ, ಸಾರಸ, ಮದ್ಗು ಈ ಪಕ್ಷಿಗಳಿಂದ ಕೂಡಿರುವುದೂ ಆದ ಸರೋವರವನ್ನು ಕಂಡನು.

೭೬–೭೮. ಆ ರಾಜನು ಆ ಸರೋವರದ ತಂಗಾಳಿಯಿಂದ ಕರೆಯಲ್ಪಟ್ಟವನಂತೆ ವೇಗದಿಂದ ನೀರಿನ ಹತ್ತಿರ ಹೋಗಿ ಮನೋಹರವೂ, ಸೌಮ್ಯವಾದ ಪ್ರಾಣಿಗಳಿಂದ ತುಂಬಿರುವುದೂ, ಹೂವು ಹಣ್ಣುಗಳನ್ನು ಹೊತ್ತಿರುವ ವೃಕ್ಷಗಳಿಂದ ಸುತ್ತಲೂ ಸುತ್ತುವರಿಯಲ್ಪಟ್ಟದ್ದೂ ಆದ ಸರೋವರದ ಹತ್ತಿರವಿರುವ ಆಶ್ರಮವನ್ನು ಕಂಡನು.

೭೯. ಅಲ್ಲಿ ಮುನಿವೃಂದ ಸೇವಿತನೂ, ಶೈವಧರ್ಮನಿರತನೂ, ಶಾಂತನೂ ಆದ ಜೈಮಿನಿಯೆಂಬ ಮುನಿವರ್ಯನನ್ನು ನೋಡಿದನು.

೮೦. ಕೂಡಲೆ ಆ ಮುನಿವರ್ಯನಿಗೂ, ಅವನ ಇತರ ಶಿಷ್ಯರಿಗೂ ಸಾಷ್ಟಾಂಗ ನಮಸ್ಕಾರಮಾಡಿದನು.

೮೧–೮೨. ಆ ಮುನಿಗಳು ಹಿಂದೆ ನೋಡದಿರುವವನೂ, ರಾಜಲಕ್ಷಣಗಳಿಂದ ಕೂಡಿರುವವನೂ, ಧೂಳಿನಿಂದ ಮಲಿನವಾದ ಅವಯವವುಳ್ಳವನೂ, ಬೂದಿಯಿಂದ ಮುಚ್ಚಿರುವ ಪರ್ವತದಂತಿರುವವನೂ ಆದ ಅವನನ್ನು ನೋಡಿ

ಮನ್ಯಮಾನಾ ಮಹೀಪಾಲಂ ವಿಸ್ಮಯೋತ್ಫುಲ್ಲಲೋಚನಾಃ ।
ಪ್ರೋಚುಶ್ಚ ಮಧುರೈರ್ವಾಕ್ಯೈರಾಶೀರ್ವಾದಪುರಃಸರೈಃ ॥ ೮೨ ॥
ಕುತಸ್ತ್ವಮನುಸಂಪ್ರಾಪ್ತೋ ವನೇಽಸ್ಮಿಂಜನವರ್ಜಿತೇ ।
ಏಕಾಕೀ ಸುಕುಮಾರಾಂಗಃ ಪದಾತಿಃ ಶ್ರಮವಿಹ್ವಲಃ ॥ ೮೩ ॥
ಪಾರ್ಥಿವಸ್ಯೇವ ಲಿಂಗಾನಿ ದೃಶ್ಯಂತೇ ತವ ಭೂರಿಶಃ ।
ನ ವಿದ್ಮೋ ನಿಶ್ಚಯಂ ತಸ್ಮಾದ್ವದಾಗಮನಕಾರಣಂ ॥ ೮೪ ॥
ಅಥೋವಾಚ ನೃಪಃ ಕೃಚ್ಛ್ರಾತ್ತೃಪಿಪಾಸಾ ಮಾಂ ಪ್ರಬಾಧತೇ ।
ತಸ್ಮಾದ್ವದತ ಪಾನೀಯಂ ಯತ್ಪೀತ್ವಾ ಕೀರ್ತಯಾಮ್ಯಹಂ ॥ ೮೫ ॥
ತತಸ್ತೈರ್ದರ್ಶಿತಂ ತೋಯಂ ಸಮೀಪೇ ಯನ್ಮಹೀಪತೇಃ ।
ಸೋಽಪಿ ಪೀತ್ವಾಽವಗಾಹ್ಯಾಽಥ ವಿತೃಷ್ಣಃ ಸಮಪದ್ಯತ ॥ ೮೬ ॥
ತತಃ ಫಲಾನಿ ಪಕ್ವಾನಿ ತರೂಣಾಂ ಪತಿತಾನ್ಯಧಃ ।
ಸುಮೃಷ್ಟಾನಿ ಸಮಾದಾಯ ಭಕ್ಷಯಾಮಾಸ ವಾಂಛಯಾ ॥ ೮೭ ॥
ತತಸ್ತೃಪ್ತಿಂ ಪರಾಂ ಪ್ರಾಪ್ಯ ಗತ್ವಾ ಜೈಮಿನಿ ಸನ್ನಿಧೌ ।
ಉಪವಿಷ್ಟಃ ಪ್ರಣಮ್ಯೋಚ್ಚೈಸ್ತಥಾಽನ್ಯಾಂಶ್ಚ ಮುನೀನ್ಕ್ರಮಾತ್ ॥ ೮೮ ॥
ಉವಾಚ ಚ ನಿಜಾಂ ವಾರ್ತಾಂ ಕೃತಾಂಜಲಿಪುಟಃ ಸ್ಥಿತಃ ।
ಸ ಪೃಷ್ಟಸ್ತಾಪಸೈಃ ಸರ್ವೈಃ ಸುವಿಸ್ಮಯಸಮನ್ವಿತೈಃ ॥ ೮೯ ॥

---

ದೊರೆಯೆಂದು ತಿಳಿದು ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವರಾಗಿ ಆಶೀರ್ವಾದಗೈದು ಸವಿನುಡಿಯಿಂದ ಹೀಗೆಂದರು.

೮೩. "ಜನರಿಲ್ಲದ ಈ ಕಾಡಿಗೆ ಒಬ್ಬಂಟಿಗನೂ, ಕೋಮಲಾಂಗನೂ, ಪಾದಚಾರಿಯೂ, ಆಯಾಸದಿಂದ ವ್ಯಥೆಗೊಂಡವನೂ ಆದ ನೀನು ಏಕೆ ಬಂದಿರುವೆ?

೮೪. ನಿನ್ನಲ್ಲಿ ಅನೇಕ ರಾಜಚಿಹ್ನೆಗಳು ಕಾಣಿಸುವುವು. ನಿಶ್ಚಯವನ್ನರಿಯೆವು. ಆದ್ದರಿಂದ ಬರಲು ಕಾರಣವನ್ನು ಹೇಳು.

೮೫–೮೬. ಬಳಿಕ ರಾಜನು, "ಬಾಯಾರಿಕೆಯಿಂದ ಪೀಡಿತನಾಗಿರುವೆನು. ನೀರು ಎಲ್ಲಿದೆ? ಎಂಬುದನ್ನು ಹೇಳಿರಿ. ಅದನ್ನು ಕುಡಿದು ಎಲ್ಲವನ್ನೂ ಹೇಳುವೆನು" ಎಂದನು. ಬಳಿಕ ಆ ಮುನಿಗಳು ಸಮೀಪದಲ್ಲಿಯೆ ನೀರನ್ನು ರಾಜನಿಗೆ ತೋರಿಸಲು ಅವನು ಅದನ್ನು ಕುಡಿದು ನೀರಿನಲ್ಲಿಳಿದು ಬಾಯಾರಿಕೆಯಿಲ್ಲದವನಾದನು.

೮೭. ಮರಗಳಿಂದ ಕೆಳಗೆ ಬಿದ್ದ ರುಚಿಯಾದ ಮಾಗಿದ ಹಣ್ಣುಗಳನ್ನು ತೆಗೆದುಕೊಂಡು ಸ್ವೇಚ್ಛೆಯಾಗಿ ತಿಂದನು.

೮೮–೮೯. ಬಳಿಕ ಅತ್ಯಂತ ತೃಪ್ತಿಗೊಂಡು ಜೈಮಿನಿಯನ್ನೂ, ಇತರ ಮುನಿಗಳನ್ನೂ ವಂದಿಸಿ ಆಶ್ಚರ್ಯಗೊಂಡ ಅವರ ಪ್ರಶ್ನೆಯಂತೆ ಕೈಮುಗಿದುಕೊಂಡು ತನ್ನ ವೃತ್ತಾಂತವನ್ನು ಹೀಗೆ ಹೇಳಿದನು.

ವಿದೂರಥೋ ಮಹೀಪೋಽಹಂ ಮಾಹಿಷ್ಮತ್ಯಾಂ ಕೃತಾಸ್ಪದಃ ।
ಮೃಗಲಿಪ್ಸುರ್ವನೇ ಘೋರೇ ಪ್ರವಿಷ್ಟಃ ಸೈನಿಕೈಃ ಸಹ ॥ ೯೦ ॥
ತತೋ ಮೇ ಭ್ರಮಮಾಣಸ್ಯ ಪ್ರಣಷ್ಟಾಃ ಸರ್ವಸೈನಿಕಾಃ ।
ಗುಲ್ಮೈರಂತಾರಿತಾಶ್ಚಾಽನ್ಯೇ ನ ಜಾನೇಽಹಂ ಕಥಂ ಸ್ಥಿತಾಃ ॥ ೯೧ ॥
ಆಸೀದ್ಧಯೋ ಮಮಾಽಧಸ್ತಾಜ್ಜಾತ್ಯಃ ಸರ್ವಗುಣಾನ್ವಿತಃ ।
ಸೋಽಪಿ ಕರ್ಮವಿಪಾಕೇನ ಪಂಚತ್ವಂ ಸಮುಪಸ್ಥಿತಃ ॥ ೯೨ ॥
ಭ್ರಮಮಾಣಸ್ತ್ವಹಂ ಪ್ರಾಪ್ತ ಆಯುಃಶೇಷತಯಾಽತ್ರ ಚ ।
ತದ್ಬ್ರೂತ ಕಃ ಪ್ರದೇಶೋಽಯಂ ಕಿಯದ್ದೂರೇ ಚ ಮೇ ಪುರೀ ॥ ೯೩ ॥
ತತಸ್ತೇ ತಾಪಸಾಃ ಪ್ರೋಚುರ್ವಿದ್ಮಹೇ ನ ವಯಂ ಪುರೀಂ ।
ತ್ವಾಂ ಚ ದೇಶಂ ಚ ತೇ ರಾಜನ್ ಕೋಽಯಂ ದೇಶಶ್ಚ ಕೀರ್ತ್ಯತೇ॥ ೯೪ ॥
ನರೇಂದ್ರೈರ್ನೃಪ ನಃ ಕಾರ್ಯಂ ನ ದೇಶೈರ್ನಪುರೈರ್ನೃಪ ।
ವನೇಚರಾ ವಯಂ ನಿತ್ಯಂ ಶಿವಾರಾಧನತತ್ಪರಾಃ ॥ ೯೫ ॥
ಸರ್ವೇ ಶೀರ್ಣಾನಿ ವೃಕ್ಷಾಣಾಂ ಪುಷ್ಪಾಣಿ ಚ ಫಲಾನಿ ಚ ।
ಭಕ್ಷಯಾಮೋಽಥ ಪತ್ರಾಣಿ ಶರೀರಸ್ಥಿತಿಹೇತುನಾ ॥ ೯೬ ॥

---

೯೦. ಮಾಹಿಷ್ಮತಿಯ ದೊರೆಯಾದ ವಿದೂರಥನೆಂಬ ನಾನು ಮೃಗಬೇಟೆಗಾಗಿ ಸೈನಿಕರೊಡನೆ ಘೋರವನವನ್ನು ಹೊಕ್ಕೆನು.

೯೧. ಅಲ್ಲಿ ಸಂಚರಿಸುತ್ತಿರುವ ನನ್ನ ಸಕಲ ಸೈನಿಕರೂ ನಾಶವಾದರು. ಕೆಲವರು ಪೊದೆಗಳಲ್ಲಿ ಅಡಗಿಕೊಂಡರು. ಅವರು ಹೇಗಿದ್ದಾರೆಂಬುದನ್ನು ನಾನರಿಯೆನು.

೯೨. ನನ್ನ ಉತ್ತಮ ಜಾತ್ಯವು ಕೆಳಗೆ ಬಿದ್ದು ಕರ್ಮವಿಪಾಕದಿಂದ ಮಡಿಯಿತು.

೯೩. ನಾನು ಆಯುಸ್ಸು ಉಳಿದಿರುವುದರಿಂದ ಸಂಚರಿಸುತ್ತ ಇಲ್ಲಿಗೆ ಬಂದೆನು. ಆದ್ದರಿಂದ ಇದು ಯಾವ ಸ್ಥಳ? ನನ್ನ ಪಟ್ಟಣವು ಎಷ್ಟು ದೂರದಲ್ಲಿದೆ ಎಂಬುದನ್ನು ಹೇಳು.

೯೪. ಬಳಿಕ ಆ ತಾಪಸರು ಇಂತೆಂದರು. ನಾವು ಪಟ್ಟಣ, ದೇಶಗಳನ್ನಾಗಲಿ, ನಿನ್ನನ್ನಾಗಲಿ ಅರಿಯೆವು. ಯಾವುದಕ್ಕೆ ದೇಶವೆನ್ನುವರೊ!

೯೫. ನಮಗೆ ರಾಜರು, ದೇಶಗಳು, ಪಟ್ಟಣಗಳು ಇವುಗಳಿಂದ ಪ್ರಯೋಜನವಿಲ್ಲ. ಕಾಡಿನಲ್ಲಿ ವಾಸಮಾಡುವ ನಾವು ಯಾವಾಗಲೂ ಶಿವಾರಾಧನೆಯಲ್ಲಿ ಆಸಕ್ತರಾಗಿರುವೆವು.

೯೬. ನಾವು ದೇಹಧಾರಣೆಗಾಗಿ ಮರಗಳ ಒಣಗಿದ ಪುಷ್ಪಫಲಗಳನ್ನೂ, ಎಲೆಗಳನ್ನೂ ತಿನ್ನುತ್ತೇವೆ.

ಮಾನುಷ್ಯೈಃ ಸಹ ಸಂಸರ್ಗಂ ಸಂಭಾಷಂ ಚ ನರಾಧಿಪ ।
ನ ಕುರ್ಮೋ ನ ಚ ಪಶ್ಯಾಮೋ ಗಚ್ಛಾಮೋಽನ್ಯತ್ರ ದೂರತಃ ॥ ೯೭ ॥
ಏಕೈಕಸ್ಯ ತರೋರ್ಮೂಲೇ ದಿವಸಂ ವಾ ದಿನದ್ವಯಂ ।
ತಿಷ್ಠಾಮೋ ನ ಭವೇದ್ಯೇನ ಮಮತ್ವಂ ತತ್ಸಮುದ್ಭವಂ ॥ ೯೮ ॥
ಕಾರಣಾತ್ತ್ವ ರಾಜೇಂದ್ರ ನಿಶಾಮೇತಾಂ ವನಸ್ಪತೌ ।
ನೇಷ್ಯಾಮೋಽನ್ಯತ್ರ ಯಾಸ್ಯಾಮಃ ಪ್ರಭಾತೇಽನ್ಯತ್ರ ಕಾನನೇ ॥ ೯೯ ॥
ಏಕಾಕಿನಂ ಪದಾತಿಂ ಚ ನಿಃಶಸ್ತ್ರಂ ಶ್ರಮವಿಹ್ವಲಂ ।
ತ್ವಾಂ ದೃಷ್ಟ್ವಾ ಭೂಪತೇಽಸ್ಮಾಕಂ ದಯಾಜಾತಾ ತತೋಽಧಿಕಾ॥ ೧೦೦ ॥
ಏಕಾಕೀ ಪಾರ್ಥಿವೇಂದ್ರೋಽಯಂ ನೇಷ್ಯತಿ ಚ ಕಥಂ ನಿಶಾಂ ।
ವನೇಽಸ್ಮಿನ್ಮಂತ್ರಯಿತ್ವೈವಂ ತತೋಽತ್ರೈವ ವ್ಯವಸ್ಥಿತಾಃ ॥ ೧೦೧ ॥
ತಸ್ಮಾದತ್ರೈವ ನೇಷ್ಯಾಮಃ ಸಮೇತಾಃ ಶರ್ವರೀಮಿಮಾಂ ।
ಗಂತವ್ಯಂ ಪ್ರಾತರುತ್ಥಾಯ ತತಃ ಸರ್ವೈರ್ಯಥೇಚ್ಛಯಾ ॥ ೧೦೨ ॥
ಏವಂ ಸಂವದತಾಂ ತೇಷಾಂ ಭಗವಾಂಸ್ತೀಕ್ಷ್ಣದೀಧಿತಿಃ ।
ಅಸ್ತಾಚಲಮನುಪ್ರಾಪ್ತಃ ಕುಂಕುಮಕ್ಷೋದಸನ್ನಿಭಃ ॥ ೧೦೩ ॥

---

೯೭. ಮನುಷ್ಯರೊಡನೆ ಸಹವಾಸ, ಸಂಭಾಷಣೆಗಳನ್ನು ಮಾಡುವುದಿಲ್ಲ. ನೋಡುವುದೂ ಇಲ್ಲ. ದೂರವಾಗಿ ಬೇರೆ ಕಡೆಗೆ ಹೋಗುವೆವು.

೯೮. ನಮ್ಮದು ಎಂಬ ಮಮತೆಯುಂಟಾಗದಂತೆ ಒಂದೊಂದು ಮರದ ಬುಡದಲ್ಲಿ ಒಂದು ದಿನ ಅಥವಾ ಎರಡು ದಿನಗಳು ವಾಸಮಾಡುವೆವು.

೯೯. ದೊರೆಯೆ! ನಿನಗಾಗಿ ಈ ದಿನ ರಾತ್ರಿ ಈ ಮರದ ಕೆಳಗೆ ಕಳೆಯುವೆವು. ಬೆಳಗಾದ ಕೂಡಲೆ ಬೇರೆ ಕಾಡಿಗೆ ಹೋಗುವೆವು.

೧೦೦. ಒಬ್ಬಂಟಿಗನೂ, ಪಾದಚಾರಿಯೂ, ಶಸ್ತ್ರವಿಲ್ಲದವನೂ, ಆಯಾಸಗೊಂಡಿರುವವನೂ ಆದ ನಿನ್ನನ್ನು ನೋಡಿ ನಮಗೆ ಅಧಿಕವಾಗಿ ದಯೆಯುಂಟಾಗಿದೆ.

೧೦೧. ಒಬ್ಬಂಟಿಗನಾದ ಈ ರಾಜನು ಈ ಕಾಡಿನಲ್ಲಿ ರಾತ್ರಿಯನ್ನು ಹೇಗೆ ಕಳೆಯುವನೆಂದು ಯೋಚಿಸಿ ನಾವು ಇಲ್ಲಿಯೇ ನೆಲೆಸಿದೆವು.

೧೦೨. ಆದ್ದರಿಂದ ನಾವೆಲ್ಲ ಒಟ್ಟಿಗೆ ಸೇರಿ ಈ ರಾತ್ರಿಯನ್ನು ಇಲ್ಲಿಯೇ ಕಳೆಯೋಣ. ಬೆಳಗ್ಗೆ ಎದ್ದು ಎಲ್ಲರೂ ಸ್ವೇಚ್ಛೆಯಾಗಿ ಹೊರಟುಹೋಗೋಣ.

೧೦೩. ಅವರು ಹೀಗೆ ಸಂಭಾಷಣೆ ಮಾಡುತ್ತಿರಲು ಸೂರ್ಯನು ಕುಂಕುಮದ ಪುಡಿಯಂತೆ ಶೋಭಿಸುತ್ತ ಅಸ್ತಾಚಲವನ್ನು ಸೇರಿದನು.

ಅಥ ತಾಂಸ್ತಾಪಸಾನ್ರಾಜಾ ಪ್ರೋವಾಚ ಪ್ರಣತಃ ಸ್ಥಿತಃ ।
ಸಂಧ್ಯಾಕಾಲಃ ಸಮಾಯಾತಃ ಸಾಂಪ್ರತಂ ಮುನಿಸತ್ತಮಾಃ ।
ತಸ್ಮಾತ್ಸಂಧ್ಯಾವಿಧಿಃ ಕಾರ್ಯಃ ಸರ್ವೈರೇವ ಯಥೋಚಿತಃ ॥ ೧೦೪ ॥
ಅಥ ತೇ ಮುನಯಃ ಸರ್ವೇ ಸ ಚ ರಾಜಾ ತಥಾ ದ್ವಿಜಾಃ ।
ಚಕ್ರುಃ ಸಾಯಂತನಂ ಕರ್ಮ ಯಥೋದ್ದಿಷ್ಟಂ ಪುರಾತನೈಃ ॥ ೧೦೫ ॥
ಕಾಮಿಭಿಃ ಕಾಮಿನೀಲೋಕೈಃ ಪ್ರಿಯೋಕ್ತೈರಭಿವಾಂಛಿತಾ ।
ಅಶಸ್ತ್ರಿಭಿರ್ವಿಶೇಷೇಣ ಸಂಪ್ರಾಪ್ತಾ ರಜನೀ ತತಃ ॥ ೧೦೬ ॥
ಪೀಯೂಷಾರ್ಣವ ವೇಲೇವ ವಿಷವೃಕ್ಷಲತೇವ ಚ ।
ಉಲೂಕೈಶ್ಚಕ್ರವಾಕೈಶ್ಚ ಯುಗಪದ್ಯಾ ವಿಲೋಕ್ಯತೇ ॥ ೧೦೭ ॥
ಉಲೂಕಾ ರಾಕ್ಷಸಾಶ್ಚೌರಾಃ ಕಾಮಿನಃ ಕುಲಟಾಂಗನಾಃ ।
ಯಾಂ ವಾಂಛಂತಿ ಸದಾ ಸೋತ್ಕಾಃ ಸುವೃಷ್ಟಿಮಿವ ಕರ್ಷಕಾಃ ॥ ೧೦೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಮಾಂಸಾದವಚನಾದೃಷ್ಯಾಶ್ರಮಪದಂ ಪ್ರಾಪ್ತಸ್ಯ ವಿದೂರಥಸ್ಯ ಮುನಿಭಿಃ
ಸಹ ಸಂವಾದಪೂರ್ವಕ ಸಾಯಂತನಕರ್ಮಾದಿವಿಧಾನವರ್ಣನಂ "
ನಾಮಾಷ್ಟಾದಶೋಽಧ್ಯಾಯಃ

---

೧೦೪. ಬಳಿಕ ರಾಜನು ಆ ಮುನಿಗಳನ್ನು ವಂದಿಸಿ ಮುನಿವರ್ಯರೆ! ಈಗ ಸಂಧ್ಯಾಕಾಲವು ಪ್ರಾಪ್ತವಾಗಿದೆ. ಆದ್ದರಿಂದ ಎಲ್ಲರೂ ಉಚಿತವಾದ ಸಂಧ್ಯಾವಂದನೆಯನ್ನು ಮಾಡಬೇಕು ಎಂದನು.

೧೦೫. ತರುವಾಯ ಆ ರಾಜನೂ, ಆ ಮುನಿವರ್ಯರೂ ಪ್ರಾಚೀನರು ವಿಧಿಸಿರುವ ಸಾಯಂಕಾಲದ ವಿಧಿಯನ್ನು ಆಚರಿಸಿದರು.

೧೦೬. ಸರಸವಾಡುವ ಕಾಮಿನೀ ಕಾಮುಕರಿಗೂ, ಅಸಾಧ್ವಿಯರಿಗೂ ಅಭಿಲಿಷಿತವಾದ ರಾತ್ರಿಯು ಪ್ರಾಪ್ತವಾಯಿತು.

೧೦೭. ಈ ರಾತ್ರಿಯನ್ನು ಗೂಬೆಗಳು ಕ್ಷೀರಸಮುದ್ರದ ದಡದಂತೆಯೂ, ಚಕ್ರವಾಕಗಳು ವಿಷವೃಕ್ಷದ ಕೊಂಬೆಯಂತೆಯೂ ಒಂದೇ ಸಾರಿ ನೋಡುತ್ತವೆ.

೧೦೮. ಈ ರಾತ್ರಿಯನ್ನು ಗೂಬೆಗಳೂ, ರಾಕ್ಷಸರೂ, ಕಳ್ಳರೂ, ಕಾಮುಕರೂ, ವ್ಯಭಿಚಾರಿಣಿಯರೂ ಕುತೂಹಲದಿಂದ ಒಕ್ಕಲಿಗರು ಮಳೆಯನ್ನು ಅಪೇಕ್ಷಿಸುವಂತೆ ಬಯಸುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ವಿದೂರಥಾದಿಕೃತ ಸಾಯಂತನಕರ್ಮಾದಿವಿಧಾನವರ್ಣನ "ವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ಮಾಂಸಾದಿಪ್ರೇತತ್ರಯಸ್ಯ ವಿಧೂರಥಕೃತ ಶ್ರಾದ್ಧದ್ವಾರಾ ಮುಕ್ತಿದಾನೇ ಪಿತೃಕೂಪಿಕಾತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏತಸ್ಮಿನ್ನಂತರೇ ಪ್ರಾಪ್ತಾಸ್ತಸ್ಯ ಭೂಪಸ್ಯ ಸೇವಕಾಃ ।
ಕೇಚಿಚ್ಚ ದೈವಯೋಗೇನ ಶ್ವಾಪದೈರರ್ಧಭಕ್ಷಿತಾಃ ॥ ೧ ॥
ಕ್ಷುತ್ಪಿಪಾಸಾತುರಾ ದೀನಾ ದುಃಖೇನ ಮಹತಾನ್ವಿತಾಃ ।
ಪದಪದ್ಧತಿ ಮಾರ್ಗೇಣ ಯೇನ ಯಾತಃ ಸ ಭೂಪತಿಃ ॥ ೨ ॥
ತೇ ದೃಷ್ಟ್ವಾ ಪಾರ್ಥಿವಂ ತತ್ರ ದಿಷ್ಟ್ಯಾ ದಿಷ್ಟ್ಯೇತಿ ಸಾದರಂ ।
ಬ್ರುವಂತಃ ಪಾದಯೋಸ್ತಸ್ಯ ಪತಿತಾ ಹರ್ಷಸಂಯುತಾಃ ॥ ೩ ॥
ತತಸ್ತಸ್ಯ ನರೇಂದ್ರಸ್ಯ ವ್ಯಸನಂ ಸೈನ್ಯಸಂಭವಂ ।
ಪ್ರೋಚುಶ್ಚೈವ ಯಥಾದೃಷ್ಟಮನುಭೂತಂ ಯಥಾಶ್ರುತಂ ॥ ೪ ॥
ಅಥ ತೇ ತಾಪಸಾಃ ಸರ್ವೇ ಸ ಚ ರಾಜಾ ಸ ಸೇವಕಃ ।
ಪ್ರಸುಪ್ತಾಃ ಪಾದಪಸ್ಯಾಽಧಃ ಪರ್ಣಾನ್ಯಾಸ್ತೀರ್ಯ ಭೂತಲೇ ॥ ೫ ॥
ತತಸ್ತೇಷಾಂ ಪ್ರಸುಪ್ತಾನಾಂ ಸರ್ವೇಷಾಂ ತತ್ರ ಕಾನನೇ ।
ಅತಿಕ್ರಾಂತಾ ಸುಖೇನೈವ ರಜನೀ ಸಾಮಹಾತ್ಮನಾಂ ॥ ೬ ॥

---

### ಕನ್ನಡದ ಅನುವಾದ

#### ಪಿತೃಕೂಪಿಕಾತೀರ್ಥಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ:—ಇಷ್ಟರಲ್ಲಿ ದೈವಯೋಗದಿಂದ ಘಾತುಕ ಪ್ರಾಣಿಗಳಿಂದ ಅರ್ಧ ಭಕ್ಷಿತರೂ, ಹಸಿವು ಬಾಯಾರಿಕೆಗಳಿಂದ ಪೀಡಿತರೂ, ದೀನರೂ, ಅತ್ಯಂತ ದುಃಖಗೊಂಡವರೂ ಆದ ಆ ವಿದೂರಥನ ಕೆಲವು ಮಂದಿ ಸೇವಕರು ಆ ನರೇಂದ್ರನ ಹೆಜ್ಜೆಯ ಮಾರ್ಗವನ್ನನುಸರಿಸಿ ಅಲ್ಲಿಗೆ ಬಂದರು.

೩. ಅವರು ಅಲ್ಲಿ ದೊರೆಯನ್ನು ಕಂಡು ಅದೃಷ್ಟ ಅದೃಷ್ಟವೇ ಸರಿ ಎಂದು ಹೇಳುತ್ತ ಸಂತೋಷದಿಂದ ಅವನ ಪಾದಗಳಲ್ಲಿ ಬಿದ್ದರು.

೪. ಬಳಿಕ ಅವರು ಸೈನ್ಯಕ್ಕೆ ಉಂಟಾದ ವ್ಯಸನವನ್ನು ತಾವು ನೋಡಿದಂತೆಯೂ ಕೇಳಿದಂತೆಯೂ ಆ ರಾಜನಿಗೆ ಹೇಳಿದರು.

೫. ಮುನಿಗಳೂ, ರಾಜನೂ, ಅವನ ಸೇವಕರೂ ಮರದ ಕೆಳಗೆ ಎಲೆಯನ್ನು ಹಾಸಿಕೊಂಡು ಮಲಗಿದರು.

೬. ಬಳಿಕ ಆ ಕಾಡಿನಲ್ಲಿ ಮಲಗಿದ ಮಹಾತ್ಮರಾದ ಅವರಿಗೆ ಆ ರಾತ್ರಿಯು ಸುಖವಾಗಿ ಕಳೆಯಿತು.

ತತಃ ಸ ಪ್ರಾತರುತ್ಥಾಯ ಕೃತಪೂರ್ವಾಽಽಹ್ನಿಕಕ್ರಿಯಃ ।
ತಂ ಮುನಿಂ ಪ್ರಣಿಪತ್ಯೋಚ್ಚೈರನುಜ್ಞಾಪ್ಯ ಮುಹುರ್ಮುಹುಃ ॥ ೭ ॥
ನಿಜೈಸ್ತ್ರೈಃ ಸೇವಕೈಃ ಸಾರ್ಧಂ ಪ್ರಸ್ಥಿತಃ ಸ್ವಪುರೀಂ ಪ್ರತಿ ।
ಮಾಹಿಷ್ಮತೀಂ ಸಮುದ್ದಿಶ್ಯ ದೃಷ್ಟ್ವಾ ಮಾರ್ಗೇ ಶನೈಃ ಶನೈಃ ॥ ೮ ॥
ತತೋ ನಿಜಗೃಹಂ ಪ್ರಾಪ್ಯ ಕಿಂಚಿತ್ಕಾಲಂ ಮಹೀಪತಿಃ ।
ವಿಶ್ರಮ್ಯ ಪ್ರಯಯೌ ಪಶ್ಚಾತ್ತೀರ್ಥಂ ಪುಣ್ಯಂ ಗಯಾಶಿರಃ ॥ ೯ ॥
ತಚ್ಚ ಕಾಲೇನ ಸಂಪ್ರಾಪ್ಯ ಸ್ನಾತ್ವಾ ಧೌತಾಂಬರಃ ಶುಚಿಃ ।
ಮಾಂಸಾದಾಯ ದದೌ ಶ್ರಾದ್ಧಂ ಶ್ರದ್ಧಾಪೂತೇನ ಚೇತಸಾ ॥ ೧೦ ॥
ಅಥಾಽಸೌ ಪೃಥಿವೀಪಾಲಃ ಸ್ವಪ್ನಾಂತೇ ಚ ದದರ್ಶ ತಂ ।
ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।
ವಿಮಾನವರಮಾರೂಢಂ ಸ್ತೂಯಮಾನಂ ಚ ಕಿಂನರೈಃ ॥ ೧೧ ॥

ಮಾಂಸಾದ ಉವಾಚ :–

ಪ್ರಸಾದಾತ್ತವ ಭೂಪಾಲ ಮುಕ್ತೋಽಹಂ ಪ್ರೇತಯೋನಿತಃ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಂಪ್ರತಂ ತ್ರಿದಿವಾಲಯಂ ॥ ೧೨ ॥
ತತಃ ಸ ಪ್ರಾತರುತ್ಥಾಯ ಹರ್ಷಾವಿಷ್ಟೋ ಮಹೀಪತಿಃ ।
ವಿದೈವತಂ ಸಮುದ್ದಿಶ್ಯ ಚಕ್ರೇ ಶ್ರಾದ್ಧಂ ಯಥೋಚಿತಂ ॥ ೧೩ ॥

---

೭–೮. ವಿದೂರಥನು ಬೆಳಗ್ಗೆ ಎದ್ದು ಆಹ್ನಿಕವನ್ನು ಮಾಡಿ ಆ ಮುನಿಗೆ ವಂದಿಸಿ ಅವನ ಅನುಮತಿಯನ್ನು ಪಡೆದು ತನ್ನ ಸೇವಕರೊಡನೆ ಮಾಹಿಷ್ಮತೀ ನಗರವನ್ನು ಉದ್ದೇಶಿಸಿ ಮಾರ್ಗವನ್ನು ನೋಡಿಕೊಂಡು ಮೆಲ್ಲಮೆಲ್ಲನೆ ಹೊರಟನು.

೯. ತರುವಾಯ ಅವನು ತನ್ನ ಮನೆಯನ್ನು ಸೇರಿ ಅಲ್ಲಿ ಸ್ವಲ್ಪಕಾಲ ವಿಶ್ರಾಂತಿಯನ್ನು ಪಡೆದು ಪುಣ್ಯಕರವಾದ ಗಯೆಗೆ ಪ್ರಯಾಣಮಾಡಿದನು.

೧೦. ಕೆಲವು ಕಾಲದ ಮೇಲೆ ಅವನು ಗಯೆಯನ್ನು ಸೇರಿ ಮಿಂದು ಮಡಿ ಬಟ್ಟೆಯನ್ನುಟ್ಟು ಶುದ್ಧನಾಗಿ ಶ್ರದ್ಧೆಯಿಂದ ಮಾಂಸಾದನನಿಗೆ ಶ್ರಾದ್ಧಮಾಡಿದನು.

೧೧. ಬಳಿಕ ಅವನು ಸ್ವಪ್ನಾವಸಾನದಲ್ಲಿ ದಿವ್ಯಮಾಲೆ, ವಸ್ತ್ರ, ಗಂಧ ಇವುಗಳನ್ನು ಧರಿಸಿರುವವನೂ, ಉತ್ತಮ ವಿಮಾನವನ್ನೇರಿದವನೂ, ಕಿನ್ನರರಿಂದ ಸ್ತುತಿಸಲ್ಪಡುವವನೂ ಆದ ಮಾಂಸಾದನನ್ನು ನೋಡಿದನು.

೧೨. ಮಾಂಸಾದನು ಹೇಳುತ್ತಾನೆ:—ಅರಸ! ನಾನು ನಿನ್ನ ಅನುಗ್ರಹದಿಂದ ಪ್ರೇತಜನ್ಮದಿಂದ ಮುಕ್ತನಾದೆನು. ನಿನಗೆ ಮಂಗಳವಾಗಲಿ. ಈಗ ನಾನು ಸ್ವರ್ಗಕ್ಕೆ ತೆರಳುವೆನು.

೧೩. ಬಳಿಕ ವಿದೂರಥನು ಬೆಳಿಗ್ಗೆ ಎದ್ದು ಸಂತೋಷದಿಂದ ವಿದೈವತನನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡಿದನು.

ಸೋಽಪಿ ತೇನೈವ ರೂಪೇಣ ತಸ್ಯ ಸುದರ್ಶನಂ ಗತಃ ।
ಸ್ವಪ್ನಾಂತೇ ಭೂಮಿಪಾಲಸ್ಯ ತದ್ವಚ್ಚೋಕ್ತ್ವಾ ದಿವಂಗತಃ ॥ ೧೪ ॥
ತತಃ ಪ್ರಾತಸ್ತೃತೀಯೇಽಹ್ನಿ ಕೃತಘ್ನಸ್ಯ ಮಹೀಪತಿಃ ।
ಚಕ್ರೇ ಶ್ರಾದ್ಧಂ ಯಥಾಪೂರ್ವಂ ಶ್ರದ್ಧಾಪೂತೇನ ಚೇತಸಾ ॥ ೧೫ ॥
ತತಸ್ಸೋಽಪಿ ಸಮಾಯಾತಸ್ತಸ್ಯ ಸ್ವಪ್ನೇ ಮಹೀಪತೇಃ ।
ತೇನೈವ ಪ್ರೇತರೂಪೇಣ ದುಃಖೇನ ಮಹತಾ ವೃತಃ ॥ ೧೬ ॥

ಕೃತಘ್ನ ಉವಾಚ :–

ನ ಮೇ ಗತಿರ್ಮಹಾರಾಜ ಸಂಜಾತಾ ಪಾಪಕರ್ಮಿಣಃ ।
ತಡಾಗವಿತ್ತಚಾರಸ್ಯ ಕೃತಘ್ನಸ್ಯ ತಥೈವ ಚ ॥ ೧೭ ॥
ತಸ್ಮಾತ್ಸಂಜಾಯತೇ ಮುಕ್ತಿರ್ಯಥಾ ಮೇ ಪಾರ್ಥಿವೋತ್ತಮ ।
ತಥೈವ ತ್ವಂ ಕುರುಷ್ವಾದ್ಯ ಸತ್ಯವಾಕ್ಯಪರೋಭವ ॥ ೧೮ ॥
ಸತ್ಯಮೇವ ಪರಂ ಬ್ರಹ್ಮ ಸತ್ಯಮೇವ ಪರಂ ತಪಃ ।
ಸತ್ಯಮೇವ ಪರಂ ಜ್ಞಾನಂ ಸತ್ಯಮೇವ ಪರಂ ಶ್ರುತಂ ॥ ೧೯ ॥
ಸತ್ಯೇನ ವಾಯುರ್ವಹತಿ ಸತ್ಯೇನ ತಪತೇ ರವಿಃ ।
ಸಾಗರಃ ಸತ್ಯವಾಕ್ಯೇನ ಮರ್ಯಾದಾಂ ನ ವಿಲಂಘಯೇತ್ ॥ ೨೦ ॥

---

೧೪. ಅವನೂ ಅದೇ ರೂಪದಿಂದ ಆ ದೊರೆಗೆ ಸ್ವಪ್ನಾವಸಾನದಲ್ಲಿ ಪ್ರತ್ಯಕ್ಷನಾಗಿ ಹಾಗೆಯೇ ಹೇಳಿ ಸ್ವರ್ಗಕ್ಕೆ ತೆರಳಿದನು.

೧೫. ಬಳಿಕ ನರೇಂದ್ರನು ಮೂರನೆ ದಿನ ಪ್ರಾತಃಕಾಲ ಶ್ರದ್ಧೆಯಿಂದ ಕೃತಘ್ನನಿಗೆ ಮೊದಲಿನಂತೆಯೆ ಶ್ರಾದ್ಧವನ್ನು ಮಾಡಿದನು.

೧೬. ಅವನೂ ರಾಜನ ಸ್ವಪ್ನದಲ್ಲಿ ಅತಿ ದುಃಖದಿಂದ ಕೂಡಿ ಅದೇ ಪ್ರೇತ ರೂಪದಿಂದ ಬಂದನು.

೧೭. ಕೃತಘ್ನನು ಹೇಳುತ್ತಾನೆ:—ಮಹಾರಾಜ! ಕೆರೆ ಕಟ್ಟಿಸುವುದಕ್ಕಾಗಿ ಜನರಿಂದ ಶೇಖರಿಸಿದ ದ್ರವ್ಯವನ್ನು ಕದ್ದ ಪಾಪಿಯೂ, ಕೃತಘ್ನನೂ ಆದ ನನಗೆ ಗತಿಯುಂಟಾಗಲಿಲ್ಲ.

೧೮. ಆದ್ದರಿಂದ ನೀನು ಸತ್ಯವಾಕ್ಯನಿರತನಾಗಿ ನನಗೆ ಮುಕ್ತಿಯುಂಟಾಗುವಂತೆ ಮಾಡು.

೧೯. ಸತ್ಯವೇ ಪರಬ್ರಹ್ಮನೂ, ಉತ್ತಮ ತಪಸ್ಸೂ, ಉತ್ತಮ ಜ್ಞಾನವೂ, ಉತ್ತಮ ಶಾಸ್ತ್ರ ಶ್ರವಣವೂ ಆಗಿರುವುದು.

೨೦. ಸತ್ಯದಿಂದ ಗಾಳಿಯು ಬೀಸುತ್ತದೆ. ಸತ್ಯದಿಂದ ಸೂರ್ಯನು ಪ್ರಕಾಶಿಸುತ್ತಾನೆ. ಸಮುದ್ರವೂ ಸತ್ಯವಾಕ್ಯದಿಂದ ಎಲ್ಲೆಯನ್ನು ಮೀರುವುದಿಲ್ಲ.

ತೀರ್ಥಸೇವಾ ತಪೋ ದಾನಂ ಸ್ವಾಧ್ಯಾಯೋ ಗುರುಸೇವನಂ ।
ಸರ್ವಂ ಸತ್ಯವಿಹೀನಸ್ಯ ವ್ಯರ್ಥಂ ಸಂಜಾಯತೇ ಯತಃ ॥ ೨೧ ॥
ಸರ್ವೇ ಧರ್ಮಾ ಧೃತಾಃ ಪೂರ್ವಮೇಕತ್ರಾಽನ್ಯತ್ರ ಚಾಪ್ಯೃತಂ ।
ತುಲಾಯಾಂ ಕೌತುಕಾದ್ದೇವೈರ್ಜಾತಂ ತತ್ರ ಋತಂ ಗುರು ॥ ೨೨ ॥
ತಸ್ಮಾತ್ಸತ್ಯಂ ಪುರಸ್ಕೃತ್ಯ ಮಾಂ ತಾರಯ ಮಹಾಮತೇ ।
ಏತತ್ತೇ ಪರಮಂ ಶ್ರೇಯಸ್ತಪಸೋಽಪಿ ಭವಿಷ್ಯತಿ ॥ ೨೩ ॥

ವಿದೂರಥ ಉವಾಚ:—

ಕಥಂ ತೇ ಜಾಯತೇ ಮುಕ್ತಿರ್ವದ ಮೇ ಪ್ರೇತ ಸತ್ವರಂ ।
ಕರೋಮಿ ಯೇನ ತತ್ಕರ್ಮ ಯದ್ಯಪಿ ಸ್ಯಾತ್ ಸುದುಷ್ಕರಂ ॥ ೨೪ ॥

ಪ್ರೇತ ಉವಾಚ:—

ಚಮತ್ಕಾರಪುರೇ ಭೂಪ ಶ್ರೀಕ್ಷೇತ್ರೇ ಹಾಟಕೇಶ್ವರೇ ।
ಆಸ್ತೇ ಪಾಂಸುಭಿರಾಚ್ಛನ್ನಂ ಕಲೇರ್ಭೀತಂ ಗಯಾಶಿರಃ ॥ ೨೫ ॥
ಅಧಸ್ತಾತ್ ಪ್ಲಕ್ಷವೃಕ್ಷಸ್ಯ ದರ್ಭಸ್ಥಾನಂ ಸಮಂತತಃ ।
ಕಾಲಶಾಕೈಸ್ತಥಾನೇಕೈಸ್ತಿಲೈಶ್ಚಾರಣ್ಯ ಸಂಭವೈಃ ॥ ೨೬ ॥
ತತ್ರ ಗತ್ವಾ ತಿಲೈಸ್ತೈಸ್ತ್ವಂ ತೈಶ್ಯಾಕೈಸ್ತೈಃ ಕುಶೈಸ್ತಥಾ ।
ಶ್ರಾದ್ಧಂ ದೇಹಿ ದ್ರುತಂ ಯೇನ ಮುಕ್ತಿಸ್ಸಂಜಾಯತೇ ಮಮ ॥ ೨೭ ॥

---

೨೧. ಸತ್ಯವಿಲ್ಲದವನಿಗೆ ತೀರ್ಥಸೇವೆ, ತಪಸ್ಸು, ದಾನ, ವೇದಾಧ್ಯಯನ, ಗುರುಸೇವೆ ಇವುಗಳೆಲ್ಲ ನಿಷ್ಫಲವಾಗುವುವು.

೨೨. ಹಿಂದೆ ದೇವತೆಗಳು ಎಲ್ಲ ಧರ್ಮವನ್ನು ಒಂದೆಡೆಯಲ್ಲಿಯೂ, ಸತ್ಯವನ್ನು ಇನ್ನೊಂದೆಡೆಯಲ್ಲಿಯೂ ಇಟ್ಟು ಕುತೂಹಲದಿಂದ ತೂಗಿದರು. ಅವುಗಳಲ್ಲಿ ಸತ್ಯವು ಅಧಿಕ ಭಾರವುಳ್ಳದಾಯಿತು.

೨೩. ಪ್ರಾಜ್ಞನೆ! ಆದ್ದರಿಂದ ನೀನು ಸತ್ಯದಿಂದ ನನ್ನನ್ನು ಉದ್ಧರಿಸು. ಇದು ನಿನಗೆ ತಪಸ್ಸಿಗಿಂತ ಅಧಿಕ ಶ್ರೇಯಸ್ಸನ್ನುಂಟುಮಾಡುವುದು.

೨೪–೨೬. ವಿದೂರಥನು ಹೇಳುತ್ತಾನೆ:—ಪ್ರೇತ! ನಿನಗೆ ಹೇಗೆ ಮುಕ್ತಿಯುಂಟಾಗುವುದು? ಶೀಘ್ರವಾಗಿ ಹೇಳು. ಅದು ದುಷ್ಕರವಾಗಿದ್ದರೂ ಮಾಡುವೆನು. ಪ್ರೇತನು ಹೇಳುತ್ತಾನೆ:—ದೊರೆಯೆ! ಚಮತ್ಕಾರಪುರದಲ್ಲಿರುವ ಹಾಟಕೇಶ್ವರ ಕ್ಷೇತ್ರದಲ್ಲಿ ಪ್ಲಕ್ಷವೃಕ್ಷದ ಕೆಳಗೆ ದರ್ಭೆಗಳ ಸ್ಥಾನ, ಕಾಲಶಾಕ, ಕಾಡಿನ ಎಳ್ಳು ಇವುಗಳಿಂದ ಸುತ್ತುವರಿಯಲ್ಪಟ್ಟ ಕಲಿಯ ಭಯದಿಂದ ಧೂಳಿನಲ್ಲಿ ಅಡಗಿರುವ ಗಯಾಶಿರಸ್ಸು ಇದೆ.

೨೭. ನೀನು ಅಲ್ಲಿಗೆ ಹೋಗಿ ಆ ಎಳ್ಳು, ಶಾಕ, ದರ್ಭೆ ಇವುಗಳಿಂದ ನನಗಾಗಿ ಶ್ರಾದ್ಧಮಾಡು. ಅದರಿಂದ ನನಗೆ ಮುಕ್ತಿಯುಂಟಾಗುವುದು.

ತಸ್ಯ ತದ್ವಚನಂ ಶ್ರುತ್ವಾ ಸ ದೀನಸ್ಯ ದಯಾನ್ವಿತಃ ।
ಜಗಾಮ ತತ್ರ ಯತ್ರಾಽಸ್ತೇ ಸ ವೃಕ್ಷಃ ಪ್ಲಕ್ಷ ಸಂಜ್ಞಕಃ ॥ ೨೮ ॥
ದೃಷ್ಟ್ವಾ ಶಾಕಾಂಸ್ತಿಲಾಂಸ್ತಾಂಸ್ತು ದರ್ಭಾಂಸ್ತೇನ ಯಥೋದಿತಾನ್ ।
ಅಖನತ್ತತ್ರ ದೇಶೇ ಚ ಜಲಾರ್ಥೇ ಲಘುಕೂಪಿಕಾಂ ॥ ೨೯ ॥
ತತಃ ಕೃತಘ್ನಮುದ್ದಿಶ್ಯ ಶ್ರಾದ್ಧಂ ಚಕ್ರೇ ಯಥೋದಿತಂ ।
ಆನೀಯ ಬ್ರಾಹ್ಮಣಾಂಛ್ರೇಷ್ಠಾನ್ವೇದವೇದಾಂಗಪಾರಗಾನ್ ॥ ೩೦ ॥
ಕೃತಮಾತ್ರೇ ತತಃ ಶ್ರಾದ್ಧೇ ದಿವ್ಯರೂಪಧರಃ ಪುಮಾನ್ ।
ವಿಮಾನವರಮಾರೂಢೋ ವಿದೂರಥಮಥಾಽಬ್ರವೀತ್ ॥ ೩೧ ॥
ಮುಕ್ತೋಽಹಂ ತ್ವತ್ಪ್ರಸಾದಾಚ್ಚ ಪ್ರೇತತ್ವಾದ್ದಾರುಣಾದ್ವಿಭೋ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಂಪ್ರತಂ ತ್ರಿದಶಾಲಯಂ ॥ ೩೨ ॥
ಸೂತ ಉವಾಚ :—
ತತಃ ಪ್ರಭೃತಿ ಸಾ ತತ್ರ ಕೂಪಿಕಾ ಖ್ಯಾತಿಮಾಗತಾ ।
ಪಿತೄಣಾಂ ಪುಷ್ಟಿದಾ ನಿತ್ಯಂ ಗಯಾಶೀರ್ಷಸಮುದ್ಭವಾ ॥ ೩೩ ॥
ಪ್ರೇತಪಕ್ಷಸ್ಯ ದರ್ಶಾಯಾಂ ಯಸ್ತಸ್ಯಾಂ ಶ್ರಾದ್ಧಮಾಚರೇತ್ ।
ಕಾಲಶಾಕೇನ ವಿಪ್ರೇಂದ್ರಾಸ್ತಥಾಽರಣ್ಯೋದ್ಭವೈಸ್ತಿಲೈಃ ॥ ೩೪ ॥
ಕೃಂತಿತೈಶ್ಚ ತಥಾ ದರ್ಭೈಃ ಸಮ್ಯಕ್ ಶ್ರದ್ಧಾಸಮನ್ವಿತಃ ।
ಸ ಪ್ರಾಪ್ನೋತಿ ಫಲಂ ಕೃತ್ಸ್ನಂ ಕೃತಘ್ನಪ್ರೇತ ತೀರ್ಥತಃ ॥ ೩೫ ॥

---

೨೮–೨೯. ಆ ರಾಜನು ದೀನನಾದ ಆ ಕೃತಘ್ನನ ಮಾತನ್ನು ಕೇಳಿ ಕರುಣೆಗೊಂಡು ಪ್ಲಕ್ಷವೃಕ್ಷದೆಡೆಗೆ ಹೋದನು. ಅಲ್ಲಿ ಶಾಕ, ತಿಲ, ದರ್ಭೆಗಳನ್ನು ನೋಡಿ ನೀರಿಗಾಗಿ ಸಣ್ಣ ಗುಣಿಯನ್ನು ತೋಡಿದನು.

೩೦. ತರುವಾಯ ವೇದವೇದಾಂಗ ಪಾರಂಗತರಾದ ಶ್ರೇಷ್ಠ ಬ್ರಾಹ್ಮಣರನ್ನು ಕರೆಯಿಸಿ ವಿಧಿಯಂತೆ ಕೃತಘ್ನನನ್ನುದ್ದೇಶಿಸಿ ಶ್ರಾದ್ಧಗೈದನು.

೩೧. ಅದರಿಂದ ಆ ಕೃತಘ್ನನು ದಿವ್ಯರೂಪವನ್ನು ತಾಳಿ ವಿಮಾನವನ್ನೇರಿ ವಿದೂರಥನನ್ನು ಕುರಿತು ಇಂತೆಂದನು.

೩೨. "ಸ್ವಾಮಿ! ನಾನು ನಿನ್ನ ಅನುಗ್ರಹದಿಂದ ಈ ದಾರುಣವಾದ ಪ್ರೇತತ್ವದಿಂದ ಮುಕ್ತನಾಗಿರುವೆನು. ನಿನಗೆ ಮಂಗಳವಾಗಲಿ. ನಾನೀಗ ದೇವಲೋಕಕ್ಕೆ ಹೋಗುವೆನು."

೩೩. ಸೂತನು ಹೇಳುತ್ತಾನೆ:—ಅದು ಮೊದಲ್ಗೊಂಡು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ ಆ ಕೂಪವು ಗಯಾಶೀರ್ಷವೆಂದು ಪ್ರಸಿದ್ಧವಾಯಿತು.

೩೪–೩೫. ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಆ ಕೃತಘ್ನ ಪ್ರೇತ ತೀರ್ಥದಲ್ಲಿ ಕಾಲಶಾಕ, ಅರಣ್ಯತಿಲ, ಅಲ್ಲಿಯೆ ಕತ್ತರಿಸಿದ ದರ್ಭೆ ಇವುಗಳಿಂದ ಶ್ರದ್ಧೆಯಿಂದ ಶ್ರಾದ್ಧ ಮಾಡಿದವನು ಸಂಪೂರ್ಣವಾದ ಫಲವನ್ನು ಪಡೆಯುವನು.

ಅಗ್ನಿಷ್ವಾತ್ತಾಃ ಪಿತೃಗಣಾಸ್ತಥಾ ಬರ್ಹಿಷದಶ್ಚಯೇ ।
ತತ್ರ ಸನ್ನಿಹಿತಾ ನಿತ್ಯಮಾಜ್ಯಪಾಃ ಸೋಮಪಾಸ್ತಥಾ ॥ ೩೬ ॥
ತಸ್ಮಾತ್ಸರ್ವಪ್ರಯತ್ನೇನ ಶ್ರಾದ್ಧಂ ತತ್ರ ಸಮಾಚರೇತ್ ।
ಕಾಲೇ ವಾ ಯದಿವಾಽಕಾಲೇ ಪಿತೄಣಾಂ ತುಷ್ಟಯೇ ಸದಾ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಮಾಂಸಾದಿಪ್ರೇತತ್ರಯಸ್ಯ ವಿಧೂರಥಕೃತ ಶ್ರಾದ್ಧದ್ವಾರಾ ಮುಕ್ತಿದಾನೇ
ಪಿತೃಕೂಪಿಕಾತೀರ್ಥಮಾಹಾತ್ಮ್ಯವರ್ಣನಂ "
ನಾಮ್ನೈಕೋನವಿಂಶೋಽಧ್ಯಾಯಃ

---

೩೬. ಅಲ್ಲಿ ಅಗ್ನಿಷ್ವಾತ್ತಾ, ಬರ್ಹಿಷದ, ಆಜ್ಯಪ, ಸೋಮಪ ಎಂಬ ಪಿತೃಗಳು ಯಾವಾಗಲೂ ಸನ್ನಿಹಿತರಾಗಿರುವರು.

೩೭. ಆದ್ದರಿಂದ ಅಲ್ಲಿ ಕಾಲದಲ್ಲಾಗಲಿ, ಅಕಾಲದಲ್ಲಾಗಲಿ ಪಿತೃಗಳ ಸಂತುಷ್ಟಿಗಾಗಿ ಶ್ರಾದ್ಧವನ್ನಾಚರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಪಿತೃಕೂಪಿಕಾತೀರ್ಥಮಾಹಾತ್ಮ್ಯವರ್ಣನ "ವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ಬಾಲಮುಂಡನತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರ ದಾಶರಥೀ ರಾಮೋ ವನವಾಸಾಯ ದೀಕ್ಷಿತಃ ।
ಭ್ರಮಮಾಣೋ ಧರಾಪೃಷ್ಠೇ ಸೀತಾಲಕ್ಷ್ಮಣಸಂಯುತಃ ॥ ೧ ॥
ಸಮಾಯಾತೋ ದ್ವಿಜಶ್ರೇಷ್ಠಾ ಯತ್ರ ಸಾ ಪಿತೃಕೂಪಿಕಾ ।
ತೃಷಾರ್ತಶ್ಚ ಶ್ರಮಾರ್ತಶ್ಚ ನಿಷಸಾದ ಧರಾತಲೇ ॥ ೨ ॥
ಏತಸ್ಮಿನ್ನಂತರೇ ಪ್ರಾಪ್ತೋ ಭಗವಾನ್ ದಿನನಾಯಕಃ ।
ಅಸ್ತಾಚಲಂ ಜಪಾಪುಷ್ಪಸನ್ನಿಭೋ ದ್ವಿಜಸತ್ತಮಾಃ ॥ ೩ ॥
ತತಃ ಪ್ಲಕ್ಷನಗಾಽಧಸ್ತಾತ್ಪರ್ಣಾನ್ಯಾಸ್ತೀರ್ಯ ಭೂತಲೇ ।
ಸಾಯಂತನಂ ವಿಧಿಂ ಕೃತ್ವಾ ಸುಷ್ವಾಪ ರಘುನಂದನಃ ॥ ೪ ॥
ಅಥಾಽವಲೋಕಯಾಮಾಸ ಸ್ವಪ್ನೇ ದಶರಥಂ ನೃಪಂ ।
ಯದ್ವತ್ಪೂರ್ವಂ ಪ್ರಿಯಾಲಾಪಸಂಸಕ್ತಂ ಹೃಷ್ಟಮಾನಸಂ ॥ ೫ ॥
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ವಿಪ್ರಾನಾಹೂಯ ತತ್ಸರ್ವಂ ಕಥಯಾಮಾಸ ರಾಘವಃ ॥ ೬ ॥

---

### ಕನ್ನಡದ ಅನುವಾದ

#### ಬಾಲಮುಂಡನತೀರ್ಥಮಾಹಾತ್ಮ್ಯವರ್ಣನ

೧-೨. ಸೂತನು ಹೇಳುತ್ತಾನೆ:—ವನವಾಸ ದೀಕ್ಷೆಯನ್ನು ತಾಳಿದ ರಾಮಚಂದ್ರನು ಸೀತಾಲಕ್ಷ್ಮಣರೊಡನೆ ಭೂಮಿಯಲ್ಲಿ ಸಂಚರಿಸುತ್ತ ಆ ಪಿತೃಕೂಪಕ್ಕೆ ಬಂದು ಆಯಾಸ ಬಾಯಾರಿಕೆಗಳಿಂದ ಪೀಡಿತನಾಗಿ ನೆಲದಮೇಲೆ ಕುಳಿತನು.

೩. ಇಷ್ಟರಲ್ಲಿ ಪೂಜ್ಯನಾದ ದಿನನಾಥನು ದಾಸವಾಳದ ಹೂವಿನಂತೆ ಕೆಂಪಾಗಿ ಅಸ್ತಾಚಲಕ್ಕೆ ಬಂದನು.

೪. ಆಗ ರಘುನಂದನನು ಸಾಯಂಕಾಲ ಸಂಧ್ಯಾವಂದನೆಯನ್ನು ಪೂರೈಸಿ ಪ್ಲಕ್ಷವೃಕ್ಷದ ಕೆಳಗೆ ಎಲೆಗಳನ್ನು ಹಾಸಿಕೊಂಡು ಅದರಮೇಲೆ ಮಲಗಿದನು.

೫. ಬಳಿಕ ಮೊದಲಿನಂತೆಯೇ ಪ್ರಿಯವಚನಗಳನ್ನಾಡುತ್ತ ಸಂತೋಷಗೊಂಡ ಮನಸ್ಸುಳ್ಳ ದಶರಥ ರಾಜನನ್ನು ಸ್ವಪ್ನದಲ್ಲಿ ನೋಡಿದನು.

೬. ಬೆಳಿಗ್ಗೆ ಸೂರ್ಯನು ಉದಯಿಸಲು ಅವನು ಬ್ರಾಹ್ಮಣರನ್ನು ಕರೆಯಿಸಿ ಆ ಸ್ವಪ್ನವಿಚಾರವನ್ನೆಲ್ಲ ಹೇಳಿದನು.

ಅದ್ಯ ಸ್ವಪ್ನೇ ಮಯಾ ವಿಪ್ರಾಃ ಪ್ರಿಯಾಲಾಪಪರಃ ಪಿತಾ ।
ಅತಿಹೃಷ್ಟಮನಾ ದೃಷ್ಟಃ ಶ್ವೇತಮಾಲ್ಯಾನುಲೇಪನಃ ॥ ೭ ॥
ತತ್ಕಿಂ ದೃಕ್ಪರಿಣಾಮೋಽಸ್ಯ ಸ್ವಪ್ನಸ್ಯ ದ್ವಿಜಸತ್ತಮಾಃ ।
ಭವಿಷ್ಯತಿ ಪ್ರಜಲ್ಪಧ್ವಂ ಪರಂ ಕೌತೂಹಲಂ ಯತಃ ॥ ೮ ॥

ಬ್ರಾಹ್ಮಣಾ ಊಚುಃ :—

ಪಿತರಃ ಶ್ರಾದ್ಧಕಾಮಾ ಯೇ ವೃದ್ಧಿಂ ಪಶ್ಯಂತಿ ವಾ ನೃಪ ।
ತೇ ಸ್ವಪ್ನೇ ದರ್ಶನಂ ಯಾಂತಿ ಪುತ್ರಾಣಾಮಿತಿ ನಃ ಶ್ರುತಂ ॥ ೯ ॥
ತದಸ್ಯಾಂ ಕೂಪಿಕಾಯಾಂ ಚ ಸ್ವಯಮೇವ ಗಯಾ ಸ್ಥಿತಾ ।
ತೇನ ತ್ವಯಾ ಪಿತಾ ದೃಷ್ಟೋ ಸ್ವಪ್ನೇ ಶ್ರಾದ್ಧಸ್ಯ ವಾಂಛಕಃ ॥ ೧೦ ॥
ತಸ್ಮಾತ್ಕುರು ರಘುಶ್ರೇಷ್ಠ ಶ್ರಾದ್ಧಮತ್ರ ಯಥೋದಿತಂ ।
ನೀವಾರೈಶ್ಶಾಕಮೂಲೈಶ್ಚ ತಥಾಽರಣ್ಯೋದ್ಭವೈಸ್ತಿಲೈಃ ॥ ೧೧ ॥
ಅಥೈವಾಮಂತ್ರಯಾಮಾಸ ತಾನ್ವಿಪ್ರಾನ್ ರಘುಸತ್ತಮಃ ।
ಶ್ರಾದ್ಧೇಷು ಶ್ರದ್ಧಯಾ ಯುಕ್ತಃ ಪ್ರಸಾದಃ ಕ್ರಿಯತಾಮಿತಿ ॥ ೧೨ ॥
ಬಾಢಮಿತ್ಯೇವ ತೇ ಚೋಕ್ತ್ವಾ ಸ್ನಾನಾರ್ಥಂ ದ್ವಿಜಸತ್ತಮಾಃ ।
ಗತಾಸ್ಸರ್ವೇ ಸುಸಂಹೃಷ್ಟಾಃ ಸ್ವಕೀಯಾನಾಶ್ರಮಾನ್ ಪ್ರತಿ ॥ ೧೩ ॥

---

೭. "ವಿಪ್ರರೆ! ಈ ದಿನ ನಾನು ಸ್ವಪ್ನದಲ್ಲಿ ಅತ್ಯಂತ ಸಂತೋಷಗೊಂಡ ಮನಸ್ಸುಳ್ಳವನೂ, ಶ್ವೇತಮಾಲೆಯನ್ನು ಧರಿಸಿದವನೂ, ಪ್ರಿಯವಚನಗಳನ್ನಾಡುವವನೂ ಆದ ನನ್ನ ತಂದೆಯನ್ನು ನೋಡಿದೆನು.

೮. ದ್ವಿಜವರ್ಯರೆ! ಆದ್ದರಿಂದ ಈ ಸ್ವಪ್ನದ ಪರಿಣಾಮವನ್ನು ನನಗೆ ಹೇಳಿರಿ, ಅತ್ಯಂತ ಕುತೂಹಲವುಂಟಾಗಿರುವುದು."

೯. ಬ್ರಾಹ್ಮಣರು ಹೇಳುತ್ತಾರೆ:—ಶ್ರಾದ್ಧವನ್ನು ಬಯಸುವ ಅಥವಾ ವೃದ್ಧಿಯನ್ನು ನೋಡುವ ಪಿತೃಗಳು ಮಕ್ಕಳಿಗೆ ಸ್ವಪ್ನದಲ್ಲಿ ದರ್ಶನ ಕೊಡುವರೆಂದು ನಾವು ಕೇಳಿದ್ದೇವೆ.

೧೦. ಈ ಕೂಪದಲ್ಲಿ ಗಯಾತೀರ್ಥವಿರುವುದು. ಆದ್ದರಿಂದ ಶ್ರಾದ್ಧವನ್ನು ಬಯಸುವ ನಿನ್ನ ತಂದೆಯು ಸ್ವಪ್ನದಲ್ಲಿ ಕಾಣಿಸಿಕೊಂಡಿರಬಹುದು.

೧೧. ಆದ್ದರಿಂದ ರಾಘವ! ಇಲ್ಲಿ ನೀವಾರ, ಶಾಕ, ಗೆಣಸು, ಅರಣ್ಯತಿಲ ಇವುಗಳಿಂದ ವಿಧಿಯಂತೆ ಶ್ರಾದ್ಧ ಮಾಡು.

೧೨. ರಾಮಚಂದ್ರನು ಹಾಗೆಯೇ ಆ ಬ್ರಾಹ್ಮಣರನ್ನು ಕುರಿತು ಶ್ರದ್ಧೆಯಿಂದ ನಾನೆಸಗುವ ಶ್ರಾದ್ಧದಲ್ಲಿ ಅನುಗ್ರಹಮಾಡಿರಿ ಎಂದು ನಿಮಂತ್ರಣಮಾಡಿದನು.

೧೩. ಆ ಬ್ರಾಹ್ಮಣರು ಹಾಗೆಯೇ ಆಗಲೆಂದು ಹೇಳಿ ಸಂತೋಷದಿಂದ ಸ್ನಾನಕ್ಕಾಗಿ ತಮ್ಮ ಆಶ್ರಮಕ್ಕೆ ತೆರಳಿದರು.

ಅಥ ತೇಷು ಪ್ರಯಾತೇಷು ಬ್ರಾಹ್ಮಣೇಷು ರಘೂತ್ತಮಃ ।
ಪ್ರೋವಾಚ ಲಕ್ಷ್ಮಣಂ ಪಾರ್ಶ್ವೇ ವಿನಯಾವನತಂ ಸ್ಥಿತಂ ॥ ೧೪ ॥
ಶಾಕಮೂಲಫಲಾನ್ಯಾಶು ಶ್ರಾದ್ಧಾರ್ಥಂ ಸಮುಪಾನಯ ।
ಸೌಮಿತ್ರಾನಯ ವೈದೇಹಿ ಸ್ವಯಂ ಪಚತಿ ಭಾಮಿನೀ ॥ ೧೫ ॥
ತಚ್ಛ್ರುತ್ವಾ ಲಕ್ಷ್ಮಣಸ್ತೂರ್ಣಂ ಜಗಾಮಾರಣ್ಯಮೇವಹಿ ।
ಶ್ರಾದ್ಧಾರ್ಥಮಾನಿನಾಯಾಶು ಫಲಾನಿ ವಿವಿಧಾನಿ ಚ ॥ ೧೬ ॥
ಧಾತ್ರೀಫಲಾನಿ ಚಾಮ್ರಾಣಿ ಚಿರ್ಭಟಾನೀಂಗುದಾನಿ ಚ ।
ಕರೀರಾಣಿ ಕಪಿತ್ಥಾನಿ ತಥೈವಾನ್ಯಾನಿ ಭೂರಿಶಃ ॥ ೧೭ ॥
ತತಶ್ಚ ಪಾಚಯಾಮಾಸ ತದರ್ಥೇ ಜನಕೋದ್ಭವಾ ।
ರಾಮಾದೇಶಾತ್ಸ್ವಯಂ ಸಾಧ್ವೀ ವಿನಯೇನ ಸಮನ್ವಿತಾ ॥ ೧೮ ॥
ತತಶ್ಚ ಕುತಪೇ ಪ್ರಾಪ್ತೇ ಕಾಲೇ ತೇ ದ್ವಿಜಸತ್ತಮ ।
ಕೃತಾಹ್ನಿಕಾ ಸಮಾಯಾತಾ ರಾಮಭಕ್ತಿಸಮನ್ವಿತಾಃ ॥ ೧೯ ॥
ಏತಸ್ಮಿನ್ನಂತರೇ ಸೀತಾ ಪ್ಲಕ್ಷವೃಕ್ಷಾಂತರೇ ಸ್ಥಿತಾ ।
ಆತ್ಮಾನಂ ಗೋಪಯಾಮಾಸ ಯಥಾ ವೇತ್ತಿ ನ ರಾಘವಃ ॥ ೨೦ ॥
ಸತಾಂ ಸೀತೇತಿ ಸೀತೇತಿ ವ್ಯಾಹೃತ್ಯಾಥ ಮುಹುರ್ಮುಹುಃ ।
ಸ್ತ್ರೀಧರ್ಮಿಣೀತಿ ಮತ್ವಾ ತು ಲಕ್ಷ್ಮಣಂ ಚೇದಮಬ್ರವೀತ್ ॥ ೨೧ ॥

---

೧೪. ಆ ಬ್ರಾಹ್ಮಣರು ಹೊರಟುಹೋಗಲು ರಾಘವನು ಪಾರ್ಶ್ವದಲ್ಲಿ ವಿನಯದಿಂದ ನಿಂತಿರುವ ಲಕ್ಷ್ಮಣನನ್ನು ಕುರಿತು ಇಂತೆಂದನು.

೧೫. ಲಕ್ಷ್ಮಣ! ಶ್ರಾದ್ಧಕ್ಕಾಗಿ ಶಾಕ, ಮೂಲ ಫಲಗಳನ್ನು ಬೇಗನೆ ತೆಗೆದುಕೊಂಡು ಬಾ. ಸೀತೆಯು ತಾನೇ ಅಡಿಗೆ ಮಾಡುವಳು.

೧೬–೧೮. ಲಕ್ಷ್ಮಣನು ಅದನ್ನು ಕೇಳಿ ಬೇಗನೆ ಕಾಡಿಗೆ ಹೋಗಿ ಶ್ರಾದ್ಧಕ್ಕಾಗಿ ಬಗೆಬಗೆಯ ಹಣ್ಣುಗಳನ್ನೂ, ನೆಲ್ಲಿಕಾಯಿಗಳನ್ನೂ, ಮಾವಿನಹಣ್ಣುಗಳನ್ನೂ, ಚಿರ್ಭಟಗಳನ್ನೂ, ಇಂಗುದಗಳನ್ನೂ, ಬಿದಿರಕಳಲೆ, ಬೇಲದಹಣ್ಣುಗಳನ್ನೂ ಇನ್ನೂ ಇತರ ಹಣ್ಣುಗಳನ್ನೂ ತಂದನು. ಬಳಿಕ ಜಾನಕಿಯು ರಾಮನ ಅಪ್ಪಣೆಯಿಂದ ವಿನೀತಳಾಗಿ ಶ್ರಾದ್ಧಕ್ಕೋಸ್ಕರ ಅವುಗಳನ್ನು ಅಡಿಗೆಮಾಡಿದಳು.

೧೯. ಅನಂತರ ಆ ದ್ವಿಜವರ್ಯರು ಕುತಪಕಾಲವು ಬರಲು ಆಹ್ನಿಕಗಳನ್ನು ಮಾಡಿಕೊಂಡು ರಾಮನಲ್ಲಿ ಭಕ್ತಿಯುಳ್ಳವರಾಗಿ ಅಲ್ಲಿಗೆ ಬಂದರು.

೨೦. ಈ ಸಮಯದಲ್ಲಿ ಸೀತೆಯು ಪ್ಲಕ್ಷವೃಕ್ಷದ ನಡುವೆ ನಿಂತು ರಾಮನಿಗೆ ತಿಳಿಯದಂತೆ ಅಡಗಿಕೊಂಡಳು.

೨೧. ಅವನು ಅವಳನ್ನು ಸೀತೆ! ಸೀತೆ! ಎಂದು ಅನೇಕಬಾರಿ ಕೂಗಿ ಅವಳು ರಜಸ್ವಲೆಯಾಗಿರುವಳೆಂದರಿತು ಲಕ್ಷ್ಮಣನನ್ನು ಕುರಿತು ಇಂತೆಂದನು.

ವತ್ಸ ಲಕ್ಷ್ಮಣ ಶುಶ್ರೂಷಾಂ ವಿಪ್ರಾಣಾಂ ಶ್ರಾದ್ಧಸಂಭವಾಂ ।
ಪಾದಪ್ರಕ್ಷಾಳನಾದ್ಯಾಂ ತ್ವಂ ಯಥಾವತ್ ಕರ್ತುಮರ್ಹಸಿ ॥ ೨೨ ॥
ಬಾಢಮಿತ್ಯೇವ ಸಂಪ್ರೋಕ್ತೋ ಲಕ್ಷ್ಮಣಶ್ಶುಭಲಕ್ಷಣಃ ।
ಚಕ್ರೇ ಸರ್ವಂ ತಥಾ ಕರ್ಮ ಯಥಾ ನಾರೀ ವಿಚಕ್ಷಣಾ ॥ ೨೩ ॥
ತತೋ ನಿರ್ವರ್ತಿತೇ ಶ್ರಾದ್ಧೇ ಬ್ರಾಹ್ಮಣೇಷು ಗತೇಷ್ವಥ ।
ಜನಕಸ್ಯ ಸುತಾ ಸಾಧ್ವೀ ತಕ್ಷಣಾತ್ಸಮುಪಸ್ಥಿತಾ ॥ ೨೪ ॥
ತಾಂ ದೃಷ್ಟ್ವಾ ರಾಘವಸ್ಸೀತಾಂ ಕೋಪಸಂರಕ್ತಲೋಚನಃ ।
ಪ್ರೋವಾಚ ಪರುಷೈರ್ವಾಕ್ಯೈರ್ಭರ್ತ್ಸಯಮಾನೋ ಮುಹುರ್ಮುಹುಃ ॥ ೨೫ ॥
ಆಯಾತೇಷು ದ್ವಿಜಾತೇಷು ಶ್ರಾದ್ಧಕಾಲ ಉಪಸ್ಥಿತೇ ।
ಕ್ವ ಗತಾ ವದ ಪಾಪೇ ತ್ವಂ ಮಾಂ ಪರಿತ್ಯಜ್ಯ ದೂರತಃ ॥ ೨೬ ॥
ನೈತದ್ಯುಕ್ತಂ ಕುಲಸ್ತ್ರೀಣಾಂ ವಿಶೇಷಾದತ್ರ ಕಾನನೇ ।
ವಿಹರ್ತುಂ ದೂರತಶ್ಶೂನ್ಯೇ ತಸ್ಮಾತ್ತ್ಯಾಜ್ಯಾಸಿ ಮೈಥಿಲಿ ॥ ೨೭ ॥
ತಸ್ಯ ತದ್ವಚನಂ ಶ್ರುತ್ವಾ ಭೀತಾ ಸಾ ಜನಕೋದ್ಭವಾ ।
ಉವಾಚ ವೇಪಮಾನಾಂಗೀ ಪ್ರಸ್ಖಲಂತ್ಯಾ ಗಿರಾ ತತಃ ॥ ೨೮ ॥
ನಮಾಮರ್ಹಸಿ ಕಾರ್ಯೇಽಸ್ಮಿನ್ಗರ್ಹಿತುಂ ರಘುಸತ್ತಮ ।
ಯಸ್ಮಾದಹಮತಿಕ್ರಾಂತಾ ಸ್ಥಾನಾದಸ್ಮಾಚ್ಛೃಣುಷ್ವ ತತ್ ॥ ೨೯ ॥

---

೨೨. "ಮಗು! ಲಕ್ಷ್ಮಣ! ನೀನು ಬ್ರಾಹ್ಮಣರಿಗೆ ಶ್ರಾದ್ಧಸಂಬಂಧವಾದ ಪಾದಪ್ರಕ್ಷಾಳನ ಮೊದಲಾದ ಸೇವೆಯನ್ನು ವಿಧಿಯಂತೆ ಮಾಡಲರ್ಹನಾಗಿರುವೆ."

೨೩. ಶುಭಕರವಾದ ಲಕ್ಷಣಗಳುಳ್ಳ ಲಕ್ಷ್ಮಣನು ಹಾಗೆಯೇ ಆಗಲೆಂದು ಹೇಳಿ ಕುಶಲಳಾದ ಹೆಂಗಸಿನಂತೆ ಎಲ್ಲವನ್ನೂ ಮಾಡಿದನು.

೨೪. ಅನಂತರ ಶ್ರಾದ್ಧವು ಮುಗಿದಕೂಡಲೆ ಬ್ರಾಹ್ಮಣರು ಹೊರಟು ಹೋಗಲು ಜನಕಸುತೆಯಾದ ಪತಿವ್ರತೆಯಾದ ಸೀತೆಯು ಬಂದಳು.

೨೫. ರಾಮನು ಆ ಸೀತೆಯನ್ನು ಕಂಡು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಕಠಿನವಾದ ಮಾತುಗಳಿಂದ ಗದರಿಸುತ್ತ ಇಂತೆಂದನು.

೨೬. "ಪಾಪಿಷ್ಠಳೆ! ಬ್ರಾಹ್ಮಣರು ಬಂದಿರಲು, ಶ್ರಾದ್ಧಕಾಲವು ಸಮೀಪಿಸಿರಲು ನೀನು ನನ್ನನ್ನು ತ್ಯಜಿಸಿ ದೂರವಾಗಿ ಎಲ್ಲಿಗೆ ಹೋದೆ?

೨೭–೨೮. ಶೂನ್ಯವಾದ ಈ ಕಾಡಿನಲ್ಲಿ ಕುಲಸ್ತ್ರೀಯರು ದೂರದಲ್ಲಿ ವಿಹರಿಸುವುದು ಉಚಿತವಲ್ಲ. ಆದ್ದರಿಂದ ನಿನ್ನನ್ನು ಬಿಡುವೆನು.'' ರಾಮನ ಆ ಮಾತನ್ನು ಕೇಳಿ ಭಯಗೊಂಡ ಸೀತೆಯು ನಡುಗುತ್ತ ತೊದಲು ನುಡಿಯಿಂದ ಹೀಗೆಂದಳು.

೨೯. "ರಾಘವ! ನೀನು ನನ್ನನ್ನು ಈ ಕಾರ್ಯಕ್ಕಾಗಿ ನಿಂದಿಸಬಾರದು. ನಾನು ಏಕೆ ಈ ಸ್ಥಳದಿಂದ ಹೊರಟುಹೋದೆನೆಂಬುದನ್ನು ಕೇಳು.

ಪಿತಾ ತವ ಮಯಾ ದೃಷ್ಟಃ ಸಾಕ್ಷಾದ್ದಶರಥಸ್ಸ್ವಯಂ ।
ಬ್ರಾಹ್ಮಣಸ್ಯ ಶರೀರಸ್ಥೋ ದ್ವಿತೀಯಶ್ಚ ಪಿತಾಮಹಃ ॥ ೩೦ ॥
ಪಿತುಃ ಪಿತಾಮಹೋಽನ್ಯಸ್ಯ ತೃತೀಯಸ್ಯ ರಘೂತ್ತಮ ।
ತ್ರಯಾಣಾಂ ಚ ತಥಾಽನ್ಯೇಷಾಂ ತ್ರಯೋಽನ್ಯೇ ನೃಪಸನ್ನಿಭಾಃ ॥ ೩೧ ॥
ಬ್ರಾಹ್ಮಣಾನಾಂ ಮಯಾ ದೃಷ್ಟಾಃ ಶರೀರಸ್ಥಾಸ್ಸುಹರ್ಷಿತಾಃ ।
ಮಾತಾಮಹಾನಹಂ ಮನ್ಯೇ ತಾನಪಿ ತ್ರೀನಹಂ ಸ್ಫುಟಂ ॥ ೩೨ ॥
ತತೋಽಹಂ ಲಜ್ಜಯಾ ನಷ್ಟಾ ದೃಷ್ಟ್ವಾ ಶ್ವಶುರಸಂಗಮಾನ್ ।
ಯೇನ ಭುಕ್ತಾನಿ ಭೋಜ್ಯಾನಿ ಪುರಾ ಮೃಷ್ಟಾನ್ಯನೇಕಶಃ ॥ ೩೩ ॥
ತಥಾ ಖಾದ್ಯಾನಿ ಲೇಹ್ಯಾನಿ ಚೋಷ್ಯಾಣಿ ಚ ವಿಶೇಷತಃ ।
ಪಿತಾ ತವ ಕಥಂ ಸೋಽದ್ಯ ಕಾಷಾಯಾಣಿ ಕಟೂನಿ ಚ ।
ಭಕ್ಷಯಿಷ್ಯತಿ ದತ್ತಾನಿ ಸ್ವಹಸ್ತೇನ ಮಯಾ ವಿಭೋ ॥ ೩೪ ॥
ಏತಸ್ಮಾತ್ಕಾರಣಾನ್ನಷ್ಟಾ ತ್ವತ್ಸಮೀಪಾದಹಂ ವಿಭೋ ।
ಶ್ರಾದ್ಧಕಾಲೇಽಪಿ ಸಂಪ್ರಾಪ್ತೇ ಸತ್ಯೇನಾತ್ಮಾನಮಾಲಭೇ ॥ ೩೫ ॥
ತಚ್ಛ್ರುತ್ವಾ ಸಂಪ್ರಹೃಷ್ಟಾತ್ಮಾ ರಾಮೋ ರಾಜೀವಲೋಚನಃ ।
ಸಾಧು ಸಾಧ್ವಿತಿ ತಾಂ ಪ್ರಾಹ ಪರಿಷ್ವಜ್ಯ ಮುಹುರ್ಮುಹುಃ ॥ ೩೬ ॥
ತತೋ ಭುಕ್ತ್ವಾ ಸ್ವಯಂ ರಾಮೋ ಲಕ್ಷ್ಮಣೇನ ಸಮನ್ವಿತಃ ।
ಸಾಯಾಹ್ನೇ ಸಮನುಪ್ರಾಪ್ತೇ ಸಂಧ್ಯಾಕಾರ್ಯಂ ವಿಧಾಯ ಚ ॥ ೩೭ ॥

---

೩೦–೩೨. ನಿನ್ನ ತಂದೆಯಾದ ದಶರಥನನ್ನು ಮೊದಲನೆಯ ಬ್ರಾಹ್ಮಣನಲ್ಲಿಯೂ, ಪಿತಾಮಹನನ್ನು ಎರಡನೆಯ ಬ್ರಾಹ್ಮಣನಲ್ಲಿಯೂ, ಪ್ರಪಿತಾಮಹನನ್ನು ಮೂರನೆಯ ಬ್ರಾಹ್ಮಣನಲ್ಲಿಯೂ ಹಾಗೆಯೇ ಇತರ ಮೂವರನ್ನು ಇತರ ಬ್ರಾಹ್ಮಣರ ಶರೀರದಲ್ಲಿಯೂ ನೋಡಿದೆನು. ಆ ಮೂವರನ್ನು ಮಾತಾಮಹ, ಮಾತುಃಪಿತಾಮಹ, ಮಾತುಃಪ್ರಪಿತಾಮಹರನ್ನಾಗಿ ತಿಳಿಯುವೆನು.

೩೩–೩೪. ಅನಂತರ ನಾನು ಮಾವಂದಿರು ಬಂದುದನ್ನು ನೋಡಿ ಲಜ್ಜೆಯಿಂದ ಅಡಗಿಕೊಂಡೆನು. ಹಿಂದೆ ಅನೇಕಬಾರಿ ರುಚಿಯಾದ ಅನ್ನ, ಖಾದ್ಯ, ಲೇಹ್ಯ, ಚೋಷ್ಯ ಇವುಗಳನ್ನು ಭಕ್ಷಿಸಿದ ನಿನ್ನ ತಂದೆಯು ಈಗ ನಾನು ನನ್ನ ಹಸ್ತದಿಂದ ಕೊಟ್ಟ ಕಷಾಯಕಟುವಾದ ಆಹಾರವನ್ನು ಹೇಗೆ ಭಕ್ಷಿಸುವನು.

೩೫. ಆದ್ದರಿಂದ ನಾನು ಶ್ರಾದ್ಧಕಾಲವು ಒದಗಿದ್ದರೂ ಮರೆಯಾಗಿ ಅಡಗಿಕೊಂಡೆನು. ನನ್ನಾಣೆ ಇದು ನಿಜ."

೩೬. ಅದನ್ನು ಕೇಳಿ ಹರ್ಷಗೊಂಡ ಕಮಲಲೋಚನನಾದ ರಾಮನು ಅವಳನ್ನು ಆಲಂಗಿಸಿ ಒಳ್ಳೆಯದು, ಒಳ್ಳೆಯದು ಎಂದನು.

೩೭–೩೮. ಬಳಿಕ ರಾಮನು ಲಕ್ಷ್ಮಣನೊಡನೆ ಊಟಮಾಡಿ ಸಾಯಂಕಾಲ ಸಂಧ್ಯಾವಂದನೆಮಾಡಿ ಲಕ್ಷ್ಮಣನನ್ನು ಕುರಿತು ಭೂಮಿಯಲ್ಲಿ ಎಲೆಗಳನ್ನು ಹಾಸಿ

ಪ್ರೋವಾಚ ಲಕ್ಷ್ಮಣಂ ವತ್ಸ ಪರ್ಣಾನ್ಯಾಸ್ತೀರ್ಯ ಭೂತಲೇ ।
ಶಯ್ಯಾಂ ಕುರು ಸಮಾನೀಯ ಪಾದಶೌಚಾಯ ಸಜ್ಜಲಂ ॥ ೩೮ ॥
ತತಃ ಕೋಪಪರೀತಾತ್ಮಾ ಸೌಮಿತ್ರಿಃ ಪ್ರಾಹ ರಾಘವಂ ।
ನಾಽಹಂ ಶಯ್ಯಾಂ ಕರಿಷ್ಯಾಮಿ ಪಾದಪ್ರಕ್ಷಾಲನಂ ನ ಚ ॥ ೩೯ ॥
ತಥಾಽನ್ಯದಪಿ ಯತ್ಕಿಂಚಿತ್ಕರ್ಮ ಸ್ವಲ್ಪಮಪಿ ಪ್ರಭೋ ।
ತ್ವಾಂ ವಾ ತ್ಯಕ್ತ್ವಾ ಗಮಿಷ್ಯಾಮಿ ಕುತ್ರಚಿತ್ಪೀಡಿತೋ ಭೃಶಂ ॥ ೪೦ ॥
ಪ್ರೇಷ್ಯತ್ವೇನ ರಘುಶ್ರೇಷ್ಠ ಸತ್ಯಮೇತನ್ಮಯೋದಿತಂ ।
ಸೀತಾಯಾಃ ಕಿಂ ಸಮಾದೇಶ್ಯಂ ನ ಕಿಂಚಿತ್ಸಂಪ್ರಯಚ್ಛಸಿ ।
ಅಪಿ ಸ್ವಲ್ಪತರಂ ರಾಮ ಮಯಾ ತ್ವಂ ಕಿಂ ಕರಿಷ್ಯಸಿ ॥ ೪೧ ॥
ತಸ್ಯ ತದ್ವಚನಂ ಶ್ರುತ್ವಾ ವಿಕೃತಂ ಚಾಽಪಿ ರಾಘವಃ ।
ತೂಷ್ಣೀಂ ಬಭೂವ ಮೇಧಾವೀ ಹಾಸ್ಯಂ ಕೃತ್ವಾ ಮನಾಕ್ತತಃ ॥ ೪೨ ॥
ತತಃ ಸ್ವಯಂ ಸಮುತ್ಥಾಯ ಕೃತ್ವಾ ಸ್ವಾಸ್ತರಕಂ ಶುಭಂ ।
ಸೀತಯಾ ಕ್ಷಾಲಿತಾಂಘ್ರಿಸ್ತು ಸುಷ್ವಾಪ ತದನಂತರಂ ॥ ೪೩ ॥
ಲಕ್ಷ್ಮಣೋಽಪಿ ವಿದೂರಸ್ಥಃ ಕೋಪಸಂರಕ್ತಲೋಚನಃ ।
ವೃಕ್ಷಮೂಲಂ ಸಮಾಶ್ರಿತ್ಯ ಸುಪ್ತಶ್ಚಿತ್ತೇ ವ್ಯಚಿಂತಯತ್ ॥ ೪೪ ॥

---

ಹಾಸಿಗೆಯನ್ನು ಮಾಡು. ಕಾಲನ್ನು ತೊಳೆಯಲು ಒಳ್ಳೆ ನೀರನ್ನು ತೆಗೆದುಕೊಂಡು ಬಾ ಎಂದನು.

೩೯. ತರುವಾಯ ಕುಪಿತನಾದ ಲಕ್ಷ್ಮಣನು ರಾಮನನ್ನು ಕುರಿತು, "ನಾನು ಹಾಸಿಗೆಯನ್ನೂ ಮಾಡುವುದಿಲ್ಲ. ಪಾದಪ್ರಕ್ಷಾಳನೆಗೆ ನೀರನ್ನೂ ತರುವುದಿಲ್ಲ.

೪೦–೪೧. ಹಾಗೆಯೇ ಇತರ ಯಾವ ಸಣ್ಣ ಕೆಲಸವನ್ನೂ ಮಾಡುವುದಿಲ್ಲ. ನಿನ್ನ ಸೇವಕನಾಗಿ ಅತ್ಯಂತ ಪೀಡಿತನಾದ ನಾನು ನಿನ್ನನ್ನು ಬಿಟ್ಟು ಎಲ್ಲಿಯಾದರೂ ಹೋಗುವೆನು. ಸೀತೆಗೆ ಸಣ್ಣ ಕೆಲಸವನ್ನು ಮಾಡುವುದಕ್ಕೂ ಅಪ್ಪಣೆಮಾಡು ವುದಿಲ್ಲ. ಅತಿ ಸಣ್ಣ ಕೆಲಸವನ್ನೂ ನಾನೇ ಮಾಡಬೇಕೆ?" ಎಂದನು.

೪೨. ಆ ಲಕ್ಷ್ಮಣನ ವಿಕಾರವಾದ ಮಾತನ್ನು ಕೇಳಿ ಜಾಣನಾದ ರಾಮನು ಸ್ವಲ್ಪ ನಕ್ಕು ಸುಮ್ಮನಾದನು.

೪೩. ಬಳಿಕ ತಾನೇ ಎದ್ದು ತನ್ನ ಹಾಸಿಗೆಯನ್ನು ರಚಿಸಿಕೊಂಡು ಸೀತೆ ಯಿಂದ ತೊಳೆಯಲ್ಪಟ್ಟ ಕಾಲುಗಳುಳ್ಳವನಾಗಿ ನಿದ್ರಿಸಿದನು.

೪೪. ಕುಪಿತನಾದ ಲಕ್ಷ್ಮಣನು ದೂರದಲ್ಲಿರುವ ಮರದ ಕೆಳಗೆ ಮಲಗಿ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

ಹತ್ವೈನಂ ರಾಘವಂ ಸುಪ್ತಂ ಸೀತಾಂ ಪತ್ನೀಂ ವಿಧಾಯ ಚ ।
ಕಿಂ ಗಚ್ಛಾಮಿ ನಿಜಂ ಸ್ಥಾನಂ ವಿದೇಶಂ ವಾಽಪಿ ದೂರತಃ ॥ ೪೫ ॥
ಏವಂ ಚಿಂತಯತಸ್ತಸ್ಯ ಬಹುಧಾ ಲಕ್ಷ್ಮಣಸ್ಯ ಸಾ ।
ವ್ಯತಿಕ್ರಾಂತಾ ನಿಶಾ ವಿಪ್ರಾಃ ಕೃಚ್ಛ್ರೇಣ ಮಹತಾ ತತಃ ॥ ೪೬ ॥
ನ ತಸ್ಯ ನಿಶ್ಚಯೋ ಜಜ್ಞೇ ತಸ್ಮಿನ್ ಕೃತ್ಯೇ ಕಥಂಚನ ।
ಕೋಪಾತ್ಪ್ರಣಷ್ಟನಿದ್ರಸ್ಯ ಸೋಷ್ಣಂ ನಿಃಶ್ವಸತೋ ಮುಹುಃ ॥ ೪೭ ॥
ತತಃ ಪ್ರಭಾತೇ ವಿಮಲೇ ಕೃತಪೂರ್ವಾಹ್ಣಿಕ ಕ್ರಿಯಃ ।
ರಾಮಃ ಸೀತಾಂ ಸಮಾದಾಯ ಪ್ರಸ್ಥಿತೋ ದಕ್ಷಿಣಾಂ ದಿಶಂ ॥ ೪೮ ॥
ಲಕ್ಷ್ಮಣೋಽಪಿ ಧನುಃ ಸಜ್ಯಂ ಕೃತ್ವಾ ಸಂಧಾಯ ಸಾಯಕಂ ।
ಅನುವ್ರಜತಿ ಪೃಷ್ಠತಸ್ತಸ್ಯ ಛಿದ್ರಂ ವಿಲೋಕಯನ್ ॥ ೪೯ ॥
ತತೋ ಗೋಕರ್ಣಮಾಸಾದ್ಯ ಪ್ರಣಮ್ಯ ಚ ಮಹೇಶ್ವರಂ ।
ಪ್ರಸ್ಥಿತೋ ರಾಘವೋ ಯಾವತ್ತಾವನ್ಮಿತ್ರಿಸ್ತಾವದಾಗತಃ ॥ ೫೦ ॥
ಬಾಷ್ಪಪರ್ಯಾಕುಲಾಕ್ಷಶ್ಚ ವ್ರೀಡಯಾಽಧೋಮುಖಃ ಸ್ಥಿತಃ ।
ಪ್ರಣಮ್ಯ ಶಿರಸಾ ರಾಮಂ ತತಃ ಪ್ರಾಹ ಸುದುಃಖಿತಃ ॥ ೫೧ ॥

---

೪೫. "ಮಲಗಿರುವ ಈ ರಾಮನನ್ನು ಕೊಂದು ಸೀತೆಯನ್ನು ನನ್ನ ಪತ್ನಿಯನ್ನಾಗಿ ಮಾಡಿಕೊಂಡು ನನ್ನ ವಾಸಸ್ಥಳವಾದ ಅಯೋಧ್ಯೆಗೆ ಹೋಗಲೇ? ಅಥವಾ ದೂರದೇಶಕ್ಕೆ ಹೋಗಲೇ?''

೪೬. ಲಕ್ಷ್ಮಣನು ಹೀಗೆ ಅನೇಕ ವಿಧವಾಗಿ ಆಲೋಚಿಸುತ್ತಿರಲು ಅತಿ ಕಷ್ಟದಿಂದ ಆ ರಾತ್ರಿಯು ಕಳೆದುಹೋಯಿತು.

೪೭. ಕೋಪದಿಂದ ನಿದ್ರೆಯಿಲ್ಲದಿರುವವನೂ, ನಿಟ್ಟುಸಿರು ಬಿಡುತ್ತಿರುವವನೂ ಆದ ಆ ಲಕ್ಷ್ಮಣನಿಗೆ ಆ ಕೆಲಸದ ವಿಷಯದಲ್ಲಿ ನಿರ್ಣಯವುಂಟಾಗಲಿಲ್ಲ.

೪೮. ತರುವಾಯ ಬೆಳಿಗ್ಗೆ ರಾಮನು ಪ್ರಾತಃಕಾಲದ ಕಾರ್ಯಗಳನ್ನು ನೆರವೇರಿಸಿ ಸೀತೆಯನ್ನು ಕರೆದುಕೊಂಡು ದಕ್ಷಿಣದಿಕ್ಕಿಗೆ ಹೊರಟನು.

೪೯. ಲಕ್ಷ್ಮಣನೂ ಬಿಲ್ಲಿಗೆ ಹೆದೆಯೇರಿಸಿ ಅವಕಾಶವನ್ನು ನೋಡುತ್ತ ಹಿಂಬಾಲಿಸಿದನು.

೫೦. ಬಳಿಕ ರಾಮನು ಗೋಕರ್ಣವನ್ನು ಸೇರಿ ಈಶ್ವರನನ್ನು ವಂದಿಸಿ ಪ್ರಯಾಣಮಾಡಲು ಲಕ್ಷ್ಮಣನೂ ಅಲ್ಲಿಗೆ ಬಂದನು.

೫೧. ಅವನು ಕಣ್ಣೀರನ್ನು ಸುರಿಸುತ್ತ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ರಾಮನಿಗೆರಗಿ ದುಃಖದಿಂದ ಇಂತೆಂದನು.

ಕುರು ಮೇ ನಿಗ್ರಹಂ ನಾಥ ಸ್ವಾಮಿದ್ರೋಹಸಮುದ್ಭವಂ ।
ಅತಿಪಾಪಸ್ಯ ದುಷ್ಟಸ್ಯ ಕೃತಘ್ನಸ್ಯ ರಘೂತ್ತಮ ॥ ೫೨ ॥
ಉತ್ತರಾಣಿ ವಿರುದ್ಧಾನಿ ತವ ದತ್ತಾನಿ ಭೂರಿಶಃ ।
ಮಯಾ ವಿನಾಽಪರಾಧೇನ ವಧೋಪಾಯಶ್ಚ ಚಿಂತಿತಃ ॥ ೫೩ ॥
ತತಶ್ಚ ತಂ ಪರಿಷ್ವಜ್ಯ ರಾಮೋಽಪಿ ನಿಜಬಾಂಧವಂ ।
ಬಾಷ್ಪಕ್ಲಿನ್ನಮುಖಃ ಪ್ರಾಹ ಕ್ಷಾಂತಂ ವತ್ಸ ಮಯಾ ತವ ॥ ೫೪ ॥
ನ ತೇ ತ್ವನ್ಯಃ ಪ್ರಿಯಃ ಕಶ್ಚಿನ್ಮಾಂ ಮುಕ್ತ್ವಾ ವೇದ್ಮ್ಯಹಂ ಸ್ಫುಟಂ ।
ತಸ್ಮಾದಾಗಚ್ಛ ಗಚ್ಛಾಮೋ ಮಾರ್ಗಂ ವೇಲಾಽಧಿಕಾ ಭವೇತ್ ॥ ೫೫ ॥

ಲಕ್ಷ್ಮಣ ಉವಾಚ :—

ಯದಿ ಮೇ ನಿಗ್ರಹಂ ನಾಥ ನ ಕರಿಷ್ಯಸಿ ಸಾಂಪ್ರತಂ ।
ಪ್ರಾಣತ್ಯಾಗಂ ಕರಿಷ್ಯಾಮಿ ವಹ್ನಾವಾತ್ಮವಿಶುದ್ಧಯೇ ॥ ೫೬ ॥
ರಾಮಲಕ್ಷ್ಮಣಯೋರೇವಂ ವದತೋಸ್ತತ್ರಕಾನನೇ ।
ಆಜಗಾಮ ಮುನಿಶ್ರೇಷ್ಠೋ ಮಾರ್ಕಂಡ ಇತಿ ಯಃ ಸ್ಮೃತಃ ॥ ೫೭ ॥
ತತಃ ಪ್ರಣಮ್ಯ ತಂ ರಾಮಃ ಸೀತಾಲಕ್ಷ್ಮಣಸಂಯುತಃ ।
ಪ್ರೋವಾಚ ಸ್ವಾಗತಂ ತೇಽಸ್ತು ಕುತಃ ಪ್ರಾಪ್ತೋಽಸಿ ಸನ್ಮುನೇ ॥ ೫೮ ॥

---

೫೨. "ಅಣ್ಣ! ಅತಿಪಾಪಿಯೂ, ದುಷ್ಟನೂ, ಕೃತಘ್ನನೂ ಆದ ನನ್ನನ್ನು ಸ್ವಾಮಿದ್ರೋಹದ ಪಾಪಕ್ಕಾಗಿ ನಿಗ್ರಹಿಸು.

೫೩. ನಾನು ತಪ್ಪಿಲ್ಲದೆ ನಿನಗೆ ವಿರುದ್ಧವಾದ ಉತ್ತರವನ್ನು ಕೊಟ್ಟೆನು. ನಿನ್ನನ್ನು ಕೊಲ್ಲಲು ಆಲೋಚಿಸಿದೆನು.

೫೪. ಬಳಿಕ ರಾಮನು ತನ್ನ ತಮ್ಮನಾದ ಲಕ್ಷ್ಮಣನನ್ನು ಆಲಿಂಗಿಸಿ ಕಣ್ಣೀರನ್ನು ಸುರಿಸುತ್ತ, "ಮಗು! ನಿನ್ನ ತಪ್ಪೆಲ್ಲವನ್ನೂ ಕ್ಷಮಿಸಿರುವೆನು.

೫೫. ನನಗೆ ನಿನಗಿಂತ ಬೇರೆ ಪ್ರಿಯನಾದವನಿಲ್ಲ ಎಂಬುದನ್ನು ನಾನು ಸ್ಪಷ್ಟವಾಗಿ ತಿಳಿದಿದ್ದೇನೆ. ಆದ್ದರಿಂದ ಬಾ. ದಾರಿಯನ್ನು ಹಿಡಿದುಹೋಗೋಣ. ಬಹಳ ವೇಳೆಯಾದೀತು."

೫೬. ಲಕ್ಷ್ಮಣನು ಹೇಳುತ್ತಾನೆ :—ಸ್ವಾಮಿ! ನೀನು ನನ್ನನ್ನು ನಿಗ್ರಹಿಸದಿದ್ದರೆ ಅಗ್ನಿಯನ್ನು ಪ್ರವೇಶಿಸಿ ಪ್ರಾಣವನ್ನು ತ್ಯಜಿಸುವೆನು.

೫೭. ರಾಮಲಕ್ಷ್ಮಣರು ಆ ಕಾಡಿನಲ್ಲಿ ಹೀಗೆ ಮಾತನಾಡುತ್ತಿರಲು ಅಲ್ಲಿಗೆ ಮಾರ್ಕಂಡನೆಂಬ ಮುನಿವರ್ಯನು ಬಂದನು.

೫೮. ರಾಮನು ಸೀತಾಲಕ್ಷ್ಮಣರೊಡನೆ ಆ ಮುನಿವರ್ಯನಿಗೆ ವಂದಿಸಿ "ಮುನಿಯೆ! ನಿನಗೆ ಸ್ವಾಗತವಾಗಲಿ, ನೀನು ಎಲ್ಲಿಂದ ಬಂದೆ?" ಎಂದು ಕೇಳಿದನು.

ಮಾರ್ಕಂಡೇಯ ಉವಾಚ :—

ಪ್ರಭಾಸಾದಹಮಾಯಾತಃ ಸಾಂಪ್ರತಂ ರಘುನಂದನ ।
ಸ್ವಮಾಶ್ರಮಂ ಗಮಿಷ್ಯಾಮಿ ಕ್ಷೇತ್ರೇಽತ್ರೈವ ವ್ಯವಸ್ಥಿತಂ ॥ ೫೯ ॥
ಮಯಾ ರಾಘವ ತತ್ರಾಽಸ್ತಿ ಸ್ಥಾಪಿತಃ ಪ್ರಪಿತಾಮಹಃ ।
ತಸ್ಯಾಽದ್ಯ ದಿವಸೇ ಯಾತ್ರಾ ಬಹುಶ್ರೇಯಃ ಪ್ರದಃ ಸ್ಮೃತಾ ॥ ೬೦ ॥
ತಸ್ಮಾತ್ತ್ವಮಪಿ ತತ್ರೈವ ತೂರ್ಣಮೇವ ಮಯಾ ಸಹ ।
ಮಮಾಶ್ರಮಪದೇ ಸ್ಥಿತ್ವಾ ಪಶ್ಯ ದೇವಂ ಪಿತಾಮಹಂ ॥ ೬೧ ॥
ಯೇನ ಸ್ಯಾಃ ಸರ್ವಶತ್ರೂಣಾಮಗಮ್ಯಸ್ತ್ವಂ ರಘೂದ್ವಹ ।
ಜ್ಯೇಷ್ಠ ಪಂಚದಶೀ ಯೋಗೇ ಜ್ಯೇಷ್ಠಪುತ್ರಃ ಸಮಾಹಿತಃ ॥ ೬೨ ॥
ಯಸ್ತತ್ರ ಕುರುತೇ ಸ್ನಾನಂ ತಸ್ಯ ಮೃತ್ಯುಭಯಂ ಕುತಃ ।
ಸಾಽದ್ಯ ಪಂಚದಶೀ ರಾಮ ಜ್ಯೇಷ್ಠಮಾಸಸಮುದ್ಭವಾ ।
ಜ್ಯೇಷ್ಠಾ ನಕ್ಷತ್ರ ಸಂಯುಕ್ತಾ ತಸ್ಮಾತ್ಸ್ನಾತುಂ ತ್ವಮರ್ಹಸಿ ॥ ೬೩ ॥
ತತಃ ಸಂಪ್ರಸ್ಥಿತಂ ರಾಮಂ ದೃಷ್ಟ್ವಾ ಪ್ರೋವಾಚ ಲಕ್ಷ್ಮಣಃ ।
ಕುರು ಮೇ ನಿಗ್ರಹಂ ತಾವದ್ಗಚ್ಛ ತೀರ್ಥಂ ತತಃ ಪ್ರಭೋ ॥ ೬೪ ॥

ರಾಮ ಉವಾಚ :—

ಸ್ಥಿತೇಽಸ್ಮಿನ್ಮುನಿಶಾರ್ದೂಲೇ ಸಮೀಪೇ ವತ್ಸ ಲಕ್ಷ್ಮಣ ।
ಅನರ್ಹಾ ನಿಷ್ಕೃತಿಃ ಕರ್ತುಂ ತಸ್ಮಾದೇನಂ ಪ್ರಯಾಚಯ ॥ ೬೫ ॥

---

೫೯—೬೦. ಮಾರ್ಕಂಡೇಯನು ಹೇಳುತ್ತಾನೆ:—ರಾಘವ! ನಾನೀಗ ಪ್ರಭಾಸಕ್ಷೇತ್ರದಿಂದ ಬಂದಿರುವೆನು. ಇದೇ ಕ್ಷೇತ್ರದಲ್ಲಿರುವ ನನ್ನ ಆಶ್ರಮಕ್ಕೆ ಹೋಗುವೆನು. ನಾನು ಅಲ್ಲಿ ಪಿತಾಮಹನನ್ನು ಸ್ಥಾಪಿಸಿರುವೆನು. ಈ ದಿನ ಅವನ ಯಾತ್ರೆಯು ಅತ್ಯಂತ ಶ್ರೇಯಸ್ಸನ್ನುಂಟುಮಾಡುವುದು.

೬೧. ಆದ್ದರಿಂದ ನೀನು ನನ್ನೊಡನೆ ಶೀಘ್ರವಾಗಿ ಅಲ್ಲಿಗೆ ಬಾ. ನನ್ನ ಆಶ್ರಮದಲ್ಲಿದ್ದು ಪಿತಾಮಹನನ್ನು ನೋಡು.

೬೨—೬೩. ಅದರಿಂದ ನೀನು ಸಮಸ್ತ ಶತ್ರುಗಳಿಗೆ ಅಗಮ್ಯನಾಗುವೆ. ಜ್ಯೇಷ್ಠಾ ನಕ್ಷತ್ರದಿಂದ ಸೇರಿದ ಜ್ಯೇಷ್ಠಮಾಸದ ಹುಣ್ಣಿಮೆ ದಿನ ಅಲ್ಲಿ ಸ್ನಾನವನ್ನು ಮಾಡಿದರೆ ಮರಣಭಯವು ಎಲ್ಲಿಂದ ಬಂದೀತು? ರಾಮ! ಈ ದಿನ ಜ್ಯೇಷ್ಠಮಾಸದ ಹುಣ್ಣಿಮೆಯಾಗಿರುವುದು. ಆದ್ದರಿಂದ ನೀನು ಇಲ್ಲಿ ಸ್ನಾನಮಾಡಲರ್ಹನಾಗಿರುವೆ.

೬೪. ಅನಂತರ ಲಕ್ಷ್ಮಣನು ತೀರ್ಥಕ್ಕೆ ಹೊರಟ ರಾಮನನ್ನು ಕುರಿತು "ಮೊದಲು ನನ್ನನ್ನು ನಿಗ್ರಹಿಸು ಅನಂತರ ತೀರ್ಥಕ್ಕೆ ಹೋಗು" ಎಂದನು.

೬೫. ರಾಮನು ಹೇಳುತ್ತಾನೆ:—ಮಗು! ಲಕ್ಷ್ಮಣ! ಈ ಶ್ರೇಷ್ಠನಾದ ಮುನಿಯು ಹತ್ತಿರದಲ್ಲಿರಲು ನಿಗ್ರಹಿಸುವುದು ಉಚಿತವಲ್ಲ. ಆದ್ದರಿಂದ ಇವನನ್ನು ಯಾಚಿಸು.

ಲಕ್ಷ್ಮಣ ಉವಾಚ:—

ಸ್ವಾಮಿದ್ರೋಹೇ ಕೃತೇ ಬ್ರಹ್ಮನ್ಪ್ರಾಯಶ್ಚಿತ್ತಂ ಯದೀಕ್ಷ್ಯತೇ ।
ತನ್ಮೇ ದೇಹಿ ಸ್ಫುಟಂ ಯೇನ ಕಾಯಶುದ್ಧಿಃ ಪ್ರಜಾಯತೇ ॥ ೬೬ ॥

ಮಾರ್ಕಂಡೇಯ ಉವಾಚ:—

ಮಮಾಶ್ರಮಸಮೀಪೇಽಸ್ತಿ ಸುತೀರ್ಥಂ ಬಾಲಮಂಡಸಂ ।
ಸ್ವಾಮಿದ್ರೋಹರತಾಃ ಸ್ನಾತಾ ಮುಚ್ಯಂತೇ ತತ್ರ ಪಾತಕೈಃ ॥ ೬೭ ॥
ತತ್ರ ಶಕ್ರೋ ವಿಪಾಪ್ಮಾಽಭೂದ್ಧತ್ವಾ ಗರ್ಭಂ ದಿತೇಃ ಪುರಾ ।
ವಿಶ್ವಸ್ತಾಯಾ ವಿಶೇಷೇಣ ಮಾತುಃ ಕಾಕುತ್ಸ್ಥಸತ್ತಮ ।
ತಸ್ಮಾತ್ತತ್ರ ದ್ರುತಂ ಗತ್ವಾ ಸ್ನಾನಂ ಕುರು ಮಹಾಮತೇ ॥ ೬೮ ॥
ತತಃ ಪ್ರಮುಚ್ಯಸೇ ಪಾಪಾತ್ಸ್ವಾಮಿದ್ರೋಹ ಸಮುದ್ಭವಾತ್ ।
ಅಪರಂ ನಾಽಸ್ತಿ ತೇ ದೋಷೋ ಮನಸಾ ಪಾತಕಂ ಕೃತಂ ॥ ೬೯ ॥
ಮನಸ್ತಾಪೇನ ಶುದ್ಧ್ಯೇತ ಮತಮೇತನ್ಮನೀಷಿಣಾಂ ।
ತ್ವಯಾ ತು ಮನಸಾ ದ್ರೋಹಃ ಕೃತೋ ರಾಮಕೃತೇ ಯತಃ ॥ ೭೦ ॥
ಈದೃಕ್ತಾನ್ಮನಸಸ್ತಾಪಾತ್ತಸ್ಮಾಚ್ಛುದ್ಧೋಽಸಿ ಲಕ್ಷ್ಮಣ ।
ಅಪರಂ ಶೃಣು ಮೇ ವಾಕ್ಯಂ ನಾಽಸ್ತಿ ದೋಷಸ್ತವಾಽನಘ ॥ ೭೧ ॥

---

೬೬. ಲಕ್ಷ್ಮಣನು ಹೇಳುತ್ತಾನೆ:—ಮುನಿಯೆ! ಸ್ವಾಮಿದ್ರೋಹ ಮಾಡಿದರೆ ವಿಹಿತವಾಗಿರುವ ಪ್ರಾಯಶ್ಚಿತ್ತವನ್ನು ನನಗೆ ವಿಧಿಸು. ಅದರಿಂದ ನನ್ನ ಶರೀರವು ಶುದ್ಧವಾಗುವುದು.

೬೭. ಮಾರ್ಕಂಡೇಯನು ಹೇಳುತ್ತಾನೆ:—"ನನ್ನ ಆಶ್ರಮದ ಹತ್ತಿರ ಬಾಲಮಂಡನವೆಂಬ ಒಂದು ಒಳ್ಳೆಯ ತೀರ್ಥವಿರುವುದು. ಸ್ವಾಮಿದ್ರೋಹ ಮಾಡಿದವರು ಅಲ್ಲಿ ಮಿಂದರೆ ಪಾಪಮುಕ್ತರಾಗುವರು.

೬೮. ಹಿಂದೆ ವಿಶ್ವಾಸಗೊಂಡ ತಾಯಿಯಾದ ದಿತಿಯ ಗರ್ಭವನ್ನು ಹಾಳುಮಾಡಿದ ಇಂದ್ರನು ಅಲ್ಲಿ ಪಾಪರಹಿತನಾಗಿರುವನು. ಆದ್ದರಿಂದ ಅಲ್ಲಿಗೆ ಬೇಗನೆ ಹೋಗಿ ಸ್ನಾನಮಾಡು.

೬೯. ಅದರಿಂದ ಸ್ವಾಮಿದ್ರೋಹದಿಂದಾದ ಪಾಪದಿಂದ ಮುಕ್ತನಾಗುವೆ. ಮತ್ತು ನಿನ್ನಲ್ಲಿ ಬೇರೆ ಯಾವ ಪಾಪವೂ ಇರುವುದಿಲ್ಲ. ನೀನು ಮನಸ್ಸಿನಿಂದ ಮಾತ್ರ ಪಾಪವನ್ನು ಮಾಡಿರುವೆ.

೭೦. ಅದು ಮನಸ್ತಾಪದಿಂದ ಪರಿಹಾರವಾಗುವುದೆಂದು ಜ್ಞಾನಿಗಳ ಅಭಿಪ್ರಾಯ. ನೀನು ಮನಸ್ಸಿನಿಂದ ರಾಮನಿಗೆ ದ್ರೋಹವನ್ನು ಮಾಡಿರುವೆ.

೭೧. ಅದು ಇಂತಹ ಮನಸ್ತಾಪದಿಂದ ಪರಿಹಾರವಾಗಿರುವುದು. ಲಕ್ಷ್ಮಣ! ನೀನು ನನ್ನ ಇನ್ನೊಂದು ಮಾತನ್ನು ಕೇಳು. ನಿನ್ನಲ್ಲಿ ದೋಷವಿಲ್ಲ.

ಈದೃಕ್ಷೇತ್ರ ಪ್ರಭಾವೋಽಯಂ ಸೌಭ್ರಾತ್ರೇಣ ವಿವರ್ಜಿತಃ ।
ಪಂಚಕ್ರೋಶಾತ್ಮಕೇ ಕ್ಷೇತ್ರೇ ಯೇ ವಸಂತ್ಯತ್ರ ಲಕ್ಷ್ಮಣ ॥ ೭೨ ॥
ಅಪಿ ಸ್ವಲ್ಪಂ ನ ಸೌಭ್ರಾತ್ರಂ ತೇಷಾಂ ಸಂಜಾಯತೇ ಕ್ವಚಿತ್ ॥ ೭೩ ॥
ತಾವತ್ಸ್ನೇಹಪರೋ ಮರ್ತ್ಯಸ್ತಾವದ್ವದತಿ ಕೋಮಲಂ ।
ಚಮತ್ಕಾರೋದ್ಭವಂ ಕ್ಷೇತ್ರಂ ಯಾವನ್ನ ಸ್ಪೃಶತೇಽಂಘ್ರಿಭಿಃ ॥ ೭೪ ॥
ಯೇಽನ್ಯೇಽಪಿ ನಿವಸಂತ್ಯತ್ರ ಪಶವಃ ಪಕ್ಷಿಣೋ ಮೃಗಾಃ ।
ತೇಽಪಿ ಸೌಹಾರ್ದನಿರ್ಮುಕ್ತಾಃ ಸಸ್ಪರ್ಧಾ ಇತರೇತರಂ ॥ ೭೫ ॥
ಕಸ್ಯಚಿತ್ಕೇನಚಿತ್ಸಾರ್ಧಂ ಸೌಹಾರ್ದಂ ನೈವ ವಿದ್ಯತೇ ।
ತಸ್ಮಾನ್ನೈವಾಽಸ್ತಿ ತೇ ದೋಷ ಈದೃಕ್ಷೇತ್ರಸ್ಯ ಸಂಸ್ಥಿತಿಃ ॥ ೭೬ ॥
ತಥಾಽಪಿ ಯದಿ ತೇ ಕಾಚಿಚ್ಛಂಕಾ ಚಿತ್ತೇ ವ್ಯವಸ್ಥಿತಾ ।
ತತ್ಸ್ನಾನಂ ಕುರು ಗತ್ವಾ ತು ತಸ್ಮಿಂಸ್ತೀರ್ಥೇ ಸುಶೋಭನೇ ॥ ೭೭ ॥
ಯತ್ರ ಶಕ್ರೋ ವಿಪಾಪ್ಮಾಭೂದ್ದ್ರೋಹಂ ಕೃತ್ವಾ ಸುದಾರುಣಂ ।
ವಿಶ್ವಸ್ತಾಯಾ ದಿತೇಃ ಪೂರ್ವಂ ಗರ್ಭಪಾತಸಮುದ್ಭವಂ ॥ ೭೮ ॥
ಏವಮುಕ್ತಸ್ತು ಸೌಮಿತ್ರಿರ್ಗತ್ವಾ ತತ್ರ ದ್ವಿಜೋತ್ತಮಾಃ ।
ತೀರ್ಥೇ ಸ್ನಾನಾಚ್ಚ ಸಂಪನ್ನೋ ವಿಶುದ್ಧಃ ಶಕ್ರಸೇವಿತೇ ।
ರಾಮೋಽಪಿ ತತ್ರ ಗತ್ವಾಽಶು ಮಾರ್ಕಂಡೇಯವರಾಶ್ರಮೇ ॥ ೭೯ ॥

---

೭೨–೭೪. ಸೌಭ್ರಾತ್ರವಿಲ್ಲದಿರುವುದು ಈ ಕ್ಷೇತ್ರದ ಪ್ರಭಾವವು. ಹತ್ತು ಮೈಲಿ ವಿಸ್ತೀರ್ಣದ ಈ ಕ್ಷೇತ್ರದಲ್ಲಿ ವಾಸಮಾಡುವವರಿಗೆ ಸ್ವಲ್ಪವೂ ಸೌಭ್ರಾತ್ರವಿರುವುದಿಲ್ಲ. ಮಾನವನು ಚಮತ್ಕಾರ ಕ್ಷೇತ್ರವನ್ನು ಪಾದಗಳಿಂದ ಸ್ಪರ್ಶಮಾಡುವವರೆಗೆ ಸ್ನೇಹಪರನೂ, ಮೃದುವಾಗಿ ಮಾತಾಡುವವನೂ ಆಗಿರುವನು.

೭೫. ಇಲ್ಲಿ ವಾಸಿಸುವ ಪಕ್ಷಿಗಳೂ, ಮೃಗಗಳೂ ಸ್ನೇಹವಿಲ್ಲದವುಗಳಾಗಿ ಪರಸ್ಪರ ಸ್ಪರ್ಧಿಸುವುವು.

೭೬. ಇಲ್ಲಿ ಯಾರಿಗೂ ಯಾರೊಡನೆಯೂ ಸ್ನೇಹವಿರುವುದಿಲ್ಲ. ಆದ್ದರಿಂದ ಇಂತಹ ಕ್ಷೇತ್ರದಲ್ಲಿರುವ ನಿನ್ನಲ್ಲಿ ಯಾವ ದೋಷವೂ ಇರುವುದಿಲ್ಲ.

೭೭. ಆದರೂ ನಿನ್ನ ಮನಸ್ಸಿನಲ್ಲಿ ಏನಾದರೂ ಶಂಕೆಯಿದ್ದರೆ ಆ ಮಂಗಳಕರವಾದ ತೀರ್ಥಕ್ಕೆ ಹೋಗಿ ಸ್ನಾನಮಾಡು.

೭೮. ಅಲ್ಲಿ ಹಿಂದೆ ಇಂದ್ರನು ವಿಶ್ವಾಸಗೊಂಡ ದಿತಿಯ ಗರ್ಭವನ್ನು ನಾಶಮಾಡಿದ್ದರಿಂದ ಸಂಭವಿಸಿದ ದಾರುಣದ್ರೋಹದಿಂದುಂಟಾದ ಪಾಪದಿಂದ ಮುಕ್ತನಾಗಿರುವನು."

೭೯–೮೦. ದ್ವಿಜವರ್ಯರೆ! ಮುನಿಯು ಹೀಗೆನ್ನಲು ಲಕ್ಷ್ಮಣನು ಆ ತೀರ್ಥಕ್ಕೆ ಹೋಗಿ ಮಿಂದು ಶುದ್ಧನಾದನು. ರಾಮನೂ ಆ ಮಾರ್ಕಂಡೇಯ

ಸ್ನಾನಂ ಕೃತ್ವಾ ಯಥಾನ್ಯಾಯಂ ದದರ್ಶಾಽಥ ಪಿತಾಮಹಂ ।
ಜಗಾಮಾಽಥ ದಿಶಂ ಯಾಮ್ಯಾಂ ಸೀತಾಲಕ್ಷ್ಮಣ ಸಂಯುತಃ ॥ ೮೦ ॥
ತತ್ಪ್ರಭಾವಾಜ್ಜಘಾನಾಽಥ ಖರಾದೀನ್ರಾಕ್ಷಸೋತ್ತಮಾನ್ ।
ತಥಾ ವೈ ರಾವಣಂ ರೌದ್ರಂ ಮೇಘನಾದಸಮನ್ವಿತಂ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬಾಲಮಂಡನತೀರ್ಥಮಾಹಾತ್ಮ್ಯವರ್ಣನಂ"
ನಾಮ ವಿಂಶೋಽಧ್ಯಾಯಃ

---

ಆಶ್ರಮದಲ್ಲಿರುವ ತೀರ್ಥದಲ್ಲಿ ವಿಧಿಯಂತೆ ಮಿಂದು ಪಿತಾಮಹನನ್ನು ನೋಡಿದನು. ಅನಂತರ ಸೀತಾಲಕ್ಷ್ಮಣರೊಡನೆ ದಕ್ಷಿಣದಿಕ್ಕಿಗೆ ಹೋದನು.

೮೧. ಅದರ ಪ್ರಭಾವದಿಂದ ಖರನೇ ಮೊದಲಾದ ರಾಕ್ಷಸೋತ್ತಮರನ್ನೂ, ಮೇಘನಾದನೊಡನೆ ಭಯಂಕರನಾದ ರಾವಣನನ್ನೂ ಕೊಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬಾಲಮಂಡನತೀರ್ಥಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶೋऽಧ್ಯಾಯಃ

### ಬಾಲಸಖ್ಯತೀರ್ಥಮಾಹಾತ್ಮ್ಯವರ್ಣನಂ

ಬ್ರಾಹ್ಮಣಾ ಊಚುಃ :—

ಮಾರ್ಕಂಡೇನ ಕದಾ ತತ್ರ ಸ್ಥಾಪಿತಃ ಪ್ರಪಿತಾಮಹಃ ।
ಕಸ್ಮಿನ್ ಸ್ಥಾನೇ ಕೃತಸ್ತೇನ ಸ್ವಾಶ್ರಮೋ ಮುನಿನಾ ವದ ॥ ೧ ॥

ಸೂತ ಉವಾಚ :—

ಮೃಕಂಡಾಖ್ಯೋ ದ್ವಿಜಶ್ರೇಷ್ಠ ಆಸೀದ್ವೇದವಿದಾಂ ವರಃ ।
ಚಮತ್ಕಾರಪುರಾಽಭ್ಯಾಶೇ ವಾನಪ್ರಸ್ಥಾಶ್ರಮೇ ಸ್ಥಿತಃ ॥ ೨ ॥
ಶಾಂತಾತ್ಮಾ ನಿಯಮೋಪೇತಶ್ಚಕಾರ ಸುಮಹತ್ತಪಃ ।
ತಸ್ಯೈವಂ ವರ್ತಮಾನಸ್ಯ ವಾನಪ್ರಸ್ಥಸ್ಯ ಚಾಶ್ರಮೇ ॥ ೩ ॥
ಪಶ್ಚಿಮೇ ವಯಸಿ ಪ್ರಾಪ್ತೇ ಪುತ್ರೋ ಜಜ್ಞೇ ಸುಶೋಭನಃ ।
ಸರ್ವಲಕ್ಷಣಸಂಪೂರ್ಣಃ ಪೂರ್ಣಚಂದ್ರಸಮಪ್ರಭಃ ॥ ೪ ॥
ಮಾರ್ಕಂಡ ಇತಿ ನಾಮಾಽಥ ತಸ್ಯ ಚಕ್ರೇ ಪಿತಾ ಸ್ವಯಂ ।
ಸೋಽತೀವ ವವೃಧೇ ಬಾಲಸ್ತಸ್ಮಿನ್ನಾಶ್ರಮ ಉತ್ತಮೇ ॥ ೫ ॥

---

## ಕನ್ನಡದ ಅನುವಾದ

### ಬಾಲಸಖ್ಯತೀರ್ಥಮಾಹಾತ್ಮ್ಯವರ್ಣನ

೧. ಬ್ರಾಹ್ಮಣರು ಹೇಳುತ್ತಾರೆ:—ಸೂತ! ಮಾರ್ಕಂಡೇಯನು ಯಾವಾಗ ಅಲ್ಲಿ ಪಿತಾಮಹನನ್ನು ಪ್ರತಿಷ್ಠೆಮಾಡಿದನು? ಆವನು ಯಾವ ಸ್ಥಳದಲ್ಲಿ ತನ ಆಶ್ರಮವನ್ನು ರಚಿಸಿದನು?

೨. ಸೂತನು ಹೇಳುತ್ತಾನೆ:—ಚಮತ್ಕಾರಪುರದ ಹತ್ತಿರ ವಾನಪ್ರಸ್ಥಾಶ್ರಮದಲ್ಲಿ ಮೃಕಂಡನೆಂಬ ವೇದಜ್ಞರಲ್ಲಿ ಉತ್ತಮನಾದ ದ್ವಿಜವರ್ಯನಿದ್ದನು.

೩—೪. ಅವನು ಶಾಂತಮನಸ್ಕನೂ, ನಿಯಮವುಳ್ಳವನೂ ಆಗಿ ಮಹಾ ತಪಸ್ಸನ್ನಾಚರಿಸಿದನು. ಅವನು ಹೀಗೆ ವಾನಪ್ರಸ್ಥಾಶ್ರಮದಲ್ಲಿರಲು ಅಂತ್ಯ ವಯಸ್ಸಿನಲ್ಲಿ ಸಕಲ ಲಕ್ಷಣಗಳಿಂದ ಕೂಡಿದವನೂ, ಪೂರ್ಣ ಚಂದ್ರನಂತೆ ಮುಖವುಳ್ಳವನೂ ಆದ ಒಬ್ಬ ಪುತ್ರನು ಜನಿಸಿದನು.

೫—೬. ತಂದೆಯು ಅವನಿಗೆ ಮಾರ್ಕಂಡ ಎಂಬ ಹೆಸರನ್ನಿಟ್ಟನು. ಆ ಬಾಲಕನು ಆ ಉತ್ತಮ ಆಶ್ರಮದಲ್ಲಿ ಆಕಾಶದಲ್ಲಿ ಶುಕ್ಲಪಕ್ಷದ ಚಂದ್ರನಂತೆ

ಶುಕ್ಲಪಕ್ಷಂ ಸಮಾಸಾದ್ಯ ತಾರಾಪತಿರಿವಾಂಬರೇ ।
ವರ್ಧಮಾನಸ್ಯ ತಸ್ಯೈವಮತೀತಾಃ ಪಂಚವತ್ಸರಾಃ ।
ಬಾಲಕ್ರೀಡಾ ಪ್ರಸಕ್ತಸ್ಯ ಪಿತುರುತ್ಸಂಗವರ್ತಿನಃ ॥ ೬ ॥
ಕಸ್ಯಚಿತ್ತ್ವಥ ಕಾಲಸ್ಯ ಕಶ್ಚಿತ್ತತ್ರ ಸಮಾಗತಃ ।
ಸಾಮುದ್ರಿಕಸ್ಯ ಕೃತ್ಸ್ನಸ್ಯ ವೇತ್ತಾ ಜ್ಞಾನವಿಧಾನಭೂಃ ॥ ೭ ॥
ಸ ತಂ ಶಿಶುಂ ಸಮಾಲೋಕ್ಯ ನಖಾಗ್ರಾನ್ಮೂರ್ಧಜಾವಧಿಂ ।
ವಿಸ್ಮಯೋತ್ಫುಲ್ಲನಯನ ಈಷದ್ಧಾಸ್ಯಮಥಾಕರೋತ್ ॥ ೮ ॥
ಮೃಕಂಡೋಽಪಿ ಸಮಾಲೋಕ್ಯ ಜ್ಞಾನಿನಂ ಸಸ್ಮಿತಾನನಂ ।
ಪಪ್ರಚ್ಛ ವಿನಯೋಪೇತಃ ಕಿಂಚಿತ್ತುಷ್ಟೇನ ಚೇತಸಾ ॥ ೯ ॥

ಮೃಕಂಡ ಉವಾಚ :—

ಕಸ್ಮಾತ್ತ್ವಂ ವಿಪ್ರಶಾರ್ದೂಲ ವೀಕ್ಷ್ಯೇಮಂ ಮಮ ದಾರಕಂ ।
ಸುಚಿರಂ ವಿಸ್ಮಯಾವಿಷ್ಟಸ್ತತೋಽಭೂಃ ಸಸ್ಮಿತಾನನಃ ॥ ೧೦ ॥

ಸೂತ ಉವಾಚ :—

ಅಸಕೃತ್ತೇನ ಸಂಪೃಷ್ಟಃ ಸಕೃದ್ಬ್ರಾಹ್ಮಣಸತ್ತಮಃ ।
ತತಶ್ಚ ಕಥಯಾಮಾಸ ಹಾಸ್ಯಕಾರಣಮೇವ ಹಿ ॥ ೧೧ ॥

ಬ್ರಾಹ್ಮಣ ಉವಾಚ :—

ಲಕ್ಷಣಾನಿ ಶಿಶೋರಸ್ಯ ದೃಶ್ಯಂತೇ ಯಾನಿ ಸನ್ಮುನೇ ।
ಗಾತ್ರಸ್ಥಾನಿ ಭವೇತ್ಸತ್ಯಂ ತೈಃ ಪುಮಾನಜರಾಮರಃ ॥ ೧೨ ॥

---

ವೃದ್ಧಿಗೊಂಡನು. ಹೀಗೆ ಬಾಲಕ್ರೀಡಾಸಕ್ತನಾಗಿ ತಂದೆಯ ತೊಡೆಯಲ್ಲಿ ಬೆಳೆಯುತ್ತಿರುವ ಅವನಿಗೆ ಐದುವರ್ಷಗಳು ಕಳೆದುವು.

೭–೯. ಒಂದಾನೊಂದು ದಿನ ಅಲ್ಲಿಗೆ ಸಕಲ ಸಾಮುದ್ರಿಕ ಶಾಸ್ತ್ರಗಳನ್ನರಿತ ಒಬ್ಬನು ಬಂದನು. ಆ ಸಾಮುದ್ರಿಕನು ಆ ಶಿಶುವನ್ನು ಉಗುರಿನ ಕೊನೆಯಿಂದ ತಲೆಯಕೂದಲಿನ ಕೊನೆಯವರೆಗೆ ನೋಡಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಸ್ವಲ್ಪ ನಕ್ಕನು. ಮೃಕಂಡನು ನಗುಮುಖದ ಆ ಜ್ಞಾನಿಯನ್ನು ನೋಡಿ ಸ್ವಲ್ಪ ಸಂತುಷ್ಟ ಚಿತ್ತದಿಂದ ವಿನಯದಿಂದ ಹೀಗೆ ಪ್ರಶ್ನಿಸಿದನು.

೧೦. ಮೃಕಂಡನು ಹೇಳುತ್ತಾನೆ:—ವಿಪ್ರವರ್ಯ! ನೀನು ನನ್ನ ಈ ಪುತ್ರನನ್ನು ನೋಡಿ ಏಕೆ ಬಹಳ ಹೊತ್ತು ಆಶ್ಚರ್ಯಗೊಂಡು ನಕ್ಕಿರುವೆ?

೧೧. ಸೂತನು ಹೇಳುತ್ತಾನೆ:—ಮೃಕಂಡನು ಅನೇಕಬಾರಿ ಕೇಳಲು ಆ ಜ್ಞಾನಿಯು ತಾನು ನಗಲು ಕಾರಣವನ್ನು ಹೇಳಿದನು.

೧೨. ಬ್ರಾಹ್ಮಣನು ಹೇಳುತ್ತಾನೆ:—ಮುನಿಯೆ! ಈ ಬಾಲಕನ ಶರೀರದಲ್ಲಿ ಕಾಣುವ ಲಕ್ಷಣಗಳಂತೆ ಇವನು ಜರಾಮರಣ ರಹಿತನಾಗುವನು.

ಅಸ್ಯ ಭಾವಿ ಪುನಶ್ಚಾಸ್ಮಾದ್ದಿವಸಾನ್ನಿಧನಂ ಶಿಶೋಃ ।
ಷಡ್ಭಿರ್ಮಾಸೈರ್ನಸಂದೇಹಃ ಸತ್ಯಮೇತನ್ಮಯೋದಿತಂ ॥ ೧೩ ॥
ಏವಂ ಜ್ಞಾತ್ವಾ ದ್ವಿಜಶ್ರೇಷ್ಠ ಕುರುಷ್ವಾಽಸ್ಯ ಹಿತಂ ಚ ಯತ್ ।
ಇಹ ಲೋಕೇ ಪರೇ ಚೈವ ಬಾಲಕಸ್ಯ ಮಮಾಜ್ಞಯಾ ॥ ೧೪ ॥
ಏವಮುಕ್ತ್ವಾ ಸ ವಿಪ್ರೇಂದ್ರೋ ಜಗಾಮಾಭೀಪ್ಸಿತಾಂ ದಿಶಂ ।
ಮೃಕಂಡೋಽಪಿ ತತಸ್ತಸ್ಯ ಚಕ್ರೇ ಮೌಂಜೀನಿಬಂಧನಂ ॥ ೧೫ ॥
ಅಕಾಲೇಽಪಿ ಕುಮಾರಸ್ಯ ಕಿಂಚಿದ್ಧ್ಯಾತ್ವಾ ನಿಜೇ ಹೃದಿ ।
ಕಾರಣಂ ಕಾರಣಜ್ಞಃ ಸ ತತಃ ಪ್ರೋವಾಚ ತಂ ಸುತಂ ॥ ೧೬ ॥
ಯಂ ಕಂಚಿದ್ವೀಕ್ಷಸೇ ಪುತ್ರ ಭ್ರಮಮಾಣಂ ದ್ವಿಜೋತ್ತಮಂ ।
ತಸ್ಯಾಽವಶ್ಯಂ ತ್ವಯಾ ಕಾರ್ಯಂ ವಿನಯಾದಭಿವಾದನಂ ॥ ೧೭ ॥
ಏವಂ ತಸ್ಯ ವ್ರತಸ್ಥಸ್ಯ ಷಣ್ಮಾಸಾ ದಿವಸೈಸ್ತ್ರಿಭಿಃ ।
ಹೀನಾಃ ಸ್ಯುರ್ಬ್ರಾಹ್ಮಣೇಂದ್ರಾಣಾಂ ನಮಸ್ಕಾರಪರಸ್ಯ ಚ ॥ ೧೮ ॥
ಏತಸ್ಮಿನ್ನಂತರೇ ಪ್ರಾಪ್ತಾ ಅಗ್ನಿತೀರ್ಥಪರಾಯಣಾಃ ।
ಸಪ್ತರ್ಷಯಃ ಸ್ಥಿತೋ ಯತ್ರ ಮಾರ್ಕಂಡೋ ಧೃತಮೇಖಲಃ ॥ ೧೯ ॥
ತಾನ್ ದೃಷ್ಟ್ವಾ ಸ ಮುನೀನ್ ಸರ್ವಾನ್ನಮಶ್ಚಕ್ರೇ ಮುನೇಃ ಸುತಃ ।
ದೀರ್ಘಾಯುರ್ಭವ ತೈರುಕ್ತಃ ಸರ್ವೈರಪಿ ಪೃಥಕ್ ಪೃಥಕ್ ॥ ೨೦ ॥

---

೧೩. ಆದರೆ ಇವನು ಈದಿನದಿಂದ ಆರುತಿಂಗಳಲ್ಲಿ ನಿಶ್ಚಯವಾಗಿಯೂ ಮಡಿಯುವನು. ಈ ನನ್ನ ಮಾತು ನಿಶ್ಚಯ.

೧೪. ಬ್ರಾಹ್ಮಣ! ನೀನು ಇದನ್ನರಿತು ನನ್ನ ಅಪ್ಪಣೆಯಿಂದ ಈ ಬಾಲಕನಿಗೆ ಇಹಪರಲೋಕಗಳಲ್ಲಿ ಹಿತವನ್ನುಂಟುಮಾಡುವ ಕಾರ್ಯವನ್ನು ಮಾಡು.

೧೫–೧೬. ಆ ಬ್ರಾಹ್ಮಣನು ಹೀಗೆ ಹೇಳಿ ತನಗಿಷ್ಟವಾದ ದಿಕ್ಕಿಗೆ ಹೋದನು. ಮೃಕಂಡನೂ ಆ ಬಾಲಕನಿಗೆ ಅಕಾಲವಾಗಿದ್ದರೂ ಉಪನಯನಮಾಡಿ ಮನಸ್ಸಿನಲ್ಲಿ ಏನನ್ನೋ ಚಿಂತಿಸಿ ಕಾರಣಜ್ಞನಾದ ಅವನು ಮಗನನ್ನು ಕುರಿತು ಹೀಗೆಂದನು.

೧೭. "ಮಗು! ನೀನು ಸಂಚರಿಸುತ್ತಿರುವ ಯಾವನಾದರೂ ಬ್ರಾಹ್ಮಣನನ್ನು ನೋಡಿದರೆ ಅವನಿಗೆ ವಿನಯದಿಂದ ಅವಶ್ಯವಾಗಿ ನಮಸ್ಕಾರಮಾಡು."

೧೮–೧೯. ಹೀಗೆ ಆ ಬಾಲಕನು ಬ್ರಾಹ್ಮಣೋತ್ತಮರಿಗೆ ನಮಸ್ಕಾರ ಮಾಡುತ್ತ ವ್ರತಸ್ಥನಾಗಿರಲು ಮೂರು ದಿನಗಳಿಗಿಂತ ಕಡಿಮೆಯಾದ ಆರುತಿಂಗಳು ಕಳೆಯಿತು. ಇಷ್ಟರಲ್ಲಿ ಅಗ್ನಿತೀರ್ಥದ ಸೇವನೆಯಲ್ಲಿ ನಿರತರಾದ ಸಪ್ತರ್ಷಿಗಳು ಮೌಂಜಿಯನ್ನುಧರಿಸಿರುವ ಮಾರ್ಕಂಡನ ಹತ್ತಿರ ಬಂದರು.

೨೦. ಮುನಿಪುತ್ರನಾದ ಮಾರ್ಕಂಡನು ಆ ಸಪ್ತರ್ಷಿಗಳನ್ನು ಕಂಡು ವಂದಿಸಿದನು. ಅವರೆಲ್ಲರೂ ಪ್ರತ್ಯೇಕವಾಗಿ ದೀರ್ಘಾಯುಷ್ಮಂತನಾಗೆಂದರು.

ಅಥ ತಂ ಬಾಲಭಾವೇನ ಕೌತುಕಾದ್ಬ್ರಹ್ಮಚಾರಿಣಃ ।
ಚಿರಂ ದೃಷ್ಟ್ವಾಽಬ್ರವೀದ್ವಾಕ್ಯಂ ವಸಿಷ್ಠೋ ಮುನಿಪುಂಗವಃ ॥ ೨೧ ॥
ಸರ್ವೈರಶೇಷಶಿಶುಃ ಪ್ರೋಕ್ತೋ ದೀರ್ಘಾಯುರಿತಿ ಸಾದರಂ ।
ತೃತೀಯೇಽಹ್ನಿ ಪುನಃ ಪ್ರಾಣಾಂಸ್ತ್ಯಕ್ಷ್ಯತ್ಯಯಮಸಂಶಯಃ ॥ ೨೨ ॥
ತನ್ನಯುಕ್ತಂ ಭವೇದೀದೃಗಸ್ಮಾಕಂ ವಚನಂ ದ್ವಿಜಾಃ ।
ತಸ್ಮಾತ್ತತ್ಕ್ರಿಯತಾಂ ಕರ್ಮ ಯೇನಾಽಯಂ ಸ್ಯಾಚ್ಚಿರಾಯುಧೃಕ್ ॥ ೨೩ ॥
ತತೋ ಮಿಥಃ ಸಮಾಲೋಚ್ಯ ಸರ್ವೇ ತೇ ಮುನಿಪುಂಗವಾಃ ।
ಪ್ರೋಚುರ್ನ ಜೀವನೋಪಾಯೋ ಭವೇನ್ಮುಕ್ತ್ವಾ ಪಿತಾಮಹಂ ॥ ೨೪ ॥
ತಸ್ಮಾತ್ತಸ್ಯ ಪುರೋ ನೀತ್ವಾ ಬಾಲೋಽಯಂ ಕ್ಷೀಣಜೀವಿತಃ ।
ಕ್ರಿಯತಾಂ ತಸ್ಯ ವಾಕ್ಯೇನ ಯಥಾಸ್ಯಾಚ್ಚಿರಜೀವಭಾಕ್ ॥ ೨೫ ॥
ತತಸ್ತು ತೇ ಸಮಾದಾಯ ಸತ್ವರಂ ಬ್ರಹ್ಮಚಾರಿಣಂ ।
ಬ್ರಹ್ಮಲೋಕಂ ಸಮಾಜಗ್ಮುಸ್ತ್ಯಕ್ತ್ವಾ ತೀರ್ಥಪರಾಕ್ರಮಂ ॥ ೨೬ ॥
ತತಃ ಪ್ರಣಮ್ಯ ತಂ ದೇವಂ ವೇದೋಕ್ತೈಃ ಸ್ತವನೈರ್ದ್ವಿಜಾಃ ।
ಸ್ತುತ್ವಾಽಥ ಸವಿಧೇ ತಸ್ಯ ನಿಷೇದುಸ್ತದನಂತರಂ ॥ ೨೭ ॥

---

೨೧. ಅನಂತರ ವಸಿಷ್ಠಮುನಿವರನು ಬ್ರಹ್ಮಚಾರಿಯಾದ ಆ ಬಾಲಕನನ್ನು ಕುತೂಹಲದಿಂದ ಬಹಳಹೊತ್ತು ಕಂಡು ಇಂತೆಂದನು.

೨೨. "ನೀವೆಲ್ಲರೂ ಈ ಶಿಶುವಿಗೆ ದೀರ್ಘಾಯುಷ್ಮಂತನಾಗೆಂದು ಆಶೀರ್ವಾದ ಮಾಡಿದ್ದೀರಿ. ಇಲ್ಲಿಗೆ ಮೂರನೆಯ ದಿನ ಇವನು ನಿಶ್ಚಯವಾಗಿಯೂ ಪ್ರಾಣವನ್ನು ತ್ಯಜಿಸುವನು.

೨೩. ಎಲೈ ದ್ವಿಜರೆ! ಆದ್ದರಿಂದ ನಮ್ಮ ಮಾತು ಯುಕ್ತವಲ್ಲ. ಆದಕಾರಣ ಇವನು ಚಿರಂಜೀವಿಯಾಗುವಂತೆ ಏನಾದರೂ ಉಪಾಯಮಾಡಿರಿ.

೨೪–೨೫. ಬಳಿಕ ಆ ಮುನಿವರ್ಯರೆಲ್ಲ ಪರಸ್ಪರ ಆಲೋಚಿಸಿ ಬ್ರಹ್ಮನನ್ನು ಬಿಟ್ಟು ಇವನು ಬದುಕಲು ಉಪಾಯವು ತೋರುವುದಿಲ್ಲ. ಆದ್ದರಿಂದ ಅಲ್ಪಾಯುವಾದ ಈ ಬಾಲಕನನ್ನು ಪಿತಾಮಹನ ಮುಂದೆ ಕರೆದುಕೊಂಡು ಹೋಗಿ ಅವನ ಮಾತಿನಿಂದ ಚಿರಂಜೀವಿಯನ್ನಾಗಿ ಮಾಡೋಣ" ಎಂದರು.

೨೬. ಬಳಿಕ ಆ ಮುನಿಗಳು ತೀರ್ಥಯಾತ್ರೆಯನ್ನು ಬಿಟ್ಟು ಆ ಬ್ರಹ್ಮಚಾರಿಯನ್ನು ಕರೆದುಕೊಂಡು ಶೀಘ್ರವಾಗಿ ಬ್ರಹ್ಮಲೋಕಕ್ಕೆ ಹೋದರು.

೨೭. ಆ ಮುನಿಗಳು ಬ್ರಹ್ಮನನ್ನು ವಂದಿಸಿ ವೇದೋಕ್ತಸ್ತೋತ್ರಗಳಿಂದ ಸ್ತುತಿಸಿ ಅವನ ಹತ್ತಿರ ಕುಳಿತುಕೊಂಡರು.

ತೇಷಾಮನಂತರಂ ಸೋಽಪಿ ನಮಶ್ಚಕ್ರೇ ಪಿತಾಮಹಂ ।
ಬಾಲಃ ಪ್ರೋಕ್ತಶ್ಚ ದೀರ್ಘಾಯುರ್ಭವೇತಿ ಚ ಸ್ವಯಂಭುವಾ ॥ ೨೮ ॥
ಅಥೋವಾಚ ಮುನೀನ್ ಸರ್ವಾನ್ವಿಶ್ರಾಂತಾನ್ ಪದ್ಮಯೋನಿಜಃ ।
ಕುತೋ ಯೂಯಂ ಸಮಾಯಾತಾಃ ಸಾಂಪ್ರತಂ ಕೇನ ಹೇತುನಾ ॥ ೨೯ ॥
ಪ್ರೋಚ್ಯತಾಂ ಚಾಽಪಿ ಯತ್ಕೃತ್ಯಂ ಯುಷ್ಮಾಕಂ ಕ್ರಿಯತೇಽಧುನಾ ।
ಮದ್ಗೃಹೇ ಸಂಪ್ರಯಾತಾನಾಂ ಕೋಽಯಂ ಬಾಲೋಽಪಿ ಸದ್ವ್ರತೀ ॥ ೩೦ ॥

ಮುನಯ ಊಚುಃ:—

ತೀರ್ಥಯಾತ್ರಾ ಪ್ರಸಂಗೇನ ಭ್ರಮಮಾಣಾ ಮಹೀತಲಂ ।
ಚಮತ್ಕಾರಪುರಾಭ್ಯಾಶೇ ವಯಂ ಪ್ರಾಪ್ತಾಃ ಪಿತಾಮಹ ॥ ೩೧ ॥
ತತ್ರಾಽನೇನ ವಯಂ ದೇವ ಬಾಲಕೇನಾಽಭಿವಾದಿತಾಃ ।
ಕ್ರಮಾತ್ಸರ್ವೈರಪಿ ಪ್ರೋಕ್ತೋ ದೀರ್ಘಾಯುರಿತಿ ಸಾದರಂ ॥ ೩೨ ॥
ಏತಸ್ಯ ತು ಪುನಃ ಶೇಷಮಾಯುಷೋ ದಿವಸತ್ರಯಂ ।
ವಿದ್ಯತೇ ವಿಬುಧಶ್ರೇಷ್ಠ ವ್ರೀಡಿತಾಸ್ತೇನ ವೈ ವಯಂ ॥ ೩೩ ॥
ತತಶ್ಚೈನಂ ಸಮಾದಾಯ ವಯಂ ಪ್ರಾಪ್ತಾಸ್ತವಾಽಂತಿಕಂ ।
ಭವತಾಽಪಿ ತಥಾ ಪ್ರೋಕ್ತೋ ದೀರ್ಘಾಯುರ್ಬಾಲಕೋಽಸ್ತ್ವಯಂ ॥

---

೨೮. ಅವರು ಕುಳಿತುಕೊಂಡಮೇಲೆ ಆ ಬಾಲಕನು ಬ್ರಹ್ಮನನ್ನು ವಂದಿಸಲು ಆವನೂ ದೀರ್ಘಾಯುಷ್ಮಂತನಾಗೆಂದು ಆಶೀರ್ವದಿಸಿದನು.

೨೯–೩೦. ಬಳಿಕ ಬ್ರಹ್ಮನು ವಿಶ್ರಾಂತಿಗೊಂಡ ಸಕಲಮುನಿಗಳನ್ನೂ ಕುರಿತು ನೀವು ಎಲ್ಲಿಂದ ಇಲ್ಲಿಗೆ ಬಂದಿರಿ? ಏಕೆಬಂದಿರಿ? ನನ್ನ ಮನೆಗೆ ಬಂದ ನಿಮಗೆ ಈಗ ನನ್ನಿಂದಾಗಬೇಕಾದ ಕಾರ್ಯವೇನು? ನಾನು ಏನನ್ನು ಮಾಡಲಿ? ಬ್ರಹ್ಮಚಾರಿ ಯಾದ ಈ ಬಾಲಕನಾರು? ಎಂದು ಪ್ರಶ್ನಿಸಿದನು.

೩೧. ಮುನಿಗಳು ಹೇಳುತ್ತಾರೆ:—ಪಿತಾಮಹ! ನಾವು ತೀರ್ಥಯಾತ್ರಾ ನಿಮಿತ್ತದಿಂದ ಭೂಮಿಯಲ್ಲಿ ಸಂಚರಿಸುತ್ತ ಚಮತ್ಕಾರಪುರದ ಬಳಿಗೆ ಬಂದೆವು.

೩೨. ಅಲ್ಲಿ ಈ ಬಾಲಕನು ನಮ್ಮನ್ನು ವಂದಿಸಲು ನಾವೆಲ್ಲರೂ ಕ್ರಮ ವಾಗಿ ದೀರ್ಘಾಯುಷ್ಮಂತನಾಗೆಂದು ಪ್ರೀತಿಯಿಂದ ಹೇಳಿದೆವು.

೩೩. ಈ ಬಾಲಕನಿಗಾದರೋ ಇನ್ನು ಮೂರೇ ದಿನಗಳು ಆಯುಸ್ಸು ಇರುವುದು. ಅದರಿಂದ ನಾವು ಲಜ್ಜಿತರಾಗಿದ್ದೇವೆ.

೩೪. ಆದ್ದರಿಂದ ನಾವು ಇವನನ್ನು ಕರೆದುಕೊಂಡು ನಿನ್ನೆಡೆಗೆ ಬಂದೆವು. ನೀನೂ ಈ ಬಾಲಕನಿಗೆ ದೀರ್ಘಾಯುಷ್ಮಂತನಾಗೆಂದು ಆಶೀರ್ವಾದಮಾಡಿರುವೆ.

ತಸ್ಮಾದ್ಯಥಾ ವಯಂ ಸತ್ಯಾ ಭವತಾ ಸಹ ಪದ್ಮಜ ।
ಭವಾಮ ಕುರು ತತ್ಕೃತ್ಯಮೇತಸ್ಮಾದಾಗತಾ ವಯಂ ॥ ೩೫ ॥

ಸೂತ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಮುನೀನಾಂ ಪದ್ಮಸಂಭವಃ ।
ಪ್ರೋವಾಚ ಪ್ರಹಸನ್ವಾಕ್ಯಂ ಸಮಾದಾಯ ಚ ಬಾಲಕಂ ॥ ೩೬ ॥
ಮತ್ಪ್ರಸಾದಾದಯಂ ಬಾಲೋ ಜರಾಮೃತ್ಯುವಿವರ್ಜಿತಃ ।
ಭವಿಷ್ಯತಿ ನ ಸಂದೇಹೋ ವೇದವಿದ್ಯಾವಿಚಕ್ಷಣಃ ॥ ೩೭ ॥
ತಸ್ಮಾತ್ಪ್ರಾಗ್ಧರಣೀಪೃಷ್ಠಂ ವ್ರಜಧ್ವಂ ಮುನಿಸತ್ತಮಾಃ ।
ಬಾಲಮೇನಂ ಸಮಾದಾಯ ತಸ್ಮಿನ್ನೇವಾಽಸ್ಯಮಂದಿರೇ ॥ ೩೮ ॥
ಯಾವದಸ್ಯ ಪಿತಾ ವೃದ್ಧಃ ಪುತ್ರದರ್ಶನವಿಹ್ವಲಃ ।
ನ ಯಾತಿ ನಿಧನಂ ಸಾರ್ಧಂ ಧರ್ಮಪತ್ನ್ಯಾ ದ್ವಿಜೋತ್ತಮಾಃ ॥ ೩೯ ॥
ಅಥಾಯಾತಾಶ್ಚ ತಂ ಬಾಲಂ ಸರ್ವೇ ತೇ ಮುನಿಸತ್ತಮಾಃ ।
ಆಗತ್ಯ ವಸುಧಾಪೃಷ್ಠಂ ತಸ್ಯೈವಾಶ್ರಮಸಂನಿಧೌ ॥ ೪೦ ॥
ಅಮುಂಚನ್ನಗ್ನಿತೀರ್ಥೇ ತಂ ಸಮಾಭಾಷ್ಯ ತತಃ ಪರಂ ।
ತೀರ್ಥಯಾತ್ರಾ ಕೃತೇ ಪಶ್ಚಾಜ್ಜಗ್ಮುರನ್ಯತ್ರ ಸತ್ವರಂ ॥ ೪೧ ॥
ಏತಸ್ಮಿನ್ನಂತರೇ ವಿಪ್ರೋ ಮೃಕಂಡಃ ಸುತವತ್ಸಲಃ ।
ನಾಽಪಶ್ಯತ್ಸ್ವಸುತಂ ಪಶ್ಚಾದ್ವಿಲಲಾಪ ಸುದುಃಖಿತಃ ॥ ೪೨ ॥

---

೩೫. ಪಿತಾಮಹ! ಆದ್ದರಿಂದ ನಾವು ನಿನ್ನೊಡನೆ ಸತ್ಯವಚನರಾಗುವಂತೆ ಆಗಬೇಕು. ಅದಕ್ಕಾಗಿಯೇ ನಾವು ಬಂದಿರುವೆವು.

೩೬. ಸೂತನು ಹೇಳುತ್ತಾನೆ:—ಬ್ರಹ್ಮನು ಆ ಮುನಿಗಳ ಆ ಮಾತನ್ನು ಕೇಳಿ ಬಾಲಕನನ್ನು ಎತ್ತಿಕೊಂಡು ನಗುತ್ತ ಇಂತೆಂದನು.

೩೭. "ನನ್ನ ಅನುಗ್ರಹದಿಂದ ಈ ಬಾಲಕನು ಜರಾಮೃತ್ಯುರಹಿತನೂ, ವೇದವಿದ್ಯಾ ನಿಪುಣನೂ ಆಗುವನು.

೩೮–೩೯. ಮುನಿವರ್ಯರೆ! ಆದ್ದರಿಂದ ಪುತ್ರದರ್ಶನದಿಂದ ವಿಹ್ವಲನೂ, ವೃದ್ಧನೂ ಆದ ಇವನ ತಂದೆಯು ತನ್ನ ಪತ್ನಿಯೊಡನೆ ಮಡಿಯುವುದರೊಳಗೆ ಈ ಹುಡುಗನನ್ನು ಕರೆದುಕೊಂಡು ಭೂಮಿಗೆ ಹೋಗಿ ಅದೇ ಮನೆಯಲ್ಲಿ ಬಿಡಿರಿ.

೪೦–೪೧. ಬಳಿಕ ಆ ಮುನಿವರ್ಯರು ಭೂಮಿಗೆ ಬಂದು ಆ ಆಶ್ರಮದ ಹತ್ತಿರ ಅಗ್ನಿತೀರ್ಥದಲ್ಲಿ ಆ ಬಾಲಕನನ್ನು ಬಿಟ್ಟು ಅವನ ಅನುಮತಿಯಂತೆ ತೀರ್ಥ ಯಾತ್ರೆಗಾಗಿ ಬೇರೆಡೆಗೆ ಹೋದರು.

೪೨. ಈ ಮಧ್ಯದಲ್ಲಿ ಸುತಪ್ರಿಯನಾದ ಮೃಕಂಡಮುನಿಯು ತನ್ನ ಮಗನನ್ನು ನೋಡದೆ ಅತಿ ದುಃಖದಿಂದ ಗೋಳಾಡಿದನು.

ಅಹೋ ಮೇ ತನಯೋಽಭೀಷ್ಟಃ ಕಥಮದ್ಯ ನ ದೃಶ್ಯತೇ ।
ಕೂಪಾಂತಃ ಪತಿತಃ ಕಿಂ ನು ಕಿಂ ವ್ಯಾಲೈರ್ವಾ ನಿಪಾತಿತಃ ॥ ೪೩ ॥
ಕೃತ್ವಾ ಮಾಂ ದುಃಖಸಂತಪ್ತಂ ಮಾತರಂ ಚಾಽಪಿ ಪುತ್ರಕಃ ।
ಪ್ರಸ್ಥಿತೋ ದೀರ್ಘಮಧ್ವಾನಂ ವಿರುದ್ಧಂ ಕೃತವಾನ್ ವಿಧಿಃ ॥ ೪೪ ॥
ಪಶ್ಯ ಬ್ರಾಹ್ಮಣಿ ಪಾಪೇನ ಮಯಾ ದುಷ್ಕೃತಕಾರಿಣಾ ।
ನ ಬಾಲಕಸ್ಯ ಮುಖಂ ದೃಷ್ಟಂ ಪ್ರಸ್ಥಿತಸ್ಯ ಯಮಾಲಯೇ ॥ ೪೫ ॥
ಕಥಿತಂ ಜ್ಞಾನಿನಾ ತೇನ ಮುನಾ ಪೂರ್ವಂ ಮಹಾತ್ಮನಾ ।
ಷಡ್ಭಿರ್ಮಾಸೈಃ ಸುತಸ್ತೇಽಯಂ ದೇಹತ್ಯಾಗಂ ಕರಿಷ್ಯತಿ ॥ ೪೬ ॥
ಸೋಽಹಂ ಪುತ್ರಸ್ಯ ದುಃಖೇನ ಸಾಧಯಿಷ್ಯೇ ಹುತಾಶನಂ ।
ಯಾವಚ್ಛೋಕಾಗ್ನಿನಾ ಕಾಯೋ ದಹ್ಯತೇ ನ ವರಾನನೇ ॥ ೪೭ ॥

ಬ್ರಾಹ್ಮಣ್ಯುವಾಚ :—

ಮಮಾಪಿ ಮತಮೇತದ್ಧಿ ಯತ್ತ್ವಯಾ ಪರಿಕೀರ್ತಿತಂ ।
ತತ್ಕಿಂ ಚಿರಯಸಿ ಬ್ರಹ್ಮನ್ ಶೀಘ್ರಂ ದಾರೂಣಿ ಚಾನಯ ॥ ೪೮ ॥
ಯೇನಾಹಂ ಭವತಾ ಸಾರ್ಧಂ ಪ್ರವೇಕ್ಷ್ಯಾಮಿ ಹುತಾಶನಂ ।
ಪುತ್ರಶೋಕೇನ ಸಂತಪ್ತಾ ಸುಭೃಶಂ ದುಃಖಶಾಂತಯೇ ॥ ೪೯ ॥

---

೪೩. ನನ್ನ ಪ್ರಿಯ ಬಾಲಕನು ಇದೀಗ ಕಾಣಿಸುತ್ತಿಲ್ಲವೇಕೆ? ಬಾವಿಯೊಳಗೆ ಬಿದ್ದನೋ; ದುಷ್ಟ ಮೃಗಗಳಿಂದ ಕೆಡವಲ್ಪಟ್ಟನೋ?

೪೪. ನನ್ನ ಮಗುವು ನನ್ನನ್ನೂ, ತಾಯಿಯನ್ನೂ ದುಃಖಿತರನ್ನಾಗಿಮಾಡಿ ದೂರವಾದ ದಾರಿಯಲ್ಲಿ ಪ್ರಯಾಣಮಾಡಿದನು. ವಿಧಿಯು ವಿರುದ್ಧಕಾರ್ಯವನ್ನಾಚರಿಸಿತು.

೪೫. ಬ್ರಾಹ್ಮಣಿ! ನೋಡು. ದುಷ್ಕೃತ್ಯವನ್ನೆಸಗಿದ ಪಾಪಿಯಾದ ನಾನು ಯಮಾಲಯಕ್ಕೆ ಪ್ರಯಾಣಮಾಡಿದ ಬಾಲಕನ ಮುಖವನ್ನು ಸಹ ನೋಡಲಿಲ್ಲ.

೪೬. ಹಿಂದೆ ಮಹಾತ್ಮನಾದ ಆ ಜ್ಞಾನಿಯು ಆರುತಿಂಗಳಲ್ಲಿ ನಿನ್ನ ಮಗನು ಮಡಿಯುವನೆಂದು ಹೇಳಿರುವನು.

೪೭. ಸುಂದರಿ! ಶೋಕಾಗ್ನಿಯಿಂದ ನನ್ನ ಶರೀರವು ಸುಡದಿರುವಷ್ಟರಲ್ಲಿ ನಾನು ಮಗನ ದುಃಖದಿಂದ ಅಗ್ನಿಯನ್ನು ಪ್ರವೇಶಿಸುವೆನು.

೪೮. ಬ್ರಾಹ್ಮಣಿಯು ಹೇಳುತ್ತಾಳೆ:—ನೀನು ಹೇಳಿರುವುದೇ ನನ್ನ ಅಭಿಪ್ರಾಯವಾಗಿರುವುದು. ಆದ್ದರಿಂದ ಏಕೆ ವಿಳಂಬಮಾಡುವೆ. ಬೇಗನೆ ಕಟ್ಟಿಗೆಗಳನ್ನು ತೆಗೆದುಕೊಂಡು ಬಾ.

೪೯. ಅದರಿಂದ ಪುತ್ರಶೋಕಸಂತಪ್ತಳಾದ ನಾನು ಅತಿಶಯವಾದ ದುಃಖ ಶಾಂತಿಗಾಗಿ ನಿನ್ನೊಡನೆ ಅಗ್ನಿಯನ್ನು ಪ್ರವೇಶಿಸುವೆನು.

ಸೂತ ಉವಾಚ :—

ಏವಂ ತಯೋಃ ಪ್ರವದತೋರ್ದಂಪತ್ಯೋರ್ದ್ವಿಜಸತ್ತಮಾಃ ।
ಆಜಗಾಮಾಥ ಸಂಹೃಷ್ಟಃ ಸ ಬಾಲಸ್ಸನ್ನಿಧಿಂ ತಯೋಃ ॥ ೫೦ ॥
ತಂ ದೃಷ್ಟ್ವಾ ಬ್ರಾಹ್ಮಣೋ ಹೃಷ್ಟೋ ಬ್ರಾಹ್ಮಣ್ಯಾ ಸಹಿತಸ್ತದಾ ।
ಆನಂದಾಶ್ರುಪ್ಲುತಾಕ್ಷೋಽಥ ಸಂಮುಖಸ್ತಮುಪಾದ್ರವತ್ ॥ ೫೧ ॥
ಭೂಯೋ ಭೂಯಃ ಪರಿಷ್ವಜ್ಯ ಸಭಾರ್ಯಃ ಪೃಷ್ಟವಾಂಸ್ತದಾ ।
ಕ್ವ ಗತಃ ಸ್ವಾಶ್ರಮಾದ್ವತ್ಸ ಚಿರಾತ್ಕಸ್ಮಾದಿಹಾಗತಃ ॥ ೫೨ ॥
ಶೋಕಾರ್ಣವೇ ಪರಿಕ್ಷಿಪ್ಯ ಮಾಂ ಸಭಾರ್ಯಂ ವಯೋಽಧಿಕಂ ।
ತಸ್ಮಾತ್ ಪುತ್ರಕ ಭೂಯಸ್ತ್ವಮೀದೃಕ್ಕರ್ಮ ಕರಿಷ್ಯಸಿ ॥ ೫೩ ॥

ಮಾರ್ಕಂಡೇಯ ಉವಾಚ :—

ಅತ್ರಾದ್ಯ ಮುನಯಃ ಪ್ರಾಪ್ತಾ ಮಯಾ ತೇ ಚಾಭಿವಾದಿತಾಃ ।
ಕ್ರಮೇಣ ವಿನಯಾತ್ತಾತ ಸ್ಮರಮಾಣೇನ ತೇ ವಚಃ ॥ ೫೪ ॥
ದೀರ್ಘಾಯುರ್ಭವ ತೈರುಕ್ತಸ್ಸರ್ವೈರೇವ ದ್ವಿಜೋತ್ತಮೈಃ ।
ದೃಷ್ಟ್ವಾ ಮಾಂ ವಿಸ್ಮಯಾವಿಷ್ಟೈಸ್ತೈರ್ಬಾಲಕಂ ವ್ರತಿನಂ ವಿಭೋ ॥ ೫೫ ॥
ಅಥ ತಾತ ಸಮಾಲೋಕ್ಯ ತೇಷಾಂ ಮಧ್ಯಗತೋ ಮುನಿಃ ।
ವಸಿಷ್ಠಸ್ತಾನ್ಮುನೀನ್ಸರ್ವಾನ್ಪ್ರೋವಾಚ ಪ್ರಹಸನ್ನಿವ ॥ ೫೬ ॥

---

೫೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ದಂಪತಿಗಳು ಹೀಗೆ ಮಾತಾಡುತ್ತಿರಲು ಸಂತೋಷಗೊಂಡ ಆ ಬಾಲಕನು ಅವರ ಹತ್ತಿರಕ್ಕೆ ಬಂದನು.

೫೧. ಮೃಕಂಡನು ಆ ಬಾಲಕನನ್ನು ನೋಡಿ ಸಂತೋಷಗೊಂಡು ಪತ್ನಿಯೊಡನೆ ಆನಂದಬಾಷ್ಪವನ್ನು ಸುರಿಸುತ್ತ ಅಭಿಮುಖವಾಗಿ ಓಡಿದನು.

೫೨. ಅವನು ಬಾಲಕನನ್ನು ಬಾರಿಬಾರಿಗೂ ಆಲಂಗಿಸಿ ಪತ್ನಿಯೊಡನೆ "ಮಗು! ನೀನು ನಮ್ಮ ಆಶ್ರಮದಿಂದ ಎಲ್ಲಿಗೆ ಹೋಗಿದ್ದೆ? ಬಹಳ ಕಾಲದ ಮೇಲೆ ಇಲ್ಲಿಗೆ ಬಂದಿರುವೆಯಲ್ಲ!

೫೩. ಮುದುಕನಾದ ನನ್ನನ್ನು ಅಮ್ಮನೊಡನೆ ದುಃಖಸಾಗರದಲ್ಲಿ ಮುಳುಗಿಸಿರುವೆ. ಮರಳಿ ಇಂತಹ ಕಾರ್ಯವನ್ನೆಸಗಬೇಡ."

೫೪—೫೫. ಮಾರ್ಕಂಡೇಯನು ಹೇಳುತ್ತಾನೆ:—ಇಲ್ಲಿಗೆ ಈದಿನ ಮುನಿಗಳು ಬಂದರು. ನಾನು ನಿನ್ನ ಮಾತನ್ನು ಸ್ಮರಿಸುತ್ತ ವಿನಯದಿಂದ ಕ್ರಮವಾಗಿ ಅವರನ್ನು ವಂದಿಸಿದೆನು. ವ್ರತಧಾರಿಯಾದ ನನ್ನನ್ನು ನೋಡಿ ಆಶ್ಚರ್ಯಗೊಂಡ ಆ ದ್ವಿಜವರ್ಯರೆಲ್ಲ ದೀರ್ಘಾಯುಷ್ಮಂತನಾಗು ಎಂದರು.

೫೬. ಅಪ್ಪ! ಬಳಿಕ ಅವರ ನಡುವೆ ಇರುವ ವಸಿಷ್ಠಮುನಿಯು ಆ ಮುನಿಗಳನ್ನೆಲ್ಲ ನೋಡಿ ನಗುತ್ತ ಇಂತೆಂದನು.

ವಸಿಷ್ಠ ಉವಾಚ :—

ದೀರ್ಘಾಯುರ್ಭವ ಯಃ ಪ್ರೋಕ್ತೋಽಯುಷ್ಮಾಭಿರ್ಮುನಿಪುಂಗವಾಃ ।
ತೃತೀಯೇ ದಿವಸೇ ಸೋಽಯಂ ಬಾಲಃ ಪಂಚತ್ವಮೇಷ್ಯತಿ ॥ ೫೭ ॥
ತತಸ್ತೇ ಮುನಯೋ ಭೀತಾ ಅಸತ್ಯಾತ್ತಾತ ತತ್ಕ್ಷಣಾತ್ ।
ಸಮಾದಾಯ ಯಯುಸ್ತತ್ರ ಯತ್ರ ಬ್ರಹ್ಮಾ ವ್ಯವಸ್ಥಿತಃ ॥ ೫೮ ॥
ನಮಸ್ಕೃತೇನ ತೇನಾಪಿ ಪ್ರೋಕ್ತೋಽಹಂ ಪದ್ಮಯೋನಿನಾ ।
ದೀರ್ಘಾಯುರ್ಭವ ಪೃಷ್ಟಶ್ಚ ಕುತಸ್ತ್ವಮಿಹ ಚಾಗತಃ ॥ ೫೯ ॥
ಅಥ ತೈರ್ಮುನಿಭಿಸ್ಸರ್ವೈರ್ವೃತ್ತಾಂತಂ ತಸ್ಯ ಕೀರ್ತಿತಂ ।
ಆಶೀರ್ವಾದೋದ್ಭವಂ ಪ್ರೋಕ್ತಂ ತತೋ ವಯಮಿಹಾಗತಾಃ ॥ ೬೦ ॥
ಯಥಾಯಂ ಬಾಲಕೋದೇವ ತ್ವತ್ಪ್ರಸಾದಾತ್ಪಿತಾಮಹ ।
ದೀರ್ಘಾಯುರ್ಜಾಯತೇ ಲೋಕೇ ತಥಾ ತ್ವಂ ಕರ್ತುಮರ್ಹಸಿ ॥ ೬೧ ॥
ತತೋಽಹಂ ಬ್ರಹ್ಮಣಾ ತಾತ ಜರಾಮರಣವರ್ಜಿತಃ ।
ವಿಹಿತಃ ಪ್ರೇಷಿತಸ್ತೂರ್ಣಂ ಸ್ವಗೃಹಂ ಪ್ರತಿ ತೈಸ್ಸಮಂ ॥ ೬೨ ॥
ತೇ ತು ಮಾಂ ಮುನಯೋಽತ್ರೈವ ಪ್ರಮುಚ್ಯಾಶ್ರಮಸಂನಿಧೌ ।
ಸ್ನಾನಾರ್ಥಂ ವಿವಿಶುಸ್ಸರ್ವೇ ಹ್ರದೇಽತ್ರೈವ ಸುಶೋಭನೇ ॥ ೬೩ ॥

---

೫೭. ವಸಿಷ್ಠನು ಹೇಳುತ್ತಾನೆ:—ಮುನಿವರ್ಯರೆ! ನಿಮ್ಮಿಂದ ದೀರ್ಘಾಯುವಾಗೆಂದು ಆಶೀರ್ವಾದವನ್ನು ಪಡೆದ ಈ ಮುನಿಬಾಲಕನು ಇಲ್ಲಿಗೆ ಮೂರನೆಯ ದಿನ ಮಡಿಯುವನು.

೫೮. ಬಳಿಕ ಆ ಮುನಿಗಳು ಸುಳ್ಳಿಗೆ ಹೆದರಿ ಕೂಡಲೆ ನನ್ನನ್ನು ಕರೆದುಕೊಂಡು ಬ್ರಹ್ಮನೆಡೆಗೆ ಪೋದರು.

೫೯. ಬ್ರಹ್ಮನೂ ನಾನು ನಮಸ್ಕಾರಮಾಡಿದ ಕೂಡಲೆ ದೀರ್ಘಾಯುಷ್ಮಂತನಾಗೆಂದು ಆಶೀರ್ವಾದಮಾಡಿ ಇಲ್ಲಿಗೆ ಏಕೆ ಬಂದೆ ಎಂದು ಕೇಳಿದನು.

೬೦. ಬಳಿಕ ಆ ಸಪ್ತರ್ಷಿಗಳು ಬ್ರಹ್ಮನಿಗೆ ಆಶೀರ್ವಾದದ ವಿಷಯವನ್ನು ತಿಳಿಸಿ, "ಅದಕ್ಕಾಗಿ ನಾವು ಇಲ್ಲಿಗೆ ಬಂದಿರುವೆವು.

೬೧. ಪಿತಾಮಹ! ಈ ಬಾಲಕನು ನಿನ್ನ ಅನುಗ್ರಹದಿಂದ ದೀರ್ಘಾಯುಷ್ಮಂತನಾಗುವಂತೆ ಮಾಡು" ಎಂದರು.

೬೨. ತರುವಾಯ ಬ್ರಹ್ಮನು ನನ್ನನ್ನು ಜರಾಮರಣಗಳಿಲ್ಲದವನನ್ನಾಗಿಮಾಡಿ ಬೇಗನೆ ಅವರೊಡನೆ ಮನೆಗೆ ಕಳುಹಿಸಿದನು.

೬೩. ಆ ಮುನಿಗಳು ನನ್ನನ್ನು ಇಲ್ಲಿಯೇ ಆಶ್ರಮದ ಹತ್ತಿರ ಬಿಟ್ಟು ಸ್ನಾನಕ್ಕಾಗಿ ಮಂಗಳಕರವಾದ ಈ ಸರೋವರವನ್ನು ಪ್ರವೇಶಿಸಿದರು.

ತಚ್ಛ್ರುತ್ವಾ ವಚನಂ ತಸ್ಯ ಮೃಕಂಡೋರ್ಹರ್ಷಸಂಯುತಃ ।
ಪ್ರಯಯೌ ಸತ್ವರಂ ತತ್ರ ಯತ್ರ ತೇ ಮುನಯಃ ಸ್ಥಿತಾಃ ॥ ೧೪ ॥
ಪ್ರಣಮ್ಯ ತಾನ್ ಮುನೀನ್ಸರ್ವಾನ್ ಕೃತಾಂಜಲಿಪುಟಸ್ಸ್ಥಿತಃ ।
ಪ್ರೋವಾಚ ವಃ ಪ್ರಸಾದೇನ ಕುಲಂ ಮೇ ವೃದ್ಧಿಮಾಗತಂ ॥ ೧೫ ॥
ಸಾಧುಪ್ರೋಕ್ತಮಿದಂ ಕೈಶ್ಚಿದಾಚಾರ್ಯೈರ್ಮುನಿಸತ್ತಮಾಃ ।
ಸಾಧುಲೋಕಂ ಸಮಾಶ್ರಿತ್ಯ ವಿಖ್ಯಾತಂ ಚ ಜಗತ್ರಯೇ ॥ ೧೬ ॥
ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾ ಹಿ ಸಾಧವಃ ।
ತೀರ್ಥಂ ಫಲತಿ ಕಾಲೇನ ಸದ್ಯಸ್ಸಾಧು ಸಮಾಗಮಃ ॥ ೧೭ ॥
ತಸ್ಮಾದತಿಥಯಃ ಪ್ರಾಪ್ತಾ ಯೂಯಂ ಸರ್ವೇಽದ್ಯ ಮೇ ಗೃಹಂ ।
ಪ್ರಕರೋಮಿ ಕಿಮಾತಿಥ್ಯಂ ಪ್ರೋಚ್ಯತಾಂ ದ್ವಿಜಸತ್ತಮಾಃ ॥ ೧೮ ॥

ಋಷಯ ಊಚುಃ :—

ಏತದೇವ ಮುನೇಽಸ್ಮಾಕಮಾತಿಥ್ಯಂ ಕೋಟಿಸಮ್ಮಿತಂ ।
ಅಲ್ಪಾಯುರಪಿ ತೇ ಬಾಲೋ ಯಜ್ಜಾತೋ ಮೃತ್ಯುವರ್ಜಿತಃ ॥ ೧೯ ॥

ಮೃಕಂಡ ಉವಾಚ :—

ಮೃತ್ಯುನಾಲಿಂಗಿತಂ ಬಾಲಮಸ್ಮದೀಯಂ ಮುನೀಶ್ವರಾಃ ।
ಭವದ್ಭಿರದ್ಯ ಸಂರಕ್ಷ್ಯ ಕುಲಂ ಕೃತ್ಸ್ನಂ ಸಮುದ್ಧೃತಂ ॥ ೨೦ ॥

---

೧೪. ಮೃಕಂಡನು ಆ ಬಾಲಕನ ಆ ಮಾತನ್ನು ಕೇಳಿ ಸಂತೋಷಗೊಂಡು ಆ ಮುನಿಗಳ ಬಳಿಗೆ ಶೀಘ್ರವಾಗಿ ಹೋದನು.

೧೫. ಆ ಮುನಿಗಳಿಗೆಲ್ಲ ಕೈ ಮುಗಿದು ನಮಸ್ಕರಿಸಿ, "ನಿಮ್ಮ ಅನುಗ್ರಹದಿಂದ ನಮ್ಮ ವಂಶವು ವೃದ್ಧಿಯಾಯಿತು.

೧೬–೧೮. ಮುನಿವರ್ಯರೆ! ಕೆಲವು ಮಂದಿ ಆಚಾರ್ಯರು 'ಸಾಧುಗಳನ್ನು ಆಶ್ರಯಿಸಿ ಮೂರುಲೋಕಗಳು ಪ್ರಸಿದ್ಧವಾದುವು. ಸಾಧುಗಳ ದರ್ಶನವು ಪುಣ್ಯಕರವಾದುದು. ಸಾಧುಗಳು ತೀರ್ಥದಂತಿರುವರು. ತೀರ್ಥವು ಕಾಲಾಂತರದಲ್ಲಿ ಸಿದ್ಧಿಸುವುವು. ಸಜ್ಜನರ ಸಮಾಗಮವು ಕೂಡಲೆ ಫಲವನ್ನುಂಟು ಮಾಡುವುದು' ಎಂದಿರುವರು. ದ್ವಿಜವರ್ಯರೆ! ಆದ್ದರಿಂದ ಅತಿಥಿಗಳಾಗಿ ಮನೆಗೆ ಬಂದಿರುವ ನಿಮಗೆ ಯಾವ ಆತಿಥ್ಯವನ್ನು ಮಾಡಲಿ ಹೇಳಿರಿ" ಎಂದನು.

೧೯. ಋಷಿಗಳು ಹೇಳುತ್ತಾರೆ:—ಮುನಿಯೆ! ಅಲ್ಪಾಯುವಾದ ನಿನ್ನ ಬಾಲಕನು ದೀರ್ಘಾಯುವಾದುದೇ ನಮಗೆ ಕೋಟಿಯಷ್ಟು ಆತಿಥ್ಯಮಾಡಿದಂತಾಗಿರುವುದು.

೨೦. ಮೃಕಂಡನು ಹೇಳುತ್ತಾನೆ:—ಮುನಿವರ್ಯರೆ! ನೀವು ಮೃತ್ಯುಗ್ರಸ್ತನಾದ ನನ್ನ ಬಾಲಕನನ್ನು ರಕ್ಷಿಸಿ ಸಂಪೂರ್ಣವಾಗಿ ವಂಶವನ್ನು ಕಾಪಾಡಿರುವಿರಿ.

ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೭೧ ॥
ತಸ್ಮಾತ್ಕೃತಘ್ನತಾದೋಷೋ ನಸ್ಯಾನ್ಮನು ಮುನೀಶ್ವರಾಃ ।
ಯಥಾ ಕಾರ್ಯಂ ಭವದ್ಭಿಶ್ಚ ತಥಾ ಸರ್ವೈರ್ನಸಂಶಯಃ ॥ ೭೨ ॥

ಋಷಯ ಊಚುಃ:—

ಯದಿ ಪ್ರತ್ಯುಪಕಾರಾಯ ಮನ್ಯಸೇ ತ್ವಂ ದ್ವಿಜೋತ್ತಮ ।
ಗೃಹಂ ಕುರುಷ್ವ ನೋ ವಾಕ್ಯಾದ್ದೇವಸ್ಯ ಪರಮೇಷ್ಠಿನಃ ॥ ೭೩ ॥
ಯೇನಾಽಯಂ ಬಾಲಕಸ್ತೇದ್ಯ ಕೃತೋ ಮೃತ್ಯುವಿವರ್ಜಿತಃ ।
ತಸ್ಮಾತ್ಸ್ಥಾಪಯ ತೀರ್ಥೇನ ದೇವಂ ತಂ ಪ್ರಪಿತಾಮಹಂ ॥ ೭೪ ॥
ಪುತ್ರೇಣ ಸಹಿತಃ ಪಶ್ಚಾದಾರಾಧಯ ದಿವಾನಿಶಂ ।
ವಯಮೇವ ತ್ವಯಾಸಾರ್ಧಂ ತಂ ಚ ದೇವಂ ಪಿತಾಮಹಂ ॥ ೭೫ ॥
ನಿತ್ಯಂ ಪ್ರಪೂಜಯಿಷ್ಯಾಮಸ್ತಥಾಽನ್ಯೇಽಪಿ ದ್ವಿಜೋತ್ತಮಾಃ ।
ಬಾಲೇನಾನೇನ ಸಾರ್ಧಂ ತೇ ಸಖ್ಯಮತ್ರಸ್ಥಿತಂ ಯತಃ ।
ಬಾಲಸಖ್ಯಮಿತಿಖ್ಯಾತಂ ನಾಮ್ನಾ ತೇನ ಭವಿಷ್ಯತಿ ॥ ೭೬ ॥
ತೀರ್ಥಮನ್ಯೈರಿತಿ ಖ್ಯಾತಂ ಬಾಲಕಾನಾಂ ಹಿತಾವಹಂ ।
ರೋಗಾರ್ತಾನಾಂ ಭಯಾರ್ತಾನಾಮಸ್ಮಾಕಂ ವಚನಾತ್ಸದಾ ॥ ೭೭ ॥

---

೭೧. ಬ್ರಹ್ಮಹತ್ಯೆ, ಸುರಾಪಾನಗಳನ್ನು ಮಾಡಿದವನಿಗೂ, ಕಳ್ಳನಿಗೂ, ಭ್ರಷ್ಟವ್ರತನಿಗೂ ಸಜ್ಜನರು ಪ್ರಾಯಶ್ಚಿತ್ತವನ್ನು ಹೇಳಿರುವರು. ಕೃತಘ್ನನಿಗೆ ಪ್ರಾಯಶ್ಚಿತ್ತವನ್ನು ವಿಧಿಸಲಿಲ್ಲ.

೭೨. ಮುನಿವರ್ಯರೆ! ಆದ್ದರಿಂದ ನನಗೆ ಕೃತಘ್ನತೆಯುಂಟಾಗದಂತೆ ಮಾಡಿರಿ.

೭೩–೭೪. ಋಷಿಗಳು ಹೇಳುತ್ತಾರೆ:—ಮುನಿಯೆ! ನೀನು ಪ್ರತ್ಯುಪಕಾರ ಮಾಡಲು ಬಯಸುವುದಾದರೆ ನಿನ್ನ ಮಗನಿಗೆ ಮೃತ್ಯುವಿಲ್ಲದಂತೆ ಮಾಡಿದ ಬ್ರಹ್ಮನಿಗೆ ನಮ್ಮ ಮಾತಿನಿಂದ ಮಂದಿರವನ್ನು ರಚಿಸಿ ಅದರಲ್ಲಿ ಅವನನ್ನು ಪ್ರತಿಷ್ಠೆಮಾಡು.

೭೫–೭೬. ಅನಂತರ ಯಾವಾಗಲೂ ಪುತ್ರನೊಡನೆ ಆ ಬ್ರಹ್ಮನನ್ನು ಆರಾಧಿಸು. ನಾವೂ ಇತರರೂ ನಿನ್ನೊಡನೆ ಅವನನ್ನು ನಿತ್ಯವೂ ಪೂಜಿಸುತ್ತೇವೆ. ನಮಗೆ ನಿನ್ನೀ ಬಾಲಕನಿಂದ ಇಲ್ಲಿ ಸ್ನೇಹವುಂಟಾದ್ದರಿಂದ ಇದಕ್ಕೆ ಬಾಲಸಖ್ಯ ವೆಂಬ ಹೆಸರಾಗುವುದು.

೭೭. ನಮ್ಮ ಮಾತಿನಿಂದ ಇಲ್ಲಿ ರೋಗಭಯಗಳಿಂದ ಪೀಡಿತರಾದ ಬಾಲಕರಿಗೆ ಸುಖವುಂಟಾಗುವುದರಿಂದ ಇದನ್ನು ಇತರರೂ ಬಾಲಸಖ್ಯವೆನ್ನುವರು.

ಅಸ್ಮಿಂಸ್ತೀರ್ಥೇ ಶಿಶುಂ ಲೋಕಾಸ್ಸ್ನಾಪಯಿಷ್ಯಂತಿ ಯೇ ದ್ವಿಜ ।
ರೋಗಾರ್ತಂ ವಾ ಭಯಾರ್ತಂ ವಾ ಪೀಡಿತಂ ವಾ ಗ್ರಹಾದಿಭಿಃ ॥ ೭೮ ॥
ಭವಿಷ್ಯತಿ ನ ಸಂದೇಹಃ ಸರ್ವದೋಷವಿವರ್ಜಿತಃ ।
ಪಿತಾಮಹಪ್ರಸಾದೇನ ತಥಾಽಸ್ಮದ್ವಚನಾದ್ದ್ವಿಜ ॥ ೭೯ ॥
ಯೇ ಪುನರ್ಮಾನುಷಾ ವಿಪ್ರ ನಿಷ್ಕಾಮಾಃ ಶ್ರದ್ಧಯಾನ್ವಿತಾಃ ।
ಸ್ನಾನಮಾತ್ರಂ ಕರಿಷ್ಯಂತಿ ತೇ ಯಾಂತಿ ಪರಮಾಂ ಗತಿಂ ॥ ೮೦ ॥
ಏವಮುಕ್ತ್ವಾಽಥ ತೇ ಸರ್ವೇ ಮುನಯಃ ಶಂಸಿತ ವ್ರತಾಃ ।
ತಮಾಮಂತ್ರ್ಯ ಮುನಿಂ ಜಗ್ಮುಸ್ತೀರ್ಥಾನ್ಯನ್ಯಾನಿ ಸತ್ವರಾಃ ॥ ೮೧ ॥
ಮೃಕಂಡೋಽಪಿ ಸಪುತ್ರಶ್ಚ ತಸ್ಮಿನ್ ಸ್ಥಾನೇ ಪಿತಾಮಹಂ ।
ಸ್ಥಾಪಯಾಮಾಸ ಸಂಹೃಷ್ಟೋ ಜ್ಯೇಷ್ಠೇ ಜ್ಯೇಷ್ಠಾಸ್ಥಿತೇ ವಿಧೌ ॥ ೮೨ ॥
ತತಶ್ಚಾರಾಧಯಾಮಾಸ ದಿವಾರಾತ್ರಮತಂದ್ರಿತಃ ।
ಸಪುತ್ರಃ ಶ್ರದ್ಧಯಾ ಯುಕ್ತಃ ಸಂಪ್ರಾಪ್ತಶ್ಚ ಪರಾಂ ಗತಿಂ ॥ ೮೩ ॥

ಸೂತ ಉವಾಚ :—

ತತಃ ಪ್ರಭೃತಿ ತತ್ತೀರ್ಥಂ ಬಾಲಸಖ್ಯಮಿತಿ ಸ್ಮೃತಂ ।
ಪಾವನಂ ಸರ್ವಜಂತೂನಾಂ ಬಾಲಾನಾಂ ರೋಗನಾಶನಂ ॥ ೮೪ ॥

---

೭೮–೭೯. ದ್ವಿಜನೇ! ಈ ತೀರ್ಥದಲ್ಲಿ ರೋಗ, ಭಯ ಅಥವಾ ಪಿಶಾಚಾದಿ ಗ್ರಹಗಳಿಂದ ಪೀಡಿತರಾದ ಬಾಲಕರನ್ನು ಸ್ನಾನಮಾಡಿಸಿದರೆ ಅವರು ನಿಶ್ಚಯವಾಗಿಯೂ ಬ್ರಹ್ಮನ ಅನುಗ್ರಹದಿಂದಲೂ, ನಮ್ಮ ಮಾತಿನಿಂದಲೂ ಸಕಲ ದೋಷ ಮುಕ್ತರಾಗುವರು.

೮೦. ಇಲ್ಲಿ ನಿಷ್ಕಾಮರಾಗಿ ಶ್ರದ್ಧೆಯಿಂದ ಸ್ನಾನಮಾಡುವವರು ಉತ್ತಮ ಗತಿಯನ್ನು ಪಡೆಯುವರು.

೮೧. ಬಳಿಕ ಶ್ಲಾಘ್ಯವ್ರತರಾದ ಆ ಮುನಿಗಳೆಲ್ಲ ಹೀಗೆ ಹೇಳಿ ಮೃಕಂಡನ ಅನುಮತಿಯಿಂದ ಇತರ ತೀರ್ಥಗಳಿಗೆ ಹೋದರು.

೮೨. ಮೃಕಂಡನೂ ಮಗನೊಡನೆ ಆ ಸ್ಥಳದಲ್ಲಿ ಜ್ಯೇಷ್ಠಮಾಸದಲ್ಲಿ ಚಂದ್ರನು ಜ್ಯೇಷ್ಠಾ ನಕ್ಷತ್ರದಿಂದ ಕೂಡಿರಲು ಬ್ರಹ್ಮನನ್ನು ಪ್ರತಿಷ್ಠೆಮಾಡಿದನು.

೮೩. ಬಳಿಕ ಹಗಲು ರಾತ್ರಿ ಆಲಸ್ಯವಿಲ್ಲದೆ ಪುತ್ರನೊಡನೆ ಶ್ರದ್ಧೆಯಿಂದ ಅವನನ್ನು ಪೂಜಿಸಿ ಉತ್ತಮಗತಿಯನ್ನು ಪಡೆದನು.

೮೪. ಸೂತನು ಹೇಳುತ್ತಾನೆ:—ಅದು ಮೊದಲ್ಗೊಂಡು ಸಕಲ ಪ್ರಾಣಿಗಳನ್ನೂ ಪವಿತ್ರಗೊಳಿಸುವುದೂ, ಬಾಲಕರ ರೋಗವನ್ನು ನಿವಾರಿಸುವುದೂ ಆದ ಆ ತೀರ್ಥವು ಬಾಲಸಖ್ಯವೆಂದು ವಿಖ್ಯಾತವಾಯಿತು.

ಜ್ಯೇಷ್ಠೇ ಜ್ಯೇಷ್ಠಾಸು ಯೋ ಬಾಲಸ್ತತ್ರ ಸ್ನಾನಂ ಸಮಾಚರೇತ್ ।
ನ ಸ ಪೀಡಾಮವಾಪ್ನೋತಿ ಯಾವತ್ಸಂವತ್ಸರಂ ದ್ವಿಜಾಃ ॥ ೮೫ ॥
ಗ್ರಹಭೂತ ಪಿಶಾಚಾನಾಂ ಶಾಕಿನೀನಾಂ ವಿಶೇಷತಃ ।
ಅಗಮ್ಯಃ ಸರ್ವದುಷ್ಟಾನಾಂ ತಥಾಽನ್ಯೇಷಾಂ ಪ್ರಜಾಯತೇ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬಾಲಸಖ್ಯತೀರ್ಥಮಾಹಾತ್ಮ್ಯವರ್ಣನಂ"
ನಾಮೈಕವಿಂಶೋಽಧ್ಯಾಯಃ

---

೮೫. ಎಲೈ ದ್ವಿಜರೆ! ಜ್ಯೇಷ್ಠಮಾಸದ ಜ್ಯೇಷ್ಠಾನಕ್ಷತ್ರದಿಂದ ಕೂಡಿದ ಹುಣ್ಣಿಮೆಯ ದಿನ ಅಲ್ಲಿ ಮಿಂದ ಬಾಲಕನು ಒಂದು ವರ್ಷದವರೆಗೆ ಬಾಧೆಯನ್ನು ಹೊಂದುವುದಿಲ್ಲ.

೮೬. ಮತ್ತು ಗ್ರಹ, ಭೂತ, ಪಿಶಾಚಗಳಿಗೂ, ಶಾಕಿನಿಗಳಿಗೂ, ಇತರ ಸಕಲ ದುಷ್ಟ ಪ್ರಾಣಿಗಳಿಗೂ ಹೊಂದಲಶಕ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬಾಲಸಖ್ಯತೀರ್ಥಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಬಾಲಮುಂಡನತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ತೀರ್ಥೇ ಶಕ್ರಸಮುದ್ಭವಂ ।
ಸ್ವಾಮಿದ್ರೋಹಕೃತಾತ್ಪಾಪಾನ್ನಿರ್ಮುಕ್ತೋ ಯತ್ರ ಲಕ್ಷ್ಮಣಃ ॥ ೧ ॥
ಕಥಂ ತತ್ರ ಪುರಾ ಶಕ್ರಃ ಸ್ವಾಮಿದ್ರೋಹಸಮುದ್ಭವಾತ್ ।
ಪಾತಕಾದೇವ ನಿರ್ಮುಕ್ತಃ ಕಸ್ಮಿನ್‌ಕಾಲೇ ಚ ಸೂತಜ ॥ ೨ ॥
ಕಸ್ಮಾದ್ದಿತೇರ್ಮಹೇಂದ್ರೇಣ ಕೃತಂ ಕೃತ್ಯಂ ತಥಾವಿಧಂ ।
ಯೇನ ಸಂಸೂದಿತೋ ಗರ್ಭಃ ಸರ್ವಂ ವಿಸ್ತರತೋ ವದ ॥ ೩ ॥

ಸೂತ ಉವಾಚ:—

ಬ್ರಹ್ಮಣೋ ದಕ್ಷಿಣಾಂಗುಷ್ಠಾಜ್ಜಜ್ಞೇ ದಕ್ಷಃ ಪ್ರಜಾಪತಿಃ ।
ಸ ಚ ಸಂಜನಯಾಮಾಸ ಪಂಚಾಶತ್ಕನ್ಯಕಾಃ ಶುಭಾಃ ॥ ೪ ॥
ದದೌ ಚ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ದಿವ್ಯೇನ ವಿಧಿನಾ ದಕ್ಷಃ ಸಪ್ತವಿಂಶತಿಮಿಂದವೇ ॥ ೫ ॥

---

## ಕನ್ನಡದ ಅನುವಾದ

### ಬಾಲಮುಂಡನತೀರ್ಥಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಲಕ್ಷ್ಮಣನು ಸ್ವಾಮಿದ್ರೋಹ ಪಾಪದಿಂದ ಮುಕ್ತನಾದ ಶಕ್ರತೀರ್ಥ ವಿಚಾರವನ್ನು ಹೇಳಿರುವೆಯಷ್ಟೆ.

೨. ಎಲೈ ಸೂತನೆ! ಅಲ್ಲಿ ಹಿಂದೆ ಇಂದ್ರನು ಯಾವಾಗ ಸ್ವಾಮಿದ್ರೋಹ ದಿಂದುಂಟಾದ ಪಾಪದಿಂದ ಹೇಗೆ ಮುಕ್ತನಾದನು?

೩. ಇಂದ್ರನು ದಿತಿಯ ಗರ್ಭವನ್ನು ನಾಶಗೊಳಿಸಿ ಏಕೆ ಅಂತಹ ಪಾಪ ಕಾರ್ಯವನ್ನೆಸಗಿದನು?

೪. ಸೂತನು ಹೇಳುತ್ತಾನೆ:—ಬ್ರಹ್ಮನ ಬಲಗೈಯ ಅಂಗುಷ್ಠದಿಂದ ದಕ್ಷಪ್ರಜಾಪತಿಯು ಹುಟ್ಟಿದನು. ಅವನು ಐವತ್ತು ಮಂದಿ ಕನ್ಯೆಯರನ್ನು ಪಡೆದನು.

೫. ಆ ದಕ್ಷನು ಅವರಲ್ಲಿ ಹತ್ತುಮಂದಿಯನ್ನು ಯಮನಿಗೂ, ಹದಿಮೂರು ಮಂದಿಯನ್ನು ಕಶ್ಯಪನಿಗೂ, ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೂ ದಿವ್ಯ ವಿಧಿಯಿಂದ ಮದುವೆ ಮಾಡಿಕೊಟ್ಟನು.

ಅದಿತಿಶ್ಚ ದಿತಿಶ್ಚೈವ ದ್ವೇ ಭಾರ್ಯೇ ಮುಖ್ಯತಾಂ ಗತೇ ।
ಕಶ್ಯಪಸ್ಯ ದ್ವಿಜಶ್ರೇಷ್ಠಾಃ ಪ್ರಾಣೇಭ್ಯೋಽಪಿ ಪ್ರಿಯೇ ಸದಾ ॥ ೬ ॥
ತತಃ ಸ ಜನಯಾಮಾಸ ದೇವಾಂಛಕ್ರಪುರಃಸರಾನ್ ।
ಅದಿತ್ಯಾಂ ಚೈವ ದೈತ್ಯಾಂಶ್ಚ ದಿತ್ಯಾಂ ಸ ಬಲವತ್ತರಾನ್ ॥ ೭ ॥
ತೇಷಾಂ ತ್ರೈಲೋಕ್ಯರಾಜ್ಯಾರ್ಥಂ ಮಿಥೋ ಜಜ್ಞೇ ಮಹಾಹವಃ ।
ತತ್ರ ಶಕ್ರೇಣ ತೇ ದೈತ್ಯಾಃ ಸಂಗ್ರಾಮೇ ವಿನಿಪಾತಿತಾಃ ॥ ೮ ॥
ತತಃ ಶೋಕಪರಾ ಚಕ್ರೇ ದಿತಿರ್ವ್ರತಮನುತ್ತಮಂ ।
ಪುತ್ರಾರ್ಥಂ ನಿಯಮೋಪೇತಾ ಕ್ಷೇತ್ರೇಽತ್ರೈವ ಸಮಾಹಿತಾ ॥ ೯ ॥
ತತೋ ವರ್ಷಸಹಸ್ರಾಂತೇ ತಸ್ಯಾಸ್ತುಷ್ಟೋ ಮಹೇಶ್ವರಃ ।
ಉವಾಚ ಪರಿತುಷ್ಟೋಽಸ್ಮಿ ವರಂ ಪ್ರಾರ್ಥಯ ವಾಂಛಿತಂ ॥ ೧೦ ॥
ಸಾಽಬ್ರವೀದ್ಯದಿ ಮೇ ತುಷ್ಟಸ್ತ್ವಂ ದೇವ ಶಶಿಶೇಖರ ।
ತತ್ಪುತ್ರಂ ದೇಹಿ ದೇವಾನಾಂ ಸರ್ವೇಷಾಂ ಬಲವತ್ತರಂ ।
ಯಜ್ಞಭಾಗಪ್ರಭೋಕ್ತಾರಂ ದೇವಾನಾಂ ದರ್ಪನಾಶನಂ ॥ ೧೧ ॥
ಅವಧ್ಯಂ ಸಂಗರೇ ಪೂರ್ವೈಃ ಸರ್ವೈರ್ದೇವೈಸ್ಸವಾಸವೈಃ ।
ಸ ತಥೇತಿ ಪ್ರತಿಜ್ಞಾಯ ಜಗಾಮಾಽದರ್ಶನಂ ಹರಃ ॥ ೧೨ ॥

---

೬. ದ್ವಿಜವರ್ಯರೆ! ಕಶ್ಯಪನ ಪತ್ನಿಯರಾದ ಆ ಅದಿತಿ ದಿತಿಯರು ಪತಿಗೆ ಅತ್ಯಂತ ಪ್ರಿಯರಾಗಿ ಪ್ರಧಾನರಾದರು.

೭. ಬಳಿಕ ಆ ಕಶ್ಯಪನಿಂದ ಅದಿತಿಯಲ್ಲಿ ಇಂದ್ರನೇ ಮೊದಲಾದ ದೇವತೆಗಳೂ, ದಿತಿಯಲ್ಲಿ ಬಲಿಷ್ಠರಾದ ದೈತ್ಯರೂ ಜನಿಸಿದರು.

೮. ಆ ದೇವದಾನವರಿಗೆ ತ್ರೈಲೋಕ್ಯ ರಾಜ್ಯಕ್ಕಾಗಿ ಪರಸ್ಪರ ಮಹಾಯುದ್ಧವು ಸಂಭವಿಸಲು ಇಂದ್ರನು ಆ ಯುದ್ಧದಲ್ಲಿ ದೈತ್ಯರನ್ನು ಕೊಂದನು.

೯. ತರುವಾಯ ದುಃಖಿತಳಾದ ದಿತಿಯು ಮಗನಿಗಾಗಿ ನಿಯಮದಿಂದ ಇದೇ ಕ್ಷೇತ್ರದಲ್ಲಿಯೆ ಉತ್ತಮ ವ್ರತವನ್ನಾಚರಿಸಿದಳು.

೧೦. ಹೀಗೆ ಸಾವಿರ ವರ್ಷಗಳು ಕಳೆಯಲು ಮಹೇಶ್ವರನು ಆ ದಿತಿಯ ವಿಷಯದಲ್ಲಿ ಸುಪ್ರೀತನಾಗಿ ಇಷ್ಟವಾದ ವರವನ್ನು ಕೇಳಿಕೋ ಎಂದನು.

೧೧–೧೨. ಅವಳು ಶಂಕರನನ್ನು ಕುರಿತು, "ಶಂಕರ! ನೀನು ಸಂತುಷ್ಟನಾಗಿದ್ದರೆ ಸಮಸ್ತ ದೇವತೆಗಳಲ್ಲಿ ಬಲಿಷ್ಠನೂ, ಯಜ್ಞಭಾಗವನ್ನು ಅನುಭವಿಸುವವನೂ, ದೇವತೆಗಳ ಅಹಂಕಾರವನ್ನು ನಿವಾರಿಸುವವನೂ, ಯುದ್ಧದಲ್ಲಿ ಇಂದ್ರಾದಿ ದೇವತೆಗಳಿಗೆ ಅವಧ್ಯನೂ ಆದ ಪುತ್ರನನ್ನು ಕೊಡು" ಎಂದಳು. ಹರನು ಹಾಗೆಯೇ ಆಗಲೆಂದು ಹೇಳಿ ಅದೃಶ್ಯನಾದನು.

ದಿತಿಶ್ಚೈವಾದಧಾದ್ಗರ್ಭಂ ಕಶ್ಯಪಾನ್ಮುನಿಪುಂಗವಾತ್ ।
ತತಶ್ಶಕ್ರೋ ಭಯಂ ಚಕ್ರೇ ಜ್ಞಾತ್ವಾ ತಂ ಗರ್ಭಸಂಭವಂ ।
ವದತೋ ಮುನಿಮುಖ್ಯಸ್ಯ ನಾರದಸ್ಯ ಮಹಾತ್ಮನಃ ॥ ೧೩ ॥
ತತೋ ದುಷ್ಟಾಂ ಮತಿಂ ಕೃತ್ವಾ ತಸ್ಯ ಗರ್ಭಸ್ಯ ನಾಶನೇ ।
ಚಕ್ರೇ ತಸ್ಯಾಸ್ಸ ಶುಶ್ರೂಷಾಂ ದಿವಾರಾತ್ರಮತಂದ್ರಿತಃ ॥ ೧೪ ॥
ಛಿದ್ರಮನ್ವೇಷಮಾಣಸ್ತು ಸುಸೂಕ್ಷ್ಮಮಪಿ ಚ ದ್ವಿಜಾಃ ।
ನ ತಸ್ಯಾ ಲಭತೇ ಕ್ವಾಪಿ ಗತಾ ಮಾಸಾ ನವೈವ ತು ॥ ೧೫ ॥
ತತಶ್ಚ ದಶಮೇ ಮಾಸಿ ಸಂಪ್ರಾಪ್ತೇ ಪ್ರಸವೋದ್ಭವೇ ।
ಗರ್ಭಾಲಸಾ ನಿಶಾವಕ್ತ್ರೇ ಸುಪ್ತಾಸಾ ದಕ್ಷಿಣಾಮುಖೀ ॥ ೧೬ ॥
ನಿದ್ರಾವಶಂ ತು ಸಂಪ್ರಾಪ್ತಾ ವಿಸಂಜ್ಞಾ ಸಮಪದ್ಯತ ।
ಶಕ್ರಹಸ್ತಾವಮರ್ದೋತ್ಥಪಾದಸೌಖ್ಯೇನ ನಿಶ್ಚಲಾ ॥ ೧೭ ॥
ತಾಂ ವಿಸಂಜ್ಞಾಮಥೋ ವೀಕ್ಷ್ಯತ್ಯಕ್ತ್ವಾಪಾದೌ ಶತಕ್ರತುಃ ।
ಪ್ರವಿವೇಶೋದರಂ ತಸ್ಯಾಸ್ತೀಕ್ಷ್ಣಂ ಶಸ್ತ್ರಂ ಕರೇ ದಧತ್ ।
ತೇನಾಸೌ ಸಪ್ತಧಾ ಚಕ್ರೇ ಗರ್ಭಂ ಶಸ್ತ್ರೇಣ ದೇವಪಃ ॥ ೧೮ ॥

---

೧೩. ದಿತಿಯು ಆದರಂತೆ ಕಶ್ಯಪಮುನಿವರ್ಯನಿಂದ ಗರ್ಭವನ್ನು ಧರಿಸಿದಳು. ಬಳಿಕ ಶಕ್ರನು ಮಹಾತ್ಮನಾದ ನಾರದಮುನಿವರೇಣ್ಯನಿಂದ ಆ ವಿಚಾರವನ್ನು ತಿಳಿದು ಭಯಗೊಂಡನು.

೧೪. ಅನಂತರ ಆ ದಿತಿಯ ಗರ್ಭವನ್ನು ನಾಶಗೊಳಿಸಬೇಕೆಂಬ ದುರ್ಬುದ್ಧಿಯಿಂದ ಹಗಲು ರಾತ್ರಿ ಆಲಸ್ಯವಿಲ್ಲದೆ ಅವಳ ಸೇವೆಯನ್ನು ಮಾಡತೊಡಗಿದನು.

೧೫. ಎಲೈ ದ್ವಿಜರೆ! ಇಂದ್ರನು ಹುಡುಕುತ್ತಿದ್ದರೂ ಆ ದಿತಿಯಲ್ಲಿ ಸಣ್ಣ ಛಿದ್ರವನ್ನೂ ಯಾವ ವಿಷಯದಲ್ಲಿಯೂ ಕಾಣಲಿಲ್ಲ. ಹೀಗೆ ಒಂಬತ್ತು ತಿಂಗಳುಗಳು ಕಳೆದುವು.

೧೬. ಅನಂತರ ಪ್ರಸವಸಂಬಂಧವಾದ ಹತ್ತನೆಯ ತಿಂಗಳು ಒದಗಲು ದಿತಿಯು ಸಂಜೆಯ ವೇಳೆ ಗರ್ಭ ಭಾರದಿಂದ ಆಲಸ್ಯಗೊಂಡು ದಕ್ಷಿಣ ಮುಖಳಾಗಿ ಮಲಗಿದಳು.

೧೭. ಇಂದ್ರನು ಕಾಲನ್ನು ಒತ್ತುತ್ತಿದ್ದುದರಿಂದ ಅವಳು ಸುಖಗೊಂಡು ನಿದ್ರಾಧೀನಳಾಗಿ ಮೈಮರೆತಳು.

೧೮. ಇಂದ್ರನು ಅವಳು ಮೈಮರೆತಿರುವುದನ್ನು ನೋಡಿ ಕಾಲುಗಳನ್ನು ಬಿಟ್ಟು ಹರಿತವಾದ ಶಸ್ತ್ರವನ್ನು ಕೈಯಲ್ಲಿ ಹಿಡಿದು ಅವಳ ಹೊಟ್ಟೆಯನ್ನು ಪ್ರವೇಶಿಸಿ ಗರ್ಭವನ್ನು ಏಳು ಭಾಗ ಮಾಡಿದನು.

ಅಥಾಽಪಶ್ಯತ್ ಕ್ಷಣಾತ್ಸಪ್ತ ಬಾಲಕಾನ್ಪೂರ್ಣವಿಗ್ರಹಾನ್ ।
ತತಸ್ತಾನಪಿ ಸಪ್ತೈವ ಸಪ್ತಧಾ ಕೃತವಾನ್ ಹರಿಃ ॥ ೧೯ ॥
ಜಾತಾ ಏಕೋನಪಂಚಾಶದಥ ತತ್ರೈವ ಬಾಲಕಾಃ ।
ತಾನ್ ದೃಷ್ಟ್ವಾ ವೃದ್ಧಿಮಾಪನ್ನಾಂಸ್ತತೋ ಭೀತಶ್ಶತಕ್ರತುಃ ।
ನಿಶ್ಚಕ್ರಾಮೋದರಾತ್ತೂರ್ಣಂ ದಿಷ್ಟ್ಯಾ ಯಾವನ್ನಲಕ್ಷಿತಃ ॥ ೨೦ ॥
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ದಿತಿಸ್ಸಂಜನಯಾಮಾಸ ಸಪ್ತಧಾ ಸಪ್ತ ಬಾಲಕಾನ್ ॥ ೨೧ ॥
ತತೋಽಭ್ಯೇತ್ಯ ಸಹಸ್ರಾಕ್ಷೋ ದುರ್ಗಂಧೇನ ಸಮಾವೃತಃ ।
ನಿಸ್ತೇಜಾ ಮ್ಲಾನವಕ್ತ್ರಶ್ಚ ಲಜ್ಜಯಾಽಧೋಮುಖಃ ಸ್ಥಿತಃ ॥ ೨೨ ॥
ತಂ ದೃಷ್ಟ್ವಾ ತಾದೃಶಂ ಶಕ್ರಂ ದಿತಿಃ ಪ್ರೋವಾಚ ಸಾದರಂ ।
ಪ್ರಣತಂ ಸಂಸ್ಥಿತಂ ಪಾರ್ಶ್ವೇ ಭಯವ್ಯಾಕುಲಚೇತಸಂ ॥ ೨೩ ॥
ಕಿಂ ತ್ವಂ ಶಕ್ರ ನಿರುತ್ಸಾಹಸ್ತೇಜೋದ್ಯುತಿನಿವರ್ಜಿತಃ ।
ಶರೀರಾತ್ತವ ದುರ್ಗಂಧಃ ಕಸ್ಮಾದೀದೃಕ್ಪ್ರಜಾಯತೇ ॥ ೨೪ ॥
ಕಿಂ ತ್ವಯಾ ನಿಹತೋ ವಿಪ್ರೋ ಗುರುವಾನ್ ಬಾಲಕೋಽಥವಾ ।
ನಾರೀ ವಾ ಯೇನ ತೇ ನಷ್ಟಂ ತೇಜೋ ಗಾತ್ರಸಮುದ್ಭವಂ ॥ ೨೫ ॥

---

೧೯. ಬಳಿಕ ಕೂಡಲೆ ಪೂರ್ಣಶರೀರರಾದ ಬಾಲಕರನ್ನು ನೋಡಿ ಅವರನ್ನೂ ಏಳು ವಿಧವಾಗಿ ಕತ್ತರಿಸಿದನು.

೨೦. ತರುವಾಯ ವೃದ್ಧಿಗೊಂಡ ನಲವತ್ತೊಂಬತ್ತು ಮಂದಿ ಬಾಲಕರನ್ನು ನೋಡಿ ಭೀತನಾದ ಇಂದ್ರನು ದಿತಿಯು ನೋಡದಿರುವಷ್ಟರಲ್ಲಿಯೇ ಅವಳ ಉದರ ದಿಂದ ಹೊರಟುಬಂದನು.

೨೧. ಬಳಿಕ ಬೆಳಗಾಗಿ ಸೂರ್ಯನು ಉದಯಿಸಲು ದಿತಿಯು ನಲವತ್ತೊಂಬತ್ತು ಮಂದಿ ಶಿಶುಗಳನ್ನು ಪ್ರಸವಿಸಿದಳು.

೨೨–೨೪. ಇಂದ್ರನು ಅಲ್ಲಿಗೆ ಬಂದು ದುರ್ಗಂಧವುಳ್ಳವನೂ, ತೇಜೋ ಹೀನನೂ, ಬಾಡಿದ ಮುಖವುಳ್ಳವನೂ, ನಾಚಿಕೆಯಿಂದ ತಲೆ ತಗ್ಗಿಸಿಕೊಂಡವನೂ ಆಗಿ ನಿಂತನು. ನಮಸ್ಕಾರಮಾಡಿ ಭಯದಿಂದ ವ್ಯಾಕುಲಗೊಂಡ ಮನಸ್ಸುಳ್ಳವ ನಾಗಿ ಹತ್ತಿರ ನಿಂತಿರುವ ಅಂತಹ ಇಂದ್ರನನ್ನು ಕಂಡು ದಿತಿಯು ಪ್ರೀತಿಯಿಂದ ಇಂತೆಂದಳು. "ಇಂದ್ರ! ನೀನು ಉತ್ಸಾಹವಿಲ್ಲದವನೂ, ತೇಜೋಹೀನನೂ ಆಗಿರುವೆ ಯೇಕೆ? ನಿನ್ನ ಶರೀರದಿಂದ ಇಂತಹ ದುರ್ವಾಸನೆಯು ಉಂಟಾಗುತ್ತಿದೆಯೇಕೆ?

೨೫. ನೀನು ಬ್ರಾಹ್ಮಣನನ್ನಾಗಲಿ, ಗುರುವನ್ನಾಗಲಿ, ಬಾಲಕನನ್ನಾಗಲಿ, ಹೆಂಗಸನ್ನಾಗಲಿ ಕೊಂದಿರುವೆಯೋ? ಅದರಿಂದ ನಿನ್ನ ಶರೀರದ ಕಾಂತಿಯು ನಷ್ಟ ವಾಗಿದೆಯೋ?

ಹತೋ ನಖಾಂಭಸಾ ವಾ ತ್ವಂ ಘೃಷ್ಟಶೂರ್ಪಾನಿಲೇನ ಚ ।
ಅಜಾಮಾರ್ಜನಿಕೋತ್ಥೈಶ್ಚ ರಜೋಭಿರ್ವಾ ಸಮಾಶ್ರಿತಃ ॥ ೨೬ ॥

ಶಕ್ರ ಉವಾಚ :—

ಸತ್ಯಮೇತನ್ಮಹಾಭಾಗೇ ಯತ್ತ್ವಯೋಕ್ತೋಽಸ್ಮಿ ಸಾಂಪ್ರತಂ ।
ರಾತ್ರೌ ಪ್ರವಿಷ್ಟಸ್ಸುಪ್ತಾಯಾ ಜಠರೇ ತವ ಪಾಪಕೃತ್ ॥ ೨೭ ॥
ಕೃಂತಶ್ಚೈಕೋನ ಪಂಚಾಶತ್ಕೃತ್ವೋ ಗರ್ಭೋ ಮಯಾ ಶುಭೇ ।
ತಾವನ್ಮಾತ್ರಾಸ್ತತೋಜಾತಾ ಬಾಲಕಾಸ್ಸರ್ವ ಏವ ತೇ ॥ ೨೮ ॥
ತತೋ ಭೀತ್ಯಾ ವಿನಿಷ್ಕ್ರಾಂತಸ್ತ್ವಯಾ ದೇವಿ ನ ಲಕ್ಷಿತಃ ।
ಏತಸ್ಮಾತ್ಕಾರಣಾಜ್ಜಾತಾ ತೇಜೋಹಾನಿರನಿಂದಿತೇ ॥ ೨೯ ॥

ದಿತಿರುವಾಚ :—

ಯಸ್ಮಾತ್ಸತ್ಯಂ ತ್ವಯಾ ಪ್ರೋಕ್ತಂ ಪುರತೋ ಮಮ ದೇವಪ ।
ತಸ್ಮಾತ್ಪ್ರಾರ್ಥಯ ಮತ್ತಸ್ತ್ವಂ ವರಂ ಯನ್ಮನಸೇಪ್ಸಿತಂ ॥ ೩೦ ॥

ಶಕ್ರ ಉವಾಚ :—

ಏತೇ ತವ ಸುತಾ ದೇವಿ ಛಿದ್ಯಮಾನಾ ಮಯಾಸಿನಾ ।
ರುದಂತೋ ವಾರಿತಾ ಮಂದಂ ಮಾರುದಂತು ಮುಹುರ್ಮುಹುಃ॥ ೩೧ ॥

---

೨೬. ಉಗುರನ್ನು ತೊಳೆದ ನೀರನ್ನು ಮುಟ್ಟಿರುವೆಯೋ? ಅಥವಾ ಮೊರದ ಗಾಳಿಯು ತಗುಲಿತೋ? ಅಥವಾ ಆಡನ್ನು ತೊಳೆಯುವಾಗ ಉಂಟಾದ ದೂಳನ್ನು ಮುಟ್ಟಿದೆಯೋ?

೨೭–೨೮. ಇಂದ್ರನು ಹೇಳುತ್ತಾನೆ:—ಎಲೈ ಮಹಾಭಾಗ್ಯವಂತಳೆ! ಈಗ ನೀನು ಹೇಳಿರುವುದು ನಿಜ. ರಾತ್ರಿಯ ವೇಳೆ ನೀನು ಮಲಗಿರುವಾಗ ಪಾಪಿಯಾದ ನಾನು ನಿನ್ನ ಹೊಟ್ಟೆಯನ್ನು ಹೊಕ್ಕು ಗರ್ಭವನ್ನು ನಲವತ್ತೊಂಬತ್ತು ವಿಧವಾಗಿ ಕತ್ತರಿಸಿದೆನು. ಆದ್ದರಿಂದ ಅಷ್ಟು ಮಂದಿ ಬಾಲಕರು ಜನಿಸಿದರು.

೨೯. ದೇವಿ! ಅನಂತರ ನಾನು ನೀನು ಕಾಣದಿರುವಂತೆ ಹೊರಗೆ ಹೊರಟೆನು. ಈ ಕಾರಣದಿಂದ ನನ್ನ ತೇಜಸ್ಸು ನಷ್ಟವಾಗಿರುವುದು.

೩೦. ದಿತಿಯು ಹೇಳುತ್ತಾಳೆ:—ದೇವರಾಜ! ನೀನು ನನ್ನ ಮುಂದೆ ಸತ್ಯವನ್ನು ಹೇಳಿರುವುದರಿಂದ ಇಷ್ಟವಾದ ವರವನ್ನು ಕೇಳಿಕೋ.

೩೧. ಇಂದ್ರನು ಹೇಳುತ್ತಾನೆ:—ದೇವಿ! ಈ ನಿನ್ನ ಮಕ್ಕಳನ್ನು ನಾನು ಕತ್ತರಿಸುವಾಗ ಅವರು ಅಳಲು ನಾನು ಮೆಲ್ಲನೆ ಅಳಬೇಡಿರಿ ಎಂದು ಅನೇಕ ಬಾರಿ ತಡೆದೆನು.

ಮರುತೋ ನಾಮ ವಿಖ್ಯಾತಾಸ್ತಸ್ಮಾತ್ಸಂತು ಜಗತ್ರಯೇ ।
ದ್ವೈತ್ಯಭಾವವಿನಿರ್ಮುಕ್ತಾ ಮದ್ವಿಧೇಯಾ ಮಮ ಪ್ರಿಯಾಃ ॥ ೩೨ ॥
ಯಜ್ಞಭಾಗಭುಜಸ್ಸರ್ವೇ ಭವಿಷ್ಯಂತಿ ಮಯಾ ಸಹ ।
ಯಸ್ಮಾದೇತಂ ಮಯಾ ತೀರ್ಥಂ ಬಾಲಕೈಸ್ತವ ಮಂಡಿತಂ ॥ ೩೩ ॥
ಬಹುಭಿರ್ಯಾಸ್ಯತಿ ಖ್ಯಾತಿಂ ಬಾಲಮಂಡನ ವಿತ್ಯತಃ ।
ಯಾ ಚ ಸ್ತ್ರೀ ಗರ್ಭಸಂಯುಕ್ತಾ ಸ್ನಾನಂ ಭಕ್ತ್ಯಾ ಕರಿಷ್ಯತಿ ।
ನ ಭವಿಷ್ಯಂತಿ ಛಿದ್ರಾಣಿ ತಸ್ಯಾ ಗರ್ಭೇ ಕಥಂಚನ ॥ ೩೪ ॥
ಪ್ರಾಪ್ತೇ ಪ್ರಸವಕಾಲೇ ತು ಯಾ ಜಲಂ ಪ್ರಾಶಯಿಷ್ಯತಿ ।
ತೀರ್ಥಸ್ಯಾಽಸ್ಯ ಸುಖೇನೈವ ಪ್ರಸವಿಷ್ಯತಿ ಸಾ ಸುತಂ ॥ ೩೫ ॥

ದಿತಿರುವಾಚ :—

ತವೋಚ್ಛೇದಾಯ ದೇವೇಶ ಯಾಚಿತಃ ಪ್ರಾಙ್ಮಯಾ ಹರಃ ।
ಏಕಂ ದೇವಸುತಂ ದೇಹಿ ಸರ್ವದೇವನಿಬರ್ಹಣಂ ॥ ೩೬ ॥
ತ್ವಯಾ ಚೈಕೋನ ಪಂಚಾಶತ್ಪ್ರಕಾರಃ ಸ ವಿನಿರ್ಮಿತಃ ।
ಯಸ್ಮಾದೃತಂ ತ್ವಯಾ ಪ್ರೋಕ್ತಂ ತಸ್ಮಾದೇತದ್ಭವಿಷ್ಯತಿ ॥ ೩೭ ॥

ಸೂತ ಉವಾಚ :—

ತತಃ ಪ್ರಭೃತಿ ತೇ ಜಾತಾ ಮರುತೋ ವಿಬುಧೈಃ ಸಮಂ ।
ಯಜ್ಞಭಾಗಸ್ಯ ಭೋಕ್ತಾರೋ ದಿತೇಃ ಶಕ್ರಸ್ಯ ಶಾಸನಾತ್ ॥ ೩೮ ॥

---

೩೨-೩೫. ಆದ್ದರಿಂದ ಇವರು ಮೂರು ಲೋಕಗಳಲ್ಲಿಯೂ ಮರುತ್ತುಗಳೆಂದು ಪ್ರಸಿದ್ಧರೂ, ದ್ವೈತ್ಯಭಾವರಹಿತರೂ, ನನಗೆ ವಿಧೇಯರೂ, ಪ್ರಿಯರೂ, ನನ್ನೊಡನೆ ಯಜ್ಞಭಾಗವನ್ನು ಭುಂಜಿಸುವವರೂ ಆಗಲಿ. ನಾನೀ ತೀರ್ಥವನ್ನು ನಿನ್ನ ಅನೇಕ ಮಂದಿ ಬಾಲಕರಿಂದ ಅಲಂಕರಿಸಿದ ಕಾರಣ ಇದು ಬಾಲಮಂಡನ ಎಂದು ವಿಖ್ಯಾತವಾಗಲಿ. ಗರ್ಭಿಣಿಯಾದ ಹೆಂಗಸು ಇಲ್ಲಿ ಭಕ್ತಿಯಿಂದ ಮಿಂದರೆ ಅವಳ ಗರ್ಭದಲ್ಲಿ ಛಿದ್ರಗಳು ಉಂಟಾಗುವುದಿಲ್ಲ. ಪ್ರಸವಕಾಲದಲ್ಲಿ ಇದರ ನೀರನ್ನು ಕುಡಿದ ಗರ್ಭಿಣಿಯು ಸುಖವಾಗಿ ಪುತ್ರನನ್ನು ಪ್ರಸವಿಸುವಳು.

೩೬-೩೭. ದಿತಿಯು ಹೇಳುತ್ತಾಳೆ:—ದೇವರಾಜ! ನಾನು ಹಿಂದೆ ಹರನನ್ನು ಕುರಿತು ನಿನ್ನ ನಾಶಕ್ಕಾಗಿ ಸಕಲ ದೇವತೆಗಳನ್ನೂ ಕೊಲ್ಲುವ ಮಗನನ್ನು ಕೊಡೆಂದು ಬೇಡಿದೆನು. ನೀನು ಆ ಗರ್ಭಪಿಂಡವನ್ನು ನಲವತ್ತೊಂಬತ್ತು ವಿಧವಾಗಿ ಭೇದಿಸಿದೆ. ನೀನು ಸತ್ಯವನ್ನು ನುಡಿದಿರುವುದರಿಂದ ನೀನು ಹೇಳಿರುವುದು ನಿಜವಾಗುವುದು.

೩೮. ಸೂತನು ಹೇಳುತ್ತಾನೆ:—ಅದು ಮೊದಲ್ಗೊಂಡು ಆ ನಲವತ್ತೊಂಬತ್ತು ಮಂದಿ ಮರುತ್ತುಗಳು ದಿತಿ ಮತ್ತು ಇಂದ್ರನ ಅಪ್ಪಣೆಯಿಂದ ದೇವತೆಗಳೊಡನೆ ಯಜ್ಞಭಾಗವನ್ನು ಸ್ವೀಕರಿಸುವವರಾದರು.

ಅಥ ಪ್ರಾಹ ಸಹಸ್ರಾಕ್ಷೋ ದೇವಾಚಾರ್ಯಂ ಬೃಹಸ್ಪತಿಂ ।
ಮಾತುರ್ದ್ರೋಹಕೃತಂ ಪಾಪಂ ಕಥಂ ಯಾಸ್ಯತಿ ಸಂಕ್ಷಯಂ ॥ ೩೯ ॥

ಬೃಹಸ್ಪತಿರುವಾಚ :—

ಅತ್ರೈವ ಕುರು ದೇವೇಂದ್ರ ತಪಃ ಪಾಪವಿಶುದ್ಧಯೇ ।
ತೀರ್ಥೇ ಯತ್ರ ಕೃತಂ ಪಾಪಂ ಸರ್ವಪಾತಕನಾಶನೇ ॥ ೪೦ ॥
ನ ಯಜ್ಞೈರ್ನ ಚ ದಾನೇನ ನಾಽನ್ಯೈಸ್ತೀರ್ಥಸಮಾಶ್ರಯೈಃ ।
ಮಾತುರ್ದ್ರೋಹಕೃತಂ ಪಾಪಂ ನಾಶಂ ಯಾತಿ ಪುರಂದರ ।
ಏವಮೇತತ್ಪರಿತ್ಯಕ್ತುಂ ತೀರ್ಥಂ ಮಾತುಸ್ತವಾಶ್ರಯಂ ॥ ೪೧ ॥

ಸೂತ ಉವಾಚ :—

ತತಸ್ತೂರ್ಣಂ ಸಹಸ್ರಾಕ್ಷಃ ಸಹಸ್ರಾಕ್ಷೇಶಸಂಜ್ಞಿತಂ ।
ಲಿಂಗಂ ಸಂಸ್ಥಾಪಯಾಮಾಸ ಸ್ವಯಮೇವ ದ್ವಿಜೋತ್ತಮಾಃ ॥ ೪೨ ॥
ತ್ರಿಕಾಲಂ ಪೂಜಯಾಮಾಸ ಪುಷ್ಪಧೂಪಾಽನುಲೇಪನೈಃ ।
ತಥಾಽನ್ಯೈರ್ಬಲಿ ಸತ್ಕಾರೈರ್ಗೀತೈರ್ನೃತ್ಯೈಃ ಪೃಥಗ್ವಿಧೈಃ ॥ ೪೩ ॥
ತತೋ ವರ್ಷಸಹಸ್ರಾಂತೇ ತುಷ್ಟಸ್ತಸ್ಯ ಮಹೇಶ್ವರಃ ।
ಪ್ರೋವಾಚ ವರದೋಽಸ್ಮೀತಿ ಶಕ್ರ ಪ್ರಾರ್ಥಯ ವಾಂಛಿತಂ ॥ ೪೪ ॥

---

೩೯. ಬಳಿಕ ದೇವೇಂದ್ರನು ಬೃಹಸ್ಪತಿಯನ್ನು ಕುರಿತು ತಾಯಿಯ ದ್ರೋಹದಿಂದುಂಟಾದ ಪಾಪವು ಹೇಗೆ ಪರಿಹಾರವಾಗುವುದೆಂದು ಕೇಳಿದನು.

೪೦. ಬೃಹಸ್ಪತಿಯು ಹೇಳುತ್ತಾನೆ:—ದೇವೇಂದ್ರ! ನಿನ್ನ ಪಾಪವು ಪರಿಹಾರವಾಗುವುದಕ್ಕಾಗಿ ನೀನು ಪಾಪವನ್ನು ಮಾಡಿರುವ ಸಕಲಪಾಪನಾಶಕವಾದ ಈ ತೀರ್ಥದಲ್ಲಿ ತಪಸ್ಸನ್ನು ಮಾಡು.

೪೧. ಪುರಂದರ! ನೀನು ತಾಯಿಗೆ ಮಾಡಿರುವ ಪಾಪವು ಯಜ್ಞದಾನಗಳಿಂದಲೂ, ಇತರ ತೀರ್ಥಗಳ ಆಶ್ರಯದಿಂದಲೂ ಪರಿಹಾರವಾಗುವುದಿಲ್ಲ.

೪೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಬಳಿಕ ಇಂದ್ರನು ತಾನೇ ಸಹಸ್ರಾಕ್ಷೇಶವೆಂಬ ಲಿಂಗವನ್ನು ಪ್ರತಿಷ್ಠೆಮಾಡಿದನು.

೪೩. ಮತ್ತು ತ್ರಿಕಾಲಗಳಲ್ಲಿ ಪುಷ್ಪ, ಧೂಪ, ಅನುಲೇಪನ, ಬಲಿಸತ್ಕಾರ, ನಾನಾವಿಧ ನೃತ್ಯಗೀತಗಳು ಇವುಗಳಿಂದ ಆರಾಧಿಸಿದನು.

೪೪. ಬಳಿಕ ಸಾವಿರ ವರ್ಷಗಳಾದ ಮೇಲೆ ಶಂಕರನು ಸಂತುಷ್ಟನಾಗಿ “ಇಂದ್ರ! ವರವನ್ನು ಕೇಳಿಕೋ ಕೊಡುವೆನು’ ಎಂದನು.

ಶಕ್ರ ಉವಾಚ :—

ಮಾತುರ್ದ್ರೋಹಕೃತಂ ಪಾಪಂ ಯಾತು ಮೇ ತ್ರಿಪುರಾಂತಕ ।
ತಥಾಽನ್ಯೇಷಾಂ ಮನುಷ್ಯಾಣಾಂ ಯೇಽತ್ರ ತ್ವಾಂ ಶ್ರದ್ಧಯಾನ್ವಿತಾಃ ।
ಪೂಜಯಿಷ್ಯಂತಿ ಸದ್ಭಕ್ತ್ಯಾ ಸ್ನಾನಂ ಕೃತ್ವಾ ಸಮಾಹಿತಾಃ ॥ ೪೫ ॥

ಸೂತ ಉವಾಚ:—

ಸ ತಥೇತಿ ಪ್ರತಿಜ್ಞಾಯ ಜಗಾಮಾದರ್ಶನಂ ಹರಃ ।
ಶಕ್ರೋಽಪಿ ರಹಿತಃ ಪಾಪೈರ್ಜಗಾಮ ತ್ರಿದಶಾಲಯಂ ॥ ೪೬ ॥
ಏವಂ ತತ್ರ ಸಮುತ್ಪನ್ನಂ ತೀರ್ಥಂ ತದ್ಬಾಲಮಂಡನಂ ।
ಸ್ವಾಮಿದ್ರೋಹಕೃತಾತ್ಪಾಪಾನ್ಮುಚ್ಯಂತೇ ಯತ್ರ ಮಾನವಾಃ ॥ ೪೭ ॥
ಏತದ್ವಃ ಸರ್ವಮಾಖ್ಯಾತಂ ಬಾಲಮಂಡನಸಂಭವಂ ।
ಮಾಹಾತ್ಮ್ಯಂ ತು ದ್ವಿಜಶ್ರೇಷ್ಠಾಃ ಶೃಣುಧ್ವಮಥ ಸಾದರಂ ॥ ೪೮ ॥
ಆಶ್ವಿನಸ್ಯ ಸಿತೇ ಪಕ್ಷೇ ದಶಮ್ಯಾದಿ ಯಥಾಕ್ರಮಂ ।
ಯಸ್ತತ್ರ ಕುರುತೇ ಶ್ರಾದ್ಧಂ ಯಾವತ್ಪಂಚದಶೀ ತಿಥಿಃ ॥ ೪೯ ॥
ತೀರ್ಥಾನಾಂ ಸ ಹಿ ಸರ್ವೇಷಾಂ ಸ್ನಾನಜಂ ಲಭತೇ ಫಲಂ ।
ಶ್ರಾದ್ಧಸ್ಯ ಕರಣಾದ್ವಾಽಪಿ ವಾಜಿಮೇಧಫಲಂ ದ್ವಿಜಾಃ ॥ ೫೦ ॥
ತಸ್ಮಿನ್ಕಾಲೇ ಸಹಸ್ರಾಕ್ಷಃ ಸಮಾಗಚ್ಛತಿ ಭೂತಲೇ ।
ಭಾಗಾನಾಂ ಮರ್ತ್ಯಜಾತಾನಾಂ ಸೇವನಾಯ ಸದೈವ ಹಿ ॥ ೫೧ ॥

---

೪೫. ಇಂದ್ರನು ಹೇಳುತ್ತಾನೆ:—ಶಂಕರ! ನಾನು ಮಾಡಿದ ಮಾತೃದ್ರೋಹದಿಂದುಂಟಾದ ಪಾಪವು ಪರಿಹಾರವಾಗಲಿ. ಇಲ್ಲಿ ಮಿಂದು ನಿನ್ನನ್ನು ಶ್ರದ್ಧೆಯಿಂದ ಅರ್ಚಿಸುವ ಇತರ ಮಾನವರ ಪಾಪಗಳೂ ಪರಿಹಾರವಾಗಲಿ.

೪೬. ಸೂತನು ಹೇಳುತ್ತಾನೆ:—ಹರನು ಹಾಗೆಯೇ ಆಗಲೆಂದು ಹೇಳಿ ಅದೃಶ್ಯನಾದನು. ಇಂದ್ರನೂ ಪಾಪರಹಿತನಾಗಿ ದೇವಲೋಕಕ್ಕೆ ಹೋದನು.

೪೭. ಹೀಗೆ ಅಲ್ಲಿ ಬಾಲಮಂಡನತೀರ್ಥವುಂಟಾಯಿತು. ಇಲ್ಲಿ ಸ್ವಾಮಿದ್ರೋಹದಿಂದುಂಟಾದ ಮಾನವರ ಪಾಪವು ಪರಿಹಾರವಾಗುವುದು.

೪೮. ದ್ವಿಜೋತ್ತಮರೆ! ಹೀಗೆ ನಿಮಗೆ ಬಾಲಮುಂಡನತೀರ್ಥದ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು. ಅನಂತರ ಇದನ್ನು ಆದರದಿಂದ ಕೇಳಿರಿ.

೪೯—೫೧. ಆಶ್ವಿನ ಶುಕ್ಲಪಕ್ಷದಲ್ಲಿ ದಶಮಿ ಮೊದಲ್ಗೊಂಡು ಹುಣ್ಣಿಮೆವರೆಗೆ ಅಲ್ಲಿ ಶ್ರಾದ್ಧಮಾಡುವವರಿಗೆ ಸಕಲ ತೀರ್ಥಗಳಲ್ಲಿ ಮಿಂದ ಫಲವು ದೊರೆಯುವುದು. ಶ್ರಾದ್ಧಮಾಡುವುದರಿಂದ ಅಶ್ವಮೇಧಯಾಗದ ಫಲವು ಲಭಿಸುವುದು. ಆ ಕಾಲದಲ್ಲಿ ಇಂದ್ರನು ಮಾನವರು ಕೊಟ್ಟ ಹವಿರ್ಭಾಗವನ್ನು ಸೇವಿಸುವುದಕ್ಕಾಗಿ ಭೂಮಿಗೆ ಬರುವನು.

ಯಾವದ್ಭೂಮಿತಲೇ ಶಕ್ರಸ್ತಿಷ್ಠತ್ಯೇವಂ ದ್ವಿಜೋತ್ತಮಾಃ ।
ತೀರ್ಥೇ ತೀರ್ಥಾನಿ ಸರ್ವಾಣಿ ತಾವತ್ತಿಷ್ಠಂತಿ ತತ್ರ ವೈ ॥ ೫೨ ॥
ತಸ್ಮಾತ್ಸರ್ವಪ್ರಯತ್ನೇನ ತಸ್ಮಿನ್ಕಾಲೇ ವಿಶೇಷತಃ ।
ಸ್ನಾತ್ವಾ ತತ್ರ ಶುಭೇ ತೀರ್ಥೇ ಶಕ್ರೇಶ್ವರಮಥಾರ್ಚಯೇತ್ ॥ ೫೩ ॥
ಅತ್ರ ಶ್ಲೋಕೌ ಪುರಾ ಗೀತೌ ನಾರದೇನ ಸುರರ್ಷಿಣಾ ।
ಶೃಣ್ವಂತು ಮುನಯಃ ಸರ್ವೇ ಕೀರ್ತ್ಯಮಾನೌ ಮಯಾ ಹಿತೌ ॥ ೫೪ ॥
ಬಾಲಮಂಡನಕೇ ಸ್ನಾತ್ವಾ ಶಕ್ರೇಶ್ವರಮಥೇಕ್ಷಯೇತ್ ।
ಯಃ ಪುಮಾನಾಶ್ವಿನೇ ಮಾಸಿ ಪ್ರಾಪ್ತೇ ಶ್ರವಣಪಂಚಕೇ ।
ಸ ಪಾಪೈರ್ಮುಚ್ಯತೇ ಸರ್ವೈರಾಜನ್ಮಮರಣಾದ್ಭುವಿ ॥ ೫೫ ॥
ಪ್ರಭಾವಾತ್ತಸ್ಯ ತೀರ್ಥಸ್ಯ ಸತ್ಯಮೇತದ್ದ್ವಿಜೋತ್ತಮಾಃ ॥ ೫೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬಾಲಮಂಡನತೀರ್ಥಮಾಹಾತ್ಮ್ಯವರ್ಣನಂ"
ನಾಮ ದ್ವಾವಿಂಶೋಽಧ್ಯಾಯಃ

---

೫೨. ದ್ವಿಜವರ್ಯರೆ! ಭೂಮಿಯಲ್ಲಿ ಇಂದ್ರನಿರುವವರೆಗೆ ಈ ತೀರ್ಥದಲ್ಲಿ ಸಕಲ ತೀರ್ಥಗಳೂ ನೆಲಸಿರುವುವು.

೫೩. ಆದ್ದರಿಂದ ಆ ಸಮಯದಲ್ಲಿ ನರನು ಆ ಶುಭತೀರ್ಥದಲ್ಲಿ ಮಿಂದು ಶಕ್ರೇಶ್ವರನನ್ನು ಅರ್ಚಿಸಬೇಕು.

೫೪. ಈ ವಿಷಯದಲ್ಲಿ ಹಿಂದೆ ನಾರದಮುನಿಯು ಎರಡು ಶ್ಲೋಕಗಳನ್ನು ಹೇಳಿರುವನು. ಮುನಿಗಳೆ! ಹೇಳುತ್ತೇನೆ; ಕೇಳಿರಿ.

೫೫–೫೬. ಆಶ್ವಿನಮಾಸದಲ್ಲಿ ಶ್ರವಣಪಂಚಕವು ಒದಗಲು ಬಾಲಮಂಡನ ತೀರ್ಥದಲ್ಲಿ ಮಿಂದು ಶಕ್ರೇಶ್ವರನನ್ನು ನೋಡಿದರೆ ಆ ತೀರ್ಥದ ಪ್ರಭಾವದಿಂದ ಮಾನವನು ಹುಟ್ಟಿ ಮಡಿಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬಾಲಮಂಡನತೀರ್ಥಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ಮೃಗತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಸ್ಯೈವ ಪಶ್ಚಿಮೇ ಭಾಗೇ ಮೃಗತೀರ್ಥಮನುತ್ತಮಂ ।
ಅಸ್ತಿ ಪುಣ್ಯತಮಂ ಖ್ಯಾತಂ ಸಮಸ್ತೇ ಧರಣೀತಲೇ ॥ ೧ ॥
ತತ್ರ ಯೇ ಮಾನವಾಸ್ತೀರ್ಥೇ ಸಮ್ಯಕ್ ಶ್ರದ್ಧಾಸಮನ್ವಿತಾಃ ।
ಚೈತ್ರಶುಕ್ಲಚತುರ್ದಶ್ಯಾಂ ಸ್ನಾನಂ ಕುರ್ವಂತಿ ಭಾಸ್ಕರೇ ॥ ೨ ॥
ಮಧ್ಯೇ ಸ್ಥಿತೇ ನ ತೇ ಯಾಂತಿ ತಿರ್ಯಗ್ಯೋನೌ ಕಥಂಚ ನ ।
ಅಪಿ ಪಾಪಸಮೋಪೇತಾ ದೋಷೈಃ ಸರ್ವೈಃ ಸಮನ್ವಿತಾಃ ॥ ೩ ॥
ಕೃತಘ್ನಾ ನಾಸ್ತಿಕಾಶ್ಚೌರಾ ಮರ್ಯಾದಾಭೇದಕಾಸ್ತಥಾ ।
ಸ್ನಾತಾ ಯೇ ತತ್ರ ಸತ್ತೀರ್ಥೇ ತೇ ಯಾಂತಿ ಪರಮಾಂ ಗತಿಂ ।
ವಿಮಾನವರಮಾರೂಢಾಃ ಸ್ತೂಯಮಾನಾಶ್ಚ ಕಿನ್ನರೈಃ ॥ ೪ ॥

ಋಷಯ ಊಚುಃ :—

ಮೃಗತೀರ್ಥಂ ಕಥಂ ತತ್ರ ಸಂಜಾತಂ ಸೂತನಂದನ ।
ಕಿಂ ಪ್ರಭಾವಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೫ ॥

---

## ಕನ್ನಡದ ಅನುವಾದ

### ಮೃಗತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಆ ಬಾಲಮುಂಡನತೀರ್ಥದ ಪಶ್ಚಿಮ ದಿಕ್ಕಿನಲ್ಲಿ ಸಮಸ್ತ ಭೂಮಿಯಲ್ಲಿ ಪ್ರಸಿದ್ಧವಾದ ಪುಣ್ಯಕರವಾದ ಮೃಗತೀರ್ಥವಿರುವುದು.

೨-೩. ಆ ತೀರ್ಥದಲ್ಲಿ ಚೈತ್ರ ಶುಕ್ಲ ಚತುರ್ದಶೀ ದಿನ ಸೂರ್ಯನು ಆಕಾಶ ಮಧ್ಯವನ್ನು ಸೇರಿರಲು ಶ್ರದ್ಧೆಯಿಂದ ಸ್ನಾನಮಾಡುವ ಮಾನವನು ಪಾಪಿಷ್ಠನಾಗಿದ್ದರೂ, ದೋಷಿಯಾಗಿದ್ದರೂ ತಿರ್ಯಗ್ಯೋನಿಯಲ್ಲಿ ಜನಿಸುವುದಿಲ್ಲ.

೪. ಕೃತಘ್ನರೂ, ನಾಸ್ತಿಕರೂ, ಕಳ್ಳರೂ, ಮರ್ಯಾದೆಯನ್ನು ಉಲ್ಲಂಘಿಸಿದವರೂ ಆ ತೀರ್ಥದಲ್ಲಿ ಮಿಂದರೆ ವಿಮಾನವನ್ನೇರಿ ಕಿನ್ನರರಿಂದ ಸ್ತುತಿಸಲ್ಪಡುತ್ತ ಉತ್ತಮಗತಿಯನ್ನು ಪಡೆಯುವರು.

೫. ಋಷಿಗಳು ಕೇಳುತ್ತಾರೆ :— ಸೂತಪುತ್ರ ! ಅಲ್ಲಿ ಮೃಗತೀರ್ಥವು ಹೇಗುಂಟಾಯಿತು ? ಅದು ಎಂತಹ ಪ್ರಭಾವವುಳ್ಳುದು ? ಹೇಳು. ಕೇಳಲು ನಮಗೆ ಅತ್ಯಂತ ಕುತೂಹಲವುಂಟಾಗಿದೆ.

ಸೂತ ಉವಾಚ :—

ಪೂರ್ವಂ ತತ್ರ ಮಹಾರಣ್ಯೇ ನಾನಾಮೃಗಗಣಾವೃತೇ ।
ನಾನಾವಿಹಂಗ ಸಂಘುಷ್ಟೇ ನಾನಾವೃಕ್ಷಸಮಾಕುಲೇ ॥ ೬ ॥
ಸಮಾಯಾತಾ ಮಹಾರೌದ್ರಾ ಲುಬ್ಧಕಾಶ್ಚಾಪಪಾಣಯಃ ।
ಕೃಷ್ಣಾಂಗಾ ಭ್ರಮಮಾಣಾಸ್ತೇ ಯಮದೂತಾ ಇವಾಃಪರೇ ॥ ೭ ॥
ಏತಸ್ಮಿನ್ನಂತರೇ ದೃಷ್ಟಂ ಮೃಗಯೂಥಂ ತರೋರಧಃ ।
ಉಪವಿಷ್ಟಂ ಸುವಿಶ್ರಬ್ಧಂ ತೈಸ್ತದಾ ದ್ವಿಜಸತ್ತಮಾಃ ॥ ೮ ॥
ಅಥ ತಾಂಲ್ಲುಬ್ಧಕಾನ್ ದೃಷ್ಟ್ವಾ ದೂರತೋಽಪಿ ಭಯಾತುರಾಃ ।
ಪಲಾಯನಪರಾಃ ಸರ್ವೇ ಮೃಗಾ ಜಗ್ಮುರ್ದ್ರುತಂ ತತಃ ॥ ೯ ॥
ಅಥ ತೇ ಸನ್ನಿಧೌ ದೃಷ್ಟ್ವಾ ಗಂಭೀರಂ ಸಲಿಲಾಶಯಂ ।
ಪ್ರವಿಷ್ಟಾ ಹರಿಣಾಃ ಸರ್ವೇ ಭಯಾರ್ತಾಃ ಶರಪೀಡಿತಾಃ ॥ ೧೦ ॥
ತತಸ್ತತ್ಸಲಿಲಸ್ಯಾಂತಸ್ತೇ ಮೃಗಾಃ ಸರ್ವ ಏವ ಹಿ ।
ಮಾನುಷತ್ವಮನುಪ್ರಾಪ್ತಾಸ್ತತ್ಪ್ರಭಾವಾದ್ದ್ವಿಜೋತ್ತಮಾಃ ॥ ೧೧ ॥
ಅಥ ತಾನ್ಮಾನುಷೀಭೂತಾನ್ಪಪ್ರಚ್ಛುರ್ಲುಬ್ಧಕಾ ಮೃಗಾನ್ ।
ಮೃಗಯೂಥಂ ಸಮಾಯಾತಂ ಮಾರ್ಗೇಣಾನೇನ ಸಾಂಪ್ರತಂ ।
ಕೇನ ಮಾರ್ಗೇಣ ನಿರ್ಯಾತಂ ತಸ್ಮಾದ್ವದತ ಮಾ ಚಿರಂ ॥ ೧೨ ॥

---

೬—೮. ಸೂತನು ಹೇಳುತ್ತಾನೆ:—ಹಿಂದೆ ಅನೇಕ ಮೃಗಗಳ ಸಮೂಹದಿಂದ ತುಂಬಿರುವುದೂ, ನಾನಾ ಪಕ್ಷಿಗಳಿಂದ ಶಬ್ದಗೊಂಡಿರುವುದೂ, ಬಹುವಿಧ ತರುಗಳಿಂದ ತುಂಬಿರುವುದೂ ಆದ ಆ ಕಾಡಿಗೆ ಅತಿಭಯಂಕರರೂ, ಚಾಪಧಾರಿಗಳೂ, ಕೃಷ್ಣವರ್ಣರೂ, ಬೇರೆ ಯಮದೂತರಂತೆ ಸಂಚರಿಸುವವರೂ ಆದ ಬೇಡರು ಬಂದರು. ದ್ವಿಜವರ್ಯರೆ! ಆ ಬೇಡರು ಮರದ ಕೆಳಗೆ ನಂಬಿಕೆಯಿಂದ ಮಲಗಿರುವ ಮೃಗಗಳ ಹಿಂಡನ್ನು ಕಂಡರು.

೯. ಬಳಿಕ ಆ ಬೇಡರನ್ನು ದೂರದಿಂದಲೇ ನೋಡಿ ಭಯಗೊಂಡ ಆ ಮೃಗಗಳೆಲ್ಲ ಶೀಘ್ರವಾಗಿ ಓಡಿದುವು.

೧೦. ಬಳಿಕ ಆ ಜಿಂಕೆಗಳೆಲ್ಲ ಸಮೀಪದಲ್ಲಿ ಆಳವಾದ ಒಂದು ಸರೋವರವನ್ನು ಕಂಡು ಬಾಣಪಾತದ ಭಯದಿಂದ ಅದನ್ನು ಹೊಕ್ಕವು.

೧೧. ಅವು ಆ ತೀರ್ಥದ ಪ್ರಭಾವದಿಂದ ಸರೋವರದ ನಡುವೆ ಮಾನುಷತ್ವವನ್ನು ಹೊಂದಿದುವು.

೧೨. ತರುವಾಯ ಬೇಡರು ಮಾನುಷತ್ವವನ್ನು ಹೊಂದಿದ ಮೃಗಗಳನ್ನು, "ಈ ದಾರಿಯಿಂದ ಬಂದ ಮೃಗಗಳ ಹಿಂಡು ಯಾವ ದಾರಿಯಿಂದ ಹೊರಟು ಹೋಯಿತು? ಜಾಗ್ರತೆಯಾಗಿ ಹೇಳಿರಿ" ಎಂದು ಕೇಳಿದರು.

ಮಾನುಷಾ ಊಚುಃ:—

ವಯಂ ತೇ ಹರಿಣಾಃ ಸರ್ವೇ ಮಾನುಷತ್ವಂ ಸುದುರ್ಲಭಂ ।
ತೀರ್ಥಸ್ಯಾಽಸ್ಯ ಪ್ರಭಾವೇನ ಪ್ರಾಪ್ತಾಃ ಸತ್ಯಂ ನ ಸಂಶಯಃ ॥ ೧೩ ॥
ತಚ್ಛ್ರುತ್ವಾ ವಿಸ್ಮಯಾವಿಷ್ಟಾಸ್ತತಸ್ತೇ ಲುಬ್ಧಕಾದ್ರುತಂ ।
ತ್ಯಕ್ತ್ವಾ ಧನೂಂಷಿ ಬಾಣಾಂಶ್ಚ ಸ್ನಾನಂ ತತ್ರ ಪ್ರಚಕ್ರಿರೇ ॥ ೧೪ ॥
ಸ್ನಾನಮಾತ್ರಾತ್ತತಃ ಸರ್ವೇ ದಿವ್ಯಮಾಲ್ಯಾನುಲೇಪನಾಃ ।
ದಿವ್ಯಗಾತ್ರಧರಾಃ ಸರ್ವೇ ಸಂಜಾತಾಃ ಪಾರ್ಥಿವೋತ್ತಮಾಃ ॥ ೧೫ ॥

ಋಷಯ ಊಚುಃ:—

ಅತ್ಯಾಶ್ಚರ್ಯಮಿದಂ ಸೂತ ಯತ್ತ್ವಯಾ ಪರಿಕೀರ್ತಿತಂ।
ಸ್ನಾನಮಾತ್ರೇಣ ತೇ ಪ್ರಾಪ್ತಾ ಲುಬ್ಧಕಾಸ್ತಾದೃಶಂ ವಪುಃ ॥ ೧೬ ॥
ತಥಾ ಮಾನುಷ್ಯಮಾಪನ್ನಾ ಮೃಗಾಸ್ತೋಯಾಽವಗಾಹನಾತ್ ।
ತತ್ಕಥಂ ಮೇದಿನೀಪೃಷ್ಠೇ ತತ್ತೀರ್ಥಂ ಸಂಬಭೂವ ಹ ॥ ೧೭ ॥

ಸೂತ ಉವಾಚ:—

ಲಿಂಗಭೇದೋದ್ಭವಂ ತೋಯಂ ಯತ್ಪುರಾ ವಃ ಪ್ರಕೀರ್ತಿತಂ ।
ಆಚ್ಛನ್ನಂ ಪಾಂಸುಭಿಃ ಕೃತ್ಸ್ನಂ ವಾಯುನಾ ಶಕ್ರಶಾಸನಾತ್ ॥ ೧೮ ॥

---

೧೩. ಮನುಷ್ಯರು ಹೇಳುತ್ತಾರೆ:—ಎಲೈ ಬೇಡರೆ! ಆ ಜಿಂಕೆಗಳೇ ನಾವು. ಈ ತೀರ್ಥದ ಪ್ರಭಾವದಿಂದ ದುರ್ಲಭವಾದ ಮಾನುಷತ್ವವನ್ನು ಹೊಂದಿದೆವು.

೧೪. ಅದನ್ನು ಕೇಳಿ ಆಶ್ಚರ್ಯಗೊಂಡ ಆ ಬೇಡರು ಕೂಡಲೆ ಬಿಲ್ಲುಬಾಣಗಳನ್ನು ತ್ಯಜಿಸಿ ಅಲ್ಲಿ ಮಿಂದರು.

೧೫. ಅವರು ಅಲ್ಲಿ ಸ್ನಾನಮಾಡುವುದರಿಂದಲೇ ದಿವ್ಯಮಾಲೆ, ಅನುಲೇಪನಗಳುಳ್ಳವರೂ, ದಿವ್ಯಶರೀರಧಾರಿಗಳೂ ಆದರು.

೧೬. ಋಷಿಗಳು ಹೇಳುತ್ತಾರೆ:—ಸೂತ! ನೀನು ಹೇಳಿರುವುದು ಅತ್ಯಾಶ್ಚರ್ಯಕರವಾದುದು. ಬೇಡರು ಸ್ನಾನಮಾಡುವುದರಿಂದಲೇ ಅಂತಹ ಶರೀರವನ್ನು ಹೇಗೆ ಪಡೆದರು.

೧೭. ಹಾಗೆಯೇ ಮೃಗಗಳು ನೀರನ್ನು ಪ್ರವೇಶಿಸುವುದರಿಂದ ಹೇಗೆ ಮನುಷ್ಯತ್ವವನ್ನು ಪಡೆದುವು? ಅಂತಹ ತೀರ್ಥವು ಭೂಮಿಯಲ್ಲಿ ಹೇಗುಂಟಾಯಿತು?

೧೮. ಸೂತನು ಹೇಳುತ್ತಾನೆ:—ನಿಮಗೆ ಹಿಂದೆ ಯಾವ ಲಿಂಗಭೇದೋದ್ಭವ ತೀರ್ಥವನ್ನು ಹೇಳಿರುವೆನೋ ಅದನ್ನು ಇಂದ್ರನ ಆಜ್ಞೆಯಿಂದ ಗಾಳಿಯು ಧೂಳಿನಿಂದ ಮುಚ್ಚಿತಷ್ಟೆ.

ವಲ್ಮೀಕರಂಧ್ರಮಾಸಾದ್ಯ ತನ್ನಿಷ್ಕ್ರಾಂತಂ ಪುನರ್ದ್ವಿಜಾಃ ।
ಕಾಲೇನ ಮಹತಾ ತತ್ರ ಪ್ರದೇಶೇ ಸ್ವಲ್ಪಮೇವ ಹಿ ॥ ೧೯ ॥
ಯತ್ರ ಸ್ನಾತಃ ಪುರಾ ಸದ್ಯಸ್ತ್ರಿಶಂಕುಃ ಪೃಥಿವೀಪತಿಃ ।
ದಿವ್ಯಂ ವಪುಃ ಪುನಃ ಪ್ರಾಪ್ತಶ್ಚಂಡಾಲತ್ವೇನ ಸಂಸ್ಥಿತಃ ॥ ೨೦ ॥
ಏತಸ್ಮಾತ್ಕಾರಣಾತ್ತತ್ರ ಸ್ನಾತಾಃ ಸಾರಂಗಲುಬ್ಧಕಾಃ ।
ಸರ್ವೇ ಪಾಪವಿನಿರ್ಮುಕ್ತಾಃ ಸಂಪ್ರಾಪ್ತಾಃ ಪರಮಂ ವಪುಃ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮೃಗತೀರ್ಥಮಾಹಾತ್ಮ್ಯವರ್ಣನಂ" ನಾಮ
ತ್ರಯೋವಿಂಶೋಽಧ್ಯಾಯಃ

---

೧೯. ಬಹು ಕಾಲದಮೇಲೆ ಆ ತೀರ್ಥವು ಹುತ್ತದ ರಂಧ್ರವನ್ನು ಆಶ್ರಯಿಸಿ ಆ ಸ್ಥಳದಲ್ಲಿ ಸ್ವಲ್ಪವಾಗಿ ಹೊರಟಿತು.

೨೦. ಅಲ್ಲಿ ಹಿಂದೆ ಚಂಡಾಲನಾದ ತ್ರಿಶಂಕುರಾಜನು ಮಿಂದು ಕೂಡಲೆ ದಿವ್ಯ ದೇಹವನ್ನು ಪಡೆದನು.

೨೧. ಈ ಕಾರಣದಿಂದಲೇ ಅಲ್ಲಿ ಮಿಂದ ಜಿಂಕೆ ಮತ್ತು ಬೇಡರು ಪಾಪ ರಹಿತರಾಗಿ ಉತ್ತಮ ಶರೀರವನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮೃಗತೀರ್ಥಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

### ವಿಷ್ಣುಪದೀತೀರ್ಥೋತ್ಪತ್ತಿವರ್ಣನಂ

ಸೂತ ಉವಾಚ :—

ತತ್ರ ವಿಷ್ಣುಪದಂ ನಾಮ ತೀರ್ಥಂ ತೀರ್ಥೇ ಶುಭೇ ಸ್ಥಿತಂ ।
ಅಪರಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೧ ॥
ಅಯನೇ ದಕ್ಷಿಣೇ ಪ್ರಾಪ್ತೇ ಯಸ್ತತ್ಪೂಜ್ಯ ಸಮಾಹಿತಃ ।
ನಿವೇದಯೇತ್ತಥಾತ್ಮಾನಂ ಸಮ್ಯಕ್ ಶ್ರದ್ಧಾಸಮನ್ವಿತಃ ॥ ೨ ॥
ಸ ಮೃತೋಽಪ್ಯಯನೇ ಯಾಮ್ಯೇ ತದ್ವಿಷ್ಣೋಃ ಪರಮಂ ಪದಂ ।
ಪ್ರಾಪ್ನೋತಿ ನಾಽತ್ರ ಸಂದೇಹಸ್ತತ್ಪ್ರಭಾವಾದ್ದ್ವಿಜೋತ್ತಮಾಃ ॥ ೩ ॥
ತಥಾ ಚೈವೋತ್ತರೇ ಪ್ರಾಪ್ತೇ ಪೂಜಯಿತ್ವಾ ಯಥಾವಿಧಿ ।
ಸಮ್ಯಙ್ನಿವೇದಯೇದ್ಭಕ್ತ್ಯಾ ಆತ್ಮಾನಂ ಯಃ ಸಮಾಹಿತಃ ।
ಸೋಽಪಿ ವಿಷ್ಣೋಃ ಪದಂ ಪುಣ್ಯಂ ಪ್ರಾಪ್ಯ ಸಂಜಾಯತೇ ಸುಖೀ ॥ ೪ ॥

ಋಷಯ ಊಚುಃ :—

ಕಥಂ ತತ್ರ ಪದಂ ಜಾತಂ ವಿಷ್ಣೋರವ್ಯಕ್ತ ಜನ್ಮನಃ ।
ಕಥಂ ನಿವೇದ್ಯತೇ ತತ್ರ ಸಮ್ಯಗಾತ್ಮಾಽಯನದ್ವಯೇ ॥ ೫ ॥

---

### ಕನ್ನಡದ ಅನುವಾದ

#### ವಿಷ್ಣುಪದೀತೀರ್ಥೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಆ ಶುಭತೀರ್ಥದಲ್ಲಿ ಸಕಲಪಾಪಗಳನ್ನೂ ನೀಗಿಸುವ ವಿಷ್ಣುಪದವೆಂಬ ಮತ್ತೊಂದು ತೀರ್ಥವಿರುವುದು.

೨–೩. ದಕ್ಷಿಣಾಯನ ಬರಲು ಆ ತೀರ್ಥವನ್ನು ಸಾವಧಾನ ಮನಸ್ಸಿನಿಂದ ಪೂಜಿಸಿ ಶ್ರದ್ಧೆಯಿಂದ ಆತ್ಮಸಮರ್ಪಣೆಮಾಡಿದವನು ಮೃತನಾದರೂ ಆ ತೀರ್ಥದ ಪ್ರಭಾವದಿಂದ ವಿಷ್ಣುವಿನ ಸ್ಥಾನವನ್ನು ಸೇರುವನು.

೪. ಹಾಗೆಯೇ ಉತ್ತರಾಯಣದಲ್ಲಿಯೂ ಆ ತೀರ್ಥವನ್ನು ವಿಧಿಯಂತೆ ಪೂಜಿಸಿ ಆತ್ಮಸಮರ್ಪಣೆಮಾಡಿದವನು ವಿಷ್ಣುವಿನ ಸ್ಥಾನವನ್ನು ಹೊಂದಿ ಸುಖಿಯಾಗುವನು.

೫. ಋಷಿಗಳು ಹೇಳುತ್ತಾರೆ:—ಸೂತ! ಅಲ್ಲಿ ಅವ್ಯಕ್ತಜನ್ಮನಾದ ವಿಷ್ಣುವಿನ ಸ್ಥಾನವು ಹೇಗಾಯಿತು? ಎರಡು ಅಯನಗಳಲ್ಲಿಯೂ ಅಲ್ಲಿ ಆತ್ಮಸಮರ್ಪಣೆ ಮಾಡುವುದು ಹೇಗೆ?

ತಸ್ಮಿನ್ ದೃಷ್ಟೇಽಥವಾ ಸ್ಪೃಷ್ಟೇ ಯತ್ಫಲಂ ಲಭ್ಯತೇ ನರೈಃ ।
ತತ್ಸರ್ವಂ ಸೂತಜ ಬ್ರೂಹಿ ಪರಂ ಕೌತೂಹಲಂ ಹಿ ನಃ ॥ ೬ ॥

ಸೂತ ಉವಾಚ :—

ಬಲಿರ್ಬದ್ಧೋ ಯದಾ ತೇನ ವಿಷ್ಣುನಾ ಪ್ರಭವಿಷ್ಣುನಾ ।
ತದಾಕ್ರಮ್ಯೈಸ್ತ್ರಿಭಿರ್ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥ ೭ ॥
ಹಾಟಕೇಶ್ವರಜೇ ಕ್ಷೇತ್ರೇ ಸಂನ್ಯಸ್ತಃ ಪ್ರಥಮಃ ಕ್ರಮಃ ।
ಮಹರ್ಲೋಕೇ ದ್ವಿತೀಯಸ್ತು ತದಾ ತೇನ ಮಹಾತ್ಮನಾ ॥ ೮ ॥
ತೃತೀಯಸ್ಯ ಸಮುದ್ಯೋಗಂ ಯದಾ ಚಕ್ರೇ ಸ ಚಕ್ರಧೃಕ್ ।
ತದಾ ಭಿನ್ನಂ ದ್ವಿಜಶ್ರೇಷ್ಠಾ ಬ್ರಹ್ಮಾಂಡಂ ಲಘುತಾಂ ಗತಂ ॥ ೯ ॥
ಪಾದಾಗ್ರೇಣಾಽಥ ಸಂಭಿನ್ನೇ ಬ್ರಹ್ಮಾಂಡೇ ನಿರ್ಮಲಂ ಜಲಂ ।
ಅಂಗುಷ್ಠಾಗ್ರೇಣ ಸಂಪ್ರಾಪ್ತಂ ಕ್ರಮೇಣ ಧರಣೀತಲೇ ॥ ೧೦ ॥
ಬ್ರಹ್ಮಲೋಕಂ ತದಾ ಕೃತ್ಸ್ನಂ ಪ್ಲಾವಯಿತ್ವಾ ಜಲಂ ಹಿ ತತ್ ।
ಶುದ್ಧಸ್ಫಟಿಕಸಂಕಾಶಂ ಕುಂದೇಂದುಸದೃಶದ್ಯುತಿ ।
ಮತ್ಸ್ಯಕಚ್ಛಪಸಂಕೀರ್ಣಂ ಗ್ರಾಹಯೂಥೈಃ ಸಮಾಕುಲಂ ॥ ೧೧ ॥

---

೬. ಆ ವಿಷ್ಣುಪದವನ್ನು ನೋಡಿದರೆ ಅಥವಾ ಸ್ಪರ್ಶಮಾಡಿದರೆ ಮಾನವರು ಯಾವ ಫಲವನ್ನು ಪಡೆಯುವರು ? ಅದನ್ನೆಲ್ಲ ನಮಗೆ ಹೇಳು. ಕೇಳಲು ಅತ್ಯಂತ ಕುತೂಹಲವುಂಟಾಗಿದೆ.

೭. ಸೂತನು ಹೇಳುತ್ತಾನೆ:—ಸಮರ್ಥನಾದ ವಿಷ್ಣುವು ಬಲಿಯನ್ನು ಬಂಧಿಸುವಾಗ ತನ್ನ ಮೂರು ಪಾದಗಳಿಂದ ಚರಾಚರಾತ್ಮಕವಾದ ಮೂರು ಲೋಕಗಳನ್ನೂ ವ್ಯಾಪಿಸಿದನಷ್ಟೆ.

೮. ಅವನು ಮೊದಲಿನ ಹೆಜ್ಜೆಯನ್ನು ಹಾಟಕೇಶ್ವರಕ್ಷೇತ್ರದಲ್ಲಿಯೂ, ಎರಡನೆಯ ಹೆಜ್ಜೆಯನ್ನು ಮಹರ್ಲೋಕದಲ್ಲಿಯೂ ಇಟ್ಟನು.

೯. ಆ ವಿಷ್ಣುವು ಮೂರನೆಯ ಪಾದವನ್ನು ಇಡಲು ಉದ್ಯುಕ್ತನಾಗಲು ಬ್ರಹ್ಮಾಂಡವು ಒಡೆದು ಲಘುವಾಯಿತು.

೧೦–೧೧. ಬ್ರಹ್ಮಾಂಡವು ವಿಷ್ಣುವಿನ ಪಾದದ ಕೊನೆಯಿಂದ ಒಡೆಯಲು ಅಂಗುಷ್ಠದ ಕೊನೆಯಿಂದ ನಿರ್ಮಲವಾದ ನೀರು ಹೊರಟಿತು. ಶುದ್ಧವಾದ ಸ್ಫಟಿಕದಂತಿರುವುದೂ, ಮಲ್ಲಿಗೆಹೂವು ಮತ್ತು ಚಂದ್ರರಂತೆ ಕಾಂತಿಯುಳ್ಳುದೂ, ಮತ್ಸ್ಯ, ಆಮೆಗಳಿಂದ ತುಂಬಿರುವುದೂ, ಮೊಸಳೆಗಳಿಂದ ವ್ಯಾಪ್ತವಾಗಿರುವುದೂ ಆದ ಆ ನೀರು ಬ್ರಹ್ಮಾಂಡವನ್ನೆಲ್ಲ ತೊಳೆದು ಕ್ರಮವಾಗಿ ಭೂಮಿಯನ್ನು ಸೇರಿತು.

ತತಃ ಪ್ರಭೃತಿ ಸಾ ಲೋಕೇ ಗಂಗಾ ವಿಷ್ಣುಪದೀ ಸ್ಮೃತಾ ।
ಪವಿತ್ರಮಪಿ ತತ್ಕ್ಷೇತ್ರಂ ನಯಂತೀ ಸಾ ಪವಿತ್ರತಾಂ ॥ ೧೨ ॥
ಏವಂ ವಿಷ್ಣೋಃ ಪದಂ ತತ್ರ ಸಂಜಾತಂ ಮುನಿಸತ್ತಮಾಃ ।
ಸರ್ವಪಾಪಹರಂ ಪುಂಸಾಂ ತದಾ ವಿಷ್ಣುಪದೀ ಸ್ಮೃತಾ ॥ ೧೩ ॥
ಯಸ್ತಸ್ಯಾಂ ಶ್ರದ್ಧಯಾ ಯುಕ್ತಃ ಸ್ನಾನಂ ಕೃತ್ವಾ ಯಥೋದಿತಂ ।
ಸ್ಪರ್ಶಯೇತ್ತತ್ಪದಂ ವಿಷ್ಣೋಃ ಸ ಯಾತಿ ಪರಮಂ ಪದಂ ॥ ೧೪ ॥
ಯಸ್ತತ್ರ ಕುರುತೇ ಶ್ರಾದ್ಧಂ ಸಮ್ಯಕ್ ಶ್ರದ್ಧಾ ಸಮನ್ವಿತಃ ।
ಸ್ನಾತ್ವಾ ವಿಷ್ಣುಪದೀ ತೋಯೇ ಗಯಾಶ್ರಾದ್ಧಫಲಂ ಲಭೇತ್ ॥ ೧೫ ॥
ಮಾಘಮಾಸೇ ನರಃ ಸ್ನಾನಂ ಪ್ರಾತರುತ್ಥಾಯ ತತ್ರ ಯಃ ।
ಕರೋತಿ ಸತತಂ ಮರ್ತ್ಯಃ ಸ ಪ್ರಯಾಗಫಲಂ ಲಭೇತ್ ॥ ೧೬ ॥
ಅಥವಾ ವತ್ಸರಂ ಯಾವತ್ಕ್ಷಣಂ ಕೃತ್ವಾಽತ್ರ ಭಕ್ತಿತಃ ।
ತತ್ರ ಸ್ನಾನಂ ಚ ಯಃ ಕುರ್ಯಾತ್ಸ ಮುಕ್ತಿಂ ಲಭತೇ ನರಃ ॥ ೧೭ ॥
ಯಸ್ಯಾಽಸ್ಥೀನಿ ಜಲೇ ತತ್ರ ಕ್ಷಿಪ್ಯಂತೇ ಮನುಜಸ್ಯ ಚ ।
ಅಪಿ ಪಾಪಸಮಾಚಾರಃ ಸ ಪ್ರಾಪ್ನೋತಿ ಪರಾಂಗತಿಂ ॥ ೧೮ ॥
ಅಪಿ ಪಕ್ಷಿಪತಂಗಾ ಯೇ ಪಶವಃ ಕ್ರಿಮಯೋ ಮೃಗಾಃ ।
ಪ್ರವಿಷ್ಟಾಃ ಸಲಿಲೇ ತಸ್ಮಿಂ ಸ್ತೃಷಾರ್ತಾ ಭಕ್ತಿವರ್ಜಿತಾಃ ॥ ೧೯ ॥

---

೧೨. ಅದು ಮೊದಲ್ಗೊಂಡು ಪವಿತ್ರವಾದ ಆ ಕ್ಷೇತ್ರವನ್ನು ಶುದ್ಧಗೊಳಿಸುವ ಆ ಗಂಗೆಯು ವಿಷ್ಣುಪದಿಯೆಂದು ವಿಖ್ಯಾತವಾಯಿತು.

೧೩. ಮುನಿವರ್ಯರೆ! ಹೀಗೆ ಅಲ್ಲಿ ಉಂಟಾದ ವಿಷ್ಣುವಿನ ಪಾದವು ಮಾನವರ ಪಾಪವನ್ನು ನಿವಾರಿಸುವ ವಿಷ್ಣುಪದಿಯೆಂದು ಪ್ರಸಿದ್ಧವಾಯಿತು.

೧೪. ಆ ವಿಷ್ಣುಪದಿಯಲ್ಲಿ ಶ್ರದ್ಧೆಯಿಂದ ವಿಧಿಯಂತೆ ಮಿಂದು ಆ ವಿಷ್ಣು ಪಾದವನ್ನು ಮುಟ್ಟುವವನು ಉತ್ತಮಸ್ಥಾನವನ್ನು ಸೇರುವನು.

೧೫. ಅಲ್ಲಿ ಮಿಂದು ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡುವವನು ಗಯೆಯಲ್ಲಿ ಮಾಡಿದ ಶ್ರಾದ್ಧದ ಫಲವನ್ನು ಪಡೆಯುವನು.

೧೬. ಮಾಘಮಾಸದಲ್ಲಿ ಬೆಳಿಗ್ಗೆ ಎದ್ದು ಅಲ್ಲಿ ಸ್ನಾನ ಮಾಡುವವನು ಪ್ರಯಾಗದಲ್ಲಿ ಮಿಂದ ಫಲವನ್ನು ಪಡೆಯುವನು.

೧೭–೧೮. ಅಥವಾ ಒಂದು ವರ್ಷಕಾಲ ಇಲ್ಲಿ ಸ್ನಾನಮಾಡುತ್ತ ವಾಸಮಾಡುವವನು ಮುಕ್ತಿಯನ್ನು ಹೊಂದುವನು. ಯಾವ ಮನುಷ್ಯನ ಅಸ್ಥಿಯು ಆ ನೀರಿನಲ್ಲಿರುವುದೋ ಅವನು ಪಾಪಿಯಾಗಿದ್ದರೂ ಉತ್ತಮ ಗತಿಯನ್ನು ಹೊಂದುವನು.

೧೯–೨೦. ಆ ತೀರ್ಥದ ನೀರಿನಲ್ಲಿ ಭಕ್ತಿಯಿಲ್ಲದೆ ಬಾಯಾರಿಕೆಯಿಂದ ಪ್ರವೇಶಮಾಡಿದ ಪತಂಗ, ಪಶು, ಕ್ರಿಮಿ, ಮೃಗಗಳೂ ಪಾಪರಹಿತವಾಗಿ

ತೇಽಪಿ ಪಾಪವಿನಿರ್ಮುಕ್ತಾ ದೇಹಾಂತೇ ಚಾಽತಿದುರ್ಲಭಂ ।
ಚಕ್ರಿಣಸ್ತತ್ಪದಂ ಯಾಂತಿ ಜರಾಮರಣವರ್ಜಿತಂ ॥ ೨೦ ॥
ಕಿಂ ಪುನಃ ಶ್ರದ್ಧಯೋಪೇತಾಃ ಪರ್ವಕಾಲ ಉಪಸ್ಥಿತೇ ।
ದತ್ವಾ ದಾನಂ ದ್ವಿಜೇಂದ್ರಾಣಾಂ ನರಾ ವೇದವಿದಾಂ ದ್ವಿಜಾಃ ॥ ೨೧ ॥
ತತ್ರ ಗಾಥಾ ಪುರಾ ಗೀತಾ ನಾರದೇನ ಮಹರ್ಷಿಣಾ ।
ವಿಷ್ಣುಪದ್ಯಾಃ ಸಮಾಲೋಕ್ಯ ಪ್ರಭಾವಂ ಪಾಪನಾಶನಂ ॥ ೨೨ ॥
ಕಿಂ ವ್ರತೈರ್ನಿಯಮೈರ್ವಾಽಪಿ ತಪೋಭಿರ್ವಿವಿಧೈರ್ಮಖೈಃ ।
ಕೃತೈರ್ವಿಷ್ಣುಪದೀತೋಯೇ ಸಂಸ್ಥಿತೇ ಧರಣೀ ತಲೇ ॥ ೨೩ ॥
ಏಕಃ ಸರ್ವೇಷು ತೀರ್ಥೇಷು ಸ್ನಾನಂ ಮರ್ತ್ಯಃ ಸಮಾಚರೇತ್ ।
ಏಕೋ ವಿಷ್ಣುಪದೀ ತೋಯೇ ಸ್ನಾತಿದ್ವಾಭ್ಯಾಂ ಸಮಂ ಫಲಂ ॥ ೨೪ ॥
ಏಕೋ ದಾನಾನಿ ಸರ್ವಾಣಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।
ಏಕೋ ವಿಷ್ಣುಪದೀ ತೋಯೇ ಸ್ನಾತಿದ್ವಾಭ್ಯಾಂ ಸಮಂ ಹಿ ತತ್ ॥ ೨೫ ॥
ಪಂಚಾಽಗ್ನಿ ಸಾಧಕೋ ಗ್ರೀಷ್ಮೇ ವರ್ಷಾಸ್ವಾಕಾಶಮಾಶ್ರಿತಃ ।
ಜಲಾಶ್ರಯಶ್ಚ ಹೇಮಂತ ಏಕಃ ಸ್ಯಾತ್ಪುರುಷಃ ಕ್ಷಿತೌ ॥ ೨೬ ॥

---

ದೇಹಾವಸಾನದಲ್ಲಿ ಜರಾಮರಣವಿಲ್ಲದ ವಿಷ್ಣುವಿನ ಅತಿ ದುರ್ಲಭವಾದ ಸ್ಥಾನವನ್ನು ಹೊಂದುವರು.

೨೧. ಪರ್ವಕಾಲದಲ್ಲಿ ಶ್ರದ್ಧೆಯಿಂದ ವೇದಜ್ಞರಾದ ಬ್ರಾಹ್ಮಣರಿಗೆ ದಾನವನ್ನಿತ್ತ ಮಾನವರ ವಿಷಯವಿನ್ನೇನು.

೨೨–೨೩. ಅಲ್ಲಿ ಹಿಂದೆ ನಾರದಮಹಾಮುನಿಯು ಹೀಗೆ ಶ್ಲೋಕಗಳನ್ನು ಹೇಳಿರುವನು. ಭೂಮಿಯಲ್ಲಿರುವ ವಿಷ್ಣುಪದೀ ಜಲದ ಪಾಪ ನಿವಾರಕವಾದ ಪ್ರಭಾವವನ್ನು ನೋಡಿದವನಿಗೆ ವ್ರತ, ನಿಯಮ, ತಪಸ್ಸು, ನಾನಾವಿಧ ಯಜ್ಞ ಇವುಗಳನ್ನು ಮಾಡುವುದರಿಂದೇನು ಪ್ರಯೋಜನವು ಲಭಿಸುವುದೋ ಅದು ಲಭಿಸುತ್ತದೆ.

೨೪. ಸಕಲ ತೀರ್ಥಗಳಲ್ಲಿ ಮಿಂದ ಮಾನವನಿಗೂ, ಈ ವಿಷ್ಣುಪದೀ ನೀರಿನಲ್ಲಿ ಮಿಂದವನಿಗೂ ಸಮಾನವಾದ ಫಲವುಂಟಾಗುವುದು.

೨೫. ಬ್ರಾಹ್ಮಣರಿಗೆ ಸಕಲ ದಾನಗಳನ್ನು ಕೊಟ್ಟವನಿಗೂ, ವಿಷ್ಣುಪದೀ ಜಲದಲ್ಲಿ ಮಿಂದವನಿಗೂ ಸಮಾನವಾದ ಫಲವುಂಟಾಗುವುದು.

೨೬–೨೭. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುವವನು, ಮಳೆಗಾಲದಲ್ಲಿ ಅನಾವರಣ ಸ್ಥಳದಲ್ಲಿ ತಪಸ್ಸನ್ನು ಮಾಡುವವನು, ಚಳಿ

ಅನ್ಯೋ ವಿಷ್ಣುಪದೀ ತೋಯೇ ಸ್ನಾತ್ವಾ ವಿಷ್ಣುಪದಂ ಸ್ಪೃಶೇತ್ ।
ತಾವುಭಾವಪಿ ನಿರ್ದಿಷ್ಟೌ ಸಮೌ ಪುರುಷಸತ್ತಮೌ ॥ ೨೭ ॥
ಏಕಾಂತರೋಪವಾಸೀಯ ಏಕಃ ಸ್ಯಾಜ್ಜೀವಿತಾಽವಧಿ ।
ಏಕೋ ವಿಷ್ಣುಪದೀ ತೋಯೇ ಸ್ನಾತಿದ್ವಾಭ್ಯಾ ಸಮಂ ಫಲಂ ॥ ೨೮ ॥
ತ್ರಿರಾತ್ರೋಪೋಷಿತಸ್ತ್ವೇಕೋ ಯಾವದ್ವರ್ಷಶತಂ ನರಃ । .
ಏಕೋ ವಿಷ್ಣುಪದೀ ತೋಯೇ ಸ್ನಾತಿ ದ್ವಾಭ್ಯಾಂ ಸಮಂ ಫಲಂ ॥ ೨೯ ॥

ಸೂತ ಉವಾಚ :—

ಏವಮುಕ್ತ್ವಾ ಮುನಿಶ್ರೇಷ್ಠೋ ನಾರದೋ ದ್ವಿಜಸತ್ತಮಾಃ ।
ವಿರರಾಮ ಮುನೀನಾಂ ಸ ಬಹೂನಾಂ ಪುರತೋಽಸಕೃತ್ ॥ ೩೦ ॥
ತಸ್ಮಾತ್ಸರ್ವ ಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಸಂಸ್ಪೃಶೇಚ್ಚ ಪದಂ ವಿಷ್ಣೋರ್ಯ ಇಚ್ಛೇಚ್ಛ್ರೇಯ ಆತ್ಮನಃ ॥ ೩೧ ॥

ಋಷಯ ಊಚುಃ :—

ಯದೇತದ್ಭವತಾ ಪ್ರೋಕ್ತಮಾತ್ಮಾಸಂ ವಿನಿವೇದಯೇತ್ ।
ವಿಷ್ಣೋಃ ಪದಸ್ಯ ಸಂಪ್ರಾಪ್ತೇ ಅಯನೇ ದಕ್ಷಿಣೋತ್ತರೇ ॥ ೩೨ ॥
ತತ್ಕೇನ ವಿಧಿನಾ ಸೂತ ಮಂತ್ರೈಶ್ಚ ವದ ಸತ್ವರಂ ।
ವಯಂ ಯೇನ ಚ ತತ್ಕುರ್ಮಃ ಸರ್ವಂ ಭಕ್ತಿಸಮನ್ವಿತಾಃ ॥ ೩೩ ॥

---

ಗಾಲದಲ್ಲಿ ನೀರಿನಲ್ಲಿ ನಿಂತು ತಪಸ್ಸನ್ನು ಮಾಡುವವನು, ವಿಷ್ಣುಪದೀ ನೀರಿನಲ್ಲಿ ಸ್ನಾನಮಾಡಿ ವಿಷ್ಣು ಪಾದವನ್ನು ಮುಟ್ಟುವವನು ಇವರು ಪುರುಷಶ್ರೇಷ್ಠರು.

೨೮. ಸಾಯುವವರೆಗೆ ಎರಡು ದಿನಗಳಿಗೊಮ್ಮೆ ಊಟಮಾಡುವವನಿಗೂ, ವಿಷ್ಣುಪದೀ ನೀರಿನಲ್ಲಿ ಸ್ನಾನಮಾಡುವವನಿಗೂ ಸಮಾನವಾದ ಫಲವುಂಟಾಗುವುದು.

೨೯. ನೂರು ವರ್ಷಗಳವರೆಗೆ ಮೂರು ರಾತ್ರಿ ಉಪವಾಸಮಾಡುವವನಿಗೂ, ವಿಷ್ಣುಪದಿಯ ನೀರಿನಲ್ಲಿ ಮಿಂದವನಿಗೂ ಸಮಾನವಾದ ಫಲವು ದೊರೆಯುವುದು.

೩೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ನಾರದ ಮುನಿವರನು ಬಹುಮಂದಿ ಮುನಿಗಳ ಮುಂದೆ ಅನೇಕ ಬಾರಿ ಹೀಗೆ ಹೇಳಿ ಸುಮ್ಮನಾದನು.

೩೧. ಆದ್ದರಿಂದ ತನಗೆ ಶ್ರೇಯಸ್ಸನ್ನು ಬಯಸುವವನು ಅಲ್ಲಿ ಸ್ನಾನಮಾಡಬೇಕು ಮತ್ತು ವಿಷ್ಣು ಪಾದವನ್ನು ಮುಟ್ಟಬೇಕು.

೩೨. ಋಷಿಗಳು ಹೇಳುತ್ತಾರೆ:—ಸೂತ! ನೀನು ದಕ್ಷಿಣೋತ್ತರಾಯಣಗಳಲ್ಲಿ ವಿಷ್ಣುಪದದಲ್ಲಿ ಆತ್ಮಾರ್ಪಣೆಮಾಡಬೇಕು ಎಂದು ಹೇಳಿರುವೆ.

೩೩. ಅದನ್ನು ಯಾವ ವಿಧಿಯಿಂದ ಮತ್ತು ಯಾವ ಮಂತ್ರಗಳಿಂದ ಮಾಡಬೇಕು? ಶೀಘ್ರವಾಗಿ ಹೇಳು. ಅದನ್ನೆಲ್ಲ ನಾವು ಭಕ್ತಿಯಿಂದ ಮಾಡುವೆವು.

ಸೂತ ಉವಾಚ :—

ದಕ್ಷಿಣೇ ಚೋತ್ತರೇ ವಾಽಪಿ ಸಂಪ್ರಾಪ್ತೇ ಚಾಽಯನದ್ವಯೇ ।
ಪೂಜಯಿತ್ವಾ ಪದಂ ವಿಷ್ಣೋರಿಮಂ ಮಂತ್ರಮುದೀರಯೇತ್ ॥ ೩೪ ॥
ಷಣ್ಮಾಸಾಭ್ಯಂತರೇ ಮೃತ್ಯುರ್ಯದ್ಯ ಕಸ್ಮಾದ್ಭವೇನ್ಮಮ ।
ತತ್ತ್ವೇ ಪದಂ ಗತಿರ್ಮೇ ಸ್ಯಾದಹಂ ತೇ ಭೃತ್ಯತಾಂ ಗತಃ ॥ ೩೫ ॥
ಏವಂ ಪ್ರೋಚ್ಯ ಹರಿಂ ಪಶ್ಚಾತ್ಪೂಜಯೇದ್ಬ್ರಾಹ್ಮಣಾಂ ಸ್ತತಃ ।
ಅಥ ತೈಃ ಸಮಮಶ್ನೀಯಾತ್ತತಃ ಪ್ರಾಪ್ನೋತಿ ಸದ್ಗತಿಂ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಷ್ಣುಪದೀತೀರ್ಥೋತ್ಪತ್ತಿರ್ವರ್ಣನಂ" ನಾಮ
ಚತುರ್ವಿಂಶೋಽಧ್ಯಾಯಃ

---

೩೪. ಸೂತನು ಹೇಳುತ್ತಾನೆ :—ದಕ್ಷಿಣೋತ್ತರಾಯಣಗಳು ಬರಲು ವಿಷ್ಣು ಪದವನ್ನು ಆರಾಧಿಸಿ ಈ ಮಂತ್ರವನ್ನು ಹೇಳಬೇಕು.

೩೫. ನನಗೆ ಆರುತಿಂಗಳೊಳಗೆ ಮರಣವು ಸಂಭವಿಸಿದರೆ ನಿನ್ನ ಪಾದವು ಗತಿಯಾಗಲಿ. ನಾನು ನಿನಗೆ ಭೃತ್ಯನಾಗಿರುವೆನು.

೩೬. ಹೀಗೆ ಹೇಳಿ ವಿಷ್ಣುವನ್ನೂ, ಬ್ರಾಹ್ಮಣರನ್ನೂ ಪೂಜಿಸಿ ಅವರೊಡನೆ ಭುಂಜಿಸಿದರೆ ಸದ್ಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಷ್ಣುಪದೀತೀರ್ಥೋತ್ಪತ್ತಿರ್ವರ್ಣನ"ವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ವಿಷ್ಣುಪದೀಗಂಗಾಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರಾಶ್ಚರ್ಯಮಭೂತ್ಪೂರ್ವಂ ಯತ್ತದ್ಬ್ರಾಹ್ಮಣಸತ್ತಮಾಃ ।
ತದಹ್ಂ ಸಂಪ್ರವಕ್ಷ್ಯಾಮಿ ಗಂಗಾಮಾಹಾತ್ಮ್ಯ ಸಂಭವಂ ॥ ೧ ॥
ಚಮತ್ಕಾರಪುರೇ ವಿಪ್ರಃ ಪುರಾಽಽಸೀಚ್ಛಂಸಿತ ವ್ರತಃ ।
ಚಂಡಶರ್ಮೇತಿ ವಿಖ್ಯಾತೋ ರೂಪೌದಾರ್ಯಗುಣಾನ್ವಿತಃ ॥ ೨ ॥
ಸ ಯದಾ ಯೌವನೋಪೇತಸ್ತದಾ ವೇಶ್ಯಾಽನುರಾಗಕೃತ್ ।
ಶ್ರೋತ್ರಿಯೋಽಪ್ಯಭವದ್ವಿಪ್ರೋ ಯೌವನೋದ್ಧಾರಪೀಡಿತಃ ॥ ೩ ॥
ಸ ಕದಾಚಿನ್ನಿಶೀಥೇಽಥ ತೃಷಾರ್ತಶ್ಚ ಸಮುತ್ಥಿತಃ ।
ಪ್ರಾರ್ಥಯಾಮಾಸ ತಾಂ ವೇಶ್ಯಾಂ ಪಾನೀಯಂ ಪಾತುಮುತ್ಸಹೇ ॥ ೪ ॥
ಅಥ ಸಾ ಸಲಿಲಭ್ರಾಂತ್ಯಾ ಕರಕಂ ಮದ್ಯಸಂಭವಂ ।
ಸಮಾದಾಯ ದದೌ ಪಾನಂ ತಸ್ಮೈ ನಿದ್ರಾಕುಲಾಯ ಚ ॥ ೫ ॥

---

### ಕನ್ನಡದ ಅನುವಾದ

#### ವಿಷ್ಣುಪದೀಗಂಗಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಅಲ್ಲಿ ಹಿಂದೆ ಗಂಗೆಯ ವಿಷಯದಲ್ಲಿ ಒಂದು ಆಶ್ಚರ್ಯವುಂಟಾಯಿತು. ಅದನ್ನು ನಾನು ನಿಮಗೆ ಹೇಳುವೆನು.

೨. ಹಿಂದೆ ಚಮತ್ಕಾರಪುರದಲ್ಲಿ ಶ್ಲಾಘ್ಯವ್ರತನೂ, ಸೌಂದರ್ಯ, ಔದಾರ್ಯ ಗುಣಗಳಿಂದ ಕೂಡಿದವನೂ ಆದ ಚಂಡಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದನು.

೩. ಯುವಕನಾದ ಅವನು ಶ್ರೋತ್ರಿಯ ಬ್ರಾಹ್ಮಣನಾಗಿದ್ದರೂ ಯೌವನ ವಶದಿಂದ ವೇಶ್ಯೆಯಲ್ಲಿ ಅನುರಾಗವುಳ್ಳವನಾದನು.

೪. ಅವನು ಒಂದಾನೊಂದು ದಿನ ಅರ್ಧರಾತ್ರಿ ವೇಳೆಯಲ್ಲಿ ಬಾಯಾರಿಕೆಗೊಂಡವನಾಗಿ ಎದ್ದು ನೀರನ್ನು ಕುಡಿಯ ಬಯಸುವೆನು ಎಂದು ಆ ವೇಶ್ಯೆಯನ್ನು ಪ್ರಾರ್ಥಿಸಿದನು.

೫. ಬಳಿಕ ಆ ವೇಶ್ಯೆಯು ನೀರಿನ ಭ್ರಾಂತಿಯಿಂದ ಹೆಂಡದ ಪಾತ್ರೆಯನ್ನು ತೆಗೆದುಕೊಂಡು ಬಂದು ನಿದ್ರೆಯಿಂದ ಮೈಮರೆತ ಅವನಿಗೆ ಕೊಟ್ಟಳು.

ಮುಖಮಧ್ಯಗತೇ ಮದ್ಯೇ ಸೋಽಪಿ ತಾಂ ಕೋಪಸಂಯುತಃ ।
ವೇಶ್ಯಾಂ ಪ್ರಭರ್ತ್ಸಯಾಮಾಸ ಧಿಗ್ಧಿಕ್ಛಬ್ದೈರ್ಮುಹುರ್ಮುಹುಃ ॥ ೬ ॥
ಕಿಮಿದಂ ಕಿಮಿದಂ ಪಾಪೇ ತ್ವಯಾ ಕರ್ಮ ವಿಗರ್ಹಿತಂ ।
ಕೃತಂ ಯನ್ಮುಖಮಧ್ಯೇ ಮೇ ಪ್ರಕ್ಷಿಪ್ತಾ ನಿಂದಿತಾ ಸುರಾ ॥ ೭ ॥
ಬ್ರಾಹ್ಮಣ್ಯಮಧ್ಯ ಮೇ ನಷ್ಟಂ ಮದ್ಯಪಾನಾದಸಂಶಯಂ ।
ಪ್ರಾಯಶ್ಚಿತ್ತಂ ಕರಿಷ್ಯಾಮಿ ತಸ್ಮಾದಾತ್ಮವಿಶುದ್ಧಯೇ ॥ ೮ ॥
ಏವಮುಕ್ತ್ವಾ ವಿನಿಷ್ಕ್ರಮ್ಯ ತದ್ಗೃಹಾದ್ದುಃಖಸಂಯುತಃ ।
ರುರೋದಾಽಥ ತದಾ ಗತ್ವಾ ಕರುಣಂ ನಿರ್ಜನೇ ವನೇ ॥ ೯ ॥
ತತಃ ಪ್ರಭಾತವೇಲಾಯಾಂ ಸ್ನಾತ್ವಾ ವಸ್ತ್ರ ಸಮನ್ವಿತಃ ।
ತ್ಯಕ್ತ್ವಾ ಗಾತ್ರಸ್ಯ ರೋಮಾಣಿ ಸಮುಸ್ತಾನಿ ದ್ವಿಜೋತ್ತಮಾಃ ॥ ೧೦ ॥
ಸಂಪ್ರಾಪ್ತೋ ವಿಪ್ರಮುಖ್ಯಾನಾಂ ಸಭಾ ಯತ್ರ ವ್ಯವಸ್ಥಿತಾ ।
ಪಠಂತಿ ಸರ್ವಶಾಸ್ತ್ರಾಣಿ ವೇದಾಂತಾನಿ ಚ ಕೃತ್ಸ್ನಶಃ ॥ ೧೧ ॥
ಅಥಾಽಸೌ ಪ್ರಣಿಪತ್ಯೋಚ್ಚೈಃ ಪ್ರೋವಾಚ ದ್ವಿಜಸತ್ತಮಾನ್ ।
ಜಲಭ್ರಾಂತ್ಯಾ ಸುರಾ ಪೀತಾ ಮಯಾ ಕುರುತ ನಿಗ್ರಹಂ ॥ ೧೨ ॥
ಅಥ ತೇ ಧರ್ಮಶಾಸ್ತ್ರಾಣಿ ಪ್ರವಿಚಾರ್ಯ ಪುನಃ ಪುನಃ ।
ತಮೂಚುರ್ಬ್ರಾಹ್ಮಣಾಸ್ಸರ್ವೇ ಪ್ರಾಯಶ್ಚಿತ್ತಕೃತೇ ಸ್ಥಿತಂ ॥ ೧೩ ॥

---

೬. ಮದ್ಯವು ಬಾಯಿಯೊಳಗೆ ಹೋಗಲು ಅವನು ಕೋಪಗೊಂಡು ಛೀ ಎಂದು ಅನೇಕ ಬಾರಿ ಆ ವೇಶ್ಯೆಯನ್ನು ಗದರಿಸಿದನು.

೭. "ಎಲೌ ಪಾಪಿಷ್ಠಳೆ! ನೀನು ಎಂತಹ ನಿಂದ್ಯವಾದ ಕೆಲಸವನ್ನು ಮಾಡಿದೆ? ನನ್ನ ಬಾಯಿಯೊಳಗೆ ನಿಂದ್ಯವಾದ ಮದ್ಯವನ್ನು ಸುರಿದೆಯಲ್ಲ.

೮-೯. ಈಗ ಮದ್ಯವನ್ನು ಕುಡಿದುದರಿಂದ ನನ್ನ ಬ್ರಾಹ್ಮಣ್ಯವು ನಿಶ್ಚಯವಾಗಿಯೂ ನಷ್ಟವಾಯಿತು. ಆದ್ದರಿಂದ ಆತ್ಮಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಮಾಡುವೆನು." ಹೀಗೆ ಹೇಳಿ ದುಃಖದಿಂದ ಅವಳ ಮನೆಯಿಂದ ಹೊರಟು ನಿರ್ಜನ ವನವನ್ನು ಸೇರಿ ದೈನ್ಯದಿಂದ ಅತ್ತನು.

೧೦-೧೧. ಬಳಿಕ ಬೆಳಿಗ್ಗೆ ಸಚೇಲಸ್ನಾನಗೈದು ಶರೀರದ ರೋಮಗಳನ್ನೆಲ್ಲ ಕತ್ತರಿಸಿಕೊಂಡು ಸಕಲ ಶಾಸ್ತ್ರಗಳನ್ನೂ, ವೇದಾಂತಗಳನ್ನೂ ಸಂಪೂರ್ಣವಾಗಿ ಪಠಿಸುತ್ತಿರುವ ಬ್ರಾಹ್ಮಣೋತ್ತಮರ ಸಭೆಗೆ ಹೋದನು.

೧೨. ಅವನು ಆ ಬ್ರಾಹ್ಮಣೋತ್ತಮರನ್ನು ವಂದಿಸಿ, "ನಾನು ನೀರೆಂದು ತಿಳಿದು ಮದ್ಯವನ್ನು ಕುಡಿದೆನು. ನನ್ನನ್ನು ನಿಗ್ರಹಿಸಿರಿ" ಎಂದನು.

೧೩. ಬಳಿಕ ಆ ಬ್ರಾಹ್ಮಣರು ಧರ್ಮಶಾಸ್ತ್ರಗಳನ್ನು ವಿಚಾರಿಸಿ ಪ್ರಾಯಶ್ಚಿತ್ತಕ್ಕಾಗಿ ಕಾದಿರುವ ಆ ಬ್ರಾಹ್ಮಣನನ್ನು ಕುರಿತು ಇಂತೆಂದರು.

ಬ್ರಾಹ್ಮಣಾ ಊಚುಃ:—

ಅಜ್ಞಾನಾಜ್ಞಾನತೋಽವಾಽಪಿ ಸುರಾಂ ಚೇದ್ಬ್ರಾಹ್ಮಣಃ ಪಿಬೇತ್ ।
ಅಗ್ನಿವರ್ಣಂ ಘೃತಂ ಪೀತ್ವಾ ತಾವನ್ಮಾತ್ರಂ ವಿಶುಧ್ಯತಿ ॥ ೧೪ ॥
ಸ ತ್ವಂ ವಾಂಛಸಿ ಚೇಚ್ಛುದ್ಧಿಮಗ್ನಿವರ್ಣಂ ಘೃತಂ ಪಿಬ ।
ಯಾವನ್ಮಾತ್ರಾ ಸುರಾ ಪೀತಾ ತಾವನ್ಮಾತ್ರಂ ವಿಶುದ್ಧಯೇ ॥ ೧೫ ॥
ಸ ತಥೇತಿ ಪ್ರತಿಜ್ಞಾಯ ಘೃತಮಾದಾಯ ತತ್ಕ್ಷಣಾತ್ ।
ಚಕ್ರೇ ವಹ್ನಿಸಮಂ ಯಾವತ್ಪಾನಾರ್ಥಂ ದ್ವಿಜಸತ್ತಮಾಃ ॥ ೧೬ ॥
ತಾವತ್ತಸ್ಯ ಪಿತಾ ಪ್ರಾಪ್ತಃ ಶ್ರುತ್ವಾ ವಾರ್ತಾಂ ಸಭಾರ್ಯಕಃ ।
ಕಿಮಿದಂ ಕಿಮಿದಂ ಪುತ್ರ ಬ್ರುವಾಣೋ ದುಃಖಸಂಯುತಃ ।
ಅಶ್ರುಪೂರ್ಣೇಕ್ಷಣೋ ದೀನೋ ಬಾಷ್ಪಗದ್ಗದಯಾ ಗಿರಾ ॥ ೧೭ ॥
ತತಸ್ಸ ಕಥಯಾಮಾಸ ಸರ್ವಂ ರಾತ್ರಿಸಮುದ್ಭವಂ ।
ವೃತ್ತಾಂತಂ ತಚ್ಚ ವಿಪ್ರಾಣಾಂ ಪ್ರಾಯಶ್ಚಿತ್ತಂ ಯಥೋಚಿತಂ ॥ ೧೮ ॥
ಅಥ ಸ ಬ್ರಾಹ್ಮಣಾನ್ಪ್ರಾಹ ಸರ್ವಾಂಸ್ತಾನ್ದ್ವಿಜಸತ್ತಮಾಃ ।
ಪ್ರಾಯಶ್ಚಿತ್ತಂ ಸುತಾಯಾಽಸ್ಮೈ ಮಮಾನ್ಯತ್ಸಂಪ್ರದೀಯತಾಂ ॥ ೧೯ ॥
ಸಂಚಿಂತ್ಯ ಧರ್ಮಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ।
ಸರ್ವಸ್ವಮಪಿ ದಾಸ್ಯಾಮಿ ಪುತ್ರಹೇತೋರಸಂಶಯಂ ॥ ೨೦ ॥

---

೧೪. ಬ್ರಾಹ್ಮಣರು ಹೇಳುತ್ತಾರೆ:—ತಿಳಿದೋ, ತಿಳಿಯದೆಯೋ ಮದ್ಯವನ್ನು ಕುಡಿದ ಬ್ರಾಹ್ಮಣನು ಅಷ್ಟೇ ಮರಳುವ ತುಪ್ಪವನ್ನು ಕುಡಿದರೆ ಶುದ್ಧನಾಗುವನು.

೧೫. ನೀನು ಶುದ್ಧಿಯನ್ನು ಬಯಸುವುದಾದರೆ ಎಷ್ಟು ಮದ್ಯವನ್ನು ಕುಡಿದಿರುವೆಯೋ ಅಷ್ಟೇ ಮರಳುವ ತುಪ್ಪವನ್ನು ಕುಡಿ.

೧೬–೧೭. ದ್ವಿಜವರ್ಯರೆ! ಅವನು ಹಾಗೆಯೇ ಆಗಲೆಂದು ಒಪ್ಪಿ ಕೂಡಲೆ ತುಪ್ಪವನ್ನು ತೆಗೆದುಕೊಂಡು ಕುಡಿಯುವುದಕ್ಕಾಗಿ ಮರಳಿಸುತ್ತಿರಲು ಈ ಸಮಾಚಾರವನ್ನು ಕೇಳಿ ಅವನ ತಂದೆಯು ಪತ್ನಿಯೊಡನೆ ಅಲ್ಲಿಗೆ ಬಂದು ಕಣ್ಣೀರನ್ನು ಸುರಿಸುತ್ತ ಬಾಷ್ಪಗದ್ಗದವಾದ ಮಾತಿನಿಂದ 'ಇದೇನು? ಇದೇನು'? ಎಂದು ದುಃಖದಿಂದ ಕೇಳಿದನು.

೧೮. ಬಳಿಕ ಆ ಪುತ್ರನು ರಾತ್ರಿಯಲ್ಲಿ ನಡೆದ ಎಲ್ಲ ಸಮಾಚಾರವನ್ನೂ, ವಿಪ್ರರು ಹೇಳಿದ ಉಚಿತಪ್ರಾಯಶ್ಚಿತ್ತವನ್ನೂ ಹೇಳಿದನು.

೧೯–೨೦. ದ್ವಿಜವರ್ಯರೆ! ಆ ತಂದೆಯು ಅಲ್ಲಿದ್ದ ಸಕಲಬ್ರಾಹ್ಮಣರನ್ನೂ ಕುರಿತು 'ನನ್ನೀಮಗನಿಗೆ ಧರ್ಮಶಾಸ್ತ್ರವನ್ನು ವಿಚಾರಿಸಿ ಬೇರೆ ಪ್ರಾಯಶ್ಚಿತ್ತವನ್ನು ಹೇಳಿರಿ. ನಾನು ನನ್ನೀಮಗನಿಗಾಗಿ ಎಲ್ಲವನ್ನೂ ಕೊಡುವೆನು' ಎಂದನು.

ತತಸ್ತೇ ಬ್ರಾಹ್ಮಣಾಸ್ಸರ್ವೇ ಭೂಯೋ ಭೂಯುಶ್ಚ ಸಾದರಂ ।
ವಿಚಿಂತ್ಯ ಧರ್ಮಶಾಸ್ತ್ರಾಣಿ ತಮೂಚುರ್ಮುನಿಸತ್ತಮಾಃ ॥ ೨೧ ॥
ನಾನ್ಯದಸ್ತಿ ಸುರಾಪಾನೇ ಪ್ರಾಯಶ್ಚಿತ್ತಂ ದ್ವಿಜನ್ಮನಾಂ ।
ಮೌಂಜೀಹೋಮಂ ವಿನಾ ವಿಪ್ರ ಯದ್ಯುಕ್ತಂ ತತ್ಸಮಾಚರ ॥ ೨೨ ॥
ತತಸ್ಸ ಸ್ವಸುತಂ ಪ್ರಾಹ ನೈವಂ ತ್ವಂ ಕರ್ತುಮರ್ಹಸಿ ।
ಯಚ್ಛ ದಾನಾನಿ ವಿಪ್ರೇಭ್ಯಸ್ತೀರ್ಥಯಾತ್ರಾಂ ಸಮಾಚರ ॥ ೨೩ ॥
ತತಶ್ಶುದ್ಧಿಂ ಸಮಾಪ್ನೋಷಿ ಕ್ರಮಾನ್ನಿಯಮಸಂಯುತಃ ।
ವ್ರತೈಶ್ಚ ವಿವಿಧೈಶ್ಚೀರ್ಣೈಸ್ಸತ್ಯಮೇತದ್ಬ್ರವೀಮ್ಯಹಂ ॥ ೨೪ ॥
ಸ ಬ್ರಾಹ್ಮಣಸಮಾದಿಷ್ಟಂ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ೨೫ ॥

ಪುತ್ರ ಉವಾಚ :—

ಏತನ್ಮಮ ಮಹಾಭಾಗಾ ಯದ್ಬ್ರುವಂತಿ ವ್ರತಾದಿಕಂ ।
ತಸ್ಮಾತ್ಕಾರ್ಯೋ ಮಯಾ ತಾತ ಮೌಂಜೀಹೋಮೋ ನ ಸಂಶಯಃ ॥
ಯನ್ಮಯಾ ತು ಕೃತಂ ಬಾಲ್ಯೇ ತತ್ಸರ್ವಂ ಕ್ಷಂತುಮರ್ಹಸಿ ॥ ೨೭ ॥

ಸೂತ ಉವಾಚ:—

ತಸ್ಯ ತಂ ನಿಶ್ಚಯಂ ಜ್ಞಾತ್ವಾ ಸ ಪಿತಾ ಸುತವತ್ಸಲಃ ।
ಸರ್ವಸ್ವಂ ಪ್ರದದೌ ರುಷ್ಟೋ ಮರಣೇ ಕೃತನಿಶ್ಚಯಃ ॥ ೨೮ ॥

---

೨೧. ಮುನಿವರ್ಯರೆ! ತರುವಾಯ ಆ ಬ್ರಾಹ್ಮಣರೆಲ್ಲ ಆದರದಿಂದ ಪುನಃ ಧರ್ಮಶಾಸ್ತ್ರಗಳನ್ನು ಆಲೋಚಿಸಿ ಅವನನ್ನು ಕುರಿತು ಇಂತೆಂದರು.

೨೨. 'ಮದ್ಯಪಾನಮಾಡಿದ ಬ್ರಾಹ್ಮಣರಿಗೆ ಮೌಂಜೀಹೋಮವನ್ನು ಬಿಟ್ಟು ಬೇರೆ ಪ್ರಾಯಶ್ಚಿತ್ತವಿಲ್ಲ. ಯಾವುದು ಉಚಿತವೋ ಅದನ್ನಾಚರಿಸು.'

೨೩-೨೫. ಅನಂತರ ಅವನು ಮಗನನ್ನು ಕುರಿತು, 'ನೀನು ಹೀಗೆ ಮಾಡಬೇಡ. ಬ್ರಾಹ್ಮಣರಿಗೆ ದಾನಗಳನ್ನು ಕೊಡು. ತೀರ್ಥಯಾತ್ರೆಯನ್ನುಮಾಡು. ಹೀಗೆ ವಿನಯದಿಂದ ಮಾಡಿದ ಅನೇಕ ವ್ರತಗಳಿಂದ ನೀನು ಕ್ರಮವಾಗಿ ಶುದ್ಧನಾಗುವೆ. ನಾನು ಹೇಳಿರುವುದು ನಿಜ. ಬ್ರಾಹ್ಮಣರು ಹೇಳಿದ ಪ್ರಾಯಶ್ಚಿತ್ತವನ್ನು ಶುದ್ಧಿಗಾಗಿ ಮಾಡಬೇಡ' ಎಂದನು.

೨೬. ಪುತ್ರನು ಹೇಳುತ್ತಾನೆ:—ಅಪ್ಪ! ಈ ಮಹಾತ್ಮರು ಹೇಳುವ ವ್ರತಾದಿಗಳನ್ನೂ ಮೌಂಜೀಹೋಮವನ್ನೂ ನಾನು ನಿಶ್ಚಯವಾಗಿಯೂ ಮಾಡುವೆನು.

೨೭. ನಾನು ಬಾಲ್ಯದಲ್ಲಿ ಮಾಡಿದುದನ್ನೆಲ್ಲ ಕ್ಷಮಿಸು.

೨೮. ಸೂತನು ಹೇಳುತ್ತಾನೆ:—ಮಗನಲ್ಲಿ ಪ್ರೀತಿಯುಳ್ಳ ಆ ತಂದೆಯು ಪುತ್ರನ ಆ ನಿಶ್ಚಯವನ್ನರಿತು ರೋಷಹುಟ್ಟಿ ಸಾಯಲು ನಿಶ್ಚಯಿಸಿ ಎಲ್ಲವನ್ನೂ ದಾನಮಾಡಿದನು.

ಸಾಪಿ ತಸ್ಯ ಸತೀ ಭಾರ್ಯಾ ಕೃತ್ವಾ ಮೃತ್ಯುವಿನಿಶ್ಚಯಂ ।
ತಮುವಾಚ ಸುತಂ ದೃಷ್ಟ್ವಾ ಸರ್ವಂ ದತ್ವಾ ಗೃಹಾದಿಕಂ ॥ ೨೯ ॥
ಆವಾಭ್ಯಾಂ ಸಂಪ್ರವಿಷ್ಟಾಭ್ಯಾಂ ವಹ್ನೌ ಪುತ್ರ ತತಸ್ತದಾ ।
ಮೌಂಜೀಹೋಮಸ್ತ್ವಯಾ ಕಾರ್ಯೋ ಮಾಂ ತಾತು ಯದಿ ಮನ್ಯಸೇ ॥
ತತಸ್ತೌ ದಂಪತೀ ಹೃಷ್ಟೌ ಯಾವದ್ವಹ್ನಿಸಮೀಪಗೌ ।
ಸಂಜಾತೌ ಮರಣಾರ್ಥಾಯ ಸ ಚ ತಾಭ್ಯಾಂ ಸಮುದ್ಭವಃ ॥ ೩೧ ॥
ತಾವತ್ಪ್ರಾಪ್ತೋ ಮುನಿರ್ನಾಮ ಶಾಂಡಿಲ್ಯೋ ವೇದಪಾರಗಃ ।
ತೀರ್ಥಯಾತ್ರಾ ಪ್ರಸಂಗೇನ ತತ್ರ ದೇಶೇ ದ್ವಿಜೋತ್ತಮಃ ॥ ೩೨ ॥
ಸ ವೃತ್ತಾಂತಂ ಸಮಾಕರ್ಣ್ಯ ಕೋಪಸಂರಕ್ತಲೋಚನಃ ।
ಅಬ್ರವೀದ್ಬ್ರಾಹ್ಮಣಾನ್ಸರ್ವಾನ್ಭರ್ತ್ಸಯನ್ಸ ಮುಹುರ್ಮುಹುಃ ॥ ೩೩ ॥
ಅಹೋ ಮೂಢತಮಾ ಯೂಯಂ ಯದೇತದ್ಬ್ರಾಹ್ಮಣತ್ರಯಂ ।
ವೃಥಾ ಮೃತ್ಯುಮವಾಪ್ನೋತಿ ನಿಗ್ರಹೇ ಸುಗಮೇ ಸತಿ ॥ ೩೪ ॥
ಅತ್ರ ಕಾತ್ಯಾಯನೇನೋಕ್ತಂ ಯದ್ವಚಸ್ಸುಮಹಾತ್ಮನಾ ।
ತಚ್ಛೃಣ್ವಂತು ದ್ವಿಜಾಸ್ಸರ್ವೇ ಪ್ರಾಯಶ್ಚಿತ್ತೇ ತಥಾಽಪ್ಯಯಂ ॥ ೩೫ ॥

---

೨೯. ಪತಿವ್ರತೆಯಾದ ಅವನ ಪತ್ನಿಯೂ ಸಾಯಲು ನಿಶ್ಚಯಿಸಿ ಮನೆ ಮೊದಲಾದುವುಗಳನ್ನು ದಾನಮಾಡಿ ಮಗನನ್ನು ಕುರಿತು ಹೀಗೆಂದಳು.

೩೦. "ಮಗು! ನಾವಿಬ್ಬರೂ ಅಗ್ನಿಯನ್ನು ಪ್ರವೇಶಮಾಡಿದಮೇಲೆ ನೀನು ಮೌಂಜೀಹೋಮವನ್ನು ಮಾಡು."

೩೧. ಅನಂತರ ಆ ದಂಪತಿಗಳೂ, ಅವರ ಪುತ್ರನೂ ಸಾಯುವುದಕ್ಕಾಗಿ ನಿಶ್ಚಯಿಸಿ ಅಗ್ನಿಯ ಹತ್ತಿರ ಹೋದರು.

೩೨. ಅಷ್ಟರಲ್ಲಿ ವೇದಪಾರಂಗತನಾದ ಶಾಂಡಿಲ್ಯನೆಂಬ ಮುನಿಯು ತೀರ್ಥ ಯಾತ್ರಾ ನಿಮಿತ್ತದಿಂದ ಆ ಸ್ಥಳಕ್ಕೆ ಬಂದನು.

೩೩. ಅವನು ಆ ವೃತ್ತಾಂತವನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣು ಗಳುಳ್ಳವನಾಗಿ ಬ್ರಾಹ್ಮಣರನ್ನೆಲ್ಲ ಬಾರಿಬಾರಿಗೂ ಗದರಿಸುತ್ತ ಹೀಗೆಂದನು.

೩೪. "ನೀವು ಅತ್ಯಂತ ಮೂಢರಾಗಿರುವಿರಿ. ಸುಲಭವಾದ ಪ್ರಾಯಶ್ಚಿತ್ತವಿರಲು ಈ ಮೂವರು ಬ್ರಾಹ್ಮಣರು ವ್ಯರ್ಥವಾಗಿ ಸಾಯುವಂತೆ ಮಾಡಿದ್ದೀರಿ.

೩೫. ಬ್ರಾಹ್ಮಣರೆ! ಪ್ರಾಯಶ್ಚಿತ್ತಾರ್ಹನಾದ ಈ ಬ್ರಾಹ್ಮಣ ಕುಮಾರನೂ, ನೀವೂ ಮಹಾತ್ಮನಾದ ಕಾತ್ಯಾಯನಮುನಿಯು ಈ ವಿಷಯದಲ್ಲಿ ಹೇಳಿರುವ ಮಾತನ್ನು ಕೇಳಿರಿ.

ಚಾಂದ್ರಾಯಣಾನಿ ಕೃಚ್ಛ್ರಾಣಿ ತಥಾ ಸಾಂತಪನಾನಿ ಚ ।
ಪ್ರಾಯಶ್ಚಿತ್ತಾನಿ ದೀಯಂತೇ ಯತ್ರ ಗಂಗಾ ನ ವಿದ್ಯತೇ ॥ ೩೬ ॥
ಅತ್ರ ವಿಷ್ಣುಪದೀಗಂಗಾ ತತ್ಕ್ಷೇತ್ರೇ ತು ದ್ವಿಜೋತ್ತಮಾಃ ।
ತಸ್ಯಾಂ ಸ್ನಾನಂ ಕರೋತ್ವೇಷ ತತಶ್ಶುದ್ಧಿಮವಾಪ್ಸ್ಯತಿ ॥ ೩೭ ॥
ಮೌಂಜೀಹೋಮಃ ಪ್ರಮಾಣಂ ಸ್ಯಾನ್ಮುನಿವಾಕ್ಯೇನ ಚೇದ್ಭವೇತ್ ।
ತದೇತದಪಿ ವಾಕ್ಯಂ ಹಿ ಕಾತ್ಯಾಯನಮುನೇಃ ಸ್ಫುಟಂ ॥ ೩೮ ॥
ತತಸ್ತೇ ಬ್ರಾಹ್ಮಣಾಸ್ಸರ್ವೇ ಹರ್ಷೇಣ ಮಹತಾನ್ವಿತಾಃ ।
ಸಾಧುಸಾಧ್ವಿತಿ ತಂ ಪ್ರೋಚ್ಯ ಪ್ರೋಚುಸ್ಸತ್ಯಮಿದಂ ಮುನೇ ॥ ೩೯ ॥
ತತಃ ಪ್ರಬೋಧ್ಯ ತಂ ವಿಪ್ರಂ ನಿನ್ಯುಸ್ತತ್ರ ದ್ವಿಜೋತ್ತಮಾಃ ।
ಯತ್ರ ವಿಷ್ಣುಪದೀ ಗಂಗಾ ಸ್ವಯಮೇವ ವ್ಯವಸ್ಥಿತಾ ॥ ೪೦ ॥
ತತ್ರ ಸ ಬ್ರಾಹ್ಮಣೋ ಯಾವದ್ಗಂಗಾತೋಯಸಮುದ್ಭವಂ ।
ಗಂಡೂಷಂ ಕುರುತೇ ವಕ್ತ್ರೇ ತಾವಚ್ಛುದ್ಧೋ ಬಭೂವಸಃ ।
ಉದರಾದಖಿಲಂ ತೋಯಂ ನಿಷ್ಕ್ರಾಂತಂ ದ್ವಿಜಸತ್ತಮಾಃ ॥ ೪೧ ॥
ತತೋಽವಗಾಹತೇ ಯಾವತ್ತಸ್ಯಾಸ್ತೋಯಂ ಸುಶೋಭನಂ ।
ತಾವದಾಕಾಶಸಂಭೂತಾ ಗಂಭೀರೋವಾಚ ಭಾರತೀ ॥ ೪೨ ॥

---

೩೬. ಗಂಗೆಯಿಲ್ಲದ ಸ್ಥಳದಲ್ಲಿ ಚಾಂದ್ರಾಯಣ, ಕೃಚ್ಛ್ರ, ಸಾಂತಪನ ಮೊದಲಾದ ಪ್ರಾಯಶ್ಚಿತ್ತಗಳನ್ನು ವಿಧಿಸುತ್ತಾರೆ.

೩೭. ಈ ಬ್ರಾಹ್ಮಣನು ಈ ಕ್ಷೇತ್ರದಲ್ಲಿರುವ ವಿಷ್ಣುಪದೀಗಂಗೆಯಲ್ಲಿ ಸ್ನಾನಮಾಡಲಿ. ಅದರಿಂದ ಶುದ್ಧನಾಗುವನು.

೩೮. ಮೌಂಜೀಹೋಮದ ವಿಷಯದಲ್ಲಿ ಮುನಿವಾಕ್ಯವು ಪ್ರಮಾಣವಾದರೆ ಕಾತ್ಯಾಯನಮುನಿಯ ವಾಕ್ಯವೂ ಪ್ರಮಾಣವಾಗಿರುವುದು.''

೩೯. ಬಳಿಕ ಆ ಸಮಸ್ತ ಬ್ರಾಹ್ಮಣರೂ ಅತ್ಯಂತ ಸಂತೋಷವುಳ್ಳವರಾಗಿ ಒಳ್ಳೆಯದು ಒಳ್ಳೆಯದು ಎಂದು ಹೇಳಿ ಮುನಿಯೆ! ಇದು ಸತ್ಯವೆಂದರು.

೪೦. ತರುವಾಯ ಆ ಬ್ರಾಹ್ಮಣರು ಆ ಕುಮಾರನನ್ನು ಎಚ್ಚರಿಸಿ ವಿಷ್ಣುಪದಿಯಿರುವ ಸ್ಥಳಕ್ಕೆ ಕರೆದುಕೊಂಡು ಹೋದರು.

೪೧. ಅಲ್ಲಿ ಆ ಬ್ರಾಹ್ಮಣನು ಗಂಗಾಜಲದಿಂದ ಗಂಡೂಷಮಾಡಲು ಶುದ್ಧನಾದನು. ಅವನ ಹೊಟ್ಟೆಯಿಂದ ನೀರೆಲ್ಲ ಹೊರಬಂದಿತು.

೪೨. ತರುವಾಯ ಅವನು ಆ ಗಂಗೆಯ ನೀರನ್ನು ಪ್ರವೇಶಿಸಲು ಆಕಾಶವಾಣಿಯು ಗಂಭೀರವಾಗಿ ಹೀಗೆ ಉಂಟಾಯಿತು.

ಶುದ್ಧೋಽಯಂ ಬ್ರಾಹ್ಮಣಸ್ಸಾಕ್ಷಾದ್ವಿಷ್ಣುಪದ್ಯಾಸ್ಸಮಾಗಮಾತ್ ।
ಸ್ನಾನಾದಾಚಮನಾದೇವ ತಸ್ಮಾದ್ಯಾತು ನಿಜಂ ಗೃಹಂ ॥ ೪೩ ॥
ತತಸ್ತೇ ಬ್ರಾಹ್ಮಣಾಸ್ಸರ್ವೇ ಚಂಡಶರ್ಮಾದಯಶ್ಚ ಯೇ ।
ದಿಷ್ಟ್ಯಾ ದಿಷ್ಟ್ಯೇತಿ ಜಲ್ಪಂತಃ ಸ್ವಾನಿ ಹರ್ಮ್ಯಾಣಿ ಭೇಜಿರೇ ॥ ೪೪ ॥

ಸೂತ ಉವಾಚ :—

ಏವಂ ಪ್ರಭಾವಾ ಸಾ ವಿಪ್ರಾ ಗಂಗಾವಿಷ್ಣುಪದೀ ಸ್ಥಿತಾ ।
ತಸ್ಯ ಕ್ಷೇತ್ರಸ್ಯ ಸೀಮಾಂತೇ ಪಶ್ಚಿಮೇ ಪಾಪನಾಶಿನೀ ॥ ೪೫ ॥
ಏತದ್ವಸ್ಸರ್ವಮಾಖ್ಯಾತಂ ವಿಷ್ಣುಪದ್ಯಾಸ್ಸಮುದ್ಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಸ್ಸರ್ವಪಾತಕನಾಶನಂ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಷ್ಣುಪದೀಗಂಗಾಮಾಹಾತ್ಮ್ಯವರ್ಣನಂ"
ನಾಮ ಪಂಚವಿಂಶೋಽಧ್ಯಾಯಃ

---

೪೩. ಈ ಬ್ರಾಹ್ಮಣನು ಗಂಗೆಯ ಸಮಾಗಮದಿಂದಲೂ, ಸ್ನಾನಾಚಮನಗಳಿಂದಲೂ ಶುದ್ಧನಾಗಿರುವನು. ಆದ್ದರಿಂದ ತನ್ನ ಮನೆಗೆ ತಾನು ಹೋಗಲಿ.

೪೪. ಬಳಿಕ ಆ ಎಲ್ಲಾ ಬ್ರಾಹ್ಮಣರೂ, ಚಂಡಶರ್ಮಮೊದಲಾದವರೂ ಬಹಳ ಸಂತೋಷವೆಂದು ಹೇಳುತ್ತ ತಮ್ಮ ಮನೆಗಳಿಗೆ ತಾನು ತೆರಳಿದರು.

೪೫. ಸೂತನು ಹೇಳುತ್ತಾನೆ:—ವಿಪ್ರರೆ! ಆ ಕ್ಷೇತ್ರದ ಪಶ್ಚಿಮ ದಿಗಂತದಲ್ಲಿ ಪಾಪವನ್ನು ಪರಿಹರಿಸುವ ಇಂತಹ ಪ್ರಭಾವವುಳ್ಳ ವಿಷ್ಣುಪದೀಗಂಗೆಯಿರುವುದು.

೪೬. ಬ್ರಾಹ್ಮಣವರ್ಯರೆ! ನಿಮಗೆ ಪಾಪಪರಿಹಾರಕವಾದ ವಿಷ್ಣುಪದೀ ಗಂಗೆಯ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಷ್ಣುಪದೀಗಂಗಾಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶೋಽಧ್ಯಾಯಃ

## ಗೋಕರ್ಣತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಯತ್ಪೂರ್ವಾಪರಸೀಮಾಂತಂ ತಸ್ಮಯಾ ಸಂಪ್ರಕೀರ್ತಿತಂ ।
ದಕ್ಷಿಣೋತ್ತರಸಂಭೂತಂ ತದ್ವೋ ವಕ್ಷ್ಯಾಮಿ ಸಾಂಪ್ರತಂ ॥ ೧ ॥
ಅಸ್ತಿ ಭೂಮಿತಲೇ ಖ್ಯಾತಾ ಮಥುರಾಖ್ಯಾ ಮಹಾಪುರೀ ।
ನಾನಾವಿಪ್ರಸಮಾಕೀರ್ಣಾ ಯಮುನಾತಟಸಂಶ್ರಯಾ ॥ ೨ ॥
ತಸ್ಯಾಮಾಸೀದ್ದ್ವಿಜಶ್ರೇಷ್ಠೋ ಗೋಕರ್ಣ ಇತಿ ವಿಶ್ರುತಃ ।
ವೇದಾಧ್ಯಯನಸಂಪನ್ನಸ್ಸರ್ವಶಾಸ್ತ್ರವಿಚಕ್ಷಣಃ ॥ ೩ ॥
ಅಥಾಪರೋಽಸ್ತಿ ತನ್ನಾಮಾ ತತ್ರ ವಿಪ್ರೋ ವಯೋಽನ್ವಿತಃ ।
ಸೋಽಪಿ ಚ ಬ್ರಾಹ್ಮಣಶ್ರೇಷ್ಠಸ್ಸರ್ವವಿದ್ಯಾಸು ಪಾರಗಃ ॥ ೪ ॥
ಕಸ್ಯಚಿತ್ತ್ವಥ ಕಾಲಸ್ಯ ಯಮಃ ಪ್ರಾಹ ಸ್ವಕಿಂಕರಂ ।
ಊರ್ಧ್ವಕೇಶಂ ಸುರಕ್ತಾಕ್ಷಂ ಕೃಷ್ಣದಂತಂ ಭಯಾನಕಂ ॥ ೫ ॥
ಅದ್ಯ ಗಚ್ಛ ದ್ರುತಂ ದೂತ ಮಥುರಾಖ್ಯಾಂ ಮಹಾಪುರೀಂ ।
ಆನಯಸ್ವ ದ್ವಿಜಶ್ರೇಷ್ಠಂ ತಸ್ಯಾಂ ಗೋಕರ್ಣಸಂಜ್ಞಕಂ ॥ ೬ ॥

---

## ಕನ್ನಡದ ಅನುವಾದ

### ಗೋಕರ್ಣತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಪೂರ್ವಪಶ್ಚಿಮ ಸೀಮೆಯ ಕಡೆಯವರೆಗೂ ಇರುವ ತೀರ್ಥಕ್ಷೇತ್ರಗಳೆಲ್ಲವನ್ನೂ ನಿಮಗೆ ಹೇಳಿದ್ದೇನೆ. ಈಗ ದಕ್ಷಿಣೋತ್ತರ ಸೀಮಾಂತಗಳಲ್ಲಿರುವ ತೀರ್ಥಗಳನ್ನು ಹೇಳುವೆನು.

೨. ಈ ಭೂತಲದಲ್ಲಿ ಯಮುನಾನದಿಯ ದಡದಲ್ಲಿ ಅನೇಕ ಬ್ರಾಹ್ಮಣರಿಂದ ತುಂಬಿರುವ ಮಥುರೆಯೆಂಬ ದೊಡ್ಡ ಪಟ್ಟಣವಿರುವುದು.

೩. ಅಲ್ಲಿ ವೇದಾಧ್ಯಯನ ಸಂಪನ್ನನೂ, ಸಮಸ್ತ ಶಾಸ್ತ್ರಕುಶಲನೂ ಆದ ಗೋಕರ್ಣನೆಂಬ ಓರ್ವಬ್ರಾಹ್ಮಣನಿದ್ದನು.

೪. ಅಲ್ಲಿಯೇ ಅದೇ ಹೆಸರಿನ ವೃದ್ಧನಾದ ಮತ್ತೊಬ್ಬ ಬ್ರಾಹ್ಮಣನೂ ಇದ್ದನು. ಅವನೂ ಸಕಲವಿದ್ಯಾಪಾರಂಗತನಾದ ಬ್ರಾಹ್ಮಣಶ್ರೇಷ್ಠನೇ ಆಗಿದ್ದನು.

೫. ಒಂದಾನೊಂದುದಿನ ಯಮನು ಊರ್ಧ್ವಕೇಶನೂ, ಕೆಂಗಣ್ಣುಳ್ಳವನೂ, ಕೃಷ್ಣದಂತನೂ, ಭಯಂಕರನೂ ಆದ ತನ್ನ ಸೇವಕನನ್ನು ಕುರಿತು ಹೀಗೆಂದನು.

೬. "ದೂತ! ಬೇಗನೆ ಮಥುರಾಪಟ್ಟಣಕ್ಕೆ ಹೋಗಿ ಅಲ್ಲಿರುವ ಗೋಕರ್ಣನೆಂಬ ಬ್ರಾಹ್ಮಣನನ್ನು ಕರೆದುಕೊಂಡುಬಾ.

ತಸ್ಯಾಯುಷಃ ಕ್ಷಯೋ ಜಾತೋ ಮಧ್ಯಾಹ್ನೇಽದ್ಯತನೇ ದಿನೇ ।
ತ್ಯಾಜ್ಯೋಽನ್ಯೋಽಸ್ತಿ ಚ ತತ್ರೈವ ಚಿರಾಯುಸ್ತಾದೃಶೋ ದ್ವಿಜಃ ॥ ೭ ॥

ಸೂತ ಉವಾಚ :—

ಅಥ ದೂತೋ ದ್ರುತಂ ಗತ್ವಾ ತಾಂ ಪುರೀಂ ಯಮಶಾಸನಾತ್ ।
ವಿಭ್ರಮಾದಾನಯಾಮಾಸ ಗೋಕರ್ಣಂ ಚ ಚಿರಾಯುಷಂ ॥ ೮ ॥
ತತಃ ಕೋಪಪರೀತಾತ್ಮಾ ಯಮಃ ಪ್ರೋವಾಚ ಕಿಂಕರಂ ।
ದೀರ್ಘಾಯುರೇಷ ಆನೀತೋ ಧಿಕ್ಪಾಪ ಕಿಮಿದಂ ಕೃತಂ ॥ ೯ ॥
ತಸ್ಮಾತ್ಪ್ರಾಪಯ ತತ್ರೈವ ಯಾವದಸ್ಯ ಚ ಬಂಧುಭಿಃ ।
ನೋ ಗಾತ್ರಂ ದಹ್ಯತೇ ಶೋಕಾತ್ಸುಸಮಿದ್ಧೇನ ವಹ್ನಿನಾ ॥ ೧೦ ॥

ಬ್ರಾಹ್ಮಣ ಉವಾಚ :—

ನಾಹಂ ತತ್ರ ಗಮಿಷ್ಯಾಮಿ ದಿಷ್ಟ್ಯಾ ಪ್ರಾಪ್ತೋಽಸ್ಮಿ ತೇಂತಿಕಂ ।
ವಾಂಛಮಾನಸ್ಸದಾ ಮೃತ್ಯುಂ ದಾರಿದ್ರ್ಯೇಣ ಕದರ್ಥಿತಃ ॥ ೧೧ ॥

ಯಮ ಉವಾಚ :—

ನಿಮಿಷೇಣಾಪಿ ನೋ ಮರ್ತ್ಯಮಾನಯಾಮಿ ಮಹೀತಲಾತ್ ।
ಆಯುಶ್ಶೇಷೇಣ ವಿಪ್ರೇಂದ್ರ ಪೂರ್ಣಾನಥ ತ್ಯಜಾಮಿ ಸ ॥ ೧೨ ॥

---

೭. ಈದಿನ ಮಧ್ಯಾಹ್ನಕ್ಕೆ ಅವನ ಆಯುಸ್ಸು ಕ್ಷಯಿಸುವುದು. ಅಲ್ಲಿಯೇ ಚಿರಂಜೀವಿಯಾದ ಮತ್ತೊಬ್ಬ ಅಂತಹ ಬ್ರಾಹ್ಮಣನಿರುವನು. ಅವನನ್ನು ತ್ಯಜಿಸು."

೮. ಸೂತನು ಹೇಳುತ್ತಾನೆ:—ಬಳಿಕ ದೂತನು ಯಮನ ಅಪ್ಪಣೆಯಂತೆ ಆ ಪಟ್ಟಣಕ್ಕೆ ಹೋಗಿ ಬುದ್ಧಿಭ್ರಮೆಯಿಂದ ಚಿರಂಜೀವಿಯಾದ ಗೋಕರ್ಣನನ್ನು ಕರೆತಂದನು.

೯. ತರುವಾಯ ಯಮನು ಕುಪಿತನಾಗಿ ಕಿಂಕರನನ್ನು ಕುರಿತು ಇಂತೆಂದನು. 'ಎಲಾ ಪಾಪಿ! ನೀನು ಈ ದೀರ್ಘಾಯುವನ್ನು ಏಕೆ ಕರೆತಂದೆ?

೧೦. ಇವನ ಬಂಧುಗಳು ಶೋಕದಿಂದ ಜ್ವಲಿಸುವ ಅಗ್ನಿಯಲ್ಲಿ ಇವನ ಶರೀರವನ್ನು ಸುಡದಿರುವಷ್ಟರಲ್ಲಿ ಇವನನ್ನು ಪುನಃ ಅಲ್ಲಿಗೆ ಕರೆದುಕೊಂಡು ಹೋಗಿಬಿಡು."

೧೧. ಬ್ರಾಹ್ಮಣನು ಹೇಳುತ್ತಾನೆ:—ಎಲೈ ಯಮಧರ್ಮರಾಜನೇ! ಬಡತನದಿಂದ ಪೀಡಿತನಾಗಿ ಯಾವಾಗಲೂ ಮೃತ್ಯುವನ್ನೇ ಅಪೇಕ್ಷಿಸುತ್ತಿದ್ದ ನಾನು ಅದೃಷ್ಟವಶದಿಂದ ನಿನ್ನ ಬಳಿಗೆ ಬಂದಿದ್ದೇನೆ. ನಾನು ಅಲ್ಲಿಗೆ ಹೋಗುವುದಿಲ್ಲ.

೧೨. ಯಮನು ಹೇಳುತ್ತಾನೆ:—"ಬ್ರಾಹ್ಮಣ! ನಾನು ಮನುಷ್ಯನಿಗೆ ಒಂದು ನಿಮಿಷ ಆಯುಸ್ಸಿದ್ದರೂ ಅವನನ್ನು ಭೂಮಿಯಿಂದ ಕರೆತರುವುದಿಲ್ಲ. ಆಯುಸ್ಸು ಪೂರ್ಣವಾಗಿದ್ದರೆ ಅವನನ್ನು ಬಿಡುವುದಿಲ್ಲ.

ತತ ಏವ ಹಿ ಮೇ ನಾಮ ಧರ್ಮರಾಜ ಇತ ಸ್ಮೃತಂ ।
ಸಮತ್ವಾತ್ಸರ್ವಜಂತೂನಾಂ ಪಕ್ಷಪಾತವಿವರ್ಜನಾತ್ ॥ ೧೩ ॥
ತಸ್ಮಾದ್ಗಚ್ಛ ಗೃಹಂ ವಿಪ್ರ ಯಾವದ್ಗಾತ್ರಂ ನ ದಹ್ಯತೇ ।
ಬಂಧುಭಿಸ್ತತ್ರ ಶೋಕಾರ್ತೈರ್ನಾಽಧುನಾ ತತ್ರ ತೇ ಸ್ಥಿತಿಃ ॥ ೧೪ ॥
ಪ್ರಾರ್ಥಯಸ್ವ ಮನೋಽಭೀಷ್ಟಂ ವರಂ ಬ್ರಾಹ್ಮಣಸತ್ತಮ ।
ನ ವೃಥಾ ದರ್ಶನಂ ಮೇ ಸ್ಯಾತ್ಕಥಂಚಿದಪಿ ದೇಹಿನಾಂ ॥ ೧೫ ॥

ಬ್ರಾಹ್ಮಣ ಉವಾಚ :—

ಅವಶ್ಯಂ ಯದಿ ಗಂತವ್ಯಂ ಮಯಾ ದೇವ ಗೃಹಂ ಪುನಃ ।
ತನ್ಮಮಾಚಕ್ಷ್ವ ಪೃಚ್ಛಾಮಿ ವರಶ್ಚೈಷ ಭವೇನ್ಮಮ ॥ ೧೬ ॥
ಏತೇ ಯೇ ನರಕಾ ರೌದ್ರಾಃ ಸೇವಿತಾಃ ಪಾಪಕರ್ಮಭಿಃ ।
ದೃಶ್ಯಂತೇ ವದ ಕಃ ಕೇನ ಕರ್ಮಣಾ ಸೇವ್ಯತೇ ಜನೈಃ ॥ ೧೭ ॥

ಯಮ ಉವಾಚ :—

ಅಸಂಖ್ಯಾ ನರಕಾ ವಿಪ್ರ ಯಥಾ ಪ್ರಾಣಿಗಣಾಃ ಕ್ಷಿತೌ ।
ಕೃತ್ಸ್ನಶಃ ಕಥಿತುಂ ಶಕ್ಯಾ ನೈವ ವರ್ಷಶತೈರಪಿ ॥ ೧೮ ॥
ಕೀರ್ತಯಿಷ್ಯಾಮಿ ತೇಷಾಂ ತೇ ಪ್ರಾಧಾನ್ಯೇನ ದ್ವಿಜೋತ್ತಮ ।
ಏಕವಿಂಶತಿ ಸಂಖ್ಯಾ ಯೇ ಪಾಪಿಲೋಕ ಕೃತೇ ಕೃತಾಃ ॥ ೧೯ ॥

---

೧೩. ನಾನು ಸಕಲ ಜಂತುಗಳಲ್ಲಿ ಸಮನಾಗಿರುವುದರಿಂದಲೂ, ಪಕ್ಷಪಾತವಿಲ್ಲದವನಾದುದರಿಂದಲೂ ಧರ್ಮರಾಜನೆಂದು ಹೆಸರನ್ನು ಪಡೆದಿರುವೆನು.

೧೪. ವಿಪ್ರ! ಆದ್ದರಿಂದ ನೀನು ಇಲ್ಲದಿರುವ ಕಾರಣದಿಂದ ದುಃಖಗೊಂಡ ಬಂಧುಗಳು ನಿನ್ನ ಶರೀರವನ್ನು ಸುಡುವಷ್ಟರಲ್ಲಿ ಮನೆಗೆ ಹೋಗು.

೧೫. ಬ್ರಾಹ್ಮಣನೆ! ನಿನಗಿಷ್ಟವಾದ ವರವನ್ನು ಕೇಳಿಕೊ. ನಾನು ಪ್ರಾಣಿಗಳಿಗೆ ಕೊಡುವ ದರ್ಶನವು ವ್ಯರ್ಥವಾಗಲಾರದು."

೧೬–೧೭. ಬ್ರಾಹ್ಮಣನು ಹೇಳುತ್ತಾನೆ:—ಸ್ವಾಮಿ! ನಾನು ಅವಶ್ಯವಾಗಿ ಮನೆಗೆ ಹೋಗಬೇಕಾದರೆ ನಾನು ಕೇಳುವ ಪ್ರಶ್ನೆಗೆ ಉತ್ತರವನ್ನು ಕೊಡು. ಇದೇ ನನ್ನ ವರವು. ಪಾಪಿಗಳು ಈ ಭಯಂಕರ ನರಕವನ್ನು ಸೇವಿಸುವುದನ್ನು ನೋಡುವೆನಷ್ಟೆ. ಇವರು ಯಾವ ಪಾಪವಶದಿಂದ ಇದನ್ನು ಸೇವಿಸುವರು?

೧೮. ಯಮನು ಹೇಳುತ್ತಾನೆ:—ವಿಪ್ರನೆ! ಭೂಮಿಯಲ್ಲಿ ಎಷ್ಟು ಪ್ರಾಣಿಗಳು ಇರುವುವೋ ಹಾಗೆಯೇ ಲೆಕ್ಕವಿಲ್ಲದ ನರಕಗಳೂ ಅಷ್ಟಿರುವುವು. ನೂರು ವರ್ಷಗಳಾದರೂ ಅದನ್ನು ಹೇಳಲು ಶಕ್ಯವಲ್ಲ.

೧೯. ಮುಖ್ಯವಾಗಿ ಪಾಪಿಗಳಿಗೋಸ್ಕರ ರಚಿತವಾದ ಇಪ್ಪತ್ತೊಂದು ನರಕಗಳನ್ನು ಮಾತ್ರ ನಿನಗೆ ಹೇಳುವೆನು.

ಆದ್ಯೋಽಯಂ ರೌರವೋ ನಾಮ ನರಕೋ ದ್ವಿಜಸತ್ತಮ ।
ಪ್ರತಪ್ತತೈಲಕುಂಭೇಷು ಪಚ್ಯಂತೇ ಯತ್ರ ಜಂತವಃ ॥ ೨೦ ॥
ಹಾ ಮಾತಸ್ತಾತ ಪುತ್ರೇತಿ ಪ್ರಕುರ್ವಂತಿ ಸುದಾರುಣಂ ।
ಪರಪಾಕರತಾಃ ಕ್ಷುದ್ರಾಃ ಪರದ್ರವ್ಯಾಽಪಹಾರಕಾಃ ॥ ೨೧ ॥
ದ್ವಿತೀಯ ಏಷ ವಿಪ್ರೇಂದ್ರ ಮಹಾರೌರವ ಸಂಜ್ಞಿತಃ ।
ಕೃತಘ್ನೈಃ ಸೇವ್ಯತೇ ನಿತ್ಯಂ ತಥಾ ಚ ಗುರುತಲ್ಪಗೈಃ ॥ ೨೨ ॥
ರೋರೂಯಮಾಣೈರ್ದಾಹಾರ್ತೈಃ ಪಚ್ಯಮಾನೈರ್ಹವಿರ್ಭುಜಾ ।
ಖಂಡಶಃ ಕ್ರಿಯಮಾಣೈಶ್ಚ ತೀಕ್ಷ್ಣಶಸ್ತ್ರೈರನೇಕಧಾ ॥ ೨೩ ॥
ತೃತೀಯೋಽಂಧತಮೋ ನಾಮ ನರಕಃ ಸುಭಯಾವಹಃ ।
ಅತ್ರ ಯೇ ಪುರುಷಾ ಯಾಂತಿ ತಾಂಶ್ಚ ವಕ್ಷ್ಯಾಮಿ ಸುದ್ವಿಜ ॥ ೨೪ ॥
ದುಷ್ಟೇನ ಚಕ್ಷುಷಾ ದೃಷ್ಟಾಃ ಪರದಾರಾ ನರಾಽಧಮೈಃ ।
ಸುಲೋಹಾಸ್ಯಾಃ ಖಗಾಸ್ತೇಷಾಂ ಹರಂತ್ಯತ್ರ ವಿಲೋಚನೇ ॥ ೨೫ ॥
ಚತುರ್ಥೋಽಯಂ ಪ್ರತಪ್ತಾಖ್ಯೋ ನರಕಃ ಸಂಪ್ರಕೀರ್ತಿತಃ ।
ಅತ್ರ ತೇ ಯಾತನಾಂ ಭುಕ್ತ್ವಾ ತಥಾ ಶುದ್ಧಾ ಭವಂತಿ ಚ ॥ ೨೬ ॥
ಯೈಃ ಕೃತಾ ಸತತಂ ನಿಂದಾ ಗುರುದೇವತಪಸ್ವಿನಾಂ ।
ತೇಷಾಮುತ್ಪಾಟ್ಯತೇ ಜಿಹ್ವಾ ಜಾತಾ ಜಾತಾಽತ್ರ ಭೂರಿಶಃ ॥ ೨೭ ॥

---

೨೦. ದ್ವಿಜವರ್ಯನೆ! ಮೊದಲನೆಯದು ರೌರವವೆಂಬ ನರಕವು. ಅಲ್ಲಿ ಪ್ರಾಣಿಗಳನ್ನು ಕಾದ ಎಣ್ಣೆಯ ಗಡಿಗೆಗಳಲ್ಲಿ ಬೇಯಿಸುತ್ತಾರೆ.

೨೧. ಪರಪಾಕದಲ್ಲಿ ನಿರತರೂ, ಕ್ಷುದ್ರರೂ, ಪರದ್ರವ್ಯವನ್ನು ಅಪಹರಿಸುವವರೂ ಇಲ್ಲಿ 'ಅಯ್ಯೋ! ಅಮ್ಮ! ಅಯ್ಯೋ! ಮಗು!' ಎಂದು ದಾರುಣವಾಗಿ ಅಳುವರು.

೨೨–೨೩. ಎರಡನೆಯದು ಮಹಾರೌರವವೆಂಬ ನರಕವು. ಕೃತಘ್ನರೂ, ಗುರುತಲ್ಪಗಾಮಿಗಳೂ ಆದವರು ಅಳುವವರೂ, ಸಂತಾಪಗೊಳ್ಳುವವರೂ, ಅಗ್ನಿಯಿಂದ ಸುಡಲ್ಪಡುವವರೂ, ಹರಿತವಾದ ಶಸ್ತ್ರಗಳಿಂದ ತುಂಡು ತುಂಡಾಗಿ ಕತ್ತರಿಸಲ್ಪಡುವವರೂ ಆಗಿ ಇದನ್ನು ಸೇವಿಸುವರು.

೨೪. ಮೂರನೆಯದು ಭಯವನ್ನುಂಟುಮಾಡುವ ಅಂಧಂತಮಸ್ಸೆಂಬ ನರಕವು. ಈ ನರಕಕ್ಕೆ ಹೋಗುವ ಪುರುಷರ ವಿಷಯವನ್ನು ಹೇಳುವೆನು.

೨೫. ದುಷ್ಟ ದೃಷ್ಟಿಯಿಂದ ಪರಪತ್ನಿಯರನ್ನು ನೋಡುವ ಅಧಮ ಮಾನವರ ಕಣ್ಣುಗಳನ್ನು ಇಲ್ಲಿ ಉಕ್ಕಿನ ಕೊಕ್ಕುಳ್ಳ ಪಕ್ಷಿಗಳು ಕುಕ್ಕಿ ಕೀಳುವುವು.

೨೬. ನಾಲ್ಕನೆಯದು ಪ್ರತಪ್ತವೆಂಬ ನರಕವು. ಇಲ್ಲಿ ಯಾತನೆಯನ್ನು ಅನುಭವಿಸಿದವರು ಶುದ್ಧರಾಗುವರು.

೨೭. ಇಲ್ಲಿ ಗುರು, ದೇವತೆ, ತಪಸ್ವಿಗಳನ್ನು ನಿಂದಿಸಿದ ಮಾನವರ ನಾಲಿಗೆಯನ್ನು ಹುಟ್ಟಿದಂತೆಲ್ಲ ಕೀಳುವರು.

ವಿಷೋಽನ್ಯಃ ಪಂಚಮೋ ನಾಮ ಸುಪ್ರಸಿದ್ಧೋ ವಿದಾರಕಃ ।
ಮಿತ್ರದ್ರೋಹರತಾಶ್ಚಾತ್ರ ಛಿದ್ಯಂತೇ ಕರಪತ್ರಕೈಃ ॥ ೨೮ ॥
ಪ್ರತಪ್ತವಾಲುಕಾಪೂರ್ಣೇ ಧ್ಮಾಯತೇ ಯಶ್ಚ ವಹ್ನಿನಾ ।
ನಿಕುಂಭ ಇತಿ ವಿಖ್ಯಾತಃ ಷಷ್ಠೋ ಲೋಕಭಯಾವಹಃ ॥ ೨೯ ॥
ಪ್ರಾಣಾಂತಿಕಂ ಪುರಾ ದತ್ತಂ ಯೈರ್ದುಃಖಂ ಪ್ರಾಣಿನಾಂ ನರೈಃ ।
ಅಪರಾಧಂ ವಿನಾ ತೇಽತ್ರ ಪಚ್ಯಂತೇ ವಾಲುಕೋತ್ಕರೈಃ ॥ ೩೦ ॥
ಬೀಭತ್ಸುರಿತಿ ವಿಖ್ಯಾತಃ ಸಪ್ತಮೋ ನರಕಾಽಧಮಃ ।
ಮೂತ್ರಾಽಮೇಧ್ಯ ಸಮಾಕೀರ್ಣಃ ಸಮಂತಾದತಿಗರ್ಹಿತಃ ॥ ೩೧ ॥
ರಾಜಗಾಮಿ ಚ ಪೈಶುನ್ಯಂ ಯೈಃ ಕೃತಂ ಸುದುರಾತ್ಮಭಿಃ ।
ಅಮೇಧ್ಯಪೂರ್ಣವಕ್ತ್ರಾಸ್ತೇ ಧಾರ್ಯಂತೇಽತ್ರ ನರಾಽಧಮಾಃ ॥ ೩೨ ॥
ಕುತ್ಸಿತೋ ನಾಮ ವಿಖ್ಯಾತೋ ದ್ವಿಜಾಽಯಂ ಚಾಽಷ್ಟಮೋಽಧಮಃ ।
ಶ್ಲೇಷ್ಮಮೂತ್ರಾಽಭಿಸಂಪೂರ್ಣೈಸ್ತಥಾ ಗಂಧೈಶ್ಚ ಕುತ್ಸಿತೈಃ ॥ ೩೩ ॥
ಗುರು ದೇವಾಽತಿಥಿಭ್ಯಶ್ಚ ಸ್ವಭೃತ್ಯೇಭ್ಯೋ ವಿಶೇಷತಃ ।
ಅದತ್ವಾ ಭೋಜನಂ ಯೈಸ್ತು ಕೃತಂ ತೇಽತ್ರ ವ್ಯವಸ್ಥಿತಾಃ ॥ ೩೪ ॥
ಏಷ ದುರ್ಗಮನಾಮಾ ಚ ನವಮೋ ದ್ವಿಜಸತ್ತಮ ।
ತೀಕ್ಷ್ಣಕಂಟಕಸಂಕೀರ್ಣಃ ಸರ್ಪವೃಶ್ಚಿಕಸಂಕುಲಃ ॥ ೩೫ ॥

---

೨೮. ಇದು ವಿದಾರಕವೆಂದು ಪ್ರಸಿದ್ಧವಾದ ಐದನೆಯ ನರಕವು. ಇಲ್ಲಿ ಮಿತ್ರರಿಗೆ ದ್ರೋಹಮಾಡಿದವರನ್ನು ಗರಗಸಗಳಿಂದ ಕತ್ತರಿಸುವರು.

೨೯. ಇದು ಕಾದ ಮರಳಿನಿಂದ ತುಂಬಿ ಅಗ್ನಿಯಿಂದ ಕಾಯುತ್ತಿರುವ ಜನರಿಗೆ ಭಯವನ್ನುಂಟುಮಾಡುವ ನಿಕುಂಭವೆಂಬ ಆರನೆಯ ನರಕವು.

೩೦. ಇಲ್ಲಿ ತಪ್ಪಿಲ್ಲದ ಪ್ರಾಣಿಗಳಿಗೆ ಪ್ರಾಣವನ್ನು ನೀಗಿಸುವ ದುಃಖವನ್ನುಂಟುಮಾಡುವ ಮಾನವರನ್ನು ಮರಳುಗಳಿಂದ ಬೇಯಿಸುವರು.

೩೧. ಇದು ಮೂತ್ರ ಮತ್ತು ಅಮೇಧ್ಯಗಳಿಂದ ತುಂಬಿರುವ ಅತಿ ನಿಂದ್ಯವಾದ ಏಳನೆಯ ಬೀಭತ್ಸವೆಂಬ ನರಕವು.

೩೨. ಇಲ್ಲಿ ರಾಜನಲ್ಲಿ ಚಾಡಿ ಹೇಳಿದ ದುರಾತ್ಮರನ್ನು ಬಾಯಿಗೆ ಅಮೇಧ್ಯವನ್ನು ತುಂಬಿ ನಿಲ್ಲಿಸುವರು.

೩೩. ಶ್ಲೇಷ್ಮ ಮೂತ್ರಗಳಿಂದ ತುಂಬಿ ದುರ್ಗಂಧವುಳ್ಳ ಇದು ಕುತ್ಸಿತವೆಂಬ ಎಂಟನೆಯ ನರಕವು.

೩೪. ಗುರು, ದೇವ, ಅತಿಥಿಗಳಿಗೂ, ವಿಶೇಷವಾಗಿ ತಮ್ಮ ಭೃತ್ಯರಿಗೂ ಭೋಜನವನ್ನು ನೀಡದೆ ಭುಂಜಿಸಿದವರು ಇಲ್ಲಿ ವಾಸಿಸುವರು.

೩೫. ಇದು ಹರಿತವಾದ ಮುಳ್ಳುಗಳಿಂದಲೂ, ಹಾವು, ಚೇಳುಗಳಿಂದಲೂ ತುಂಬಿರುವ ಒಂಬತ್ತನೆಯ ದುರ್ಗಮವೆಂಬ ನರಕವು.

ಏಕಸಾರ್ಥಪ್ರಯಾತಾಯ ಕ್ಷುತ್ಕ್ಷಾಮಾಯಾವಸೀದತೇ ।
ಅದತ್ವಾ ಭೋಜನಂ ಯೈಶ್ಚ ಕೃತಂ ತೇಽತ್ರ ವ್ಯವಸ್ಥಿತಾಃ ॥ ೩೬ ॥
ದಶಮೋಽಯಂ ಸುವಿಖ್ಯಾತೋ ನರಕೋ ನಾಮ ದುಸ್ಸಹಃ ।
ತಪ್ತಲೋಹಮಯೈಃ ಸ್ತಂಭೈಸ್ಸಮಂತಾತ್ಪರಿವಾರಿತಃ ॥ ೩೭ ॥
ಯೇ ಪಾಪಾಃ ಪರದಾರೇಷು ರಕ್ತಾ ಮಿಷ್ಟಾಮಿಷೇಷು ವಾ ।
ತಪ್ತಲೋಹಮಯೀಂ ಸ್ತಂಭಾಂಸ್ತೇತ್ರಾಲಿಂಗತಿ ಮಾನವಾಃ ॥ ೩೮ ॥
ಏಕಾದಶೋಽಪರಶ್ಚಾಯಮಾಕರ್ಷಾಖ್ಯಃ ಪ್ರಕೀರ್ತಿತಃ ।
ನರಕೋ ವಿಪ್ರಶಾರ್ದೂಲ ತಪ್ತಸಂದಂಶಸಂಕುಲಃ ॥ ೩೯ ॥
ಸ್ತ್ರೀ ವಿಪ್ರ ಗುರುದೇವಾನಾಂ ವಿತ್ತಂ ಚಾಶ್ನಂತಿ ಯೇ ನರಾಃ ।
ಸಂದಂಶೈರಪಿ ಕೃಷ್ಯಂತೇ ತತ್ರ ತಪ್ತೈಸ್ಸಮಂತತಃ ॥ ೪೦ ॥
ಸಂದಂಶೋ ದ್ವಾದಶಶ್ಚಾಯಂ ಯಥಾಽಭಕ್ಷ್ಯ ಪ್ರಭಕ್ಷಕಾಃ ।
ಲೋಹದಂತಮುಖೈರ್ಗೃಧ್ರೈರ್ಭಕ್ಷ್ಯಂತೇಽತ್ರ ನರಾಧಮಾಃ ॥ ೪೧ ॥
ಏಷ ತ್ರಯೋದಶೋ ನಾಮ ಸುವಿಖ್ಯಾತೋ ನಿಯಂತ್ರಕಃ ।
ಸಮಂತಾತ್ಕೃಮಿಭಿರ್ವ್ಯಾಪ್ತಸ್ತಥಾ ಚ ದೃಢಬಂಧನೈಃ ॥ ೪೨ ॥

---

೩೬. ಒಂದು ಗುಂಪಿನಲ್ಲಿ ಪ್ರಯಾಣಮಾಡಿದವರೂ, ಹಸಿವಿನಿಂದ ವ್ಯಥೆಗೊಳ್ಳುವವರೂ ಆದವರಿಗೆ ಭೋಜನವನ್ನು ನೀಡದೆ ಭುಂಜಿಸಿದವರು ಇಲ್ಲಿ ವಾಸ ಮಾಡುವರು.

೩೭. ಇದು ಕಾದ ಕಬ್ಬಿಣದ ಕಂಬಗಳಿಂದ ಸುತ್ತಲೂ ಸುತ್ತಲ್ಪಟ್ಟಿರುವ ದುಸ್ಸಹವೆಂದು ವಿಖ್ಯಾತವಾದ ಹತ್ತನೆಯ ನರಕವು.

೩೮. ಇಲ್ಲಿ ಪರರ ಪತ್ನಿಯರಲ್ಲಿ, ಅಥವಾ ರುಚಿಯಾದ ಮಾಂಸಗಳಲ್ಲಿ ಆಸಕ್ತರಾದವರು ಕಾದ ಕಬ್ಬಿಣದ ಕಂಬಗಳನ್ನು ಆಲಂಗಿಸುವರು.

೩೯. ದ್ವಿಜವರ್ಯನೆ! ಇದು ಕಾದ ಇಕ್ಕಳಗಳಿಂದ ವ್ಯಾಪ್ತವಾದ ಹನ್ನೊಂದನೆಯ ಆಕರ್ಷವೆಂಬ ನರಕವು.

೪೦. ಇಲ್ಲಿ ಹೆಂಗಸು, ಬ್ರಾಹ್ಮಣ, ಗುರು, ದೇವತೆಗಳ ದ್ರವ್ಯವನ್ನು ಅಪಹರಿಸುವವರನ್ನು ಕಾದ ಇಕ್ಕಳಗಳಿಂದ ಎಳೆಯುವರು.

೪೧. ಇದು ಹನ್ನೆರಡನೆಯ ಸಂದಂಶವೆಂಬ ನರಕವು. ಇಲ್ಲಿ ಅಭಕ್ಷ್ಯಗಳನ್ನು ಭಕ್ಷಿಸುವ ನೀಚಮಾನವರನ್ನು ಕಬ್ಬಿಣದ ಹಲ್ಲುಗಳುಳ್ಳ ಹದ್ದುಗಳು ಭಕ್ಷಿಸುವುವು.

೪೨. ಇದು ಸುತ್ತಲೂ ಕ್ರಿಮಿಗಳಿಂದಲೂ, ದೃಢಬಂಧನಗಳಿಂದಲೂ ವ್ಯಾಪ್ತವಾದ ನಿಯಂತ್ರಕವೆಂಬ ಪ್ರಸಿದ್ಧವಾದ ಹದಿಮೂರನೆಯ ನರಕವು.

ನ್ಯಾಸಾಪಹಾರಕಾಃ ಪಾಪಾಸ್ತತ್ರ ಬದ್ಧಾಶ್ಚ ಬಂಧನೈಃ ।
ಕೃಮಿವೃಶ್ಚಿಕಕೀಟಾದ್ಯೈರ್ಭಕ್ಷ್ಯಂತೇ ದ್ವಿಜಸತ್ತಮ ॥ ೪೩ ॥
ತಥಾ ಚತುರ್ದಶೋ ನಾಮ ನರಕೋಽಧೋಮುಖಃ ಸ್ಥಿತಃ ।
ನರಕಾಣಾಂ ಸಮಸ್ತಾನಾಮೇಷ ರೌದ್ರತಮಾಕೃತಿಃ ॥ ೪೪ ॥
ಅತ್ರ ಚಾಧೋಮುಖಾ ಬದ್ಧಾ ವೃಕ್ಷಶಾಖಾವಲಂಬಿತಾಃ ।
ಪಚ್ಯಂತೇ ವಹ್ನಿನಾಧಸ್ತಾದ್ಬ್ರಹ್ಮಘ್ನಾ ಯೇ ಚ ಮಾನವಾಃ ॥ ೪೫ ॥
ಯೂಕಾ ಮತ್ಕುಣದಂಶಾದ್ಯೈಸ್ಸಂಕೀರ್ಣೋಽಯಂ ದ್ವಿಜೋತ್ತಮ ।
ನರಕೋ ಭೀಷಣೋ ನಾಮ ಖ್ಯಾತಃ ಪಂಚದಶೋ ಮಹಾನ್ ॥ ೪೬ ॥
ಕೂಟಸಾಕ್ಷ್ಯರತಾನಾಂ ಚ ತಥೈವಾಽನೃತವಾದಿನಾಂ ।
ಅತ್ರಾಶ್ರಯೋ ಮಯಾ ದತ್ತಸ್ತಥಾಽನ್ಯೇಷಾಂ ಕುಕರ್ಮಿಣಾಂ ॥ ೪೭ ॥
ಏಷ ಷೋಡಶ ಉದ್ದಿಷ್ಟೋ ನರಕೋ ನಾಮ ಕ್ಷುದ್ರದಃ ।
ಕ್ಷುಧಾರ್ತೈರ್ಮಾನವೈರ್ವ್ಯಾಪ್ತಃ ಸಮಂತಾದ್ದ್ವಿಜಸತ್ತಮ ॥ ೪೮ ॥
ಮೃಷ್ಟಮಾಂಸಾನಿ ಯೈಃ ಪಾಪೈರ್ಭಕ್ಷಿತಾನಿ ದ್ವಿಜನ್ಮಭಿಃ ।
ಕ್ಷುಧಾರ್ತಾಸ್ತೇ ನಿಜಂ ಕಾಯಂ ಭಕ್ಷಯಂತ್ಯತ್ರ ಸಂಸ್ಥಿತಾಃ ॥ ೪೯ ॥
ತಥಾ ಸಪ್ತದಶಶ್ಚಾಽಯಂ ಕ್ಷಾರಾಖ್ಯೋ ನರಕಃ ಸ್ಮೃತಃ ।
ಸುಕ್ಷಾರೇಣ ಸಮಾಕೀರ್ಣಃ ಸರ್ವಪ್ರಾಣಿಭಯಾವಹಃ ॥ ೫೦ ॥

---

೪೩. ಅಲ್ಲಿ ನ್ಯಾಸವಾಗಿಟ್ಟ ದ್ರವ್ಯಗಳನ್ನು ಅಪಹರಿಸುವ ಪಾಪಿಗಳನ್ನು ಬಂಧನಗಳಿಂದ ಕಟ್ಟಿ ಕೃಮಿ, ಚೇಳು, ಕೀಟ ಮೊದಲಾದುವುಗಳಿಂದ ಕಚ್ಚಿಸುವರು.

೪೪. ಹಾಗೆಯೇ ಹದಿನಾಲ್ಕನೆಯ ಅಧೋಮುಖವೆಂಬ ನರಕವು ಇರುವುದು. ಇದು ಸಮಸ್ತ ನರಕಗಳಲ್ಲಿ ಭಯಂಕರವಾದುದು.

೪೫. ಇಲ್ಲಿ ಬ್ರಹ್ಮಹತ್ಯೆ ಮಾಡಿದ ಮಾನವರನ್ನು ಮರದ ಕೊಂಬೆಯಲ್ಲಿ ಕೆಳಮುಖವಾಗಿ ಕಟ್ಟಿ, ಕೆಳಗೆ ಅಗ್ನಿಯನ್ನು ಹಾಕಿ ಸುಡುವರು.

೪೬. ದ್ವಿಜವರ್ಯನೆ! ಇದು ಹೇನು, ತಿಗಣೆ, ನೊಣ ಇವುಗಳಿಂದ ವ್ಯಾಪ್ತವಾದ ಭೀಷಣವೆಂಬ ಹದಿನೈದನೆಯ ಮಹಾನರಕವು.

೪೭. ಇಲ್ಲಿ ನಾನು ಸುಳ್ಳು ಸಾಕ್ಷಿಯನ್ನೂ ಸುಳ್ಳನ್ನೂ ಹೇಳುವವರಿಗೂ, ಇತರ ನಿಂದ್ಯಕರ್ಮಿಗಳಿಗೂ ಆಶ್ರಯವನ್ನು ಕೊಟ್ಟಿರುವೆನು.

೪೮. ಇದು ಹಸಿವುಗೊಂಡ ಮಾನವರಿಂದ ವ್ಯಾಪ್ತವಾದ ಕ್ಷುದ್ರದವೆಂಬ ಹದಿನಾರನೆಯ ನರಕವು.

೪೯. ಇಲ್ಲಿ ರುಚಿಯಾದ ಮಾಂಸವನ್ನು ಭಕ್ಷಿಸಿದ ಪಾಪಿಗಳಾದ ಬ್ರಾಹ್ಮಣರು ಹಸಿವುಗೊಂಡವರಾಗಿ ತಮ್ಮ ಶರೀರವನ್ನು ತಾವೇ ಭಕ್ಷಿಸುವರು.

೫೦. ಇದು ಅತಿಕ್ಷಾರದಿಂದ ತುಂಬಿರುವುದೂ, ಸಮಸ್ತ ಪ್ರಾಣಿಗಳಿಗೆ ಭಯವನ್ನುಂಟುಮಾಡುವುದೂ ಆದ ಕ್ಷಾರವೆಂಬ ಹದಿನೇಳನೆಯ ನರಕವು.

ವ್ರತಭಂಗಕರಾ ಯೇ ಚ ಯೇ ಚ ಪಾಷಂಡಿನೋ ನರಾಃ ।
ತೇಽತ್ರಾಗತ್ಯ ಶಿತೈಃ ಶಸ್ತ್ರೈಃ ಪಿಷ್ಯಂತೇ ಪಾಪಕೃತ್ತಮಾಃ ॥ ೫೧ ॥
ಏಷ ಚಾಷ್ಟಾದಶೋ ನಾಮ ಕಥಿತಶ್ಚ ನಿದಾಘಕಃ ।
ಜ್ವಲಿತಾಂಗಾರಸಂಕೀರ್ಣೋ ದುಃಸೇವ್ಯಃ ಸರ್ವದೇಹಿನಾಂ ॥ ೫೨ ॥
ದೂಷಯಂತಿ ಚ ಯೇ ಶಾಸ್ತ್ರಂ ಕಾವ್ಯಂ ವಿಪ್ರಂ ಚ ಕನ್ಯಕಾಂ ।
ಅಂಗಾರಾಂತಃ ಸ್ಥಿತಾಸ್ತೇಽತ್ರ ಧ್ರಿಯಂತೇ ಮಾನವಾ ದ್ವಿಜ ॥ ೫೩ ॥
ಏಕೋನವಿಂಶತಿಶ್ಚಾಽಯಂ ಪ್ರಖ್ಯಾತಃ ಕೂಟಶಾಲ್ಮಲಿಃ ।
ಸುತೀಕ್ಷ್ಣಕಂಟಕಾಕೀರ್ಣಃ ಸಮಂತಾದ್ದ್ವಿಜಸತ್ತಮ ॥ ೫೪ ॥
ನಾಸ್ತಿಕಾ ಭಿನ್ನಮರ್ಯಾದಾ ಯೇ ಚ ವಿಪ್ರಸ್ಯ ಘಾತಕಾಃ ।
ತೇ ಸರ್ವೇಽತ್ರ ನರಾ ನಿತ್ಯಮಾರುಹಂತಿ ಪತಂತಿ ಚ ॥ ೫೫ ॥
ಏಷ ವಿಂಶತಿಮೋ ನಾಮ ನರಕೋ ದ್ವಿಜಸತ್ತಮ ।
ಅಸಿಪತ್ರವನಾಖ್ಯಶ್ಚ ಕಷ್ಟಸೇವ್ಯೋ ದುರಾತ್ಮಭಿಃ ॥ ೫೬ ॥
ಅತ್ರ ಯಾಂತಿ ನರಾ ವಿಪ್ರ ಪರರಂಧ್ರನಿರೀಕ್ಷಕಾಃ ।
ಕೂಟಕರ್ಮರತಾ ಯೇ ಚ ಶಾಸ್ತ್ರವಿಕ್ರಯಕಾರಕಾಃ ॥ ೫೭ ॥
ಏಕವಿಂಶತಿಮಾಚೈಷಾ ನಾಮ್ನಾ ವೈತರಣೀ ನದೀ ।
ಸರ್ವೈರೇವ ನರೈರ್ಗಮ್ಯಾ ಧರ್ಮಪಾಪಾಽನುಯಾಯಿಭಿಃ ॥ ೫೮ ॥

---

೫೧. ಇಲ್ಲಿ ವ್ರತವನ್ನು ಕೆಡಿಸಿದವರನ್ನೂ, ಪಾಷಂಡಿಗಳನ್ನೂ ಹರಿತವಾದ ಆಯುಧಗಳಿಂದ ಪುಡಿಮಾಡುವರು.

೫೨. ಇದು ಉರಿಯುತ್ತಿರುವ ಕೆಂಡಗಳಿಂದ ತುಂಬಿರುವುದೂ, ಸಕಲ ಪ್ರಾಣಿಗಳಿಗೆ ಸೇವಿಸಲಶಕ್ಯವೂ ಆದ ನಿದಾಘಕವೆಂಬ ಹದಿನೆಂಟನೆಯ ನರಕವು.

೫೩. ಬ್ರಾಹ್ಮಣನೆ! ಇಲ್ಲಿ ಶಾಸ್ತ್ರ, ಕಾವ್ಯ, ಬ್ರಾಹ್ಮಣ, ಕನ್ಯೆ ಇವರನ್ನು ಕೆಡಿಸಿದವರನ್ನು ಕೆಂಡದ ನಡುವೆ ನಿಲ್ಲಿಸುವರು.

೫೪. ದ್ವಿಜವರ್ಯ! ಇದು ಹರಿತವಾದ ಮುಳ್ಳುಗಳಿಂದ ತುಂಬಿರುವ ಕೂಟಶಾಲ್ಮಲಿಯೆಂಬ ಹತ್ತೊಂಬತ್ತನೆಯ ನರಕವು.

೫೫. ನಾಸ್ತಿಕರೂ, ಮರ್ಯಾದೆಯನ್ನು ಉಲ್ಲಂಘಿಸಿದವರೂ, ಬ್ರಾಹ್ಮಣ ಘಾತಕರೂ ಆದ ಮಾನವರು ಇದನ್ನು ಹತ್ತಿ ಕೆಳಗೆ ಬೀಳುವರು.

೫೬. ಇದು ದುರಾತ್ಮರಿಗೆ ಸೇವಿಸಲಾಗದ ಅಸಿಪತ್ರವನವೆಂಬ ಇಪ್ಪತ್ತನೆಯ ನರಕವು.

೫೭. ಇದಕ್ಕೆ ಪರರ ಛಿದ್ರವನ್ನು ಈಕ್ಷಿಸುವವರೂ, ಮಿಥ್ಯಾಕರ್ಮನಿರತರೂ, ಶಾಸ್ತ್ರವನ್ನು ವಿಕ್ರಯಿಸುವವರೂ ಹೋಗುವರು.

೫೮. ಇದು ಧರ್ಮವನ್ನೂ, ಪಾಪವನ್ನೂ ಮಾಡುವ ಸರ್ವ ಮಾನವರಿಗೆ ಹೋಗಲರ್ಹವಾದ ವೈತರಣೀ ನದಿಯೆಂಬ ಇಪ್ಪತ್ತೊಂದನೆಯ ನರಕವು.

ಮೃತ್ಯುಕಾಲೇ ಸಮುತ್ಪನ್ನೇ ಧೇನುಂ ಯಚ್ಛಂತಿ ಯೇ ನರಾಃ ।
ತಸ್ಯಾ ಲಾಂಗೂಲಮಾಶ್ರಿತ್ಯ ತಾರಯಂತಿ ಸುಖೇನ ಚ ॥ ೫೯ ॥
ಅದತ್ವಾ ಗಾಂ ಚ ಯೇ ಮರ್ತ್ಯಾ ಮ್ರಿಯಂತೇ ದ್ವಿಜಸತ್ತಮ ।
ತೀರ್ತ್ವಾ ಹಸ್ತಾದಿಭಿರ್ದುರ್ಗಾಂ ತ ಇಮಾಂ ಸಂತರಂತಿ ಚ ॥ ೬೦ ॥
ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮ ।
ವಿಸ್ತರೇಣ ತವ ಪ್ರೀತ್ಯಾ ಸ್ವರೂಪಂ ನರಕೋದ್ಭವಂ ॥ ೬೧ ॥
ತಸ್ಮಾದ್ಗಚ್ಛ ಗೃಹಂ ಶೀಘ್ರಂ ಯಾವದ್ಗಾತ್ರಂ ನ ದಹ್ಯತೇ ।
ಬಂಧುಭಿಸ್ತವ ಶೋಕಾರ್ತೈರ್ಗೃಹೀತ್ವಾ ವಾಂಛಿತಂ ಧನಂ ॥ ೬೨ ॥

ಬ್ರಾಹ್ಮಣ ಉವಾಚ :—

ಯದಿ ದೇವ ಮಯಾ ಸಮ್ಯಗ್ಗಂತವ್ಯಂ ನಿಜಮಂದಿರಂ ।
ತದ್ಬ್ರೂಹಿ ಕರ್ಮಣಾ ಯೇನ ನರಕಂ ಯಾತಿ ನೋ ನರಃ ॥ ೬೩ ॥

ಯಮ ಉವಾಚ :—

ತೀರ್ಥಯಾತ್ರಾಪರೋ ನಿತ್ಯಂ ದೇವತಾಽತಿಥಿ ಪೂಜಕಃ ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ನ ಯಾತಿ ನರಕಂ ನರಃ ॥ ೬೪ ॥
ಪರೋಪಕಾರಸಂಯುಕ್ತೋ ನಿತ್ಯಂ ಜಪಪರಾಯಣಃ ।
ಸ್ವಾಧ್ಯಾಯನಿರತಶ್ಚೈವ ನ ಯಾತಿ ನರಕಂ ದ್ವಿಜ ॥ ೬೫ ॥

---

೫೯. ಮರಣಕಾಲದಲ್ಲಿ ಧೇನುವನ್ನು ದಾನಮಾಡುವವರು ಆ ಧೇನುವಿನ ಬಾಲವನ್ನು ಹಿಡಿದುಕೊಂಡು ಸುಖವಾಗಿ ಈ ನದಿಯನ್ನು ದಾಟುವರು.

೬೦. ದ್ವಿಜವರ್ಯನೆ! ಧೇನುವನ್ನು ದಾನಮಾಡದೆ ಮೃತರಾದ ಮಾನವರು ಹಸ್ತಾದಿಗಳಿಂದ ದುರ್ಗಮವಾದ ಈ ನದಿಯನ್ನು ದಾಟುವರು.

೬೧. ನೀನು ಕೇಳಿದ ನರಕದ ಸ್ವರೂಪವನ್ನು ಪ್ರೀತಿಯಿಂದ ಹೇಳಿರುವೆನು.

೬೨. ಆದ್ದರಿಂದ ದುಃಖಿತರಾದ ನಿನ್ನ ಬಂಧುಗಳು ಶರೀರವನ್ನು ಸುಡದಿರುವಷ್ಟರಲ್ಲಿ ಇಷ್ಟವಾದ ದ್ರವ್ಯವನ್ನು ತೆಗೆದುಕೊಂಡು ಬೇಗನೆ ಮನೆಗೆ ಹೋಗು.

೬೩. ಬ್ರಾಹ್ಮಣನು ಹೇಳುತ್ತಾನೆ:—ಸ್ವಾಮಿ! ನಾನು ನನ್ನ ಮನೆಗೆ ಅವಶ್ಯವಾಗಿ ಹೋಗಬೇಕಾದರೆ ಮಾನವನು ಯಾವ ಕರ್ಮದಿಂದ ನರಕಕ್ಕೆ ಹೋಗುವನು? ಅದನ್ನು ಹೇಳು.

೬೪. ಯಮನು ಹೇಳುತ್ತಾನೆ:—ತೀರ್ಥಯಾತ್ರೆಯಲ್ಲಿ ನಿರತನೂ, ದೇವತಾತಿಥಿಗಳನ್ನು ಪೂಜಿಸುವವನೂ, ಬ್ರಹ್ಮಸ್ಯಾಸಾಸಕ್ತನೂ, ಶರಣಾಗತರಕ್ಷಕನೂ ಆದವನು ನರಕಕ್ಕೆ ಹೋಗುವುದಿಲ್ಲ.

೬೫. ಪರೋಪಕಾರದಲ್ಲಿ ಆಸಕ್ತನೂ, ಯಾವಾಗಲೂ ಜಪನಿರತನೂ, ವೇದಾಧ್ಯಯನದಲ್ಲಿ ಆಸಕ್ತನೂ ಆದವನು ನರಕಕ್ಕೆ ಹೋಗುವುದಿಲ್ಲ.

ವಾಪೀಕೂಪ ತಡಾಗಾನಿ ದೇವತಾಯತನಾನಿ ಚ ।
ಯಃ ಕರೋತಿ ನರೋ ನಿತ್ಯಂ ನರಕಂ ನ ಸ ಪಶ್ಯತಿ ॥ ೬೬ ॥
ಹೇಮಂತೇ ವಹ್ನಿದೋ ಯಃಸ್ಯಾತ್ತಥಾ ಗ್ರೀಷ್ಮೇ ಜಲಪ್ರದಃ ।
ವರ್ಷಾಸ್ವಾಶ್ರಯದೋ ಯಶ್ಚ ನರಕಂ ನ ಸ ಪಶ್ಯತಿ ॥ ೬೭ ॥
ವ್ರತೋಪವಾಸ ಸಂಯುಕ್ತಃ ಶಾಂತಾತ್ಮಾ ವಿಜಿತೇಂದ್ರಿಯಃ ।
ಬ್ರಹ್ಮಚಾರೀ ಸದಾ ಧ್ಯಾನೀ ನರಕಂ ಯಾತಿ ನೋ ನರಃ ॥ ೬೮ ॥
ಅನ್ನಪ್ರದೋ ನರೋ ಯಃಸ್ಯಾದ್ವಿಶೇಷೇಣ ತಿಲಪ್ರದಃ ।
ಅಹಿಂಸಾ ನಿರತಶ್ಚೈವ ನರಕಂ ನ ಸ ಪಶ್ಯತಿ ॥ ೬೯ ॥
ವೇದಾಽಧ್ಯಯನ ಸಂಪನ್ನಃ ಶಾಸ್ತ್ರಾಸಕ್ತಃ ಸುಮೃಷ್ಟವಾಕ್ ।
ಧರ್ಮಾಖ್ಯಾನಪರೋ ನಿತ್ಯಂ ನರಕಂ ನ ಸ ಪಶ್ಯತಿ ॥ ೭೦ ॥

ಬ್ರಾಹ್ಮಣ ಉವಾಚ:—

ಏತನ್ಮೂರ್ಖೋಽಪಿ ಜಾನಾತಿ ಶುಭಕರ್ಮಕರಃ ಪುಮಾನ್ ।
ನ ಯಾತಿ ನರಕಂ ಸ್ವರ್ಗೇ ತಥಾ ಪಾಪಕ್ರಿಯಾರತಃ ॥ ೭೧ ॥
ತಸ್ಮಾದಶುಭಕರ್ಮಾಣಿ ಕರ್ಮಣಾ ಯೇನ ಪಾತಕಂ ।
ಸ್ವಲ್ಪೇನಾಽಪಿ ನಿಹಂತ್ಯಾಶು ಯಾತಿಸ್ವರ್ಗಂ ನರಸ್ತತಃ ॥ ೭೨ ॥
ತನ್ಮೇ ಬ್ರೂಹಿ ಸುರಶ್ರೇಷ್ಠ ವ್ರತಂ ನಿಯಮಮೇವ ವಾ ।
ತೀರ್ಥಂ ವಾ ಜಪಹೋಮಂ ವಾ ಸರ್ವಲೋಕ ಸುಖಾವಹಂ ॥ ೭೩ ॥

---

೬೬–೭೦. ಬಾವಿ, ಕೊಳ, ಕೆರೆ, ದೇವಾಲಯಗಳನ್ನು ನಿರ್ಮಿಸಿದವನೂ, ಚಳಿಗಾಲದಲ್ಲಿ ಅಗ್ನಿಯನ್ನು ದಾನಮಾಡುವವನೂ, ಗ್ರೀಷ್ಮಕಾಲದಲ್ಲಿ ನೀರನ್ನು ಕೊಡುವವನೂ, ಮಳೆಗಾಲದಲ್ಲಿ ಆಶ್ರಯದಾತನೂ, ವ್ರತೋಪವಾಸ ನಿರತನೂ, ಶಾಂತನೂ, ಜಿತೇಂದ್ರಿಯನೂ, ಬ್ರಹ್ಮಚಾರಿಯೂ, ಯಾವಾಗಲೂ ಧ್ಯಾನಾಸಕ್ತನೂ, ಅನ್ನ ತಿಲಗಳನ್ನು ಕೊಡುವವನೂ, ಅಹಿಂಸಾನಿರತನೂ, ವೇದಾಧ್ಯಯನ ಸಂಪನ್ನನೂ, ಶಾಸ್ತ್ರನಿಷ್ಣಾತನೂ, ಹಿತವಾಗಿ ಮಾತಾಡುವವನೂ, ಧರ್ಮವನ್ನು ಬೋಧಿಸುವವನೂ ನರಕವನ್ನು ಸೇರುವುದಿಲ್ಲ.

೭೧. ಬ್ರಾಹ್ಮಣನು ಹೇಳುತ್ತಾನೆ:—ಪುಣ್ಯವನ್ನಾಚರಿಸಿದವನು ನರಕಕ್ಕೂ, ಪಾಪಗಳನ್ನು ಮಾಡಿದವನು ಸ್ವರ್ಗಕ್ಕೂ ಹೋಗುವುದಿಲ್ಲವೆಂಬುದನ್ನು ಮೂರ್ಖನೂ ತಿಳಿಯುತ್ತಾನೆ.

೭೨. ಆದ್ದರಿಂದ ಪಾಪಿಯು ಯಾವ ಅಲ್ಪ ಶುಭ ಕರ್ಮದಿಂದ ಪಾಪವನ್ನು ನೀಗಿಸಿಕೊಂಡು ಸ್ವರ್ಗಕ್ಕೆ ಹೋಗುವನು?

೭೩. ಸಕಲ ಜನರಿಗೆ ಸುಖವನ್ನುಂಟುಮಾಡುವ, ಆ ವ್ರತ, ನಿಯಮ, ತೀರ್ಥ, ಜಪ ಅಥವಾ ಹೋಮವನ್ನು ನನಗೆ ಹೇಳು.

ಯಮ ಉವಾಚ :—

ಅತ್ರ ತೇ ಸುಮಹದ್ಗುಹ್ಯಂ ಕೀರ್ತಯಿಷ್ಯೇ ದ್ವಿಜೋತ್ತಮ ।
ಗೋಪನೀಯಂ ಪ್ರಯತ್ನೇನ ವಚನಾನ್ಮಮ ಸರ್ವದಾ ॥ ೭೪ ॥
ಮಹಾಪಾತಕಯುಕ್ತೋಽಪಿ ಪುರುಷೋ ಯೇನ ಕರ್ಮಣಾ ।
ಅನುಷ್ಠಿತೇನ ನೋ ಯಾತಿ ನರಕಂ ಕ್ಲೇಶಕಾರಕಂ ॥ ೭೫ ॥
ಆನರ್ತವಿಷಯೇ ರಮ್ಯಂ ಸರ್ವತೀರ್ಥಮಯಂ ಶುಭಂ ।
ಹಾಟಕೇಶ್ವರಜಂ ಕ್ಷೇತ್ರಂ ಮಹಾಪಾತಕನಾಶನಂ ॥ ೭೬ ॥
ತತ್ರೈಕಮಪಿ ಮಾಸಾರ್ಧಂ ಯೋ ಭಕ್ತ್ಯಾ ಪೂಜಯೇದ್ಧರಂ ।
ಸ ಸರ್ವಪಾಪ ಯುಕ್ತೋಽಪಿ ಶಿವಲೋಕೇ ಮಹೀಯತೇ ॥ ೭೭ ॥
ತಸ್ಮಾತ್ತತ್ರ ದ್ರುತಂ ಗತ್ವಾ ತ್ವಮಾರಾಧಯ ಶಂಕರಂ ।
ಯೇನ ಗಚ್ಛಸಿ ನಿರ್ವಾಣಂ ದಶಭಿಃ ಪುರುಷೈಃ ಸಹ ॥ ೭೮ ॥

ಸೂತ ಉವಾಚ :—

ಉಪದೇಶಂ ಸಮಾಕರ್ಣ್ಯ ಸ ಯದಾ ಪ್ರಸ್ಥಿತೋ ಗೃಹಂ ।
ಧರ್ಮರಾಜಸ್ಯ ಸಂಹೃಷ್ಟೋ ಮಥುರಾಂ ನಗರೀಂ ಪ್ರತಿ ॥ ೭೯ ॥
ತಾವದ್ದ್ವಿತೀಯಂ ಗೋಕರ್ಣಂ ದೂತ ಆದಾಯ ಸಂಗತಃ ।
ದರ್ಶಯಾಮಾಸ ಭೃತ್ವಾಽಗ್ರೇ ಧರ್ಮರಾಜಸ್ಯ ಸತ್ವರಂ ॥ ೮೦ ॥

---

೭೪. ಯಮನು ಹೇಳುತ್ತಾನೆ:—ದ್ವಿಜವರ್ಯನೆ! ಈ ವಿಷಯದಲ್ಲಿ ನಿನಗೊಂದು ರಹಸ್ಯವನ್ನು ಹೇಳುವೆನು. ಅದನ್ನು ನೀನು ನನ್ನ ಮಾತಿನಿಂದ ಯಾವಾಗಲೂ ಗುಟ್ಟಾಗಿಟ್ಟಿರಬೇಕು.

೭೫—೭೬. ನಿನಗೀಗ ಮಹಾ ಪಾಪಿಯಾದ ಮಾನವನು ಯಾವ ಕರ್ಮವನ್ನಾಚರಿಸಿದರೆ ದುಃಖವನ್ನುಂಟುಮಾಡುವ ನರಕವನ್ನು ಸೇರುವುದಿಲ್ಲ ಎಂಬುದನ್ನು ತಿಳಿಸುತ್ತೇನೆ. ಆನರ್ತದೇಶದಲ್ಲಿ ಸಮಸ್ತ ತೀರ್ಥರೂಪವೂ, ಮಹಾಪಾಪಗಳನ್ನು ನಾಶಗೊಳಿಸುವುದೂ ಆದ ಹಾಟಕೇಶ್ವರ ಕ್ಷೇತ್ರವಿದೆ.

೭೭—೭೮. ಅಲ್ಲಿ ಹದಿನೈದು ದಿನಗಳ ಕಾಲ ಭಕ್ತಿಯಿಂದ ಹರನನ್ನು ಪೂಜಿಸಿದ ಮಾನವನು ಸಮಸ್ತ ಪಾಪಗಳಿಂದ ಕೂಡಿದ್ದರೂ ಶಿವಲೋಕದಲ್ಲಿ ಪೂಜ್ಯನಾಗುವನು. ಆದ್ದರಿಂದ ನೀನು ಅಲ್ಲಿಗೆ ಶೀಘ್ರವಾಗಿ ಹೋಗಿ ಶಂಕರನನ್ನು ಆರಾಧಿಸು. ಅದರಿಂದ ದಶಪುರುಷರೊಡನೆ ಮೋಕ್ಷವನ್ನು ಪಡೆಯುವೆ.

೭೯—೮೦. ಸೂತನು ಹೇಳುತ್ತಾನೆ:—ಆ ಗೋಕರ್ಣನು ಧರ್ಮರಾಜನ ಉಪದೇಶವನ್ನು ಕೇಳಿ ಮಥುರಾಪಟ್ಟಣದಲ್ಲಿರುವ ತನ್ನ ಮನೆಗೆ ಹೋಗಲು ಯಮದೂತನು ಎರಡನೆಯ ಗೋಕರ್ಣನನ್ನು ಕರೆದುಕೊಂಡು ಬಂದು ಧರ್ಮರಾಜನ ಮುಂದೆ ನಿಲ್ಲಿಸಿ ತೋರಿಸಿದನು.

ತತಃ ಪ್ರೋವಾಚ ತಂ ದೂತಂ ಧರ್ಮರಾಜಃ ಪ್ರಹರ್ಷಿತಃ ।
ಗೋಕರ್ಣಂ ಪುರತೋ ದೃಷ್ಟ್ವಾ ದ್ವಿತೀಯಂ ಪ್ರಸ್ಥಿತಂ ಗೃಹಂ ॥ ೮೧ ॥
ಯಸ್ಮಾತ್ತ್ವಾಕಾಲಾತ್ಯಯಂ ಕೃತ್ವಾಽನೀತೋಽಯಂ ಬ್ರಾಹ್ಮಣಸ್ತ್ವಯಾ ।
ತಸ್ಮಾದೇನಮಪಿ ಕ್ಷಿಪ್ರಂ ದ್ವಿತೀಯೇನ ಸಮಂ ತ್ಯಜ ॥ ೮೨ ॥
ತತಸ್ತೌ ತತ್ಕ್ಷಣಾನ್ಮುಕ್ತೌ ಗೋಕರ್ಣೌ ಬ್ರಾಹ್ಮಣೌ ಸಮಂ ।
ಸ್ವಂ ಸ್ವಂ ಕಲೇವರಂ ಪ್ರಾಪ್ಯ ಸಹಸಾಥ ಸಮನ್ವಿತೌ ॥ ೮೩ ॥
ತತಸ್ಸ ಕಥಯಾಮಾಸ ಗೋಕರ್ಣಃ ಪ್ರಥಮೋ ದ್ವಿಜಃ ।
ಯಮೋಪದೇಶಸಂಜುಷ್ಟೋ ದ್ವಿತೀಯಾಯ ಸವಿಸ್ತರಂ ॥ ೮೪ ॥
ತತೋ ಗೃಹಂ ಪರಿತ್ಯಜ್ಯ ಗೋಕರ್ಣೌ ದ್ವಾವಪಿ ಸ್ಥಿತೌ ।
ದೇವತಾಯತನೈರ್ವ್ಯಾಪ್ತಂ ಕ್ಷೇತ್ರಂ ದೃಷ್ಟ್ವಾಽಖಿಲಂ ತತಃ ॥ ೮೫ ॥
ಲಿಂಗೇ ಸಂಸ್ಥಾಪಿತೇ ತಾಭ್ಯಾಂ ಸೀಮಾಂತೇ ದಕ್ಷಿಣೋತ್ತರೇ ।
ಹಾಟಕೇಶ್ವರಜಂ ಕ್ಷೇತ್ರಂ ಸಂಪ್ರಾಪ್ಯ ತಪಸಿ ಧೃತಂ ॥ ೮೬ ॥
ತತಶ್ಶಿವಂ ಸಮಾರಾಧ್ಯ ತಪಃ ಕೃತ್ವಾ ಯಥೋಚಿತಂ ।
ಸಶರೀರೌ ದಿವಂ ಪ್ರಾಪ್ತೌ ತತ್ಪ್ರಭಾವಾದ್ದ್ವಿಜೋತ್ತಮಾಃ ॥ ೮೭ ॥
ತಾಭ್ಯಾಂ ಮಾರ್ಗಚತುರ್ದಶ್ಯಾಂ ಕೃಷ್ಣಾಯಾಂ ಜಾಗರಃ ಕೃತಃ ।
ಯಃ ಕರೋತಿ ನರೋ ಭಕ್ತ್ಯಾ ಸ ಗಚ್ಛತಿ ಶಿವಾಲಯಂ ॥ ೮೮ ॥

---

೮೧. ಬಳಿಕ ಧರ್ಮರಾಜನು ತನ್ನ ಮುಂದಿರುವ ಗೋಕರ್ಣನನ್ನು ಕಂಡು ಸಂತೋಷದಿಂದ ಇಂತೆಂದನು.

೮೨. "ನೀನು ಈ ಬ್ರಾಹ್ಮಣನನ್ನು ಕಾಲವನ್ನು ಮೀರಿ ತಂದಿರುವುದರಿಂದ ಇವನನ್ನೂ ಬಿಟ್ಟುಬಿಡು."

೮೩. ಬಳಿಕ ಮುಕ್ತರಾದ ಆ ಇಬ್ಬರು ಗೋಕರ್ಣರೂ ಕೂಡಲೆ ತಮ್ಮ ತಮ್ಮ ಶರೀರವನ್ನು ಸೇರಿದರು.

೮೪. ಯಮನಿಂದ ಉಪದೇಶವನ್ನು ಪಡೆದ ಆ ಮೊದಲಿನ ಗೋಕರ್ಣನು ಆ ಉಪದೇಶವನ್ನು ಎರಡನೆಯ ಗೋಕರ್ಣನಿಗೆ ವಿಸ್ತಾರವಾಗಿ ಹೇಳಿದನು.

೮೫–೮೬. ತರುವಾಯ ಇಬ್ಬರು ಗೋಕರ್ಣರೂ ಮನೆಯನ್ನು ತ್ಯಜಿಸಿ ಹಾಟಕೇಶ್ವರ ಕ್ಷೇತ್ರಕ್ಕೆ ಹೋಗಿ ದೇವಾಲಯಗಳಿಂದ ವ್ಯಾಪ್ತವಾದ ಆ ಸಂಪೂರ್ಣ ಕ್ಷೇತ್ರವನ್ನು ಅವಲೋಕಿಸಿ ದಕ್ಷಿಣೋತ್ತರ ಎಲ್ಲೆಗಳಲ್ಲಿ ಲಿಂಗಗಳನ್ನು ಸ್ಥಾಪಿಸಿದರು.

೮೭–೮೮. ಬಳಿಕ ಯಥೋಚಿತವಾಗಿ ತಪಸ್ಸನ್ನು ಮಾಡಿ ಶಿವನನ್ನು ಆರಾಧಿಸಿ ಮಾರ್ಗಶಿರ ಕೃಷ್ಣ ಚತುರ್ದಶೀ ದಿನ ಜಾಗರಣೆ ಗೈದು ಅದರ ಪ್ರಭಾವದಿಂದ ಶರೀರಸಹಿತರಾಗಿ ಸ್ವರ್ಗಕ್ಕೆ ತೆರಳಿದರು. ಹೀಗೆ ಮಾಡಿದ ಮಾನವನು ಶಿವಾಲಯಕ್ಕೆ ತೆರಳುವನು.

ಅಪುತ್ರೋ ಲಭತೇ ಪುತ್ರಾನ್ಧನಾರ್ಥೀ ಧನಮಾಪ್ನುಯಾತ್ ।
ನಿಷ್ಕಾಮಸ್ತು ಪುನರ್ಮೋಕ್ಷಂ ನರೋ ಯಾತಿ ನ ಸಂಶಯಃ ॥ ೮೯ ॥
ಸೂತ ಉವಾಚ :—
ಏತದ್ವಸ್ಸರ್ವಮಾಖ್ಯಾತಂ ಸೀಮಾಂತಂ ದ್ವಿಜಸತ್ತಮಾಃ ।
ಕ್ಷೇತ್ರಸ್ಯಾಸ್ಯ ಪ್ರಮಾಣಂ ಚ ವಿಸ್ತರೇಣ ಚತುರ್ದಿಶಂ ॥ ೯೦ ॥
ಅತ್ರಾಂತರಾ ನರಾ ಯೇ ಚ ನಿವಸಂತಿ ದ್ವಿಜೋತ್ತಮಾಃ ।
ಕೃಷಿಕರ್ಮೋದ್ಯತಾಶ್ಚಾಪಿ ಯಾಂತಿ ತೇ ಪರಮಾಂ ಗತಿಂ ।
ಕಿಂ ಪುನರ್ನಿಯತಾತ್ಮಾನಃ ಶಾಂತಾ ದಾಂತಾ ಜಿತೇಂದ್ರಿಯಾಃ ॥ ೯೧ ॥
ಅಪಿ ಕೀಟಪತಂಗಾ ಯೇ ಪಶವಃ ಪಕ್ಷಿಣೋ ಮೃಗಾಃ ।
ತಸ್ಮಿನ್ ಕ್ಷೇತ್ರೇ ಮೃತಾ ಯಾಂತಿ ಸ್ವರ್ಗಲೋಕಂ ನ ಸಂಶಯಃ ॥ ೯೨ ॥
ಕಿಂ ಪುನರ್ಯೇ ನರಾಸ್ತತ್ರ ಕೃತ್ವಾ ಪ್ರಾಯೋಪವೇಶನಂ ।
ಸಂನ್ಯಸ್ತಾಃ ಶ್ರದ್ಧಯೋಪೇತಾ ಹೃದಯಸ್ಥೇ ಜನಾರ್ದನೇ ॥ ೯೩ ॥
ತಸ್ಮಾತ್ಸರ್ವಪ್ರಯತ್ನೇನ ತತ್ಕ್ಷೇತ್ರಂ ಸೇವ್ಯಮೇವ ಹಿ ।
ವಿಶೇಷೇಣ ಕಲೌ ಪ್ರಾಪ್ತೇ ಯುಗೇ ಪಾಪಸಮಾವೃತೇ ॥ ೯೪ ॥
ಪುನಂತಿ ಸ್ನಾನದಾನಾಭ್ಯಾಂ ಸರ್ವತೀರ್ಥಾನ್ಯಸಂಶಯಂ ।
ಹಾಟಕೇಶ್ವರಜಂ ಕ್ಷೇತ್ರಂ ಪುನರ್ವಾಸಾತ್ಪುನಾತಿ ಚ ॥ ೯೫ ॥

---

೮೯. ಇಲ್ಲಿ ಪುತ್ರನಿಲ್ಲದವನು ಪುತ್ರರನ್ನೂ, ಧನಾರ್ಥಿಯು ಧನವನ್ನೂ, ನಿಷ್ಕಾಮನು ಮೋಕ್ಷವನ್ನೂ ಪಡೆಯುವನು.

೯೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಈ ಕ್ಷೇತ್ರದ ನಾಲ್ಕು ದಿಕ್ಕುಗಳ ಸೀಮಾಂತವನ್ನೂ, ಪ್ರಮಾಣವನ್ನೂ ವಿಸ್ತಾರವಾಗಿ ಹೇಳಿದ್ದೇನೆ.

೯೧. ದ್ವಿಜವರ್ಯರೆ! ಇದರ ನಡುವೆ ವಾಸಮಾಡುವ ಮಾನವರು ಕೃಷಿ ಕರ್ಮಗಳಲ್ಲಿ ನಿರತರಾಗಿದ್ದರೂ ಉತ್ತಮ ಗತಿಯನ್ನು ಪಡೆಯುವರು. ಶಾಂತರೂ, ಜಿತೇಂದ್ರಿಯರೂ ಆದ ಮಾನವರ ವಿಷಯವಿನ್ನೇನು.

೯೨. ಆ ಕ್ಷೇತ್ರದಲ್ಲಿ ಮೃತವಾದ ಕೀಟ, ಪತಂಗ, ಪಶು, ಪಕ್ಷಿ, ಮೃಗ ಗಳೂ ನಿಶ್ಚಯವಾಗಿ ಸ್ವರ್ಗವನ್ನು ಸೇರುವುವು.

೯೩. ಸನ್ಯಾಸವನ್ನು ಸ್ವೀಕರಿಸಿ ಪ್ರಾಯೋಪವೇಶ ಮಾಡಿ ಶ್ರದ್ಧೆಯಿಂದ ವಿಷ್ಣುವನ್ನು ಧ್ಯಾನಮಾಡುವ ಮಾನವರ ವಿಷಯವಿನ್ನೇನು!

೯೪. ಆದ್ದರಿಂದ ಪಾಪಭೂಯಿಷ್ಠವಾದ ಕಲಿಯುಗವು ಬರಲು ವಿಶೇಷ ವಾಗಿ ಆ ಕ್ಷೇತ್ರವನ್ನು ಸೇವಿಸಬೇಕು.

೯೫. ಸಮಸ್ತ ತೀರ್ಥಗಳೂ ಸ್ನಾನ ದಾನಗಳಿಂದ ಪವಿತ್ರಗೊಳಿಸುವುವು. ಆ ಹಾಟಕೇಶ್ವರಜ ಕ್ಷೇತ್ರವು ವಾಸದಿಂದಲೇ ಮಾನವರನ್ನು ಪವಿತ್ರಗೊಳಿಸುವುದು.

ವಾಪೀಕೂಪತಡಾಗೇಷು ಯತ್ರ ಯತ್ರ ಜಲಂ ದ್ವಿಜಾಃ ।
ತತ್ರ ತತ್ರ ನರಃ ಸ್ನಾತಃ ಸರ್ವಪಾಪೈಃ ಪ್ರಮುಚ್ಯತೇ ॥ ೯೬ ॥
ಕಿಂ ಯಜ್ಞೈಃ ಕಿಂ ವೃಥಾದಾನೈಃ ಕಿಂ ವ್ರತೈಃ ಕಿಂ ಜಪೈರಪಿ ।
ವರಂ ತತ್ರ ಕೃತೋ ವಾಸಃ ಕ್ಷೇತ್ರೇ ಸ್ವರ್ಗಮಭೀಪ್ಸುಭಿಃ ॥ ೯೭ ॥
ಏತತ್ಪವಿತ್ರಮಾಯುಷ್ಯಂ ಮಾಂಗಲ್ಯಂ ಪಾಪನಾಶನಂ ।
ಹಾಟಕೇಶ್ವರಜಕ್ಷೇತ್ರಮಾಹಾತ್ಮ್ಯಂ ಶೃಣ್ವತಾಂ ಸದಾ ॥ ೯೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗೋಕರ್ಣತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡ್ವಿಂಶೋಽಧ್ಯಾಯಃ

---

೯೬. ಅಲ್ಲಿರುವ ವಾಪೀ, ಕೂಪ, ತಟಾಕಗಳಲ್ಲಿಯೂ, ನೀರಿರುವ ಯಾವ ಸ್ಥಳಗಳಲ್ಲಿ ಮಿಂದರೂ ಮನುಷ್ಯನು ಸಕಲ ಪಾಪಗಳಿಂದ ಮುಕ್ತನಾಗುವನು.

೯೭. ಯಜ್ಞ, ದಾನ, ವ್ರತ, ಜಪಗಳಿಂದೇನು ಪ್ರಯೋಜನ? ಸ್ವರ್ಗವನ್ನು ಬಯಸುವವರಿಗೆ ಅಲ್ಲಿ ಮಾಡಿದ ವಾಸವು ಶ್ರೇಷ್ಠವಾದುದು.

೯೮. ಪವಿತ್ರವಾದ ಈ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯವನ್ನು ಕೇಳುವವರಿಗೆ ಯಾವಾಗಲೂ ಆಯುಷ್ಯವೂ, ಮಂಗಳವೂ ಉಂಟಾಗುವುದು. ಪಾಪವು ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗೋಕರ್ಣತೀರ್ಥಮಾಹಾತ್ಮ್ಯವರ್ಣನ" ವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ಚತುರ್ಯುಗಸ್ವರೂಪವರ್ಣನಂ

ಋಷಯ ಊಚುಃ:—

ಚತುರ್ಯುಗಸ್ವರೂಪಂತುಮಾಹಾತ್ಮ್ಯಂ ಚೈವ ಸೂತಜ ।
ಪ್ರಮಾಣಂ ವದ ಕಾರ್ತ್ಸ್ನ್ಯೇನ ಪರಂ ಕೌತೂಹಲಂ ಹಿ ನಃ ॥ ೧ ॥

ಸೂತ ಉವಾಚ:—

ಇಮಮರ್ಥಂ ಪುರಾ ಪೃಷ್ಟೋ ವಾಸವೇನ ಬೃಹಸ್ಪತಿಃ ।
ಯಥಾ ಪ್ರೋವಾಚ ವಿಪ್ರೇಂದ್ರಾಸ್ತದ್ವೋ ವಕ್ಷ್ಯಾಮಿ ಸಾಂಪ್ರತಂ ॥ ೨ ॥
ಪುರಾ ಶಕ್ರಂ ಸಮಾಸೀನಂ ಸಭಾಯಾಂ ತ್ರಿದಶೈಃ ಸಹ ।
ಸಹ ಶಚ್ಯಾ ಮಹಾತ್ಮಾನಮುಪಾಸಾಂಚಕ್ರಿರೇ ಸುರಾಃ ॥ ೩ ॥
ಗಂಧರ್ವಾಽಪ್ಸರಸಶ್ಚೈವ ಸಿದ್ಧವಿದ್ಯಾಧರಾಶ್ಚ ಯೇ ।
ಗುಹ್ಯಕಾಃ ಕಿನ್ನರಾ ದೈತ್ಯಾ ರಾಕ್ಷಸಾ ಉರಗಾಸ್ತಥಾ ॥ ೪ ॥
ಕಲಾಃ ಕಾಷ್ಠಾ ನಿಮೇಷಾಶ್ಚ ನಕ್ಷತ್ರಾಣಿ ಗ್ರಹಾಸ್ತಥಾ ।
ಸಾಂಗಾ ವೇದಾಸ್ತಥಾ ಮೂರ್ತಾಸ್ತೀರ್ಥಾನ್ಯಾಯತನಾನಿ ಚ ॥ ೫ ॥

---

## ಕನ್ನಡದ ಅನುವಾದ

### ಚತುರ್ಯುಗಸ್ವರೂಪವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಚತುರ್ಯುಗಗಳ ಸ್ವರೂಪ, ಮಾಹಾತ್ಮ್ಯ, ಪ್ರಮಾಣ ಇವುಗಳನ್ನು ಸಂಪೂರ್ಣವಾಗಿ ಹೇಳು. ನಮಗೆ ಅತ್ಯಂತ ಕುತೂಹಲವುಂಟಾಗಿದೆ.

೨. ವಿಪ್ರರೆ! ಹಿಂದೆ ಇಂದ್ರನು ಈ ವಿಷಯವಾಗಿ ಬೃಹಸ್ಪತಿಯನ್ನು ಕೇಳಲು ಅವನು ಏನನ್ನು ಹೇಳಿದನೆಂಬುದನ್ನು ನಿಮಗೀಗ ಹೇಳುವೆನು.

೩-೫. ಪೂರ್ವದಲ್ಲಿ ಇಂದ್ರನು ಶಚಿಯೊಡನೆ ಸಭೆಯಲ್ಲಿ ಕುಳಿತಿರಲು ಅವನನ್ನು ದೇವತೆಗಳೂ, ಗಂಧರ್ವರೂ, ಅಪ್ಸರೆಯರೂ, ಸಿದ್ಧರೂ, ವಿದ್ಯಾಧರರೂ, ಗುಹ್ಯಕರೂ, ಕಿನ್ನರರೂ, ದೈತ್ಯರೂ, ರಾಕ್ಷಸರೂ, ಸರ್ಪಗಳೂ, ಕಲೆಗಳೂ, ಕಾಷ್ಠಗಳೂ, ನಿಮೇಷ, ನಕ್ಷತ್ರ, ಗ್ರಹಗಳೂ, ಸಾಂಗವೇದಗಳೂ, ದೇಹಧಾರಿಗಳಾದ ತೀರ್ಥ, ದೇವಾಲಯಗಳೂ ಸೇವಿಸುತ್ತಿದ್ದರು.

ತಥಾ ಚಕ್ರುಃ ಕಥಾಶ್ಚಿತ್ರಾ ದೇವದಾನವರಕ್ಷಸಾಂ ।
ರಾಜರ್ಷೀಣಾಂ ಪುರಾಣಾನಾಂ ಬ್ರಹ್ಮರ್ಷೀಣಾಂ ವಿಶೇಷತಃ ॥ ೬ ॥
ಕಸ್ಮಿಂಶ್ಚಿದಥ ಸಂಪ್ರಾಪ್ತೇ ಪ್ರಸ್ತಾವೇ ತ್ರಿದಶೇಶ್ವರಃ ।
ಪಪ್ರಚ್ಛ ವಿನಯೋಪೇತೋ ವಿಪ್ರಶ್ರೇಷ್ಠಂ ಬೃಹಸ್ಪತಿಂ ॥ ೭ ॥
ಭಗವಂಛ್ರೋತುಮಿಚ್ಛಾಮಿ ಪ್ರಮಾಣಂ ಯುಗಸಂಭವಂ ।
ಮಾಹಾತ್ಮ್ಯಂ ಚ ಸ್ವರೂಪಂ ಚ ಯಥಾವದ್ವಕ್ತುಮರ್ಹಸಿ ॥ ೮ ॥

ಬೃಹಸ್ಪತಿರುವಾಚ :—

ಅಹಂ ತೇ ಕೀರ್ತಯಿಷ್ಯಾಮಿ ಮಾಹಾತ್ಮ್ಯಂ ಯುಗಸಂಭವಂ ।
ಯತ್ಪ್ರಮಾಣಂ ಸ್ವರೂಪಂ ಚ ಶೃಣುಷ್ವಾವಹಿತಃ ಸ್ಥಿತಃ ॥ ೯ ॥
ಅಷ್ಟಾವಿಂಶತಿಸಹಸ್ರಾಣಿ ಲಕ್ಷಾಃ ಸಪ್ತದಶೈವ ತು ।
ಪ್ರಮಾಣೇನ ಕೃತಂ ಪ್ರೋಕ್ತಂ ಯತ್ರ ಶುಕ್ಲೋ ಜನಾರ್ದನಃ ॥ ೧೦ ॥
ಚತುಷ್ಪಾದಸ್ತಥಾ ಧರ್ಮಃ ಸುಸಂಪೂರ್ಣಾ ವಸುಂಧರಾ ।
ಕಾಮಕ್ರೋಧವಿನಿರ್ಮುಕ್ತಾ ಭಯದ್ವೇಷವಿವರ್ಜಿತಾಃ ॥ ೧೧ ॥
ಜನಾಶ್ಚಿರಾಯುಷಸ್ತತ್ರ ಶಾಂತಾತ್ಮಾನೋ ಜಿತೇಂದ್ರಿಯಾಃ ।
ಪಂಚತಾಲಪ್ರಮಾಣಾಶ್ಚ ದೀಪ್ತಿಮಂತೋ ಬಹುಶ್ರುತಾಃ ॥ ೧೨ ॥

---

೬. ಹಾಗೆಯೇ ಅವರು ದೇವ, ದಾನವ, ರಾಕ್ಷಸ, ರಾಜರ್ಷಿ, ಪುರಾತನ ಬ್ರಹ್ಮರ್ಷಿಗಳ ಆಶ್ಚರ್ಯಕರವಾದ ಕಥೆಗಳನ್ನು ಹೇಳುತ್ತಿದ್ದರು.

೭–೮. ಆಗ ಒಂದಾನೊಂದು ಕಥಾಪ್ರಸಂಗವು ಒದಗಲು ಇಂದ್ರನು ವಿನಯದಿಂದ ಬ್ರಾಹ್ಮಣೋತ್ತಮನಾದ ಬೃಹಸ್ಪತಿಯನ್ನು ಹೀಗೆ ಪ್ರಶ್ನಿಸಿದನು. ಪೂಜ್ಯನೆ! ಯುಗಗಳ ಪ್ರಮಾಣ, ಮಾಹಾತ್ಮ್ಯ, ಸ್ವರೂಪ ಇವುಗಳನ್ನು ಯಥಾರ್ಥವಾಗಿ ಕೇಳಬಯಸುವೆನು.

೯. ಬೃಹಸ್ಪತಿಯು ಹೇಳುತ್ತಾನೆ:—ನಾನು ನಿನಗೆ ಯುಗದ ಪ್ರಮಾಣ, ಮಾಹಾತ್ಮ್ಯ, ಸ್ವರೂಪ ಇವುಗಳನ್ನು ಹೇಳುವೆನು. ಅದನ್ನು ಸಾವಧಾನ ಮನಸ್ಸಿನಿಂದ ಕೇಳು.

೧೦. ಕೃತಯುಗವು ಹದಿನೇಳುಲಕ್ಷದ ಇಪ್ಪತ್ತೆಂಟುಸಾವಿರ ವರ್ಷ ಪ್ರಮಾಣವುಳ್ಳುದು. ಇದರಲ್ಲಿ ಜನಾರ್ದನನು ಶುಕ್ಲವರ್ಣನಾಗಿರುವನು.

೧೧–೧೨. ಆಗ ಧರ್ಮವು ನಾಲ್ಕು ಪಾದಗಳಿಂದ ನೆಲೆಸಿರುವುದು. ಭೂಮಿಯು ಸಂಪೂರ್ಣವಾಗಿರುವುದು. ಜನರು ಕಾಮಕ್ರೋಧರಹಿತರೂ, ಭಯ ದ್ವೇಷವಿಲ್ಲದವರೂ, ಚಿರಂಜೀವಿಗಳೂ, ಶಾಂತಮನಸ್ಕರೂ, ಜಿತೇಂದ್ರಿಯರೂ, ಐದು ತಾಳೆಮರದಷ್ಟು ಪ್ರಮಾಣವುಳ್ಳವರೂ, ಕಾಂತಿಯುಳ್ಳವರೂ, ಬಹುವಾಗಿ ಶಾಸ್ತ್ರವನ್ನು ಓದಿದವರೂ ಆಗಿರುವರು.

ತತ್ರ ಷೋಡಶ ಸಾಹಸ್ರಂ ಬಾಲತ್ವಂ ಜಾಯತೇ ನೃಣಾಂ ।
ತತಶ್ಚ ಯೌವನಂ ಪ್ರೋಕ್ತಂ ದ್ವಾತ್ರಿಂಶದ್ಯಾವದೇವ ಹಿ ॥ ೧೩ ॥
ತತಃ ಪರಂ ಚ ವಾರ್ಧಕ್ಯಂ ಶನೈಃ ಸಂಜಾಯತೇ ನೃಣಾಂ ।
ಲಕ್ಷಾಂತೇ ಪರಮಂ ಯಾವದನ್ಯೇಷಾಮಧಿಕಂ ಕ್ವಚಿತ್ ॥ ೧೪ ॥
ತತ್ರ ಸತ್ವಾಶ್ಚ ಯೇ ಕೇಚಿತ್ಪಶವಃ ಪಕ್ಷಿಣೋ ಮೃಗಾಃ ।
ದೇವೀಂ ವಾಚಂ ಪ್ರಜಲ್ಪಂತೇ ನ ವಿರೋಧಂ ವ್ರಜಂತಿ ಚ ॥ ೧೫ ॥
ಕ್ರೀಡಂತಿ ನಕುಲೈಃ ಸರ್ಪಾ ಬಿಡಾಲಾ ಮೂಷಕೈಃ ಸಮಂ ।
ಪಂಚಾನನೈರ್ಮೃಗಾ ನಿತ್ಯಮುಲೂಕಾಶ್ಚಾಽಪಿ ವಾಯಸೈಃ ॥ ೧೬ ॥
ಅಕೃಷ್ಟಾಚ ಮಹೀ ಸಸ್ಯಂ ಜನಯತ್ಯತಿ ಭೂರಿಶಃ ।
ವ್ರೀಹಿಮುದ್ಗಯವ ಪ್ರಾಯಂ ಸುಸ್ವಾದು ಬಲವೃದ್ಧಿದಂ ॥ ೧೭ ॥
ಸರ್ವರ್ತುಫಲಿನೋ ವೃಕ್ಷಾಃ ಸಪುಷ್ಪ ಫಲಧಾರಿಣಃ ।
ಸುಪತ್ರಾಃ ಕಂಟಕೈರ್ಹೀನಾಃ ಕಲ್ಪಪಾದಪಸನ್ನಿಭಾಃ ॥ ೧೮ ॥
ಧೇನವಶ್ಚ ಪ್ರಯಚ್ಛಂತಿ ವಾಂಛಿತಂ ಸ್ವಾದು ಸತ್ಪಯಃ ।
ಸರ್ವೇಷ್ವಪಿ ಹಿ ಕಾಲೇಷು ಭೂರಿಸರ್ಪಿಃ ಪ್ರದಂ ನೃಣಾಂ ॥ ೧೯ ॥

---

೧೩–೧೪. ಆ ಕೃತಯುಗದಲ್ಲಿ ಮಾನವರಿಗೆ ಹದಿನಾರು ಸಾವಿರ ವರ್ಷಕಾಲ ಬಾಲ್ಯವೂ, ಮೂವತ್ತೆರಡುಸಾವಿರವರ್ಷಕಾಲ ಯೌವನವೂ, ಅನಂತರ ಒಂದು ಲಕ್ಷ ವರ್ಷಗಳಕಾಲ ಮುಪ್ಪು ಉಂಟಾಗುವುದು. ಇನ್ನು ಇತರರು ಅಧಿಕವಾದ ಆಯುಸ್ಸುಳ್ಳವರಾಗಿರುವರು.

೧೫. ಆ ಯುಗದಲ್ಲಿ ಕೆಲವು ಪಶು, ಪಕ್ಷಿ, ಮೃಗಗಳು ದೇವವಾಣಿಯನ್ನು ಉಚ್ಚರಿಸುವುವು. ಪರಸ್ಪರ ವಿರೋಧಗೊಳ್ಳುವುದಿಲ್ಲ.

೧೬. ಸರ್ಪಗಳು ಮುಂಗಸಿಗಳೊಡನೆಯೂ, ಬೆಕ್ಕುಗಳು ಇಲಿಗಳೊಡನೆಯೂ, ಜಿಂಕೆಗಳು ಸಿಂಹಗಳೊಡನೆಯೂ, ಗೂಬೆಗಳು ಕಾಗೆಗಳೊಡನೆಯೂ ಆಡುತ್ತಿರುವುವು.

೧೭. ಭೂಮಿಯು ಉಳದಿದ್ದರೂ ರುಚಿಕರವೂ, ಬಲವನ್ನು ಹೆಚ್ಚಿಸುವುವೂ, ಭತ್ತ, ಹೆಸರು, ಯವಗಳೇ ಹೆಚ್ಚಾಗಿರುವುವೂ ಆದ ಸಸ್ಯವನ್ನು ಉಂಟುಮಾಡುವುದು.

೧೮. ಮರಗಳು ಎಲ್ಲ ಋತುಗಳಲ್ಲಿ ಫಲಿಸುವುವೂ, ಪುಷ್ಪಫಲಗಳನ್ನು ಧರಿಸುವುವೂ, ಒಳ್ಳೆಯ ಎಲೆಗಳುಳ್ಳುವೂ, ಮುಳ್ಳುಗಳಿಲ್ಲದುವೂ, ಕಲ್ಪವೃಕ್ಷಕ್ಕೆ ಸಮಾನಗಳೂ ಆಗುವುವು.

೧೯. ಧೇನುಗಳು ಎಲ್ಲ ಕಾಲಗಳಲ್ಲಿಯೂ ಇಷ್ಟವೂ, ರುಚಿಕರವೂ, ಬಹುವಾಗಿ ತುಪ್ಪವನ್ನು ಕೊಡುವುದೂ ಆದ ಒಳ್ಳೆಯ ಹಾಲನ್ನು ಕೊಡುವುವು.

ನ ತತ್ರ ವಿಧವಾ ನಾರೀ ಜಾಯತೇ ನ ಚ ದುರ್ಭಗಾ ।
ಕಾಕವಂಧ್ಯಾ ಸುತೈರ್ಹೀನಾ ನ ಚ ಶೀಲವಿವರ್ಜಿತಾಃ ॥ ೨೦ ॥
ಯಥಾ ಜನ್ಮ ತಥಾ ಮೃತ್ಯುಃ ಕ್ರಮಾತ್ಸಂಜಾಯತೇ ನೃಣಾಂ ।
ನ ವೀಕ್ಷತೇ ಪಿತಾ ಪುತ್ರಂ ಮೃತಂ ಕ್ವಾಽಪಿ ಕದಾಚನ ॥ ೨೧ ॥
ನ ಪ್ರೇತತ್ವಂ ಚ ಲೋಕಾನಾಂ ಮೃತಾನಾಂ ತತ್ರ ಜಾಯತೇ ।
ನಚಾಽಪಿ ನರಕೇ ವಾಸೋ ನ ಚ ರೋಗವ್ಯಥಾ ಕ್ವಚಿತ್ ॥ ೨೨ ॥
ವೇದಾಂತಗಾ ದ್ವಿಜಾಃ ಸರ್ವೇ ನಿತ್ಯಂ ಸ್ವಾಧ್ಯಾಯಶೀಲಿನಃ ।
ವೇದವ್ಯಾಖ್ಯಾನಸಂಹೃಷ್ಟಾಃ ಬ್ರಹ್ಮಜ್ಞಾನವಿಚಕ್ಷಣಾಃ ॥ ೨೩ ॥
ಕ್ಷತ್ರಿಯಾಶ್ಚಾಽಪಿ ಭೂಪಾಲಮೇಕಂ ಕೃತ್ವಾ ಸುಭಕ್ತಿತಃ ।
ತದಾದೇಶಾತ್ಪ್ರಭುಂಜಂತಿ ಮಹೀಂ ಧರ್ಮೇಣ ನಿತ್ಯಶಃ ॥ ೨೪ ॥
ವೈಶ್ಯಾ ವೈಶ್ಯಜನಾರ್ಹಾಣಿ ಚಕ್ರುಃ ಕರ್ಮಾಣಿ ಭೂರಿಶಃ ।
ಪಶುಪಾಲನಪೂರ್ವಾಣಿ ಕ್ರಯವಿಕ್ರಯಜಾನಿ ಚ ॥ ೨೫ ॥
ಮುಕ್ತ್ವೈತಾಂ ದ್ವಿಜಶುಶ್ರೂಷಾಂ ನ ಶೂದ್ರಾಸ್ತತ್ರ ಚಕ್ರಿರೇ ।
ಕಿಂಚಿತ್ಕರ್ಮ ಸುರಶ್ರೇಷ್ಠ ಶ್ರದ್ಧಯಾ ಪರಯಾ ಯುತಾಃ ॥ ೨೬ ॥
ನ ತತ್ರ ಚಾಂತ್ಯಜೋ ಜಜ್ಞೇ ನ ಚ ಸಂಕರಸಂಭವಃ ।
ನಾಽಪವಿತ್ರೋ ನ ವರ್ಣಾನಾಂ ಪಂಚಮೋ ದೃಶ್ಯತೇ ಭುವಿ ॥ ೨೭ ॥

---

೨೦. ಆ ಕೃತಯುಗದಲ್ಲಿ ನಾರಿಯು ವಿಧವೆಯೂ, ದುರ್ಭಗಳೂ, ಬಂಜೆಯೂ, ಪುತ್ರಹೀನಳೂ, ಶೀಲವಿಲ್ಲದವಳೂ ಆಗುವುದಿಲ್ಲ.

೨೧. ಮಾನವರಿಗೆ ಹುಟ್ಟಿದಂತೆಯೇ ಮರಣವೂ ಕ್ರಮವಾಗಿ ಸಂಭವಿಸುವುದು. ತಂದೆಯು ಒಂದು ವೇಳೆಯೂ ಮೃತನಾದ ಪುತ್ರನನ್ನು ಕಾಣುವುದಿಲ್ಲ.

೨೨. ಮೃತರಾದ ಮಾನವರಿಗೆ ಪ್ರೇತತ್ವವುಂಟಾಗುವುದಿಲ್ಲ. ನರಕ ವ್ಯಥೆಯೂ, ರೋಗಪೀಡೆಯೂ, ಸಂಭವಿಸುವುದಿಲ್ಲ.

೨೩. ಬ್ರಾಹ್ಮಣರೆಲ್ಲರೂ ವೇದಾನ್ತಜ್ಞರೂ, ವೇದಾಧ್ಯಯನ ಸಂಪನ್ನರೂ, ವೇದ ವ್ಯಾಖ್ಯಾನದಿಂದ ಆನಂದಗೊಂಡವರೂ, ಬ್ರಹ್ಮಜ್ಞಾನಕುಶಲರೂ ಆಗುವರು.

೨೪. ಕ್ಷತ್ರಿಯರೆಲ್ಲರೂ ಒಬ್ಬ ರಾಜನನ್ನು ನೇಮಿಸಿಕೊಂಡು ಭಕ್ತಿಯಿಂದ ಅವನ ಅಪ್ಪಣೆಯನ್ನನುಸರಿಸಿ ಭೂಮಿಯನ್ನು ಧರ್ಮದಿಂದ ಆಳುವರು.

೨೫. ವೈಶ್ಯರು ವೈಶ್ಯರಿಗರ್ಹವಾದ ಪಶುಪಾಲನ, ಕ್ರಯವಿಕ್ರಯ ಮೊದಲಾದ ಕಾರ್ಯಗಳನ್ನು ಮಾಡುವರು.

೨೬. ಸುರವರ್ಯನೆ! ಶೂದ್ರರು ಬ್ರಾಹ್ಮಣಸೇವೆಯನ್ನು ಬಿಟ್ಟು ಇತರ ಯಾವ ಕಾರ್ಯವನ್ನೂ ಅತಿ ಶ್ರದ್ಧೆಯಿಂದ ಮಾಡುವುದಿಲ್ಲ.

೨೭. ಆ ಯುಗದಲ್ಲಿ ಅಂತ್ಯಜನೂ, ಸಂಕರಜಾತನೂ, ಅಶುದ್ಧನೂ, ಪಂಚಮವರ್ಣದವನೂ ಇರುವುದಿಲ್ಲ.

ಯಜನಂ ಯಾಜನಂ ದಾನಂ ವ್ರತಂ ನಿಯಮ ಏವ ಚ ।
ತೀರ್ಥಯಾತ್ರಾಂ ನರಾಸ್ತತ್ರ ನಿಷ್ಕಾಮಾ ಏವ ಕುರ್ವತೇ ॥ ೨೮ ॥
ಏವಂ ವಿಧಂ ಸಹಸ್ರಾಕ್ಷ ಮಯಾ ತೇ ಪರಿಕೀರ್ತಿತಂ ।
ಆದ್ಯಂ ಕೃತಯುಗಂ ಪುಣ್ಯಂ ಸರ್ವಲೋಕಸುಖಾವಹಂ ॥ ೨೯ ॥
ತತಸ್ತ್ರೇತಾಯುಗಂ ನಾಮ ದ್ವಿತೀಯಂ ಸಂಪ್ರವರ್ತತೇ ।
ವರ್ಷಾಣಾಂ ಷಣ್ಣವತ್ಯಾಢ್ಯಾ ಲಕ್ಷಾದ್ವಾದಶ ಸಂಖ್ಯಯಾ ॥ ೩೦ ॥
ಸೋಽಪಿ ಸಾಕ್ಷಾಜ್ಜಗನ್ನಾಥಃ ಶ್ವೇತದ್ವೀಪಾಶ್ರಯಾಶ್ರಿತಃ ।
ತತ್ರ ರಕ್ತತ್ವಮಾಯಾತಿ ಭಗವಾನ್ ಗರುಡಧ್ವಜಃ ॥ ೩೧ ॥
ತ್ರಿಪಾದಸ್ತತ್ರ ಧರ್ಮಃ ಸ್ಯಾತ್ಪಾದೇನೈಕೇನಪಾತಕಂ ।
ತೇನಾಽಪಿ ಜಾಯತೇ ಸ್ಪರ್ಧಾ ವರ್ಣಾನಾಮಿತರೇತರಂ ॥ ೩೨ ॥
ತತಃ ಫಲಾನಿ ವಾಂಛಂತಿ ತೀರ್ಥಯಾತ್ರೋದ್ಭವಾನಿ ತೇ ।
ವ್ರತಾನಾಂ ನಿಯಮಾನಾಂ ಚ ಸ್ವರ್ಗವಾಸಾದಿಹೇತವಃ ॥ ೩೩ ॥
ತತಃ ಕಾಮವಶಾನ್ಮೋಹಂ ಸರ್ವೇ ಗಚ್ಛಂತಿ ಮಾನವಾಃ ।
ಮೋಹಾದ್ದ್ರೋಹಂ ತತೋ ಗತ್ವಾ ಪಾಪಂ ಕುರ್ವಂತ್ಯನುಕ್ರಮಾತ್ ॥ ೩೪ ॥
ತತಸ್ತು ರೌರವಾದೀನಿ ನರಕಾಣಿ ಯಮಃ ಸ್ವಯಂ ।
ಸಜ್ಜೀಕರೋತಿ ದೇವೇಂದ್ರ ಹ್ಯೇಕವಿಂಶತಿಸಂಖ್ಯಯಾ ॥ ೩೫ ॥

---

೨೮. ನರರು ಯಜನ, ಯಾಜನ, ದಾನ, ವ್ರತ, ನಿಯಮ, ತೀರ್ಥಯಾತ್ರೆಗಳನ್ನು ನಿಷ್ಕಾಮರಾಗಿ ಮಾಡುವರು.

೨೯. ಅಯ್ಯಾ ಇಂದ್ರನೆ! ನಾನು ನಿನಗೆ ಸಕಲಲೋಕಗಳಿಗೆ ಸುಖವನ್ನುಂಟು ಮಾಡುವ ಪುಣ್ಯಕರವಾದ ಮೊದಲನೆಯ ಕೃತಯುಗವನ್ನು ಹೇಳಿದ್ದೇನೆ.

೩೦. ಅನಂತರ ಹನ್ನೆರಡು ಲಕ್ಷದ ತ್ತೊಂಬತ್ತಾರು ಸಾವಿರ ವರ್ಷಕಾಲ ಪರಿಮಾಣದ ಎರಡನೆಯ ತ್ರೇತಾಯುಗವುಂಟಾಗುವುದು.

೩೧—೩೨. ಆ ಯುಗದಲ್ಲಿ ಪೂಜ್ಯನಾದ ವಿಷ್ಣುವು ರಕ್ತವರ್ಣನಾಗಿ ಶ್ವೇತ ದ್ವೀಪದಲ್ಲಿರುತ್ತಾನೆ. ಧರ್ಮವು ಮೂರು ಪಾದಗಳಿಂದಲೂ, ಪಾಪವು ಒಂದು ಪಾದದಿಂದಲೂ ಇರುವುದು. ಅದರಿಂದ ಚಾತುರ್ವರ್ಣ್ಯದವರಲ್ಲಿ ಪರಸ್ಪರ ಸ್ಪರ್ಧೆಯುಂಟಾಗುವುದು.

೩೩. ಅದರಿಂದವರು ಸ್ವರ್ಗವಾಸಾದಿಗಳಿಗೆ ಕಾರಣಗಳಾದ ತೀರ್ಥಯಾತ್ರೆ, ವ್ರತ, ನಿಯಮಗಳ ಫಲಗಳನ್ನು ಬಯಸುವರು.

೩೪. ಅನಂತರ ಕಾಮವಶದಿಂದ ಮೋಹವನ್ನೂ, ಮೋಹದಿಂದ ದ್ರೋಹ ವನ್ನೂ, ಅದರಿಂದ ಪಾಪವನ್ನೂ ಕ್ರಮವಾಗಿ ಹೊಂದುವರು.

೩೫. ಆದರಿಂದ ಯಮನು ರೌರವವೇ ಮೊದಲಾದ ಇಪ್ಪತ್ತೊಂದು ನರಕ ಗಳನ್ನು ಸಿದ್ಧಗೊಳಿಸುವನು.

ಕರ್ಮಾನುಸಾರತಸ್ತಾನಿ ಸೇವಯಂತಿ ನರಾಽಧಮಾಃ ।
ಕೇಚಿದನ್ಯೇ ಮಹೇಂದ್ರಾದಿಲೋಕಾನ್ಮೋಕ್ಷಂ ತಥಾ ಪರೇ ॥ ೩೬ ॥
ತ್ರಿವಿಧಾಃ ಪುರುಷಾಸ್ತತ್ರ ಶ್ರೇಷ್ಠಾಶ್ಚಾಽಧಮ ಮಧ್ಯಮಾಃ ।
ತ್ರಿವಿಧಾನಿ ಚ ಕರ್ಮಾಣಿ ಪ್ರಕುರ್ವಂತಿ ಸುರೇಶ್ವರ ॥ ೩೭ ॥
ಉನ್ನತಾಸ್ತಾಲಮಾತ್ರೇಣ ತೇಜೋವೀರ್ಯಸಮನ್ವಿತಾಃ ।
ಚಕ್ರುಶ್ಚ ಕೃಷಿಕರ್ಮಾಣಿ ವೈಶ್ಯಾಶ್ಚೈವಾಽನ್ನಲಿಪ್ಸಯಾ ॥ ೩೮ ॥
ಉಪ್ತಕ್ಷೇತ್ರಂ ಸಕೃಚ್ಚಾಽಪಿ ಸಪ್ತವಾರಂ ಲುನಂತಿ ತೇ ।
ಯಥರ್ತು ಫಲಿನೋ ವೃಕ್ಷಾ ಯಥರ್ತು ಕುಸುಮಾನ್ವಿತಾಃ ॥ ೩೯ ॥
ಯಥರ್ತು ಪತ್ರಸಂಯುಕ್ತಾಸ್ತತ್ರ ಸ್ಯುಃ ಸುಮನೋಹರಾಃ ।
ಅಗ್ನಿಷ್ಟೋಮಾದಿಕಾ ಯಜ್ಞಾಃ ಪ್ರವರ್ತಂತೇ ಸಹಸ್ರಶಃ ॥ ೪೦ ॥
ಇತರೇತರಸಂಸ್ಪರ್ಧೈಃ ಕ್ರಿಯಮಾಣಾ ನೃಪೋತ್ತಮೈಃ ।
ಬ್ರಾಹ್ಮಣೈಶ್ಚ ಸುರಶ್ರೇಷ್ಠ ಸ್ವರ್ಗಲೋಕಮಭೀಪ್ಸುಭಿಃ ॥ ೪೧ ॥
ತೀರ್ಥಯಾತ್ರಾಂ ವ್ರತಂ ದಾನಂ ನಿಯಮಂ ಸಂಯಮಂ ತಥಾ ।
ಪರಲೋಕಮಭೀಪ್ಸಂತಸ್ತತ್ರ ಕುರ್ವಂತಿ ಮಾನವಾಃ ॥ ೪೨ ॥
ಸಹಸ್ರೇಣ ತು ವರ್ಷಾಣಾಂ ತತ್ರ ಸ್ಯಾದ್ಯೌವನಂ ನೃಣಾಂ ।
ಸಹಸ್ರಪಂಚಕಂ ಯಾವದೂರ್ಧ್ವಂ ವಾರ್ಧಿಕಮುಚ್ಯತೇ ॥ ೪೩ ॥

---

೩೬. ನೀಚಮಾನವರು ಅವುಗಳನ್ನು ತಮ್ಮ ಕರ್ಮಾನುಸಾರವಾಗಿ ಸೇವಿಸುವರು. ಕೆಲವರು ಇಂದ್ರಲೋಕಾದಿಗಳನ್ನೂ, ಇತರರು ಮೋಕ್ಷವನ್ನೂ ಸೇರುವರು.

೩೭. ಸುರೇಂದ್ರ! ಉತ್ತಮ, ಮಧ್ಯಮ, ಅಧಮರೆಂಬ ತ್ರಿವಿಧ ಮಾನವರು ತ್ರಿವಿಧ ಕರ್ಮಗಳನ್ನು ಆಚರಿಸುವರು.

೩೮. ತಾಳೆ ಮರದಷ್ಟು ಉನ್ನತರೂ, ತೇಜೋ ವೀರ್ಯಗಳಿಂದ ಕೂಡಿದವರೂ ಆದ ವೈಶ್ಯರು ಅನ್ನಕ್ಕಾಗಿ ಕೃಷಿಕರ್ಮಗಳನ್ನು ಮಾಡುವರು.

೩೯–೪೧. ಅವರು ಒಂದುಸಾರಿ ಉತ್ತಭೂಮಿಯಲ್ಲಿ ಏಳುಸಾರಿ ಸಸ್ಯಗಳನ್ನು ಬೆಳೆಯುವರು. ವೃಕ್ಷಗಳು ಋತುವನ್ನನುಸರಿಸಿ ಫಲಪುಷ್ಪಗಳನ್ನು ಬಿಡುವುವು. ಎಲೆಗಳಿಂದ ಮನೋಹರವಾಗಿರುವುವು. ಪರಸ್ಪರ ಸ್ಪರ್ಧಿಸುವ ರಾಜರೂ, ಸ್ವರ್ಗವನ್ನನುಭವಿಸಲಿಚ್ಛಿಸುವ ಬ್ರಾಹ್ಮಣರೂ ಅಗ್ನಿಷ್ಟೋಮ ಮೊದಲಾದ ಅನೇಕ ಯಜ್ಞಗಳನ್ನು ಮಾಡುವರು.

೪೨. ನರರು ಪರಲೋಕೇಚ್ಛೆಯಿಂದ ತೀರ್ಥಯಾತ್ರೆ, ವ್ರತ, ದಾನ, ನಿಯಮ, ಸಂಯಮಗಳನ್ನು ಮಾಡುವರು.

೪೩. ಆ ಯುಗದಲ್ಲಿ ಮಾನವರಿಗೆ ಸಾವಿರವರ್ಷಕಾಲ ಯೌವನವೂ, ಐದುಸಾವಿರ ವರ್ಷಕಾಲ ಮುಪ್ಪೂ ಇರುವುದು.

ರಜಕಶ್ಚರ್ಮಕಾರಶ್ಚ ನಟೋ ಬುರುಡ ಏವ ಚ ।
ಕೈವರ್ತಮೇದಭಿಲ್ಲಾಶ್ಚ ಚಂಡಾಲಾಃ ಶೂದ್ರಮಾನವಾಃ ॥ ೪೪ ॥
ಸಂಭವಂತಿ ಯುಗೇ ತಸ್ಮಿನ್ಯೋನಿಸಂಸರ್ಗತೋ ವಿಭೋ ।
ತಥಾಽನ್ಯೇ ಸಂಖ್ಯಯಾ ಹೀನಾ ಏತೇಭ್ಯೋ ನಿಂದಿತಾ ನರಾಃ ॥ ೪೫ ॥

ಇಂದ್ರ ಉವಾಚ :—

ಉತ್ಪತ್ತಿಃ ಕಥಮೇತೇಷಾಮಂತ್ಯಜಾನಾಂ ದ್ವಿಜೋತ್ತಮ ।
ಯಥಾವದ್ವದ ಕಾರ್ತ್ಸ್ನ್ಯೇನ ಅತ್ರ ಕೌತೂಹಲಂ ಮಹತ್ ॥ ೪೬ ॥

ಬೃಹಸ್ಪತಿರುವಾಚ :—

ಏತೇಷಾಮಷ್ಟಧಾ ಸೃಷ್ಟಿರ್ಜಾಯತೇಂತ್ಯಜ ಸಂಭವಾ ।
ಯೋನಿದೋಷಾತ್ಸುರಶ್ರೇಷ್ಠ ಜಾತೇರ್ವಕ್ಷ್ಯಾಮ್ಯಹಂ ಸ್ಫುಟಂ ॥ ೪೭ ॥
ಬ್ರಾಹ್ಮಣ್ಯಾಂ ಕ್ಷತ್ರಿಯಾಜ್ಜಾತಃ ಸೂತ ಇತ್ಯಭಿಧೀಯತೇ ।
ಸೂತೇನ ರಜಕಶ್ಚೈವ ರಜಕೇನ ಚ ಚರ್ಮಕೃತ್ ॥ ೪೮ ॥
ಚರ್ಮಕಾರೇಣ ಸಂಜಜ್ಞೇ ನರಶ್ಚಾಂತ್ಯಜ ಸಂಜ್ಞಕಃ ।
ಚತ್ವಾರಃ ಕ್ಷೇತ್ರಸಂಭೂತಾ ಏತೇ ಕ್ಷೇತ್ರೇ ದ್ವಿಜನ್ಮನಾಂ ॥ ೪೯ ॥
ತಥಾ ಚ ಮಾಗಧೋ ಜಜ್ಞೇ ವೈಶ್ಯೇನ ದ್ವಿಜಸಂಭವೇ ।
ಕ್ಷೇತ್ರೇ ಮಾಗಧವೀರ್ಯೇಣ ಬುರುಡೋ ಮರುದುತ್ತಮ ॥ ೫೦ ॥

---

೪೪-೪೫. ರಜಕ, ಚರ್ಮಕಾರ, ನಟ, ಬುರುಡ, ಬೆಸ್ತ, ಬಿಲ್ಲ, ಚಂಡಾಲ ಇವರೂ, ಇವರಿಗಿಂತ ಹೀನರಾದ ಇತರ ಅನೇಕ ಜಾತಿಯ ನಿಂದ್ಯ ಮನುಷ್ಯರೂ ಜಾತಿಸಾಂಕರ್ಯದಿಂದ ಸಂಭವಿಸುವರು.

೪೬. ಇಂದ್ರನು ಹೇಳುತ್ತಾನೆ:— ದ್ವಿಜವರ್ಯನೆ! ಈ ಅಂತ್ಯಜರು ಹೇಗೆ ಹುಟ್ಟಿದರು? ಯಥಾರ್ಥವಾಗಿ ನಮಗೆ ಹೇಳು. ಬಹಳ ಕುತೂಹಲ ವುಂಟಾಗಿದೆ.

೪೭. ಬೃಹಸ್ಪತಿಯು ಹೇಳುತ್ತಾನೆ:—ಯೋನಿದೋಷದಿಂದ ಈ ಅಂತ್ಯಜರ ಸೃಷ್ಟಿಯು ಎಂಟು ವಿಧವಾಗಿ ಆಗುವುದು. ಇದನ್ನು ಸ್ಪಷ್ಟವಾಗಿ ಹೇಳುವೆನು.

೪೮-೪೯. ಕ್ಷತ್ರಿಯನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದವನು ಸೂತನೂ, ಸೂತನಿಂದ ಹುಟ್ಟಿದವನು ಅಗಸನೂ, ಅಗಸನಿಂದ ಜನಿಸಿದವನು ಚರ್ಮಕಾರನೂ, ಚರ್ಮಕಾರನಿಂದ ಹುಟ್ಟಿದವನು ಅಂತ್ಯಜನೂ ಆಗುವನು. ಈ ನಾಲ್ವರೂ ಬ್ರಾಹ್ಮಣ ಸ್ತ್ರೀಯರಲ್ಲಿ ಜನಿಸಿದರೆ ಈ ಹೆಸರನ್ನು ಪಡೆಯುವರು.

೫೦. ವೈಶ್ಯನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಜನಿಸಿದವನು ಮಾಗಧನೂ, ಮಾಗಧನಿಂದ ಜನಿಸಿದವನು ಬುರುಡನೂ ಆಗುವನು.

ಬುರುಡೇನ ಚ ಕೈವರ್ತಃ ಕೈವರ್ತೇನ ಚ ಮೇದಕಃ ।
ಚತ್ವಾರೋ ವೈಶ್ಯಸಂಭೂತಾ ಏತೇ ಕ್ಷೇತ್ರೇ ದ್ವಿಜನ್ಮನಾಂ ।
ಪ್ರಜಾಯಂತೇ ಸುರಶ್ರೇಷ್ಠ ಸರ್ವಕರ್ಮಸು ಗರ್ಹಿತಾಃ ॥ ೫೧ ॥
ತಥಾ ಶೂದ್ರೇಣ ಸಂಜಜ್ಞೇ ಬ್ರಾಹ್ಮಣ್ಯಾಂ ಸುರಸತ್ತಮ ।
ಭಿಲ್ಲಾಖ್ಯಶ್ಚಾಽಪಿ ಭಿಲ್ಲೇನ ಚಂಡಾಲಶ್ಚ ಪ್ರಜಾಯತೇ ॥ ೫೨ ॥
ಏತೌ ದ್ವಾವಪಿ ಶೂದ್ರೇಣ ಭವತೋ ದ್ವಿಜಸಂಭವೇ ।
ಕ್ಷೇತ್ರೇ ಸರ್ವ ಸುರಾಽಧೀಶ ಸತ್ಯಮೇತನ್ಮಯೋದಿತಂ ॥ ೫೩ ॥
ಏತತ್ತ್ರೇತಾಯುಗೇ ಪ್ರೋಕ್ತಂ ಮಯಾ ತೇ ಸುರಸತ್ತಮ ।
ಆಕರ್ಣಯ ಪ್ರಯತ್ನೇನ ದ್ವಾಪರಸ್ಯಾಽಧುನಾ ಸ್ಥಿತಿಂ ॥ ೫೪ ॥
ಲಕ್ಷಾಷ್ಟಕ ಪ್ರಮಾಣೇನ ತದ್ಯುಗಂ ಪರಿಕೀರ್ತಿತಂ ।
ಚತುಃ ಷಷ್ಟಿ ಸಹಸ್ರಾಣಿ ವರ್ಷಾಣಾಂ ಪರಿಸಂಖ್ಯಯಾ ।
ಕಪಿಲೋ ಜಾಯತೇ ತತ್ರ ಭಗವಾನ್ ಗರುಡಧ್ವಜಃ ॥ ೫೫ ॥
ದ್ವೌ ಪಾದೌ ಚೈವ ಧರ್ಮಸ್ಯ ದ್ವೌಪಾಪಸ್ಯ ವ್ಯವಸ್ಥಿತೌ ।
ತತ್ರ ಸ್ಯಾದ್ಯೌವನಂ ನೄಣಾಂ ಗತೇ ವರ್ಷಶತೇಽಖಿಲೇ ॥ ೫೬ ॥
ತತೋಽನ್ಯೈಃ ಸಮತಿಕ್ರಾಂತೈರ್ವಾರ್ಧಕ್ಯಂ ಪಂಚಭಿಃ ಶತೈಃ ।
ತತ್ರ ಸತ್ಯಾನೃತಾ ಲೋಕಾ ದೇವಾ ಭೂಪಾಸ್ತಥಾಪರೇ ॥ ೫೭ ॥

---

೫೧. ಬುರುಡನಿಂದ ಬೆಸ್ತನೂ, ಬೆಸ್ತನಿಂದ ಮೇದಕನೂ ಹುಟ್ಟುವನು. ವೈಶ್ಯನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಜನಿಸಿದ ಈ ನಾಲ್ವರೂ ಸಕಲ ಕರ್ಮಗಳಲ್ಲಿ ನಿಂದ್ಯರಾಗುವರು.

೫೨. ಹಾಗೆಯೇ ಶೂದ್ರನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಭಿಲ್ಲನೂ, ಭಿಲ್ಲನಿಂದ ಚಂಡಾಲನೂ ಹುಟ್ಟುವನು.

೫೩. ಇವರಿಬ್ಬರೂ ಶೂದ್ರನಿಂದ ಬ್ರಾಹ್ಮಣಿಯಲ್ಲಿ ಜನಿಸುವರು. ನಾನು ಹೇಳಿರುವ ಈ ಮಾತು ನಿಜ.

೫೪. ಮಹೇಂದ್ರ! ನಾನು ತ್ರೇತಾಯುಗದ ವಿಷಯವನ್ನು ಹೇಳಿರುವೆನು. ಈಗ ದ್ವಾಪರಯುಗದ ಸ್ಥಿತಿಯನ್ನು ಕೇಳು.

೫೫. ಆ ಯುಗವು ಎಂಟುಲಕ್ಷದ ಅರುವತ್ತನಾಲ್ಕು ಸಾವಿರವರ್ಷ ಪರಿಮಿತವಾಗಿರುವುದು. ಅದರಲ್ಲಿ ಪೂಜ್ಯನಾದ ವಿಷ್ಣುವು ಹಳದಿ ಬಣ್ಣದವನಾಗುವನು.

೫೬—೫೭. ಧರ್ಮವು ಎರಡು ಪಾದಗಳಿಂದಲೂ, ಪಾಪವು ಎರಡು ಪಾದಗಳಿಂದಲೂ ಇರುವುವು. ನೂರು ವರ್ಷಗಳ ನಂತರ ಯೌವನವು ಆರಂಭವಾಗಿ ಐನೂರು ವರ್ಷಗಳ ತರುವಾಯ ಮುಪ್ಪು ಬರುವುದು. ಜನರೂ, ದೇವತೆಗಳೂ, ರಾಜರೂ ಸತ್ಯ ಮತ್ತು ಸುಳ್ಳುಗಳನ್ನು ಸಮಸಮವಾಗಿ ಆಡುವರು.

ನಾರ್ಯಶ್ಚಾಽಪಿ ಸುರಶ್ರೇಷ್ಠ ತತ್ಸ್ವರೂಪಾಃ ಪ್ರಕೀರ್ತಿತಾಃ ।
ಪಂಚಹಸ್ತ ಪ್ರಮಾಣೇನ ಚತುರ್ಹಸ್ತಾಸ್ತಥಾಪರೇ ॥ ೫೮ ॥
ನಾಽತಿ ರೂಪೇಣ ಸಂಯುಕ್ತಾ ನ ಚ ರೂಪವಿವರ್ಜಿತಾಃ ॥
ಅವ್ಯಕ್ತಜಲ್ಪಕಾಶ್ಚಾಽಪಿ ಪಶವಃ ಪಕ್ಷಿಣೋ ಮೃಗಾಃ ॥ ೫೯ ॥
ನಾಽತಿಪುಷ್ಪಫಲೈರ್ಯುಕ್ತಾ ವೃಕ್ಷಾಶ್ಚಾಽಪಿ ಸುರೇಶ್ವರ ।
ಸಸ್ಯಾನಿ ತಾನಿ ಜಾಯಂತೇ ತತ್ರ ಚೋಪ್ತಾನಿ ಕರ್ಷಕೈಃ ॥ ೬೦ ॥
ವರ್ಷಂತಿ ಜಲದಾಃ ಕಾಮಂ ಭವಂತ್ಯೋಷಧಯೋಽಖಿಲಾಃ ।
ಯಂತ್ಕಿಂಚಿದ್ಭೂತಲೇ ಜ್ಞಾನಂ ಶಾಸ್ತ್ರಂ ವಾ ಸುರಸತ್ತಮ ।
ತತ್ತತ್ರ ಸಮಭಾವೇನ ಸ ಸತ್ಯಂ ಚೈವ ಚಾಽನೃತಂ ॥ ೬೧ ॥
ತೀರ್ಥಾನಾಂ ಚ ಮಖಾನಾಂ ಚ ದ್ವಾಪರೇ ಸುರಸತ್ತಮ ।
ಫಲಂ ಭಾವಾಽನುರೂಪೇಣ ದಾನಾನಾಂ ಚ ಪ್ರಜಾಯತೇ ॥ ೬೨ ॥
ಏತತ್ತವ ಸಮಾಖ್ಯಾತಂ ಯುಗಂ ದ್ವಾಪರ ಸಂಜ್ಞಕಂ ।
ಮಯಾ ಸರ್ವಂ ಸುರಾಧೀಶ ಯಥಾ ದೃಷ್ಟಂ ಯಥಾ ಶ್ರುತಂ ॥ ೬೩ ॥
ಶೃಣುಷ್ವಾವಹಿತೋ ಭೂತ್ವಾ ವದತೋ ಮಮ ಸಾಂಪ್ರತಂ ।
ರೌದ್ರಂ ಕಲಿಯುಗಂ ನಾಮ ಯತ್ರ ಕೃಷ್ಣೋ ಜನಾರ್ದನಃ ॥ ೬೪ ॥

---

೫೮–೫೯. ಹೆಂಗಸರೂ ಹಾಗೆಯೇ ಆಗಿರುವರು. ಅವರಲ್ಲಿ ಕೆಲವರು ಐದು ಮೊಳ ಉದ್ದವುಳ್ಳವರೂ, ಕೆಲವರು ನಾಲ್ಕು ಮೊಳ ಉದ್ದವುಳ್ಳವರೂ ಆಗಿರುವರು. ಅತ್ಯಂತ ಸೌಂದರ್ಯವುಳ್ಳವರಾಗಿರುವುದಿಲ್ಲ. ಸೌಂದರ್ಯವಿಲ್ಲದವರೂ ಆಗಿರುವುದಿಲ್ಲ. ಪಶು, ಪಕ್ಷಿ, ಮೃಗಗಳು ಅಸ್ಪಷ್ಟವಾಗಿ ಮಾತಾಡುವುವು.

೬೦. ಇಂದ್ರ! ಮರಗಳು ಅತ್ಯಂತ ಪುಷ್ಪಫಲಗಳುಳ್ಳುವೂ ಆಗಿರುವುವು. ಒಕ್ಕಲಿಗರು ನೆಟ್ಟ ಸಸ್ಯಗಳೇ ಹುಟ್ಟುವುವು.

೬೧. ಮೋಡಗಳು ಅತಿಯಾಗಿ ಮಳೆ ಸುರಿಸುವುವು. ಸಮಸ್ತೌಷಧಿಗಳೂ ಬೆಳೆಯುವುವು. ಭೂಮಿಯಲ್ಲಿ ಜ್ಞಾನವಾಗಲಿ, ಶಾಸ್ತ್ರವಾಗಲಿ ಸಮವಾಗಿರುವುವು. ಸತ್ಯವೂ ಅನೃತವೂ ಸಮಸ್ಥಿತಿಯಲ್ಲಿರುವುದಿಲ್ಲ.

೬೨. ತೀರ್ಥ, ಯಜ್ಞ, ದಾನಗಳಿಗೆ ಭಾವನೆಗೆ ಅನುಸಾರವಾಗಿ ಫಲ ಉಂಟಾಗುವುದು.

೬೩. ಇಂದ್ರ! ನಿನಗೆ ನಾನು ನೋಡಿದಂತೆಯೂ, ಕೇಳಿದಂತೆಯೂ ದ್ವಾಪರಯುಗದ ಎಲ್ಲವಿಷಯುಗಳನ್ನೂ ಹೇಳಿರುತ್ತೇನೆ!

೬೪. ಈಗ ಹೇಳುವ ಭಯಂಕರವಾದ ಕಲಿಯುಗವಿಚಾರವನ್ನು ಸಾವಧಾನ ಮನಸ್ಸಿನಿಂದ ಕೇಳು. ಇದರಲ್ಲಿ ಜನಾರ್ದನನು ಕೃಷ್ಣವರ್ಣನಾಗಿರುವನು.

ದ್ವಾತ್ರಿಂಶಚ್ಚ ಸಹಸ್ರಾಣಿ ವರ್ಷಾಣಾಂ ಕಥಿತಂ ವಿಭೋ ।
ತಥಾ ಲಕ್ಷ ಚತುಷ್ಕೇಣ ಸಾಧುಲೋಕವಿವರ್ಜಿತಂ ॥ ೬೫ ॥
ತತ್ರೈಕ ಪಾದಯುಕ್ತಶ್ಚ ಧರ್ಮಃ ಪಾಪಂ ತ್ರಿಭಿಃ ಸ್ಮೃತಂ ।
ಪೂರ್ವಾರ್ಧೇಭ್ಯಃ ಪರಂ ಸರ್ವಂ ಸಂಭವಿಷ್ಯತಿ ಪಾತಕಂ ॥ ೬೬ ॥
ನ ಶೃಣ್ವಂತಿ ಪಿತುಃ ಪುತ್ರಾ ನ ಸ್ನುಷಾ ಭ್ರಾತರೋ ನ ಚ ।
ನ ಭೃತ್ಯಾ ನ ಕಲತ್ರಾಣಿ ಯತ್ರ ದ್ವೇಷಃ ಪರಸ್ಪರಂ ॥ ೬೭ ॥
ಯತ್ರ ಷೋಡಶಮೇ ವರ್ಷೇ ನರಾಃ ಪಲಿತ ಯೌವನಾಃ ।
ತತ್ರ ದ್ವಾದಶಮೇ ವರ್ಷೇ ಗರ್ಭಂ ಧಾಸ್ಯತಿ ಚಾಂಗನಾ ॥ ೬೮ ॥
ಆಯುಃ ಪರಂ ಮನುಷ್ಯಾಣಾಂ ಶತಸಂಖ್ಯಂ ಸುರೇಶ್ವರ ।
ನಾಗಾನಾಂ ಚ ತರೂಣಾಂ ಚ ವರ್ಷಾಣಾಂ ಯತ್ರ ನಾಽಧಿಕಂ ॥ ೬೯ ॥
ದ್ವಾತ್ರಿಂಶದ್ಧಯಮುಖ್ಯಾನಾಂ ಚತುರ್ವಿಂಶತಿಃ ಖರೋಷ್ಟ್ರಯೋಃ ।
ಅಜಾನಾಂ ಷೋಡಶ ಪ್ರೋಕ್ತಂ ಶುನಾಂ ದ್ವಾದಶ ಸಂಖ್ಯಯಾ ॥ ೭೦ ॥
ಚತುಷ್ಪದಾನಾಮನ್ಯೇಷಾಂ ವಿಂಶತಿಃ ಪಂಚಭಿರ್ಯುತಾ ।
ಯತ್ರ ಕಾಕಾಶ್ಚ ಗೃಧ್ರಾಶ್ಚ ಕೌಶಿಕಾಶ್ಚಿರಜೀವಿನಃ ॥ ೭೧ ॥

---

೬೫. ಸಾಧುಗಳಿಂದ ತ್ಯಕ್ತವಾದ ಈ ಕಲಿಯುಗವು ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷ ಪ್ರಮಾಣವಾಗುಳ್ಳದು.

೬೬. ಅದರಲ್ಲಿ ಧರ್ಮವು ಒಂದು ಪಾದದಿಂದಲೂ, ಪಾಪವು ಮೂರು ಪಾದಗಳಿಂದಲೂ ಇರುವುದು. ಉತ್ತರಾರ್ಧವೆಲ್ಲ ಪಾಪಮಯವಾಗಿರುವುದು.

೬೭. ಪುತ್ರರು ತಂದೆಯ ಮಾತನ್ನೂ, ಸೊಸೆಯು ಅತ್ತೆಯ ಮಾತನ್ನೂ, ತಮ್ಮನು ಅಣ್ಣನ ಮಾತನ್ನೂ, ಸೇವಕರು ಸ್ವಾಮಿಯ ಮಾತನ್ನೂ, ಹೆಂಡತಿಯರು ಗಂಡಂದಿರ ಮಾತನ್ನೂ ಕೇಳುವುದಿಲ್ಲ. ಅವರು ಪರಸ್ಪರ ದ್ವೇಷವುಳ್ಳವರಾಗುವರು.

೬೮. ಗಂಡಸರು ಹದಿನಾರನೆಯ ವರ್ಷದಲ್ಲಿ ನೆರೆತ ಯೌವನವುಳ್ಳವರಾಗುವರು. ಹೆಂಗಸು ಹನ್ನೆರಡನೆಯ ವರ್ಷದಲ್ಲಿ ಗರ್ಭವನ್ನು ಧರಿಸುವಳು.

೬೯. ಮಾನವರಿಗೆ ನೂರುವರ್ಷ ಆಯಸ್ಸಾಗಿರುವುದು. ಸರ್ಪಗಳಿಗೂ, ವೃಕ್ಷಗಳಿಗೂ ಅಧಿಕವಾಗಿ ಆಯುಸ್ಸಿರುವುದಿಲ್ಲ.

೭೦–೭೧. ಅಶ್ವಗಳಿಗೆ ಮೂವತ್ತೆರಡು ವರ್ಷಗಳೂ, ಕತ್ತೆ ಮತ್ತು ಒಂಟೆಗಳಿಗೆ ಇಪ್ಪತ್ತನಾಲ್ಕು ವರ್ಷಗಳೂ, ಆಡುಗಳಿಗೆ ಹದಿನಾರು ವರ್ಷಗಳೂ, ನಾಯಿಗಳಿಗೆ ಹನ್ನೆರಡು ವರ್ಷಗಳೂ, ಇತರ ಪಶುಗಳಿಗೆ ಇಪ್ಪತ್ತೈದು ವರ್ಷಗಳೂ ಆಯಸ್ಸಾಗಿರುವುದು. ಈ ಯುಗದಲ್ಲಿ ಕಾಗೆ, ಹದ್ದು, ಗೂಬೆಗಳು ಬಹುಕಾಲ ಜೀವಿಸುವುವು.

ತಥಾ ಪಾಪಪರಾ ಲೋಕಾ ದುಃಸ್ಥಿತಾಶ್ಚ ವಿಶೇಷತಃ ।
ತಥಾ ಕಂಟಕಿನೋ ವೃಕ್ಷಾ ರೂಕ್ಷಾಃ ಪುಷ್ಪಫಲಚ್ಯುತಾಃ ।
ಸೇವಿತಾಸ್ತೇಽಪಿ ಗೃಧ್ರಾದ್ಯೈರ್ಯತ್ರ ಛಾಯಾವಿವರ್ಜಿತಾಃ ॥ ೭೨ ॥
ಯತ್ರ ಧರ್ಮೋಽಹ್ಯಧರ್ಮೇಣ ಪೀಡ್ಯತೇ ಸುರಸತ್ತಮ ।
ಅಸತ್ಯೇನ ತಥಾ ಸತ್ಯಂ ಭೂಪಾಶ್ಚೌರೈಃ ಸದೈವ ತು ॥ ೭೩ ॥
ಗುರವಶ್ಚ ತಥಾ ಶಿಷ್ಯೈಃ ಸ್ತ್ರೀಭಿಶ್ಚ ಪುರುಷಾಧಮಾಃ ।
ಸ್ವಾಮಿನೋ ಭೃತ್ಯವರ್ಗೈಶ್ಚ ಮೂರ್ಖೈಶ್ಚಾಽಪಿ ಬಹುಶ್ರುತಾಃ ॥ ೭೪ ॥
ಯತ್ರ ಸೀದಂತಿ ಧರ್ಮಿಷ್ಠಾ ನರಾಃ ಸತ್ಯಪರಾಯಣಾಃ ।
ದಾಂತಾ ವಿವೇಕಿನಃ ಶಾಂತಾಸ್ತಥಾ ಪರಹಿತೇ ರತಾಃ ॥ ೭೫ ॥
ಆಧಯೋ ವ್ಯಾಧಯಶ್ಚೈವ ತಥಾ ಪೀಡಾ ಮಹದ್ಭುತಾ ।
ಸ ದೈವ ಸಂಸ್ಥಿತಾ ಯತ್ರ ಸಾಧುಪೀಡನವಾಂಛಯಾ ॥ ೭೬ ॥
ಅಲ್ಪಾಯುಷಸ್ತಥಾ ಮರ್ತ್ಯಾ ಜಾಯಂತೇ ವರ್ಣಸಂಕರಾತ್ ।
ಯೇ ಕೇಚನ ಪ್ರಜೀವಂತಿ ದುಃಖೇನ ತೇ ಸಮನ್ವಿತಾಃ ॥ ೭೭ ॥
ನ ವರ್ಷತಿ ಘನಃ ಕಾಲೇ ಸಂಪ್ರಾಪ್ತೇಽಪಿ ಯಥೋಚಿತೇ ।
ನ ಸಸ್ಯಂ ಸ್ಯಾತ್ಸುವೃಷ್ಟೇಽಪಿ ಕರ್ಷಕಸ್ಯಾಽಪಿ ವಾಂಛಿತಂ ॥ ೭೮ ॥

---

೭೨. ಹಾಗೆಯೇ ಜನರು ಪಾಪನಿರತರೂ, ವಿಶೇಷವಾಗಿ ದುರವಸ್ಥೆಯನ್ನು ಹೊಂದಿದವರೂ ಆಗಿರುವರು. ವೃಕ್ಷಗಳು ಮುಳ್ಳುಗಳಿಂದ ತುಂಬಿರುವುವೂ, ಪುಷ್ಪಫಲಗಳಿಲ್ಲದುವೂ, ಹದ್ದು ಮೊದಲಾದುವುಗಳಿಂದ ಸೇವಿಸಲ್ಪಟ್ಟುವೂ, ನೆರಳಿಲ್ಲದುವೂ ಆಗಿರುವುವು.

೭೩–೭೪. ಅಧರ್ಮವು ಧರ್ಮವನ್ನೂ, ಅಸತ್ಯವು ಸತ್ಯವನ್ನೂ, ಕಳ್ಳರು ರಾಜರನ್ನೂ, ಶಿಷ್ಯರು ಗುರುಗಳನ್ನೂ, ಸ್ತ್ರೀಯರು ಅಧಮ ಮಾನವರನ್ನೂ, ಸೇವಕರು ಯಜಮಾನರನ್ನೂ, ಮೂರ್ಖರು ವಿದ್ವಾಂಸರನ್ನೂ ಪೀಡಿಸುವರು.

೭೫. ಧರ್ಮಿಷ್ಠರೂ, ಸತ್ಯನಿರತರೂ, ಇಂದ್ರಿಯನಿಗ್ರಹವುಳ್ಳವರೂ, ವಿವೇಕಿಗಳೂ, ಶಾಂತರೂ, ಪರಹಿತಾಸಕ್ತರೂ ವ್ಯಥೆಗೊಳ್ಳುವರು.

೭೬. ಆಧಿ, ವ್ಯಾಧಿ, ಅದ್ಭುತಪೀಡೆ ಇವುಗಳು ಯಾವಾಗಲೂ ಸಜ್ಜನರನ್ನು ಪೀಡಿಸುವುದಕ್ಕಾಗಿ ಕಾದಿರುವುವು.

೭೭. ಜನರು ಜಾತಿ ಸಾಂಕರ್ಯದಿಂದ ಅಲ್ಪಾಯುಷ್ಯವುಳ್ಳವರಾಗುವರು. ಬದುಕಿರುವ ಕೆಲವರೂ ದುಃಖದಿಂದ ಜೀವಿಸುವರು.

೭೮. ಸಕಾಲದಲ್ಲಿ ಮಳೆಯು ಸುರಿಯುವುದಿಲ್ಲ. ಚೆನ್ನಾಗಿ ಮಳೆ ಸುರಿದರೂ ಒಕ್ಕಲಿಗನ ಇಷ್ಟದಂತೆ ಸಸ್ಯವು ಬೆಳೆಯುವುದಿಲ್ಲ.

ನ ಚ ಕ್ಷೀರಪ್ರದಾ ಗಾವೋ ಯದ್ಯಪಿ ಸ್ಯುಃ ಸುಪೋಷಿತಾಃ ।
ನ ಭವಂತಿ ಪ್ರಭೂತಾಶ್ಚ ಯತ್ನೇನಾಽಪಿ ಸುರಕ್ಷಿತಾಃ ॥ ೭೯ ॥
ಅವಿಕಾನಾಂ ತಥೋಷ್ಟ್ರೀಣಾಂ ಯತ್ರ ಕ್ಷೀರಪ್ರಶಂಸಕಾಃ ।
ಲೋಕಾ ಭವಂತಿ ನಿಃಶ್ರೀಕಾಸ್ತಥಾ ಯೇ ಚ ಮಲಿಮ್ಲುಚಾಃ ॥ ೮೦ ॥
ತಥಾ ತಪಸ್ವಿನಃ ಶೂದ್ರಾಃ ಶೂದ್ರಾ ಧರ್ಮಪರಾಯಣಾಃ ।
ಶೂದ್ರಾ ವೇದವಿಚಾರಜ್ಞಾ ಯಜ್ಞಕರ್ಮಣಿ ಚೋದ್ಯತಾಃ ॥ ೮೧ ॥
ಶೂದ್ರಾಃ ಪ್ರತಿಗ್ರಹೀತಾರಃ ಶೂದ್ರಾ ದಾನಪ್ರದಾಸ್ತಥಾ ।
ಶೂದ್ರಾಶ್ಚಾಽಪಿ ತಥಾ ವಂದ್ಯಾಃ ಶೂದ್ರಾಸ್ತೀರ್ಥೇಷು ಸಂಸ್ಥಿತಾಃ ॥ ೮೨ ॥
ಪಂಚಗರ್ತಾನ್ ಖನಂತ್ಯೇವ ಮೃತ್ಯುಕಾಲೇ ನರಾಽಧಮಾಃ ।
ಶಿರಸಾ ಹಸ್ತಪಾದಾಭ್ಯಾಂ ಮೋಹಾತ್ಸಂನಷ್ಟಚೇತನಾಃ ॥ ೮೩ ॥
ವೇದವಿಕ್ರಯಕರ್ತಾರೋ ಬ್ರಾಹ್ಮಣಾಃ ಶೌಚವರ್ಜಿತಾಃ ॥ ೮೪ ॥
ಸ್ವಾಧ್ಯಾಯರಹಿತಾಶ್ಚೈವ ಶೂದ್ರಾನ್ನನಿರತಾಃ ಸದಾ ।
ಅಸತ್ಪ್ರತಿಗ್ರಹಾಃ ಪ್ರಾಯೋ ಜಿಹ್ವಾಲೌಲ್ಯಸಮುತ್ಸುಕಾಃ ॥ ೮೫ ॥
ಪಾಖಂಡಿನೋ ವಿಕರ್ಮಸ್ಥಾಃ ಪರದಾರೋಪಜೀವಿನಃ ।
ಕಾರ್ಯಕಾರಣಮಾಶ್ರಿತ್ಯ ಯತ್ರ ಸ್ನೇಹಃ ಪ್ರಜಾಯತೇ ॥ ೮೬ ॥
ನ ಸ್ವಭಾವಾತ್ಸಹಸ್ರಾಕ್ಷ ಕಥಂಚಿದಪಿ ದೇಹಿನಾಂ ।
ಯಾಸ್ಯಂತಿ ಮ್ಲೇಚ್ಛಭಾವಂ ಚ ಸರ್ವೇ ವರ್ಣಾ ದ್ವಿಜಾತಯಃ ॥ ೮೭ ॥

---

೭೯. ಚೆನ್ನಾಗಿ ಪೋಷಣೆಮಾಡಿದರೂ ಗೋವುಗಳು ಹಾಲನ್ನು ಕೊಡುವುದಿಲ್ಲ. ಪ್ರಯತ್ನದಿಂದ ಸಲಹಿದರೂ ಅವು ಹೆಚ್ಚುವುದಿಲ್ಲ.

೮೦. ಜನರು ಕುರಿ ಒಂಟೆಗಳ ಹಾಲನ್ನು ಶ್ಲಾಘಿಸುವವರೂ, ಐಶ್ವರ್ಯವಿಲ್ಲದವರೂ ಕಳ್ಳರೂ ಆಗುವರು.

೮೧–೮೨. ಹಾಗೆಯೇ ಶೂದ್ರರು ತಪಸ್ವಿಗಳೂ, ಧರ್ಮನಿರತರೂ, ವೇದವಿಚಾರವನ್ನರಿತವರೂ, ಯಜ್ಞಕರ್ಮದಲ್ಲಿ ಆಸಕ್ತರೂ, ದಾನವನ್ನು ತೆಗೆದುಕೊಳ್ಳುವವರೂ, ದಾನವನ್ನು ಕೊಡುವವರೂ, ಪೂಜ್ಯರೂ, ತೀರ್ಥವಾಸಿಗಳೂ ಆಗುವರು.

೮೩. ಅಧಮ ಮಾನವರು ಮರಣಕಾಲದಲ್ಲಿ ಜ್ಞಾನವಿಲ್ಲದೆ ಭ್ರಾಂತರಾಗಿ ತಲೆ ಕೈಕಾಲುಗಳಿಂದ ಐದು ಕುಣಿಗಳನ್ನು ತೋಡುವರು.

೮೪–೮೭. ಬ್ರಾಹ್ಮಣರು ವೇದವನ್ನು ವಿಕ್ರಯಿಸುವವರೂ, ಶೌಚವಿಲ್ಲದವರೂ, ವೇದಾಧ್ಯಯನ ಮಾಡದವರೂ, ಶೂದ್ರಾನ್ನದಲ್ಲಿ ಆಸಕ್ತರೂ, ದುರ್ದಾನವನ್ನು ತೆಗೆದುಕೊಳ್ಳುವವರೂ, ಜಿಹ್ವಾಚಾಪಲ್ಯಾಸಕ್ತರೂ, ಪಾಷಂಡಿಗಳೂ, ದುಷ್ಕರ್ಮಾಸಕ್ತರೂ, ಪರರ ಪತ್ನಿಯರಿಂದ ಜೀವಿಸುವವರೂ ಆಗುವರು. ಜನರು ಕಾರ್ಯಕಾರಣಗಳನ್ನಾಶ್ರಯಿಸಿಯೆ ಸ್ನೇಹಮಾಡುವರು. ಸಹಜವಾಗಿ ಸ್ನೇಹಮಾಡುವುದಿಲ್ಲ. ಸಕಲ ಜಾತಿಯವರೂ, ಬ್ರಾಹ್ಮಣರೂ ಮ್ಲೇಚ್ಛಸ್ವಭಾವವನ್ನು ಹೊಂದುವರು.

ನಷ್ಟೋತ್ಸವಾ ವಿಧರ್ಮಾಣೋ ನಿತ್ಯಂಸಂಕರಕಾರಕಾಃ ।
ಸಾರ್ಧಹಸ್ತತ್ರಯಾಃ ಪೂರ್ವಂ ಭವಿಷ್ಯಂತಿ ಯುಗಾದಿತಃ ॥ ೮೮ ॥
ತತೋಽಹ್ರಾಸಂ ಪ್ರಯಾಸ್ಯಂತಿ ವೃದ್ಧಿಂ ಯಾಂತಿ ಕಲೌಯುಗೇ ।
ಭವಿಷ್ಯಂತಿ ತತಶ್ಚಾಂತೇ ಮನುಷ್ಯಾ ಬಿಲಶಾಯಿನಃ ॥ ೮೯ ॥
ಅಲ್ಪತ್ವಾದ್ದುರ್ಲಭತ್ವಾಚ್ಚ ಅಶಕ್ತಾ ಗೃಹಕರ್ಮಣಿ ।
ಭವಿಷ್ಯಂತ್ಯಫಲಾ ಯಜ್ಞಾಸ್ತಥಾ ವೇದವ್ರತಾನಿ ಚ ॥ ೯೦ ॥
ನಿಯಮಾಃ ಸಂಯಮಾಃ ಸರ್ವೇ ಮಂತ್ರವಾದಾಸ್ತಥೈವ ಚ ।
ತೀರ್ಥಾನಿ ಮ್ಲೇಚ್ಛಸಂಸ್ಪರ್ಶಾದ್ದೂಷಿತಾನಿ ಶತಕ್ರತೋ ॥ ೯೧ ॥
ಸ್ವ ಸ್ವಭಾವ ವಿಹೀನಾನಿ ಹೀನಾನಿ ಚ ತಥಾ ಜಲೈಃ ।
ಕುತ್ಸಿತಾ ಮಂತ್ರವಾದಾ ಯೇ ಕುತ್ಸಿತಾಶ್ಚ ತಪಸ್ವಿನಃ ॥ ೯೨ ॥
ತತ್ರ ತೇ ಸಂಭವಿಷ್ಯಂತಿ ಕುತ್ಸಿತಾ ಯೇ ಚ ಮಾನವಾಃ ।
ಕುಲೀನಮಪಿ ಸಂತ್ಯಜ್ಯ ವರಂ ರೂಪವಯೋನ್ವಿತಂ ॥ ೯೩ ॥
ವಿತ್ತಲೋಭಾತ್ಪ್ರದಾಸ್ಯಂತಿ ಕುತ್ಸಿತಾಯ ನರಾಃ ಸುತಾಂ ।
ಕನ್ಯಕಾಃ ಪ್ರಸವಿಷ್ಯಂತಿ ಕನ್ಯಕಾಃ ಸುರತೋತ್ಸುಕಾಃ ॥ ೯೪ ॥
ಕನ್ಯಕಾಃ ಪ್ರಕರಿಷ್ಯಂತಿ ಪುರುಷೈಃ ಸಹ ಸಂಗತಿಂ ।
ಭರ್ತಾರಂ ವಂಚಯಿಷ್ಯಂತಿ ಕುಲೀನಾ ಅಪಿ ಯೋಷಿತಃ ॥ ೯೫ ॥

---

೮೮. ಉತ್ಸವವಿಲ್ಲದವರೂ, ವಿಧರ್ಮಿಗಳೂ, ಸಂಕರಕಾರಕರೂ ಆಗುವರು. ಯುಗದ ಆದಿಯಲ್ಲಿ ಮೂರೂವರೆ ಮೊಳ ಉದ್ದವಾಗಿರುವರು.

೮೯. ಕಲಿಯುಗವು ವೃದ್ಧಿಗೊಂಡ ಹಾಗೆಲ್ಲ ಜನರು ಕುಳ್ಳರಾಗುವರು. ಕೊನೆಯಲ್ಲಿ ಅವರು ಬಿಲದಲ್ಲಿ ವಾಸಿಸುವ ಇಲಿಯಂತಾಗುವರು.

೯೦–೯೬. ಅಲ್ಪರಾದುದರಿಂದಲೂ, ವಸ್ತುಗಳು ಸಿಕ್ಕದಿರುವುದರಿಂದಲೂ ಅವರು ಮನೆಯ ಕೆಲಸದಲ್ಲಿ ಅಶಕ್ತರಾಗುವರು. ಯಜ್ಞಗಳೂ, ವೇದವ್ರತಗಳೂ, ನಿಯಮಸಂಯಮಗಳೂ, ಮಂತ್ರವಾದಗಳೂ ನಿಷ್ಫಲವಾಗುವುವು. ತೀರ್ಥಗಳು ಮ್ಲೇಚ್ಛರ ಸ್ಪರ್ಶದಿಂದ ಕೆಟ್ಟುಹೋಗುವುವು. ತಮ್ಮ ಸ್ವಭಾವವನ್ನು ತ್ಯಜಿಸಿ ಜಲರಹಿತವಾಗುವುವು. ಮಂತ್ರವಾದಿಗಳೂ, ಋಷಿಗಳೂ, ಸಾಮಾನ್ಯ ಮಾನವರೂ ನಿಂದ್ಯರಾಗಿರುವರು. ಸತ್ಕುಲಪ್ರಸೂತನೂ, ರೂಪ, ವಯಸ್ಸುಗಳಿಂದ ಕೂಡಿದವನೂ, ಆದ ವರನನ್ನು ತ್ಯಜಿಸಿ ದ್ರವ್ಯಾಶೆಯಿಂದ ನಿಂದ್ಯನಾದ ವರನಿಗೆ ಕನ್ಯೆಯನ್ನು ಕೊಡುವರು. ಕನ್ಯೆಯರು ಪ್ರಸವಿಸುವರು. ಅವರು ಸುರತಾಭಿಲಾಷಿಗಳಾಗಿ ಪುರುಷರ ಸಂಗವನ್ನು ಮಾಡುವರು. ಕುಲೀನರಾದ ಹೆಂಗಸರೂ ಪ್ರಯತ್ನದಿಂದ ರಕ್ಷಿತರಾಗಿದ್ದರೂ ದುಶ್ಶೀಲರಾಗಿ ಸಕಲ ಕಾರ್ಯಗಳಲ್ಲಿಯೂ

ಸರ್ವಕೃತ್ಯೇಷು ದುಃಶೀಲಾಃ ಸುಯತ್ನೇನಾಽಪಿ ರಕ್ಷಿತಾಃ ।
ನಿರ್ದಯಾಶ್ಚಾಽಪಿ ಭೂಪಾಲಾಃ ಪೀಡಯಿಷ್ಯಂತಿ ಕರ್ಷಕಾನ್ ॥ ೯೬ ॥
ಪೀಡಯಿಷ್ಯಂತಿ ನಿರ್ದೋಷಾನ್ವಿತ್ತಲೋಭಾದಸಂಶಯಂ ।
ವಧಾರ್ಹಮಪಿ ಸಂಪ್ರಾಪ್ಯ ವಿತ್ತಲೋಭಾನ್ಮಲಿಮ್ಲುಚಂ ॥ ೯೭ ॥
ಸಂತ್ಯಕ್ಷ್ಯಂತಿ ಯುಗೇ ತಸ್ಮಿನ್ಪ್ರಾಣಿದ್ರೋಹೇಽಪಿ ವರ್ತಿನಂ ।
ಕ್ಷಾತ್ರಧರ್ಮಂ ಪರಿತ್ಯಜ್ಯ ಕರಿಷ್ಯಂತಿ ತಥಾ ರಣಂ ॥ ೯೮ ॥

ಬೃಹಸ್ಪತಿರುವಾಚ :—

ಏತದ್ವಃ ಸರ್ವಮಾಖ್ಯಾತಂ ಯುಗಾನಾಂ ಲಕ್ಷಣಂ ಮಯಾ ।
ಪ್ರಮಾಣಂ ಚ ಸುರಶ್ರೇಷ್ಠ ಚತುರ್ಣಾಮಪ್ಯಸಂಶಯಂ ॥ ೯೯ ॥
ಯಶ್ಚೈತತ್ಕೀರ್ತಯೇನ್ಮರ್ತ್ಯಃ ಸದೈವ ಸುಸಮಾಹಿತಃ ।
ಸ ನೂನಂ ಮುಚ್ಯತೇ ಪಾಪಾದಾಜನ್ಮಮರಣಾಂತಿಕಾತ್ ॥ ೧೦೦ ॥
ಶೃಣುಯಾದ್ವಾ ನರೋ ಯಶ್ಚ ಶ್ರದ್ಧಾಪೂತೇನ ಚೇತಸಾ ।
ಸೋಽಪಿ ಮುಚ್ಯೇನ್ನ ಸಂದೇಹಃ ಪಾಪಾಚ್ಚ ದಿವಸೋದ್ಭವಾತ್ ॥ ೧೦೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚತುರ್ಯುಗಸ್ವರೂಪವರ್ಣನಂ"
ನಾಮ ಸಪ್ತವಿಂಶೋಽಧ್ಯಾಯಃ

---

ಪತಿಯನ್ನು ವಂಚಿಸುವರು. ರಾಜರು ನಿರ್ದಯರಾಗಿ ಒಕ್ಕಲಿಗರನ್ನು ಪೀಡಿಸುವರು.

೯೭–೯೮. ದ್ರವ್ಯಾಶೆಯಿಂದ ದೋಷವಿಲ್ಲದವರನ್ನು ಪೀಡಿಸುವರು. ಪ್ರಾಣಿಗಳನ್ನು ಹಿಂಸಿಸುವ ವಧಾರ್ಹನಾದ ಕಳ್ಳನನ್ನೂ ಹಣದ ಆಶೆಯಿಂದ ಬಿಡುವರು. ಕ್ಷತ್ರಿಯ ಧರ್ಮವನ್ನು ತ್ಯಜಿಸಿ ಯುದ್ಧಮಾಡುವರು.

೯೯. ಬೃಹಸ್ಪತಿಯು ಹೇಳುತ್ತಾನೆ:—ಸುರೇಂದ್ರ! ನಾನು ನಿನಗೆ ನಾಲ್ಕು ಯುಗಗಳ ಲಕ್ಷಣವನ್ನೂ, ಪ್ರಮಾಣವನ್ನೂ ಹೇಳಿರುವೆನು.

೧೦೦–೧೦೧. ಯಾವಾಗಲೂ ಸಾವಧಾನ ಮನಸ್ಸಿನಿಂದ ಇದನ್ನು ಹೇಳುವ ಮನುಷ್ಯನು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು. ಇದನ್ನು ಶ್ರದ್ಧೆಯಿಂದ ಕೇಳಿದ ಮಾನವನೂ ಒಂದು ದಿವಸದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚತುರ್ಯುಗಸ್ವರೂಪವರ್ಣನ"ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟವಿಂಶೋಽಧ್ಯಾಯಃ

### ಸರ್ವತೀರ್ಥಸಮಾಶ್ರಯವರ್ಣನಂ

ಸೂತ ಉವಾಚ :—

ತಸ್ಯಾಂ ದೇವಸಭಾಯಾಂ ಚ ಸಂಸ್ಥಿತಾ ಯೇ ದ್ವಿಜೋತ್ತಮಾಃ ।
ಪ್ರಭಾಸಾದೀನಿ ತೀರ್ಥಾನಿ ಮೂರ್ತಾನಿ ಸಕಲಾನಿ ಚ ॥ ೧ ॥
ತಾನಿ ಶ್ರುತ್ವಾ ವಚಸ್ತಸ್ಯ ದೇವಾಚಾರ್ಯಸ್ಯ ತಾದೃಶಂ ।
ಭಯಂ ಕೃತ್ವಾ ಮಹಚ್ಚಿತ್ತೇ ಊಚುಶ್ಚ ತ್ರಿದಿವೇಶ್ವರಂ ॥ ೨ ॥
ಯದ್ಯೇವಂ ದೇವದೇವೇಶ ಭವಿಷ್ಯತ್ಯಶುಭಂ ಯುಗಂ ।
ವಯಂ ನಾಶಂ ಸಮೇಷ್ಯಾಮೋ ನಸ್ಥಾಸ್ಯಾಮೋ ಜಗತ್ತ್ರಯೇ ॥ ೩ ॥
ಪುರಂದರಾದ್ಯ ಚಾಸ್ಮಾಕಂ ಸ್ಥಾನಂ ಕಿಂಚಿತ್ಪ್ರದರ್ಶಯ ।
ತಸ್ಮಾತ್ಕೀರ್ತಯ ನಃ ಸ್ಥಾನಂ ಕಿಂಚಿತ್ಕ್ವಾಪಿ ಪುರಂದರ ॥ ೪ ॥
ಯದಾಶ್ರಿತ್ಯ ನಯಿಷ್ಯಾಮೋ ರೌದ್ರಂ ಕಲಿಯುಗಂ ವಿಭೋ ।
ಅಸ್ಪೃಷ್ಟಾನ್ಯೈರ್ಮ್ಲೇಚ್ಛೈಃ ಪ್ರಭಾವಸಹಿತಾನಿ ಚ ।
ಪಾತಾಲೇ ಸ್ವರ್ಗಲೋಕೇ ವಾ ಮರ್ತ್ಯೇ ವಾ ಸುರಸತ್ತಮ ॥ ೫ ॥

---

### ಕನ್ನಡದ ಅನುವಾದ

#### ಸರ್ವತೀರ್ಥಸಮಾಶ್ರಯವರ್ಣನ

೧–೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ದೇವಸಭೆಯಲ್ಲಿರುವ ದೇವತೆಗಳೂ, ದೇಹಗಳನ್ನು ಧರಿಸಿದ ಪ್ರಭಾಸ ಮೊದಲಾದ ತೀರ್ಥಗಳೂ ಬೃಹಸ್ಪತಿಯ ಆ ಮಾತುಗಳನ್ನು ಕೇಳಿ ಮನಸ್ಸಿನಲ್ಲಿ ಭಯಗೊಂಡು ಇಂತೆಂದರು.

೩. ದೇವೇಂದ್ರ! ಅಮಂಗಳಕರವಾದ ಯುಗವು ಸಂಭವಿಸುವುದಾದರೆ ನಾವು ನಾಶವಾಗುವೆವು. ಮೂರು ಲೋಕಗಳಲ್ಲಿಯೂ ಇರುವುದಿಲ್ಲ.

೪. ಈಗ ನಮಗೆ ಯಾವುದಾದರೊಂದು ಸ್ಥಾನವನ್ನು ತೋರಿಸು. ಅಥವಾ ಹೇಳು.

೫. ಮ್ಲೇಚ್ಛರ ಸ್ಪರ್ಶವಿಲ್ಲದೆ ಪ್ರಭಾವಸಹಿತವಾದ ಪಾತಾಳ, ಸ್ವರ್ಗ ಅಥವಾ ಭೂಲೋಕದಲ್ಲಿರುವ ಆ ಸ್ಥಳವನ್ನಾಶ್ರಯಿಸಿ ನಾವು ಭಯಂಕರ ಕಲಿಯುಗವನ್ನು ಕಳೆಯುವೆವು.

ತೇಷಾಂ ತದ್ವಚನಂ ಶ್ರುತ್ವಾ ಕೃಪಾವಿಷ್ಟಶ್ಶತಕ್ರತುಃ ।
ಪ್ರೋವಾಚ ಬ್ರಾಹ್ಮಣಶ್ರೇಷ್ಠಂ ಭೂಯ ಏವ ಬೃಹಸ್ಪತಿಂ ॥ ೬ ॥
ಅಸ್ಪೃಷ್ಟಂ ಕಲಿನಾ ಸ್ಥಾನಂ ಕಿಂಚಿದ್ವದ ಬೃಹಸ್ಪತೇ ।
ಸಮಾಶ್ರಯಾಯ ತೀರ್ಥಾನಾಂ ಯದಿ ವೇತ್ಸಿ ಜಗತ್ತ್ರಯೇ ॥ ೭ ॥
ಶಕ್ರಸ್ಯ ತದ್ವಚಃ ಶ್ರುತ್ವಾ ಚಿರಂ ಧ್ಯಾತ್ವಾ ಬೃಹಸ್ಪತಿಃ ।
ತತ್ರ ಪ್ರೋವಾಚ ತೀರ್ಥಾನಿ ಭಯಾದ್ಭೀತಾನಿ ಹರ್ಷಯನ್ ॥ ೮ ॥
ಹಾಟಕೇಶ್ವರಮಿತ್ಯುಕ್ತಮಸ್ತಿ ಕ್ಷೇತ್ರಮನುತ್ತಮಂ ।
ಲಿಂಗಸ್ಯ ಪತನಾಜ್ಜಾತಂ ದೇವದೇವಸ್ಯ ಶೂಲಿನಃ ॥ ೯ ॥
ಯತ್ರ ಪೂರ್ವಂ ತಪಸ್ತಪ್ತಂ ವಿಶ್ವಾಮಿತ್ರೇಣ ಧೀಮತಾ ।
ತ್ರಿಶಂಕೋರ್ಭೂಮಿಪಾಲಸ್ಯ ಕೃತೇ ತೀರ್ಥೇ ಮಹಾತ್ಮನಾ ॥ ೧೦ ॥
ಯತ್ರ ಸ್ಥಿತ್ವಾ ಸ ಭೂಪಾಲಸ್ತ್ರಿಶಂಕುಃ ಪಾಪವರ್ಜಿತಃ ।
ಚಂಡಾಲತ್ವಂ ಪರಿತ್ಯಜ್ಯ ಸದೇಹಸ್ತ್ರಿದಿವಂಗತಃ ॥ ೧೧ ॥
ಯತ್ರ ಶಕ್ರ ಸಮಾದೇಶಾತ್ಪೂರಿತಂ ಪಾಂಸುಭಿಃ ಪುರಾ ।
ಸಂವರ್ತಕೇನ ರೌದ್ರೇಣ ವಾಯುನಾ ತೀರ್ಥಮುತ್ತಮಂ ॥ ೧೨ ॥
ಯತ್ರ ರಕ್ಷತ್ಯಹಸ್ತಾಚ್ಚ ಸ ಸ್ವಯಂ ಹಾಟಕೇಶ್ವರಃ ।
ಉಪರಿಷ್ಟಾತ್ಪ್ರದೇಶಂ ಚ ಕಲೌ ದೇವೋಽಚಲೇಶ್ವರಃ ॥ ೧೩ ॥

---

೬. ಅವರ ಆ ಮಾತನ್ನು ಕೇಳಿ ದಯೆಗೊಂಡ ಇಂದ್ರನು ಬ್ರಾಹ್ಮಣೋತ್ತಮನಾದ ಬೃಹಸ್ಪತಿಯನ್ನು ಕುರಿತು ಹೀಗೆಂದನು.

೭. ಬೃಹಸ್ಪತಿಯೆ! ಮೂರು ಲೋಕಗಳಲ್ಲಿ ಕಲಿಯ ಸ್ಪರ್ಶವಿಲ್ಲದ ಒಂದು ತೀರ್ಥಸ್ಥಾನವನ್ನು ಹೇಳು.

೮. ಬೃಹಸ್ಪತಿಯು ಇಂದ್ರನ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಭಯಗೊಂಡ ತೀರ್ಥಗಳನ್ನು ಸಂತೋಷಗೊಳಿಸುತ್ತ ಇಂತೆಂದನು.

೯. ಶಂಕರನ ಲಿಂಗಪತನದಿಂದುಂಟಾದ ಹಾಟಕೇಶ್ವರವೆಂಬ ಉತ್ತಮ ಕ್ಷೇತ್ರವಿದೆ.

೧೦. ಇಲ್ಲಿ ಜ್ಞಾನಿಯಾದ ವಿಶ್ವಾಮಿತ್ರನು ಪೂರ್ವದಲ್ಲಿ ತ್ರಿಶಂಕು ಮಹಾರಾಜನಿಗಾಗಿ ತಪವನ್ನಾಚರಿಸಿರುವನು.

೧೧. ಆ ತ್ರಿಶಂಕುರಾಜನು ಇಲ್ಲಿ ವಾಸಿಸಿ ಪಾಪರಹಿತನಾಗಿ ಚಂಡಾಲತ್ವವಿಲ್ಲದೆ ದೇಹಸಹಿತನಾಗಿ ಸ್ವರ್ಗಕ್ಕೆ ತೆರಳಿದನು.

೧೨. ಇದನ್ನು ಶಕ್ರನ ಆದೇಶದಿಂದ ಹಿಂದೆ ಸಂವರ್ತಕವೆಂಬ ವಾಯುವು ಧೂಳಿನಿಂದ ಮುಚ್ಚಿತು.

೧೩. ಇದನ್ನು ಕಲಿಯುಗದಲ್ಲಿ ಕೆಳಗಡೆ ಹಾಟಕೇಶ್ವರನೂ, ಮೇಲ್ಗಡೆ ಅಚಲೇಶ್ವರನೂ ಕಾಪಾಡುವರು.

ಹಾಟಕೇಶ್ವರಮಾಹಾತ್ಮ್ಯಾದಸ್ಪೃಷ್ಟಂ ಕಲಿನಾ ಹಿ ತತ್ ।
ಪಂಚಕ್ರೋಶಪ್ರಮಾಣೇನ ಅಚಲೇಶ್ವರಜೇನ ಚ ॥ ೧೪ ॥
ತಸ್ಮಾತ್ಸ್ವಾಂಶೇನ ಗಚ್ಛಂತು ತತ್ರ ತೀರ್ಥಾನ್ಯಶೇಷತಃ ।
ತೇಷಾಂ ಕಲಿಭಯಂ ಶಕ್ರ ನೈವ ತತ್ರಾಽಸ್ಯಸಂಶಯಂ ॥ ೧೫ ॥
ತಚ್ಛ್ರುತ್ವಾ ವಚನಂ ತಸ್ಯ ಸರ್ವತೀರ್ಥಾನಿ ತತ್‌ಕ್ಷಣಾತ್ ।
ಹಾಟಕೇಶ್ವರಸಂಜ್ಞಂ ತತ್‌ಕ್ಷೇತ್ರಂ ಜಗ್ಮುರ್ದ್ವಿಜೋತ್ತಮಾಃ ॥ ೧೬ ॥
ಯಜ್ಞೋಪವೀತಮಾತ್ರಾಣಿ ಕೃತ್ವಾ ಸ್ಥಾನಾನಿ ಚಾತ್ಮನಃ ।
ಕ್ಷೇತ್ರಮಾಸಾದಯಾಮಾಸುಸ್ತತ್ಸರ್ವಂ ಹಿ ದ್ವಿಜೋತ್ತಮಾಃ ॥ ೧೭ ॥
ಏತಸ್ಮಾತ್ಕಾರಣಾಜ್ಜಾತಂ ಕ್ಷೇತ್ರಂ ಪುಣ್ಯತಮಂ ಹಿ ತತ್ ।
ಹಾಟಕೇಶ್ವರದೇವಸ್ಯ ಮಹಾಪಾತಕನಾಶನಂ ॥ ೧೮ ॥

ಋಷಯ ಊಚುಃ:—

ಅತ್ಯಾಶ್ಚರ್ಯಮಿದಂ ಸೂತ ಯತ್ತ್ವಯೈತದುದಾಹೃತಂ ।
ಸಂಗಮಂ ಸರ್ವತೀರ್ಥಾನಾಂ ಕ್ಷೇತ್ರೇ ತತ್ರ ಪ್ರಕೀರ್ತಿತಂ ॥ ೧೯ ॥
ತಾವನ್ಮಾತ್ರಪ್ರಭಾವಾಣಿ ತತ್ಸ್ಥಾನಿ ಪ್ರಭವಂತಿ ಕಿಂ ।
ತಾನಿ ತೀರ್ಥಾನಿ ನೋ ಬ್ರೂಹಿ ವಿಸ್ತರೇಣ ಮಹಾಮತೇ ॥ ೨೦ ॥
ನಾಮತಃ ಸ್ಥಾನತಶ್ಚೈವ ತಥಾಚೈವ ಪ್ರಭಾವತಃ ।
ಸರ್ವಾಣ್ಯಪಿ ಮಹಾಭಾಗ ಪರಂ ಕೌತೂಹಲಂ ಹಿ ನಃ ॥ ೨೧ ॥

---

೧೪. ಹಾಟಕೇಶ್ವರ ಮತ್ತು ಅಚಲೇಶ್ವರರ ಮಾಹಾತ್ಮ್ಯೆಯಿಂದ ಆ ಕ್ಷೇತ್ರವನ್ನು ಹತ್ತು ಮೈಲಿ ವಿಸ್ತೀರ್ಣದವರೆಗೆ ಕಲಿಯು ಮುಟ್ಟುವುದಿಲ್ಲ.

೧೫–೧೬. ಆದ್ದರಿಂದ ಎಲೈ ಮಹೇಂದ್ರನೆ! ತೀರ್ಥಗಳೆಲ್ಲ ತಮ್ಮ ಅಂಶದಿಂದ ಆ ಕ್ಷೇತ್ರಕ್ಕೆ ಹೋಗಲಿ. ಅವುಗಳಿಗೆ ಅಲ್ಲಿ ನಿಶ್ಚಯವಾಗಿಯೂ ಕಲಿಯಿಂದ ಭಯವುಂಟಾಗುವುದಿಲ್ಲ. ದ್ವಿಜವರ್ಯರೆ! ಸಕಲತೀರ್ಥಗಳೂ ಅವನ ಆ ಮಾತನ್ನು ಕೇಳಿ ಕೂಡಲೆ ಹಾಟಕೇಶ್ವರವೆಂಬ ಆ ಕ್ಷೇತ್ರಕ್ಕೆ ಹೋದುವು.

೧೭. ಅವು ತಮಗೆ ಅಲ್ಲಿ ಯಜ್ಞೋಪವೀತದಷ್ಟು ಸ್ಥಳಗಳನ್ನು ಕಲ್ಪಿಸಿಕೊಂಡು ಆ ಕ್ಷೇತ್ರವನ್ನು ವ್ಯಾಪಿಸಿದುವು.

೧೮. ಈ ಕಾರಣದಿಂದ ಹಾಟಕೇಶ್ವರನ ಆ ಕ್ಷೇತ್ರವು ಪುಣ್ಯತಮವೂ, ಮಹಾಪಾತಕಗಳನ್ನು ನಾಶಗೊಳಿಸುವುದೂ ಆಯಿತು.

೧೯. ಋಷಿಗಳು ಹೇಳುತ್ತಾರೆ:—ಸೂತ! ನೀನು ಹೇಳಿರುವ ಆ ಕ್ಷೇತ್ರದಲ್ಲಿ ಸಕಲ ತೀರ್ಥಗಳ ಸಂಗಮವು ಅತ್ಯಾಶ್ಚರ್ಯಕರವಾದುದು.

೨೦–೨೧. ಪ್ರಾಜ್ಞನೆ! ಅಲ್ಲಿರುವ ಆ ತೀರ್ಥಗಳು ಹೇಗೆ ಅಷ್ಟು ಮಾಹಾತ್ಮ್ಯೆಯುಳ್ಳವುಗಳಾಗಿರುವುವು? ಅವುಗಳ ಹೆಸರು, ಸ್ಥಾನ, ಪ್ರಭಾವ ಮೊದಲಾದ ಎಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

ಸೂತ ಉವಾಚ :—

ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೀರ್ಥಾನಾಂ ದ್ವಿಜಸತ್ತಮಾಃ ।
ಹಾಟಕೇಶ್ವರಜಂ ಕ್ಷೇತ್ರಂ ವ್ಯಾಪ್ಯ ಸರ್ವಂ ವ್ಯವಸ್ಥಿತಾಃ ॥ ೨೨ ॥
ನ ತೇಷಾಂ ಕೀರ್ತನಂ ಶಕ್ಯಂ ಕರ್ತುಂ ವರ್ಷಶತೈರಪಿ ।
ತಥಾ ಸ್ವಾಯಂಭುವಸ್ಯಾದೌ ಕಲ್ಪಸ್ಯ ಪ್ರಥಮಸ್ಯ ಚ ॥ ೨೩ ॥
ಕೃತಸ್ಸಮಾಶ್ರಯಸ್ತತ್ರ ಕ್ಷೇತ್ರೇ ತೀರ್ಥೈಶ್ಶುಭಾವಹೇ ।
ಬಹುತ್ವಾ ದಥಕಾಲಸ್ಯ ಬಹೂನಿ ದ್ವಿಜಸತ್ತಮಾಃ ॥ ೨೪ ॥
ಉಚ್ಛೇದಂ ಸಂಪ್ರಯಾತಾನಿ ತೀರ್ಥಾನ್ಯಾಯತನಾನಿ ಚ ।
ಯಾನ್ಯಹಂ ವೇದ ಕಾರ್ತ್ಸ್ನ್ಯೇನ ಪ್ರಭಾವಸಹಿತಾನಿ ಚ ।
ತಾನಿ ವಃ ಕೀರ್ತಯಿಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೨೫ ॥
ಯೇಷಾಂ ಸಂಶ್ರವಣಾದೇವ ನರಃ ಪಾಪಾತ್ಪ್ರಮುಚ್ಯತೇ ।
ಧ್ಯಾನಾತ್ಸ್ನಾನಾತ್ತಥಾ ದಾನಾತ್ಸ್ಪರ್ಶನಾದ್ದ್ವಿಜಸತ್ತಮಾಃ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸರ್ವತೀರ್ಥಸಮಾಶ್ರಯವರ್ಣನಂ"
ನಾಮಾಷ್ಟವಿಂಶೋಽಧ್ಯಾಯಃ

---

೨೨. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಮೂರೂವರೆ ಕೋಟಿ ತೀರ್ಥಗಳು ಹಾಟಕೇಶ್ವರಜಕ್ಷೇತ್ರವನ್ನು ವ್ಯಾಪಿಸಿ ಇರುವುವು.

೨೩—೨೫. ಅವುಗಳನ್ನು ನೂರುವರ್ಷಗಳಿಂದಲೂ ಹೇಳಲು ಸಾಧ್ಯವಿಲ್ಲ. ಶುಭಕರವಾದ ಆ ಕ್ಷೇತ್ರದಲ್ಲಿ ತೀರ್ಥಗಳು ಮೊದಲನೆಯ ಸ್ವಾಯಂಭುವ ಕಲ್ಪದ ಆದಿಯಲ್ಲಿ ನೆಲೆಸಿದುವು. ಬಹಳಕಾಲ ಕಳೆದುದರಿಂದ ಅನೇಕ ತೀರ್ಥಗಳು ನಷ್ಟವಾದುವು. ನಾನು ಮಾಹಾತ್ಮ್ಯದಿಂದ ಸಹಿತವಾಗಿ ಸಂಪೂರ್ಣವಾಗಿ ತಿಳಿದ ಆ ತೀರ್ಥಗಳನ್ನು ನಿಮಗೆ ಹೇಳುವೆನು ಕೇಳಿರಿ.

೨೬. ಅವುಗಳನ್ನು ಕೇಳುವುದರಿಂದಲೂ, ಧ್ಯಾನಿಸುವುದರಿಂದಲೂ, ಅವುಗಳಲ್ಲಿ ಸ್ನಾನಮಾಡುವುದರಿಂದಲೂ, ದಾನಮಾಡುವುದರಿಂದಲೂ ಅವುಗಳನ್ನು ಮುಟ್ಟುವುದರಿಂದಲೂ ಮಾನವನು ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸರ್ವತೀರ್ಥ ಸಮಾಶ್ರಯವರ್ಣನ"ವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನತ್ರಿಂಶೋಽಧ್ಯಾಯಃ

## ಸಿದ್ಧೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏವಂ ಸರ್ವೇಷು ತೀರ್ಥೇಷು ಸಂಸ್ಥಿತೇಷು ದ್ವಿಜೋತ್ತಮಾಃ ।
ತತ್ಕ್ಷೇತ್ರಂ ಖ್ಯಾತಿಮಾಪನ್ನಂ ಸಮಸ್ತೇ ಧರಣೀತಲೇ ॥ ೧ ॥
ಸಮಸ್ತೇಭ್ಯಸ್ತತೋಽದೂರಾನ್ಮುನಯಃ ಶಂಸಿತವ್ರತಾಃ ।
ಸಂಶ್ರಯಂತಿ ತತೋ ಭೂಪಾಸ್ತಪೋಽರ್ಥಂ ಜರಯಾನ್ವಿತಾಃ ॥ ೨ ॥
ತಥಾ ತೇ ಲಿಂಗಿನೋದಾಂತಾಃ ಸಿದ್ಧಿಕಾಮಾಃ ಸಮಂತತಃ ।
ಸಮಾಶ್ರಯಂತಿ ತತ್ಕ್ಷೇತ್ರಂ ಸರ್ವತೀರ್ಥಸಮಾಶ್ರಯಂ ॥ ೩ ॥
ತತ್ರ ಸಿದ್ಧೇಶ್ವರಂನಾಮ ಲಿಂಗಮಸ್ತಿ ದ್ವಿಜೋತ್ತಮಾಃ ।
ಸರ್ವಸಿದ್ಧಿಪ್ರದಂ ನೄಣಾಂ ಸ್ವಯಂ ಸಿದ್ಧಿಪ್ರದಾಯಕಂ ॥ ೪ ॥
ನಿರ್ಭಿದ್ಯ ಭೂತಲೇ ಶರ್ವಃ ಸರ್ವವ್ಯಾಪೀ ಸದಾಶಿವಃ ।
ಹಾಟಕೇಶ್ವರಸಂಜ್ಞೇಽಸ್ಮಿನ್ಕ್ಷೇತ್ರೇ ದೇವಃ ಸ್ವಯಂಸ್ಥಿತಃ ॥ ೫ ॥

---

## ಕನ್ನಡದ ಅನುವಾದ

### ಸಿದ್ಧೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಹೀಗೆ ಸಮಸ್ತ ತೀರ್ಥಗಳಿರಲು ಆ ಕ್ಷೇತ್ರವು ಭೂಮಿಯಲ್ಲೆಲ್ಲ ಪ್ರಸಿದ್ಧವಾಯಿತು.

೨. ಸಮಸ್ತ ಸ್ಥಳಗಳಿಂದಲೂ ಶ್ಲಾಘ್ಯವ್ರತರಾದ ಮುನಿಗಳೂ, ಮುದುಕರಾದ ರಾಜರೂ ತಪಸ್ಸಿಗಾಗಿ ಆ ತೀರ್ಥವನ್ನು ಆಶ್ರಯಿಸಿದರು.

೩. ಹಾಗೆಯೇ ಸಮಸ್ತ ತೀರ್ಥಗಳಿಗೆ ಆಶ್ರಯವಾದ ಆ ಕ್ಷೇತ್ರವನ್ನು ಸಿದ್ಧಿಯನ್ನು ಬಯಸುವ ಇಂದ್ರಿಯನಿಗ್ರಹವುಳ್ಳ ಯತಿಗಳೇ ಮೊದಲಾದವರು ಆಶ್ರಯಿಸಿದರು.

೪. ಅಲ್ಲಿ ಮಾನವರಿಗೆ ಸಕಲಸಿದ್ಧಿಯನ್ನು ಕೊಡುವ ಸಿದ್ಧೇಶ್ವರವೆಂಬ ಲಿಂಗವಿರುವುದು.

೫. ಸರ್ವವ್ಯಾಪಿಯಾದ ಸದಾಶಿವನು ಭೂಮಿಯನ್ನು ಭೇದಿಸಿ ಹಾಟಕೇಶ್ವರ ಕ್ಷೇತ್ರದಲ್ಲಿ ನೆಲೆಸಿರುವನು.

ಲಿಂಗರೂಪೇಣ ಭಗವಾನ್ಪ್ರಾದುರ್ಭೂತಃ ಸ್ವಯಂ ಹರಃ ।
ಸ್ಮರಣಾದ್ದರ್ಶನಾಚ್ಚೈವ ಸರ್ವಸಿದ್ಧಿಪ್ರದಃ ಸದಾ ॥ ೬ ॥
ಸಿದ್ಧೇನಾರಾಧಿತೋ ಯಸ್ಮಾತ್ತಸ್ಮಾತ್ಸಿದ್ಧೇಶ್ವರಃ ಸ್ಮೃತಃ ।
ತಸ್ಯೈವ ವರದಾನಾದ್ಧಿ ಅತ್ರೈವಾಽವಸ್ಥಿತೋ ಹರಃ ॥ ೭ ॥
ಯಸ್ತಂ ಪಶ್ಯತಿ ಸದ್ಭಕ್ತ್ಯಾ ಶುಚಿಃ ಸ್ಪೃಶತಿ ವಾನರಃ ।
ವಾಂಛಿತಂ ಲಭತೇ ಸದ್ಯೋ ಯದ್ಯಪಿ ಸ್ಯಾತ್ಸುದುರ್ಲಭಂ ॥ ೮ ॥
ತತ್ರ ಸಿದ್ಧಿಂ ಗತಾಃ ಪೂರ್ವಂ ಶತಶಃ ಪುರುಷಾ ಭುವಿ ।
ದರ್ಶನಾತ್ಸ್ಪರ್ಶನಾಚ್ಚಾಽನ್ಯೇ ಪ್ರಣಾಮಾದಪರೇ ನರಾಃ ॥ ೯ ॥
ದಕ್ಷಿಣಾಮೂರ್ತಿಮಾಸಾದ್ಯ ಮಂತ್ರಂ ತಸ್ಯ ಷಡಕ್ಷರಂ ।
ಯೋ ಜಪೇಚ್ಛ್ರದ್ಧಯೋಪೇತಸ್ತಸ್ಯಾಯುಃ ಸಂಪ್ರವರ್ತತೇ ॥ ೧೦ ॥
ಯಾವತ್ಸಂಖ್ಯಂ ಜಪೇನ್ಮಂತ್ರಂ ತಾವತ್ಸಂಖ್ಯಾನ್ಯಹಾನಿ ಸಃ ।
ಆಯುಷಃ ಪರತೋ ಮರ್ತ್ಯೋ ಜೀವತೇ ನಾಽತ್ರ ಸಂಶಯಃ ॥ ೧೧ ॥

ಋಷಯ ಊಚುಃ:—

ಅತ್ಯಾಶ್ಚರ್ಯಮಿದಂ ಸೂತ ಯತ್ತ್ವಯಾ ಪರಿಕೀರ್ತಿತಂ ।
ಆಯುಷೋಽಪ್ಯಧಿಕಂ ಮರ್ತ್ಯೋ ಜೀವತೇ ಯದಿ ಮಾನವಃ ॥ ೧೨ ॥

---

೬. ಲಿಂಗರೂಪದಿಂದ ಆವಿರ್ಭವಿಸಿದ ಪೂಜ್ಯನಾದ ಆ ಶಿವನು ಸ್ಮರಣೆ ಮತ್ತು ದರ್ಶನಗಳಿಂದ ಸಕಲಸಿದ್ಧಿಯನ್ನೀಯುವನು.

೭. ಸಿದ್ಧನು ಆರಾಧಿಸಿರುವುದರಿಂದ ಸಿದ್ಧೇಶ್ವರನೆಂದು ಇವನು ವಿಖ್ಯಾತನಾದನು. ಆ ಸಿದ್ಧನಿಗೆ ವರವನ್ನು ಕೊಟ್ಟಿರುವುದರಿಂದ ಆ ಹರನು ಇಲ್ಲಿಯೇ ನೆಲೆಸಿರುವನು.

೮. ಇವನನ್ನು ಭಕ್ತಿಯಿಂದ ದರ್ಶನ ಅಥವಾ ಸ್ಪರ್ಶವನ್ನು ಮಾಡುವ ಮಾನವನು ದುರ್ಲಭವಾದ ಇಷ್ಟಾರ್ಥವನ್ನಾದರೂ ಕೂಡಲೆ ಪಡೆಯುವನು.

೯. ಅಲ್ಲಿ ಹಿಂದೆ ನೂರಾರು ಮಂದಿ ಮಾನವರು ದರ್ಶನ ಸ್ಪರ್ಶನ, ಪ್ರಣಾಮಗಳಿಂದ ಸಿದ್ಧಿಯನ್ನು ಪಡೆದಿರುವರು.

೧೦. ದಕ್ಷಿಣಾಮೂರ್ತಿಯ ಹತ್ತಿರ ಶ್ರದ್ಧೆಯಿಂದ ಷಡಕ್ಷರ ಮಂತ್ರವನ್ನು ಜಪಿಸುವವನಿಗೆ ಆಯುಸ್ಸು ವೃದ್ಧಿಯಾಗುವುದು.

೧೧. ಮನುಷ್ಯನು ಎಷ್ಟು ಜಪವನ್ನು ಜಪಿಸುವನೋ ಅಷ್ಟು ಸಂಖ್ಯೆಯ ದಿನಗಳು ಹೆಚ್ಚಾಗಿ ಬದುಕುವನು.

೧೨. ಋಷಿಗಳು ಹೇಳುತ್ತಾರೆ:—ಸೂತ! ಮನುಷ್ಯನು ಆಯುಸ್ಸಿಗಿಂತ ಅಧಿಕಕಾಲ ಜೀವಿಸುವನೆಂದು ನೀನು ಹೇಳಿರುವ ಈ ವಿಷಯವು ಅತ್ಯಾಶ್ಚರ್ಯಕರವಾದುದು.

ಸೂತ ಉವಾಚ :—

ಅತ್ರ ವಃ ಕೀರ್ತಯಿಷ್ಯಾಮಿ ಸ್ವಯಮೇವ ಮಯಾ ಶ್ರುತಂ ।
ವದತಸ್ತತ್ಸಮುದ್ದಿಶ್ಯ ಯದ್ವತ್ಸಸ್ಯ ಮಹಾತ್ಮನಃ ॥ ೧೩ ॥
ಪುರಾ ಮೇ ವಸಮಾನಸ್ಯ ಪುರತೋಽತ್ರ ಪಿತುರ್ಗೃಹೇ ।
ಆಯಾತಃ ಸ ಮುನಿಸ್ತತ್ರ ವತ್ಸೋ ನಾಮ ಮಹಾದ್ಯುತಿಃ ॥ ೧೪ ॥
ವಹಮಾನೋ ಯುವಾವಸ್ಥಾಂ ದ್ವಾದಶಾರ್ಕ ಸಮದ್ಯುತಿಃ ।
ಅಂಗೈಃ ಸರ್ವೈಸ್ತು ರೂಪಾಢ್ಯಃ ಕಾಮದೇವ ಇವಾಽಪರಃ ॥ ೧೫ ॥
ಮತ್ಪಿತ್ರಾ ಸ ತದಾ ದೃಷ್ಟಸ್ತತೋ ಭಕ್ತ್ಯಾಽಭಿವಾದಿತಃ ।
ಅರ್ಘ್ಯಂ ದತ್ವಾ ತತಃ ಪ್ರೋಕ್ತೋ ವಿಶ್ರಾಂತೋ ವಿನಯೇನ ಚ ॥ ೧೬ ॥
ಸ್ವಾಗತಂ ತವ ವಿಪ್ರೇಂದ್ರ ಕುತಸ್ತ್ವಮಿಹ ಚಾಽಽಗತಃ ।
ಆದೇಶೋ ದೀಯತಾಂ ಮಹ್ಯಂ ಕಿಂ ಕರೋಮಿ ಯಥೋಚಿತಂ ॥ ೧೭ ॥

ವತ್ಸ ಉವಾಚ :—

ತವಾಶ್ರಮಪದೇ ಸೂತ ಚಾತುರ್ಮಾಸ್ಯಸಮುದ್ಭವಂ ।
ಕರ್ತುಮಿಚ್ಛಾಮ್ಯನುಷ್ಠಾನಂ ಶುಶ್ರೂಷಾಂ ಚೇತ್ಕರೋಷಿ ಮೇ ॥ ೧೮ ॥

ಲೋಮಹರ್ಷಣ ಉವಾಚ :—

ಏವಂ ವಿಪ್ರ ಕರಿಷ್ಯಾಮಿ ತವಾದೇಶಮಸಂಶಯಂ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ತ್ವಂ ಮೇ ಗೃಹಮಾಗತಃ ॥ ೧೯ ॥

---

೧೩. ಸೂತನು ಹೇಳುತ್ತಾನೆ :—ಹಿಂದೆ ಆ ವಿಷಯವನ್ನು ಕುರಿತು ವತ್ಸನು ಹೇಳಿದುದನ್ನು ನಾನು ಕೇಳಿದಂತೆ ನಿಮಗೆ ಹೇಳುವೆನು.

೧೪–೧೫. ಹಿಂದೆ ಮನೆಯಲ್ಲಿ ನಾನು ತಂದೆಯ ಬಳಿ ವಾಸಮಾಡುತ್ತಿರಲು ವತ್ಸನೆಂಬ ತೇಜಸ್ವಿಯೂ, ಯುವಕನೂ, ದ್ವಾದಶಾದಿತ್ಯರಂತೆ ಕಾಂತಿಯುಳ್ಳವನೂ, ಮತ್ತೊಬ್ಬ ಮನ್ಮಥನಂತೆ ಸರ್ವಾಂಗಸುಂದರನೂ ಆದ ವತ್ಸನೆಂಬ ಮುನಿಯು ಬಂದನು.

೧೬. ನನ್ನ ತಂದೆಯು ಅವನನ್ನು ಕಂಡು ಭಕ್ತಿಯಿಂದ ಅಭಿವಾದಿಸಿ ಅರ್ಘ್ಯವನ್ನಿತ್ತು ವಿಶ್ರಾಂತನಾದ ಅವನನ್ನು ಕುರಿತು ಹೀಗೆಂದನು.

೧೭. "ದ್ವಿಜೋತ್ತಮ! ನಿನಗೆ ಸುಖಾಗಮನವಾಗಲಿ. ನೀನು ಎಲ್ಲಿಂದ ಇಲ್ಲಿಗೆ ಬಂದೆ? ನನಗೆ ಅಪ್ಪಣೆಯನ್ನು ಕೊಡು.. ಉಚಿತವಾದ ಯಾವುದನ್ನು ಮಾಡಲಿ."

೧೮. ವತ್ಸನು ಹೇಳುತ್ತಾನೆ :—ಸೂತ! ನೀನು ನನ್ನನ್ನು ಸೇವಿಸುವುದಾದರೆ ನಿನ್ನ ಆಶ್ರಮದಲ್ಲಿ ನಾನು ಚಾತುರ್ಮಾಸ್ಯ ವ್ರತವನ್ನಾಚರಿಸಲು ಬಯಸುವೆನು.

೧೯. ಲೋಮಹರ್ಷಣನು ಹೇಳುತ್ತಾನೆ :—ಮುನಿಯೆ! ನಾನು ನಿನ್ನ ಅಪ್ಪಣೆಯನ್ನು ನಿಶ್ಚಯವಾಗಿಯೂ ನೆರವೇರಿಸುವೆನು. ನೀನು ನನ್ನ ಮನೆಗೆ ಬಂದುದರಿಂದ ನಾನು ಧನ್ಯನೂ, ಅನುಗೃಹೀತನೂ ಆಗಿರುವೆನು.

ಏವಮುಕ್ತ್ವಾಽಥ ಮಾಮಾಹ ಸ ಪಿತಾ ದ್ವಿಜಸತ್ತಮಾಃ ।
ತ್ವಯಾ ವತ್ಸಸ್ಯ ಕರ್ತವ್ಯಾ ಶುಶ್ರೂಷಾ ನಿತ್ಯಮೇವ ಹಿ ॥ ೨೦ ॥
ತತೋಽಹಂ ವಿನಯೋಪೇತಸ್ತಸ್ಯ ಕೃತ್ಯಾನಿ ಕೃತ್ಸ್ನಶಃ ।
ಕರೋಮಿ ಸ ಚ ಮೇ ರಾತ್ರೌ ಚಿತ್ರಾಃ ಕೀರ್ತಯತೇ ಕಥಾಃ ॥ ೨೧ ॥
ರಾಜರ್ಷೀಣಾಂ ಪುರಾಣಾನಾಂ ದೇವದಾನವರಕ್ಷಸಾಂ ।
ದ್ವೀಪಾನಾಂ ಪರ್ವತಾನಾಂ ಚ ಸ್ವಯಂ ದೃಷ್ಟ್ವಾ ಸಹಸ್ರಶಃ ॥ ೨೨ ॥
ಏಕದಾತು ಮಯಾಪೃಷ್ಟಃ ಕಥಾಂತೇ ಪ್ರಾಪ್ಯ ಕೌತುಕಂ ।
ವಿಸ್ಮಯಾವಿಷ್ಟಚಿತ್ತೇನ ಸ ದ್ವಿಜೋ ದ್ವಿಜಸತ್ತಮಾಃ ॥ ೨೩ ॥
ಭಗವನ್ ಸುಕುಮಾರಂ ತೇ ಶರೀರಂ ಪ್ರಥಮಂ ವಯಃ ।
ದ್ವೀಪಾನಾಂ ಚ ಕರೋಷಿ ತ್ವಂ ಕಥಾಶ್ಚಿತ್ರಾಃ ಪೃಥಕ್ ಪೃಥಕ್ ॥ ೨೪ ॥
ಕಥಂ ಸರ್ವಂ ಧರಾಪೃಷ್ಠಂ ಸ ಸಮುದ್ರಂ ನಿರೀಕ್ಷಿತಂ ।
ಸ್ವಲ್ಪೇನ ವಯಸಾ ತಾತ ಸರ್ವಂ ವಿಸ್ತರತೋ ವದ ॥ ೨೫ ॥
ತ್ವಯಾ ಯೇ ಕೀರ್ತಿತಾ ದ್ವೀಪಾಃ ಸಮುದ್ರಾಃ ಪರ್ವತಾಸ್ತಥಾ ।
ಮನಸಾಽಪಿ ನ ಶಕ್ಯಾಸ್ತೇ ಗಂತುಂ ಮರ್ತ್ಯೈಃ ಕಥಂಚನ ॥ ೨೬ ॥
ಅತ್ರ ಕೌತೂಹಲಂ ಜಾತಮಶ್ರದ್ಧೇಯಂ ವಚಸ್ತಥಾ ।
ಶ್ರುತ್ವಾ ಶ್ರದ್ಧೇಯವಾಕ್ಯಸ್ಯ ತಸ್ಮಾತ್ಸತ್ಯಂ ಪ್ರಕೀರ್ತಯ ॥ ೨೭ ॥

---

೨೦. ದ್ವಿಜೋತ್ತಮರೆ! ಆ ನನ್ನ ತಂದೆಯು ಹೀಗೆ ಹೇಳಿ ನನ್ನನ್ನು ಕುರಿತು ನೀನು ಯಾವಾಗಲೂ ವತ್ಸಮುನಿಯನ್ನು ಸೇವಿಸಬೇಕೆಂದನು.

೨೧-೨೨. ತರುವಾಯ ನಾನು ವಿನಯದಿಂದ ಅವನ ಶುಶ್ರೂಷಾ ಕಾರ್ಯಗಳನ್ನೆಲ್ಲ ಮಾಡುತಿದ್ದೆನು. ಅವನು ನನಗೆ ರಾತ್ರಿಯವೇಳೆ ನಾನು ನೋಡದ ಪುರಾತನರಾಜರ್ಷಿಗಳು, ದೇವ, ದಾನವ, ರಾಕ್ಷಸರು, ದ್ವೀಪಪರ್ವತಗಳು, ಇವುಗಳ ವಿಚಿತ್ರ ಕಥೆಗಳನ್ನು ಹೇಳುತ್ತಿದ್ದನು.

೨೩. ಒಂದಾನೊಂದು ವೇಳೆ ನಾನು ಕಥೆಯ ಕೊನೆಯಲ್ಲಿ ಕುತೂಹಲಗೊಂಡು ವಿಸ್ಮಯದಿಂದ ಆ ಬ್ರಾಹ್ಮಣನನ್ನು ಹೀಗೆ ಕೇಳಿದೆನು.

೨೪. ಪೂಜ್ಯನೆ! ನಿನ್ನ ಶರೀರವು ಕೋಮಲವಾಗಿರುವುದು. ಇನ್ನೂ ಪೂರ್ವವಯಸ್ಸು. ಆದರೂ ದ್ವೀಪಗಳ ವಿಚಿತ್ರವಾದ ಕಥೆಗಳನ್ನು ಬೇರೆಬೇರೆಯಾಗಿ ಹೇಳುವೆ.

೨೫. ತಾತ! ನೀನು ಈ ಅಲ್ಪ ವಯಸ್ಸಿನಲ್ಲಿ ಸಮುದ್ರಗಳಿಂದ ಸಹಿತವಾದ ಸಮಗ್ರ ಭೂಮಿಯನ್ನು ಹೇಗೆ ನೋಡಿದೆ? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೨೬-೨೭. ನೀನು ಹೇಳಿದ ದ್ವೀಪಗಳೂ, ಸಮುದ್ರಗಳೂ, ಪರ್ವತಗಳೂ ಮಾನವರಿಗೆ ಮನಸ್ಸಿನಿಂದಲೂ ಹೋಗಲಶಕ್ಯವಾದುವು. ನೀನು ನಂಬಲರ್ಹವಾದ ಮಾತುಳ್ಳವನು. ಈಗ ನೀನಾಡುತ್ತಿರುವ ಮಾತುಗಳೋ ನಂಬಲನರ್ಹವಾದುವು. ಇವುಗಳನ್ನು ಕೇಳಿ ನನಗೆ ಕುತೂಹಲವುಂಟಾಗಿದೆ. ಆದ್ದರಿಂದ ಸತ್ಯವನ್ನು ಹೇಳು.

ತಪಸಃ ಕಿಂ ಪ್ರಭಾವೋಽಯಂ ಕಿಂ ವಾ ಮಂತ್ರಪರಾಕ್ರಮಃ ।
ಯೇನ ಪೃಥ್ವೀತಲಂ ಕೃತ್ಸ್ನಂ ತ್ವಯಾದೃಷ್ಟಂ ಮುನೀಶ್ವರ ॥ ೨೮ ॥
ಕಿಂ ವಾ ದೇವಪ್ರಸಾದಸ್ತು ತವೌಷಧಿಕೃತೋಽಥವಾ ।
ತಚ್ಚ ಪುಣ್ಯತಮಂ ತಾತ ತ್ವಂ ಮೇ ಬ್ರೂಹಿ ಸವಿಸ್ತರಂ ॥ ೨೯ ॥
ಅಥ ಮಾಂ ಸ ಮುನಿಃ ಪ್ರಾಹ ವಿಹಸ್ಯ ಮುನಿಸತ್ತಮಾಃ ।
ಸತ್ಯಮೇತತ್ತ್ವಯಾ ಜ್ಞಾತಂ ಮಮ ಮಂತ್ರಪರಾಕ್ರಮಂ ॥ ೩೦ ॥
ಸದಾಹಮಷ್ಟಸಂಯುಕ್ತಂ ಸಹಸ್ರಂ ಶಿವಸನ್ನಿಧೌ ।
ಜಪಾಮಿ ಶಿವಮಂತ್ರಸ್ಯ ಷಡಕ್ಷರಮಿತಸ್ಯಚ ॥ ೩೧ ॥
ತ್ರಿಕಾಲಂ ತೇನ ಮೇ ಜಾತಂ ಸುಸ್ಥಿರಂ ಯೌವನಂ ಮುನೇ ।
ಅತೀತಾನಾಗತಂ ಜ್ಞಾತಂ ಜೀವಿತಂ ಚ ಸುಖೋದಯಂ ॥ ೩೨ ॥
ಮಮ ವರ್ಷಸಹಸ್ರಾಣಿ ಬಹೂನಿ ಪ್ರಯುತಾನಿಚ ।
ಸಂಜಾತಾನಿ ಮಹಾಭಾಗ ದೃಶ್ಯತೇ ಪ್ರಥಮಂ ವಯಃ ॥ ೩೩ ॥
ಅತ್ರ ತೇ ಕೀರ್ತಯಿಷ್ಯಾಮಿ ವಿಸ್ತರೇಣ ಮಹಾಮತೇ ।
ಯಥಾ ಸಿದ್ಧಿರ್ಮಯಾ ಪ್ರಾಪ್ತಾ ಪ್ರಸಾದಾಚ್ಛಂಕರಸ್ಯಚ ॥ ೩೪ ॥
ಅಹಂ ಹಿ ಬ್ರಾಹ್ಮಣೋ ನಾಮ್ನಾ ವತ್ಸಃ ಖ್ಯಾತೋ ಮಹೀತಲೇ ।
ನಾನಾಶಾಸ್ತ್ರಕೃತಾಽಭ್ಯಾಸಃ ಪುರಾಽಽಸಂ ವೇದಪಾರಗಃ ॥ ೩೫ ॥

---

೨೮–೨೯. ಮುನೀಶ್ವರ! ನೀನು ಸಮಗ್ರ ಧರಣಿಯನ್ನು ನೋಡಿರುವೆಯಷ್ಟೆ. ಇದು ತಪಸ್ಸಿನ ಪ್ರಭಾವವೋ? ಅಥವಾ ಮಂತ್ರಶಕ್ತಿಯೋ? ಅಥವಾ ದೇವತಾನುಗ್ರಹವೋ? ಅಥವಾ ಔಷಧಿಯ ಸಾಮರ್ಥ್ಯವೋ? ಆ ಅತಿಶಯ ಪುಣ್ಯವನ್ನು ನನಗೆ ವಿಸ್ತಾರವಾಗಿ ಹೇಳು.

೩೦. ಬಳಿಕ ಆ ಮುನಿಯು ನಕ್ಕು ಹೀಗೆಂದನು. "ನೀನು ನಿಜವಾಗಿಯೂ ನನ್ನ ಮಂತ್ರಶಕ್ತಿಯನ್ನು ಅರಿತಿರುವೆ.

೩೧–೩೨. ನಾನು ಯಾವಾಗಲೂ ತ್ರಿಕಾಲಗಳಲ್ಲಿ ಶಿವಸಾನ್ನಿಧ್ಯದಲ್ಲಿ ಎಂಟು ಸಾವಿರ ಶಿವಷಡಕ್ಷರ ಮಂತ್ರವನ್ನು ಜಪಿಸುವೆನು. ಅದರಿಂದ ನನಗೆ ಸ್ಥಿರವಾದ ಯೌವನವೂ, ಅತೀತಾನಾಗತ ಜ್ಞಾನವೂ, ಸುಖಕರವಾದ ಜೀವನವೂ ಉಂಟಾಯಿತು.

೩೩. ಎಲೈ ಮಹಾಭಾಗ್ಯವಂತನೆ! ನಾನು ಅನೇಕ ಸಾವಿರ ವರ್ಷ ವಯಸ್ಸಾಗಿದ್ದರೂ ಪ್ರಥಮ ವಯಸ್ಸಿನವನಂತೆ ಕಾಣುತ್ತೇನೆ.

೩೪. ನನಗೆ ಶಂಕರನ ಅನುಗ್ರಹದಿಂದ ಹೇಗೆ ಸಿದ್ಧಿಯುಂಟಾಯಿತೆಂಬುದನ್ನು ನಿನಗೆ ವಿಸ್ತಾರವಾಗಿ ಹೇಳುವೆನು.

೩೫. ಹಿಂದೆ ನಾನು ಅನೇಕ ಶಾಸ್ತ್ರಗಳನ್ನು ಅಭ್ಯಾಸಮಾಡಿದ ವೇದಜ್ಞನಾದ ವತ್ಸನೆಂಬ ವಿಖ್ಯಾತ ಬ್ರಾಹ್ಮಣನಾಗಿದ್ದೆನು.

ಏತಸ್ಮಿನ್ನೇವ ಕಾಲೇತು ಮೇನಕಾ ಚ ವರಾಪ್ಸರಾಃ ।
ವಸಂತಸಮಯೇ ಪ್ರಾಪ್ತಾ ಮರ್ತ್ಯಲೋಕೇ ಯದೃಚ್ಛಯಾ ॥ ೩೬ ॥
ಸಾ ಗತಾ ಭ್ರಮಮಾಣಾಽಥ ಕಾಮ್ಯಕಂ ನಾಮ ಸದ್ವನಂ ।
ಮತ್ತಕೋಕಿಲನಾದಾಢ್ಯಂ ಮನೋಜ್ಞದ್ರುಮಸಂಕುಲಂ ॥ ೩೭ ॥
ಯತ್ರಾಸ್ತೇ ಮುನಿಶಾರ್ದೂಲೋ ದೇವರಾತ ಇತಿಸ್ಮೃತಃ ।
ವ್ರತಸ್ವಾಧ್ಯಾಯಸಂಪನ್ನಸ್ತಪಸಾ ಧ್ವಸ್ತಕಿಲ್ಬಿಷಃ ॥ ೩೮ ॥
ಉಪವಿಷ್ಟೋ ನದೀತೀರೇ ದೇವತಾರ್ಚಾಪರಾಯಣಃ ।
ಶ್ರದ್ಧಯಾ ಪರಯಾ ಯುಕ್ತ ಏಕಾಕೀ ನಿರ್ಜನೇವನೇ ॥ ೩೯ ॥
ಅಥ ಸಾ ಪಶ್ಯತಸ್ತಸ್ಯ ವಿವಸ್ತ್ರಾಪ್ರಾವಿಶಜ್ಜಲಂ ।
ದಿವ್ಯರೂಪಸಮೋಪೇತಾ ಘರ್ಮಾರ್ತಾ ವರವರ್ಣಿನೀ ॥ ೪೦ ॥
ಅಥ ತಸ್ಯ ಮುನೀಂದ್ರಸ್ಯ ರೇತಶ್ಚಸ್ಕಂದ ತತ್ಕ್ಷಣಾತ್ ।
ದೃಷ್ಟ್ವಾ ತಾಂ ಚಾರುಸರ್ವಾಂಗೀಂ ಜಲಮಧ್ಯಂ ಸಮಾಶ್ರಿತಾಂ ॥ ೪೧ ॥
ಏತಸ್ಮಿನ್ನಂತರೇ ಪ್ರಾಪ್ತಾ ಸಾರಂಗೀ ಸುಪಿಪಾಸಿತಾ ।
ಜಲಮಿಶ್ರಂ ತಯಾ ರೇತಃ ಪೀತಂ ಸರ್ವಮಶೇಷತಃ ॥ ೪೨ ॥

---

೩೬. ಈ ಸಮಯದಲ್ಲಿ ಒಂದಾನೊಂದು ವಸಂತಕಾಲದಲ್ಲಿ ಮೇನಕೆಯೆಂಬ ಉತ್ತಮಳಾದ ಅಪ್ಸರೆಯು ಸ್ವೇಚ್ಛೆಯಿಂದ ಭೂಮಿಗೆ ಬಂದಳು.

೩೭. ಅವಳು ಸಂಚರಿಸುತ್ತ ಮದಿಸಿದ ಕೋಕಿಲನಾದದಿಂದ ಕೂಡಿರುವುದೂ, ಮನೋಹರವಾದ ವೃಕ್ಷಗಳಿಂದ ತುಂಬಿರುವುದೂ ಆದ ಕಾಮ್ಯಕವೆಂಬ ವನಕ್ಕೆ ಹೋದಳು.

೩೮. ಅಲ್ಲಿ ವ್ರತ, ವೇದಾಧ್ಯಯನಸಂಪನ್ನನೂ, ತಪಸ್ಸಿನಿಂದ ನೀಗಿದ ಪಾಪವುಳ್ಳವನೂ ಆದ ದೇವರಾತನೆಂಬ ಮುನಿಶ್ರೇಷ್ಠನಿದ್ದನು.

೩೯–೪೦. ಅವನು ನದಿಯ ದಡದಲ್ಲಿ ನಿರ್ಜನವಾದ ವನದಲ್ಲಿ ಒಬ್ಬಂಟಿಗನಾಗಿ ಅತ್ಯಂತ ಶ್ರದ್ಧೆಯಿಂದ ದೇವಪೂಜೆಯನ್ನು ಮಾಡುತ್ತ ಕುಳಿತು ನೋಡುತ್ತಿರುವಾಗಲೇ ದಿವ್ಯರೂಪದಿಂದ ಕೂಡಿದವಳೂ, ಬಿಸಿಲಿನಿಂದ ಬಳಲಿದವಳೂ ಆದ ಆ ಮೇನಕೆಯು ನಗ್ನಳಾಗಿ ನೀರನ್ನು ಪ್ರವೇಶಿಸಿದಳು.

೪೧. ತರುವಾಯ ನೀರಿನಲ್ಲಿಳಿದ ಸುಂದರಿಯಾದ ಆ ಮೇನಕೆಯನ್ನು ನೋಡಿ ಆ ದೇವರಾತ ಮುನಿವರ್ಯನ ರೇತಸ್ಸು ಕೂಡಲೆ ಸ್ಖಲಿತವಾಯಿತು.

೪೨. ಈ ಸಮಯದಲ್ಲಿ ಒಂದು ಹೆಣ್ಣು ಜಿಂಕೆಯು ಬಾಯಾರಿಕೆಗೊಂಡು ಅಲ್ಲಿಗೆ ಬಂದು ನೀರಿನಲ್ಲಿ ಮಿಶ್ರವಾದ ಆ ರೇತಸ್ಸನ್ನು ಸಂಪೂರ್ಣವಾಗಿ ಕುಡಿಯಿತು.

ಅಥ ಸಾಽಪಿ ದಧೇ ಗರ್ಭಂ ಮಾನುಷಂ ವೈ ಪ್ರಭಾವತಃ ।
ಅಮೋಘರೇತಸೋ ಮಾಸೇ ಸುಷುವೇ ದಶಮೇ ತತಃ ॥ ೪೩ ॥
ಜನಯಾಮಾಸ ದೀಪ್ತಾಂಗೀ ಕನ್ಯಾಂ ಪದ್ಮದಲೇಕ್ಷಣಾಂ ।
ತಸ್ಮಿನ್ನೇವ ಜಲೇ ಪುಣ್ಯೇ ದೇವರಾತಾಶ್ರಮಂಪ್ರತಿ ॥ ೪೪ ॥
ಅಥತಾಂ ಸಮುನಿರ್ಜ್ಞಾತ್ವಾ ಸ್ವಜ್ಞಾನೇನ ಸ್ವವೀರ್ಯಜಾಂ ।
ಕೃಪಯಾ ಪರಯಾವಿಷ್ಟೋ ಜಗ್ರಾಹ ಚ ಪುಪೋಷ ಚ ॥ ೪೫ ॥
ಸ್ನೇಹೇನ ಮಹತಾ ಯುಕ್ತಃ ಕೃತಕೌತುಕಮಂಗಲಃ ।
ರಕ್ಷಮಾಣೋ ವನೇ ಚೈನಾಂ ಶ್ವಾಪದೇಭ್ಯಃ ಪ್ರಯತ್ನತಃ ॥ ೪೬ ॥
ಆಜಹಾರ ಸುಪುಷ್ಪಾಣಿ ತತ್ಕೃತೇ ಸುಫಲಾನಿ ಸಃ ।
ಸ್ವಯಂ ಗತ್ವಾ ಸುದೂರಂಚ ಕಾನನೇ ಶ್ವಾಪದಾಕುಲೇ ॥ ೪೭ ॥
ತತ್ರಸ್ಥಾ ವವೃಧೇ ಸಾಚ ನಾಮ್ನಾ ಖ್ಯಾತಾ ಮೃಗಾವತೀ ।
ಶುಕ್ಲಪಕ್ಷೇ ಯಥಾ ವ್ಯೋಮ್ನಿ ಕಲೇವ ಶಶಲಕ್ಷ್ಮಣಃ ॥ ೪೮ ॥
ಅಥ ಸಾ ಭ್ರಮಮಾಣೇನ ಮಯಾ ದೃಷ್ಟ್ವಾ ಮೃಗೇಕ್ಷಣಾ ।
ತತೋಽಹಂ ಕಾಮಬಾಣೇನ ತತ್ಕ್ಷಣಾತ್ತಾಡಿತೋ ಹೃದಿ ॥ ೪೯ ॥
ವಿಜ್ಞಾಯ ಚ ಕುಮಾರೀಂ ತಾಂ ಸವರ್ಣಾಂ ಚಾರುಹಾಸಿನೀಂ ।
ಆದರೇಣ ಗೃಹಂ ಗತ್ವಾ ಸಮುನಿರ್ಯಾಚಿತಸ್ತತಃ ॥ ೫೦ ॥

---

೪೩. ಆ ಅಮೂಲ್ಯ ರೇತಸ್ಸಿನ ಪ್ರಭಾವದಿಂದ ಗರ್ಭವನ್ನು ಧರಿಸಿದ ಆ ಸಾರಂಗಿಯು ಹತ್ತನೆ ತಿಂಗಳಲ್ಲಿ ಪ್ರಸವಿಸಿತು.

೪೪–೪೫. ಆಶ್ರಮದ ಹತ್ತಿರವಿರುವ ಅದೇ ನೀರಿನಲ್ಲಿ ಆ ಸಾರಂಗಿಯು ಪ್ರಸವಿಸಿದ ಪದ್ಮದಂತೆ ಕಣ್ಣುಳ್ಳ ಆ ಕನ್ಯೆಯನ್ನು ಕಂಡು ದೇವರಾತನು ಜ್ಞಾನ ದೃಷ್ಟಿಯಿಂದ ಆ ಶಿಶುವು ತನ್ನ ರೇತಸ್ಸಿನಿಂದ ಹುಟ್ಟಿದೆಯೆಂದು ತಿಳಿದು ಅತಿ ಕರುಣೆಯಿಂದ ಅದನ್ನು ತೆಗೆದುಕೊಂಡು ಪೋಷಿಸಿದನು.

೪೬–೪೭. ಅವನು ಅತಿ ಸ್ನೇಹದಿಂದ ಕೌತುಕಮಂಗಳವನ್ನು ಮಾಡಿ ಕಾಡಿನಲ್ಲಿ ಆ ಕನ್ಯೆಯನ್ನು ಹಿಂಸ್ರಮೃಗಗಳಿಂದ ರಕ್ಷಿಸುತ್ತ ಘಾತಕ ಪ್ರಾಣಿಗಳುಳ್ಳ ಕಾಡಿನಲ್ಲಿ ತಾನೇ ದೂರ ಹೋಗಿ ಆ ಕನ್ಯೆಗಾಗಿ ರುಚಿಯಾದ ಹಣ್ಣುಗಳನ್ನು ತಂದನು.

೪೮. ಮೃಗಾವತಿಯೆಂದು ಹೆಸರಾದ ಆ ಕನ್ಯೆಯು ಆಕಾಶದಲ್ಲಿ ಶುಕ್ಲ ಪಕ್ಷದ ಚಂದ್ರನ ಕಲೆಯಂತೆ ಬೆಳೆದಳು.

೪೯. ಬಳಿಕ ನಾನು ಸಂಚರಿಸುತ್ತ ಅಲ್ಲಿಗೆ ಹೋಗಿ ಆ ಮೃಗಾಕ್ಷಿಯನ್ನು ನೋಡಿ ಕೂಡಲೆ ಮದನಶರದಿಂದ ತಾಡಿತನಾದೆನು.

೫೦. ಸುಂದರಿಯಾದ ಆ ಕುಮಾರಿಯು ಸವರ್ಣಳೆಂದರಿತು ಪ್ರೀತಿಯಿಂದ ದೇವರಾತನ ಮನೆಗೆ ಹೋಗಿ ಅವನನ್ನು ಹೀಗೆ ಯಾಚಿಸಿದೆನು.

ಪ್ರಯಚ್ಛೈನಾಂ ಮಮ ಬ್ರಹ್ಮನ್ ಪತ್ನ್ಯರ್ಥಂ ನಿಜಕನ್ಯಕಾಂ ।
ಯಥಾತ್ಮಾ ಪೋಷಯಿಷ್ಯಾಮಿ ಭೋಜನಾಚ್ಛಾದನಾದಿಭಿಃ ॥ ೫೧ ॥
ತತಸ್ತೇನ ಪ್ರದತ್ತಾ ಮೇ ತತ್ಕ್ಷಣಾದೇವ ಸುಂದರೀ ।
ವಿಧಿನಾ ಶಾಸ್ತ್ರದೃಷ್ಟೇನ ನಕ್ಷತ್ರೇ ಭಗದೈವತೇ ॥ ೫೨ ॥
ತತಃ ಕತಿಪಯಾಹಸ್ಯ ಮಯೋಢಾ ಸಾ ಸುವಿಸ್ಮಿತಾ ।
ಸಖೀಜನ ಸಮಾಯುಕ್ತಾ ಫಲಾರ್ಥಂ ನಿರ್ಗತಾ ವನೇ ॥ ೫೩ ॥
ಅಥ ವೀರುಧಸಂಛನ್ನೇ ವನೇ ತಸ್ಮಿನ್ ಸುಸಂಸ್ಥಿತೇ ।
ತಯಾ ನ್ಯಸ್ತಂ ಪದಂ ಮೂರ್ಧ್ನಿ ತೃಣಾಚ್ಛನ್ನಸ್ಯ ಭೋಗಿನಃ ॥ ೫೪ ॥
ಸಾ ದಷ್ಟಾ ಸಹಸಾ ತೇನ ಪತಿತಾ ವಸುಧಾತಲೇ ।
ವಿಷಾರ್ದಿತಾ ಗತಪ್ರಾಣಾ ತತ್ಕ್ಷಣಾದೇವ ಭಾಮಿನೀ ॥ ೫೫ ॥
ಅಥ ಸಖ್ಯಃ ಸಮಾಗತ್ಯ ತಸ್ಯಾ ದುಃಖೇನ ದುಃಖಿತಾಃ ।
ಶಶಂಸುಸ್ತಾ ಯಥಾ ವೃತ್ತಂ ರುದಂತ್ಯೋ ಮಮ ಸೂತಜ ॥ ೫೬ ॥
ತತೋಽಹಂ ಸತ್ವರಂ ಗತ್ವಾ ದೃಷ್ಟ್ವಾ ತಾಂ ಪತಿತಾಂ ಭುವಿ ।
ವಿಲಾಪಾನ್ಯತವಾನ್ದೀನೋ ರುದಿತಂ ಕರುಣಸ್ವರಂ ॥ ೫೭ ॥

---

೫೧. "ಮುನಿಯೆ! ನಿನ್ನೀ ಕನ್ಯೆಯನ್ನು ನನಗೆ ಪತ್ನಿಯಾಗಿ ಕೊಡು. ಇವಳನ್ನು ನಾನು ಭೋಜನ, ಹೊದ್ದಿಕೆ ಮೊದಲಾದುವುಗಳಿಂದ ನನ್ನಂತೆಯೇ ಪೋಷಣೆಮಾಡುವೆನು."

೫೨. ಅನಂತರ ಅವನು ಕೂಡಲೆ ಶಾಸ್ತ್ರವಿಧಿಯಿಂದ ಸೂರ್ಯದೇವತಾಕ ನಕ್ಷತ್ರದಲ್ಲಿ ಆ ಸುಂದರಿಯನ್ನು ನನಗೆ ಮದುವೆ ಮಾಡಿಕೊಟ್ಟನು.

೫೩. ವಿವಾಹವಾದ ಕೆಲವು ದಿನಗಳಲ್ಲಿ ಆ ಮೃಗಾವತಿಯು ಸಖಿಯರೊಡನೆ ಹಣ್ಣಿಗಾಗಿ ಕಾಡಿಗೆ ಹೋದಳು.

೫೪. ಲತಾಚ್ಛಾದಿತವಾದ ಆ ಕಾಡಿನಲ್ಲಿ ಹುಲ್ಲಿನಿಂದ ಮುಚ್ಚಿದ ಸರ್ಪದ ತಲೆಯಲ್ಲಿ ಪಾದವನ್ನಿಟ್ಟಳು.

೫೫. ಕೂಡಲೆ ಆ ಸರ್ಪವು ಕಚ್ಚಲು ವಿಷವೇರಿ ಮಡಿದು ನೆಲದಮೇಲೆ ಬಿದ್ದಳು.

೫೬. ಬಳಿಕ ಸಖಿಯರು ಅವಳ ದುಃಖದಿಂದ ದುಃಖಿತರಾಗಿ ಅಳುತ್ತ ನಡೆದ ಸಮಾಚಾರವನ್ನು ನನಗೆ ತಿಳಿಸಿದರು.

೫೭. ನಾನು ಶೀಘ್ರವಾಗಿ ಅಲ್ಲಿಗೆ ಹೋಗಿ ನೆಲದಮೇಲೆ ಬಿದ್ದ ಅವಳನ್ನು ಕಂಡು ದೈನ್ಯದಿಂದ ಗೋಳಾಡಿದೆನು.

ಇಯಂ ಮೇ ಸುವಿಶಾಲಾಕ್ಷೀ ಮನಃಪ್ರಾಣಸಮಾ ಪ್ರಿಯಾ ।
ಮೃತಾ ಭೂಮೌ ಯಯಾ ಹೀನೋ ನಾಽಹಂ ಜೀವಿತುಮುತ್ಸಹೇ ॥೫೮॥
ಸೋಽಹಮದ್ಯ ಗಮಿಷ್ಯಾಮಿ ಪರಲೋಕಂ ಸಹಾಽನಯಾ ।
ಪ್ರಿಯಾರಹಿತ ಹರ್ಮ್ಯಸ್ಯ ಜೀವಿತಸ್ಯ ಚ ಕಿಂ ಫಲಂ ॥ ೫೯ ॥
ಪುತ್ರಪೌತ್ರವಧೂಭಿಶ್ಚ ಭೃತ್ಯ ವರ್ಗಯುತಸ್ಯ ಚ ।
ಪತ್ನೀಹೀನಾನಿ ನೋ ರೇಜುರ್ಗೃಹಾಣಿ ಗೃಹಮೇಧಿನಾಂ ॥ ೬೦ ॥
ಯದೀಯಂ ಕರ್ಣನೇತ್ರಾಂತಾ ತನ್ವಂಗೀ ಮಧುರಸ್ವರಾ ।
ನ ಜೀವತಿ ಪೃಥುಶ್ರೋಣೀ ಮರಿಷ್ಯೇಽಹಮಸಂಶಯಂ ॥ ೬೧ ॥
ಏವಂ ವಿಲಪಮಾನಸ್ಯ ಮಮ ಸೂತಕುಲೋದ್ವಹ ।
ಆಗತಾಃ ಸುಹೃದಃ ಸರ್ವೇ ರುರುದುಸ್ತೇಽಪಿ ದುಃಖಿತಾಃ ॥ ೬೨ ॥
ರುದಿತ್ವಾ ಸುಚಿರಂ ತತ್ರ ತೈಃ ಸಮಂ ಮಹತೀಂ ಚಿತಾಂ ।
ಕೃತ್ವಾ ತಾಂ ಸನ್ನಿಧಾಯಾಽಥ ಪ್ರದತ್ತೋ ಹವ್ಯವಾಹನಃ ॥ ೬೩ ॥
ತತ ಆದಾಯ ಮಾಂ ಕೃಚ್ಛ್ರಾನ್ಮಿತ್ರೈಶ್ಚ ಸ್ವಗೃಹಂ ಪ್ರತಿ ।
ರುದಂತಂ ಪ್ರಸ್ಖಲಂತಂ ಚ ಮುಹ್ಯಮಾನಂ ಪದೇ ಪದೇ ॥ ೬೪ ॥

---

೫೮. "ಈ ನನ್ನ ಮನಸ್ಸು ಮತ್ತು ಪ್ರಾಣಗಳಿಗೆ ಸಮಾನಳಾದ ಸುಂದರಿಯಾದ ಪ್ರೇಯಸಿಯು ಮಡಿದು ನೆಲದಲ್ಲಿ ಬಿದ್ದಿರುವಳು. ಅವಳನ್ನಗಲಿ ನಾನು ಬದುಕಲಾರೆ.

೫೯. ಅಂತಹ ನಾನು ಈಗ ಇವಳೊಡನೆ ಪರಲೋಕಕ್ಕೆ ಹೋಗುವೆನು. ಪ್ರಿಯಳಿಲ್ಲದ ಮನೆ ಮತ್ತು ಬದುಕಿನಿಂದೇನು ಪ್ರಯೋಜನ?

೬೦. ಪುತ್ರ, ಪೌತ್ರ, ಸೊಸೆ, ಭೃತ್ಯರು ಇವರಿಂದ ಸಹಿತರಾಗಿದ್ದರೂ ಗೃಹಸ್ಥರಿಗೆ ಪತ್ನಿಯಿಲ್ಲದ ಮನೆಗಳು ಆನಂದವನ್ನುಂಟುಮಾಡುವುದಿಲ್ಲ.

೬೧. ವಿಶಾಲಾಕ್ಷಿಯೂ, ಕೃಶಾಂಗಿಯೂ, ಮಧುರಸ್ವರಳೂ ಆದ ಈ ನನ್ನ ಪ್ರಿಯಳು ಬದುಕದಿದ್ದರೆ ನಾನು ಮಡಿಯುವೆನು."

೬೨. ಸೂತ! ನಾನು ಹೀಗೆ ಗೋಳಾಡುತ್ತಿರಲು ನನ್ನ ಸಮಸ್ತ ಸ್ನೇಹಿತರೂ ಅಲ್ಲಿಗೆ ಬಂದು ಅತ್ತರು.

೬೩. ಅವರು ಬಹಳ ಹೊತ್ತು ಅತ್ತು ದೊಡ್ಡ ಚಿತೆಯನ್ನು ರಚಿಸಿ ಅದಕ್ಕೆ ಅಗ್ನಿಯನ್ನು ಹೊತ್ತಿಸಿದರು.

೬೪. ಬಳಿಕ ಅಳುತ್ತಿರುವವನೂ, ಪ್ರತಿ ಹೆಜ್ಜೆಯಲ್ಲಿಯೂ ಮೂರ್ಛೆಗೊಂಡು ಜಾರಿ ಬೀಳುತ್ತಿರುವವನೂ ಆದ ನನ್ನನ್ನು ಅವರು ಕಷ್ಟದಿಂದ ತಮ್ಮ ಮನೆಗೆ ಕರೆದುಕೊಂಡು ಹೋದರು.

ತತೋ ನಿಶಾಽವಶೇಷೇಽಹಮುತ್ಥಾಯ ತ್ವರಯಾನ್ವಿತಃ ।
ಕಾಂತಾ ದುಃಖಪರೀತಾತ್ಮಾ ಗತೋಽರಣ್ಯಂ ತದೇವ ಹಿ ॥ ೬೫ ॥
ಕಾಮೇನೋನ್ಮತ್ತತಾಂ ಪ್ರಾಪ್ತೋ ಭ್ರಮಮಾಣ ಇತಸ್ತತಃ ।
ವಿಲಪನ್ನೇವ ದುಃಖಾರ್ತೋ ವನೇ ಜನವಿವರ್ಜಿತೇ ॥ ೬೬ ॥
ಕ್ವ ಗತಾಽಸಿ ವಿಶಾಲಾಕ್ಷಿ ವಿಜನೇಽಸ್ಮಿನ್ವಿಹಾಯ ಮಾಂ ।
ನಾಽಹಂ ಗೃಹಂ ಗಮಿಷ್ಯಾಮಿ ಮಮ ದುಃಖಾಯ ನಿರ್ದಯಃ ॥ ೬೭ ॥
ಏಷೋಽರುಣಕರಸ್ಪರ್ಶಾತ್ಸ್ವಾಭಾಂ ತ್ಯಜತಿ ಚಂದ್ರಮಾಃ ।
ನಿಶಾಕ್ಷಯೇ ನಿರುತ್ಸಾಹೋ ಯಥಾಽಹಂ ವಿಧಿನಾ ಕೃತಃ ॥ ೬೮ ॥
ಅಯಂ ತನುಃ ಸಮಾಯಾತಿ ಸವಿತಾ ರಕ್ತಮಂಡಲಃ ।
ನಿಗದಿಷ್ಯತಿ ಮೇ ವಾರ್ತಾಂ ನೂನಂ ಕಚ್ಚಿತ್ತ್ವದುದ್ಭವಾಂ ॥ ೬೯ ॥
ಗಗನಂ ವ್ಯಾಪಯನ್ ಸೂರ್ಯಃ ಸಂತಾಪಯತಿ ಮಾಂ ಭೃಶಂ ।
ಬಾಹ್ಯೇಚಾಭ್ಯಂತರೇ ಕಾಮಃ ಕಥಂ ವಕ್ಷ್ಯಾಮಿ ಜೀವಿತಂ ॥ ೭೦ ॥
ಕರೀಂದ್ರಃ ಸ್ವಯಮಭ್ಯೇತಿ ತತ್ಕುಚಾಭೌ ಸಮುದ್ವಹನ್ ।
ಕುಂಭೌ ಗತ್ವಾ ತು ಪೃಚ್ಛಾಮಿ ಯದಿ ಶಂಸತಿ ತಾಂ ಪ್ರಿಯಾಂ ॥ ೭೧ ॥

---

೬೫. ನಾನು ಬೆಳಗ್ಗೆ ಎದ್ದು ವೇಗದಿಂದ ಪ್ರಿಯಳ ದುಃಖದಿಂದ ಕಾಡಿಗೆ ಹೋದೆನು.

೬೬. ಕಾಮದಿಂದ ಉನ್ಮತ್ತನಾಗಿ ಜನರಿಲ್ಲದ ಕಾಡಿನಲ್ಲಿ ದುಃಖದಿಂದ ಗೋಳಾಡುತ್ತ ಇಲ್ಲಿ ಅಲ್ಲಿ ಸಂಚರಿಸಿದೆನು.

೬೭. "ವಿಶಾಲಾಕ್ಷಿ! ನಿರ್ಜನವಾದ ಈ ಕಾಡಿನಲ್ಲಿ ನನ್ನನ್ನು ತೊರೆದು ಎಲ್ಲಿಗೆ ಹೋಗಿರುವೆ? ದುಃಖಿತನಾದ ನಾನು ನಿರ್ದಯನಾಗಿ ಮನೆಗೆ ಹೋಗುವುದಿಲ್ಲ.

೬೮. ಈ ಚಂದ್ರನು ಪ್ರಾತಃಕಾಲದಲ್ಲಿ ವಿಧಿಯಿಂದ ನಿರುತ್ಸಾಹನಾದ ನನ್ನಂತೆಯೇ ಅರುಣನ ಕಿರಣಗಳ ಸಂಬಂಧದಿಂದ ತನ್ನ ಕಾಂತಿಯನ್ನು ತ್ಯಜಿಸುತ್ತಿರುವನು.

೬೯. ಈ ಕೆಂಪಾದ ಬಿಂಬವುಳ್ಳ ಸೂರ್ಯನು ಮೂಡಿ ಬರುತ್ತಿದ್ದಾನೆ. ಇವನು ನಿಶ್ಚಯವಾಗಿಯೂ ನನಗೆ ನಿನ್ನ ಸಮಾಚಾರವನ್ನು ಹೇಳುವನು.

೭೦. ಸೂರ್ಯನು ಆಕಾಶವನ್ನು ವ್ಯಾಪಿಸುತ್ತ ನನ್ನನ್ನು ಅತ್ಯಂತವಾಗಿ ಸಂತಾಪಗೊಳಿಸುತ್ತಾನೆ. ಮನ್ಮಥನು ಒಳಗೂ ಹೊರಗೂ ಸಂತಾಪಗೊಳಿಸುತ್ತಿರುವನು. ನಾನು ಹೇಗೆ ಬದುಕಲಿ.

೭೧. ಈ ಆನೆಯು ಅವಳ ಕುಚದಂತಿರುವ ಕುಂಭಸ್ಥಳಗಳನ್ನು ಧರಿಸಿ ತಾನೇ ಈ ಕಡೆ ಬರುತ್ತಿದೆ. ಅದನ್ನು ಕೇಳುತ್ತೇನೆ. ಅದು ನನ್ನ ಪ್ರಿಯೆಯ ಸಮಾಚಾರವನ್ನು ಹೇಳಬಹುದು."

ಏವಂ ಪ್ರಲಪಮಾನಸ್ಯ ಮಮ ಮೋಹೋ ಮಹಾನಭೂತ್ ।
ಭಾಸ್ಕರಾಂಶುಪ್ರತಪ್ತಸ್ಯ ಮದನಾಕುಲಿತಸ್ಯ ಚ ॥ ೭೨ ॥
ಯಂ ಯಂ ಪಶ್ಯಾಮಿ ತತ್ರಾಽಹಂ ಭ್ರಮಮಾಣೋ ಮಹಾವನೇ ।
ವೃಕ್ಷಂ ವಾ ಪ್ರಾಣಿನೋವಾಽಪಿ ತಂ ತಂ ಪೃಚ್ಛಾಮಿ ಮೋಹತಃ ॥ ೭೩ ॥
ತ್ವದ್ದಂತಮುಸಲಪ್ರಖ್ಯಂ ಯಸ್ಯಾ ಊರು ಯುಗಂ ಗಜ ।
ತಾಂ ಬಾಲಾಂ ವದ ಚೇದ್ದೃಷ್ಟ್ವಾ ದಯಾಂ ಕೃತ್ವಾ ಮಮೋಪರಿ ॥ ೭೪ ॥
ತ್ವಯಾ ಜಂಬೂಕ ಚೇದ್ದೃಷ್ಟ್ವಾ ಬಿಂಬಾಫಲ ನಿಭಾಽಧರಾ ।
ದಯಿತಾ ಮಮ ತದ್ಬ್ರೂಹಿ ಶ್ರೇಯಸ್ತೇ ಭವಿತಾ ಮಹತ್ ॥ ೭೫ ॥
ಅಥವಾ ಬಿಲ್ವ ಶಂಸತ್ವಂ ಯದಿ ಬಿಲ್ವೋಪಮಸ್ತನೀ ।
ಭ್ರಮಮಾಣಾ ವನೇ ದೃಷ್ಟ್ವಾ ಮಮ ಪ್ರಾಣಸಮಾ ಪ್ರಿಯಾ ॥ ೭೬ ॥
ತ್ವತ್ಪುಷ್ಪ ಸದೃಶಾಂಗೀ ಸಾ ಮಮಭಾರ್ಯಾ ಮನಸ್ವಿನೀ ।
ಸ ತ್ವಂ ಚಂಪಕ ಜಾನೀಷೇ ಯದಿ ತ್ವಂ ಶಂಸ ಮೇ ದ್ರುತಂ ॥ ೭೭ ॥
ಮಧೂಕ ತವ ಪುಷ್ಪೇಣ ದಯಿತಾಯಾಃ ಸಮೌ ಶುಭೌ ।
ಕಪೋಲೌ ಪಾಂಡುರಚ್ಛಾಯೌ ದೃಷ್ಟ್ವಾ ತ್ವಾಂ ಸ್ಮೃತಿಮಾಗತೌ ॥ ೭೮ ॥

---

೭೨. ಹೀಗೆ ಗೋಳಾಡುತ್ತಿರುವವನೂ, ಸೂರ್ಯನ ಕಾಂತಿಯಿಂದ ಸಂತಪ್ತನೂ, ಮನ್ಮಥನಿಂದ ಪೀಡಿತನೂ ಆದ ನನಗೆ ಅಧಿಕ ಭ್ರಾಂತಿಯುಂಟಾಯಿತು.

೭೩. ಆ ಕಾಡಿನಲ್ಲಿ ಸಂಚರಿಸುತ್ತಿರುವ ನಾನು ವೃಕ್ಷವನ್ನೋ, ಪ್ರಾಣಿಗಳನ್ನೋ ಯಾವುಯಾವುದನ್ನು ನೋಡುವೆನೋ ಅದನ್ನು ಭ್ರಾಂತಿಯಿಂದ ಪ್ರಶ್ನೆ ಮಾಡಿದೆನು.

೭೪. ಆನೆಯೆ! ನನ್ನ ಪ್ರೇಯಸಿಯ ತೊಡೆಗಳು ಒನಕೆಯಂತಿರುವ ನಿನ್ನ ದಂತಗಳಂತಿರುವುವು. ಅವಳನ್ನು ನೀನು ನೋಡಿದ್ದರೆ ನನ್ನ ಮೇಲೆ ದಯೆಮಾಡಿ ಹೇಳು.

೭೫. ನರಿಯೆ! ನೀನು ತೊಂಡೆಹಣ್ಣಿನಂತಿರುವ ತುಟಿಯುಳ್ಳ ನನ್ನ ಪ್ರಿಯೆಯನ್ನು ನೋಡಿದ್ದರೆ ಹೇಳು. ನಿನಗೆ ಮಹಾ ಶ್ರೇಯಸ್ಸಾಗುವುದು.

೭೬. ಅಥವಾ ಬಿಲ್ವಫಲವೆ! ನೀನು ನಿನ್ನಂತೆ ಸ್ತನವುಳ್ಳ ವನದಲ್ಲಿ ಸಂಚರಿಸುತ್ತಿರುವ ನನ್ನ ಪ್ರಾಣಪ್ರಿಯೆಯನ್ನು ನೋಡಿದ್ದರೆ ಹೇಳು.

೭೭. ಚಂಪಕವೃಕ್ಷವೆ! ನೀನು ನಿನ್ನ ಪುಷ್ಪದಂತೆ ಅಂಗವುಳ್ಳ ನನ್ನ ಪತ್ನಿಯನ್ನು ತಿಳಿದಿದ್ದರೆ ಬೇಗನೆ ಹೇಳು.

೭೮. ಮಧೂಕಪುಷ್ಪವೆ! ನಿನ್ನನ್ನು ನೋಡಿದ ಕೂಡಲೆ ನಿನ್ನಂತಿರುವ ನನ್ನ ಪ್ರಿಯೆಯ ಕಪೋಲಗಳು ಸ್ಮರಣೆಗೆ ಬಂದುವು.

ಕದಲೀಸ್ತಂಭ ಸುವ್ಯಕ್ತಂ ಪ್ರಿಯಾಯಾಶ್ಚ ಸುಕೋಮಲೌ ।
ಊರೂ ತ್ವತ್ತೋಽಪಿ ತನ್ವಂಗ್ಯಾಃ ಸತ್ಯೇನಾತ್ಮಾನಮಾಲಭೇ ॥ ೭೯ ॥
ಭೋ ಭೋ ಮೃಗ ಮಮ ಭಾರ್ಯಾ ತ್ವಯಾ ದೃಷ್ಟಾಽತ್ರ ಕಾನನೇ ।
ತ್ವತ್ಸಮೇ ಲೋಚನೇ ಸ್ಪಷ್ಟೇ ಕಜ್ಜಲೇನ ಸಮಾವೃತೇ ॥ ೮೦ ॥
ತೃಣಾದೋಽಪಿ ಸವೃದ್ಧೋಽಪಿ ವನೇ ವೃದ್ಧೋಽಪಿ ಯಃ ಪಶುಃ ।
ಸೋಽಪಿ ಕಾಂತಾಪರಿತ್ಯಕ್ತೋ ನ ಮೃಗೋ ರಮತೇ ಕ್ಷಣಂ ॥ ೮೧ ॥
ಕಾಂತಾಯಾಃ ಪುರತೋ ನಿತ್ಯಂ ವಿಧತ್ತೇಽಂಗಂ ಕಲಾಪಕೃತ್ ।
ವಿಹಂಗಯೋನಿಜಾತೋಽಪಿ ವೃದ್ಧ್ಯರ್ಥಂ ಪುಷ್ಪಧನ್ವನಃ ॥ ೮೨ ॥
ಯೋಽಯಂ ಸಂದೃಶ್ಯತೇ ಹಂಸೋ ಹಂಸೀಮನುಸ್ಮರತ್ಯಸೌ ।
ಗತಿಸ್ತಾದೃಙ್ನ ಚಾಽಪ್ಯಸ್ಯ ಮತ್ಪ್ರಿಯಾಯಾಶ್ಚ ಯಾದೃಶೀ ॥ ೮೩ ॥
ಏಕ ಏವ ಸುಧನ್ಯೋಽಯಂ ಚಕ್ರವಾಕೋ ವಿಹಂಗಮಃ ।
ಮುಹೂರ್ತಮಪಿ ಯೋಽಭೀಷ್ಟಾಂ ನ ತ್ಯಜೇಚ್ಚಕ್ರವಾಕಿಕಾಂ ॥ ೮೪ ॥
ಯ ಏಷ ಶ್ರೂಯತೇ ರಾವೋ ವಿಭ್ರಮಂ ಜನಯನ್ಮಮ ।
ಕಿಂವಾ ಪಿಕಸಮುತ್ಥೋಽಯಂ ಕಿಂವಾ ಮೇ ದಯಿತೋದ್ಭವಃ ॥ ೮೫ ॥

---

೭೯. ಕದಲೀಕಾಂಡ! ನನ್ನ ಪ್ರಿಯೆಯ ತೊಡೆಗಳು ನಿನಗಿಂತಲೂ ಮೃದುವಾಗಿರುವುವು. ನನ್ನಾಣೆಯಾಗಿ ನಿಶ್ಚಯ.

೮೦. ಎಲೈ ಜಿಂಕೆಯೆ! ನೀನು ಈ ಕಾಡಿನಲ್ಲಿ ನನ್ನ ಪತ್ನಿಯನ್ನು ನೋಡಲಿಲ್ಲವೆ. ನಿನ್ನ ಕಣ್ಣುಗಳಂತಿರುವ ಅವಳ ಕಣ್ಣು ಕಾಡಿಗೆಯಿಂದ ಲಿಪ್ತವಾಗಿರುವುದು.

೮೧. ಈ ಮೃಗವು ಕಾಡಿನಲ್ಲಿ ಹುಲ್ಲನ್ನು ತಿನ್ನುತ್ತ ಬೆಳೆದು ಮುದಿಯಾಗಿದ್ದರೂ ಕಾಂತೆಯಿಲ್ಲದೆ ಸ್ವಲ್ಪ ಹೊತ್ತೂ ವಿನೋದಗೊಳ್ಳುವುದಿಲ್ಲ.

೮೨. ಈ ನವಿಲು ಪಕ್ಷಿಜಾತಿಯಲ್ಲಿ ಹುಟ್ಟಿದ್ದರೂ ಕಾಮವೃದ್ಧಿಗಾಗಿ ಪ್ರಿಯೆಯ ಮುಂದೆ ತನ್ನ ಶರೀರವನ್ನು ಪ್ರದರ್ಶಿಸುವುದು.

೮೩. ಮುಂದೆ ಕಾಣುತ್ತಿರುವ ಈ ಹಂಸವು ತನ್ನ ಪ್ರೇಯಸಿಯನ್ನು ಸ್ಮರಿಸುತ್ತಿದೆ. ಇದರ ಗಮನವು ನನ್ನ ಪ್ರಿಯೆಯ ಗಮನದಂತಿಲ್ಲ.

೮೪. ಒಂದು ಮುಹೂರ್ತವೂ ತನ್ನ ಪ್ರಿಯೆಯಾದ ಚಕ್ರವಾಕಿಯನ್ನು ಅಗಲದಿರುವ ಈ ಚಕ್ರವಾಕ ಪಕ್ಷಿಯು ಧನ್ಯವಾದುದು.

೮೫. ನನಗೆ ಭ್ರಾಂತಿಯನ್ನುಂಟುಮಾಡುತ್ತ ಕೇಳುವ ಈ ದನಿಯು ಕೋಗಿಲೆಯದೋ ಅಥವಾ ನನ್ನ ಪ್ರಿಯೆಯ ಧ್ವನಿಯೋ?

ಮಾಂ ದೃಷ್ಟ್ವಾಽಯಂ ಮೃಗೋ ಯಾತಿ ತಂ ಮೃಗೀ ಯಾತಿ ಪೃಷ್ಠತಃ ।
ಧಾವಮಾನಾ ಮಮಾಽಪ್ಯೇವಮನುಯಾತಿ ಪುರಾಪ್ರಿಯಾ ॥ ೮೬ ॥
ವಾರಣೋಽಯಂ ಪ್ರಿಯಾಂ ಕಾಂತಾಮನುರಾಗಾಽನುಯಾಯಿನೀಂ ।
ಸ್ಪರ್ಶಯತ್ಯಗ್ರಹಸ್ತೇನ ಮಮ ಸಂಸ್ಮಾರಯನ್ಪ್ರಿಯಾಂ ॥ ೮೭ ॥
ಹಾ ಪ್ರಿಯೇ ಮೃಗಶಾವಾಕ್ಷಿ ತಪ್ತಕಾಂಚನ ಸನ್ನಿಭೇ ।
ಕಥಂ ಮಾಂ ನ ವಿಜಾನಾಸಿ ಭ್ರಮಂತಮಿಹ ಕಾನನೇ ॥ ೮೮ ॥
ಕ್ವಸಾ ಭಕ್ತಿಃ ಕ್ವಸಾ ಪ್ರೀತಿಃ ಕ್ವಸಾ ತುಷ್ಟಿಃ ಕ್ವಸಾ ದಯಾ ।
ನಿಗದಂತಂ ಸುದೀನಂ ಮಾಂ ಸಂಭಾಷಯಸಿ ನೋ ಯತಃ ॥ ೮೯ ॥
ಏವಂ ಪ್ರಲಪಮಾನಸ್ಯ ಮಮ ಪ್ರಾಪ್ತಾಃ ಸುಹೃಜ್ಜನಾಃ ।
ಅನ್ವೇಷಂತಃ ಪದಂ ತತ್ರ ವನೇಷು ವಿಷಮೇಷುಚ ॥ ೯೦ ॥
ತತಸ್ತೈಃ ಕೋಪರಕ್ತಾಕ್ಷೈಃ ಪ್ರೋಕ್ತೋಽಹಂ ಸೂತನಂದನ ।
ಭರ್ತ್ಸಯದ್ಭಿಃ ಪರುಷೈರ್ವಾಕ್ಯೈರ್ಧಿಕ್ತ್ವಾಂ ಕಾಮುಮಯಾಽಧುನಾ ॥ ೯೧ ॥
ತ್ವಂ ಕಿಂ ಶೋಚಸಿ ಮೂಢಾತ್ಮನ್ನಶೋಚ್ಯಂ ಜೀವಿತಂ ನೃಣಾಂ ।
ಯತಸ್ತ್ವಾಮಪಿ ಶೋಚಂತಂ ಶೋಚಯಿಷ್ಯಂತಿ ಚಾಽಪರೇ ॥ ೯೨ ॥

---

೮೬. ಈ ಮೃಗವು ನನ್ನನ್ನು ನೋಡಿ ಮುಂದೆ ಸಾಗುತ್ತಿದೆ. ಇದನ್ನು ಇದರ ಪತ್ನಿಯು ಹಿಂಬಾಲಿಸುವುದು. ಹಿಂದೆ ಹೀಗೆಯೇ ನನ್ನ ಪ್ರಿಯೆಯು ನನ್ನನ್ನು ಅನುಸರಿಸುತ್ತಿದ್ದಳು.

೮೭. ಈ ಆನೆಯು ತನ್ನನ್ನು ಹಿಂಬಾಲಿಸುವ ಪ್ರಿಯೆಯನ್ನು ನನಗೆ ನನ್ನ ಪ್ರಿಯೆಯ ಸ್ಮರಣೆಯನ್ನುಂಟುಮಾಡುತ್ತ ಸೊಂಡಲಿನ ಕೊನೆಯಿಂದ ಮುಟ್ಟುವುದು.

೮೮. ಜಿಂಕೆಯ ಮರಿಯ ಕಣ್ಣಿನಂತೆ ಕಣ್ಣುಗಳುಳ್ಳವಳೂ, ಕಾಯಿಸಿದ ಚಿನ್ನದಂತಿರುವವಳೂ ಆದ ಪ್ರಿಯಳೆ! ಈ ಕಾಡಿನಲ್ಲಿ ಅಲೆಯುತ್ತಿರುವ ನನ್ನನ್ನು ನೀನು ಹೇಗೆತಾನೆ ತಿಳಿಯದಿರುವೆ?

೮೯ ಪ್ರಿಯಳೆ! ನಿನ್ನ ಆ ಭಕ್ತಿಯೂ, ಪ್ರೀತಿಯೂ, ಸಂತೋಷವೂ, ದಯೆಯೂ ಎಲ್ಲಿಗೆ ಹೋಯಿತು? ಈಗ ಹೀಗೆ ಮಾತನಾಡುತ್ತಿರುವ ದೀನನಾದ ನನ್ನನ್ನು ಏಕೆ ಮಾತಾಡಿಸುವುದಿಲ್ಲ?

೯೦. ಹೀಗೆ ಗೋಳಾಡುತ್ತಿರುವ ನನ್ನ ಹೆಜ್ಜೆಯ ಗುರುತನ್ನು ದಟ್ಟವಾದ ಆ ಕಾಡಿನಲ್ಲಿ ಹುಡುಕುತ್ತ ನನ್ನ ಮಿತ್ರರು ಅಲ್ಲಿಗೆ ಬಂದರು.

೯೧-೯೨. ಬಳಿಕ ಅವರು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಕಠಿನವಾದ ಮಾತುಗಳಿಂದ ನನ್ನನ್ನು ಹೆದರಿಸುತ್ತ ಹೀಗೆಂದರು. "ಎಲೈ ಕಾಮುಕನೆ! ನಿನಗೆ ಧಿಕ್ಕಾರ. ಎಲೈ ಮೂಢನೆ! ಈಗ ನೀನು ದುಃಖಿಸಲನರ್ಹರಾದ ಮಾನವರ ಜೀವಿತವನ್ನುದ್ದೇಶಿಸಿ ಏಕೆ ಶೋಕಿಸುವೆ? ದುಃಖಿಸುವ ನಿನ್ನನ್ನು ನೋಡಿ ಇತರರೂ ದುಃಖಿಸುವರು.

ಯೂಯಂ ವಯಂ ತಥಾಚಾಽನ್ಯೇ ಸಂಜಾತಾಃ ಪ್ರಾಣಿನೋ ಭುವಿ ।
ಸರ್ವ ಏವ ಮರಿಷ್ಯಾಮಸ್ತತ್ರ ಕಾ ಪರಿದೇವನಾ ॥ ೯೩ ॥
ಅದರ್ಶನಾತ್ಪ್ರಿಯಾ ಪ್ರಾಪ್ತಾ ಪುನಶ್ಚಾಽದರ್ಶನಂ ಗತಾ ।
ನಸಾ ತವ ನ ತಸ್ಯಾಸ್ತ್ವಂ ವೃಥಾ ಕಿಮನುಶೋಚಸಿ ॥ ೯೪ ॥
ನಾಽಯಮತ್ಯಂತ ಸಂವಾಸಃ ಕಸ್ಯಚಿತ್ಕೇನಚಿತ್ಸಹ ।
ಅಪಿ ಸ್ವೇನ ಶರೀರೇಣ ಕಿಮುತಾಽನ್ಯೈರ್ವೃಥಾಜನೈಃ ॥ ೯೫ ॥
ಮೃತಂ ವಾ ಯದಿ ವಾ ನಷ್ಟಂ ಯೋಽತೀತಮನುಶೋಚತಿ ।
ಸ ದುಃಖೇನ ಲಭೇದ್ದುಃಖಂ ದ್ವಾವನರ್ಥೌ ಪ್ರಪದ್ಯತೇ ॥ ೯೬ ॥
ಏವಂ ಸಂಬೋಧಯಿತ್ವಾ ಮಾಂ ಗೃಹೀತ್ವಾ ತೇಮುಹುರ್ಜನೈಃ ।
ನಿನ್ಯುರ್ಗೃಹಂ ತತಃ ಸರ್ವೇ ವನಾತ್ತಸ್ಮಾತ್ಸುದಾರುಣಾತ್ ॥ ೯೭ ॥
ತತೋ ಮಮ ಗೃಹಸ್ಥಸ್ಯ ಸ್ಮರಮಾಣಸ್ಯ ತಾಂಪ್ರಿಯಾಂ ।
ಉತ್ಪನ್ನಃ ಸುಮಹಾನ್ ಕೋಪಃ ಸರ್ಪಾನ್ ಪ್ರತಿಮಹಾಮತೇ ॥ ೯೮ ॥
ತತಃ ಕೋಪಪರೀತೇನ ಪ್ರತಿಜ್ಞಾತಂ ಮಯಾ ಸ್ಫುಟಂ ।
ಸರ್ಪಾನುದ್ದಿಶ್ಯ ಯತ್ಸರ್ವಂ ತನ್ನಿಬೋಧಯ ದಾರುಣಂ ॥ ೯೯ ॥

---

೯೩. ಭೂಮಿಯಲ್ಲಿ ಜನಿಸಿದ ನೀನು, ನಾವು, ಇತರ ಪ್ರಾಣಿಗಳು ಎಲ್ಲರೂ ಸಾಯುತ್ತೇವೆ. ಆ ವಿಷಯದಲ್ಲಿ ಗೋಳಾಟವೆಂಥಾದ್ದು ?

೯೪. ಹಿಂದೆ ಕಾಣದಿದ್ದ ಪ್ರಿಯೆಯು ಬಂದಳು. ಮರಳಿ ಅದೃಶ್ಯಳಾದಳು. ನಿನಗೆ ಅವಳಿಲ್ಲ. ಅವಳಿಗೆ ನೀನಿಲ್ಲ. ಏಕೆ ವ್ಯರ್ಥವಾಗಿ ದುಃಖಿಸುವೆ ?

೯೫. ಯಾರೂ ಯಾರೊಡನೆಯೂ ಶಾಶ್ವತವಾಗಿ ವಾಸಿಸುವುದಿಲ್ಲ. ತನ್ನ ಶರೀರದೊಡನೆಯೂ ವಾಸಿಸುವುದಿಲ್ಲ. ಇತರ ಜನರೊಡನೆ ಇನ್ನೇನು !

೯೬. ಯಾವನು ಮೃತವಾದ ಅಥವಾ ನಷ್ಟವಾದ ಕಳೆದುಹೋದ ವಸ್ತುವನ್ನು ಉದ್ದೇಶಿಸಿ ಅಳುವನೋ ಅವನು ದುಃಖದಿಂದ ದುಃಖವನ್ನು ಪಡೆಯುವನು. ಹೀಗೆ ಎರಡು ಅನರ್ಥಗಳನ್ನು ಹೊಂದುವನು.

೯೭. ಅವರು ನನಗೆ ಹೀಗೆ ಬೋಧಿಸಿ ನನ್ನನ್ನು ದಾರುಣವಾದ ಆ ಕಾಡಿನಿಂದ ಮನೆಗೆ ಕರೆದುಕೊಂಡು ಹೋದರು.

೯೮. ತರುವಾಯ ಮನೆಯಲ್ಲಿ ಆ ಪ್ರಿಯೆಯನ್ನು ಸ್ಮರಿಸುತ್ತಿರುವ ನನಗೆ ಸರ್ಪಗಳನ್ನು ಉದ್ದೇಶಿಸಿ ಅತ್ಯಂತ ಕೋಪವುಂಟಾಯಿತು.

೯೯. ಹೀಗೆ ಕೋಪಗೊಂಡ ನಾನು ಸರ್ಪಗಳನ್ನುದ್ದೇಶಿಸಿ ಪ್ರತಿಜ್ಞೆಮಾಡಿದ ಭಯಂಕರ ವಿಷಯವನ್ನೆಲ್ಲ ಕೇಳು.

ಅದ್ಯ ಪ್ರಭೃತಿ ಚೇನ್ನಾಽಹಂ ಸರ್ಪಂ ದೃಷ್ಟಿವಶಂಗತಂ ।
ನಿಹನ್ಮಿ ದಂಡಘಾತೇನ ತತ್ಪಾಪಂ ಸ್ಯಾದ್ಧ್ರುವಂ ಮಮ ॥ ೧೦೦ ॥
ಯಚ್ಚ ನಿಕ್ಷೇಪಹರ್ತೄಣಾಂ ಯಚ್ಚ ವಿಶ್ವಾಸಘಾತಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೧ ॥
ಯತ್ಪಾಪಂ ಸಾಧುನಿಂದಾಯಾಂ ಮಾತಾಪಿತೃವಧೇ ಚ ಯತ್ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೨ ॥
ಪರದಾರರತಾನಾಂ ಚ ಯತ್ಪಾಪಂ ಜೀವಘಾತಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೩ ॥
ಉಕ್ತಾ ಚಾಽಭಿರತಾನಾಂ ಚ ಯತ್ಪಾಪಂ ಗರದಾಯಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂ ಗತಂ ॥ ೧೦೪ ॥
ಕೃತಘ್ನಾನಾಂ ಚ ಯತ್ಪಾಪಂ ಪರವಿತ್ತಾಽಪಹಾರಿಣಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೫ ॥
ಯತ್ಪಾಪಂ ಶಸ್ತ್ರಕರ್ತೄಣಾಂ ತಥಾವಹ್ನಿಪ್ರದಾಯಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೬ ॥
ವ್ರತಭಂಗೇನ ಯತ್ಪಾಪಂ ವ್ರತಿನಾಂ ನಿಂದಯಾಽಪಿ ಯತ್ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂ ಗತಂ ॥ ೧೦೭ ॥
ಯತ್ಪಾಪಂ ಭ್ರೂಣಹತ್ಯಾಯಾಂ ಮೃಷ್ಟಮಾಂಸಾಽಶಿನಾಂ ಚ ಯತ್ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೮ ॥
ವೃಕ್ಷಚ್ಛೇದಪ್ರಸಕ್ತಾನಾಂ ಯತ್ಪಾಪಂ ಶಲ್ಯಕಾರಿಣಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೦೯ ॥

---

೧೦೦–೧೦೧. ಇದು ಮೊದಲ್ಗೊಂಡು ನಾನು ನೋಡಿದ ಸರ್ಪವನ್ನು ದೊಣ್ಣೆಯಿಂದ ಕೊಲ್ಲದಿದ್ದರೆ ನನಗೆ ನಿಶ್ಚಯವಾಗಿಯೂ ನಿಧಿಯನ್ನು ಕದ್ದವರಿಗೂ, ವಿಶ್ವಾಸಘಾತುಕರಿಗೂ ಸಂಭವಿಸುವ ಪಾಪವುಂಟಾಗಲಿ.

೧೦೨–೧೦೦. ಮತ್ತು ಸಾಧುನಿಂದೆ, ಮಾತಾಪಿತೃವಧೆ, ಪರದಾರಗಮನ, ಪ್ರಾಣಿಹಿಂಸೆ ಇವುಗಳಿಂದಾಗುವ ಪಾಪವೂ, ಇವುಗಳಲ್ಲಿ ಆಸಕ್ತರಿಗೂ, ವಿಷವನ್ನು ಕೊಟ್ಟವರಿಗೂ, ಕೃತಘ್ನರಿಗೂ, ಪರರ ದ್ರವ್ಯವನ್ನು ಅಪಹರಿಸುವವರಿಗೂ, ಆಯುಧವನ್ನು ಮಾಡಿದವರಿಗೂ, ಬೆಂಕಿಯನ್ನಿಡುವವರಿಗೂ ಉಂಟಾಗುವ ಪಾಪವೂ, ವ್ರತಿಗಳ ವ್ರತವನ್ನು ಕೆಡಿಸಿದವರಿಗೂ, ಅವರನ್ನು ನಿಂದಿಸಿದವರಿಗೂ, ಶಿಶುಹತ್ಯೆ ಮಾಡಿದವರಿಗೂ, ರುಚಿಯಾದ ಮಾಂಸವನ್ನು ಭಕ್ಷಿಸುವವರಿಗೂ, ಮರವನ್ನು ಕಡಿಯುವುದರಲ್ಲಿ ಆಸಕ್ತರಾದವರಿಗೂ, ಮುಳ್ಳುಗೋಲನ್ನು ಮಾಡುವವರಿಗೂ, ಪಾಷಂಡಿಗಳಿಗೂ, ನಾಸ್ತಿಕರಿಗೂ, ಮಾಂಸ ಮದ್ಯಗಳಲ್ಲಿ

ಪಾಖಂಡಿನಾಂ ಚ ಯತ್ಪಾಪಂ ನಾಸ್ತಿಕಾನಾಂ ಚ ಯದ್ಭವೇತ್ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೦ ॥
ಮಾಂಸಮದ್ಯ ಪ್ರಸಕ್ತಾನಾಂ ಯತ್ಪಾಪಂ ವಿಟ ಭೋಜಿನಾಂ ।
ತಸ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೧ ॥
ಮೃಷಾವಾದಪ್ರಸಕ್ತಾನಾಂ ಪರರಂಧ್ರಾಽವಲೋಕಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೨ ॥
ಯತ್ಪಾಪಂ ಸಾಕ್ಷ್ಯಕರ್ತೄಣಾಂ ಧಾನ್ಯಸಂಗ್ರಹಕಾರಿಣಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೩ ॥
ಆಖೇಟಕೇರತಾನಾಂ ಚ ಯತ್ಪಾಪಂ ಪಾಶದಾಯಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೪ ॥
ನಿತ್ಯಂ ಪ್ರೇಷಣಕರ್ತೄಣಾಂ ಯತ್ಪಾಪಂ ಮಧುಜೀವಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೫ ॥
ಅದೃಷ್ಟದೇವವಕ್ತ್ರಾಣಾಂ ಯತ್ಪಾಪಂ ಮತ್ಸ್ಯಜೀವಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೬ ॥
ವಿವಾದೇ ಪೃಚ್ಛಮಾನಾನಾಂ ಪಕ್ಷಪಾತೇನ ಜಲ್ಪತಾಂ ।
ಭಯಾದ್ವಾ ಯದಿ ವಾ ಲೋಭಾದ್ದ್ವೇಷಾದ್ವಾ ಕಾಮತೋಽಪಿ ವಾ॥೧೧೭॥
ಯತ್ಪಾಪಂ ತು ಭವೇತ್ತೇಷಾಂ ನಿರ್ದಯಾನಾಂ ದುರಾತ್ಮನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೮ ॥
ಕನ್ಯಾವಿಕ್ರಯಕರ್ತೄಣಾಂ ಯತ್ಪಾಪಂ ಪಾಪಸಂಗಿನಾಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೧೯ ॥
ವಿದ್ಯಾವಿಕ್ರಯಕರ್ತೄಣಾಂ ಯತ್ಪಾಪಂ ಸಮುದಾಹೃತಂ ।
ತನ್ಮೇ ಸ್ಯಾದ್ಯದಿ ನೋ ಹನ್ಮಿ ಸರ್ಪಂ ದೃಷ್ಟಿವಶಂಗತಂ ॥ ೧೨೦ ॥

---

ನಿರತರಾದವರಿಗೂ, ವಿಟರಿಗೆ ಭೋಜನಮಾಡಿಸಿದವರಿಗೂ, ಸುಳ್ಳು ಹೇಳುವವರಿಗೂ, ಪರರ ಛಿದ್ರವನ್ನು ಹುಡುಕುವವರಿಗೂ, ಸುಳ್ಳು ಸಾಕ್ಷಿ ಹೇಳುವವರಿಗೂ, ಧಾನ್ಯವನ್ನು ಸಂಗ್ರಹಿಸುವವರಿಗೂ, ಬೇಟೆಯಲ್ಲಿ ಆಸಕ್ತರಾದವರಿಗೂ, ಹಗ್ಗದಿಂದ ಉರುಲುಹಾಕುವವರಿಗೂ, ಯಾವಾಗಲೂ ದೂತರಾಗಿರುವವರಿಗೂ, ಜೇನಿನಿಂದ ಜೀವಿಸುವವರಿಗೂ, ದೇವರ ಮುಖವನ್ನು ನೋಡದವರಿಗೂ, ಮೀನಿನಿಂದ ಜೀವನ ಮಾಡುವವರಿಗೂ, ಜಗಳದಲ್ಲಿ ಪಕ್ಷಪಾತದಿಂದ ಮಾತಾಡುವವರಿಗೂ ಉಂಟಾಗುವ ಪಾಪವೂ, ಭಯ, ಆಶೆ, ಅಥವಾ ಕಾಮದಿಂದ ನಿರ್ದಯರಾದ ದುರಾತ್ಮರಿಗುಂಟಾಗುವ ಪಾಪವೂ, ಕನ್ಯೆಯನ್ನು ಮಾರುವವರಿಗೂ, ಪಾಪಿಷ್ಠರಿಗೂ, ವಿದ್ಯೆಯನ್ನು ಮಾರುವವರಿಗೂ ಉಂಟಾಗುವ ಪಾಪವೂ ಸಂಭವಿಸಲಿ.

ಏವಂ ಮಯಾ ಪ್ರತಿಜ್ಞಾಯ ಕೋಪಾವಿಷ್ಟೇನ ಸೂತಜ ।
ಗೃಹೀತೋ ಲಗುಡಃ ಸ್ಥೂಲೋ ವಧಾರ್ಥಂ ಪವನಾಶಿನಾಂ ॥ ೧೨೧ ॥
ತತಃ ಪ್ರಭೃತ್ಯಹಂ ಭೂಮೌ ಭ್ರಮಾಮಿ ಲಗುಡಾಯುಧಃ ।
ಬ್ರಾಹ್ಮೀಂ ವೃತ್ತಿಂ ಪರಿತ್ಯಜ್ಯ ಮಾರ್ಗಮಾಣೋ ಭುಜಂಗಮಾನ್ ॥ ೧೨೨ ॥
ಮಯಾ ಕೋಪಪರೀತೇನ ಬಹವಃ ಪನ್ನಗಾ ಹತಾಃ ।
ವಿಷೋಲ್ಬಣಾ ಮಹಾಕಾಯಾಸ್ತಥಾಽನ್ಯೇ ಮಧ್ಯಮಾಽಧಮಾಃ ॥ ೧೨೩ ॥
ಏಕದಾಽಹಂ ವನಂ ಪ್ರಾಪ್ತೋ ಗಹನಂ ಲಗುಡಾಯುಧಃ ।
ಶಯಾನಂ ತತ್ರ ಚಾಽಪಶ್ಯಂ ಜಲಸರ್ಪಂ ವಯೋಽಧಿಕಂ ॥ ೧೨೪ ॥
ತತೋಽಹಂ ದಂಡಮುದ್ಯಮ್ಯ ಕಾಲದಂಡೋಪಮಂ ರುಷಾ ।
ಹನ್ಮಿ ತಂ ಯಾವದೇವಾಽಹಂ ಸ ಮಾಂ ಪ್ರೋವಾಚ ಪನ್ನಗಃ ॥ ೧೨೫ ॥
ನಾಽಪರಾಧ್ಯಾಮಿ ತೇ ಕಿಂಚಿದಹಂ ಬ್ರಾಹ್ಮಣಸತ್ತಮ ।
ಸಂರಂಭಾತ್ತತ್ಕಿಮರ್ಥಂ ಮಾಂ ಜಿಘಾಂಸಸಿ ವಯೋಽಧಿಕಂ ॥ ೧೨೬ ॥
ತತೋ ಮಯಾ ಸ ಸಂಪ್ರೋಕ್ತಃ ಕೋಪಾತ್ಸಲಿಲಪನ್ನಗಃ ।
ಮಹಾಮನ್ಯುಪರೀತೇನ ಸ್ಮೃತ್ವಾ ಭಾರ್ಯಾಂ ಮೃಗಾವತೀಂ ।
ಮಮ ಭಾರ್ಯಾ ಪ್ರಿಯಾ ಪೂರ್ವಂ ಸರ್ಪೇಣಾಸೀದ್ವಿನಾಶಿತಾ ॥ ೧೨೭ ॥

---

೧೨೧. ಸೂತ! ಕೋಪಗೊಂಡ ನಾನು ಹೀಗೆ ಪ್ರತಿಜ್ಞೆ ಮಾಡಿ ಸರ್ಪಗಳನ್ನು ಕೊಲ್ಲುವುದಕ್ಕಾಗಿ ದೊಡ್ಡ ದೊಣ್ಣೆಯನ್ನು ಹಿಡಿದೆನು.

೧೨೨. ಅದು ಮೊದಲ್ಗೊಂಡು ನಾನು ದೊಣ್ಣೆಯನ್ನು ಹಿಡಿದು ಬ್ರಾಹ್ಮಣ ವೃತ್ತಿಯನ್ನು ತ್ಯಜಿಸಿ ಸರ್ಪಗಳನ್ನು ಹುಡುಕುತ್ತ ಭೂಮಿಯಲ್ಲಿ ಸಂಚರಿಸಿದೆನು.

೧೨೩. ಕುಪಿತನಾದ ನಾನು ವಿಷದಿಂದ ಉಲ್ಬಣಗಳೂ, ದೊಡ್ಡ ಶರೀರವುಳ್ಳವೂ, ಆದ ಮಧ್ಯಮ ಮತ್ತು ಅಧಮ ಜಾತಿಯ ಅನೇಕ ಸರ್ಪಗಳನ್ನು ಕೊಂದೆನು.

೧೨೪. ಒಂದಾನೊಂದು ದಿನ ನಾನು ದೊಣ್ಣೆಯನ್ನು ಹಿಡಿದುಕೊಂಡು ಕಾಡಿಗೆ ಹೋಗಿ ಅಲ್ಲಿ ಮಲಗಿರುವ ಮುದಿಯಾದ ಒಂದು ನೀರಿನ ಸರ್ಪವನ್ನು ಕಂಡೆನು.

೧೨೫. ಬಳಿಕ ನಾನು ಕೋಪದಿಂದ ಕಾಲದಂಡದಂತಿರುವ ದೊಣ್ಣೆಯನ್ನು ಎತ್ತಿ ಆ ಸರ್ಪವನ್ನು ಹೊಡೆಯುವಷ್ಟರಲ್ಲಿ ಅದು ನನ್ನನ್ನು ಕುರಿತು ಹೀಗೆಂದಿತು.

೧೨೬. "ಬ್ರಾಹ್ಮಣವರ್ಯನೆ! ನಾನು ನಿನಗೆ ಯಾವ ಅಪರಾಧವನ್ನೂ ಮಾಡಲಿಲ್ಲ. ಮುದುಕನಾದ ನನ್ನನ್ನು ಏಕೆ ಕೋಪದಿಂದ ಕೊಲ್ಲಬಯಸುವೆ?

೧೨೭–೧೨೮. ತರುವಾಯ ಕುಪಿತನಾದ ನಾನು "ಮೃತಳಾದ ಪತ್ನಿಯನ್ನು ಸ್ಮರಿಸಿ ಆ ನೀರಹಾವನ್ನು ಕುರಿತು "ಹಿಂದೆ ನನ್ನ ಪತ್ನಿಯನ್ನು ಸರ್ಪವು

ತತೋಽಹಂ ತೇನ ವೈರೇಣ ಸೂದಯಾಮಿ ಮಹೋರಗಾನ್ ।
ಅದ್ಯ ತ್ವಾಮಪಿ ನೇಷ್ಯಾಮಿ ವೈವಸ್ವತಗೃಹಂ ಪ್ರತಿ ।
ಹತ್ವಾ ದಂಡಪ್ರಹಾರೇಣ ತಸ್ಮಾದಿಷ್ಟತಮಂ ಸ್ಮರ ॥ ೧೨೮ ॥
ತತಃ ಸ ಮಾಂ ಪುನಃ ಪ್ರಾಹ ಭಯೇನ ಮಹತಾವೃತಃ ।
ಶೃಣು ತಾವದ್ವಚೋಽಸ್ಮಾಕಂ ತತಃ ಕುರು ಯಥೋಚಿತಂ ॥ ೧೨೯ ॥
ಅನ್ಯೇ ತೇ ಪನ್ನಗಾ ವಿಪ್ರ ಯೇ ದಶಂತೀಹ ಮಾನವಾನ್ ।
ವಯಂ ಸಲಿಲಸಂಭೂತಾ ನಿರ್ವಿಷಾಃ ಸರ್ಪರೂಪಿಣಃ ॥ ೧೩೦ ॥
ಏವಂ ಪ್ರಜಲ್ಪಮಾನೋಽಪಿ ಸ ದಂಡೇನ ಮಯಾ ಹತಃ ।
ಸೂತ ತತ್ಸೂದನಾರ್ಥಾಯ ನಿರ್ವಿಕಲ್ಪೇನ ಚೇತಸಾ ॥ ೧೩೧ ॥
ಅಥಾಽಸೌ ಲಗುಡಸ್ಪರ್ಶಾತ್ತತ್ಕ್ಷಣಾದೇವ ಪನ್ನಗಃ ।
ದ್ವಾದಶಾರ್ಕಪ್ರತೀಕಾಶೋ ಬಭೂವ ಪುರುಷೋ ಮಹಾನ್ ॥ ೧೩೨ ॥
ತದಾಶ್ಚರ್ಯಂ ಸಮಾಲೋಕ್ಯ ತತೋಽಹಂ ವಿಸ್ಮಯಾನ್ವಿತಃ ।
ಉಕ್ತವಾಂಸ್ತಂ ಪ್ರಣಮ್ಯೋಚ್ಚೈಃ ಕ್ಷಮ್ಯತಾಮಿತಿ ಸಾದರಂ ॥ ೧೩೩ ॥
ಕೋ ಭವಾನ್ಕಿಮಿದಂ ರೂಪಂ ಕೃತಂ ಸರ್ಪಮಯಂ ವಿಭೋ ।
ಕಿಂ ವಾ ತೇ ಬ್ರಹ್ಮಶಾಪೋಽಯಂ ಕಿಂ ವಾ ಕ್ರೀಡಾ ಸದೇದೃಶೀ ॥ ೧೩೪ ॥

---

ಕೊಂದಿರುವುದು. ಆದ್ದರಿಂದ ನಾನು ಆ ದ್ವೇಷದಿಂದ ಸರ್ಪಗಳನ್ನು ಕೊಲ್ಲುವೆನು. ಈಗ ನಿನ್ನನ್ನೂ ದೊಣ್ಣೆಯಿಂದ ಹೊಡೆದು ಯಮನ ಮನೆಗೆ ಕಳುಹಿಸುವೆನು. ಆದ್ದರಿಂದ ಇಷ್ಟವಾದುದನ್ನು ಸ್ಮರಿಸು" ಎಂದೆನು.

೧೨೯. ತರುವಾಯ ಆ ಹಾವು ಅತ್ಯಂತ ಭಯದಿಂದ ನನ್ನನ್ನು ಕುರಿತು ಹೇಗೆಂದಿತು. "ಮೊದಲು ನನ್ನ ಮಾತನ್ನುಕೇಳು. ಅನಂತರ ಉಚಿತವಾದುದನ್ನು ಮಾಡು.

೧೩೦. ಮನುಷ್ಯರನ್ನು ಕಚ್ಚುವ ಸರ್ಪಗಳು ಬೇರೆ ಇರುವುವು. ನಾವು ವಿಷವಿಲ್ಲದವರು; ನೀರಿನಲ್ಲಿ ಹುಟ್ಟಿದ ಸರ್ಪಗಳು."

೧೩೧. ಅದು ಹೀಗೆ ಹೇಳುತ್ತಿದ್ದರೂ ನಾನು ಒಮ್ಮನಸ್ಸಿನಿಂದ ಅದನ್ನು ಕೊಲ್ಲುವುದಕ್ಕಾಗಿ ದೊಣ್ಣೆಯಿಂದ ಹೊಡೆದೆನು.

೧೩೨. ತರುವಾಯ ದೊಣ್ಣೆಯ ಸ್ಪರ್ಶದಿಂದ ಆ ಹಾವು ಕೂಡಲೆ ದ್ವಾದಶಾದಿತ್ಯರಂತೆ ಪ್ರಕಾಶಿಸುವ ಮಹಾ ಪುರುಷನಾಯಿತು.

೧೩೩. ನಾನು ಆ ಆಶ್ಚರ್ಯವನ್ನು ಕಂಡು ವಿಸ್ಮಿತನಾಗಿ ಅವನನ್ನು ವಂದಿಸಿ ಪ್ರೀತಿಯಿಂದ ಕ್ಷಮಿಸು ಎಂದೆನು.

೧೩೪. "ನೀನಾರು? ಏಕೆ ಈ ಸರ್ಪರೂಪವನ್ನು ತಾಳಿರುವೆ? ಬ್ರಾಹ್ಮಣ ಶಾಪವೊ? ಅಥವಾ ಯಾವಾಗಲೂ ಹೀಗೆ ವಿನೋದಪಡುತ್ತಿರುವೆಯೊ?"

ತತಃ ಪ್ರೋವಾಚ ಮಾಂ ಹೃಷ್ಟಃ ಸ ನರಃ ಪ್ರಶ್ರಯಾನ್ವಿತಃ ।
ಶೃಣುಷ್ವಾವಹಿತೋ ಭೂತ್ವಾ ವೃತ್ತಾಂತಂ ಸ್ವಂ ವದಾಮಿತೇ ॥ ೧೩೫ ॥
ಅಹಮಾಸಂ ಪುರಾ ವಿಪ್ರ ಚಮತ್ಕಾರಪುರೋತ್ತಮೇ ।
ಯುವಾ ಪರಮತೇಜಸ್ವೀ ಧನವಾನ್ ಸುಸಮೃದ್ಧಿಭಾಕ್ ॥ ೧೩೬ ॥
ತತ್ರೈವ ನಗರೇ ರಮ್ಯೇ ಹ್ಯಸ್ತಿ ಪುಣ್ಯಂ ಶಿವಾಲಯಂ ।
ಸಿದ್ಧೇಶ್ವರಸ್ಯ ದೇವಸ್ಯ ಪತಾಕಾಭಿರಲಂಕೃತಂ ॥ ೧೩೭ ॥
ಕಸ್ಯಚಿತ್ತ್ವಥಕಾಲಸ್ಯ ತತ್ರ ಯಾತ್ರಾ ವ್ಯಜಾಯತ ।
ತತ್ರ ವಾದಿತ್ರಘೋಷೇಣ ನಾದಿತಂ ಭುವನತ್ರಯಂ ॥ ೧೩೮ ॥
ಅಥ ತತ್ರ ಸಮಾಯಾತಾ ಮುನಯಃ ಶಂಸಿತವ್ರತಾಃ ।
ದೇವಸ್ಯ ದರ್ಶನಾರ್ಥಾಯ ಶತಶೋಽಥ ಸಹಸ್ರಶಃ ॥ ೧೩೯ ॥
ಶೈವಾಃ ಪಾಶುಪತಾಶ್ಚೈವ ತಥಾ ಕಾಪಾಲಿಕಾಶ್ಚ ಯೇ ।
ಮಹಾವ್ರತಧರಾಶ್ಚಾಽನ್ಯೇ ಶಿವಭಕ್ತಿಪರಾಯಣಾಃ ॥ ೧೪೦ ॥
ಏಕಾಹಾರಾ ನಿರಾಹಾರಾ ವಾಯುಭಕ್ಷಾಸ್ತಥಾಽಪರೇ ।
ಅಬ್ಭಕ್ಷಾಃ ಫಲಭಕ್ಷಾಶ್ಚ ಶೀರ್ಣಪರ್ಣಾಽಶಿನಸ್ತಥಾ ॥ ೧೪೧ ॥
ತೇಽಭಿವಂದ್ಯ ಯಥಾನ್ಯಾಯಂ ದೇವದೇವಂ ಮಹೇಶ್ವರಂ ।
ಉಪವಿಷ್ಟಾಃ ಪುರಸ್ತಸ್ಯ ಕಥಾಶ್ಚಕ್ರುಃ ಪೃಥಗ್ವಿಧಾಃ ॥ ೧೪೨ ॥

---

೧೩೫. ಬಳಿಕ ಆ ಮನುಷ್ಯನು ಸಂತೋಷಗೊಂಡವನಾಗಿ ವಿನಯದಿಂದ ಇಂತೆಂದನು. "ನನ್ನ ವೃತ್ತಾಂತವನ್ನು ಹೇಳುತ್ತೇನೆ. ಸಾವಧಾನ ಮನಸ್ಸಿನಿಂದ ಕೇಳು.

೧೩೬. ನಾನು ಹಿಂದೆ ಚಮತ್ಕಾರಪುರದಲ್ಲಿ ಅತ್ಯಂತ ತೇಜಸ್ವಿಯೂ, ಧನಿಕನೂ, ಅತ್ಯಂತ ಸಮೃದ್ಧನೂ ಆದ ಯುವಕನಾಗಿದ್ದೆನು.

೧೩೭. ಅದೇ ರಮ್ಯವಾದ ಪಟ್ಟಣದಲ್ಲಿ ಪತಾಕೆ ಮೊದಲಾದುವುಗಳಿಂದ ಅಲಂಕಾರಗೊಂಡ ಸಿದ್ಧೇಶ್ವರನೆಂಬ ಶಿವನ ಆಲಯವು ಇರುವುದು.

೧೩೮. ಒಂದಾನೊಂದು ಕಾಲದಲ್ಲಿ ಅಲ್ಲಿ ಒಂದು ಉತ್ಸವ ನಡೆಯಿತು. ಆ ಉತ್ಸವದಲ್ಲಿ ವಾದ್ಯಧ್ವನಿಯಿಂದ ಮೂರು ಲೋಕಗಳೂ ಶಬ್ದಗೊಂಡವು.

೧೩೯-೧೪೧. ಶೈವರೂ, ಪಾಶುಪತರೂ, ಕಾಪಾಲಿಕರೂ, ಮಹಾ ವ್ರತಧಾರಿಗಳೂ, ಶಿವಭಕ್ತನಿರತರೂ, ಏಕಾಹಾರರೂ, ಉಪವಾಸಮಾಡುವವರೂ, ವಾಯುಭಕ್ಷರೂ, ಜಲಭಕ್ಷರೂ, ಫಲಾಹಾರರೂ, ಒಣಗಿದ ಎಲೆಗಳನ್ನು ತಿನ್ನುವವರೂ, ಶ್ಲಾಘ್ಯವ್ರತರೂ ಆದ ಸಾವಿರಾರು ಮಂದಿ ಮುನಿಗಳು ಸಿದ್ಧೇಶ್ವರನ ದರ್ಶನಕ್ಕಾಗಿ ಅಲ್ಲಿಗೆ ಬಂದರು.

೧೪೨-೧೪೩. ಅವರೂ, ಇತರರೂ ನ್ಯಾಯಸಂತೆ ಶಿವನನ್ನು ವಂದಿಸಿ

ರಾಜರ್ಷೀಣಾಂ ಪುರಾಣಾನಾಂ ದೇವೇಂದ್ರಾಣಾಂ ಚ ಹರ್ಷಿತಾಃ ।
ದಯಾಧರ್ಮಸಮೋಪೇತಾಸ್ತಥಾಽನ್ಯೇಽಪಿ ಚ ಭೂರಿಶಃ ॥ ೧೪೩ ॥
ಕೇಚಿತ್ತತ್ರ ಪ್ರನೃತ್ಯಂತಿ ಗಾಯಂತಿ ಚ ತಥಾಽಪರೇ ।
ಸಾಧವೋ ಭಕ್ತಿಸಂಯುಕ್ತಾ ವಾದ್ಯಂ ಚಕ್ರುಶ್ಚ ಭೂರಿಶಃ ॥ ೧೪೪ ॥
ಅನ್ಯೇ ದಾನಾನಿ ಯಚ್ಛಂತಿ ಧನಿನಃ ಶ್ರದ್ಧಯಾನ್ವಿತಾಃ ।
ದೀನಾಂಧಕೃಪಣೇಭ್ಯಶ್ಚ ತಪಸ್ವಿಭ್ಯೋ ವಿಶೇಷತಃ ॥ ೧೪೫ ॥
ಏವಂ ಮಹೋತ್ಸವೇ ತತ್ರ ವರ್ತಮಾನೇ ಮಹೋದಯೇ ।
ಆಗತೋ ಬಹುಭಿಃ ಸಾರ್ಧಮಹಂ ಯೌವನಗರ್ವಿತಃ ॥ ೧೪೬ ॥
ಶಿವದರ್ಶನವಿದ್ವೇಷೀ ತಮಸಾ ಸಂವೃತಾಶಯಃ ।
ಯಾತ್ರೋತ್ಸವವಿನಾಶಾಯ ಪ್ರೇರಿತೋಽನ್ಯೈಃ ಸುದುರ್ಜನೈಃ ॥ ೧೪೭ ॥
ಜಲಸರ್ಪಂ ಸಮಾದಾಯ ಸುದೀರ್ಘಂ ಭೀಷಣಾಕೃತಿಂ ।
ಲೇಲಿಹಾನಂ ಮುಹುರ್ಜಿಹ್ವಾಂ ಜರಯಾ ಪರಯಾವೃತಂ ॥ ೧೪೮ ॥
ತತಶ್ಚಕ್ಷಿಪ್ತವಾಂಸ್ತತ್ರ ಮಹಾಜನ ಸಮಾಗಮೇ ।
ತಂ ದೃಷ್ಟ್ವಾ ವಿದ್ರುತಾಃ ಸರ್ವೇ ಜನಾ ಮೃತ್ಯುಭಯಾರ್ದಿತಾಃ ॥ ೧೪೯ ॥
ತತ್ರಾಽಽಸೀತ್ತಾಪಸೋ ನಾಮ್ನಾ ಸುಪ್ರಭಃ ಶಂಸಿತವ್ರತಃ ।
ಸಮಾಧಿಸ್ಥಃ ಸುಶಿಷ್ಯಾಢ್ಯಸ್ತಪಸಾ ದಗ್ಧಕಿಲ್ಬಿಷಃ ॥ ೧೫೦ ॥

---

ಅವನ ಮುಂದೆ ಕುಳಿತು ಹಿಂದಿನ ರಾಜರ್ಷಿಗಳು, ದೇವೋತ್ತಮರು ಇವರ ದಯಾಧರ್ಮಗಳಿಂದ ಕೂಡಿದ ಅನೇಕ ಕಥೆಗಳನ್ನು ಹೇಳಿದರು.

೧೪೪. ಸಾಧುಗಳಾದ ಅವರಲ್ಲಿ ಕೆಲವರು ಕುಣಿದರು. ಕೆಲವರು ಹಾಡಿದರು. ಕೆಲವರು ಭಕ್ತಿಯಿಂದ ವಾದ್ಯಗಳನ್ನು ಬಾರಿಸಿದರು.

೧೪೫. ಇತರ ಧನಿಕರು ಶ್ರದ್ಧೆಯಿಂದ ದೀನ, ಕುರುಡ, ಕೃಪಣ, ಮುನಿ ಇವರಿಗೆ ದಾನಗಳನ್ನು ಕೊಟ್ಟರು.

೧೪೬–೧೪೮. ಹೀಗೆ ಅಲ್ಲಿ ವಿಜೃಂಭಣೆಯಿಂದ ಉತ್ಸವವು ನಡೆಯುತ್ತಿರಲು ಯೌವನದಿಂದ ಅಹಂಕಾರಗೊಂಡ ನಾನು ಶಿವದರ್ಶನದಲ್ಲಿ ದ್ವೇಷವುಳ್ಳವನೂ, ತಮೋಗುಣದಿಂದ ಕೂಡಿದ ಮನಸ್ಸುಳ್ಳವನೂ ಆಗಿ ಇತರ ದುರ್ಜನರ ಪ್ರೇರಣೆಯಿಂದ ಉದ್ದವೂ, ಭಯಂಕರವೂ, ಮುದಿಯೂ ಆದ ನೀರಿನ ಹಾವನ್ನು ತೆಗೆದುಕೊಂಡು ಉತ್ಸವವನ್ನು ಹಾಳುಮಾಡಲು ಅಲ್ಲಿಗೆ ಬಂದೆನು.

೧೪೯. ಬಳಿಕ ನಾನು ಆ ಸರ್ಪವನ್ನು ಜನರ ಗುಂಪಿನಲ್ಲಿ ಎಸೆದೆನು. ಅದನ್ನು ನೋಡಿ ಜನರೆಲ್ಲ ಮರಣಭಯದಿಂದ ಓಡಿಹೋದರು.

೧೫೦. ಅಲ್ಲಿ ಸಮಾಧಿನಿರತನೂ, ಶಿಷ್ಯರಿಂದ ಕೂಡಿದವನೂ, ಪಾಪರಹಿತನೂ, ಶ್ಲಾಘ್ಯವ್ರತನೂ ಆದ ಸುಪ್ರಭನೆಂಬ ಮುನಿಯೋರ್ವನಿದ್ದನು.

ನಿಷ್ಕಂಪಾಂ ಸುದೃಢಾಮೃಜ್ವೀಂ ನಾಽತಿಸ್ತಬ್ಧಾಂ ನಕುಂಚಿತಾಂ ।
ಗ್ರೀವಾಂ ದಧತ್ಸ್ಥಿರಾಂ ಯತ್ನಾದ್ಗಾತ್ರಯಷ್ಟಿಂಚ ಸರ್ವತಃ ॥ ೧೫೧ ॥
ಸಂಪಶ್ಯನ್ನಾಸಿಕಾಗ್ರಂ ಸ್ವಂ ದಿಶಶ್ಚಾಽನವಲೋಕಯನ್ ।
ತಾಲುಮಧ್ಯಗತೇನೈವ ಜಿಹ್ವಾಗ್ರೇಣಾಽಚಲೇನಚ ॥ ೧೫೨ ॥
ಆವರ್ತ ಪಂಕಜಾಂತಃಸ್ಥಮಷ್ಟಪತ್ರಮಧೋಮುಖಂ ।
ತನ್ಮಧ್ಯಕರ್ಣಿಕಾಸಂಸ್ಥಂ ಸಂಪಶ್ಯನ್ರವಿಮಂಡಲಂ ॥ ೧೫೩ ॥
ತಸ್ಯಾಽಪಿ ಮಧ್ಯತಶ್ಚಾಽನ್ಯಂ ನರಮಂಗುಷ್ಠಮಾತ್ರಕಂ ।
ದ್ವಾದಶಾರ್ಕಪ್ರತೀಕಾಶಮಪ್ರತರ್ಕ್ಯತಮಾಕೃತಿಂ ॥ ೧೫೪ ॥
ಪಶ್ಯನ್ ಪದ್ಮಾಸನಸ್ಥಂಚ ವೇದನಾಥಂ ಮಹೇಶ್ವರಂ ।
ಯಮಕ್ಷರಂ ವದಂತ್ಯೇವ ಸರ್ವಗಂ ಸರ್ವವೇದಿನಂ ॥ ೧೫೫ ॥
ಅನಿಂದ್ಯಂ ಚಾಽಪ್ಯಭೇದ್ಯಂಚ ಜರಾಮರಣವರ್ಜಿತಂ ।
ಪುಲಕಾಂಚಿತಸರ್ವಾಂಗೋ ಯೋಗ ನಿದ್ರಾವಶಂಗತಃ ॥ ೧೫೬ ॥
ಆನಂದಾಶ್ರು ಪರಿಕ್ಲಿನ್ನಃ ಸನ್ನಿರುದ್ಧೇಂದ್ರಿಯಾಕೃತಿಃ ।
ಕುಂಭಯಿತ್ವೋದರಾಂತಃಸ್ಥಂ ಸ್ವಭ್ಯಾಸಾದ್ವಾಯುಪಂಚಕಂ ॥ ೧೫೭ ॥
ಅಂಗುಷ್ಠತರ್ಜನೀಯೋಗಂ ಕೃತ್ವಾಹೃದಯಸಂಗತಂ ।
ಏವಂ ತತ್ರೋಪವಿಷ್ಟಸ್ಯ ಸ ಸರ್ಪಸ್ತಸ್ಯ ವಿಗ್ರಹಂ ॥ ೧೫೮ ॥
ವೇಷ್ಟಯಾಮಾಸ ಭೋಗೇನ ನಿಶ್ಚಲಸ್ಯ ಮಹಾತ್ಮನಃ ।
ಏತಸ್ಮಿನ್ನಂತರೇ ಶಿಷ್ಯಸ್ತಸ್ಯಾಸೀತ್ಸುತಪೋನ್ವಿತಃ ॥ ೧೫೯ ॥

---

೧೫೧–೧೬೩. ಅಲ್ಲಾಡದಿರುವುದೂ, ದೃಢವೂ, ನೀಳವೂ, ಅತಿ ಸ್ತಬ್ಧವಲ್ಲದಿರುವುದೂ ಆದ ಕುತ್ತಿಗೆಯನ್ನು ಧರಿಸಿ ದಿಕ್ಕುಗಳನ್ನು ನೋಡದೆ ಮೂಗಿನ ಕೊನೆಯನ್ನು ನೋಡುತ್ತ ತಾಲುವಿನ ನಡುವೆ ಇರುವ ನಾಲಿಗೆಯ ಕೊನೆಯಿಂದ ಕೂಡಿ ಕೆಳಮುಖವಾದ ಅಷ್ಟಪತ್ರದ ಸುಳಿಗಳಿಂದ ಕೂಡಿದ ಕಮಲದ ಕರ್ಣಿಕೆಯಲ್ಲಿರುವ ಸೂರ್ಯಮಂಡಲವನ್ನೂ, ಅದರ ಮಧ್ಯದಲ್ಲಿರುವ ಅಂಗುಷ್ಟಪರಿಮಾಣನೂ, ದ್ವಾದಶಾದಿತ್ಯರಂತಿರುವವನೂ, ಊಹಿಸಲಾಗದ ಆಕೃತಿಯುಳ್ಳವನೂ, ಪದ್ಮಾಸನಧಾರಿಯೂ, ವೇದಸ್ವಾಮಿಯೂ, ಸರ್ವಾಂತರ್ಯಾಮಿಯೂ, ಸರ್ವವನ್ನರಿತವನೂ, ನಿರ್ದುಷ್ಟನೂ, ಅಭೇದ್ಯನೂ, ಜರಾಮರಣವಿಲ್ಲದಿರುವವನೂ ಆದ ಮಹೇಶ್ವರನನ್ನೂ ನೋಡುತ್ತ ರೋಮಾಂಚನಗೊಂಡ ಶರೀರವುಳ್ಳವನೂ, ಯೋಗನಿದ್ರಾಧೀನನೂ, ಆನಂದಬಾಷ್ಪದಿಂದ ವ್ಯಾಪ್ತನೂ, ಇಂದ್ರಿಯ ವ್ಯಾಪಾರವನ್ನು ನಿರೋಧಿಸಿದವನೂ, ಅಭ್ಯಾಸವಶದಿಂದ ವಾಯುಪಂಚಕವನ್ನು ಉದರದೊಳಗೆ ತಡೆದು ಹೃದಯದಲ್ಲಿ ಅಂಗುಷ್ಠತರ್ಜನಿಗಳನ್ನಿರಿಸಿ ನಿಶ್ಚಲನಾಗಿ ಕುಳಿತಿರುವವನೂ ಆದ ಆ ಮುನಿಯನ್ನು ಆ ಸರ್ಪವು ತನ್ನ ಶರೀರದಿಂದ

ಶ್ರೀವರ್ಧನ ಇತಿಖ್ಯಾತೋ ನಾನಾಶಾಸ್ತ್ರಕೃತಶ್ರಮಃ ।
ಸ ದೃಷ್ಟ್ವಾ ಸರ್ಪಭೋಗೇನ ಸಮಂತಾದ್ವೇಷ್ಟಿತಂ ಗುರುಂ ॥ ೧೬೦ ॥
ನಾಽತಿದೂರಸ್ಥಿತಂ ಮಾಂಚ ಜ್ಞಾತ್ವಾ ತತ್ಕರ್ಮಕಾರಿಣಂ ।
ಉವಾಚ ಪರುಷಂ ವಾಕ್ಯಂ ಕೋಪಸಂರಕ್ತಲೋಚನಃ ॥ ೧೬೧ ॥
ಸ್ಫುರತಾಽಧರ ಯುಗ್ಮೇನ ಬಾಷ್ಪಗದ್ಗದಯಾ ಗಿರಾ ।
ಮಯಾ ಚೇತ್ಸುತಪಸ್ತಪ್ತಂ ಗುರುಶುಶ್ರೂಷಯಾ ಸದಾ ॥ ೧೬೨ ॥
ನಿರ್ವಿಕಲ್ಪೇನ ಚಿತ್ತೇನ ಯದಿ ಧ್ಯಾತೋ ಮಹೇಶ್ವರಃ ।
ತೇನ ಸತ್ಯೇನ ದುಷ್ಟೋಽಯಂ ಪಾಪಾತ್ಮಾ ಬ್ರಾಹ್ಮಣಾಽಧಮಃ ।
ಈದೃಕ್ಕಾಯೋ ಭವತ್ವಾಽಽಶು ಗುರುರ್ಮೇ ಯೇನಧರ್ಷಿತಃ ॥ ೧೬೩ ॥
ಅಥಾಽಹಂ ಸರ್ಪತಾಂ ಪ್ರಾಪ್ತಸ್ತತ್ಕ್ಷಣಾದೇವದಾರುಣಾಂ ।
ಪಶ್ಯತಾಂ ಸರ್ವಲೋಕಾನಾಂ ವದತಾಂ ಸಾಧುಸಾಧ್ವಿತಿ ॥ ೧೬೪ ॥
ಅಥ ಗತ್ವಾ ಸಮಾಧೇಃ ಸ ಪರ್ಯಂತಂ ಸಂಯತೋ ಮುನಿಃ ।
ದದರ್ಶ ನಿಜಗಾತ್ರಸ್ಥಂ ದ್ವಿಜಿಹ್ವಂ ದಾರುಣಾಕೃತಿಂ ॥ ೧೬೫ ॥
ಅಥ ಸರ್ಪಾಕೃತಿಂ ಮಾಂ ಚ ದುಃಖೇನ ಮಹತಾನ್ವಿತಂ ।
ತಟಸ್ಥಂ ಭಯಸಂತ್ರಸ್ತಂ ತಥಾ ಸರ್ವಜನಂ ತದಾ ॥ ೧೬೬ ॥

---

ಸುತ್ತಿತು. ಈ ಸಮಯದಲ್ಲಿ ಅನೇಕ ಶಾಸ್ತ್ರಪಾರಂಗತನಾದ ಶ್ರೀವರ್ಧನನೆಂಬ ತಪಸ್ವಿಯಾದ ಅವನ ಶಿಷ್ಯನು ಸರ್ಪದ ಶರೀರದಿಂದ ಸುತ್ತಲ್ಪಟ್ಟಿರುವ ಅವನನ್ನು ನೋಡಿ ಸಮೀಪದಲ್ಲಿ ನಿಂತಿರುವ ನನ್ನನ್ನು ಆ ಕೆಲಸವನ್ನು ಮಾಡಿದವನೆಂದರಿತು ತುಟಿಗಳನ್ನು ಅಲ್ಲಾಡಿಸುತ್ತ ಬಾಷ್ಪದಿಂದ ಗದ್ಗದವಾದ ಮಾತಿನಿಂದ ಹೀಗೆ ಶಪಿಸಿದನು. "ನಾನು ಗುರುಶುಶ್ರೂಷೆಗೈಯ್ಯುತ್ತ ತಪಸ್ಸನ್ನು ಮಾಡಿದ್ದರೆ, ಚಿತ್ತೈಕಾಗ್ರ್ಯದಿಂದ ಶಿವನನ್ನು ಧ್ಯಾನಿಸಿದ್ದರೆ, ನನ್ನ ಗುರುವಿನ ಶರೀರವನ್ನು ತಿರಸ್ಕರಿಸಿದ ಪಾಪಿಯಾದ ಈ ನೀಚಬ್ರಾಹ್ಮಣನು ಬೇಗನೆ ಇಂತಹ ಸರ್ಪದಂತೆ ಶರೀರವುಳ್ಳವನಾಗಲಿ."

೧೬೪. ಬಳಿಕ ಸಮಸ್ತ ಜನರು ಒಳ್ಳೆಯದು ಒಳ್ಳೆಯದು ಎಂದು ಹೇಳುತ್ತ ನೋಡುತ್ತಿರುವಾಗಲೇ ನಾನು ಭಯಂಕರವಾದ ಸರ್ಪತ್ವವನ್ನು ಹೊಂದಿದೆನು.

೧೬೫. ತರುವಾಯ ಸರ್ಪವೇಷ್ಟಿತನಾದ ಆ ಮುನಿಯು ಧ್ಯಾನದ ಅವಸಾನವನ್ನು ಹೊಂದಿ ತನ್ನ ಶರೀರದಲ್ಲಿರುವ ಭಯಂಕರವಾದ ಆ ಸರ್ಪವನ್ನು ಕಂಡನು.

೧೬೬–೧೬೭. ಬಳಿಕ ಸರ್ಪಾಕಾರನಾಗಿ ಅತಿ ದುಃಖಗೊಂಡಿರುವ ನನ್ನನ್ನೂ, ಉದಾಸೀನರಾದ ಭಯಗೊಂಡ ಸಕಲ ಜನರನ್ನೂ ನೋಡಿ ಜ್ಞಾನದೃಷ್ಟಿಯಿಂದ

ತತೋ ವಿಜ್ಞಾಯ ತತ್ಸರ್ವಂ ಸ ಮುನಿರ್ಜ್ಞಾನ ಚಕ್ಷುಷಾ ।
ಅಬ್ರವೀತ್ಕೃಪಯಾವಿಷ್ಟಃ ಶಿಷ್ಯಂ ಶ್ರೀವರ್ಧನಂ ರುಷಾ ॥ ೧೬೭ ॥
ನ ಮೇ ಪ್ರಿಯಂ ಕೃತಂ ಶಿಷ್ಯ ತ್ವಯೈತತ್ಕರ್ಮ ಕುರ್ವತಾ ।
ಶಪತಾ ಬ್ರಾಹ್ಮಣಂ ದೀನಂ ನೈಷ ಧರ್ಮಸ್ತಪಸ್ವಿನಾಂ ॥ ೧೬೮ ॥
ಸಮೋ ಮಾನೇಽಪಮಾನೇ ಚ ಸಮಲೋಷ್ಟಾಶ್ಮಕಾಂಚನಃ ।
ತಪಸ್ವೀ ಸಿದ್ಧಿಮಾಯಾತಿ ಸುಹೃಚ್ಛತ್ರು ಸಮಾಕೃತಿಃ ॥ ೧೬೯ ॥
ತಸ್ಮಾದಜಾನತಾ ವತ್ಸ ಶಪ್ತೋಽಯಂ ಬ್ರಾಹ್ಮಣಸ್ತ್ವಯಾ ।
ಬಾಲ್ಯಭಾವಾತ್ಪ್ರಸಾದೋಽಸ್ಯ ಭೂಯೋ ಯುಕ್ತೋ ಮಮಾಜ್ಞಯಾ ॥
ಅಥ ಶ್ರೀವರ್ಧನಃ ಪ್ರಾಹ ಪ್ರಣಿಪತ್ಯ ನಿಜಂ ಗುರುಂ ।
ಅಮರ್ಷವಶಮಾಪನ್ನಃ ಕೃತಾಂಜಲಿಪುಟಃ ಸ್ಥಿತಃ ॥ ೧೭೧ ॥
ಅಜ್ಞಾನಾದ್ಯದಿ ವಾ ಜ್ಞಾನಾನ್ಮಯಾ ಯದ್ವ್ಯಾಹೃತಂ ವಚಃ ।
ತತ್ತಥೈವ ನ ಸಂದೇಹಸ್ತಸ್ಮಾನ್ಮೌನಂ ಗುರೋ ಕುರು ॥ ೧೭೨ ॥
ನ ಮೃಷಾವಚನಂ ಪ್ರೋಕ್ತಂ ಸ್ವೈರೇಣಾಽಪಿ ಗುರೋ ಮಯಾ ।
ಕಿಂ ಪುನರ್ಯತ್ತವಾರ್ಥಾಯ ತಸ್ಮಾನ್ಮೌನಂ ಸಮಾಚರ ॥ ೧೭೩ ॥
ಪಶ್ಚಾದುದಯತೇ ಸೂರ್ಯಃ ಶೋಷಂ ಯಾತಿ ಮಹಾರ್ಣವಃ ।
ಅಪಿ ಮೇರುಶ್ಚ ಶೀರ್ಯೇತ ನಮೇ ಸ್ಯಾದನ್ಯಥಾ ವಚಃ ॥ ೧೭೪ ॥

---

ನಡೆದ ವಿಷಯವನ್ನರಿತು ದಯೆಗೊಂಡು ಶಿಷ್ಯನಾದ ಶ್ರೀವರ್ಧನನನ್ನು ಕುರಿತು ಕೋಪದಿಂದ ಹೀಗೆಂದನು.

೧೬೮. "ಶಿಷ್ಯ! ದೀನನಾದ ಬ್ರಾಹ್ಮಣನನ್ನು ಶಪಿಸಿದ ನೀನು ನನಗೆ ಹಿತವನ್ನುಂಟುಮಾಡಲಿಲ್ಲ. ಇದು ಮುನಿಗಳ ಧರ್ಮವಲ್ಲ.

೧೬೯. ಮಾನಾಪಮಾನಗಳಲ್ಲಿಯೂ, ಶಿಲಾಸುವರ್ಣಗಳಲ್ಲಿಯೂ, ಶತ್ರುಮಿತ್ರರಲ್ಲಿಯೂ ಸಮಭಾವನೆಯುಳ್ಳ ಮುನಿಯು ಸಿದ್ಧಿಯನ್ನು ಹೊಂದುವನು.

೧೭೦. ಮಗು! ಆದ್ದರಿಂದ ನೀನು ಬಾಲ್ಯದಿಂದ ಅರಿಯದೆ ಈ ಬ್ರಾಹ್ಮಣನನ್ನು ಶಪಿಸಿರುವೆ. ನನ್ನ ಅಪ್ಪಣೆಯಿಂದ ಮರಳಿ ಇವನನ್ನು ಅನುಗ್ರಹಿಸು."

೧೭೧. ತರುವಾಯ ಶ್ರೀವರ್ಧನನು ತನ್ನ ಗುರುವನ್ನು ವಂದಿಸಿ ಕುಪಿತನಾಗಿ ಕೈಮುಗಿದುಕೊಂಡು ಇಂತೆಂದನು.

೧೭೨. "ಗುರುವೆ! ನಾನು ತಿಳಿದೋ ತಿಳಿಯದೆಯೋ ಹೇಳಿದ ಮಾತು ನಡೆದೇ ನಡೆಯುವುದು, ಸಂದೇಹವಿಲ್ಲ. ಅದ್ದರಿಂದ ಮೌನವನ್ನು ತಾಳು.

೧೭೩. ನಾನು ಅಕಸ್ಮಾತ್ತಾಗಿಯೂ ಸುಳ್ಳನ್ನಾಡಲಿಲ್ಲ. ನಿನಗಾಗಿ ಹೇಳಿದ ಮಾತಿನ್ನೇನು. ಆದ್ದರಿಂದ ಮೌನವನ್ನು ಧರಿಸು.

೧೭೪. ಸೂರ್ಯನು ಪಶ್ಚಿಮದಲ್ಲಿ ಉದಯಿಸಿದರೂ, ಸಮುದ್ರವು ಬತ್ತಿದರೂ, ಮೇರುವು ಸೀಳಿಹೋದರೂ ನನ್ನ ಮಾತು ಸುಳ್ಳಾಗಲಾರದು."

ತಮುವಾಚ ಗುರುಃ ಶಿಷ್ಯಂ ಸ ಪುನಃ ಶ್ಲಕ್ಷ್ಣಯಾ ಗಿರಾ ।
ಜಾನಾಮ್ಯಹಂ ನ ತೇ ವಾಣೀ ಕಥಂಚಿಜ್ಜಾಯತೇಽನ್ಯಥಾ ॥ ೧೭೫ ॥
ಸದಾ ಶಿಷ್ಯೋ ವಯಃಸ್ಥೋಽಪಿ ಶಾಸನೀಯಃ ಪ್ರಯತ್ನತಃ ।
ಕಿಂ ಪುನರ್ಬಾಲ ಏವ ತ್ವಂ ತೇನ ತ್ವಾಂ ವಚ್ಮಿ ಭೂರಿಶಃ ॥ ೧೭೬ ॥
ಧರ್ಮಂ ಸ ವ್ಯಯತೇ ಕೋಽಪಿ ಮುನೀನಾಂ ಪೂರ್ವಸಂಚಿತಂ ।
ತಪೋಧರ್ಮವಿಹೀನಾನಾಂ ಗತಿಸ್ತೇಷಾಂ ನ ವಿದ್ಯತೇ ॥ ೧೭೭ ॥
ಕ್ಷಮೈಕಾ ಸಿದ್ಧಿದಾ ಪ್ರೋಕ್ತಾ ಯತೀನಾಂ ಚ ವಿಶೇಷತಃ ।
ತಸ್ಮಾತ್ಕ್ಷಮಾಂ ಪುರಸ್ಕೃತ್ಯ ವರ್ತಿತವ್ಯಂ ತಪಸ್ವಿಭಿಃ ॥ ೧೭೮ ॥
ನ ಪಾಪಂ ಪ್ರತಿಪಾಪಃ ಸ್ಯಾದ್ಬುದ್ಧಿರೇಷಾ ಸನಾತನೀ ।
ಆತ್ಮನೈವ ಹತಃ ಪಾಪೋ ಯಃ ಪಾಪಂತು ಸಮಾಚರೇತ್ ॥ ೧೭೯ ॥
ದಗ್ಧಃ ಸ ದಹತೇ ಭೂಯೋ ಹತಮೇವ ನಿಹಂತಿ ಚ ।
ಸಮ್ಯಗ್ಜ್ಞಾನ ಪರಿತ್ಯಕ್ತೋ ಯಃ ಪಾಪೇ ಪಾಪಮಾಚರೇತ್ ॥ ೧೮೦ ॥
ಉಪಕಾರಿಷು ಯಃ ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ ।
ಅಪಕಾರಿಷು ಯಃ ಸಾಧುಃ ಸ ಸಾಧುಃ ಕೀರ್ತ್ಯತೇ ಜನೈಃ ॥ ೧೮೧ ॥

---

೧೭೫. ಗುರುವು ಶಿಷ್ಯನನ್ನು ಕುರಿತು ಮರಳಿ ಮೃದು ನುಡಿಯಿಂದ ಹೀಗೆಂದನು. "ನಿನ್ನ ಮಾತು ಸುಳ್ಳಾಗುವುದಿಲ್ಲವೆಂಬುದನ್ನು ಬಲ್ಲೆನು.

೧೭೬. ಶಿಷ್ಯನು ಯುವಕನಾಗಿದ್ದರೂ ಗುರುವು ಅವನನ್ನು ದಂಡಿಸಬಹುದು. ನೀನು ಬಾಲಕನಾಗಿಯೇ ಇರುವೆ. ಆದ್ದರಿಂದ ನಿನ್ನನ್ನು ಕುರಿತು ಹೇಳುವೆನು.

೧೭೭. ಮುನಿಗಳು ಹಿಂದೆ ಸಂಪಾದಿಸಿದ ಧರ್ಮವು ವ್ಯಯವಾಗುವುದಿಲ್ಲ. ತಪೋಧರ್ಮರಹಿತರಾದ ಆ ಮುನಿಗಳಿಗೆ ಗತಿಯಿರುವುದಿಲ್ಲ.

೧೭೮. ಯತಿಗಳಿಗೆ ಕ್ಷಮೆಯೊಂದೇ ಸಿದ್ಧಿಯನ್ನು ಕೊಡುವುದು. ಆದ್ದರಿಂದ ಮುನಿಗಳು ಕ್ಷಮೆಯನ್ನು ಮುಂದಿರಿಸಿಕೊಂಡಿರಬೇಕು.

೧೭೯. ಪಾಪಿಯಲ್ಲಿ ಪಾಪವನ್ನು ಮಾಡಬಾರದು ಎಂಬುದು ಸನಾತನ ಧರ್ಮವು. ಪಾಪವನ್ನು ಮಾಡಿದವನು ತಾನೇ ಹಾಳಾಗುವನು.

೧೮೦. ಅಜ್ಞಾನಿಯಾಗಿ ಪಾಪಿಯಲ್ಲಿ ಪಾಪವನ್ನಾಚರಿಸುವವನು ಸುಟ್ಟುದನ್ನು ಸುಡುವನು. ಕೊಂದುದನ್ನು ಕೊಲ್ಲುವನು.

೧೮೧. ಉಪಕಾರ ಮಾಡಿದವನಲ್ಲಿ ಸಾಧುವಾದವನ ಸಾಧುತ್ವದಲ್ಲಿ ಗುಣವಾವುದು? ಅಪಕಾರ ಮಾಡಿದವನಲ್ಲಿ ಸಾಧುವಾದವನನ್ನು ಜನರು ಸಾಧುವೆನ್ನುವರು.

ಏವಮುಕ್ತ್ವಾ ಸ ತಂ ಶಿಷ್ಯಂ ತತೋ ಮಾಮಿದಮಬ್ರವೀತ್ ।
ದಯಯಾ ಪರಯಾ ಯುಕ್ತಃ ಸುವ್ರತಃ ಶಂಸಿತವ್ರತಃ ॥ ೧೮೨ ॥
ನಾऽನ್ಯಥಾ ವಚನಂ ಭಾವಿ ಮಮ ಶಿಷ್ಯಸ್ಯ ಪನ್ನಗ ।
ಕಂಚಿತ್ಕಾಲಂ ಪ್ರತೀಕ್ಷಸ್ವ ತಸ್ಮಾತ್ಸರ್ಪವಪುಃ ಸ್ಥಿತಃ ॥ ೧೮೩ ॥
ಸರ್ಪ ಉವಾಚ:—
ಕಸ್ಮಿನ್ ಕಾಲೇ ಮುನಿಶ್ರೇಷ್ಠ ಶಾಪೋಮೇऽಸ್ತಮುಪೈಷ್ಯತಿ ।
ಪ್ರಸಾದಂ ಕುರುದೀನಸ್ಯ ಶಾಪಸ್ಯಾಜ್ಞಾನಿನಸ್ತಥಾ ॥ ೧೮೪ ॥
ಸುವ್ರತ ಉವಾಚ:—
ಮುಹೂರ್ತಮಪಿ ಗೀತಾದಿ ಯಃ ಕರೋತಿ ಶಿವಾಲಯೇ ।
ಸ ತಸ್ಯ ಶಕ್ಯತೇ ಕರ್ತುಂ ಸಂಖ್ಯಾಧರ್ಮಸ್ಯ ಭದ್ರಕ ॥ ೧೮೫ ॥
ಮುಹೂರ್ತಮಪಿ ಯೋ ವಿಘ್ನಂ ಕರೋತಿ ಚ ಮಹೋತ್ಸವೇ ।
ತಸ್ಯ ಪಾಪಸ್ಯ ನೋ ಸಂಖ್ಯಾ ಕರ್ತುಂ ಶಕ್ಯಾ ಹಿ ಕೇನಚಿತ್ ॥ ೧೮೬ ॥
ತಸ್ಮಾತ್ತ್ವಂ ಪಾಪಕೋ ವಿಪ್ರೋ ನೈವಮುಕ್ತಿಮವಾಪ್ಸ್ಯಸಿ ।
ವಾರ್ತಾಸಂಗೇನ ದುರ್ಬುದ್ಧೇ ತಸ್ಮಾಚ್ಛೃಣು ವಚೋ ಮಮ ॥ ೧೮೭ ॥
ಶೈವಂ ಷಡಕ್ಷರಂ ಮಂತ್ರಂ ಯೋ ಜಪೇಚ್ಛ್ರದ್ಧಯಾನ್ವಿತಃ ।
ಅಪಿ ಬ್ರಹ್ಮವಧಾತ್ಪಾಪಂ ಜಾತಂ ತಸ್ಯ ಪ್ರಣಶ್ಯತಿ ॥ ೧೮೮ ॥

---

೧೮೨–೧೮೩. ಸುವ್ರತನಾದ ಆ ಮುನಿಯು ಶಿಷ್ಯನನ್ನು ಕುರಿತು ಹೀಗೆ ಹೇಳಿ ನನ್ನಲ್ಲಿ ಅತಿ ದಯೆಯಿಂದ, "ಸರ್ಪ! ನನ್ನ ಶಿಷ್ಯನ ಮಾತು ವ್ಯತ್ಯಾಸವಾಗುವುದಿಲ್ಲ. ಆದ್ದರಿಂದ ನೀನು ಸರ್ಪಶರೀರನಾಗಿ ಕೆಲವುಕಾಲ ನಿರೀಕ್ಷಿಸು" ಎಂದನು.

೧೮೪. ಸರ್ಪವು ಹೇಳುತ್ತದೆ:—ಮುನಿವರ್ಯನೆ! ಯಾವಾಗ ನನ್ನ ಶಾಪವು ನೀಗುವುದು? ಶಾಪ ಪರಿಹಾರದ ಕಾಲವನ್ನರಿಯದ ದೀನನಾದ ನನ್ನಲ್ಲಿ ಅನುಗ್ರಹಮಾಡು.

೧೮೫. ಸುವ್ರತನು ಹೇಳುತ್ತಾನೆ:—ಮಂಗಳಕರನೆ! ಶಿವಾಲಯದಲ್ಲಿ ಸ್ವಲ್ಪ ಹೊತ್ತು ಗಾನ ಮೊದಲಾದುವುಗಳನ್ನು ಮಾಡುವವನ ಧರ್ಮದ ಸಂಖ್ಯೆಯನ್ನು ಹೇಳಲು ಸಾಧ್ಯವಿಲ್ಲ.

೧೮೬. ಶಿವನ ಮಹೋತ್ಸವದಲ್ಲಿ ಸ್ವಲ್ಪಕಾಲ ವಿಘ್ನಮಾಡುವವನ ಪಾಪದ ಸಂಖ್ಯೆಯನ್ನು ಯಾರಿಗೂ ಹೇಳಲು ಸಾಧ್ಯವಿಲ್ಲ.

೧೮೭. ಆದ್ದರಿಂದ ದುರ್ವ್ಯಾಪಾರದಿಂದ ದುಷ್ಟನಾದ ನೀನು ಪಾಪಿಯಾಗಿರುವೆ. ನಿನಗೆ ಮೋಕ್ಷವಿಲ್ಲ. ಆದ್ದರಿಂದ ನನ್ನ ಮಾತನ್ನು ಕೇಳು.

೧೮೮. ಶ್ರದ್ಧೆಯಿಂದ ಶಿವಷಡಕ್ಷರ ಮಂತ್ರವನ್ನು ಜಪಿಸುವವನ ಬ್ರಹ್ಮಹತ್ಯೆಯಿಂದುಂಟಾದ ಪಾಪವೂ ನೀಗುವುದು.

ದಶಭಿರ್ದಿನಜಂ ಪಾಪಂ ವಿಂಶತ್ಯಾವತ್ಸರೋದ್ಭವಂ ।
ಷಡಕ್ಷರಸ್ಯ ಜಾಪ್ಯೇನ ಪಾಪಂ ಕ್ಷಾಲಯತೇ ನರಃ ॥ ೧೮೯ ॥
ತಸ್ಮಾತ್ತ್ವಂ ಜಲಮಧ್ಯಸ್ಥಸ್ತಂ ಮಂತ್ರಂ ಜಪಸಾದರಂ ।
ಯೇನ ಪಾಪಂ ಕ್ಷಯಂ ಯಾತಿ ಕೃತಮನ್ಯಸ್ಯ ಜನ್ಮನಿ ॥ ೧೯೦ ॥
ಯದಾ ತ್ವಾಂ ಜಲಮಧ್ಯಸ್ಥಂ ವತ್ಸೋ ನಾಮ ದ್ವಿಜೋ ರುಷಾ ।
ತಾಡಯಿಷ್ಯತಿ ದಂಡೇನ ತದಾ ಮೋಕ್ಷಮವಾಪ್ಸ್ಯಸಿ ॥ ೧೯೧ ॥
ತಸ್ಮಾದ್ಗಚ್ಛ ದ್ರುತಂ ಸರ್ಪ ಸ್ಥಾನಾದಸ್ಮಾಜ್ಜಲಾಶಯೇ ।
ಕಿಂಚಿದಿಷ್ಟಂ ಮಯಾಪ್ರೋಕ್ತೋ ವಿರರಾಮ ಸ ಸನ್ಮುನಿಃ ॥ ೧೯೨ ॥
ತತೋಽಹಂ ದುಃಖಸಂಯುಕ್ತಃ ಸಂಪ್ರಾಪ್ತೋಽತ್ರ ಜಲಾಶಯೇ ।
ಷಡಕ್ಷರಂ ಜಪನ್ಮಂತ್ರಂ ನಿತ್ಯಮೇವ ವ್ಯವಸ್ಥಿತಃ ॥ ೧೯೩ ॥
ತ್ವತ್ಪ್ರಸಾದಾದಹಂ ಮುಕ್ತಃ ಸರ್ಪತ್ವಾದ್ಬ್ರಾಹ್ಮಣೋತ್ತಮ ।
ಕಿಂ ಕರೋಮಿ ಪ್ರಿಯಂ ತೇಽದ್ಯ ತಸ್ಮಾಚ್ಛೀಘ್ರತರಂ ವದ ॥ ೧೯೪ ॥
ವತ್ಸೋ ನಾಮ ಸ ಸಂದೇಹಃ ಸ ತ್ವಂ ಯಃ ಕೀರ್ತಿತೋ ಮಮ ।
ಸುವ್ರತೇನ ವಿಮಾನಂ ಮೇ ಪಶ್ಯೈತದುಪಸರ್ಪತಿ ॥ ೧೯೫ ॥

---

೧೮೯. ಶಿವಷಡಕ್ಷರ ಮಂತ್ರವನ್ನು ಹತ್ತುಸಾರಿ ಜಪಿಸುವುದರಿಂದ ಒಂದು ದಿನದ ಪಾಪವೂ, ಇಪ್ಪತ್ತುಸಾರಿ ಜಪಿಸುವುದರಿಂದ ಒಂದು ವರ್ಷದ ಪಾಪವೂ ಪರಿಹಾರವಾಗುವುದು.

೧೯೦. ಆದ್ದರಿಂದ ನೀನು ನೀರಿನ ನಡುವೆ ಇದ್ದು ಆ ಶಿವಮಂತ್ರವನ್ನು ಜಪಿಸು. ಅದರಿಂದ ಇತರ ಜನ್ಮದಲ್ಲೆಸಗಿದ ಪಾಪವೂ ನೀಗುವುದು.

೧೯೧. ವತ್ಸನೆಂಬ ದ್ವಿಜನು ನೀರಿನ ನಡುವೆ ಇರುವ ನಿನ್ನನ್ನು ಕೋಪದಿಂದ ದಂಡದಿಂದ ಹೊಡೆದಾಗ ನೀನು ಶಾಪಮುಕ್ತನಾಗುವೆ.

೧೯೨. ಆದ್ದರಿಂದ ಸರ್ಪ! ನೀನು ಇಲ್ಲಿಂದ ಶೀಘ್ರವಾಗಿ ನಿನಗೆ ಇಷ್ಟವಾದ ಯಾವುದಾದರೂ ಕೆರೆಗೆ ಹೋಗು ಎಂದು ಹೇಳಿ ಆ ಮುನಿಯು ಸುಮ್ಮನಾದನು.

೧೯೩. ಅನಂತರ ನಾನು ದುಃಖದಿಂದ ಈ ಕೆರೆಗೆ ಬಂದು ಯಾವಾಗಲೂ ಷಡಕ್ಷರ ಮಂತ್ರವನ್ನು ಜಪಿಸುತ್ತ ಇರುವೆನು.

೧೯೪. ಬ್ರಾಹ್ಮಣವರ್ಯನೆ! ನಾನು ನಿನ್ನ ಅನುಗ್ರಹದಿಂದ ಸರ್ಪತ್ವದಿಂದ ಮುಕ್ತನಾದೆನು. ಆದ್ದರಿಂದ ನಿನಗೆ ಯಾವ ಹಿತವನ್ನುಂಟುಮಾಡಲಿ. ಬೇಗನೆ ಹೇಳು.

೧೯೫. ನೀನು ನಿಜವಾಗಿಯೂ ಸುವ್ರತನು ಹೇಳಿದ ವತ್ಸನೆಂಬ ದ್ವಿಜನೇ ಆಗಿರುವೆ. ನನಗೆ ವಿಮಾನವು ಬರುತ್ತಿದೆ ನೋಡು.

ತತಃ ಪ್ರೋಕ್ತೋ ಮಯಾ ಸಮ್ಯಕ್ಸಸರ್ಪೋ ದಿವ್ಯರೂಪಧೃಕ್ ।
ಭಗವನ್ನುಪದೇಶಂ ಮೇ ಕಿಂಚಿದ್ದೇಹಿ ಶುಭಾವಹಂ ॥ ೧೯೬ ॥
ಯೇನ ನೋ ಜಾಯತೇ ದುಃಖಂ ಪ್ರಿಯಲೋಪ ಸಮುದ್ಭವಂ ।
ನ ದಾರಿದ್ರ್ಯಂ ನ ಚ ವ್ಯಾಧಿರ್ನಚ ಶತ್ರುಪರಾಭವಃ ॥ ೧೯೭ ॥
ಅಥೋವಾಚ ಸ ಮಾಂ ಭೂಯಃ ಸೋತ್ಸುಕಃ ಪುರುಷೋತ್ತಮಃ ।
ಪ್ರಶ್ನಭಾರಃ ಸಮಾಖ್ಯಾತಸ್ತ್ವಯಾ ಮಮ ದ್ವಿಜೋತ್ತಮ ॥ ೧೯೮ ॥
ನ ಚೈತಚ್ಛಕ್ಯತೇ ವಕ್ತುಂ ವಿಮಾನೇ ಸಮುಪಸ್ಥಿತೇ ।
ವಿಸ್ತರಾತ್ತು ತತೋ ವಚ್ಮಿ ಸಂಕ್ಷೇಪೇಣ ತವದ್ವಿಜ ॥ ೧೯೯ ॥
ಶೈವಃ ಷಡಕ್ಷರೋ ಮಂತ್ರೋ ನೃಣಾಮಶುಭಹಾರಕಃ ।
ಸ ತ್ವಯಾ ಶಕ್ತಿತೋ ವಿಪ್ರ ಜಪನೀಯೋ ದಿವಾನಿಶಂ ॥ ೨೦೦ ॥
ತತಃ ಪ್ರಾಪ್ಸ್ಯಸ್ಯಸಂದಿಗ್ಧಂ ಯದ್ಯದ್ವಾಂಛಸಿ ಚೇತಸಾ ।
ಸ್ವರ್ಗಂವಾ ಯದಿವಾ ಮೋಕ್ಷಂ ವಿಮುಕ್ತಃ ಸರ್ವಪಾತಕೈಃ ॥ ೨೦೧ ॥
ಮಯಾಹಿ ಸುಮಹತ್ಪಾಪಂ ಸರ್ವದಾ ಸಮನುಷ್ಠಿತಂ ।
ತತ್ರಾಽಪಿ ಮಂತ್ರಮಾಹಾತ್ಮ್ಯಾತ್ಪ್ರಾಪ್ತಾ ಲೋಕಾ ಮಹೋದಯಾಃ ॥
ಏಕೋ ದಾನಾನಿ ಸರ್ವಾಣಿ ಯಚ್ಛತಿ ಶ್ರದ್ಧಯಾನ್ವಿತಃ ।
ಷಡಕ್ಷರಂ ಜಪೇನ್ಮಂತ್ರಮನ್ಯಸ್ತಾಭ್ಯಾಂ ಸಮಂ ಫಲಂ ॥ ೨೦೩ ॥

---

೧೯೬–೧೯೭. ಅನಂತರ ನಾನು ದಿವ್ಯರೂಪವನ್ನು ತಾಳಿದ ಆ ಸರ್ಪವನ್ನು ಕುರಿತು—ಪೂಜ್ಯನೆ! ಪತ್ನೀನಾಶದಿಂದುಂಟಾದ ದುಃಖವುಂಟಾಗದಂತೆಯೂ, ದಾರಿದ್ರ್ಯ, ವ್ಯಾಧಿ, ಶತ್ರುಪರಾಜಯಗಳುಂಟಾಗದಂತೆಯೂ ಯಾವುದಾದರೊಂದು ಉಪದೇಶವನ್ನು ಕೊಡು ಎಂದೆನು.

೧೯೮–೧೯೯. ಬಳಿಕ ಆ ದಿವ್ಯಪುರುಷನು ಹೀಗೆಂದನು. ನೀನು ದೊಡ್ಡ ಪ್ರಶ್ನೆಯನ್ನು ಕೇಳಿರುವೆ. ವಿಮಾನವು ಬಂದಿರುವಾಗ ಇದನ್ನು ವಿಸ್ತಾರವಾಗಿ ಹೇಳಲು ಶಕ್ಯವಲ್ಲ. ಆದ್ದರಿಂದ ಸಂಕ್ಷೇಪವಾಗಿ ಹೇಳುವೆನು.

೨೦೦. ಶಿವಷಡಕ್ಷರ ಮಂತ್ರವು ಮಾನವರ ಅಶುಭವನ್ನು ನಿವಾರಿಸುವುದು. ದ್ವಿಜ! ನೀನು ಅದನ್ನು ಹಗಲುರಾತ್ರಿ ಶಕ್ತ್ಯನುಸಾರ ಜಪಿಸು.

೨೦೧. ಅನಂತರ ನಿಜವಾಗಿಯೂ ಸಕಲ ಪಾಪಮುಕ್ತನಾಗಿ ನೀನು ಇಚ್ಛಿಸುವ ಸ್ವರ್ಗ ಅಥವಾ ಮೋಕ್ಷವನ್ನು ಪಡೆಯುವೆ.

೨೦೨. ನಾನೂ ಯಾವಾಗಲೂ ಮಹಾಪಾಪಗಳನ್ನು ಮಾಡಿರುವೆನು. ಹಾಗಾದರೂ ಮಂತ್ರ ಮಾಹಾತ್ಮ್ಯದಿಂದ ಶುಭದಾಯಕವಾದ ಲೋಕವನ್ನು ಪಡೆದೆನು.

೨೦೩. ಸಕಲ ದಾನಗಳನ್ನು ಶ್ರದ್ಧೆಯಿಂದ ಕೊಡುವವನಿಗೂ, ಷಡಕ್ಷರ ಮಂತ್ರವನ್ನು ಜಪಿಸುವವನಿಗೂ ಸಮಾನ ಫಲವುಂಟಾಗುವುದು.

ಸರ್ವತೀರ್ಥಾಽಭಿಷೇಕಂಚ ಕುರುತೇಽನ್ಯೋ ನರೋ ದ್ವಿಜ ।
ಷಡಕ್ಷರಂ ಜಪೇನ್ಮಂತ್ರಮನ್ಯಸ್ತಾಭ್ಯಾಂ ಸಮಂ ಫಲಂ ॥ ೨೦೪ ॥
ಚಾಂದ್ರಾಯಣಸಹಸ್ರಂತು ಕುರುತೇಽನ್ಯೋ ಯಥೋಚಿತಂ ।
ಷಡಕ್ಷರಂ ಜಪೇದನ್ಯೋ ಮಂತ್ರಂ ತಾಭ್ಯಾಂ ಸಮಂ ಫಲಂ ॥ ೨೦೫ ॥
ವರ್ಷಾಸ್ವಾಕಾಶಶಾಯೀ ಚ ಹೇಮಂತೇ ಸಲಿಲಾಶಯಃ ।
ಪಂಚಾಽಗ್ನಿಸಾಧಕೋ ಗ್ರೀಷ್ಮೇ ಯಾವದ್ವರ್ಷಶತಂ ನರಃ ॥ ೨೦೬ ॥
ಅನ್ಯಃ ಷಡಕ್ಷರಂ ಮಂತ್ರಂ ಶುಚಿಃ ಶ್ರದ್ಧಾಸಮನ್ವಿತಃ ।
ಜಪೇದಹರ್ನಿಶಂ ಮರ್ತ್ಯಃ ಫಲಂ ತಾಭ್ಯಾಂ ಸಮಂ ಸ್ಮೃತಂ ॥ ೨೦೭ ॥
ಪಿತೃಪಕ್ಷೇ ಸದಾಚೈಕೋ ಗಯಾಯಾಂ ಶ್ರಾದ್ಧಮಾಚರೇತ್ ।
ಅನ್ಯಃ ಷಡಕ್ಷರಂ ಮಂತ್ರಂ ಜಪೇತ್ತಾಭ್ಯಾಂ ಸಮಂ ಫಲಂ ॥ ೨೦೮ ॥
ಗೋಸಹಸ್ರಂ ದದಾತ್ಯೇಕಃ ಕಾರ್ತಿಕ್ಯಾಂ ಜ್ಯೇಷ್ಠಪುಷ್ಕರೇ ।
ಷಡಕ್ಷರಂ ಜಪೇನ್ಮಂತ್ರಮನ್ಯಸ್ತಾಭ್ಯಾಂ ಸಮಂ ಫಲಂ ॥ ೨೦೯ ॥
ಸನ್ನಿಹಿತ್ಯಾಂ ನರಃ ಸ್ನಾತಿ ರಾಹುಗ್ರಸ್ತೇ ದಿವಾಕರೇ ।
ಏಕೋಽನ್ಯಸ್ತು ಜಪೇನ್ಮಂತ್ರಂ ಷಡರ್ಣಂ ತುಲ್ಯಮೇವ ತತ್ ॥ ೨೧೦ ॥

---

೨೦೪. ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡುವವನಿಗೂ, ಷಡಕ್ಷರ ಮಂತ್ರವನ್ನು ಜಪಿಸುವವನಿಗೂ ಸಮಾನ ಫಲವುಂಟಾಗುವುದು.

೨೦೫. ಸಾವಿರ ಚಾಂದ್ರಾಯಣ ವ್ರತವನ್ನಾಚರಿಸುವವನಿಗೂ, ಷಡಕ್ಷರ ಮಂತ್ರವನ್ನು ಜಪಿಸುವವನಿಗೂ ಸಮಾನ ಫಲವುಂಟಾಗುವುದು.

೨೦೬–೨೦೭. ಮಳೆಗಾಲದಲ್ಲಿ ಅನಾವರಣಸ್ಥಳದಲ್ಲಿ ಮಲಗುತ್ತ, ಚಳಿಗಾಲದಲ್ಲಿ ನೀರಿನಲ್ಲಿರುತ್ತ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿರುತ್ತ ತಪಸ್ಸನ್ನು ಮಾಡುವವನಿಗೂ, ಹಗಲುರಾತ್ರಿ ಶಿವಷಡಕ್ಷರ ಮಂತ್ರವನ್ನು ಜಪಿಸುವವನಿಗೂ ಸಮಾನ ಫಲವುಂಟಾಗುವುದು.

೨೦೮. ಪಿತೃಪಕ್ಷದಲ್ಲಿ ಗಯೆಯಲ್ಲಿ ಶ್ರಾದ್ಧಗೈದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನ ಫಲವುಂಟಾಗುವುದು.

೨೦೯. ಕಾರ್ತಿಕ ಶುದ್ಧ ಹುಣ್ಣಿಮೆಯ ದಿನ ಜ್ಯೇಷ್ಠ ಪುಷ್ಕರದಲ್ಲಿ ಸಾವಿರ ಗೋವುಗಳನ್ನು ದಾನಮಾಡಿದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನ ಫಲವುಂಟಾಗುವುದು.

೨೧೦. ಸೂರ್ಯನಿಗೆ ರಾಹುಗ್ರಹಣವು ಸಂಭವಿಸಿದಾಗ ಸನ್ನಿಹಿತಿಯಲ್ಲಿ ಮಿಂದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನ ಫಲವುಂಟಾಗುವುದು.

ಸೋಮೇ ಸೋಮಗ್ರಹೇಽನ್ಯಸ್ತು ಸೋಮನಾಥಂ ಪ್ರಪಶ್ಯತಿ ।
ಅನ್ಯಃ ಷಡಕ್ಷರಂ ಮಂತ್ರಂ ಜಪೇತ್ತಾಭ್ಯಾಂ ಸಮಂ ಫಲಂ ॥ ೨೧೧ ॥
ಏಕಶ್ಚಂಡೀಶ್ವರಂ ಪಶ್ಯೇದಯನೇ ಚೋತ್ತರೇ ನರಃ ।
ಅನ್ಯಃ ಷಡಕ್ಷರಂ ಮಂತ್ರಂ ಜಪೇತ್ತಾಭ್ಯಾಂ ಸಮಂ ಫಲಂ ॥ ೨೧೨ ॥
ಭೃಗುಪಾತಂ ಪತೇದೇಕಃ ಕೇದಾರಂ ವೀಕ್ಷ್ಯ ಭಕ್ತಿತಃ ।
ಅನ್ಯಃ ಷಡಕ್ಷರಂ ಮಂತ್ರಂ ಜಪೇತ್ತಾಭ್ಯಾಂ ಸಮಂ ಫಲಂ ॥ ೨೧೩ ॥
ಕರೀಷಂ ಸಾಧಯೇದನ್ಯೋ ದತ್ವಾ ಸರ್ವಸ್ವಮಾದಿತಃ ।
ಷಡಕ್ಷರಂ ಜಪೇನ್ಮಂತ್ರಮನ್ಯಸ್ತಾಭ್ಯಾಂ ಸಮಂ ಫಲಂ ॥ ೨೧೪ ॥
ಸರ್ವಸಂಗಪರಿತ್ಯಾಗಂ ಕೃತ್ವೈಕೋ ಜ್ಞಾನಮಾಪ್ನುಯಾತ್ ।
ಅನ್ಯಃ ಷಡಕ್ಷರಂ ಮಂತ್ರಂ ಜಪೇತ್ತಾಭ್ಯಾಂ ಸಮಂ ಫಲಂ ॥ ೨೧೫ ॥
ಏತತ್ತೇ ಪರಮಂ ಗುಹ್ಯಂ ಮಯಾ ವಿಪ್ರ ಪ್ರಕೀರ್ತಿತಂ ।
ನಾಸ್ತಿಕಾಯ ನ ದಾತವ್ಯಂ ಭಕ್ತಿಹೀನಾಯ ನೈವ ಚ ॥ ೨೧೬ ॥
ತಥಾಽನ್ಯದಪಿ ವಕ್ಷ್ಯಾಮಿ ಹಿತಬುದ್ಧ್ಯಾ ದ್ವಿಜೋತ್ತಮ ।
ಮಮ ವಾಕ್ಯಂ ಕುರುಷ್ವಾಽದ್ಯ ಯದೀಚ್ಛಸಿ ಪರಾಂ ಗತಿಂ ॥ ೨೧೭ ॥

---

೨೧೧. ಸೋಮವಾರ ಚಂದ್ರಗ್ರಹಣ ಕಾಲದಲ್ಲಿ ಸೋಮನಾಥನನ್ನು ನೋಡಿದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನ ಫಲವು ದೊರೆಯುವುದು.

೨೧೨. ಉತ್ತರಾಯಣದಲ್ಲಿ ಚಂಡೀಶ್ವರನನ್ನು ನೋಡಿದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನವಾದ ಫಲವು ದೊರೆಯುವುದು.

೨೧೩. ಕೇದಾರೇಶ್ವರನನ್ನು ನೋಡಿ ಭೃಗುಪಾತದಿಂದ ಬಿದ್ದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನ ಫಲವು ಲಭಿಸುವುದು.

೨೧೪. ಸರ್ವಸ್ವವನ್ನೂ ದಾನಮಾಡಿ ಕರೀಷಾಗ್ನಿಯಲ್ಲಿ ಮಡಿದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನವಾದ ಫಲವು ದೊರೆಯುವುದು.

೨೧೫. ಸರ್ವಸಂಗವನ್ನು ತ್ಯಜಿಸಿ ಜ್ಞಾನಿಯಾದವನಿಗೂ, ಷಡಕ್ಷರ ಮಂತ್ರವನ್ನು ಜಪಿಸಿದವನಿಗೂ ಸಮಾನವಾದ ಫಲವು ದೊರೆಯುವುದು.

೨೧೬. ವಿಪ್ರ! ನಾನು ನಿನಗೆ ಗುಹ್ಯವಾದ ಈ ವಿಷಯವನ್ನು ಹೇಳಿರುವೆನು. ಇದನ್ನು ನಾಸ್ತಿಕನಿಗೂ, ಭಕ್ತಿಯಿಲ್ಲದವನಿಗೂ ಹೇಳಬಾರದು.

೨೧೭. ದ್ವಿಜವರ್ಯನೆ! ನಿನಗೆ ಹಿತಬುದ್ಧಿಯಿಂದ ಇನ್ನೊಂದು ವಿಷಯವನ್ನು ಹೇಳುವೆನು. ನೀನು ಉತ್ತಮಗತಿಯನ್ನು ಬಯಸುವುದಾದರೆ ನನ್ನ ಮಾತನ್ನು ನಡೆಸು.

ಅಹಿಂಸಾ ಪರಮೋ ಧರ್ಮಃ ಸರ್ವವೇದೇ ಪ್ರಕೀರ್ತಿತಃ ।
ಬ್ರಾಹ್ಮಣಸ್ಯ ವಿಶೇಷೇಣ ತಸ್ಮಾತ್ಸರ್ಪವಧಂ ತ್ಯಜ ॥ ೨೧೮ ॥
ಅಹಿಂಸಕಾನಿ ಭೂತಾನಿ ಯೋ ಹಿನಸ್ತಿ ಸುನಿರ್ದಯಃ ।
ಸ ಯಾತಿ ನರಕಂ ಘೋರಂ ಯಾವದಾಭೂತಸಂಪ್ಲವಂ ॥ ೨೧೯ ॥
ಚರಾಽಚರಾಣಾಂ ಭೂತಾನಾಮಭಯಂ ಯಃ ಪ್ರಯಚ್ಛತಿ ।
ಸರ್ವದಾ ಸರ್ವಸೌಖ್ಯಾಢ್ಯೋ ಜಾಯತೇ ದಿವಿ ಚೇಹ ಚ ॥ ೨೨೦ ॥
ನಾಽಸ್ತಿ ಭರ್ಗಸಮೋ ದೇವೋ ನಾಽಸ್ತಿ ಗಂಗಾಸಮಾ ನದೀ ।
ನಾಽಸ್ತಿ ಹಿಂಸಾಸಮಂ ಪಾಪಂ ನಾಽಸ್ತಿ ಧರ್ಮೋ ದಯಾಸಮಃ ॥ ೨೨೧ ॥
ಅಥಾಽಹಮಬ್ರುವಂ ತಂ ಚ ತಚ್ಛ್ರುತ್ವಾ ತಸ್ಯ ಜಲ್ಪಿತಂ ।
ಅಹಿಂಸಾಲಕ್ಷಣಂ ಧರ್ಮಂ ಪರಲೋಕಭಯಾತುರಃ ॥ ೨೨೨ ॥
ಮನ್ಯತೇ ವೃದ್ಧಲೋಕಾನಾಮೇತದ್ವಾಕ್ಯಂ ಶ್ರುತಂ ಮಯಾ ।
ಭೂಪತೇರ್ನೈವ ದೋಷಃ ಸ್ಯಾದ್ವನೇ ವ್ಯಾಪಾದಿತೈರ್ಮೃಗೈಃ ॥ ೨೨೩ ॥
ಪ್ರವದಂತಿ ತಥಾ ವೈದ್ಯಾ ವೈದ್ಯಶಾಸ್ತ್ರವಿಚಕ್ಷಣಾಃ ।
ಭವಂತಿ ಪುಷ್ಟಿಸಂಯುಕ್ತಾ ಮಾಂಸಾದಾಶ್ಚಿರಜೀವಿನಃ ॥ ೨೨೪ ॥

---

೨೧೮. ಅಹಿಂಸೆಯು ಉತ್ತಮವಾದ ಧರ್ಮವೆಂದು ಸಮಸ್ತ ವೇದದಲ್ಲಿ ಪ್ರತಿಪಾದಿತವಾಗಿರುವುದು. ಅದು ಬ್ರಾಹ್ಮಣನಿಗೆ ವಿಶೇಷವಾಗಿ ಉತ್ತಮ ಧರ್ಮವಾಗಿರುವುದು. ಆದ್ದರಿಂದ ನೀನು ಸರ್ಪವಧೆಯನ್ನು ತ್ಯಜಿಸು.

೨೧೯. ಹಿಂಸೆಮಾಡದಿರುವ ಪ್ರಾಣಿಗಳನ್ನು ನಿರ್ದಯನಾಗಿ ಹಿಂಸಿಸುವವನು ಪ್ರಳಯಕಾಲದವರೆಗೆ ಘೋರನರಕಕ್ಕೆ ಹೋಗುವನು.

೨೨೦. ಚರಾಚರಪ್ರಾಣಿಗಳಿಗೆ ಅಭಯವನ್ನು ಕೊಡುವವನು ಯಾವಾಗಲೂ ಈ ಲೋಕದಲ್ಲಿಯೂ, ದೇವಲೋಕದಲ್ಲಿಯೂ ಸಮಸ್ತ ಸೌಖ್ಯಗಳುಳ್ಳವನಾಗುವನು.

೨೨೧. ಶಿವನಿಗೆ ಸಮಾನವಾದ ದೇವತೆಯೂ, ಗಂಗೆಗೆ ಸಮವಾದ ನದಿಯೂ, ಹಿಂಸೆಗೆ ಸಮವಾದ ಪಾಪವೂ ಬೇರೊಂದಿಲ್ಲ.

೨೨೨. ಬಳಿಕ ಪರಲೋಕದಿಂದ ಭಯಗೊಂಡ ನಾನು ಅಹಿಂಸಾರೂಪ ಧರ್ಮ ವಿಷಯಕವಾದ ಅವನ ಆ ಮಾತನ್ನು ಕೇಳಿ ಹೀಗೆಂದನು.

೨೨೩. ಕಾಡಿನಲ್ಲಿ ಮೃಗಗಳನ್ನು ಕೊಲ್ಲುವುದರಿಂದ ದೊರೆಗೆ ದೋಷವಿಲ್ಲ ಎಂಬ ಮಾತನ್ನು ನಾನು ವೃದ್ಧರಿಂದ ಕೇಳಿದ್ದೇನೆ.

೨೨೪. ಹಾಗೆಯೇ ವೈದ್ಯಶಾಸ್ತ್ರಕುಶಲರಾದವರು ಮಾಂಸವನ್ನು ಭಕ್ಷಿಸುವವರು ಪುಷ್ಟರಾಗಿ ಚಿರಂಜೀವಿಗಳಾಗುವರು ಎಂದು ಹೇಳುತ್ತಾರೆ.

ತದತ್ರ ವಿಷಯೇ ಬ್ರೂಹಿ ಪರಂ ನಿಃಶ್ರೇಯಸಂ ವಚಃ ।
ಸರ್ವಂ ಕರ್ತಾಽಸ್ಮ್ಯಸಂದಿಗ್ಧಂ ತವ ವಕ್ತ್ರಾದ್ವಿನಿರ್ಗತಂ ॥ ೨೨೫ ॥
ಅಥ ಮಾಂ ಸ ಪುನಃ ಪ್ರಾಹ ವದ ಮೈವಂ ದ್ವಿಜೋತ್ತಮ ।
ಮತಮೇತದಸಾಧೂನಾಂ ಪಾಪಾನಾಂ ಮಾಂಸಗೃದ್ಧಿನಾಂ ॥ ೨೨೬ ॥
ಅಹೋ ಶೋಚ್ಯತಮಾ ಲೋಕೇ ಪಾಪಾತ್ಮಾನಃ ಸುನಿರ್ದಯಾಃ ।
ಸರ್ವದೋಷಾಕರಂ ಮಾಂಸಂ ಮೂಢಾಃ ಸ್ವಾದಂತಿ ಯೇ ನರಾಃ ॥ ೨೨೭ ॥
ನ ಮಾಂಸಮಾಯುಷೋ ಹೇತುರಾರೋಗ್ಯಸ್ಯ ಬಲಸ್ಯ ವಾ ।
ಸರ್ವಮೇತದಸತ್ಯಂ ಸ್ಯಾಚ್ಛೃಣುಷ್ವಾಽದ್ಯ ನಿದರ್ಶನಂ ॥ ೨೨೮ ॥
ಮಾಂಸಾಶಿನೋಽಪಿ ದೃಶ್ಯಂತೇ ರೋಗಾರ್ತಾ ದುರ್ಬಲಾಸ್ತಥಾ ।
ಸ್ವಲ್ಪಾಯುಷಶ್ಚ ಮತ್ವೈವಂ ಮಾಂಸಂ ವರ್ಜಯ ದೂರತಃ ॥ ೨೨೯ ॥
ಅಮಾಂಸಾದಾ ಅಪಿ ಕ್ವಾಪ್ಯಾಮಾಂ ದೃಶ್ಯಂತೇ ರೋಗವರ್ಜಿತಾಃ ।
ಚಿರಾಯುಷಶ್ಚ ಪೀನಾಂಗಾಸ್ತಸ್ಮಾನ್ಮಾಂಸಂ ವಿವರ್ಜಯೇತ್ ॥ ೨೩೦ ॥
ಯೋ ಭಕ್ಷಯತಿ ಮಾಂಸಾನಿ ಸತ್ವಾನಾಂ ಜೀವಿತೈಷಿಣಾಂ ।
ಸ ಯಾತಿ ನರಕಂ ಘೋರಂ ತತ್ರಸ್ಥೋ ಭಕ್ಷ್ಯತೇ ಚ ತೈಃ ॥ ೨೩೧ ॥

---

೨೨೫. ಆದ್ದರಿಂದ ಈ ವಿಷಯದಲ್ಲಿ ಶ್ರೇಯಸ್ಸಾಧನವಾದ ಮಾತನ್ನು ಹೇಳು. ನೀನು ಹೇಳಿದ ಎಲ್ಲ ಮಾತನ್ನೂ ನಿಶ್ಚಯವಾಗಿಯೂ ನೆರವೇರಿಸುವೆನು.

೨೨೬. ತರುವಾಯ ಅವನು ನನ್ನನ್ನು ಕುರಿತು ಹೀಗೆಂದನು. "ಬ್ರಾಹ್ಮಣ! ನೀನು ಹೀಗೆನ್ನಬೇಡ. ಇದು ಮಾಂಸದಲ್ಲಿ ಆಶೆಯುಳ್ಳ ಪಾಪಿಷ್ಠರಾದ ದುಷ್ಟರ ಅಭಿಪ್ರಾಯ.

೨೨೭. ಸಕಲ ದೋಷಗಳಿಗೆ ಆಶ್ರಯವಾದ ಮಾಂಸವನ್ನು ತಿನ್ನುವ ಮೂಢ ಮಾನವರು ಲೋಕದಲ್ಲಿ ಶೋಚ್ಯರೂ, ಪಾಪಿಗಳೂ, ನಿರ್ದಯರೂ ಆಗಿರುವರು.

೨೨೮. ಮಾಂಸವು ಆಯುಸ್ಸು, ಆರೋಗ್ಯ, ಅಥವಾ ಬಲಕ್ಕೆ ಕಾರಣವಲ್ಲ. ಇದೆಲ್ಲ ಸುಳ್ಳು. ಈ ವಿಷಯದಲ್ಲಿ ಈಗ ದೃಷ್ಟಾಂತವನ್ನು ಕೇಳು.

೨೨೯. ಮಾಂಸಭಕ್ಷಕರು ರೋಗಪೀಡಿತರೂ, ದುರ್ಬಲರೂ, ಅಲ್ಪಾಯುಷ್ಯವುಳ್ಳವರೂ ಆಗಿ ಕಾಣುತ್ತಾರೆ. ಇದನ್ನರಿತು ಮಾಂಸವನ್ನು ತ್ಯಜಿಸು.

೨೩೦. ಮಾಂಸವನ್ನು ತಿನ್ನದವರು ರೋಗವಿಲ್ಲದವರೂ, ಚಿರಂಜೀವಿಗಳೂ, ಪುಷ್ಟವಾದ ಅವಯವಗಳುಳ್ಳವರೂ ಆಗಿ ಕಾಣಿಸುವರು. ಆದ್ದರಿಂದ ಮಾಂಸವನ್ನು ಬಿಡಬೇಕು.

೨೩೧. ಬದುಕಲಿಚ್ಛಿಸುವ ಪ್ರಾಣಿಗಳ ಮಾಂಸವನ್ನು ಭಕ್ಷಿಸುವವರು ಘೋರ ನರಕದಲ್ಲಿ ಆ ಪ್ರಾಣಿಗಳಿಂದಲೇ ಭಕ್ಷಿಸಲ್ಪಡುವರು.

ನ ಹಿ ಮಾಂಸಂ ತೃಣಾತ್ಕಾಷ್ಠಾದುಪಲಾದಪಿ ಜಾಯತೇ ।
ಹತೇ ಜಂತೌ ಭವೇನ್ಮಾಂಸಂ ತಸ್ಮಾತ್ತತ್ಪರಿವರ್ಜಯೇತ್ ॥ ೨೩೨ ॥
ಏತದೇವ ಹಿ ದೃಷ್ಟಾಂತಂ ಮಾಂಸಸ್ಯ ಪರಿವರ್ಜನೇ ।
ಯದಂಗಂ ಹ್ರಿಯತೇ ಸ್ವಂ ಚ ಕಂಟಕೇನಾಽಪಿ ವಿಕ್ಷತಂ ॥ ೨೩೩ ॥
ಆತ್ಮೌಪಮ್ಯೇನ ಭೂತಾನಿ ತಸ್ಮಾತ್ಸರ್ವಾಣಿ ಪಂಡಿತೈಃ ।
ದ್ರಷ್ಟವ್ಯಾನಿ ನ ಹಿಂಸ್ಯಾನಿ ರಕ್ಷಣೀಯಾನಿ ಶಕ್ತಿತಃ ॥ ೨೩೪ ॥
ಹಂತಾಚೈವಾಽನುಮಂತಾ ಚ ವಿಶಸ್ತಾ ಕ್ರಯವಿಕ್ರಯೀ ।
ಸಂಸ್ಕರ್ತಾ ಚೋಪಹರ್ತಾ ಚ ಖಾದಕಶ್ಚಾಽಷ್ಟಘಾತಕಾಃ ॥ ೨೩೫ ॥
ಧನೇನ ಕ್ರಯಕೃದ್ಧಂತಿ ಭಕ್ಷಣೇನ ಚ ಖಾದಕಃ ।
ಘಾತಕೋ ವಧಬಂಧಾಭ್ಯಾಮಿತ್ಯಸ್ಯಸ್ತ್ರಿವಿಧೋ ವಧಃ ॥ ೨೩೬ ॥
ಕರ್ಮಣಾ ಮನಸಾ ವಾಚಾ ಯೋ ಹಿನಸ್ತಿ ನ ಕಿಂಚನ ।
ಸ ಪ್ರಾಪ್ನೋತಿ ಪರಂ ಸ್ಥಾನಂ ಜರಾಮರಣವರ್ಜಿತಂ ॥ ೨೩೭ ॥
ಶಾಕಮೂಲಫಲಾಹಾರೋ ಬ್ರಹ್ಮಚರ್ಯಪರಾಯಣಃ ।
ನ ತಸ್ಯ ಫಲಮಾಪ್ನೋತಿ ಯದಿ ಹಿಂಸಾಪರೋ ನರಃ ॥ ೨೩೮ ॥

---

೨೩೨. ಮಾಂಸವು ಹುಲ್ಲು, ಕಟ್ಟಿಗೆ, ಕಲ್ಲುಗಳಿಂದ ಉಂಟಾಗುವುದಿಲ್ಲ. ಪ್ರಾಣಿಯನ್ನು ಕೊಂದರೆ ಮಾಂಸವು ಲಭಿಸುವುದು. ಆದ್ದರಿಂದ ಅದನ್ನು ತ್ಯಜಿಸಬೇಕು.

೨೩೩. ಮಾಂಸವನ್ನು ತ್ಯಜಿಸುವುದರಲ್ಲಿ ಇದೇ ದೃಷ್ಟಾಂತವು, ತನ್ನ ಅಂಗಕ್ಕೆ ಮುಳ್ಳುಚುಚ್ಚಿದರೂ ಅದು ಹಾಳಾಗುವುದು.

೨೩೪. ಆದ್ದರಿಂದ ಪಂಡಿತರು ತಮ್ಮ ದೃಷ್ಟಾಂತದಿಂದ ಪ್ರಾಣಿಗಳನ್ನು ನೋಡಬೇಕು. ಹಿಂಸಿಸದೆ ಶಕ್ತ್ಯನುಸಾರ ರಕ್ಷಿಸಬೇಕು.

೨೩೫. ಕೊಲ್ಲುವವ, ಅನುಮೋದಿಸುವವ, ಹಿಂಸಿಸುವವ, ಕೊಂಡು ಮಾರುವವ, ಬೇಯಿಸುವವ, ಬಡಿಸುವವ, ತಿನ್ನುವವ ಎಂಬ ಈ ಎಂಟು ಜನರೂ ಘಾತಕರೆನ್ನಿಸುವರು.

೨೩೬. ಕೊಳ್ಳುವವನು ದ್ರವ್ಯದಿಂದಲೂ, ತಿನ್ನುವವನು ಭಕ್ಷಿಸುವುದರಿಂದಲೂ, ಘಾತಕನು ವಧೆ ಬಂಧನಗಳಿಂದಲೂ ಕೊಂದವನಂತಾಗುವನು. ಹೀಗೆ ವಧೆಯು ತ್ರಿವಿಧವಾಗಿರುವುದು.

೨೩೭. ವಾಙ್ಮನಃಕರ್ಮಗಳಿಂದ ಯಾರನ್ನೂ ಹಿಂಸೆ ಮಾಡದವನು ಜರಾಮರಣವಿಲ್ಲದ ಉತ್ತಮ ಸ್ಥಾನವನ್ನು ಸೇರುವನು.

೨೩೮. ಶಾಕ, ಮೂಲ, ಫಲಗಳನ್ನು ತಿನ್ನುವವನೂ, ಬ್ರಹ್ಮಚರ್ಯೆಯಲ್ಲಿ ನಿರತನೂ ಆದ ಮಾನವನು ಹಿಂಸಾನಿರತನಾದರೆ ಅದರ ಫಲವನ್ನು ಪಡೆಯುವುದಿಲ್ಲ.

ಏಕೋ ವರ್ಷಶತಂ ಸಾಗ್ರಂ ತಪಸ್ತಪತಿ ದುಸ್ತರಂ ।
ಅಹಿಂಸಾನಿರತೋ ಯಸ್ತು ತಯೋಃ ಶ್ರೇಷ್ಠೋ ದಯಾನ್ವಿತಃ ॥ ೨೩೯ ॥
ಯಂ ಯಂ ಕಾಮಯತೇ ಕಾಮಂ ದುಷ್ಪ್ರಾಪಮಪಿ ಮಾನವಃ ।
ತಂ ತಮಾಪ್ನೋತ್ಯ ಸಂದಿಗ್ಧಂ ಯದಿ ಸ್ಯಾತ್ಸುದಯಾನ್ವಿತಃ ॥ ೨೪೦ ॥
ಕಾಮಗೇನ ವಿಮಾನೇನ ದಿವ್ಯಸ್ತ್ರೀಶತಸೇವಿತಃ ।
ದೇವವನ್ಮೋದತೇ ಸ್ವರ್ಗೇ ಸರ್ವಭೂತಾಭಯಪ್ರದಃ ॥ ೨೪೧ ॥
ಏವಮುಕ್ತ್ವಾ ಮಹಾತ್ಮಾ ಸ ಪಶ್ಯತೋ ಮಮ ಸೂತಜ ।
ವಿಮಾನವರಮಾರುಹ್ಯ ಗತಶ್ಚ ತ್ರಿದಿವಾಲಯಂ ॥ ೨೪೨ ॥
ಗಂಧರ್ವೈರ್ಗೀಯಮಾನಸ್ತು ಸ್ತೂಯಮಾನಶ್ಚ ಕಿನ್ನರೈಃ ।
ಷಡಕ್ಷರಸ್ಯ ಮಂತ್ರಸ್ಯ ಮಾಹಾತ್ಮ್ಯೇನ ಮಹಾಮತೇ ॥ ೨೪೩ ॥
ತಸ್ಮಿನ್ ಗತೇ ತದಾ ಸ್ವರ್ಗಂ ದುಃಖಂ ಮೇ ಸಮುಪಸ್ಥಿತಂ ।
ಸ್ಮೃತ್ವಾ ಪೂರ್ವಂ ಹತಾನ್ ಸರ್ಪಾನ್ ಭಗ್ನಗಾತ್ರೋಽಭವಂ ತದಾ ॥
ತತೋಽಹಂ ಕೃತವಾಂಸ್ತತ್ರ ವಿಪ್ರಲಾಪಾನನೇಕಶಃ ।
ಸ್ವಕರ್ಮಭಯಸಂತ್ರಸ್ತಸ್ತಸ್ಮಿನ್ನೇವ ಮಹಾವನೇ ॥ ೨೪೫ ॥
ಅಹೋ ಮಯಾ ನೃಶಂಸೇನ ಬಹವಃ ಪ್ರಾಣಿನೋ ಹತಾಃ ।
ನಿಂದಿತಶ್ಚ ಮಹಾದೇವೋ ನರಕಾರ್ತಿರ್ಭವಿಷ್ಯತಿ ॥ ೨೪೬ ॥

---

೨೩೯. ನೂರುವರ್ಷಕಾಲ ದುಸ್ತರ ತಪಸ್ಸನ್ನು ಮಾಡುವವ ಮತ್ತು ಅಹಿಂಸಾಸಕ್ತ ಇವರಲ್ಲಿ ದಯಾಳುವೇ ಶ್ರೇಷ್ಠನು.

೨೪೦–೨೪೧. ನರನು ದಯಾಳುವಾದರೆ ತಾನು ಬಯಸುವ ಹೊಂದಲಶಕ್ಯವಾದ ಇಷ್ಟಾರ್ಥವನ್ನೂ ನಿಶ್ಚಯವಾಗಿಯೂ ಪಡೆಯುವನು. ಸಕಲ ಪ್ರಾಣಿಗಳಿಗೆ ಅಭಯದಾತನು ಸ್ವೇಚ್ಛಾಚಾರಿಯಾದ ವಿಮಾನದಲ್ಲಿ ಕುಳಿತು ದಿವ್ಯಸ್ತ್ರೀಯರಿಂದ ಸೇವಿತನಾಗಿ ಸ್ವರ್ಗದಲ್ಲಿ ದೇವತೆಯಂತೆ ಆನಂದಪಡುವನು."

೨೪೨–೨೪೩. ಸೂತ! ಆ ಮಹಾತ್ಮನು ಹೀಗೆ ಹೇಳಿ ಷಡಕ್ಷರ ಮಂತ್ರದ ಮಹಾತ್ಮ್ಯದಿಂದ ನಾನು ನೋಡುತ್ತಿರುವಾಗಲೆ ಉತ್ತಮ ವಿಮಾನವನ್ನೇರಿ ಗಂಧರ್ವರಿಂದ ಗಾನಮಾಡಲ್ಪಡುವವನೂ, ಕಿನ್ನರರಿಂದ ಸ್ತುತಿಸಲ್ಪಡುವವನೂ ಆಗಿ ಸ್ವರ್ಗಕ್ಕೆ ತೆರಳಿದನು.

೨೪೪–೨೪೫. ಅವನು ಸ್ವರ್ಗಕ್ಕೆ ತೆರಳಲು ಹಿಂದೆ ಕೊಂದ ಸರ್ಪಗಳನ್ನು ಸ್ಮರಿಸಿ ನನಗೆ ದುಃಖವುಂಟಾಯಿತು. ಬಳಿಕ ನಾನು ಅದೇ ಕಾಡಿನಲ್ಲಿ ನಾನು ಮಾಡಿದ ಕರ್ಮದಿಂದ ಭಯಗೊಂಡು ಬಹುವಾಗಿ ಗೋಳಾಡಿದೆನು.

೨೪೬. ಘಾತುಕನಾದ ನಾನು ಪಲವು ಪ್ರಾಣಿಗಳನ್ನು ಕೊಂದೆನು. ಮಹಾದೇವನನ್ನು ನಿಂದಿಸಿದೆನು. ಅದರಿಂದ ನನಗೆ ನರಕಪೀಡೆಯುಂಟಾಗುವುದು.

ಸೋಽಹಂ ಹಿಂಸಾಂ ಪರಿತ್ಯಜ್ಯ ಚರಿಷ್ಯಾಮಿ ಮಹತ್ತಪಃ ।
ಶಿವದೀಕ್ಷಾಂ ಸಮಾಸಾದ್ಯ ಪೂಜಯಿಷ್ಯೇ ಮಹೇಶ್ವರಂ ॥ ೨೪೭ ॥
ಯತ್ಕಿಂಚಿತ್ತ್ರಿಷು ಲೋಕೇಷು ಪ್ರಾರ್ಥಯಂತಿ ನರಾಃಸುಖಂ ।
ತತ್ಸರ್ವಂ ತಪಸಾ ಸಾಧ್ಯಂ ತಸ್ಮಾತ್ಕಾರ್ಯಂ ಮಯಾ ತಪಃ ॥ ೨೪೮ ॥
ಅಧುನೈಕೋಽಹಮೇಕಾಽಹಮೇಕೈಕಸ್ಮಿನ್ನನಸ್ಪತೌ ।
ಚರನ್ ಭೈಕ್ಷ್ಯಂ ಮುನಿರ್ಮೌನೀ ಚರಿಷ್ಯಾಮ್ಯಾಶ್ರಮಾನಿಮಾನ್ ॥ ೨೪೯ ॥
ಪಾಂಸುನಾ ಸಮುವಚ್ಛನ್ನಃ ಶೂನ್ಯಾಗಾರಪ್ರತಿಶ್ರಯಃ ।
ವೃಕ್ಷಮೂಲನಿಕೇತೋ ವಾ ತ್ಯಕ್ತಸರ್ವಪ್ರಿಯಾಪ್ರಿಯಃ ॥ ೨೫೦ ॥
ಏವಂ ವಿಲಪ್ಯ ಯತ್ನೇನ ಮಯಾ ಸೂತಕುಲೋದ್ವಹ ।
ಗೃಹೀತಂ ಭಕ್ತಿಯುಕ್ತೇನ ಶಿವದೀಕ್ಷಾವ್ರತಂ ತತಃ ॥ ೨೫೧ ॥
ಷಡಕ್ಷರಸ್ಯ ಮಂತ್ರಸ್ಯ ಅಯುತಂ ಪ್ರಜಪಾಮ್ಯಹಂ ।
ತ್ರಿಸಂಧ್ಯಂ ಶ್ರದ್ಧಯಾ ಯುಕ್ತಃ ಸಿದ್ಧೇಶ್ವರಸಮೀಪತಃ ॥ ೨೫೨ ॥
ತತ್ಪ್ರಭಾವೇನ ಮೇ ಸ್ಥೈರ್ಯಂ ಸಂಜಾತಂ ಯೌವನೋದ್ಭವಂ ।
ತಥಾ ಲೋಕಾಂತರಜ್ಞಾನಂ ಖೇಚರತ್ವಂ ಚ ಸೂತಜ ॥ ೨೫೩ ॥
ಸಿದ್ಧೇಶ್ವರಂ ಪ್ರಯಾಸ್ಯಾಮಿ ದ್ವಾಪರಾಂತೇ ಹ್ಯವಸ್ಥಿತೇ ।
ಸದಾಶಿವಂ ಪ್ರಯಾಸ್ಯಾಮಿ ಸತ್ಯಮೇತನ್ಮಯೋದಿತಂ ॥ ೨೫೪ ॥

---

೨೪೭. ಅಂತಹ ನಾನು ಹಿಂಸೆಯನ್ನು ತ್ಯಜಿಸಿ ಮಹಾತಪಸ್ಸನ್ನು ಆಚರಿಸುವೆನು. ಶಿವದೀಕ್ಷೆಯನ್ನು ಪಡೆದು ಮಹೇಶ್ವರನನ್ನು ಆರಾಧಿಸುವೆನು.

೨೪೮. ತ್ರಿಭುವನದಲ್ಲಿ ಮಾನವರು ಬಯಸುವ ಸುಖವೆಲ್ಲ ತಪಸ್ಸಿನಿಂದಾಗುವುದು. ಆದ್ದರಿಂದ ತಪಸ್ಸನ್ನಾಚರಿಸುವೆನು.

೨೪೯. ಈಗ ನಾನು ಒಂದೊಂದು ದಿನ ಒಂದೊಂದು ಮಠದಲ್ಲಿ ಬಿಕ್ಷಾಟನೆ ಮಾಡುತ್ತ ಮೌನವನ್ನು ತಾಳಿ ಈ ಆಶ್ರಮಗಳಲ್ಲಿ ಸಂಚರಿಸುವೆನು.

೨೫೦. ಧೂಳಿನಿಂದ ಲಿಪ್ತನೂ, ಹಾಳುಮನೆಯನ್ನು ಆಶ್ರಯಿಸಿದವನೂ, ವೃಕ್ಷಮೂಲವನ್ನಾಶ್ರಯಿಸಿದವನೂ, ಅಥವಾ ಸಕಲ ಹಿತಾಹಿತಗಳನ್ನು ತ್ಯಜಿಸಿದವನೂ ಆಗುವೆನು.

೨೫೧–೨೫೨. ಸೂತ! ನಾನು ಹೀಗೆ ಗೋಳಾಡಿ ಭಕ್ತಿಯಿಂದ ಶಿವದೀಕ್ಷೆಯನ್ನು ಹೊಂದಿದೆನು. ತ್ರಿಸಂಧ್ಯೆಗಳಲ್ಲಿ ಶ್ರದ್ಧೆಯಿಂದ ಸಿದ್ಧೇಶ್ವರನ ಸನ್ನಿಧಿಯಲ್ಲಿ ಹತ್ತು ಸಾವಿರ ಷಡಕ್ಷರ ಮಂತ್ರಗಳನ್ನು ಜಪಿಸಿದೆನು.

೨೫೩. ಅದರ ಪ್ರಭಾವದಿಂದ ನನಗೆ ಯೌವನದ ಸ್ಥೈರ್ಯವುಂಟಾಯಿತು. ಹಾಗೆಯೇ ಪರಲೋಕದ ಜ್ಞಾನವೂ, ಆಕಾಶಗಾಮಿತ್ವವೂ ಸಂಭವಿಸಿತು.

೨೫೪. ದ್ವಾಪರಾವಸಾನದೊಳಗೆ ಸಿದ್ಧೇಶ್ವರಕ್ಕೆ ತೆರಳಿ ಸದಾಶಿವನನ್ನು ಸೇರುವೆನು. ನಾನು ಹೇಳಿರುವುದು ನಿಜ.

ಏತತ್ತೇ ಸರ್ವಮಾಖ್ಯಾತಂ ಮಯಾ ಸೂತಜ ಮೋಕ್ಷದಂ ।
ಷಡಕ್ಷರಸ್ಯ ಮಾಹಾತ್ಮ್ಯಂ ಸರ್ವಪಾಪಪ್ರಣಾಶನಂ ॥ ೨೫೫ ॥
ಯಶ್ಚೈತಚ್ಛೃಣುಯಾನ್ನಿತ್ಯಂ ಸಮ್ಯಕ್ ಶ್ರದ್ಧಾಸಮನ್ವಿತಃ ।
ಅಜನ್ಮಮರಣಾತ್ಪಾಪಾತ್ಸೋಽಪಿ ಮುಚ್ಯೇತ ಮಾನವಃ ॥ ೨೫೬ ॥
ತಸ್ಮಾತ್ತ್ವಂ ಹಿ ಮಹಾಭಾಗ ಮಂತ್ರಮೇನಂ ಸದಾ ಜಪ ।
ಸಂಪ್ರಾಪ್ಸ್ಯಸಿ ಪರಾನ್ಕಾಮಾನ್ ಮನಸಾ ವಾಂಛಿತಾನ್ ಸದಾ ॥ ೨೫೭ ॥

ಸೂತ ಉವಾಚ :—

ಏತಚ್ಛ್ರುತಂ ಮಯಾ ಪೂರ್ವಂ ಸಕಾಶಾತ್ತಸ್ಯ ಸದ್ಗುರೋಃ ।
ಷಡಕ್ಷರಸ್ಯ ಮಹಾತ್ಮ್ಯಂ ಯದ್ಯುಷ್ಮಾಕಂ ಪ್ರಕೀರ್ತಿತಂ ॥ ೨೫೮ ॥
ಧನ್ಯಂ ಯಶಸ್ಯಮಾಯುಷ್ಯಂ ಶತ್ರುಪಕ್ಷಕ್ಷಯಾವಹಂ ।
ಪಠತಾಂ ಶೃಣ್ವತಾಂ ನಿತ್ಯಂ ಸರ್ವಕಾಮಾಽಭಯಪ್ರದಂ ॥ ೨೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಿದ್ಧೇಶ್ವರಮಾಹಾತ್ಮ್ಯವರ್ಣನಂ"
ನಾಮೈಕೋನತ್ರಿಂಶೋಽಧ್ಯಾಯಃ

---

೨೫೫. ಸೂತ! ಮೋಕ್ಷವನ್ನೀಯುವುದೂ, ಸಕಲಪಾಪಗಳನ್ನು ಪರಿಹರಿಸುವುದೂ ಆದ ಷಡಕ್ಷರಮಂತ್ರದ ಮಾಹಾತ್ಮ್ಯವನ್ನೆಲ್ಲ ನಿನಗೆ ಹೇಳಿರುವೆನು.

೨೫೬. ಶ್ರದ್ಧೆಯಿಂದ ನಿತ್ಯವೂ ಇದನ್ನು ಕೇಳಿದವನು ಹುಟ್ಟಿದ ಮೊದಲ್ಗೊಂಡು ಮರಣಕಾಲದವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೨೫೭. ಎಲೈ ಮಹಾಭಾಗ್ಯವಂತನೆ! ಆದ್ದರಿಂದ ನೀನು ಈ ಮಂತ್ರವನ್ನು ಯಾವಾಗಲೂ ಜಪಿಸು. ಇದರಿಂದ ಮನೋಭೀಷ್ಟವನ್ನು ಪಡೆಯುವೆ.

೨೫೮. ಸೂತನು ಹೇಳುತ್ತಾನೆ:—ನಾನು ಹಿಂದೆ ಸದ್ಗುರುವಿನಿಂದ ಕೇಳಿದ ಈ ಷಡಕ್ಷರಮಾಹಾತ್ಮ್ಯವನ್ನು ನಿಮಗೆ ಹೇಳಿರುವೆನು.

೨೫೯. ಪುಣ್ಯಕರವೂ, ಕೀರ್ತ್ಯಾಯುಷ್ಯಗಳನ್ನುಂಟುಮಾಡುವುದೂ, ಶತ್ರುಗಳನ್ನು ನಾಶಗೊಳಿಸುವುದೂ ಆದ ಇದನ್ನು ಹೇಳುವವರಿಗೂ, ಕೇಳುವವರಿಗೂ ಸಮಸ್ತೇಷ್ಟಾರ್ಥಗಳನ್ನು ನೀಡಿ ಅಭಯವನ್ನುಂಟುಮಾಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಿದ್ಧೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶೋಽಧ್ಯಾಯಃ

### ಸಿದ್ಧೇಶ್ವರೋತ್ಪತ್ತಿವೃತ್ತಾಂತವರ್ಣನಂ

ಋಷಯ ಊಚುಃ:—

ತೋಷಿತಃ ಕೇನ ಸಿದ್ಧೇನ ತತ್ರ ಸಿದ್ಧೇಶ್ವರೋ ವಿಭುಃ ।
ಏತತ್ಸರ್ವಂ ಸಮಾಚಕ್ಷ್ವ ವಿಸ್ತರಾತ್ಸೂತನಂದನ ॥ ೧ ॥

ಸೂತ ಉವಾಚ:—

ಆಸೀತ್ಸಿದ್ಧಾಽಧಿಪೋ ನಾಮ ಪುರಾಹಂಸ ಇತಿ ಸ್ಮೃತಃ ।
ಅನಪತ್ಯತಯಾ ತಸ್ಯ ಕಾಲಶ್ಚಕ್ರಾಮ ಭೂರಿಶಃ ॥ ೨ ॥
ತತಶ್ಚಿಂತಾಂ ಪ್ರಪನ್ನಃ ಸ ಗತ್ವಾ ದೇವಪುರೋಹಿತಂ ।
ಪಪ್ರಚ್ಛಾಂಗಿರಸಃ ಪುತ್ರಂ ವಿಪ್ರಶ್ರೇಷ್ಠಂ ಬೃಹಸ್ಪತಿಂ ॥ ೩ ॥
ಭಗವಂಶ್ಚಾಽನಪತ್ಯಶ್ಚ ವಾರ್ಧಕಂ ಮೇ ಸಮಾಗತಂ ।
ತಸ್ಮಾದಪತ್ಯಲಾಭಾಯ ಮಮೋಪಾಯಂ ಪ್ರಕೀರ್ತಯ ॥ ೪ ॥
ತೀರ್ಥಯಾತ್ರಾಂ ವ್ರತಂ ವಾಽಪಿ ಶಾಂತಿಕಂ ವಾ ದ್ವಿಜೋತ್ತಮ ।
ಯೇನ ಸ್ಯಾತ್ಸಂತತಿಃ ಶೀಘ್ರಂ ತ್ವತ್ಪ್ರಸಾದಾದ್ಬೃಹಸ್ಪತೇ ॥ ೫ ॥
ಬೃಹಸ್ಪತಿಶ್ಚಿರಂ ಧ್ಯಾತ್ವಾ ಸಿದ್ಧಂ ಪ್ರಾಹ ತತಃಪರಂ ।
ಚಮತ್ಕಾರಪುರಂ ಕ್ಷೇತ್ರಂ ಗತ್ವಾ ತತ್ರ ತಪಃ ಕುರು ॥ ೬ ॥

---

### ಕನ್ನಡದ ಅನುವಾದ

#### ಸಿದ್ಧೇಶ್ವರೋತ್ಪತ್ತಿವೃತ್ತಾಂತವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಆ ಸಿದ್ಧೇಶ್ವರನನ್ನು ಯಾವ ಸಿದ್ಧನು ಸಂತೋಷಗೊಳಿಸಿದನು? ಇದನ್ನೆಲ್ಲ ನಮಗೆ ವಿಸ್ತಾರವಾಗಿ ಹೇಳು.

೨–೩. ಸೂತನು ಹೇಳುತ್ತಾನೆ:—ಹಿಂದೆ ಹಂಸನೆಂಬ ಸಿದ್ಧಾಧಿಪನಿದ್ದನು. ಅವನಿಗೆ ಬಹುಕಾಲ ಮಕ್ಕಳಿರಲಿಲ್ಲ. ಅವನು ಚಿಂತಾಕ್ರಾಂತನಾಗಿ ಅಂಗಿರಸನ ಮಗನಾದ ಬೃಹಸ್ಪತಿಯನ್ನು ಹೀಗೆ ಪ್ರಶ್ನೆಮಾಡಿದನು.

೪. ಪೂಜ್ಯನೆ! ಮಕ್ಕಳಿಲ್ಲದ ನನಗೆ ಮುಪ್ಪು ಬಂದಿರುವುದು. ಆದ್ದರಿಂದ ನನಗೆ ಮಕ್ಕಳನ್ನು ಪಡೆಯಲು ಉಪಾಯವನ್ನು ಹೇಳು.

೫. ನಿನ್ನ ಅನುಗ್ರಹದಿಂದ ತೀರ್ಥಯಾತ್ರೆ, ವ್ರತ, ಶಾಂತಿಕರ್ಮ ಇವುಗಳಲ್ಲಿ ಯಾವುದರಿಂದ ನನಗೆ ಬೇಗನೆ ಸಂತತಿಯಾದೀತು?

೬–೭. ಬೃಹಸ್ಪತಿಯು ಬಹಳ ಹೊತ್ತು ಆಲೋಚಿಸಿ ಸಿದ್ಧಾಧಿಪನನ್ನು ಕುರಿತು ಹೀಗೆಂದನು. ನೀನು ಚಮತ್ಕಾರಪುರಕ್ಕೆ ಹೋಗಿ ತಪವನ್ನಾಚರಿಸು.

F

ತತಃ ಪ್ರಾಪ್ಸ್ಯಸಿ ಸತ್ಪುತ್ರಂ ವಂಶೋದ್ಧಾರಕ್ಷಮಂ ಶುಭಂ ।
ನಾಽನ್ಯಂ ಪಶ್ಯಾಮಿ ಸಿದ್ಧೇಶ ಸುತೋಪಾಯಂ ಶುಭಾವಹಂ ॥ ೭ ॥
ತತಸ್ತತ್ಕ್ಷೇತ್ರಮಾಸಾದ್ಯ ಸ ಸಿದ್ಧಃ ಶ್ರದ್ಧಯಾನ್ವಿತಃ ।
ಲಿಂಗಂ ಸಂಪೂಜಯಾಮಾಸ ಯಥೋಕ್ತವಿಧಿನಾ ಸ್ವಯಂ ॥ ೮ ॥
ತತಶ್ಚಾರಾಧಯಾಮಾಸ ದಿವಾನಕ್ತಮತಂದ್ರಿತಃ ।
ಬಲಿಪೂಜೋಪಹಾರೇಣ ಗೀತವಾದ್ಯೈಶ್ಚ ಕ್ರಿಯಾದಿಭಿಃ ॥ ೯ ॥
ಚಾಂದ್ರಾಯಣೈಸ್ತಥಾಕೃಚ್ಛ್ರೈಃ ಪಾರಾಕೈರ್ದ್ವಿಜಸತ್ತಮಾಃ ।
ತಥಾ ಮಾಸೋಪವಾಸೈಶ್ಚ ತೋಷಯಾಮಾಸ ಶಂಕರಂ ॥ ೧೦ ॥
ತತೋ ವರ್ಷಸಹಸ್ರಾಭ್ಯಾಂ ತಸ್ಯ ತುಷ್ಟೋ ಮಹೇಶ್ವರಃ ।
ಪ್ರೋವಾಚ ದರ್ಶನಂ ಗತ್ವಾ ವೃಷಾರೂಢಃ ಸಹೋಮಯಾ ॥ ೧೧ ॥
ಹಂಸಾಽದ್ಯ ತವ ತುಷ್ಟೋಽಹಂ ತಸ್ಮಾತ್ಪ್ರಾರ್ಥಯ ವಾಂಛಿತಂ ।
ಅಹಂ ತೇ ಸಂಪ್ರದಾಸ್ಯಾಮಿ ದುಷ್ಪ್ರಾಪ್ಯಮಪಿ ನಿಶ್ಚಿತಂ ॥ ೧೨ ॥

ಹಂಸ ಉವಾಚ :—

ಅಪತ್ಯಾರ್ಥಂ ಸಮಾರಂಭೋ ಮಯಾಽಯಂ ವಿಹಿತಃ ಪುರಾ ।
ತಸ್ಮಾತ್ತ್ವಂ ದೇಹಿ ಮೇ ಪುತ್ರಾನ್ವಂಶೋದ್ಧಾರಕ್ಷಮಾನ್ವಿಭೋ ॥ ೧೩ ॥
ತ್ವಯಾ ಚೈವ ಸದಾಲಿಂಗೇ ಸ್ಥೇಯಮತ್ರ ಸುರೋತ್ತಮ ।
ಮಮ ವಾಕ್ಯಾದಸಂದಿಗ್ಧಂ ಸರ್ವಲೋಕಹಿತಾರ್ಥತಃ ॥ ೧೪ ॥

---

ಆದರಿಂದ ವಂಶವನ್ನು ಉದ್ಧರಿಸಲು ಸಮರ್ಥನಾದ ಒಳ್ಳೆಯ ಮಗನನ್ನು ಹೊಂದುವೆ. ಇದನ್ನು ಬಿಟ್ಟು ಬೇರೆ ಶುಭಕರೋಪಾಯವನ್ನು ಅರಿಯೆನು.

೮–೯. ಬಳಿಕ ಸಿದ್ಧನು ಆ ಕ್ಷೇತ್ರವನ್ನಾಶ್ರಯಿಸಿ ಶ್ರದ್ಧೆಯಿಂದ ವಿಧಿಯಂತೆ ಲಿಂಗವನ್ನು ಹಗಲು ರಾತ್ರಿ ಆಲಸ್ಯವಿಲ್ಲದೆ ಬಲಿ, ಪೂಜೆ, ಉಪಹಾರ, ಗೀತ, ವಾದ್ಯಗಳಿಂದ ಆರಾಧಿಸಿದನು.

೧೦. ಅವನು ಚಾಂದ್ರಾಯಣ, ಕೃಚ್ಛ್ರ, ಪಾರಾಕಗಳಿಂದಲೂ, ಮಾಸೋಪವಾಸಗಳಿಂದಲೂ ಶಂಕರನನ್ನು ಸಂತೋಷಗೊಳಿಸಿದನು.

೧೧. ತರುವಾಯ ಎರಡು ಸಾವಿರ ವರ್ಷಗಳ ಅನಂತರ ಅವನಲ್ಲಿ ಸಂತುಷ್ಟನಾದ ಮಹೇಶ್ವರನು, ಉಮೆಯೊಡನೆ ವೃಷಭವನ್ನೇರಿ ಪ್ರತ್ಯಕ್ಷನಾಗಿ ಇಂತೆಂದನು.

೧೨. ಹಂಸ! ನಾನೀಗ ನಿನ್ನಲ್ಲಿ ಸಂತುಷ್ಟನಾಗಿರುವೆನು. ಇಷ್ಟವಾದುದನ್ನು ಬೇಡಿಕೊ ನಾನು ಅದು ಹೊಂದಲಸಾಧ್ಯವಾಗಿದ್ದರೂ ಕೊಡುವೆನು.

೧೩–೧೪. ಹಂಸನು ಹೇಳುತ್ತಾನೆ:— ನಾನು ಸಂತತಿಗಾಗಿ ಹಿಂದೆ ಈ ಉದ್ಯೋಗವನ್ನು ಮಾಡಿದೆನು. ಆದ್ದರಿಂದ ನೀನು ವಂಶೋದ್ಧಾರಕರಾದ ಪುತ್ರರನ್ನು ನನಗೆ ಕೊಡು. ನೀನು ನನ್ನ ಮಾತಿನಿಂದ ಸಮಸ್ತಲೋಕಗಳ ಹಿತಕ್ಕಾಗಿ ಇಲ್ಲಿ ನಿಶ್ಚಯವಾಗಿಯೂ ಲಿಂಗದಲ್ಲಿ ವಾಸಿಸಬೇಕು.

ಶ್ರೀ ಭಗವಾನುವಾಚ :—

ಅದ್ಯಪ್ರಭೃತಿ ಲಿಂಗೇಽಸ್ಮಿನ್ನಾಶ್ರಯೋ ಮೇ ಭವಿಷ್ಯತಿ ।
ತವ ವಾಕ್ಯೇನ ಸಿದ್ಧೇಶ ಸತ್ಯಮೇತನ್ಮಯೋದಿತಂ ॥ ೧೫ ॥
ಯೋ ಮಾಮತ್ರ ಸ್ಥಿತಂ ಮರ್ತ್ಯಃ ಪೂಜಯಿಷ್ಯತಿ ಭಕ್ತಿತಃ ।
ತಸ್ಯಾಽಹಂ ಸಂಪ್ರದಾಸ್ಯಾಮಿ ಚಿತ್ತಸ್ಥಂ ಸಕಲಂ ಫಲಂ ॥ ೧೬ ॥
ಯೋ ಮೇ ಲಿಂಗಸ್ಯ ಯಾಮ್ಯಾಶಾಂ ಸ್ಥಿತ್ವಾ ಮಂತ್ರಂ ಜಪಿಷ್ಯತಿ ।
ಷಡಕ್ಷರಂ ಪ್ರದಾಸ್ಯಾಮಿ ತಸ್ಯಾಯುಷ್ಯಂ ಸುತಾನ್ವಿತಂ ॥ ೧೭ ॥
ಏವಮುಕ್ತ್ವಾ ಮಹಾದೇವಸ್ತತಶ್ಚಾಽದರ್ಶನಂ ಗತಃ ।
ಹಂಸೋಽಪಿ ಚ ಗೃಹಂ ಗತ್ವಾ ಪುತ್ರಾನ್ಪಾಪ ಮಹೋದಯಾನ್ ॥ ೧೮ ॥
ತಸ್ಮಾತ್ಸರ್ವಪ್ರಯತ್ನೇನ ತಲ್ಲಿಂಗಂ ಯತ್ನತೋ ದ್ವಿಜಾಃ ।
ಸ್ಪರ್ಶನೀಯಂ ಚ ಪೂಜ್ಯಂ ಚ ನಮಸ್ಕಾರ್ಯಂ ಪ್ರಯತ್ನತಃ ॥ ೧೯ ॥
ಷಡಕ್ಷರೇಣ ಮಂತ್ರೇಣ ಕೀರ್ತನೀಯಂ ಚ ಶಕ್ತಿತಃ ।
ವಾಂಛದ್ಭಿರ್ವಾಂಛಿತಾನ್ಕಾಮಾನ್ದುರ್ಲಭಾಂಸ್ತ್ರಿದಶೈರಪಿ ॥ ೨೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಿದ್ಧೇಶ್ವರೋತ್ಪತ್ತಿವೃತ್ತಾಂತವರ್ಣನಂ"
ನಾಮ ತ್ರಿಂಶೋಽಧ್ಯಾಯಃ

---

೧೫. ಶ್ರೀ ಭಗವಂತನು ಹೇಳುತ್ತಾನೆ:—ಸಿದ್ಧೇಶ! ನಿನ್ನ ಮಾತಿನಂತೆ ಈದಿನ ಮೊದಲ್ಗೊಂಡು ನಾನು ಈ ಲಿಂಗದಲ್ಲಿ ನೆಲಸಿರುವೆನು. ನಾನು ಹೇಳಿರುವ ಈ ಮಾತು ನಿಶ್ಚಯ.

೧೬. ಇಲ್ಲಿರುವ ನನ್ನನ್ನು ಭಕ್ತಿಯಿಂದ ಪೂಜಿಸುವವನಿಗೆ ನಾನು ಮನಸ್ಸಿನಲ್ಲಿರುವ ಸಮಸ್ತಫಲವನ್ನೀಯುವೆನು.

೧೭. ನನ್ನ ಲಿಂಗದ ದಕ್ಷಿಣ ದಿಕ್ಕಿನಲ್ಲಿದ್ದು ಷಡಕ್ಷರ ಮಂತ್ರವನ್ನು ಜಪಿಸುವವನಿಗೆ ನಾನು ಆಯುಷ್ಯ, ಮತ್ತು ಪುತ್ರರನ್ನು ಕೊಡುವೆನು.

೧೮. ಮಹಾದೇವನು ಹೀಗೆ ಹೇಳಿ ಅದೃಶ್ಯನಾದನು. ಹಂಸನೂ ಮನೆಗೆ ಹೋಗಿ ಮಹಾಪ್ರಭಾವಶಾಲಿಗಳಾದ ಪುತ್ರರನ್ನು ಪಡೆದನು.

೧೯–೨೦. ದ್ವಿಜರೆ! ಆದ್ದರಿಂದ ಪ್ರಯತ್ನಿಸಿ ಆ ಲಿಂಗವನ್ನು ಸ್ಪರ್ಶಮಾಡಿ, ಪೂಜಿಸಿ, ನಮಸ್ಕರಿಸಬೇಕು. ದೇವದುರ್ಲಭವಾದ ಇಷ್ಟಾರ್ಥಗಳನ್ನು ಬಯಸುವವರು ಶಿವನನ್ನು ಷಡಕ್ಷರ ಮಂತ್ರದಿಂದ ಸ್ತುತಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಿದ್ಧೇಶ್ವರೋತ್ಪತ್ತಿವೃತ್ತಾಂತವರ್ಣನ"ವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕತ್ರಿಂಶೋಽಧ್ಯಾಯಃ

### ನಾಗಹ್ರದಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯದಪಿ ತತ್ರಾಽಸ್ತಿ ನಾಗತೀರ್ಥಮನುತ್ತಮಂ ।
ಯತ್ರ ಸ್ನಾತಸ್ಯ ಸರ್ಪಾಣಾಂ ನ ಭಯಂ ಜಾಯತೇ ಕ್ವಚಿತ್ ॥ ೧ ॥
ತತ್ರ ಶ್ರಾವಣಪಂಚಮ್ಯಾಂ ಯೋ ನರಃ ಸ್ನಾನಮಾಚರೇತ್ ।
ಕೃಷ್ಣಾಯಾಂ ನ ಭಯಂ ತಸ್ಯ ಕುಲೇಽಪಿ ಸ್ಯಾದಹೇಃ ಕ್ವಚಿತ್ ॥ ೨ ॥
ತತ್ರ ಪೂರ್ವಂ ತಪಸ್ತಪ್ತಂ ಮಾತುಃ ಶಾಪಪ್ರಪೀಡಿತೈಃ ।
ಶೇಷಪ್ರಭೃತಿ ನಾಗೈಸ್ತು ಮುಕ್ತಿಹೇತೋರ್ಹುತಾಶನಾತ್ ॥ ೩ ॥
ಕಂಬಲಾಶ್ವತರೌ ನಾಗೌ ತಥಾ ಖ್ಯಾತೌ ಧರಾತಲೇ ।
ತತ್ರ ತಪ್ತ್ವಾ ತಪಸ್ತೀವ್ರಂ ಸಂಸಿದ್ಧಿಂ ಪರಮಾಂ ಗತೌ ॥ ೪ ॥
ಅನಂತೋ ವಾಸುಕಿಶ್ಚೈವ ತಕ್ಷಕಶ್ಚ ಮಹಾಬಲಃ ।
ಕರ್ಕೋಟಕಶ್ಚೈವ ನಾಗೇಂದ್ರೋ ಮಣಿಕಂಠಸ್ತಥಾ ಪರಃ ॥ ೫ ॥

---

## ಕನ್ನಡದ ಅನುವಾದ

### ನಾಗಹ್ರದಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಅಲ್ಲಿ ಮತ್ತೊಂದು ಉತ್ತಮವಾದ ನಾಗತೀರ್ಥವಿರುವುದು. ಅಲ್ಲಿ ಮಿಂದವರಿಗೆ ಒಂದೆಡೆಯಲ್ಲಿಯೂ ಸರ್ಪದ ಭಯವುಂಟಾಗುವುದಿಲ್ಲ.

೨. ಅಲ್ಲಿ ಶ್ರಾವಣ ಬಹುಳ ಪಂಚಮಿಯ ದಿನ ಮಿಂದವನ ವಂಶದಲ್ಲಿ ಸರ್ಪ ಭಯವುಂಟಾಗುವುದಿಲ್ಲ.

೩. ಅಲ್ಲಿ ಹಿಂದೆ ತಾಯಿಯ ಶಾಪದಿಂದ ಪೀಡಿತರಾದ ಶೇಷನೇ ಮೊದಲಾದ ನಾಗಗಳು ಅಗ್ನಿಯಿಂದ ಮುಕ್ತವಾಗುವುದಕ್ಕಾಗಿ ತಪಸ್ಸನ್ನು ಮಾಡಿರುವರು.

೪. ಭೂಮಿಯಲ್ಲಿ ಪ್ರಸಿದ್ಧವಾದ ಕಂಬಲ, ಅಶ್ವತರ ಎಂಬ ನಾಗರು ಅಲ್ಲಿ ತಪಸ್ಸನ್ನಾಚರಿಸಿ ಉತ್ತಮಸಿದ್ಧಿಯನ್ನು ಪಡೆದರು.

೫–೬. ಅನಂತ, ವಾಸುಕಿ, ತಕ್ಷಕ, ಕರ್ಕೋಟಕ, ಮಣಿಕಂಠ,

ಐರಾವತಸ್ತಥಾ ಶಂಖಃ ಪುಂಡರೀಕೋ ಮಹಾವಿಷಃ ।
ಶೇಷ ಪೂರ್ವಾಃ ಸ್ಮೃತಾ ನಾಗಾಃ ಏತೇಽತ್ರ ನವನಾಯಕಾಃ ॥ ೬ ॥
ಏತೇಷಾಂ ಪುತ್ರಪೌತ್ರಾಶ್ಚ ತೇಷಾಮಪಿ ವಿಭೂತಿಭಿಃ ।
ಅಸಂಖ್ಯಾಭಿರಿದಂ ವ್ಯಾಪ್ತಂ ಸಮಸ್ತಂ ಧರಣೀತಲಂ ॥ ೭ ॥
ಅಥ ತೇ ಕುಟಿಲಾ ದುಷ್ಟಾ ಭಕ್ಷಯಂತಿ ಸದಾ ಜನಾನ್ ।
ಬಹುತ್ವಾದಪಿ ಸಂಸ್ಪರ್ಶಾದಪರಾಧಂ ವಿನಾಽಪಿ ಚ ॥ ೮ ॥
ತತಃ ಪ್ರಜಾ ಇಮಾಃ ಸರ್ವಾ ಬ್ರಹ್ಮಾಣಂ ಶರಣಂ ಗತಾಃ ।
ಪೀಡಿತಾಃ ಸ್ಮ ಸುರಶ್ರೇಷ್ಠ ಸರ್ಪೇಭ್ಯೋ ರಕ್ಷ ಸತ್ವರಂ ॥ ೯ ॥
ಯಾವನ್ನ ಶೂನ್ಯತಾಂ ಯಾತಿ ಸಕಲಂ ವಸುಧಾತಲಂ ।
ವ್ಯಾಪ್ತಂ ಸರ್ವೈಸ್ತತಃ ಸರ್ಪೈರ್ವಿಷಾಢ್ಯೈರತಿಭೀಷಣೈಃ ॥ ೧೦ ॥
ಅಥ ತಾನಬ್ರವೀದ್ಬ್ರಹ್ಮಾ ಶೇಷಾದ್ಯಾನ್ನವ ನಾಯಕಾನ್ ।
ಸ್ವಸಂತತೇಶ್ಚ ರಕ್ಷಧ್ವಂ ಭಕ್ಷ್ಯಮಾಣಾ ಇಮಾಃ ಪ್ರಜಾಃ ॥ ೧೧ ॥
ತೇ ತಥೇತಿ ಪ್ರತಿಜ್ಞಾಯ ಜಗ್ಮುಃ ಸರ್ವೇ ಭುಜಂಗಮಾಃ ॥ ೧೨ ॥
ಅಥ ತೇಷಾಂ ಬಹುತ್ವಾಚ್ಚ ನೈವ ರಕ್ಷಾ ಪ್ರಜಾಯತೇ ।
ವಾರಿತಾ ಅಪಿ ತೇ ಯಸ್ಮಾತ್ಪ್ರಕುರ್ವಂತಿ ಪ್ರಜಾಕ್ಷಯಂ ॥ ೧೩ ॥

---

ಐರಾವತ, ಶಂಖ, ಪುಂಡರೀಕ ಎಂಬ ಶೇಷ ಮೊದಲಾದ ಈ ಒಂಭತ್ತು ಜನರು ನಾಯಕರು.

೭. ಇವರ ಪುತ್ರಪೌತ್ರರು, ಲೆಕ್ಕವಿಲ್ಲದ ಅವರ ವಿಭೂತಿಗಳು ಇವುಗಳಿಂದ ಸಕಲ ಭೂಮಂಡಲವೂ ವ್ಯಾಪ್ತವಾಗಿರುವುದು.

೮. ಕುಟಿಲರೂ, ದುಷ್ಟರೂ ಆಗಿರುವ ಇವರು ಅಧಿಕರಾಗಿರುವುದರಿಂದ ತಪ್ಪಿಲ್ಲದಿದ್ದರೂ ಸ್ಪರ್ಶಮಾತ್ರದಿಂದಲೆ ಜನರನ್ನು ಕಚ್ಚುವರು.

೯–೧೦. ತರುವಾಯ ಈ ಪ್ರಜೆಗಳೆಲ್ಲರೂ ಬ್ರಹ್ಮನನ್ನು ಮರೆಹೊಕ್ಕು, "ಪಿತಾಮಹ! ನಾವು ಪೀಡಿತರಾಗಿರುವೆವು. ವಿಷದಿಂದಕೂಡಿದ ಭಯಂಕರ ಸರ್ಪಗಳಿಂದ ವ್ಯಾಪ್ತವಾದ ಈ ಭೂಮಿಯು ಶೂನ್ಯವಾಗದಿರುವಷ್ಟರಲ್ಲಿ ನಮ್ಮನ್ನು ರಕ್ಷಿಸು" ಎಂದು ಬೇಡಿಕೊಂಡರು.

೧೧. ಬಳಿಕ ಬ್ರಹ್ಮನು ಶೇಷನೇ ಮೊದಲಾದ ಒಂಬತ್ತುಮಂದಿ ನಾಯಕರನ್ನು ಕುರಿತು ನಿಮ್ಮ ಸಂತತಿಯವರು ಭಕ್ಷಿಸುತ್ತಿರುವ ಈ ಪ ಜೆಗಳನ್ನು ರಕ್ಷಿಸಿರಿ ಎಂದನು.

೧೨. ಅವರೆಲ್ಲರೂ ಹಾಗೆಯೇ ಆಗಲೆಂದು ಒಪ್ಪಿ ಹೊರಟು ಹೋದರು.

೧೩. ತರುವಾಯ ಆ ಹಾವುಗಳು ಅಸಂಖ್ಯಾಕರಾಗಿರುವುದರಿಂದ ತಡೆಯಲ್ಲಾಗಲಿಲ್ಲ. ಅವುಗಳನ್ನು ತಡೆದರೂ ಅವು ಪ್ರಜೆಗಳನ್ನು ನಾಶಗೊಳಿಸುವುದನ್ನು ಬಿಡಲಿಲ್ಲ.

ತತಃ ಕೋಪಪರೀತಾತ್ಮಾ ತಾನಾಹೂಯ ಕುಲಾಧಿಪಾನ್ ।
ತಾನುವಾಚ ಸ್ವಯಂ ಬ್ರಹ್ಮಾ ಸರ್ವದೇವಸಮಾಗಮೇ ॥ ೧೪ ॥
ಭಕ್ಷಯಂತಿ ಯತಃ ಸರ್ಪಾ ಅಪರಾಧಂ ವಿನಾ ಪ್ರಜಾಃ ।
ವಾರಿತಾ ಅಪಿ ತೇ ತಸ್ಮಾತ್ತಾನ್ನಿಗೃಹ್ಣಾಮಿ ಸಾಂಪ್ರತಂ ॥ ೧೫ ॥
ಭವಿಷ್ಯತಿ ಮಹೀಪಾಲೋ ಭೂತಲೇ ಜನಮೇಜಯಃ ।
ಚಿತ್ರಭಾನುರ್ಮಖೇ ತಸ್ಯ ಸರ್ಪಾನ್ ಸಂಭಕ್ಷಯಿಷ್ಯತಿ ॥ ೧೬ ॥
ಮಾತುಃ ಶಾಪಾದ್ವಿಶೇಷೇಣ ಮಂತ್ರಕೃಷ್ಟಾದ್ವಿಜೋತ್ತಮೈಃ ।
ಸ್ವಯಮೇವ ಪತಿಷ್ಯಂತಿ ಸುಸಮಿದ್ಧೇ ಹುತಾಶನೇ ॥ ೧೭ ॥
ತಚ್ಛ್ರುತ್ವಾ ವೇಪಮಾನಾಸ್ತೇ ಸರ್ಪಾಣಾಂ ಸನನಾಯಕಾಃ ।
ಪ್ರೋಚುಃ ಪ್ರಾಂಜಲಯಃ ಸದ್ಯಃ ಪ್ರಣಿಪತ್ಯ ಪಿತಾಮಹಂ ॥ ೧೮ ॥
ಭಗವನ್ಕುಟಿಲಾ ಜಾತಿರಸ್ಮಾಕಂ ಭವತಾ ಕೃತಾ ।
ತತ್ಕಸ್ಮಾತ್ಕುರುಷೇ ಕೋಪಂ ಜಾತಿಧರ್ಮಾನುವರ್ತಿನಾಂ ॥ ೧೯ ॥

ಬ್ರಹ್ಮೋವಾಚ :—

ಯದಿ ನಾಮ ಮಯಾ ಸೃಷ್ಟಾ ಯೂಯಂ ದಿಷ್ಟ್ಯಾ ವಿಷೋಲ್ಬಣಾಃ ।
ಅಪರಾಧಂ ವಿನಾ ಕಸ್ಮಾದ್ಭಕ್ಷಯಧ್ವಂ ಇಮಾಃ ಪ್ರಜಾಃ ॥ ೨೦ ॥

---

೧೪. ಅದರಿಂದ ಕುಪಿತನಾದ ಬ್ರಹ್ಮನು ಸಮಸ್ತದೇವತೆಗಳ ಸಭೆಯಲ್ಲಿ ತಾನೇ ಆ ಸರ್ಪಕುಲದ ನಾಯಕರನ್ನು ಕರೆದು ಇಂತೆಂದನು.

೧೫. "ಈ ಸರ್ಪಗಳು ತಡೆದರೂ ತಪ್ಪಿಲ್ಲದ ಪ್ರಜೆಗಳನ್ನು ಕಚ್ಚುತ್ತಿವೆ. ಆದ್ದರಿಂದ ಇವುಗಳನ್ನು ಈಗ ನಿಗ್ರಹಿಸುವೆನು.

೧೬. ಭೂತಲದಲ್ಲಿ ಜನಮೇಜಯನೆಂಬ ರಾಜನು ಹುಟ್ಟುವನು. ಅವನ ಯಜ್ಞದಲ್ಲಿ ಅಗ್ನಿಯು ಈ ಸರ್ಪಗಳನ್ನೆಲ್ಲ ಭಕ್ಷಿಸುವನು.

೧೭. ತಾಯಿಯ ಶಾಪಕ್ಕೆ ತುತ್ತಾಗಿರುವ ಬ್ರಾಹ್ಮಣೋತ್ತಮರ ಮಂತ್ರಗಳಿಂದ ಆಕೃಷ್ಟರಾಗಿ ತಾವೇ ಜ್ವಲಿಸುವ ಅಗ್ನಿಯಲ್ಲಿ ಬೀಳುವರು."

೧೮. ಬ್ರಹ್ಮನ ಆ ಮಾತನ್ನು ಕೇಳಿ ಸರ್ಪನಾಯಕರು ನಡುಗುತ್ತ ಕೂಡಲೆ ಅವನನ್ನು ವಂದಿಸಿ ಕೈಮುಗಿದುಕೊಂಡು ಹೀಗೆಂದರು.

೧೯. "ಪೂಜ್ಯನೆ! ನೀನು ನಮ್ಮ ಜಾತಿಯನ್ನೆ ವಕ್ರವಾಗಿ ಮಾಡಿರುವೆ. ಆದ್ದರಿಂದ ತಮ್ಮ ಜಾತಿಧರ್ಮವನ್ನವಲಂಬಿಸಿರುವ ಈ ಸರ್ಪಗಳಲ್ಲಿ ಏಕೆ ಕೋಪಗೊಳ್ಳುವೆ."

೨೦. ಬ್ರಹ್ಮನು ಹೇಳುತ್ತಾನೆ:—ಸರ್ಪಗಳೆ! ನಾನು ನಿಮ್ಮನ್ನು ವಿಷೋಲ್ಬಣರನ್ನಾಗಿ ಸೃಷ್ಟಿಸಿದ್ದರೆ ನೀವು ತಪ್ಪಿಲ್ಲದೆ ಜನರನ್ನು ಏಕೆ ಕಚ್ಚುವಿರಿ?

ನಾಗಾ ಊಚುಃ:—

ಮರ್ಯಾದಾಂ ಕುರು ದೇವೇಶ ಅಸ್ಮಾಕಂ ಮಾನವೈಃ ಸಹ ।
ಅಥವಾ ಸಂಪ್ರಯಚ್ಛಸ್ವ ಸ್ಥಾನಂ ಮಾನುಷವರ್ಜಿತಂ ॥ ೨೧ ॥
ಪಾರಿಕ್ಷಿತಮಖೇ ತಸ್ಮಿನ್ ಸರ್ಪಾಣಾಂ ಚಿತ್ರಭಾನುನಾ ।
ಸಮಂತಾದ್ದಹ್ಯಮಾನಾನಾಂ ರಕ್ಷೋಪಾಯಂ ಪ್ರಚಿಂತಯ ॥ ೨೨ ॥
ಯಥಾ ನ ಸಂತತಿಚ್ಛೇದೋ ಜಾಯತೇ ಪ್ರಪಿತಾಮಹ ।
ಅಸ್ಮಾಕಂ ಸರ್ವಲೋಕೇಷು ತಥಾ ತ್ವಂ ಕರ್ತುಮರ್ಹಸಿ ॥ ೨೩ ॥

ಬ್ರಹ್ಮೋವಾಚ :—

ಜರತ್ಕಾರುರಿತಿಖ್ಯಾತೋ ಭವಿಷ್ಯತಿ ಕ್ವಚಿದ್ದ್ವಿಜಃ ।
ಸ ಸಂತಾನಕೃತೇ ಭಾರ್ಯಾಂ ಭೂಮಾವನ್ವೇಷಯಿಷ್ಯತಿ ॥ ೨೪ ॥
ಭಾವಿನೀಚ ಭವದ್ವಂಶೇ ಜರತ್ಕನ್ಯಾಸುಶೋಭನಾ ।
ಸಾ ದೇಯಾ ಚಾದರಾತ್ತಸ್ಮೈ ಪುತ್ರಾರ್ಥಂ ವರವರ್ಣಿನೀ ॥ ೨೫ ॥
ತಾಭ್ಯಾಂ ಯೋ ಭವಿತಾ ಪುತ್ರಃ ಸಶೇಷಾನ್ರಕ್ಷಯಿಷ್ಯತಿ ।
ಸರ್ಪಾಂಛುದ್ಧಸಮಾಚಾರಾನ್ಮರ್ಯಾದಾಸು ವ್ಯವಸ್ಥಿತಾನ್ ॥ ೨೬ ॥
ಸುತಲಂ ನಿತಲಂ ಚೈವ ತಥೈವ ವಿತಲಂಚ ಯತ್ ।
ತಸ್ಯಾಽಧಸ್ತಾಚ್ಚತುರ್ಥೇ ಚ ವಸತಿರ್ವೋ ಧರಾತಲೇ ॥ ೨೭ ॥

---

೨೧. ನಾಗಗಳು ಹೇಳುತ್ತವೆ:—ಪಿತಾಮಹ! ನಮಗೆ ಮಾನವರೊಡನೆ ಒಂದು ಕಟ್ಟುಪಾಡನ್ನು ಮಾಡು. ಅಥವಾ ನಮಗೆ ಮನುಷ್ಯರಿಲ್ಲದ ಸ್ಥಾನವನ್ನು ಕೊಡು.

೨೨. ಆ ಜನಮೇಜಯನ ಯಜ್ಞದಲ್ಲಿ ಅಗ್ನಿಯು ಸುತ್ತಲೂ ಸುಡುತ್ತಿರುವ ಸರ್ಪಗಳನ್ನು ಕಾಪಾಡುವ ಉಪಾಯವನ್ನು ಆಲೋಚಿಸು.

೨೩. ಪಿತಾಮಹ! ನಮ್ಮ ಸಂತಾನವು ಸಮಸ್ತ ಲೋಕಗಳಲ್ಲಿ ವಿಚ್ಛಿನ್ನವಾಗದಂತೆ ಮಾಡಲರ್ಹನಾಗಿರುವೆ.

೨೪. ಬ್ರಹ್ಮನು ಹೇಳುತ್ತಾನೆ:—ಭೂಮಿಯಲ್ಲಿ ಜರತ್ಕಾರುವೆಂಬ ಓರ್ವ ಪ್ರಸಿದ್ಧ ದ್ವಿಜನು ಹುಟ್ಟುವನು. ಅವನು ಸಂತತಿಗಾಗಿ ಭೂಮಿಯಲ್ಲಿ ಪತ್ನಿಯನ್ನು ಹುಡುಕುವನು.

೨೫. ನಿಮ್ಮ ವಂಶದಲ್ಲಿ ಸುಂದರಿಯಾದ ಜರತ್ಕನ್ಯೆಯು ಹುಟ್ಟುವಳು. ಅವಳನ್ನು ಪ್ರೀತಿಯಿಂದ ಆ ಜರತ್ಕಾರುವಿಗೆ ಕೊಡಿರಿ.

೨೬. ಅವರಿಂದ ಹುಟ್ಟಿದ ಆ ಪುತ್ರನು ಶುದ್ಧವಾದ ನಡತೆಯುಳ್ಳವರೂ, ನಿಯಮಸ್ಥರೂ ಆದ ಉಳಿದ ಸರ್ಪಗಳನ್ನು ಕಾಪಾಡುವನು.

೨೭–೨೮. ನಿಮಗೆ ಸುತಲ, ನಿತಲ, ವಿತಲ ಇವುಗಳ ಕೆಳಗೆ ಇರುವ ನಾಲ್ಕನೆ ಧರಾತಲವನ್ನು ವಾಸಕ್ಕಾಗಿ ಕೊಟ್ಟಿರುವೆನು. ಅತಿ ರಮ್ಯವೂ,

ಮಯಾ ದತ್ತೇಽತಿರಮ್ಯೇ ಚ ಸರ್ವಭೋಗಸಮನ್ವಿತೇ ।
ತಸ್ಮಾದ್ವ್ರಜತ ತತ್ರೈವ ಪರಿತ್ಯಜ್ಯ ಮಹೀತಲಂ ॥ ೨೮ ॥
ತತ್ರ ಭುಂಜಥ ಸದ್ಭೋಗಾನ್ಗತ್ವಾಽಶು ಮಮ ಶಾಸನಾತ್ ।
ಪುತ್ರಪೌತ್ರಸಮೋಪೇತಾಂಸ್ತ್ರಿದಶೈರಪಿ ದುರ್ಲಭಾನ್ ॥ ೨೯ ॥

ನಾಗಾ ಊಚುಃ:—

ಭೋಗಾನಪಿ ಪ್ರಭುಂಜಾನಾ ನವಯಂ ತತ್ರ ಪದ್ಮಜ ।
ಶಕ್ನುವೋ ವಸ್ತುಮುರ್ವ್ಯಾಂ ನಸ್ತಸ್ಮಾತ್ಸ್ಥಾನಂ ಪ್ರದರ್ಶಯ ।
ಮರ್ಯಾದಯಾ ವರ್ತಯಾಮೋ ಯತ್ರಸ್ಥಾ ಮಾನವೈಃಸಮಂ ॥ ೩೦ ॥

ಬ್ರಹ್ಮೋವಾಚ :—

ಏಷಾ ತಿಥಿರ್ಮಯಾದತ್ತಾ ಯುಷ್ಮಾಕಂ ಧರಣೀತಲೇ ।
ಪಂಚಮೀ ಶೇಷಕಾಲಸ್ತು ನೇಯಸ್ತತ್ರ ರಸಾತಲೇ ॥ ೩೧ ॥
ತತ್ರಾಗತೈರ್ನ ಹಂತವ್ಯಾ ಮಾನವಾ ದೋಷವರ್ಜಿತಾಃ ।
ಮಂತ್ರ ಸಂರಕ್ಷಿತಾಂಗಾಶ್ಚ ತಥೌಷಧಿಕೃತಾದರಾಃ ॥ ೩೨ ॥
ಚಮತ್ಕಾರಪುರೇ ಕ್ಷೇತ್ರೇ ಮಯಾ ದತ್ತಾಸ್ಥಿತಿಃ ಸದಾ ।
ಪೃಥಿವ್ಯಾಂ ಕುಲಮುಖ್ಯಾನಾಂ ನಾಗಾನಾಂ ನಾಗಸತ್ತಮಾಃ ॥ ೩೩ ॥

---

ಸಕಲ ಭೋಗಗಳಿಂದ ಕೂಡಿರುವುದೂ ಆದ ಅಲ್ಲಿಗೆ ಭೂಮಿಯನ್ನು ತ್ಯಜಿಸಿ ತೆರಳಿರಿ.

೨೯. ನನ್ನ ಆಜ್ಞೆಯಿಂದ ಕೂಡಲೆ ಅಲ್ಲಿಗೆ ಹೋಗಿ ಪುತ್ರಪೌತ್ರ ಸಹಿತರಾಗಿ ದೇವದುರ್ಲಭವಾದ ಭೋಗಗಳನ್ನು ಅನುಭವಿಸಿರಿ.

೩೦. ನಾಗಗಳು ಹೇಳುತ್ತವೆ:—ಪಿತಾಮಹ! ನಾವು ಭೋಗಗಳನ್ನು ಅನುಭವಿಸುವವರಾದರೂ ಅಲ್ಲಿ ವಾಸಮಾಡಲು ಸಮರ್ಥರಲ್ಲ. ಆದ್ದರಿಂದ ನಮಗೆ ಭೂಮಿಯಲ್ಲಿ ಸ್ಥಾನವನ್ನು ತೋರಿಸು. ನಾವು ಮಾನವರೊಡನೆ ನಿಯಮ ಬದ್ಧರಾಗಿರುವೆವು.

೩೧. ಬ್ರಹ್ಮನು ಹೇಳುತ್ತಾನೆ:—ಈ ಪಂಚಮೀ ತಿಥಿಯಲ್ಲಿ ನಿಮಗೆ ಭೂಮಿಯಲ್ಲಿ ವಾಸಿಸಲು ಸ್ಥಳವನ್ನು ಕೊಟ್ಟಿರುವೆನು. ನೀವು ಉಳಿದ ಸಮಯ ವನ್ನು ಪಾತಾಳದಲ್ಲಿ ಕಳೆಯಬೇಕು.

೩೨. ಅಲ್ಲಿಗೆ ಬಂದ ನೀವು ದೋಷವಿಲ್ಲದವರೂ, ಮಂತ್ರಗಳಿಂದ ಕಾಪಾಡಿ ಕೊಂಡ ಶರೀರವುಳ್ಳವರೂ, ಔಷಧಿಯಲ್ಲಿ ಆದರವುಳ್ಳವರೂ ಆದ ನರರನ್ನು ಕೊಲ್ಲ ಕೂಡದು.

೩೩. ನಾಗವರ್ಯರೆ! ನಿಮ್ಮ ವಂಶದಲ್ಲಿ ಮುಖ್ಯಸ್ಥರಾದ ನಿಮಗೆ ಭೂಮಿ ಯಲ್ಲಿರುವ ಚಮತ್ಕಾರಪುರದಲ್ಲಿ ವಾಸಸ್ಥಾನವನ್ನಿತ್ತಿರುವೆನು.

ಸೂತ ಉವಾಚ :—

ಏವಮುಕ್ತಾಶ್ಚ ತೇ ನಾಗಾ ಬ್ರಹ್ಮಣಾ ಸತ್ವರಂ ಯಯುಃ ।
ಪಾತಾಲಂ ಕುಲಮುಖ್ಯಾಶ್ಚ ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಾಃ ॥ ೩೪ ॥
ತತ್ರ ಶ್ರಾವಣಪಂಚಮ್ಯಾಂ ಯಸ್ತಾನ್ ಪೂಜಯತೇ ನರಃ ।
ಸ ಪ್ರಾಪ್ನೋತಿ ನರೋಽಭೀಷ್ಟಂ ತೇಷಾಮೇವಪ್ರಸಾದತಃ ॥ ೩೫ ॥
ತಸ್ಯ ವಂಶೇಪಿ ಸರ್ಪಾಣಾಂ ನ ಭಯಂ ಸ್ಯಾನ್ನ ಕಿಲ್ಬಿಷಂ ।
ನ ರೋಗೋ ನೋಪಸರ್ಗಶ್ಚ ನ ಚ ಭೂತಭಯಂ ಕ್ವಚಿತ್ ॥ ೩೬ ॥
ಅಪುತ್ರಸ್ತತ್ರ ಯಃ ಶ್ರಾದ್ಧಂ ಕರೋತಿ ಸುತವಾಂಛಯಾ ।
ಪುತ್ರಂ ವಿಶಿಷ್ಟಮಾಸಾದ್ಯ ಪಿತೄಣಾಮನೃಣೋ ಹಿ ಸಃ ॥ ೩೭ ॥
ತಥಾ ವಂಧ್ಯಾ ಚ ಯಾ ನಾರೀ ಪಂಚಮ್ಯಾಂ ಭಾಸ್ಕರೋದಯೇ ।
ಶ್ರಾವಣೇ ಕುರುತೇ ಸ್ನಾನಂ ಕೃಷ್ಣಪಕ್ಷೇ ವಿಶೇಷತಃ ।
ಸಾ ಸದ್ಯೋ ಲಭತೇ ಪುತ್ರಂ ಸ್ವವಂಶೋದ್ಧರಣಕ್ಷಮಂ ॥ ೩೮ ॥
ಸರ್ವರೋಗವಿನಿರ್ಮುಕ್ತಂ ಸುರೂಪಂ ವಿನಯಾನ್ವಿತಂ ।
ಭ್ರಷ್ಟರಾಜ್ಯೋ ನರೋ ಯೋವಾ ತತ್ರಸ್ನಾನಂ ಸಮಾಚರೇತ್ ॥ ೩೯ ॥
ತತಃ ಪೂಜಯತೇ ನಾಗಾನ್ ಶ್ರಾವಣೇ ಪಂಚಮೀದಿನೇ ।
ಸ ಹತ್ವಾಽರಿಗಣಾನ್ಸರ್ವಾನ್ಭೂಯೋ ರಾಜ್ಯಮವಾಪ್ನುಯಾತ್ ॥ ೪೦ ॥

---

೩೪. ಸೂತನು ಹೇಳುತ್ತಾನೆ:—ಬ್ರಹ್ಮನು ಹೀಗೆ ಹೇಳಲು ಅವು ಕೂಡಲೆ ಪಾತಾಳಕ್ಕೆ ಹೋದುವು. ಅವುಗಳಲ್ಲಿ ಪ್ರಧಾನಗಳಾದ ಸರ್ಪಗಳು ಆ ಚಮತ್ಕಾರ ಪುರದಲ್ಲಿ ನೆಲೆಸಿದುವು.

೩೫. ಆ ಕ್ಷೇತ್ರದಲ್ಲಿ ಶ್ರಾವಣ ಪಂಚಮೀ ದಿನ ಆ ಸರ್ಪಗಳನ್ನು ಪೂಜಿಸುವ ನರನು ಅವುಗಳ ಅನುಗ್ರಹದಿಂದ ಇಷ್ಟಾರ್ಥವನ್ನು ಪಡೆಯುವನು.

೩೬. ಅವನ ವಂಶದವರಿಗೆ ಸರ್ಪಭಯವೂ, ಪಾಪವೂ ಉಂಟಾಗುವುದಿಲ್ಲ, ಮತ್ತು ರೋಗ, ಉತ್ಪಾತ, ಭೂತಗಳ ಭಯವೂ ಇರುವುದಿಲ್ಲ.

೩೭. ಅಲ್ಲಿ ಪುತ್ರನಿಲ್ಲದವನು ಪುತ್ರಾಪೇಕ್ಷೆಯಿಂದ ಶ್ರಾದ್ಧವನ್ನು ಮಾಡಿದರೆ ಉತ್ತಮ ಸುತನನ್ನು ಹೊಂದಿ ಪಿತೃಗಳ ಋಣದಿಂದ ಮುಕ್ತನಾಗುವನು.

೩೮–೪೦. ಬಂಜೆಯಾದ ಹೆಂಗಸು ಶ್ರಾವಣ ಕೃಷ್ಣ ಪಂಚಮೀ ದಿನ ಸೂರ್ಯೋದಯ ಕಾಲದಲ್ಲಿ ಸ್ನಾನ ಮಾಡಿದರೆ ಕೂಡಲೆ ತನ್ನ ವಂಶವನ್ನು ಉದ್ಧರಿಸಲು ಸಮರ್ಥನೂ, ಸಮಸ್ತ ರೋಗರಹಿತನೂ, ಸುಂದರನೂ, ವಿನೀತನೂ ಆದ ಪುತ್ರನನ್ನು ಪಡೆಯುವಳು. ರಾಜ್ಯಭ್ರಷ್ಟನಾದ ರಾಜನು ಶ್ರಾವಣ ಪಂಚಮೀ ದಿನ ಅಲ್ಲಿ ಮಿಂದು ನಾಗಗಳನ್ನು ಪೂಜಿಸಿದರೆ ಸಕಲ ಶತ್ರುಗಳನ್ನು ಕೊಂದು ಮರಳಿ ರಾಜ್ಯವನ್ನು ಪಡೆಯುವನು.

ಯೇಷಾಂ ಮೃತ್ಯುರ್ಮನುಷ್ಯಾಣಾಂ ಜಾಯತೇ ಸರ್ಪಭಕ್ಷಣಾತ್ ।
ನ ತೇಷಾಂ ಜಾಯತೇ ಮುಕ್ತಿಃ ಪ್ರೇತಭಾವಾತ್ಕಥಂಚನ ॥ ೪೧ ॥
ಯಾವನ್ನಕ್ರಿಯತೇ ಶ್ರಾದ್ಧಂ ತಸ್ಮಿಂಸ್ತೀರ್ಥೇ ದ್ವಿಜೋತ್ತಮಾಃ ।
ತಸ್ಮಾತ್ಸರ್ವಪ್ರಯತ್ನೇನ ಮೃತಸ್ಯಾಹಿಪ್ರದಂಶಣಾತ್ ।
ಶ್ರಾದ್ಧಂ ಕಾರ್ಯಂ ಪ್ರಯತ್ನೇನ ತಸ್ಮಿಂಸ್ತೀರ್ಥೇಽಹಿಸಂಭವೇ ॥ ೪೨ ॥
ಅತ್ರ ವಃ ಕೀರ್ತಯಿಷ್ಯಾಮಿ ಪುರಾವೃತ್ತಾಂ ಕಥಾಂ ಶುಭಾಂ ।
ಇಂದ್ರಸೇನಸ್ಯ ರಾಜರ್ಷೇಃ ಸರ್ವಪಾತಕನಾಶಿನೀಂ ॥ ೪೩ ॥
ಇಂದ್ರಸೇನೋ ಮಹೀಪಾಲಃ ಪುರಾಸೀದ್ರಿಪುದರ್ಪಹಾ ।
ಅಶ್ವಮೇಧ ಸಹಸ್ರೇಣ ಇಷ್ಟಂ ತೇನ ಮಹಾತ್ಮನಾ ॥ ೪೪ ॥
ತತಸ್ಸ ದೈವಯೋಗೇನ ಪ್ರಸುಪ್ತಃ ಶಯನೇ ಶುಭೇ ।
ದಷ್ಟಸ್ಸರ್ಪೇಣ ಮುಕ್ತಶ್ಚ ಇಂದ್ರಸೇನೋ ಮಹೀಪತಿಃ ।
ವಿಯುಕ್ತಶ್ಚೈವ ಸಹಸಾ ಜೀವಿತವ್ಯೇನ ತತ್ಕ್ಷಣಾತ್ ॥ ೪೫ ॥
ತತಸ್ತಸ್ಯ ಸುತೋಽಭೀಷ್ಟೋ ತಸ್ಯೋದ್ದೇಶೇನ ಕೃತ್ಸ್ನಶಃ ।
ಚಕಾರ ಪ್ರೇತಕಾರ್ಯಾಣಿ ಸ್ಮೃತ್ಯುಕ್ತಾನಿ ಚ ಭಕ್ತಿತಃ ॥ ೪೬ ॥
ಗಂಗಾಯಾಮಸ್ಥಿಪಾತಂ ಚ ಕೃತ್ವಾ ಶ್ರಾದ್ಧಾನಿ ಷೋಡಶ ।
ಗಯಾಂ ಗತ್ವಾ ತತಶ್ಚಕ್ರೇ ಶ್ರಾದ್ಧಂ ಶ್ರದ್ಧಾಸಮನ್ವಿತಃ ॥ ೪೭ ॥

---

೪೧–೪೨. ದ್ವಿಜವರ್ಯರೆ! ಸರ್ಪವು ಕಡಿದು ಮೃತರಾದ ಮಾನವರಿಗೆ ಆ ತೀರ್ಥದಲ್ಲಿ ಶ್ರಾದ್ಧಮಾಡುವವರೆಗೆ ಪ್ರೇತತ್ವವು ಪರಿಹಾರವಾಗುವುದಿಲ್ಲ. ಆದ್ದರಿಂದ ಪ್ರಯತ್ನಿಸಿ ಆ ನಾಗತೀರ್ಥದಲ್ಲಿ ಅಂಥವನಿಗೆ ಶ್ರಾದ್ಧವನ್ನು ಮಾಡಬೇಕು.

೪೩. ಈ ವಿಷಯದಲ್ಲಿ ಹಿಂದೆ ನಡೆದ ಸಕಲ ಪಾಪಗಳನ್ನು ನೀಗಿಸುವ ಇಂದ್ರಸೇನ ರಾಜನ ಕಥೆಯನ್ನು ಹೇಳುವೆನು.

೪೪. ಹಿಂದೆ ಶತ್ರು ದರ್ಪಾಂತಕನಾದ ಇಂದ್ರಸೇನನೆಂಬ ರಾಜನಿದ್ದನು. ಅವನು ಅನೇಕ ಅಶ್ವಮೇಧಯಾಗಗಳನ್ನು ಮಾಡಿದನು.

೪೫. ಅವನು ಒಂದು ದಿನ ಹಾಸಿಗೆಯಲ್ಲಿ ಮಲಗಿರಲು ದೈವವಶದಿಂದ ಸರ್ಪವು ಅವನನ್ನು ಕಡಿಯಿತು. ಅದರಿಂದ ಆ ದೊರೆಯು ಕೂಡಲೆ ಮಡಿದನು.

೪೬. ಬಳಿಕ ಅವನ ಪ್ರಿಯನಾದ ಸುತನು ತಂದೆಯನ್ನುದ್ದೇಶಿಸಿ ಸ್ಮೃತ್ಯುಕ್ತವಾದ ಪ್ರೇತಕಾರ್ಯಗಳನ್ನು ಭಕ್ತಿಯಿಂದ ಮಾಡಿದನು.

೪೭. ಗಂಗೆಯಲ್ಲಿ ಅಸ್ಥಿಗಳನ್ನು ಹಾಕಿ ಷೋಡಶ ಶ್ರಾದ್ಧಗಳನ್ನು ಮಾಡಿ ಗಯೆಗೆ ಹೋಗಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಿದನು.

ಅಥ ಸ್ವಪ್ನಾಂತರೇ ಪ್ರಾಪ್ತಃ ಪಿತಾ ತಸ್ಯ ಸ ಭೂಪತಿಃ ।
ಪ್ರೋವಾಚ ದುಃಖಿತಃ ಪುತ್ರಂ ಬಾಷ್ಪವ್ಯಾಕುಲಲೋಚನಂ ॥ ೪೮ ॥
ಸರ್ಪಮೃತ್ಯೋಸ್ಸಕಾಶಾನ್ಮೇ ಪ್ರೇತತ್ವಂ ಪುತ್ರ ಸಂಸ್ಥಿತಂ ।
ತೇನ ಮೇ ಭವತಾ ದತ್ತಂ ನ ಕಿಂಚಿದುಪತಿಷ್ಠತೇ ॥ ೪೯ ॥
ಚಮತ್ಕಾರಪುರಂ ಕ್ಷೇತ್ರಂ ತಸ್ಮಾತ್ತ್ವಂ ಗಚ್ಛ ಸತ್ವರಂ ।
ತತ್ರ ತೀರ್ಥೇ ಕುರು ಶ್ರಾದ್ಧಂ ಸರ್ಪಾಣಾಂ ಮತ್ಕೃತೇ ಸುತ ।
ಯೇನ ಸಂಜಾಯತೇ ಮೋಕ್ಷಃ ಪ್ರೇತತ್ವಾದ್ದಾರುಣಾನ್ಮಮ ॥ ೫೦ ॥
ಸ ತತಃ ಪ್ರಾತರುತ್ಥಾಯ ತತ್ಸ್ಮೃತ್ವಾ ನೃಪತೇರ್ವಚಃ ॥ ೫೧ ॥
ಪ್ರೇತರೂಪಸ್ಯ ದುಃಖಾರ್ತಸ್ತತ್ತೀರ್ಥಂ ಸತ್ವರಂ ಗತಃ ।
ಚಕಾರ ಚ ತತಃ ಶ್ರಾದ್ಧಂ ಶ್ರಾವಣೇ ಪಂಚಮೀದಿನೇ ॥ ೫೨ ॥
ಸ್ನಾತ್ವಾ ಶ್ರದ್ಧಾಸಮೋಪೇತಃ ಸಂನಿವೇಶ್ಯ ಪುರೋಧಸಂ ।
ತತಸ್ಸ ದರ್ಶನಂ ಪ್ರಾಪ್ತೋ ಭೂಯೋಽಪಿ ಚ ಯಥಾಪುರಾ ॥ ೫೩ ॥
ಪ್ರೇತರೂಪೇಣ ದುಃಖಾರ್ತೋ ವಾಕ್ಯಮೇತದುವಾಚ ಹ ।
ನ ಮಯಾಸಾದಿತಂ ಕಿಂಚಿತ್ ಯತ್ತ್ವಯಾ ಮತ್ಕೃತೇ ಕೃತಂ ॥ ೫೪ ॥
ಫಲಂ ಶ್ರಾದ್ಧಸ್ಯ ಚಾತ್ರ ತ್ವಂ ಕಾರಣಂ ಶೃಣು ಪುತ್ರಕ ।
ಶ್ರಾದ್ಧಾರ್ಹಾ ಬ್ರಾಹ್ಮಣಾಶ್ಚಾತ್ರ ಚಮತ್ಕಾರಪುರೋದ್ಭವಾಃ ॥ ೫೫ ॥

---

೪೮. ಅನಂತರ ಅವನ ತಂದೆಯು ಸ್ವಪ್ನದಲ್ಲಿ ಬಂದು ಕಣ್ಣೀರಿನಿಂದ ವ್ಯಾಕುಲಗೊಂಡ ನಯನಗಳುಳ್ಳ ಆ ಪುತ್ರನನ್ನು ಕುರಿತು ಇಂತೆಂದನು.

೪೯. "ಮಗು! ನನಗೆ ಸರ್ಪದಿಂದ ಮರಣವು ಸಂಭವಿಸಿದ ಕಾರಣ ಪ್ರೇತತ್ವವುಂಟಾಗಿರುವುದು. ಆದ್ದರಿಂದ ನೀನು ಕೊಟ್ಟ ಯಾವುದೊಂದೂ ನನಗೆ ಸೇರುವುದಿಲ್ಲ.

೫೦. ಆದ್ದರಿಂದ ಚಮತ್ಕಾರಪುರಕ್ಕೆ ಶೀಘ್ರವಾಗಿ ಹೋಗಿ ಅಲ್ಲಿರುವ ತೀರ್ಥದಲ್ಲಿ ನನಗೋಸ್ಕರ ಸರ್ಪಗಳಿಗೆ ಶ್ರಾದ್ಧವನ್ನು ಮಾಡು. ಅದರಿಂದ ನನಗೆ ಈ ದಾರುಣ ಪ್ರೇತತ್ವದಿಂದ ಮೋಕ್ಷವಾಗುವುದು."

೫೧–೫೭. ಬಳಿಕ ಅವನು ಬೆಳಗ್ಗೆ ಎದ್ದು ಪ್ರೇತರೂಪನಾದ ಆ ರಾಜನ ಮಾತನ್ನು ಸ್ಮರಿಸಿ ದುಃಖದಿಂದ ಆ ತೀರ್ಥಕ್ಕೆ ಬೇಗನೆ ಹೋಗಿ ಶ್ರಾವಣ ಪಂಚಮೀ ದಿನ ಅಲ್ಲಿ ಮಿಂದು ಪುರೋಹಿತನನ್ನು ಕುಳ್ಳಿರಿಸಿ ಶ್ರದ್ಧೆಯಿಂದ ಶ್ರಾದ್ಧಗೈದನು. ತರುವಾಯ ಆ ರಾಜನು ಮೊದಲಿನಂತೆಯೇ ಪ್ರೇತರೂಪದಿಂದ ದುಃಖಿತನಾಗಿ ಮರಳಿ ಇಂತೆಂದನು. "ಮಗು! ನೀನು ಮಾಡಿದ ಶ್ರಾದ್ಧದ ಫಲವು ಯಾವುದೂ ನನಗೆ ಸೇರಲಿಲ್ಲ. ಇದಕ್ಕೆ ಕಾರಣವನ್ನು ಕೇಳು. ಇತರ ಕ್ಷೇತ್ರದಲ್ಲಿ ವಿಕಲಾಂಗರಾದ್ದರಿಂದ ನಿಂದ್ಯರಾಗಿದ್ದರೂ ಈ ಚಮತ್ಕಾರಪುರದ ಬ್ರಾಹ್ಮಣರು ಶ್ರಾದ್ಧಾರ್ಹರು.

ಕ್ಷೇತ್ರೇಽಪಿ ಗರ್ಹಿತಾಃ ಶ್ರಾದ್ಧೇ ಯೇಽನ್ಯತ್ರ ವ್ಯಂಗ್ಯಕಾದಯಃ ।
ಅತ್ರ ಯತ್ಕ್ರಿಯತೇ ಕಿಂಚಿದ್ದಾನಂ ವಾ ವ್ರತಮೇವಚ ॥ ೫೬ ॥
ತಥಾನ್ಯದಪಿ ವಿಪ್ರಾರ್ಹಂ ಕರ್ಮ ಯಜ್ಞಸಮುದ್ಭವಂ ।
ತತ್ತೇಷಾಂ ವಚನಾತ್ಸರ್ವಂ ಪೂರ್ಣಂ ಸ್ಯಾದಪಿ ಖಂಡಿತಂ ।
ಪರೋಕ್ಷೇ ವಾಪಿ ಸಂಪೂರ್ಣಂ ವೃಥಾ ಸಂಜಾಯತೇ ಸ್ಫುಟಂ ॥ ೫೭ ॥
ತಸ್ಮಾದಸ್ಮಾತ್ಪುರಾದ್ವಿಪ್ರಾನ್ಸಮಾನೀಯ ತತಃ ಪರಂ ।
ಮಮ ನಾಮ್ನಾ ಕುರು ಶ್ರಾದ್ಧಂ ಯೇನ ಮುಕ್ತಿಃ ಪ್ರಜಾಯತೇ ॥ ೫೮ ॥
ಅಥಾಽಸೌ ಪ್ರಾತರುತ್ಥಾಯ ಸ್ಮರಮಾಣಃ ಪಿತುರ್ವಚಃ ।
ದುಃಖೇನ ಮಹತಾವಿಷ್ಟಃ ಪ್ರವಿವೇಶ ಪುರೋತ್ತಮೇ ॥ ೫೯ ॥
ತತಶ್ಚಾನ್ವೇಷಯಾಮಾಸ ಶ್ರಾದ್ಧಾರ್ಹಾನ್ ಬ್ರಾಹ್ಮಣಾನ್ ನೃಪಃ ।
ಯತ್ನತೋಽಪಿ ನ ಲೇಭೇ ಸ ಧನಾಢ್ಯಾ ಬ್ರಾಹ್ಮಣಾ ಯತಃ ॥ ೬೦ ॥
ನ ತತ್ರ ದುಃಖಿತಃ ಕಶ್ಚಿದ್ದರಿದ್ರೋಽಪಿ ನ ದುಃಖಿತಃ ।
ನಾಕರ್ಮನಿರತೋ ವಾಪಿ ಪಾಖಂಡನಿರತೋಽಥವಾ ॥ ೬೧ ॥
ಸ್ಥಾನೇ ಸ್ಥಾನೇ ಮಹಾನಾದಾ ಉತ್ಸವಾಶ್ಚ ಗೃಹೇ ಗೃಹೇ ।
ವೇದವಿದ್ಯಾ ವಿನೋದಾಶ್ಚ ಸ್ಮೃತಿವಾದಾಸ್ತಥೈವ ಚ ॥ ೬೨ ॥

---

ಈ ಕ್ಷೇತ್ರದಲ್ಲಿ ಮಾಡಿದ ದಾನ, ವ್ರತ, ಅಥವಾ ಇತರ ಬ್ರಾಹ್ಮಣೋಚಿತ ಯಜ್ಞಕಾರ್ಯ ಇವುಗಳು ಅಪೂರ್ಣವಾಗಿದ್ದರೂ ಇವರ ಮಾತಿನಿಂದ ಪೂರ್ಣವಾಗುವುವು. ಇವರ ಪರೋಕ್ಷದಲ್ಲಿ ಅವು ಸಂಪೂರ್ಣವಾಗಿದ್ದರೂ ನಿಶ್ಚಯವಾಗಿಯೂ ವ್ಯರ್ಥವಾಗುವುವು.

೫೮. ಆದ್ದರಿಂದ ನನ್ನ ಮಾತಿನಂತೆ ಈ ಪಟ್ಟಣದ ಬ್ರಾಹ್ಮಣರನ್ನು ಕರೆಯಿಸಿ ನನ್ನ ಹೆಸರಿನಿಂದ ಶ್ರಾದ್ಧಮಾಡು. ಅದರಿಂದ ನನಗೆ ಮೋಕ್ಷವಾಗುವುದು.

೫೯. ಬಳಿಕ ಈ ಪುತ್ರನು ಬೆಳಗ್ಗೆ ಎದ್ದು ತಂದೆಯ ಮಾತನ್ನು ಸ್ಮರಿಸುತ್ತ ಅತಿ ದುಃಖದಿಂದ ಚಮತ್ಕಾರ ಪುರವನ್ನು ಹೊಕ್ಕನು.

೬೦. ಅಲ್ಲಿ ಶ್ರಾದ್ಧಾರ್ಹ ಬ್ರಾಹ್ಮಣರನ್ನು ಪ್ರಯತ್ನದಿಂದ ಹುಡುಕಿದರೂ ಆ ಬ್ರಾಹ್ಮಣರೆಲ್ಲ ಧನಿಕರಾದ್ದರಿಂದ ಯಾರೂ ಸಿಕ್ಕಲಿಲ್ಲ.

೬೧. ಅಲ್ಲಿ ಬಡವನಾಗಿದ್ದರೂ ಒಬ್ಬನೂ ದುಃಖಗೊಂಡಿರಲಿಲ್ಲ. ದುಷ್ಕಾರ್ಯ ನಿರತನೂ, ಪಾಷಂಡಿಯೂ ಇರಲಿಲ್ಲ.

೬೨—೬೩. ಪ್ರತಿ ಸ್ಥಳಗಳಲ್ಲಿಯೂ ಮಹಾ ಮಂಗಳ ಧ್ವನಿಗಳೂ, ಪ್ರತಿ ಮನೆಗಳಲ್ಲಿಯೂ ಉತ್ಸವಗಳೂ, ವೇದವಿದ್ಯಾವಿನೋದಗಳೂ, ಯಾಜ್ಞಿಕರ ಯಜ್ಞ ಸಂಬಂಧವಾದ ಸ್ಮೃತಿವಾದಗಳೂ ನಡೆಯುತ್ತಿದ್ದುವು. ಆ ಪಟ್ಟಣದಲ್ಲಿ

ಶ್ರೂಯಂತೇ ಯಾಜ್ಞಿಕಾನಾಂ ಚ ಯಜ್ಞಕರ್ಮಸಮುದ್ಭವಾಃ ।
ನ ದುರ್ಭಿಕ್ಷಂ ನ ಚ ವ್ಯಾಧಿರ್ನಾಕಾಲಮರಣಂ ನೃಣಾಂ ।
ನ ಮೃತ್ಯುಃ ಕಸ್ಯಚಿತ್ತತ್ರ ಪುರೇ ಬ್ರಾಹ್ಮಣಸೇವಿತೇ ॥ ೬೩ ॥
ಯಥರ್ತುವರ್ಷೀ ಪರ್ಜನ್ಯಃ ಸಸ್ಯಾನಿ ಗುಣವಂತಿ ಚ ।
ಭೂರಿಕ್ಷೀರಸ್ರವಾ ಗಾವಃ ಕ್ಷೀರಾಢ್ಯಾಜಾವಿಕಾನಿ ಚ ॥ ೬೪ ॥
ಯಂ ಯಂ ಪ್ರಾರ್ಥಯತೇ ವಿಪ್ರಂ ಸ ಶ್ರಾದ್ಧಾರ್ಥಂ ಮಹೀಪತಿಃ ।
ಸಸತಂ ಭರ್ತ್ಸಯಾಮಾಸ ದುರುಕ್ತೈಃ ಕೋಪಸಂಯುತಃ ॥ ೬೫ ॥
ಧಿಕ್ ಧಿಕ್ ಪಾಪಸಮಾಚಾರ ಕ್ಷತ್ರಿಯಾಪಸದಾತ್ಮಕ ।
ಕಿಂ ಕಶ್ಚಿದ್ಬ್ರಾಹ್ಮಣೋಽಶ್ನಾತಿ ಪ್ರೇತಶ್ರಾದ್ಧೇ ವಿಶೇಷತಃ ॥ ೬೬ ॥
ತಸ್ಮಾದ್ಗಚ್ಛದ್ರುತಂ ಯಾವನ್ನ ಕಶ್ಚಿಚ್ಛಪತೇ ದ್ವಿಜಃ ।
ನಿಹಂತಿ ವಾ ಪ್ರಕೋಪೇನ ಸ್ವರ್ಗಮಾರ್ಗನಿರೋಧಕಂ ॥ ೬೭ ॥

ಸೂತ ಉವಾಚ:—

ತತಸ್ಸ ದುಃಖಿತೋ ರಾಜಾ ನಿಶ್ಚಕ್ರಾಮ ಭಯಾರ್ದಿತಃ ।
ಚಮತ್ಕಾರಪುರಾತ್ತಸ್ಮಾದ್ವೈಲಕ್ಷ್ಯಂ ಪರಮಂ ಗತಃ ॥ ೬೮ ॥

---

ದುರ್ಭಿಕ್ಷ, ವ್ಯಾಧಿಗಳೂ, ಮಾನವರಿಗೆ ಅಕಾಲಮರಣಗಳೂ ಉಂಟಾಗುತ್ತಿರಲಿಲ್ಲ. ಬ್ರಾಹ್ಮಣರಿಂದ ತುಂಬಿರುವ ಆ ಪಟ್ಟಣದಲ್ಲಿ ಯಾರೂ ಸಾಯುತ್ತಿರಲಿಲ್ಲ.

೬೪. ಋತುವನ್ನನುಸರಿಸಿ ಮಳೆ ಸುರಿಯುತ್ತಿದ್ದಿತು. ಸಸ್ಯಗಳು ಗುಣಗಳಿಂದ ಕೂಡಿದ್ದುವು. ಗೋವು, ಆಡು, ಕುರಿಗಳು ಅತಿಶಯವಾಗಿ ಹಾಲನ್ನು ಕೊಡುತ್ತಿದ್ದುವು.

೬೫. ಆ ಭೂಪನು ಯಾವಯಾವ ಬ್ರಾಹ್ಮಣನನ್ನು ಶ್ರಾದ್ಧಕ್ಕಾಗಿ ಪ್ರಾರ್ಥಿಸುವನೊ, ಅವನು ಕುಪಿತನಾಗಿ ದುರ್ವಚನಗಳಿಂದ ಆ ರಾಜನನ್ನು ಧಿಕ್ಕರಿಸುವನು.

೬೬. "ಪಾಪಾಚಾರನೂ, ನೀಚ ಕ್ಷತ್ರಿಯನೂ ಆದ ಎಲೈ ದೊರೆಯೆ! ಪ್ರೇತಶ್ರಾದ್ಧದಲ್ಲಿ ಯಾವ ಬ್ರಾಹ್ಮಣನು ಭುಂಜಿಸುವನು.

೬೭. ಆದ್ದರಿಂದ ಯಾವನಾದರೂ ಬ್ರಾಹ್ಮಣನು ಕುಪಿತನಾಗಿ ನಿನ್ನನ್ನು ಶಪಿಸುವುದರೊಳಗೆ, ಅಥವಾ ಸ್ವರ್ಗ ಮಾರ್ಗಕ್ಕೆ ಪ್ರತಿಬಂಧಕನಾದ ನಿನ್ನನ್ನು ಕೊಲ್ಲುವಷ್ಟರಲ್ಲಿ ಈ ಸ್ಥಳದಿಂದ ಹೊರಟುಹೋಗು" ಎಂದು ಗದರಿಸುವರು.

೬೮. ಸೂತನು ಹೇಳುತ್ತಾನೆ:—ತರುವಾಯ ದುಃಖಿತನಾದ ಆ ರಾಜನು ಭಯದಿಂದ ಲಜ್ಜಿತನಾಗಿ ಆ ಚಮತ್ಕಾರ ಪುರದಿಂದ ಹೊರಟು ಹೋದನು.

ಚಿಂತಯಾಮಾಸ ರಾಜೇಂದ್ರಃ ಸ್ಮೃತ್ವಾವಸ್ಥಾಂ ಪಿತುಶ್ಚ ತಾಂ ।
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಮೇ ಸ್ಯಾತ್ಪಿತುರ್ಗತಿಃ ॥ ೬೯ ॥
ತತಸ್ಸಸಚಿವಾನ್ಸರ್ವಾನ್ಪ್ರೇಷಯಿತ್ವಾ ಗೃಹಂ ಪ್ರತಿ ।
ಏಕಾಕೀ ಭಿಕ್ಷುರೂಪೇಣ ಸ್ಥಿತಸ್ತತ್ರೈವ ಸತ್ಪುರೇ ॥ ೭೦ ॥
ಸ ಜ್ಞಾತ್ವಾ ನಗರೇ ತತ್ರ ಬ್ರಾಹ್ಮಣಂ ಶಂಸಿತವ್ರತಂ ।
ಸರ್ವೇಷಾಂ ಬ್ರಾಹ್ಮಣೇಂದ್ರಾಣಾಂ ಮಧ್ಯೇ ದಾಕ್ಷಿಣ್ಯಭಾಜನಂ ॥ ೭೧ ॥
ದೇವಶರ್ಮಾಭಿಧಾನಂ ತು ಶರಣಾಗತವತ್ಸಲಂ ।
ಆಹಿತಾಗ್ನಿಂ ಚತುರ್ವೇದಂ ಸ್ಮೃತಿಮಾರ್ಗಾನುಯಾಯಿನಂ ॥ ೭೨ ॥
ತತಸ್ತು ಪ್ರಾತರುತ್ಥಾಯ ಕೃತ್ವಾಂತ್ಯಜವಪುಃ ।
ಶೋಧಯಾಮಾಸ ಕೃಚ್ಛ್ರೇಣ ಮಲೋತ್ಸರ್ಗನಿಕೇತನಂ ॥ ೭೩ ॥
ಅಥ ಯಃ ಕುರುತೇ ಕರ್ಮ ತತ್ರವಿಷ್ಠಾಪ್ರಶೋಧನಂ ।
ಸೋಽಭ್ಯೇತ್ಯ ತಮುವಾಚೇದಂ ಕೋಪಸಂರಕ್ತಲೋಚನಃ ॥ ೭೪ ॥
ಕುತಸ್ತ್ವಮಿಹ ಸಂಪ್ರಾಪ್ತೋ ಮದ್ವೃತ್ತೇರುಪಘಾತಕೃತ್ ।
ತಸ್ಮಾದ್ಗಚ್ಛ ದ್ರುತಂ ನೋಚೇನ್ನಯಿಷ್ಯೇ ಯಮಸಾದನಂ ॥ ೭೫ ॥

---

೬೯. ಆ ದೊರೆಯು ತಂದೆಯ ಆ ಸ್ಥಿತಿಯನ್ನು ಸ್ಮರಿಸಿ ಏನನ್ನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ತಂದೆಗೆ ಹೇಗೆ ಗತಿಯಾದೀತು ಎಂದು ಆಲೋಚಿಸಿದನು.

೭೦. ಬಳಿಕ ಅವನು ಸಮಸ್ತ ಮಂತ್ರಿಗಳನ್ನೂ ಮನೆಗೆ ಕಳುಹಿಸಿ ಒಬ್ಬಂಟಿಗನಾಗಿ ಸನ್ಯಾಸಿ ರೂಪದಿಂದ ಆ ಪಟ್ಟಣದಲ್ಲಿದ್ದನು.

೭೧–೭೩. ಅವನು ಆ ಪಟ್ಟಣದಲ್ಲಿರುವ ದೇವಶರ್ಮನೆಂಬ ಬ್ರಾಹ್ಮಣನು, ಶ್ಲಾಘ್ಯವ್ರತನೂ, ಸಕಲ ಬ್ರಾಹ್ಮಣರಲ್ಲಿ ದಾಕ್ಷಿಣ್ಯವುಳ್ಳವನೂ, ಶರಣಾಗತ ವತ್ಸಲನೂ, ಅಗ್ನಿಹೋತ್ರಿಯೂ, ನಾಲ್ಕು ವೇದಗಳನ್ನು ಅಧ್ಯಯನ ಮಾಡಿರುವವನೂ, ಸ್ಮೃತಿಮಾರ್ಗವನ್ನು ಅನುಸರಿಸುವವನೂ ಆಗಿರುವನೆಂದರಿತು ಬೆಳಗ್ಗೆ ಎದ್ದು ಚಂಡಾಲರೂಪವನ್ನು ಧರಿಸಿ ಆ ದೇವಶರ್ಮನ ಮಲೋತ್ಸರ್ಗದ ಮನೆಯನ್ನು ಕಷ್ಟದಿಂದ ಶುದ್ಧಿ ಮಾಡಿದನು.

೭೪. ತರುವಾಯ ಆ ದೇವಶರ್ಮನ ಮನೆಯ ಮಲವನ್ನು ಶೋಧಿಸುವವನು ಬಂದು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಹೀಗೆಂದನು.

೭೫. ನನ್ನ ಜೀವನವನ್ನು ಹಾಳುಮಾಡುವ ನೀನು ಎಲ್ಲಿಂದ ಇಲ್ಲಿಗೆ ಬಂದೆ? ಆದ್ದರಿಂದ ಶೀಘ್ರನಾಗಿ ಹೋಗು. ಹಾಗಿಲ್ಲದಿದ್ದರೆ ನಿನ್ನನ್ನು ಯಮಲೋಕಕ್ಕೆ ಕಳುಹುವೆನು.

ತಸ್ಯೈವಂ ವದತೋಽಸ್ಯಾಶು ಬಲಾತ್ಸ ಪೃಥಿವೀಪತಿಃ ।
ಶೋಧಯಾಮಾಸ ತತ್ಸ್ಥಾನಂ ದೇವಶರ್ಮಸಮುದ್ಭವಂ ॥ ೭೬ ॥
ತತಃ ಸಂವತ್ಸರಸ್ಯಾಂತೇ ಚಂಡಾಲೇನ ದ್ವಿಜೋತ್ತಮಾಃ ।
ಸ ಪ್ರೋಕ್ತ ಉಚಿತೇ ಕಾಲೇ ಪ್ರಣಿಪತ್ಯ ಚ ದೂರತಃ ॥ ೭೭ ॥
ಸ್ವಾಮಿಂಸ್ತವ ಕುಲೇಽಪ್ಯೇವಂ ಗೂಥಾಶೋಧನ ಕರ್ಮಕೃತ್ ।
ತದಸ್ಮಾಕಂ ನಚಾಽನ್ಯಸ್ಯ ತತ್ಕಿಮನ್ಯಃ ಪ್ರವೇಶಿತಃ ॥ ೭೮ ॥
ಅಥ ಶ್ರುತ್ವಾ ಚ ತದ್ವಾಕ್ಯಂ ಸ ಪ್ರಾಹ ದ್ವಿಜಸತ್ತಮಃ ।
ನ ಮಯಾ ಕಶ್ಚಿದನ್ಯೋಽತ್ರ ನಿರ್ದಿಷ್ಟೋ ಗೋಪ್ಯಕರ್ಮಣಿ ।
ಅಧಿಕಾರಸ್ತ್ವಯಾತ್ಮೀಯಸ್ತಥಾ ಕಾರ್ಯೋ ಯಥಾ ಪುರಾ ॥ ೭೯ ॥
ತದಾಽನ್ಯದಿವಸೇ ಪ್ರಾಪ್ತೇ ಸೋಽಂತ್ಯಜಃ ಕೋಪಸಂಯುತಃ ।
ಶಸ್ತ್ರಮಾದಾಯ ಸಂಪ್ರಾಪ್ತೋ ವಧಾರ್ಥಂ ತಸ್ಯ ಭೂಪತೇಃ ॥ ೮೦ ॥
ಶಸ್ತ್ರೋದ್ಯತಕರಂ ದೃಷ್ಟ್ವಾ ಪ್ರಹಾರೇ ಕೃತನಿಶ್ಚಯಂ ।
ತತಸ್ತಂ ಲೀಲಯಾ ಭೂಯೋ ಮುಷ್ಟಿನಾ ಮೂರ್ಧ್ನ್ಯತಾಡಯತ್ ॥೮೧॥
ತತಸ್ತಸ್ಯ ವಿನಿಷ್ಕ್ರಾಂತೇ ಲೋಚನೇ ತತ್ಕ್ಷಣಾದ್ದ್ವಿಜಾಃ ।
ಸುಸ್ರಾವ ರುಧಿರಂ ಪಶ್ಚಾತ್ಸಪಾತ ಗತಜೀವಿತಃ ॥ ೮೨ ॥

---

೭೬. ಆ ಚಂಡಾಲನು ಹೀಗೆ ಹೇಳುತ್ತಿರಲು ದೊರೆಯು ಬಲಾತ್ಕಾರದಿಂದ ದೇವಶರ್ಮನ ಮಲಗೃಹವನ್ನು ಶುದ್ಧಿಮಾಡಿದನು.

೭೭. ದ್ವಿಜವರ್ಯರೆ! ಹೀಗೆ ಒಂದು ವರ್ಷವು ಕಳೆಯಲು ಆ ಚಂಡಾಲನು ಉಚಿತ ಕಾಲದಲ್ಲಿ ದೇವಶರ್ಮನನ್ನು ದೂರದಿಂದಲೆ ನಮಸ್ಕರಿಸಿ ಹೀಗೆಂದನು.

೭೮. ಸ್ವಾಮಿ! ನಿಮ್ಮ ಮನೆಯಲ್ಲಿ ಮಲಗೃಹವನ್ನು ಶೋಧಿಸುವ ಕಾರ್ಯವು ನಮ್ಮದು. ಆ ಕೆಲಸದಲ್ಲಿ ಬೇರೆಯವನನ್ನು ಏಕೆ ನೇಮಿಸಿರುವೆ?

೭೯. ದೇವಶರ್ಮನು ಆ ಮಾತನ್ನು ಕೇಳಿ ನಾನು ಈ ರಹಸ್ಯಕಾರ್ಯದಲ್ಲಿ ಬೇರೆ ಯಾವನನ್ನೂ ನೇಮಿಸಲಿಲ್ಲ. ನೀನು ನನ್ನ ಕೆಲಸವನ್ನು ಮೊದಲಿನಂತೆಯೇ ಮಾಡು ಎಂದನು.

೮೦. ಮಾರನೆಯ ದಿನ ಆ ರಾಜನು ಮಲಗೃಹ ಶೋಧನೆಗೆ ಬರಲು ಆ ಚಂಡಾಲನು ಕುಪಿತನಾಗಿ ಆಯುಧವನ್ನು ತೆಗೆದುಕೊಂಡು ಅವನನ್ನು ಕೊಲ್ಲಲು ಬಂದನು.

೮೧. ಆಗ ರಾಜನು ಕೈಯಲ್ಲಿ ಆಯುಧವನ್ನು ಹಿಡಿದು ಹೊಡೆಯುವುದಕ್ಕೆ ನಿಶ್ಚಯಿಸಿದ ಆ ಚಂಡಾಲನ ತಲೆಯಮೇಲೆ ಮುಷ್ಟಿಯಿಂದ ಗುದ್ದಿದನು.

೮೨. ದ್ವಿಜರೆ! ಬಳಿಕ ಆ ಚಂಡಾಲನ ಕಣ್ಣುಗಳು ಹೊರಗೆ ಬಂದುವು. ರಕ್ತವು ಸುರಿಯಿತು. ಅವನು ಅಲ್ಲಿಯೆ ಮಡಿದು ಬಿದ್ದನು.

ತಂ ಶ್ರುತ್ವಾ ನಿಹತಂ ತೇನ ಚಂಡಾಲಂ ನಿಜಕಿಂಕರಂ ।
ದೇವಶರ್ಮಾऽತಿಕೋಪೇನ ತದ್ವಧಾರ್ಥಮುಪಾಗತಃ ॥ ೮೩ ॥
ತತಃ ಪುತ್ರೈಶ್ಚ ಪೌತ್ರೈಶ್ಚ ಸಹಿತೋಽನ್ಯೈಶ್ಚ ಬಂಧುಭಿಃ ।
ಲೋಷ್ಟೈಸ್ತಂ ತಾಡಯಾಮಾಸ ಭರ್ತ್ಸಮಾನೋ ಮುಹುರ್ಮುಹುಃ ॥
ಸೋಽಪಿ ಸಂತಾಡ್ಯಮಾನಸ್ತು ಪ್ರಹಾರೈರ್ಜರ್ಜರೀಕೃತಃ ॥
ವೇದೋಚ್ಚಾರಂ ತತಶ್ಚಕ್ರೇ ದರ್ಶಯಿತ್ವೋಪವೀತಕಂ ॥ ೮೪ ॥
ಅಥ ತೇ ವಿಸ್ಮಿತಾಃ ಸರ್ವೇ ದೇವಶರ್ಮಪುರಃಸರಾಃ ।
ಬ್ರಾಹ್ಮಣಾಸ್ತಂ ಸಮುದ್ವೀಕ್ಷ್ಯ ವೇದೋಚ್ಚಾರಪರಾಯಣಂ ॥ ೮೫ ॥
ಪೃಷ್ಟಶ್ಚ ಕಿಮಿದಂ ಕರ್ಮ ತವಾಂತ್ಯಜಜನೋಚಿತಂ ।
ಏಷಾ ವೇದಾತ್ಮಿಕಾ ವಾಣೀ ಸ್ಪಷ್ಟಾಕ್ಷರಕಲಸ್ವನಾ ।
ತತ್ಕಿಂ ಶಾಪಪರಿಭ್ರಷ್ಟಸ್ತ್ವಂ ಕಶ್ಚಿದ್ಬ್ರಾಹ್ಮಣೋತ್ತಮಃ ॥ ೮೬ ॥
ಯೇನೈವಂ ಕುರುಷೇ ಕರ್ಮ ಗರ್ಹಿತಂ ಚಾಂತ್ಯಜೈರಪಿ ।
ತತಃ ಸ ಪ್ರಹಸನ್ನಾಹ ಕ್ಷತ್ರಿಯೋಽಹಂ ಮಹೀಪತಿಃ ।
ವಿಷ್ಣುಸೇನ ಇತಿಖ್ಯಾತೋ ಹೈಹಯಾನ್ವಯಸಂಭವೀ ॥ ೮೭ ॥
ಸೋಽಹಮಾರಾಧನಾರ್ಥಾಯ ತ್ವಸ್ಮಿನ್ ಸ್ಥಾನ ಉಪಾಗತಃ ।
ಅದ್ಯ ಸಂವತ್ಸರೋ ಜಾತಃ ಕರ್ಮಣ್ಯಸ್ಮಿನ್ರತಸ್ಯ ಚ ॥ ೮೮ ॥

---

೮೩. ದೇವಶರ್ಮನು ತನ್ನ ಸೇವಕನನ್ನು ರಾಜನು ಹೊಡೆದು ಕೊಂದುದನ್ನು ಕೇಳಿ ಅತಿ ಕೋಪದಿಂದ ಅವನನ್ನು ಕೊಲ್ಲಲು ಹೋದನು.

೮೪–೮೫. ತರುವಾಯ ಆ ದೇವಶರ್ಮನು ಪುತ್ರ, ಪೌತ್ರರಿಂದಲೂ, ಇತರ ಬಂಧುಗಳಿಂದಲೂ ಸಹಿತನಾಗಿ ಗದರಿಸುತ್ತ ಅವನನ್ನು ಮಣ್ಣಿನ ಹೆಂಟೆಗಳಿಂದ ಹೊಡೆದನು. ಅವರೆಲ್ಲರೂ ಹಾಗೆ ಹೊಡೆಯುತ್ತಿರಲು ಶಿಥಿಲಾಂಗನಾದ ಆ ರಾಜನು ಯಜ್ಞೋಪವೀತವನ್ನು ತೋರಿಸಿ ವೇದವನ್ನುಚ್ಚರಿಸಲು ಆರಂಭಿಸಿದನು.

೮೬–೮೭. ದೇವಶರ್ಮನೇ ಮೊದಲಾದ ಬ್ರಾಹ್ಮಣರು ವೇದೋಚ್ಚಾರಣೆಯಲ್ಲಿ ನಿರತನಾದ ಆ ರಾಜನನ್ನು ನೋಡಿ ಆಶ್ಚರ್ಯದಿಂದ, "ಸ್ಪಷ್ಟವಾಗಿ ವೇದವನ್ನು ಉಚ್ಚರಿಸುತ್ತಿರುವ ನೀನು ಇಂತಹ ಚಂಡಾಲರಿಗುಚಿತವಾದ ಕರ್ಮವನ್ನಾಚರಿಸಲು ಕಾರಣವೇನು? ನೀನು ಶಾಪದಿಂದ ಭ್ರಷ್ಟನಾದ ಬ್ರಾಹ್ಮಣನಾಗಿರುವೆಯಾ? ಅದರಿಂದಲೇ ಚಂಡಾಲರಿಗೂ ನಿಂದ್ಯವಾದ ಈ ನೀಚಕಾರ್ಯವನ್ನು ಮಾಡುತ್ತಿರುವೆಯಾ?" ಎಂದು ಪ್ರಶ್ನಿಸಿದರು. ಬಳಿಕ ಅವನು ನಗುತ್ತ ಇಂತೆಂದನು- ನಾನು ಹೈಹಯವಂಶದಲ್ಲಿ ಜನಿಸಿದ ವಿಷ್ಣುಸೇನನೆಂಬ ಕ್ಷತ್ರಿಯ ರಾಜನು.

೮೮. ನಾನು ನಿನ್ನನ್ನು ಸಂತೋಷಗೊಳಿಸಲು ಈ ಸ್ಥಾನಕ್ಕೆ ಬಂದು ಈ ಕೆಲಸವನ್ನು ಮಾಡತೊಡಗಿ ಒಂದು ವರ್ಷವಾಯಿತು.

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸ ವಿಪ್ರಃ ಕೃಪಯಾನ್ವಿತಃ ।
ಕೃತಾಂಜಲಿಪುಟೋ ಭೂತ್ವಾ ತಮುವಾಚ ಮಹೀಪತಿಂ ॥ ೯೦ ॥
ಕಿಂ ತತ್ಕೃತ್ಯಂ ಸಮುದ್ದಿಶ್ಯ ತ್ವಯೈತತ್ಕರ್ಮ ಗರ್ಹಿತಂ ।
ಕೃತಂ ಕೀರ್ತಯ ಯೇನಾಽಽಶು ತವಾಽಭೀಷ್ಟಂ ಕರೋಮ್ಯಹಂ ॥ ೯೧ ॥
ನಾಽಸ್ತಿ ಮೇ ಕಿಂಚಿದಪ್ರಾಪ್ತಂ ತಥಾಽಸಾಧ್ಯಂ ಮಹೀಪತೇ ।
ತಸ್ಮಾತ್ತವ ಕರಿಷ್ಯಾಮಿ ಕೃತ್ಯಂ ಯದ್ಯಪಿ ದುರ್ಲಭಂ ॥ ೯೨ ॥

ರಾಜೋವಾಚ :—

ಪಿತಾ ಮಮಾಽಹಿನಾ ದಷ್ಟಃ ಪ್ರೇತತ್ವಂ ಸಮುಪಾಗತಃ ।
ಸೋಽತ್ರ ನಾಗಹ್ರದೇ ಶ್ರಾದ್ಧೇ ಕೃತೇ ಮುಕ್ತಿಮವಾಪ್ನುಯಾತ್ ॥ ೯೩ ॥
ತಸ್ಮಾತ್ತತ್ತಾರಣಾರ್ಥಾಯ ವಿಪ್ರಕೃತ್ಯಂ ಸಮಾಚರ ।
ಏತದರ್ಥಂ ಮಯೈತತ್ತೇ ಕೃತಂ ಕರ್ಮ ವಿಗರ್ಹಿತಂ ॥ ೯೪ ॥

ದೇವಶರ್ಮೋವಾಚ :—

ಏವಂ ಕುರು ನೃಪಶ್ರೇಷ್ಠ ಶ್ರಾದ್ಧೇಽಹಂ ತೇ ಪಿತುಃ ಸ್ವಯಂ ।
ಬ್ರಾಹ್ಮಣಃ ಸಂಭವಿಷ್ಯಾಮಿ ತಸ್ಮಾಚ್ಛ್ರಾದ್ಧಂ ಸಮಾಚರ ॥ ೯೫ ॥

---

೯೦. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣನು ಅವನ ಆ ಮಾತನ್ನು ಕೇಳಿ ಕರುಣೆಗೊಂಡು ಕೈ ಮುಗಿದುಕೊಂಡು ಆ ರಾಜನನ್ನು ಕುರಿತು ಹೀಗೆಂದನು.

೯೧. ನೀನು ಯಾವ ಕೆಲಸಕ್ಕಾಗಿ ಈ ನಿಂದ್ಯವಾದ ಕಾರ್ಯವನ್ನು ಮಾಡಿರುವೆಯೋ ಅದನ್ನು ಹೇಳು. ನಾನು ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆನು.

೯೨. ದೊರೆಯೆ! ನನಗೆ ಅಪ್ರಾಪ್ಯವೂ, ಅಸಾಧ್ಯವೂ ಆದ ಯಾವ ಕಾರ್ಯವೂ ಇಲ್ಲ. ಆದ್ದರಿಂದ ನಿನ್ನ ಕಾರ್ಯವು ದುರ್ಲಭವಾಗಿದ್ದರೂ ಅದನ್ನು ಮಾಡುವೆನು.

೯೩. ರಾಜನು ಹೇಳುತ್ತಾನೆ:—ಸರ್ಪ ಕಚ್ಚಿ ಮಡಿದು ಪ್ರೇತನಾದ ನನ್ನ ತಂದೆಯು ಈ ನಾಗಹ್ರದಯದಲ್ಲಿ ಶ್ರಾದ್ಧವನ್ನು ಮಾಡಿದರೆ ಮುಕ್ತನಾಗುವನು.

೯೪. ಆದ್ದರಿಂದ ಅವನನ್ನು ಉದ್ಧರಿಸುವುದಕ್ಕಾಗಿ ನೀನು ಬ್ರಾಹ್ಮಣಕಾರ್ಯವನ್ನು ನೆರವೇರಿಸು. ಇದಕ್ಕಾಗಿಯೇ ನಾನು ನಿಂದ್ಯವಾದ ಈ ಕೆಲಸವನ್ನು ಮಾಡಿದ್ದೇನೆ.

೯೫. ದೇವಶರ್ಮನು ಹೇಳುತ್ತಾನೆ:—ನೃಪವರ್ಯನೆ! ಹಾಗೆಯೇ ಮಾಡು. ನಾನು ನಿನ್ನ ತಂದೆಯ ಶ್ರಾದ್ಧದಲ್ಲಿ ಬ್ರಾಹ್ಮಣನಾಗುವೆನು. ಆದ್ದರಿಂದ ನೀನು ಶ್ರಾದ್ಧವನ್ನು ಮಾಡು.

ಸೂತ ಉವಾಚ :—

ಅಥ ತೇ ಸುಹೃದಸ್ತಸ್ಯ ಪುತ್ರಾಃ ಪೌತ್ರಾಶ್ಚ ಬಾಂಧವಾಃ ।
ಪ್ರೋಚುರ್ನೃಪತತ್ಪ್ರಯುಕ್ತಂ ತೇ ಶ್ರಾದ್ಧಂ ಭೋಕ್ತುಂ ವಿಗರ್ಹಿತಂ ॥ ೯೭ ॥
ತಸ್ಮಾದ್ಯದಿ ಭವಾನಸ್ಯ ಶ್ರಾದ್ಧೇ ಭೋಕ್ತಾ ತತಃ ಸ್ವಯಂ ।
ಸರ್ವೇ ಭವಂತಂ ತ್ಯಕ್ಷ್ಯಾಮಸ್ತಥಾಽನ್ಯೇಽಪಿ ದ್ವಿಜೋತ್ತಮಾಃ ॥ ೯೭ ॥

ದೇವಶರ್ಮೋವಾಚ :—

ಕಾಮಂ ತ್ಯಜತ ಮಾಂ ಸರ್ವೇ ಯೂಯಮನ್ಯೇಽಪಿ ಯೇ ದ್ವಿಜಾಃ ।
ಮಯೈವಾಸ್ಯ ಪ್ರತಿಜ್ಞಾತಂ ಭೋಕ್ತುಂ ಶ್ರಾದ್ಧೇ ಮಹೀಪತೇಃ ॥ ೯೮ ॥
ಏವಮುಕ್ತ್ವಾ ಸ ವಿಪ್ರೇಂದ್ರಸ್ತೇನೈವ ಸಹಿತಸ್ತದಾ ।
ನಾಗಹ್ರದಂ ಸಮಾಸಾದ್ಯ ಶ್ರಾದ್ಧೇ ವೈ ಭುಕ್ತವಾನಥ ॥ ೯೯ ॥
ಭುಕ್ತಮಾತ್ರೇ ತತಸ್ತಸ್ಮಿನ್ವಾಗುವಾಚಾಽಶರೀರಿಣೀ ।
ನಾದಯಂತೀ ಜಗತ್ಸರ್ವಂ ಹರ್ಷಯಂತೀ ಮಹೀಪತಿಂ ॥ ೧೦೦ ॥
ಪ್ರೇತಭಾವಾದ್ವಿನಿರ್ಮುಕ್ತಃ ಪುತ್ರಾಽಹಂ ತ್ವತ್ಪ್ರಭಾವತಃ ।
ಸ್ವಸ್ತಿ ತೇಽಸ್ತುಗಮಿಷ್ಯಾಮಿ ಸಾಂಪ್ರತಂ ತ್ರಿದಿವಾಲಯಂ ॥ ೧೦೧ ॥
ತಚ್ಛ್ರುತ್ವಾ ನೃಪತಿರ್ಹೃಷ್ಟಸ್ತಂಪ್ರಣಮ್ಯ ದ್ವಿಜೋತ್ತಮಂ ।
ಪ್ರೋವಾಚ ಕುರು ಮೇ ವಾಕ್ಯಂ ಯದ್ಬ್ರವೀಮಿ ದ್ವಿಜೋತ್ತಮ ॥ ೧೦೨ ॥

---

೯೭. ಸೂತನು ಹೇಳುತ್ತಾನೆ:—ಬಳಿಕ ಆ ದೇವಶರ್ಮನ ಮಿತ್ರರೂ, ಪುತ್ರರೂ, ಪೌತ್ರರೂ, ಬಾಂಧವರೂ, "ನೀನು ಈ ರಾಜನು ಮಾಡಿದ ಶ್ರಾದ್ಧದಲ್ಲಿ ಭೋಜನ ಮಾಡುವುದು ನಿಂದ್ಯವಾದುದು.

೯೭. ಆದ್ದರಿಂದ ನೀನು ಇವನ ಶ್ರಾದ್ಧದಲ್ಲಿ ಭೋಜನ ಮಾಡಿದರೆ ನಾವೂ ಇತರ ಬ್ರಾಹ್ಮಣರೂ ನಿನ್ನನ್ನು ತ್ಯಜಿಸುವೆವು" ಎಂದರು.

೯೮–೯೯. ದೇವಶರ್ಮನು ಹೇಳುತ್ತಾನೆ:—ನೀವೂ, ಇತರ ಬ್ರಾಹ್ಮಣರೂ ನನ್ನನ್ನು ಬಿಟ್ಟುಬಿಡಿರಿ. ನಾನು ಇವನು ಮಾಡುವ ಶ್ರಾದ್ಧದಲ್ಲಿ ಭುಂಜಿಸುವುದಾಗಿ ಪ್ರತಿಜ್ಞೆಮಾಡಿರುತ್ತೇನೆ. ದೇವಶರ್ಮನು ಹೀಗೆ ಹೇಳಿ ಆ ರಾಜನೊಡನೆ ನಾಗಹ್ರದಕ್ಕೆ ಹೋಗಿ ಶ್ರಾದ್ಧದಲ್ಲಿ ಭೋಜನಮಾಡಿದನು.

೧೦೦. ಆ ದೇವಶರ್ಮನು ಭುಂಜಿಸಿದ ಕೂಡಲೆ ಅಶರೀರವಾಣಿಯು ಪ್ರಪಂಚವನ್ನು ಶಬ್ದಗೊಳಿಸುತ್ತಲೂ, ರಾಜನನ್ನು ಹರ್ಷಗೊಳಿಸುತ್ತಲೂ ಇಂತೆಂದಿತು.

೧೦೧. "ಮಗು! ನಾನು ನಿನ್ನ ಪ್ರಭಾವದಿಂದ ಪ್ರೇತತನದಿಂದ ಮುಕ್ತನಾದೆನು. ನಿನಗೆ ಮಂಗಳವಾಗಲಿ. ನಾನೀಗ ದೇವಲೋಕಕ್ಕೆ ತೆರಳುವೆನು."

೧೦೨. ತರುವಾಯ ರಾಜನು ಹೀಗೆ ಶ್ರಾದ್ಧವನ್ನೆಸಗಿ ಸಂತೋಷಗೊಂಡು ಬ್ರಾಹ್ಮಣನನ್ನು ವಂದಿಸಿ "ವಿಪ್ರೇಂದ್ರ! ನಾನು ಹೇಳುವ ಈ ಮಾತಿನಂತೆ ಮಾಡೆಂದನು.

ಅಸ್ತಿ ಮಾಹಿಷ್ಮತೀ ನಾಮ ನಗರೀ ನರ್ಮದಾತಟೇ ।
ಸಾ ಚಾಽಸ್ಮಾಕಂ ರಾಜಧಾನೀ ಪಿತೃಪರ್ಯಾಗತಾ ವಿಭೋ ॥ ೧೦೩ ॥
ಅಹಂ ಯಚ್ಛಾಮಿ ತೇ ಬ್ರಹ್ಮನ್ ಸಮಸ್ತವಿಷಯಾನ್ವಿತಾಂ ।
ಮಯಾ ಭೃತ್ಯೇನ ತತ್ರಸ್ಥಃ ಕುರುರಾಜ್ಯಮಕಂಟಕಂ ॥ ೧೦೪ ॥

ದೇವಶರ್ಮೋವಾಚ :—

ನ ಚೈತದ್ಯುಜ್ಯತೇ ವಕ್ತುಂ ನ ವಿಪ್ರೋ ರಾಜ್ಯಮರ್ಹತಿ ।
ತಸ್ಮಾದ್ಗಚ್ಛ ನಿಜಂ ರಾಜ್ಯಂ ಪರಿಪಾಲಯ ಪಾರ್ಥಿವ ॥ ೧೦೫ ॥

ಸೂತ ಉವಾಚ :—

ಏವಂ ವಿಸರ್ಜಿತಸ್ತೇನ ಜಗಾಮ ಸ ಮಹೀಪತಿಃ ।
ಸ್ವಂ ದೇಶಂ ಹರ್ಷಸಂಯುಕ್ತಃ ಕೃತಕೃತ್ಯೋ ದ್ವಿಜೋತ್ತಮಾಃ ॥ ೧೦೬ ॥
ಸೋಽಪಿ ಸರ್ವೈಃ ಪರಿತ್ಯಕ್ತೋ ಬ್ರಾಹ್ಮಣೈಃ ಪುರವಾಸಿಭಿಃ ।
ದೇವಶರ್ಮಾ ಸಮುದ್ದಿಶ್ಯ ದೋಷಂ ಶ್ರಾದ್ಧಸಮುದ್ಭವಂ ॥ ೧೦೭ ॥
ತತೋ ನಾಗಹ್ರದೇ ತಸ್ಮಿನ್ ಸ ಕೃತ್ವಾ ನಿಜಮಂದಿರಂ ।
ನಿವಾಸಮಕರೋತ್ತತ್ರ ಸ್ವಾಧ್ಯಾಯ ನಿರತಃ ಶುಚಿಃ ॥ ೧೦೮ ॥

---

೧೦೩. ನರ್ಮದಾನದಿಯ ದಡದಲ್ಲಿ ಮಾಹಿಷ್ಮತಿಯೆಂಬ ಪಟ್ಟಣವಿದೆ. ಇದು ನಮ್ಮ ವಂಶಪಾರಂಪರ್ಯದಿಂದ ಬಂದ ರಾಜಧಾನಿಯಾಗಿರುವುದು.

೧೦೪. ನಾನು ಸಮಸ್ತ ದೇಶಗಳಿಂದ ಕೂಡಿದ ಅದನ್ನು ನಿನಗೆ ಕೊಡುತ್ತೇನೆ. ನೀನು ಅಲ್ಲಿ ವಾಸಮಾಡುತ್ತ ಭೃತ್ಯನಾದ ನನ್ನೊಡನೆ ನಿಷ್ಕಂಟಕವಾಗಿ ರಾಜ್ಯವನ್ನಾಳು."

೧೦೫. ದೇವಶರ್ಮನು ಹೇಳುತ್ತಾನೆ:—ನೀನು ಹೀಗೆ ಹೇಳುವುದುಚಿತವಲ್ಲ. ಬ್ರಾಹ್ಮಣನು ರಾಜ್ಯವನ್ನಾಳಲು ಅರ್ಹನಲ್ಲ. ಅರಸ! ಆದ್ದರಿಂದ ನೀನು ನಿನ್ನ ರಾಜ್ಯವನ್ನು ಸೇರಿ ಅದನ್ನು ಕಾಪಾಡು.

೧೦೬. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಹೀಗೆ ದೇವಶರ್ಮನು ಹೇಳಿ ಕಳುಹಿಸಲು ಆ ರಾಜನು ಸಂತೋಷದಿಂದ ತನ್ನ ದೇಶಕ್ಕೆ ಹೋದನು.

೧೦೭—೧೦೮. ಪಟ್ಟಣದಲ್ಲಿ ವಾಸಿಸುವ ಬ್ರಾಹ್ಮಣರೆಲ್ಲ ಶ್ರಾದ್ಧದ ದೋಷವನ್ನುದ್ದೇಶಿಸಿ ದೇವಶರ್ಮನನ್ನು ತ್ಯಜಿಸಲು ಅವನು ಆ ನಾಗಹ್ರದದಲ್ಲಿ ಮನೆಯನ್ನು ನಿರ್ಮಿಸಿಕೊಂಡು ಅಲ್ಲಿ ವೇದಾಧ್ಯಯನ ನಿರತನೂ, ಶುದ್ಧನೂ ಆಗಿ ವಾಸಮಾಡಿದನು.

ತತ್ರಸ್ಥಸ್ಯ ನಿರಸ್ತಸ್ಯ ಯೇ ಪುತ್ರಾಃಸ್ಯುರ್ದ್ವಿಜೋತ್ತಮಾಃ ।
ತೇಷಾಂ ಸಂತತಯೋಽದ್ಯಾಪಿ ತೇ ಪ್ರೋಕ್ತಾ ಬಾಹ್ಯವಾಸಿನಃ ॥ ೧೦೯ ॥
ಏತದ್ವಃ ಸರ್ವಮಾಖ್ಯಾತಂ ನಾಗತೀರ್ಥಸಮುದ್ಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೧೧೦ ॥
ಯಶ್ಚೈತತ್ಪಠತೇ ಭಕ್ತ್ಯಾ ಸಂಪ್ರಾಪ್ತೇ ಪಂಚಮೀ ದಿನೇ ।
ಶೃಣುಯಾದ್ವಾ ನ ವಂಶೇಽಪಿ ತಸ್ಯ ಸ್ಯಾತ್ಸರ್ಪಜಂ ಭಯಂ ॥ ೧೧೧ ॥
ತಥಾ ವಿಮುಚ್ಯತೇ ಪಾಪಾದ್ಭಕ್ಷ್ಯಜಾತಾನ್ನ ಸಂಶಯಃ ।
ಕೃತಾದಜ್ಞಾನತೋ ವಿಪ್ರಾಃ ಸತ್ಯಮೇತನ್ಮಯೋದಿತಂ ॥ ೧೧೨ ॥
ತಸ್ಮಾತ್ಸರ್ವಪ್ರಯತ್ನೇನ ನಾಗತೀರ್ಥಮನುತ್ತಮಂ ।
ಮಾಹಾತ್ಮ್ಯಂ ಪಠನೀಯಂ ವಾ ಶ್ರೋತವ್ಯಂ ವಾ ಸಮಾಹಿತೈಃ ॥ ೧೧೩ ॥
ಶ್ರಾದ್ಧಕಾಲೇತು ಸಂಪ್ರಾಪ್ತೇ ಯಶ್ಚೈತತ್ಪಠತೇ ದ್ವಿಜಃ ।
ಸ ಪ್ರಾಪ್ನೋತಿ ಫಲಂ ಕೃತ್ಸ್ನಂ ಗಯಾಶ್ರಾದ್ಧಸಮುದ್ಭವಂ ॥ ೧೧೪ ॥
ತಥಾ ಯೇ ಕೀರ್ತಿತಾ ದೋಷಾಃ ಶ್ರಾದ್ಧೇ ದ್ರವ್ಯಸಮುದ್ಭವಾಃ ।
ವ್ರತವೈಕಲ್ಯಜಾಶ್ಚಾಪಿ ತಥಾ ಬ್ರಾಹ್ಮಣಸಂಭವಾಃ ॥ ೧೧೫ ॥

---

೧೦೯. ಹೀಗೆ ಬಹಿಷ್ಕೃತನಾಗಿ ಆ ನಾಗತೀರ್ಥದಲ್ಲಿ ವಾಸಮಾಡುತ್ತಿದ್ದ ಅವನ ಪುತ್ರರೂ, ಅವರ ಸಂತತಿಯವರೂ ಬಾಹ್ಯವಾಸಿಗಳೆಂದು ಈಗಲೂ ಹೇಳಲ್ಪಡುವರು.

೧೧೦. ಬ್ರಾಹ್ಮಣವರ್ಯರೆ! ಸಕಲಪಾಪಗಳನ್ನೂ ಪರಿಹರಿಸುವ ಈ ನಾಗತೀರ್ಥದ ಮಾಹಾತ್ಮ್ಯವನ್ನೆಲ್ಲ ನಿಮಗೆ ಹೇಳಿದ್ದೇನೆ.

೧೧೧. ಇದನ್ನು ಪಂಚಮೀದಿನ ಭಕ್ತಿಯಿಂದ ಪಠಿಸುವ ಅಥವಾ ಕೇಳುವವನ ವಂಶದಲ್ಲಿ ಯಾರಿಗೂ ಸರ್ಪದ ಭಯವುಂಟಾಗುವುದಿಲ್ಲ.

೧೧೨. ಹಾಗೆಯೇ ಅಜ್ಞಾನದಿಂದ ಅಭಕ್ಷ್ಯವನ್ನು ಭಕ್ಷಿಸಿದ ಪಾಪದಿಂದ ನಿಶ್ಚಯವಾಗಿಯೂ ಮುಕ್ತನಾಗುವನು. ನಾನು ಹೇಳಿರುವ ಈ ಮಾತು ನಿಶ್ಚಯವಾದುದು.

೧೧೩. ಆದ್ದರಿಂದ ಪ್ರಯತ್ನಿಸಿ ನಾಗತೀರ್ಥದ ಉತ್ತಮವಾದ ಮಾಹಾತ್ಮ್ಯವನ್ನು ಪಠಿಸಬೇಕು ಅಥವಾ ಸಾವಧಾನಮನಸ್ಸಿನಿಂದ ಕೇಳಬೇಕು.

೧೧೪. ಶ್ರಾದ್ಧಕಾಲದಲ್ಲಿ ಇದನ್ನು ಪಠಿಸಿದ ಬ್ರಾಹ್ಮಣನು ಗಯಾಶ್ರಾದ್ಧದ ಸಂಪೂರ್ಣಫಲವನ್ನು ಪಡೆಯುವನು.

೧೧೫–೧೧೬. ಶ್ರಾದ್ಧಕಾಲದಲ್ಲಿ ಈ ನಾಗಹ್ರದದ ಮಾಹಾತ್ಮ್ಯವನ್ನು

ತೇ ಸರ್ವೇ ನಾಶಮಾಯಾಂತಿ ಕೀರ್ತ್ಯಮಾನೇ ಸಮಾಹಿತೈಃ ।
ನಾಗಹ್ರದಸ್ಯ ಮಾಹಾತ್ಮ್ಯೇ ಶ್ರಾದ್ಧಕಾಲ ಉಪಸ್ಥಿತೇ ॥ ೧೧೩ ॥
ತಥಾ ವಿನಿಹತಾ ಗೋಭಿರ್ಬ್ರಾಹ್ಮಣೈಃ ಶ್ವಾಪದೈರಪಿ ।
ಏತಸ್ಮಿನ್ಪಠಿತೇ ಶ್ರಾದ್ಧೇ ಗಚ್ಛಂತಿ ಪರಮಾಂ ಗತಿಂ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗಹ್ರದಮಾಹಾತ್ಮ್ಯವರ್ಣನಂ"
ನಾಮೈಕತ್ರಿಂಶೋಽಧ್ಯಾಯಃ

---

ಸಾವಧಾನ ಮನಸ್ಸಿನಿಂದ ಪಠಿಸಿದರೆ ದ್ರವ್ಯ, ಬ್ರಾಹ್ಮಣ, ವ್ರತ ವೈಕಲ್ಯ, ಇವುಗಳಿಂದುಂಟಾದ ದೋಷವು ಪರಿಹಾರವಾಗುವುದು.

೧೧೪. ಗೋವು, ಬ್ರಾಹ್ಮಣ, ಹಿಂಸ್ರಜಂತುಗಳಿಂದ ಹತರಾದವರೂ ಉತ್ತಮಗತಿಯನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂಧಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗಹ್ರದಮಾಹಾತ್ಮ್ಯವರ್ಣನ"ವೆಂಬ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ಸಪ್ತರ್ಷ್ಯಾಶ್ರಮಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯೋಽಸ್ತಿ ದ್ವಿಜಶ್ರೇಷ್ಠಾಸ್ತಸ್ಮಿನ್‌ಕ್ಷೇತ್ರೇ ಶುಭಾವಹೇ ।
ಸಪ್ತರ್ಷೀಣಾಂ ಸುವಿಖ್ಯಾತ ಆಶ್ರಮಃ ಸರ್ವಕಾಮದಃ ॥ ೧ ॥
ತತ್ರ ಶ್ರಾವಣಮಾಸಸ್ಯ ಪಂಚದಶ್ಯಾಂ ಸಮಾಹಿತಃ ।
ಯಃ ಕರೋತಿ ನರಃ ಸ್ನಾನಂ ಸ ಲಭೇದ್ವಾಂಛಿತಂ ಫಲಂ ॥ ೨ ॥
ಕಂದಮೂಲಫಲೈಃ ಶಾಕೈರ್ಯಸ್ತತ್ರ ಶ್ರಾದ್ಧಮಾಚರೇತ್ ।
ಸ ಪ್ರಾಪ್ನೋತಿ ಫಲಂ ಕೃತ್ಸ್ನಂ ರಾಜಸೂಯಾಽಶ್ವಮೇಧಯೋಃ ॥ ೩ ॥
ಪಂಚಮ್ಯಾಂ ಶುಕ್ಲಪಕ್ಷೇತು ಮಾಸಿ ಭಾದ್ರಪದೇ ದ್ವಿಜಾಃ ।
ಯಸ್ತಾನ್ಪೂಜಯತೇ ಭಕ್ತ್ಯಾ ಪುಷ್ಪಧೂಪಾಽನುಲೇಪನೈಃ ।
ವಿಧಿನಾನೇನ ವಿಪ್ರೇಂದ್ರಾಃ ಸರ್ವಾನೇವ ಯಥಾಕ್ರಮಂ ॥ ೪ ॥

ಓಂ ಅತ್ರಯೇನಮಃ ಓಂ ವಸಿಷ್ಠಾಯನಮಃ
ಓಂ ಕಶ್ಯಪಾಯನಮಃ ಓಂ ಭರದ್ವಾಜಾಯನಮಃ
ಓಂ ಗೌತಮಾಯನಮಃ ಓಂ ಕೌಶಿಕಾಯನಮಃ
ಓಂ ಜಮದಗ್ನಯೇನಮಃ ಓಂ ಅರುಂಧತ್ಯೈನಮಃ

ಅಥ ಪೂಜಾಮಂತ್ರಃ

---

## ಕನ್ನಡದ ಅನುವಾದ

### ಸಪ್ತರ್ಷ್ಯಾಶ್ರಮಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಶುಭಕರವಾದ ಆ ಕ್ಷೇತ್ರದಲ್ಲಿ ಸಕಲೇಷ್ಟಾರ್ಥಗಳನ್ನೀಯುವ ಸಪ್ತರ್ಷಿಗಳ ಇನ್ನೊಂದು ಆಶ್ರಮವಿದೆ.

೨. ಅಲ್ಲಿ ಶ್ರಾವಣಮಾಸದ ಹುಣ್ಣಿಮೆಯದಿನ ಮಿಂದವನು ಇಷ್ಟವಾದ ಫಲವನ್ನು ಪಡೆಯುವನು.

೩. ಗಡ್ಡೆ, ಗೆಣಸು, ಫಲ, ತರಕಾರಿಗಳಿಂದ ಶ್ರಾದ್ಧಮಾಡಿದವನು ರಾಜಸೂಯ ಅಶ್ವಮೇಧಯಾಗಗಳ ಸಂಪೂರ್ಣಫಲವನ್ನು ಪಡೆಯುವನು.

೪. ದ್ವಿಜರ್ರೆ! ಭಾದ್ರಪದ ಶುಕ್ಲಪಕ್ಷದ ಪಂಚಮಿಯದಿನ ಈ ವಿಧಿಯಿಂದ ಆ ಎಲ್ಲ ಋಷಿಗಳನ್ನೂ ಭಕ್ತಿಯಿಂದ ಪುಷ್ಪ, ಧೂಪ, ಗಂಧಗಳಿಂದ ಅರ್ಚಿಸಬೇಕು.

೫. ಅತ್ರಯೇನಮಃ, ವಸಿಷ್ಠಾಯನಮಃ, ಕಶ್ಯಪಾಯನಮಃ, ಭರದ್ವಾಜಾಯನಮಃ, ಗೌತಮಾಯನಮಃ, ಕೌಶಿಕಾಯನಮಃ, ಜಮದಗ್ನೇಯೇನಮಃ,

ಜಹ್ನುಕನ್ಯಾಪವಿತ್ರಾಂಗಾ ಗೃಹೀತ ಜಪಮಾಲಿಕಾಃ ।
ಗೃಹ್ಣಂತ್ವರ್ಘಂ ಮಯಾ ದತ್ತಮೃಷಯಃ ಸರ್ವಕಾಮದಾಃ ॥ ೫ ॥
ಋಷಯ ಊಚುಃ:—
ತತ್ರ ಸಪ್ತರ್ಷಿಭಿಸ್ತೀರ್ಥಂ ಕಸ್ಮಿನ್ಕಾಲೇ ವ್ಯವಸ್ಥಿತಂ ।
ವಿಸ್ತರಾತ್ಸೂತಜ ಬ್ರೂಹಿ ಪರಂ ಕೌತೂಹಲಂಹಿನಃ ॥ ೬ ॥
ಸೂತ ಉವಾಚ:—
ಅನಾವೃಷ್ಟಿಃ ಪುರಾ ಜಾತಾ ಲೋಕೇ ದ್ವಾದಶವಾರ್ಷಿಕೀ ।
ಸರ್ವೌಷಧಿಕ್ಷಯೋ ಜಾತಸ್ತತೋ ಲೋಕಾಃ ಕ್ಷಯಾರ್ದಿತಾಃ ॥ ೭ ॥
ಅಸ್ಥಿಶೇಷಾ ನಿರುತ್ಸಾಹಾಸ್ತ್ಯಕ್ತಧರ್ಮವ್ರತಕ್ರಿಯಾಃ ।
ಅಭಕ್ಷ್ಯಭಕ್ಷಣಪರಾಸ್ತಥೈವಾಽಪೇಯಪಾಯಿನಃ ॥ ೮ ॥
ತ್ಯಜಂತಿ ಮಾತರಃ ಪುತ್ರಾನ್ಕಲತ್ರಾಣಿ ತಥಾ ನರಾಃ ।
ಭೃತ್ಯಾನ್ ಸ್ವಾನಪಿ ವಿತ್ತೇಶಾಃ ಕಾ ಕಥಾಽನ್ಯ ಸಮುದ್ಭವಾನ್ ॥ ೯ ॥
ಸಂತ್ಯಕ್ತಾನ್ಯಗ್ನಿಹೋತ್ರಾಣಿ ಬ್ರಾಹ್ಮಣೈರ್ಯಾಜಕೈರಪಿ ।
ವ್ರತಾನಿ ವ್ರತಿಭಿರ್ದಾಂತೈರಪಿ ವೃದ್ಧತಮೈರ್ದ್ವಿಜಾಃ ॥ ೧೦ ॥

---

ಅರುಂಧತ್ಯೈನಮಃ, ಈ ಮಂತ್ರಗಳಿಂದ ಅರ್ಚಿಸಿ "ಗಂಗೆಯಿಂದ ಪವಿತ್ರವಾದ ಅವಯವವುಳ್ಳವರೂ, ಜಪಮಾಲಿಕೆಗಳನ್ನು ಹಿಡಿದವರೂ, ಸಕಲೇಷ್ಟಾರ್ಥಗಳನ್ನು ನೀಡುವವರೂ ಆದ ಋಷಿಗಳು ನಾನು ಮಾಡಿದ ಪೂಜೆಯನ್ನು ಸ್ವೀಕರಿಸಲಿ" ಎಂದು ಪ್ರಾರ್ಥಿಸಬೇಕು.

೬. ಋಷಿಗಳು ಹೇಳುತ್ತಾರೆ:—ಅಲ್ಲಿ ಸಪ್ತರ್ಷಿಗಳು ಯಾವಾಗ ತೀರ್ಥವನ್ನು ಕಲ್ಪಿಸಿದರು? ಸೂತಪುತ್ರ! ಅದನ್ನು ನಮಗೆ ವಿಸ್ತಾರವಾಗಿ ಹೇಳು. ಕೇಳಲು ಅತ್ಯಂತ ಕುತೂಹಲವುಂಟಾಗಿದೆ.

೭–೮. ಸೂತನು ಹೇಳುತ್ತಾನೆ:—ಹಿಂದೆ ಲೋಕದಲ್ಲಿ ಹನ್ನೆರಡು ವರ್ಷಗಳ ಕಾಲ ಅನಾವೃಷ್ಟಿಯುಂಟಾಯಿತು. ಅದರಿಂದ ಸಕಲೌಷಧಿಗಳೂ ನಷ್ಟವಾದುವು. ಜನರು ಕ್ಷಯಪೀಡಿತರೂ, ಅಸ್ಥಿಮಾತ್ರ ಉಳಿದವರೂ, ಉತ್ಸಾಹವಿಲ್ಲದವರೂ, ಧರ್ಮವ್ರತಕ್ರಿಯೆಗಳನ್ನು ತ್ಯಜಿಸಿದವರೂ, ಅಭಕ್ಷ್ಯ ಭಕ್ಷಣದಲ್ಲಿ ನಿರತರೂ, ಕುಡಿಯಲನರ್ಹವಾದ್ದನ್ನು ಕುಡಿಯುವವರೂ ಆದರು.

೯. ತಾಯಂದಿರು ಮಕ್ಕಳನ್ನೂ ಗಂಡಸರು ಹೆಂಡತಿಯರನ್ನೂ, ಧನಿಕರು ತಮ್ಮ ಸೇವಕರನ್ನೂ ತ್ಯಜಿಸಿದರು. ಇತರರ ವಿಷಯವಿನ್ನೇನು.

೧೦. ಯಾಗಮಾಡುವ ಬ್ರಾಹ್ಮಣರು ಅಗ್ನಿಹೋತ್ರಗಳನ್ನು ತ್ಯಜಿಸಿದರು. ಜಿತೇಂದ್ರಿಯರಾದ ವೃದ್ಧ ವ್ರತಿಗಳೂ ವ್ರತವನ್ನು ಬಿಟ್ಟರು.

ದೃಶ್ಯತೇ ಚೈವ ಯತ್ರೈವ ಸಸ್ಯಂವಾಽಪಿ ಕಥಂ ಚ ನ ।
ಹ್ರಿಯತೇ ಲಜ್ಜಯಾ ಹೀನೈಸ್ತತ್ರ ಕ್ಷುತ್ಕ್ಷಾಮಕೈರ್ನರೈಃ ॥ ೧೧ ॥
ಏವಮನ್ನಕ್ಷಯೇ ಜಾತೇ ಪೀಡಿತೇ ಧರಣೀತಲೇ ।
ಸಪ್ತರ್ಷಯಃ ಕ್ಷುಧಾವಿಷ್ಟಾ ಬಭ್ರಮುಸ್ತತ್ರ ತತ್ರ ಚ ॥ ೧೨ ॥
ಅತ್ರಿಶ್ಚೈವ ವಸಿಷ್ಠಶ್ಚ ಕಶ್ಯಪಃ ಸುಮಹಾತಪಾಃ ।
ಭರದ್ವಾಜಸ್ತಥಾಚಾಽನ್ಯೋ ಗೌತಮಃ ಸಂಶಿತವ್ರತಃ ।
ಕೌಶಿಕೋ ಜಮದಗ್ನಿಶ್ಚ ತಥೈವಾಽರುಂಧತೀ ಸತೀ ॥ ೧೩ ॥
ಅಥ ತೇಷಾಂ ಸಮಸ್ತಾನಾಂ ಚಂಡಾಽಭೂತ್ಪರಿಚಾರಿಕಾ ।
ಪಶುವಕ್ತ್ರಸ್ತಥಾ ಭೃತ್ಯೋ ವಿನಯೇನ ಸಮನ್ವಿತಃ ॥ ೧೪ ॥
ತತಸ್ತೇ ವಿಷಯಂ ಪ್ರಾಪ್ತಾ ವೃಷಾದರ್ಭಿಮಹೀಪತೇಃ ।
ಕ್ಷುತ್ಕ್ಷಾಮಾ ಮುನಯೋಽತ್ಯರ್ಥಂ ದೇಶೇ ಚಾನರ್ತಸಂಜ್ಞಕೇ ॥ ೧೫ ॥
ತತ್ರ ಭಿಕ್ಷಾಕೃತೇ ಭ್ರಾಂತಾಸ್ತತಶ್ಚೈವ ಗೃಹಾದ್ಗೃಹಂ ।
ನಗ್ರಾಸಮಪಿ ಸಸ್ಯಸ್ಯ ಪ್ರಾಪ್ನುವಂಸ್ತೇ ದ್ವಿಜೋತ್ತಮಾಃ ॥ ೧೬ ॥
ತತಸ್ತೈಃ ಪತಿತೋ ಭೂಮೌ ದೃಷ್ಟೋ ಮೃತಕುಮಾರಕಃ ।
ಮಂತ್ರಯಿತ್ವಾ ಮಿಥಃ ಪಶ್ಚಾದ್ಗೃಹೀತೋ ಭಕ್ಷಣಾಯ ಚ ॥ ೧೭ ॥

---

೧೧. ಹಸಿವುಗೊಂಡ ಮನುಷ್ಯರು ಎಲ್ಲಿಯಾದರೂ ಸಸ್ಯ ಅಥವಾ ಬೇರೆ ಏನನ್ನಾದರೂ ನೋಡಿದರೂ ಅದನ್ನು ನಾಚಿಕೆಯಿಲ್ಲದೆ ತೆಗೆದುಕೊಳ್ಳುತ್ತಿದ್ದರು.

೧೨–೧೩. ಹೀಗೆ ಅನ್ನವಿಲ್ಲದೆ ಭೂಮಿಯಲ್ಲಿರುವವರು ಪೀಡಿತರಾಗಲು ಅತಿ ತಪಸ್ವಿಗಳಾದ ಅತ್ರಿ, ವಸಿಷ್ಠ, ಕಶ್ಯಪ, ಭರದ್ವಾಜ, ಗೌತಮ, ಕೌಶಿಕ, ಜಮದಗ್ನಿ, ಸಾಧ್ವಿಯಾದ ಅರುಂಧತಿ ಇವರು ಹಸಿವಿನಿಂದ ಪೀಡಿತರಾಗಿ ಅಲ್ಲಲ್ಲಿ ಅಲೆದರು.

೧೪. ಅವರಿಗೆಲ್ಲ ಚಂಡಾ ಎಂಬ ಓರ್ವ ಪರಿಚಾರಿಕೆಯೂ, ವಿನೀತನಾದ ಪಶುವಕ್ತ್ರನೆಂಬ ಭೃತ್ಯನೂ ಇದ್ದರು.

೧೫. ಬಳಿಕ ಹಸಿವಿನಿಂದ ಕೃಶರಾದ ಆ ಮುನಿಗಳು ಆನರ್ತವೆಂಬ ದೇಶದಲ್ಲಿರುವ ವೃಷದರ್ಭಿರಾಜನ ದೇಶಕ್ಕೆ ಬಂದರು.

೧೬. ಅಲ್ಲಿ ಅವರು ಭಿಕ್ಷೆಗಾಗಿ ಮನೆಯಿಂದ ಮನೆಗೆ ಅಲೆಯುತ್ತ ಒಂದು ಕವಳ ಆಹಾರವನ್ನೂ ಪಡೆಯಲಿಲ್ಲ.

೧೭. ಬಳಿಕ ಅವರು ಭೂಮಿಯಲ್ಲಿ ಬಿದ್ದಿರುವ ಮೃತಬಾಲಕನನ್ನು ನೋಡಿ ಪರಸ್ಪರವಾಗಿ ಆಲೋಚಿಸಿ ತಿನ್ನುವುದಕ್ಕಾಗಿ ಆ ಶವವನ್ನು ತೆಗೆದುಕೊಂಡರು.

ಅಪಚನ್ನಾವದಗ್ನೌ ತಂ ಕ್ಷುಧಯಾ ಪರಿಪೀಡಿತಾಃ ।
ವೃಷಾದರ್ಭಿರ್ನೃಪಃ ಪ್ರಾಪ್ತಃ ಶ್ರುತ್ವಾ ತೇಷಾಂ ವಿಚೇಷ್ಟಿತಂ ॥ ೧೮ ॥

ವೃಷಾದರ್ಭಿರುವಾಚ :—

ಕಿಮಿದಂ ಗರ್ಹಿತಂ ಕರ್ಮ ಕ್ರಿಯತೇ ಮುನಿಸತ್ತಮಾಃ ।
ರಾಕ್ಷಸಾನಾಮಯಂ ಧರ್ಮೋ ಮಹಾಮಾಂಸಸ್ಯ ಭಕ್ಷಣಂ ॥ ೧೯ ॥
ಸೋಽಹಂ ಸಸ್ಯಂ ಪ್ರದಾಸ್ಯಾಮಿ ಗ್ರಾಮಾನ್ ವ್ರೀಹೀನ್ಯವಾನಪಿ ।
ಮನು ವಾಕ್ಯಾದಸಂದಿಗ್ಧಂ ತ್ಯಜಧ್ವಂ ಮೃತಬಾಲಕಂ ॥ ೨೦ ॥

ಋಷಯ ಊಚುಃ :—

ಪ್ರಾಯಶ್ಚಿತ್ತಂ ಸಮಾದಿಷ್ಟಂ ಮಹಾಮಾಂಸಸ್ಯ ಭಕ್ಷಣಾತ್ ।
ಪ್ರತಿಗ್ರಹಸ್ಯ ಭೂಪಾಲಾದಾಪತ್ಕಾಲೇಽಪಿ ನೋ ನೃಪ ॥ ೨೧ ॥
ಪಶ್ಚಾತ್ತಪಶ್ಚರಿಷ್ಯಾಮೋ ಮಹಾಮಾಂಸಸಮುದ್ಭವಂ ।
ಪಾತಕಂ ನಾಶಯಿಷ್ಯಾಮೋ ಭಕ್ಷಯಾಮೋ ವಯಂ ತತಃ ॥ ೨೨ ॥

ವೃಷಾದರ್ಭಿರುವಾಚ :—

ಪ್ರತಿಗ್ರಹೋ ದ್ವಿಜಾತೀನಾಂ ಪ್ರೋಕ್ತಾ ವೃತ್ತಿರನಿಂದಿತಾ ।
ಗ್ರಾಹ್ಯೋ ಮತ್ತಸ್ತತಃ ಸರ್ವೈರ್ನಾತ್ರಕಾರ್ಯಾ ವಿಚಾರಣಾ ॥ ೨೩ ॥

---

೧೮. ಅವರು ಹಸಿವಿನಿಂದ ಪೀಡಿತರಾಗಿ ಆ ಶವವನ್ನು ಬೆಂಕಿಯಲ್ಲಿ ಬೇಯಿಸುತ್ತಿರಲು ಅವರ ಆ ಕೆಲಸವನ್ನು ಕೇಳಿ ವೃಷದರ್ಭಿರಾಜನು ಅಲ್ಲಿಗೆ ಬಂದನು.

೧೯. ವೃಷದರ್ಭಿಯು ಹೇಳುತ್ತಾನೆ:—ಮುನಿವರ್ಯರೆ! ಇಂತಹ ನಿಂದ್ಯವಾದ ಕಾರ್ಯವನ್ನು ಏಕೆ ಮಾಡುತ್ತಿದ್ದೀರಿ? ಶವಮಾಂಸಭಕ್ಷಣವು ರಾಕ್ಷಸರ ಧರ್ಮವಾಗಿರುವುದು.

೨೦. ನಾನು ನಿಮಗೆ ಸಸ್ಯ, ಗ್ರಾಮ, ವ್ರೀಹಿ, ಭತ್ತಗಳನ್ನು ಕೊಡುತ್ತೇನೆ. ನನ್ನ ಮಾತಿನಿಂದ ನೀವು ನಿಶ್ಚಯವಾಗಿಯೂ ಈ ಬಾಲಕನ ಶವವನ್ನು ತ್ಯಜಿಸಿರಿ.

೨೧. ಋಷಿಗಳು ಹೇಳುತ್ತಾರೆ :—ಮಹಾಮಾಂಸದ ಭಕ್ಷಣೆಗೆ ಪ್ರಾಯಶ್ಚಿತ್ತವು ವಿಹಿತವಾಗಿರುವುದು. ಆಪತ್ಕಾಲದಲ್ಲಿಯೂ ರಾಜನಿಂದ ಪ್ರತಿಗ್ರಹವನ್ನು ತೆಗೆದುಕೊಂಡುದಕ್ಕೆ ಪ್ರಾಯಶ್ಚಿತ್ತವು ವಿಹಿತವಾಗಿರುವುದಿಲ್ಲ.

೨೨. ನಾವು ಈಗ ಇದನ್ನು ಭಕ್ಷಿಸಿ ಅನಂತರ ಇದರಿಂದುಂಟಾದ ಪಾಪವನ್ನು ನೀಗಿಸಿಕೊಳ್ಳಲು ಪ್ರಾಯಶ್ಚಿತ್ತವನ್ನಾಚರಿಸುವೆವು.

೨೩. ವೃಷದರ್ಭಿಯು ಹೇಳುತ್ತಾನೆ :—ಬ್ರಾಹ್ಮಣರಿಗೆ ಪ್ರತಿಗ್ರಹವು ಶ್ಲಾಘ್ಯವಾದ ವೃತ್ತಿಯಾಗಿರುವುದು. ಆದ್ದರಿಂದ ನೀವೆಲ್ಲ ನನ್ನಿಂದ ದಾನವನ್ನು ತೆಗೆದುಕೊಳ್ಳಿರಿ. ಈ ವಿಷಯದಲ್ಲಿ ಆಲೋಚನೆ ಮಾಡಬೇಡಿರಿ.

ಋಷಯ ಊಚುಃ :—

ರಾಜಪ್ರತಿಗ್ರಹೋ ಘೋರೋ ಮಧ್ವಾಸ್ವಾದೋ ವಿಷೋಪಮಃ ।
ಸ ದೂರಾದ್ಬ್ರಾಹ್ಮಣೈಸ್ತ್ಯಾಜ್ಯೋ ವಿಶೇಷಾತ್ಕೃತಿಭಿರ್ನೃಪ ॥ ೨೪ ॥
ದಶಸೂನಾಸಮಶ್ಚಕ್ರೀ ದಶಚಕ್ರೀಸಮೋ ಧ್ವಜೀ ।
ದಶಧ್ವಜಿಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ ॥ ೨೫ ॥
ದಶಸೂನಾಸಹಸ್ರೇಣ ತುಲ್ಯೋ ರಾಜಪ್ರತಿಗ್ರಹಃ ।
ಕಸ್ತಸ್ಯ ಪ್ರತಿಗೃಹ್ಣಾತಿ ಲೋಭಾಢ್ಯೋ ಬ್ರಾಹ್ಮಣೋ ಯಥಾ ॥ ೨೬ ॥
ರೌರವಾದಿಷು ಸರ್ವೇಷು ನರಕೇಷು ಸ ಪಚ್ಯತೇ ।
ತಸ್ಮಾದ್ಗಚ್ಛ ಗೃಹೇ ಭೂಪ ಸ್ವಸ್ತಿ ತೇಽಸ್ತು ಸದೈವ ಹಿ ॥ ೨೭ ॥
ವಯಮನ್ಯತ್ರ ಯಾಸ್ಯಾಮೋ ಗೃಹೀಷ್ಯಾಮೋ ನ ತೇ ಧನಂ ।
ಏವಮುಕ್ತ್ವಾಽಥ ತೇ ಸರ್ವೇ ಮುನಯಃ ಶಂಸಿತವ್ರತಾಃ ॥ ೨೮ ॥
ಪರಿತ್ಯಜ್ಯ ಕುಮಾರಂ ತಂ ಮೃತಂ ತಮಪಿ ಭೂಮಿಪಂ ।
ಚಮತ್ಕಾರಪುರಂ ಕ್ಷೇತ್ರಂ ಸಮುದ್ದಿಶ್ಯ ತತೋ ಯಯುಃ ॥ ೨೯ ॥
ಸೋಽಪಿ ರಾಜಾ ತತಸ್ತೈಸ್ತು ಭರ್ತ್ಸಿತೋಽತಿರುಷಾನ್ವಿತಃ ।
ಜಿಜ್ಞಾಸಾರ್ಥಂ ತತಸ್ತೇಷಾಂ ಚಕ್ರೇ ಕರ್ಮ ದ್ವಿಜೋತ್ತಮಾಃ ॥ ೩೦ ॥

---

೨೪. ಋಷಿಗಳು ಹೇಳುತ್ತಾರೆ:—ರಾಜನಿಂದ ಪ್ರತಿಗ್ರಹವು ಘೋರವಾದ ಸುರಾಪಾನ ಮತ್ತು ವಿಷಕ್ಕೆ ಸಮಾನವಾದುದು. ಅದನ್ನು ಬ್ರಾಹ್ಮಣರು ದೂರದಿಂದಲೇ ತ್ಯಜಿಸಬೇಕು. ವಿಶೇಷವಾಗಿ ಜ್ಞಾನಿಗಳು ತ್ಯಜಿಸಬೇಕು.

೨೫. ಚಕ್ರಿಯು ಹತ್ತುಸೂನಾಗಳಿಗೂ, ಧ್ವಜಿಯು ಹತ್ತುಮಂದಿ ಚಕ್ರಿಗಳಿಗೂ, ವೇಶ್ಯೆಯು ಹತ್ತು ಧ್ವಜಿಗಳಿಗೂ, ರಾಜನು ಹತ್ತುಮಂದಿ ವೇಶ್ಯೆಯರಿಗೂ ಸಮಾನನು.

೨೬. ರಾಜನಿಂದ ಪ್ರತಿಗ್ರಹವು ಹತ್ತುಸಾವಿರ ಸೂನಾಗಳಿಗೆ ಸಮಾನವಾದ್ದರಿಂದ ಅತ್ಯಾಶೆಯುಳ್ಳ ಬ್ರಾಹ್ಮಣನಂತೆ ಯಾವನು ಅದನ್ನು ಸ್ವೀಕರಿಸುವನು?

೨೭. ಹಾಗೆ ಪ್ರತಿಗ್ರಹಮಾಡಿದವನನ್ನು ರೌರವಮೊದಲಾದ ನರಕಗಳಲ್ಲಿ ಪೀಡಿಸುವರು. ಆದ್ದರಿಂದ ದೊರೆಯೆ! ನೀನು ಮನೆಗೆ ಹೋಗು. ನಿನಗೆ ಯಾವಾಗಲೂ ಮಂಗಳವಾಗಲಿ.

೨೮–೨೯. ನಾವು ಬೇರೆ ಕಡೆಗೆ ಹೋಗುವೆವು. ನಿನ್ನ ದ್ರವ್ಯವನ್ನು ತೆಗೆದುಕೊಳ್ಳುವುದಿಲ್ಲ. ಶ್ಲಾಘ್ಯರಾದ ಆ ಮುನಿಗಳು ಹೀಗೆ ಹೇಳಿ ಮೃತನಾದ ಆ ಬಾಲಕನನ್ನೂ, ದೊರೆಯನ್ನೂ ತ್ಯಜಿಸಿ ಚಮತ್ಕಾರಪುರಕ್ಕೆ ತೆರಳಿದರು.

೩೦. ದ್ವಿಜವರ್ಯರೆ! ಆ ಮುನಿಗಳು ಹೀಗೆ ಗದರಿಸಲು ಕುಪಿತನಾದ ಆ ರಾಜನು ಅವರನ್ನು ಪರೀಕ್ಷಿಸುವುದಕ್ಕಾಗಿ ಒಂದು ಕೆಲಸವನ್ನು ಮಾಡಿದನು.

ತತಃ ಸುವರ್ಣಪೂರ್ಣಾನಿ ವಿಧಾಯೌದುಂಬರಾಣಿ ಚ ।
ತೇಷಾಂ ಮಾರ್ಗಾಗ್ರತೋ ಭೂಮೌ ಸಮಂತಾದಥ ಚಾಕ್ಷಿಪತ್ ॥ ೩೧ ॥
ಸೂತ ಉವಾಚ :—
ಅಥ ತೇ ಮುನಯೋ ದೃಷ್ಟ್ವಾ ಪತಿತಾನಿ ಧರಾತಲೇ ।
ಉದುಂಬರಾಣಿ ಸಂದೃಷ್ಟ್ವಾ ಜಗೃಹುಃ ಕ್ಷುಧಯಾರ್ದಿತಾಃ ॥ ೩೨ ॥
ಅಥ ತಾನಿ ಸಮಾಲಕ್ಷ್ಯ ಗುರೂಣಿ ಮುನಿಸತ್ತಮಾಃ ।
ಅತ್ರಿರೇಕಂ ಪರಿಸ್ಫೋಟ್ಯ ಸುವರ್ಣಂ ವೀಕ್ಷ್ಯ ಚಾಬ್ರವೀತ್ ॥ ೩೩ ॥
ಅತ್ರಿರುವಾಚ :—
ನಾಽಸ್ಮಾಕಂ ಮುನಯೋಽಜ್ಞಾನಂ ನಾಽಸ್ಮಾಕಂ ಗೃಹಬುದ್ಧಯಃ ।
ಹೈಮಾನಿಮಾನ್ನಿಜಾನಂತೋ ಗೃಹೀಷ್ಯಾಮ ಉದುಂಬರಾನ್ ॥ ೩೪ ॥
ತಸ್ಮಾದೇತಾನಿ ಸಂತ್ಯಜ್ಯ ಹೇಮಗರ್ಭಾಣಿ ದೂರತಃ ।
ಉದುಂಬರಾಣಿ ಯಾಸ್ಯಾಮಃ ಫಲಾನಿ ವಿಗತಸ್ಪೃಹಾಃ ॥ ೩೫ ॥
ಸಾರ್ವಭೌಮೋ ಮಹೀಪಾಲ ಏಕೋಽನ್ಯಶ್ಚ ನಿರೀಹಕಃ ।
ಸುಭಗಸ್ತು ತಯೋರ್ನಿತ್ಯಂ ಭೂಯಾದ್ಭೂಯೋ ನಿರೀಹಕಃ ॥ ೩೬ ॥
ಧರ್ಮಾರ್ಥಮಪಿ ವಿಪ್ರಾಣಾಂ ಸಂಚಯೋಽರ್ಥಸ್ಯ ಗರ್ಹಿತಃ ।
ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ॥ ೩೭ ॥

---

೩೧. ಅವನು ಅತ್ತಿಯ ಹಣ್ಣುಗಳೊಳಗೆ ಚಿನ್ನವನ್ನು ತುಂಬಿ ಅವರ ದಾರಿಯ ಮುಂದೆ ಸುತ್ತಲೂ ಎಸೆದನು.

೩೨—೩೩. ಸೂತನು ಹೇಳುತ್ತಾನೆ:—ಬಳಿಕ ಹಸಿವುಗೊಂಡ ಆ ಮುನಿಗಳು ನೆಲದ ಮೇಲೆ ಬಿದ್ದಿರುವ ಚಿನ್ನದಿಂದ ತುಂಬಿರುವ ಅತ್ತಿಯ ಹಣ್ಣುಗಳನ್ನು ತೆಗೆದುಕೊಂಡರು. ಅತ್ರಿಯು ಭಾರವಾಗಿರುವ ಆ ಹಣ್ಣುಗಳನ್ನು ನೋಡಿ ಒಂದು ಹಣ್ಣನ್ನು ಒಡೆದು ಒಳಗಿರುವ ಚಿನ್ನವನ್ನು ಕಂಡು ಇಂತೆಂದನು.

೩೪. ಅತ್ರಿಯು ಹೇಳುತ್ತಾನೆ:—ಮುನಿಗಳೆ! ನಮಗೆ ಅಜ್ಞಾನವೂ, ಮನೆಯನ್ನು ಕಟ್ಟಬೇಕೆಂಬ ಆಶೆಯೂ ಇಲ್ಲದಿರುವುದರಿಂದ ಈ ಚಿನ್ನದಿಂದ ತುಂಬಿರುವ ಅತ್ತಿ ಹಣ್ಣುಗಳನ್ನು ಹೇಗೆ ತೆಗೆದುಕೊಳ್ಳುವೆವು?

೩೫. ಆದ್ದರಿಂದ ಚಿನ್ನದಿಂದ ತುಂಬಿರುವ ಈ ಅತ್ತಿ ಹಣ್ಣುಗಳನ್ನು ತ್ಯಜಿಸಿ ಆಶೆಯಿಲ್ಲದೆ ದೂರ ಹೋಗೋಣ.

೩೬. ಚಕ್ರವರ್ತಿಯಾದ ರಾಜನೊಬ್ಬನು. ಇನ್ನೊಬ್ಬನು ಆಶೆಯಿಲ್ಲದವನು. ಇವರೀರ್ವರಲ್ಲಿ ಆಶೆಯಿಲ್ಲದವನು ಸುಭಗನಾಗಲಿ.

೩೭. ಬ್ರಾಹ್ಮಣರಿಗೆ ಧರ್ಮಕ್ಕಾಗಿಯೂ ದ್ರವ್ಯಸಂಗ್ರಹವು ನಿಂದಿತವಾದುದು. ಕೆಸರನ್ನು ತೊಳೆದುಕೊಳ್ಳುವುದಕ್ಕಿಂತ ಅದನ್ನು ದೂರದಿಂದ ಮುಟ್ಟದಿರುವುದೇ ಲೇಸು.

ತ್ಯಜತಃ ಸಂಚಯಾನ್ ಸರ್ವಾನ್ಯಾಂತಿ ಹಾನಿಮುಪದ್ರವಾಃ ।
ನ ಹಿ ಸರ್ವಾರ್ಥವಾನ್ ಕಶ್ಚಿದ್ದೃಶ್ಯತೇ ನಿರುಪದ್ರವಃ ॥ ೩೮ ॥
ನಿರ್ಧನತ್ವಂ ತಥಾ ರಾಜ್ಯಂ ತುಲಾಯಾಂ ಧಾರಯೇದ್ಬುಧಃ ।
ಅಂಕಿಜನತ್ವಮಧಿಕಂ ಜಾಯತೇ ಸಂಮತಿರ್ಮಮ ॥ ೩೯ ॥

ಕಶ್ಯಪ ಉವಾಚಃ—

ಅನರ್ಥೋಽಯಂ ಮುನೇ ಪ್ರಾಪ್ತೋ ಯದರ್ಥಸ್ಯ ಪರಿಗ್ರಹಃ ।
ಅರ್ಥೈಶ್ವರ್ಯವಿಮೂಢಾತ್ಮಾ ಶ್ರೇಯಸಾ ಮುಚ್ಯತೇ ಹಿ ಸಃ ॥ ೪೦ ॥
ಅರ್ಥಸಂಪದ್ವಿಮೋಹಾಯ ವಿಮೋಹೋ ನರಕಾಯ ಚ ।
ತಸ್ಮಾದರ್ಥಂ ಪ್ರಯತ್ನೇನ ಶ್ರೇಯೋಽರ್ಥೀ ದೂರತಸ್ತ್ಯಜೇತ್ ॥ ೪೧ ॥
ಯೋಽರ್ಥೇನ ಸಾಧ್ಯತೇ ಧರ್ಮಃ ಕ್ಷಯಿಷ್ಣುಃ ಸ ಪ್ರಕೀರ್ತಿತಃ ।
ಯಃ ಪುನಸ್ತಪಸಾ ಸಾಧ್ಯಃ ಸ ಮೋಕ್ಷಾಯೇತಿ ಮೇ ಮತಿಃ ॥ ೪೨ ॥

ಭರದ್ವಾಜ ಉವಾಚಃ—

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।
ಚಕ್ಷುಃಶ್ರೋತ್ರೇ ತಥಾ ಪುಂಸಸ್ತೃಷ್ಣೈಕಾ ತರುಣಾಯತೇ ॥ ೪೩ ॥

---

೩೮. ಸಕಲ ಸಂಗ್ರಹವನ್ನು ತ್ಯಜಿಸುವವನ ಉಪದ್ರವಗಳು ನಾಶವಾಗುವುವು. ಸಕಲಾರ್ಥಗಳನ್ನು ಸಂಗ್ರಹಿಸುವ ಯಾವನೂ ಉಪದ್ರವವಿಲ್ಲದವನಾಗಿ ಕಾಣಿಸುವುದಿಲ್ಲ.

೩೯. ಜ್ಞಾನಿಯು ಬಡತನವನ್ನೂ, ರಾಜ್ಯವನ್ನೂ ತಕ್ಕಡಿಯಲ್ಲಿ ತೂಗಿದರೆ ಬಡತನವು ಅಧಿಕವಾಗುವುದೆಂದು ನನ್ನ ಅಭಿಪ್ರಾಯವು.

೪೦. ಕಶ್ಯಪನು ಹೇಳುತ್ತಾನೆ:—ಮುನಿಯೆ! ದ್ರವ್ಯ ಸಂಗ್ರಹವು ಅನರ್ಥಕ್ಕೆ ಕಾರಣವು. ಧನಾಂಧನಾದ ಮಾನವನು ಶ್ರೇಯಸ್ಸಿಲ್ಲದವನಾಗುವನು.

೪೧. ಅರ್ಥಸಂಪತ್ತಿಯು ಮೋಹಕ್ಕೂ, ಮೋಹವು ನರಕಕ್ಕೂ ಕಾರಣವಾಗುವುದು. ಆದ್ದರಿಂದ ಶ್ರೇಯಸ್ಸನ್ನು ಬಯಸುವವನು ಪ್ರಯತ್ನದಿಂದ ದ್ರವ್ಯವನ್ನು ದೂರದಲ್ಲಿಯೇ ತ್ಯಜಿಸಬೇಕು.

೪೨. ಅರ್ಥದಿಂದ ಸಾಧಿಸಿದ ಧರ್ಮವು ಹಾಳಾಗುವುದೆಂದು ಹೇಳುತ್ತಾರೆ. ತಪಸ್ಸಿನಿಂದ ಸಾಧಿಸಿದ ಧರ್ಮವು ಮೋಕ್ಷಕ್ಕೆ ಸಾಧನವೆಂದು ನನ್ನ ಅಭಿಪ್ರಾಯವು.

೪೩. ಭರದ್ವಾಜನು ಹೇಳುತ್ತಾನೆ:—ಮುದುಕನಾಗುತ್ತಿರುವ ಮಾನವನ ಕೂದಲುಗಳೂ, ಹಲ್ಲುಗಳೂ, ಕಣ್ಣೂ, ಕಿವಿಗಳೂ ಮುದಿಯಾಗುವುವು. ಆಶೆಯೊಂದು ಮಾತ್ರ ಯುವಕನಂತಿರುವುದು.

ಸೂಚ್ಯಾ ಸೂತ್ರಂ ಯಥಾ ವಸ್ತ್ರೇ ಸಂಚಾರಯತಿ ಸೂಚಿಕಾ ।
ತದ್ವತ್ಸಂಸಾರಸೂತ್ರಂ ಚ ವಾಂಛಯಾತ್ಮಾ ನಯತ್ಯಸೌ ॥ ೪೪ ॥
ಯಥಾ ಶೃಂಗಂ ಹಿ ಕಾಯೇನ ವರ್ಧಮಾನೇನ ವರ್ಧತೇ ।
ತದ್ವತ್ತೃಷ್ಣಾಽಪಿ ವಿತ್ತೇನ ವರ್ಧಮಾನೇನ ವರ್ಧತೇ ॥ ೪೫ ॥
ಅನಂತಪಾರಾ ದುಷ್ಪೂರಾ ತೃಷ್ಣಾ ದುಃಖಶತಾವಹಾ ।
ಅಧರ್ಮಬಹುಲಾ ಚೈವ ತಸ್ಮಾತ್ತಾಂ ಪರಿವರ್ಜಯೇತ್ ॥ ೪೬ ॥

ಗೌತಮ ಉವಾಚ:—

ಸಂತುಷ್ಟಃ ಕೇನ ಚಾಲ್ಯೋಽಸ್ತಿ ಫಲೈರಪಿ ವಿವರ್ಜಿತಃ ।
ಸರ್ವೋಽಪೀಂದ್ರಿಯಲೌಲ್ಯೇನ ಸಂಕಟೇ ಭ್ರಮತಿ ದ್ವಿಜಾಃ ॥ ೪೭ ॥
ಸರ್ವತ್ರ ಸಂಪದಸ್ತಸ್ಯ ಸಂತುಷ್ಟಂ ಯಸ್ಯ ಮಾನಸಂ ।
ಉಪಾನದ್ಗೂಢಪಾದಸ್ಯ ನನು ಚರ್ಮಾಸ್ತೃತೇವ ಭೂಃ ॥ ೪೮ ॥
ಸಂತೋಷಾಮೃತತೃಪ್ತಾನಾಂ ಯತ್ಸುಖಂ ಶಾಂತಚೇತಸಾಂ ।
ಕುತಸ್ತದ್ಧನಲುಬ್ಧಾನಾಮಿತಶ್ಚೇತಶ್ಚ ಧಾವತಾಂ ॥ ೪೯ ॥

---

೪೪. ಸೂಜಿಯು ನೂಲನ್ನು ವಸ್ತ್ರದಲ್ಲಿ ಸಂಚಾರಮಾಡಿಸುವಂತೆ ಈ ಆತ್ಮನು ಆಶೆಯಿಂದ ಸಂಸಾರ ಸೂತ್ರವನ್ನು ಒಯ್ಯುವನು.

೪೫. ಪಶುವಿನ ಕೊಂಬು ಬೆಳೆಯುತ್ತಿರುವ ಶರೀರದೊಡನೆ ಬೆಳೆಯುವಂತೆ ಆಶೆಯೂ ವೃದ್ಧಿಗೊಳ್ಳುತ್ತಿರುವ ದ್ರವ್ಯದೊಡನೆ ಹೆಚ್ಚುವುದು.

೪೬. ಆಶೆಯು ಪಾರವಿಲ್ಲದಿರುವುದೂ, ಪೂರ್ತಿಗೊಳಿಸಲಶಕ್ಯವೂ, ಅನೇಕ ದುಃಖವನ್ನುಂಟುಮಾಡುವುದೂ, ಅಧರ್ಮಭೂಯಿಷ್ಠವೂ ಆಗಿರುವುದು. ಆದ್ದರಿಂದ ಆ ಆಶೆಯನ್ನು ತ್ಯಜಿಸಬೇಕು.

೪೭. ಗೌತಮನು ಹೇಳುತ್ತಾನೆ:—ಫಲವನ್ನು ತ್ಯಜಿಸಿ ಸಂತುಷ್ಟನಾಗಿರುವ ನನ್ನು ಯಾರು ಚಂಚಲನನ್ನಾಗಿ ಮಾಡುವರು? ದ್ವಿಜರೆ! ಎಲ್ಲರೂ ಇಂದ್ರಿಯ ಚಾಪಲ್ಯದಿಂದ ದುಃಖಗೊಳ್ಳುವರು.

೪೮. ಸಂತೋಷಗೊಂಡ ಮನಸ್ಸುಳ್ಳವನಿಗೆ ಎಲ್ಲೆಡೆಯಲ್ಲಿಯೂ ಸಂಪತ್ತುಗಳು ಕಾಣಿಸುವುವು. ಪಾದರಕ್ಷೆಯಿಂದ ಮುಚ್ಚಿದ ಪಾದವುಳ್ಳವನಿಗೆ ಭೂಮಿಯು ಚರ್ಮದಿಂದ ಮುಚ್ಚಿರುವಂತೆಯೇ ಕಾಣಿಸುವುದು.

೪೯. ಸಂತೋಷವೆಂಬ ಅಮೃತದಿಂದ ತೃಪ್ತಿಗೊಂಡ ಶಾಂತಮಾನಸರಿಗೆ ಉಂಟಾಗುವ ಸುಖವು ಧನದಲ್ಲಿ ಆಶೆಯುಳ್ಳ ಇಲ್ಲಿ ಅಲ್ಲಿ ಓಡುತ್ತಿರುವ ಜನರಿಗೆ ಎಲ್ಲಿಂದಾಗುವುದು?

ಅಸಂತೋಷಃ ಪರಂ ದುಃಖಂ ಸಂತೋಷಃ ಪರಮಂ ಸುಖಂ ।
ಸುಖಾರ್ಥೀ ಪುರುಷಸ್ತಸ್ಮಾತ್ಸಂತುಷ್ಟಃ ಸತತಂ ಭವೇತ್ ॥ ೫೦ ॥

ವಿಶ್ವಾಮಿತ್ರ ಉವಾಚ :—

ಕಾಮಂ ಕಾಮಯಮಾನಸ್ಯ ಯದಿ ಕಾಮಃ ಸ ಸಿಧ್ಯತಿ ।
ತಥಾಽನ್ಯೋ ಜಾಯತೇ ಪುಂಸಸ್ತತ್ಕ್ಷಣಾದೇವ ಕಲ್ಪಿತಃ ॥ ೫೧ ॥
ನ ಜಾತು ಕಾಮೀ ಕಾಮಾನಾಂ ಸಹಸ್ರೈರಪಿ ತುಷ್ಯತಿ ।
ಹವಿಷಾ ಕೃಷ್ಣವರ್ತ್ಮೇವ ವಾಂಛಾ ತಸ್ಯ ವಿವರ್ಧತೇ ॥ ೫೨ ॥
ಕಾಮಾನಭಿಲಷನ್ಮೋಹಾನ್ನ ನರಃ ಸುಖಮಾಪ್ನುಯಾತ್ ।
ಶ್ಯೇನಾಲಯತರುಚ್ಛಾಯಾಂ ವ್ರಜನ್ನಿವ ಕಪಿಂಜಲಃ ॥ ೫೩ ॥
ನಿತ್ಯಂ ಸಾಗರಪರ್ಯಂತಾಂ ಯೋ ಭುಙ್ಕ್ತೇ ಪೃಥಿವೀಮಿಮಾಂ ।
ತುಲ್ಯಾಽಶ್ಮಕಾಂಚನಶ್ಚೈವ ಸ ಕೃತಾರ್ಥೋ ಮಹೀಪತೇಃ ॥ ೫೪ ॥

ಜಮದಗ್ನಿರುವಾಚ :—

ಯೋಽರ್ಥಂ ಪ್ರಾಪ್ಯಾಽಧನೋ ವಿಪ್ರಃ ಶೋಚಿತವ್ಯೋಽಪಿ ಹೃಷ್ಯತಿ ।
ನ ಚ ಪಶ್ಯತಿ ಮಂದಾತ್ಮಾ ನರಕಂ ಚಾಽಕುತೋಭಯಃ ॥ ೫೫ ॥

---

೫೦. ಸಂತೋಷವಿಲ್ಲದಿರುವುದು ಅತಿಶಯದುಃಖವು. ಸಂತೋಷವೇ ಅತಿಶಯಸುಖವು. ಆದ್ದರಿಂದ ಸುಖವನ್ನು ಬಯಸುವ ನರನು ಯಾವಾಗಲೂ ಸಂತುಷ್ಟನಾಗಿರಬೇಕು.

೫೧. ವಿಶ್ವಾಮಿತ್ರನು ಹೇಳುತ್ತಾನೆ:—ಕಾಮವನ್ನು ಅಪೇಕ್ಷಿಸುತ್ತಿರುವವನಿಗೆ ಆ ಕಾಮವು ಸಿದ್ಧಿಸುವುದಾದರೆ ಆಲೋಚಿಸಿದ ಇತರ ಅಪೇಕ್ಷೆಯೂ ಕೂಡಲೆ ಉಂಟಾದೀತು.

೫೨. ಕಾಮಿಯು ಅನೇಕ ಕಾಮಗಳಿಂದ ಒಂದು ಸಾರಿಯೂ ಸಂತುಷ್ಟನಾಗುವುದಿಲ್ಲ. ಅವನ ಇಚ್ಛೆಯು ಹವಿಸ್ಸಿನಿಂದ ಬೆಂಕಿಯು ವೃದ್ಧಿಯಾಗುವಂತೆ ಹೆಚ್ಚುವುದು.

೫೩. ಮೋಹದಿಂದ ಕಾಮವನ್ನು ಇಚ್ಛಿಸುವ ಮಾನವನು ಗಿಡಗನ ಗೂಡಿರುವ ಮರದ ನೆರಳನ್ನಾಶ್ರಯಿಸುವ ಕಪಿಂಜಲಪಕ್ಷಿಯಂತೆ ಸುಖವನ್ನು ಪಡೆಯುವುದಿಲ್ಲ.

೫೪. ಕಲ್ಲು ಚಿನ್ನಗಳು ಸಮಾನವಾದುವೆಂದು ತಿಳಿದ ಮಾನವನು ಸಮುದ್ರಗಳವರೆಗಿನ ಭೂಮಿಯನ್ನು ಅನುಭವಿಸುವ ರಾಜನಿಗಿಂತ ಕೃತಾರ್ಥನಾಗಿರುವನು.

೫೫. ಜಮದಗ್ನಿಯು ಹೇಳುತ್ತಾನೆ:—ದ್ರವ್ಯವನ್ನು ಪಡೆದು ದುಃಖಿಸಬೇಕಾಗಿದ್ದರೂ ಸಂತೋಷಗೊಳ್ಳುವ ಮೂಢನು ನಿರ್ಭಯನಾಗಿ ನರಕವನ್ನೂ ಲೆಕ್ಕಿಸುವುದಿಲ್ಲ.

ಪ್ರತಿಗ್ರಹಸಮರ್ಥಾನಾಂ ನಿವೃತ್ತಾನಾಂ ಪ್ರತಿಗ್ರಹಾತ್ ।
ಯ ಏವ ದದತಾಂ ಲೋಕಾಸ್ತ ಏವಾಪ್ರತಿಗೃಹ್ಣತಾಂ ॥ ೫೬ ॥

ಅರುಂಧತ್ಯುವಾಚ :—

ಬಿಸತಂತುರ್ಯಥಾಽನಂತೋ ನಾಲಮಾಸಾದ್ಯ ಸಂಸ್ಥಿತಃ ।
ತೃಷ್ಣಾ ಚೈವಮನಾದ್ಯಂತಾ ಸ್ಥಿತಾ ದೇಹೇ ಶರೀರಿಣಾಂ ॥ ೫೭ ॥
ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।
ಯಾಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಂ॥ ೫೮ ॥

ಚಂಡೋವಾಚ :—

ಸರ್ಪಾದಿವದ್ಧನಾದ್ಯಸ್ಮಾದ್ಬಿಭ್ಯತೀಮೇ ಮಮೇಶ್ವರಾಃ ।
ಯತಸ್ತತೋ ವಿಶೇಷೇಣ ಕಸ್ಮಾತ್ತಸ್ಮಾದ್ಭಯಂ ಮಮ ॥ ೫೯ ॥

ಪಶುಮುಖ ಉವಾಚ :—

ಯದಾಚರಂತಿ ವಿದ್ವಾಂಸಃ ಸದಾ ಧರ್ಮಪರಾಯಣಾಃ ।
ತದೇವ ವಿದುಷಾ ಕಾರ್ಯಮಾತ್ಮನೋ ಹಿತಮಿಚ್ಛತಾ ॥ ೬೦ ॥

ಸೂತ ಉವಾಚ :—

ಇತ್ಯುಕ್ತ್ವಾ ಹೇಮಗರ್ಭಾಣಿ ತ್ಯಕ್ತ್ವಾ ತಾನಿ ಫಲಾನಿ ಚ ।
ಋಷಯೋ ಜಗ್ಮುರನ್ಯತ್ರ ಸರ್ವ ಏವ ದೃಢವ್ರತಾಃ ॥ ೬೧ ॥

---

೫೬. ಪ್ರತಿಗ್ರಹದಲ್ಲಿ ಸಮರ್ಥರಾಗಿ ಪ್ರತಿಗ್ರಹಮಾಡದಿರುವ ಮಾನವರಿಗೂ ದಾನಮಾಡುವವರಿಗೂ ಒಂದೇ ಲೋಕವು ಲಭಿಸುವುದು.

೫೭. ಅರುಂಧತಿಯು ಹೇಳುತ್ತಾಳೆ:—ಮಿತಿಯಿಲ್ಲದ ನೂಲುಗಳು ತಾವರೆ ದಂಟನಲ್ಲಿರುವಂತೆ ಆದ್ಯಂತವಿಲ್ಲದ ಆಶೆಯು ಮಾನವರ ಶರೀರದಲ್ಲಿರುವುದು.

೫೮. ದುರ್ಬುದ್ಧಿಗೆ ಬಿಡಲಾಗದಿರುವುದೂ, ಮುದುಕನಾದರೂ ಮುದಿಯಾಗದೆ ಇರುವುದೂ, ಪ್ರಾಣಾಂತಿಕ ರೋಗವೂ ಆದ ಈ ತೃಷ್ಣೆಯನ್ನು ತ್ಯಜಿಸುವವನಿಗೆ ಸುಖವುಂಟಾಗುವುದು.

೫೯. ಚಂಡೆಯು ಹೇಳುತ್ತಾಳೆ:—ನನಗೆ ಪ್ರಭುಗಳಾದ ಈ ಮುನಿಗಳು ಸರ್ಪದಿಂದ ಭಯಪಡುವಂತೆ ಧನದಿಂದ ಹೆದರುತ್ತಿರುವುದರಿಂದ ನನಗೆ ಆ ದ್ರವ್ಯದಿಂದ ಭಯವುಂಟಾಗಿದೆ.

೬೦. ಪಶುಮುಖನು ಹೇಳುತ್ತಾನೆ:—ಯಾವಾಗಲೂ ಧರ್ಮನಿರತರಾದ ವಿದ್ವಾಂಸರು ಆಚರಿಸುವುದನ್ನೇ ತನಗೆ ಹಿತವನ್ನು ಬಯಸುವ ಇತರ ಮಾನವನೂ ಆಚರಿಸಬೇಕು.

೬೧. ಸೂತನು ಹೇಳುತ್ತಾನೆ:—ಸ್ಥಿರವ್ರತರಾದ ಆ ಮುನಿಗಳೆಲ್ಲ ಹೀಗೆ ಹೇಳಿ ಆ ಫಲಗಳನ್ನು ತ್ಯಜಿಸಿ ಬೇರೆ ಕಡೆಗೆ ಹೋದರು.

ಚಮತ್ಕಾರಪುರೇ ಕ್ಷೇತ್ರೇ ವಿವಿಶುಸ್ತೇ ತತಃ ಪರಂ ।
ದದೃಶುಃ ಸಹಸಾ ಪ್ರಾಪ್ತಂ ಪರಿವ್ರಾಜಂ ಶುನೋಮುಖಂ ॥ ೬೨ ॥
ತೇನೈವ ಸಹಿತಾಸ್ತತ್ರ ಗತ್ವಾ ಕಿಂಚಿದ್ವನಾಂತರಂ ।
ದೃಷ್ಟವಂತಸ್ತತೋ ಹೃದ್ಯಂ ಸರಃ ಪಂಕಜಶೋಭಿತಂ ॥ ೬೩ ॥
ತತೋ ಬುಭುಕ್ಷಯಾವಿಷ್ಟಾ ಬಿಸಾನ್ಯಾದಾಯ ಭೂರಿಶಃ ।
ತೀರೇ ನಿಕ್ಷಿಪ್ಯ ಸರಸಶ್ಚಕ್ರುಃ ಪುಣ್ಯಾಂ ಜಲಕ್ರಿಯಾಂ ॥ ೬೪ ॥
ಅಥೋತ್ತೀರ್ಯ ಜಲಾತ್ಸರ್ವೇ ತೇ ಸಮೇತ್ಯ ಪರಸ್ಪರಂ ।
ಬಿಸಾನಿ ತಾನ್ಯಪಶ್ಯಂತ ಇದಂ ವಚನಮಬ್ರುವನ್ ॥ ೬೫ ॥

ಋಷಯ ಊಚುಃ:—

ಕೇನ ಕ್ಷುಧಾಭಿತಪ್ತಾನಾಮಸ್ಮಾಕಂ ನಿರ್ದಯಾತ್ಮನಾ ।
ಮೃಣಾಲಾನಿ ಸಮಸ್ತಾನಿ ಸ್ಥಾನಾದಸ್ಮಾದ್ಧೃತಾನಿ ಚ ॥ ೬೬ ॥
ತೇ ಶಂಕಮಾನಾ ಅನ್ಯೋನ್ಯಮೃಷಯಃ ಶಂಸಿತವ್ರತಾಃ ।
ಪ್ರಚಕ್ರುಃ ಶಪಥಾನ್ರೌದ್ರಾನಾತ್ಮನಃ ಪ್ರವಿಶುದ್ಧಯೇ ॥ ೬೭ ॥

ಕಶ್ಯಪ ಉವಾಚ:—

ಸರ್ವಭಕ್ಷಃ ಸದಾ ಸೋಽಸ್ತು ನ್ಯಾಸಲೋಭಂ ಕರೋತು ವಾ ।
ಕೂಟಸಾಕ್ಷಿತ್ವಮಭ್ಯೇತು ಬಿಸಸ್ತೈನ್ಯಂ ಕರೋತಿ ಯಃ ॥ ೬೮ ॥

---

೬೨. ಅನಂತರ ಅವರು ಚಮತ್ಕಾರಪುರಕ್ಷೇತ್ರಕ್ಕೆ ಹೋಗಿ ಕೂಡಲೆ ಸಮೀಪಕ್ಕೆ ಬಂದ ನಾಯಿಯ ಮುಖವುಳ್ಳ ಸನ್ಯಾಸಿಯನ್ನು ಕಂಡರು.

೬೩. ಅವರು ಆ ಸನ್ಯಾಸಿಯೊಡನೆ ಒಂದು ಕಾಡಿನ ಮಧ್ಯವನ್ನು ಸೇರಿ ಕಮಲದಿಂದ ವಿರಾಜಿಸುವ ಮನೋಹರವಾದ ಒಂದು ಸರೋವರವನ್ನು ಕಂಡರು.

೬೪. ಅನಂತರ ಹಸಿದ ಅವರು ಬಹುವಾಗಿ ಹಸಿ ತಾವರೆದಂಟುಗಳನ್ನು ಕಿತ್ತು ದಡದಲ್ಲಿಟ್ಟು ಸ್ನಾನ ಸಂಧ್ಯಾವಂದನೆ ಮೊದಲಾದುವುಗಳನ್ನಾಚರಿಸಿದರು.

೬೫. ತರುವಾಯ ಅವರೆಲ್ಲ ನೀರಿನಿಂದ ಮೇಲಕ್ಕೆದ್ದು ಪರಸ್ಪರ ಒಟ್ಟಿಗೆ ಸೇರಿ ಆ ತಾವರೆದಂಟುಗಳನ್ನು ಅಲ್ಲಿ ಕಾಣದೆ ಇಂತೆಂದರು.

೬೬. ಋಷಿಗಳು ಹೇಳುತ್ತಾರೆ:—ಹಸಿವುಗೊಂಡ ನಮ್ಮ ಈ ಸ್ಥಳದಲ್ಲಿಟ್ಟಿದ್ದ ತಾವರೆದಂಟುಗಳನ್ನು ನಿರ್ದಯನಾದ ಯಾವನು ಅಪಹರಿಸಿದನು?

೬೭. ಶ್ಲಾಘ್ಯವ್ರತರಾದ ಆ ಮುನಿಗಳು ಪರಸ್ಪರವಾಗಿ ಶಂಕಿಸುತ್ತ ತಮ್ಮ ಶುದ್ಧಿಗಾಗಿ ಭಯಂಕರ ಶಪಥವನ್ನು ಮಾಡಿದರು.

೬೮. ಕಶ್ಯಪನು ಹೇಳುತ್ತಾನೆ:—ಈ ತಾವರೆದಂಟುಗಳನ್ನು ಕದ್ದವನು ಸರ್ವಭಕ್ಷನೂ, ನ್ಯಾಸದಲ್ಲಿ ಲೋಭವುಳ್ಳವನೂ, ಸುಳ್ಳುಸಾಕ್ಷಿ ಹೇಳಿದವನೂ ಆಗಲಿ.

ಧರ್ಮಂ ಕರೋತು ದಂಭೇನ ರಾಜಾನಂ ಚೋಪಸೇವತಾಂ ।
ಮಧುಮಾಂಸಂ ಸದಾಽಶ್ನಾತು ಬಿಸಸ್ತ್ರೈನ್ಯಂ ಕರೋತಿ ಯಃ ॥ ೧೯ ॥
ವಸಿಷ್ಠ ಉವಾಚ :—
ಅನೃತೌ ಮೈಥುನಂ ಯಾತು ದಿವಾ ವಾಽಪ್ಯಥ ಪರ್ವಣಿ ।
ಅತಿಥಿಃ ಸ್ಯಾತ್ತತೋಽನ್ಯೋಽಸ್ಯಂ ಬಿಸಸ್ತ್ರೈನ್ಯಂ ಕರೋತಿ ಯಃ ॥ ೨೦ ॥
ಭರದ್ವಾಜ ಉವಾಚ :—
ಯೋಽಧಿಗಮ್ಯ ಗುರೋಃ ಶಾಸ್ತ್ರಂ ನಿಷ್ಕ್ರಯಂ ನ ಪ್ರಯಚ್ಛತಿ ।
ತಸ್ಯೈನಸಾ ಸ ಯುಕ್ತೋಽಸ್ತು ಬಿಸಸ್ತ್ರೈನ್ಯಂ ಕರೋತಿ ಯಃ ॥ ೨೧ ॥
ನೃಶಂಸೋಽಸ್ತು ಸ ಸರ್ವತ್ರ ಸಮೃದ್ಧ್ಯಾ ಚಾಽಪ್ಯಹಂಕೃತಃ ।
ಮತ್ಸರೀ ಪಿಶುನಶ್ಚೈವ ಬಿಸಸ್ತ್ರೈನ್ಯಂ ಕರೋತಿ ಯಃ ॥ ೨೨ ॥
ವಿಶ್ವಾಮಿತ್ರ ಉವಾಚ :—
ಏಕಾಕೀ ಮೃಷ್ಟಮಶ್ನಾತು ಪ್ರಶಂಸ್ಯಾದಥಚಾತ್ಮನಃ ।
ವೇದವಿಕ್ರಯಕರ್ತಾಽಸ್ತು ಬಿಸಸ್ತ್ರೈನ್ಯಂ ಕರೋತಿ ಯಃ ॥ ೨೩ ॥
ಜಮದಗ್ನಿರುವಾಚ :—
ಕನ್ಯಾಂ ಯಚ್ಛತು ವೃದ್ಧಾಯ ಸ ಭೂಯಾದ್ವೃಷಲೀಪತಿಃ ।
ಅಸ್ತು ವಾರ್ಧುಷಿಕೋ ನಿತ್ಯಂ ಬಿಸಸ್ತ್ರೈನ್ಯಂ ಕರೋತಿ ಯಃ ॥ ೨೪ ॥

---

೧೯. ದಂಭದಿಂದ ಧರ್ಮವನ್ನಾಚರಿಸಲಿ. ರಾಜನನ್ನು ಸೇವಿಸಲಿ. ಮದ್ಯ ಮಾಂಸವನ್ನು ಯಾವಾಗಲೂ ಭುಂಜಿಸಲಿ.

೨೦. ವಸಿಷ್ಠನು ಹೇಳುತ್ತಾನೆ:—ಋತು ಭಿನ್ನಕಾಲದಲ್ಲಿಯೂ, ಹಗಲಿನಲ್ಲಿಯೂ, ಪರ್ವಕಾಲದಲ್ಲಿಯೂ ಮೈಥುನವನ್ನು ಮಾಡಲಿ. ಪರಸ್ಪರಾತಿಥಿಗಳಾಗಲಿ.

೨೧–೨೨. ಭರದ್ವಾಜನು ಹೇಳುತ್ತಾನೆ:—ತಾವರೆದಂಟುಗಳನ್ನು ಕದ್ದವನು ಗುರುವಿನಿಂದ ಶಾಸ್ತ್ರವನ್ನು ಓದಿ ಪ್ರತೀಕಾರಮಾಡದವನ ಪಾಪದಿಂದ ಸಹಿತನಾಗಲಿ. ಈ ತಾವರೆ ದಂಟನ್ನು ಕದ್ದವನು ಎಲ್ಲೆಡೆಯಲ್ಲಿಯೂ ಘಾತುಕನೂ, ಸಂಪತ್ಸಮೃದ್ಧಿಯಿಂದ ಅಹಂಕಾರಗೊಂಡವನೂ, ಮಾತ್ಸರ್ಯವುಳ್ಳವನೂ, ಚಾಡಿಹೇಳುವವನೂ ಆಗಲಿ.

೨೩. ವಿಶ್ವಾಮಿತ್ರನು ಹೇಳುತ್ತಾನೆ:—ತಾವರೆದಂಟುಗಳನ್ನು ಕದ್ದವನು ಒಬ್ಬಂಟಿಗನಾಗಿ ರುಚಿಯಾದ ಪದಾರ್ಥವನ್ನು ತಿಂದವನೂ, ಆತ್ಮಶ್ಲಾಘಿಯೂ, ವೇದವನ್ನು ವಿಕ್ರಯಿಸಿದವನೂ ಆಗಲಿ.

೨೪. ಜಮದಗ್ನಿಯು ಹೇಳುತ್ತಾನೆ:—ತಾವರೆದಂಟುಗಳನ್ನು ಕದ್ದವನು ವೃದ್ಧನಿಗೆ ಕನ್ಯಾದಾನಮಾಡಿದವನೂ, ವೃಷಲೀಪತಿಯೂ, ನಿತ್ಯವೂ ಬಡ್ಡಿಯಿಂದ ಜೀವಿಸುವವನೂ ಆಗಲಿ.

ಗೌತಮ ಉವಾಚ :—

ಸ ಗೃಹ್ಣಾತ್ವನಿಕಾದಾನಂ ಕರೋತು ಹಯವಿಕ್ರಯಂ ।
ಪ್ರಕರೋತು ಗುರೋರ್ನಿಂದಾಂ ಬಿಸಸ್ತೈನ್ಯಂ ಕರೋತಿ ಯಃ ॥ ೭೫ ॥

ಅತ್ರಿರುವಾಚ :—

ಮಾತರಂ ಪಿತರಂ ನಿತ್ಯಂ ದುರ್ಮತಿಃ ಸೋಽವಮನ್ಯತಾಂ ।
ಶೂದ್ರಂ ಪೃಚ್ಛತು ಧರ್ಮಾರ್ಥಂ ಬಿಸಸ್ತೈನ್ಯಂ ಕರೋತಿ ಯಃ ॥ ೭೬ ॥
ಪ್ರತಿಶ್ರುತ್ಯ ನ ಯೋ ದದ್ಯಾದ್ಬ್ರಾಹ್ಮಣಾಯ ಗವಾದಿಕಂ ।
ತಸ್ಯೈನಸಾ ಸ ಯುಜ್ಯೇತ ಬಿಸಸ್ತೈನ್ಯಂ ಕರೋತಿ ಯಃ ॥ ೭೭ ॥

ಅರುಂಧತ್ಯುವಾಚ :—

ಕರೋತು ಪತ್ಯುಃ ಪೂರ್ವಂ ಸಾ ಭೋಜನಂ ಶಯನಂ ತಥಾ ।
ನಾರೀ ದುಷ್ಟಸಮಾಚಾರಾ ಬಿಸಸ್ತೈನ್ಯಂ ಕರೋತಿ ಯಾ ॥ ೭೮ ॥

ಚಂಡೋವಾಚ :—

ಸ್ವಾಮಿನಃ ಪ್ರತಿಕೂಲಾಸ್ತು ಧರ್ಮದ್ವೇಷಂ ಕರೋತು ಚ ।
ಸಾಧುದ್ವೇಷಪರಾ ಚೈವ ಬಿಸಸ್ತೈನ್ಯಂ ಕರೋತಿ ಯಾ ॥ ೭೯ ॥

ಪಶುಮುಖ ಉವಾಚ :—

ಸ್ವಾಮಿದ್ರೋಹರತೋ ನಿತ್ಯಂ ಸ ಭೂಯಾತ್ಪಾಪಕೃನ್ನರಃ ।
ಸಾಧುದ್ವೇಷಪರಶ್ಚೈವ ಬಿಸಸ್ತೈನ್ಯಂ ಕರೋತಿ ಯಃ ॥ ೮೦ ॥

---

೭೫. ಗೌತಮನು ಹೇಳುತ್ತಾನೆ:—ತಾವರೆದಂಟುಗಳನ್ನು ಕದ್ದವನು ಕುರಿಯ ದಾನವನ್ನು ತೆಗೆದುಕೊಳ್ಳಲಿ. ಕುದುರೆಯನ್ನು ಮಾರಲಿ. ಗುರುವನ್ನು ನಿಂದಿಸಲಿ.

೭೬. ಅತ್ರಿಯು ಹೇಳುತ್ತಾನೆ:—ತಾವರೆ ದಂಟುಗಳನ್ನು ಕದ್ದ ದುಷ್ಟನು ನಿತ್ಯವೂ ತಾಯಿ ತಂದೆಗಳನ್ನು ಅವಮಾನಮಾಡಲಿ. ಧರ್ಮದ ಅರ್ಥವನ್ನು ಶೂದ್ರನಲ್ಲಿ ಕೇಳಲಿ.

೭೭. ಬ್ರಾಹ್ಮಣನಿಗೆ ಗೋವು ಮೊದಲಾದುವುಗಳನ್ನು ಕೊಡುವುದಾಗಿ ಪ್ರತಿಜ್ಞೆಮಾಡಿ ಹಾಗೆ ಕೊಡದವನ ಪಾಪದಿಂದ ಸಹಿತನಾಗಲಿ.

೭೮. ಅರುಂಧತಿಯು ಹೇಳುತ್ತಾಳೆ:—ತಾವರೆದಂಟನ್ನು ಕದ್ದ ದುರ್ನಡತೆಯುಳ್ಳ ಹೆಂಗಸು ಗಂಡನಿಗಿಂತ ಮೊದಲೆ ಭೋಜನಶಯನಗಳನ್ನು ಮಾಡಲಿ.

೭೯. ಚಂಡೆಯು ಹೇಳುತ್ತಾಳೆ:—ತಾವರೆದಂಟುಗಳನ್ನು ಕದ್ದವಳು ಯಜಮಾನನಿಗೆ ವಿರುದ್ಧಳೂ, ಧರ್ಮ ಮತ್ತು ಸಾಧುಗಳನ್ನು ದ್ವೇಷಿಸುವವಳೂ ಆಗಲಿ.

೮೦. ಪಶುಮುಖನು ಹೇಳುತ್ತಾನೆ:—ತಾವರೆ ದಂಟುಗಳನ್ನು ಕದ್ದ ಪಾಪಿಯು ಯಾವಾಗಲೂ ಸ್ವಾಮಿದ್ರೋಹದಲ್ಲಿ ನಿರತನೂ, ಸಾಧುಗಳನ್ನು ದ್ವೇಷಿಸುವವನೂ ಆಗಲಿ.

ಶುನೋಮುಖ ಉವಾಚ :—

ವೇದಾನ್ ಸ ಪಠತು ನ್ಯಾಯಾದ್ಗೃಹಸ್ಥಃ ಸ್ಯಾತ್ರಿಯಾತಿಥಿಃ ।
ಸತ್ಯಂ ವದತು ಚಾಽಜಸ್ರಂ ಬಿಸಸ್ತೈನ್ಯಂ ಕರೋತಿ ಯಃ ॥ ೮೧ ॥

ಋಷಯ ಊಚುಃ :—

ಇಷ್ಟ ಏವ ದ್ವಿಜಾತೀನಾಂ ಯಸ್ತ್ವಯಾ ಶಪಥಃ ಕೃತಃ ।
ಬಿಸಸ್ತೈನ್ಯಂ ಹಿ ಚಾಽಸ್ಮಾಕಂ ತನ್ನೂನಂ ಭವತಾ ಕೃತಂ ॥ ೮೨ ॥

ಶುನೋಮುಖ ಉವಾಚ :—

ಮಯಾ ಹೃತಾನಿ ಸರ್ವೇಷಾಂ ಬಿಸಾನೀಮಾನಿ ವೋ ದ್ವಿಜಾಃ ।
ಧರ್ಮಾನ್ವೈ ಶ್ರೋತುಕಾಮೇನ ಮಾಂ ಜಾನೀತ ಪುರಂದರಂ ॥ ೮೩ ॥
ಯುಷ್ಮಾಕಂ ಪರಿತುಷ್ಟೋಽಸ್ಮಿ ಲೋಭಾಽಭಾವಾದ್ದ್ವಿಜೋತ್ತಮಾಃ ।
ತಸ್ಮಾತ್ಸ್ವರ್ಗಂ ಮಯಾ ಸಾರ್ಧಂ ಶೀಘ್ರಮಾಗಮ್ಯತಾಮಿತಿ ॥ ೮೪ ॥

ಋಷಯ ಊಚುಃ :—

ಮೋಕ್ಷಮಾರ್ಗಂ ಸಮಾಸಕ್ತಾ ನ ವಯಂ ಸ್ವರ್ಗಲಿಪ್ಸವಃ ।
ತಸ್ಮಾತ್ತಪಶ್ಚರಿಷ್ಯಾಮಃ ಸರಸೀಹ ವಿಮುಕ್ತಯೇ ॥ ೮೫ ॥
ಪೂರ್ಣಾಂ ಸಾಗರಪರ್ಯಂತಾಂ ಚರಿತ್ವಾ ಪೃಥಿವೀಮಿಮಾಂ ।
ಪ್ರಾಣಯಾತ್ರಾಂ ಪ್ರಕುರ್ವಾಣಾ ಮೃಣಾಲೈರ್ಮುನಿಸತ್ತಮಾಃ ।
ತಸ್ಮಾದ್ಗಚ್ಛ ತವ ಶ್ರೇಯೋ ಭೂಯಾದಸ್ಮಾತ್ಸಮಾಗಮಾತ್ ॥ ೮೬ ॥

---

೮೧. ಶುನೋಮುಖನು ಹೇಳುತ್ತಾನೆ:—ಬಿಸವನ್ನು ಕದ್ದವನು ನ್ಯಾಯ ರೀತಿಯಿಂದ ವೇದಗಳನ್ನು ಪಠಿಸುವವನೂ, ಪ್ರಿಯರಾದ ಅತಿಥಿಗಳುಳ್ಳ ಗೃಹಸ್ಥನೂ, ಯಾವಾಗಲೂ ಸತ್ಯವನ್ನು ಹೇಳುವವನೂ ಆಗಲಿ.

೮೨. ಋಷಿಗಳು ಹೇಳುತ್ತಾರೆ:—ನೀನು ಮಾಡಿರುವ ಶಪಥವು ಬ್ರಾಹ್ಮಣರಿಗೆ ಇಷ್ಟವಾದುದೇ. ಆದ್ದರಿಂದ ನೀನು ನಿಶ್ಚಯವಾಗಿಯೂ ತಾವರೆ ದಂಟುಗಳನ್ನು ಕದ್ದಿರುವೆ.

೮೩. ಶುನೋಮುಖನು ಹೇಳುತ್ತಾನೆ:—ದ್ವಿಜರೆ! ನಾನು ಧರ್ಮವನ್ನು ಕೇಳಲಪೇಕ್ಷೆಯಿಂದ ನಿಮ್ಮೆಲ್ಲರ ತಾವರೆ ದಂಟುಗಳನ್ನು ಅಪಹರಿಸಿರುವೆನು. ನನ್ನನ್ನು ಇಂದ್ರನನ್ನಾಗಿ ತಿಳಿಯಿರಿ.

೮೪. ದ್ವಿಜವರ್ಯರೆ! ನಿಮಗೆ ಆಶೆಯಿಲ್ಲದಿರುವುದರಿಂದ ನಾನು ಸಂತುಷ್ಟನಾಗಿದ್ದೇನೆ. ಆದ್ದರಿಂದ ನೀವು ಬೇಗನೆ ನನ್ನೊಡನೆ ಸ್ವರ್ಗಕ್ಕೆ ಬನ್ನಿರಿ.

೮೫—೮೬. ಋಷಿಗಳು ಹೇಳುತ್ತಾರೆ:—ಮೋಕ್ಷಮಾರ್ಗದಲ್ಲಿ ಆಸಕ್ತರಾದ ನಾವು ಸ್ವರ್ಗವನ್ನು ಬಯಸುವುದಿಲ್ಲ. ಆದ್ದರಿಂದ ತಾವರೆ ದಂಟುಗಳಿಂದ ಜೀವಿಸುತ್ತ ಸಮಗ್ರಭೂಮಿಯಲ್ಲಿ ಸಂಚರಿಸಿ ಮುಕ್ತಿಗಾಗಿ ಈ ಸರೋವರದಲ್ಲಿ ತಪಸ್ಸನ್ನು ಆಚರಿಸುವೆವು. ಈ ಸಮಾಗಮದಿಂದ ನಿನಗೆ ಶ್ರೇಯಸ್ಸಾಗಲಿ, ಹೊರಡು.

ಶಕ್ರ ಉವಾಚ :—

ನ ವೃಥಾ ದರ್ಶನಂ ಮೇ ಸ್ಯಾತ್ಕದಾಚಿದಪಿ ಸುವ್ರತಾಃ ।
ತಸ್ಮಾದ್ಗೃಹ್ಣೀತ ಯಚ್ಚಿತ್ತೇ ಸದಾಽಭೀಷ್ಟಂ ವ್ಯವಸ್ಥಿತಂ ॥ ೮೭ ॥

ಋಷಯ ಊಚುಃ :—

ಆಶ್ರಮೋಽಯಂ ಸುವಿಖ್ಯಾತೋ ಭೂಯಾಚ್ಛಕ್ರ ಮಹೀತಲೇ ।
ನಾಮ್ನಾಽಸ್ಮಾಕಂ ತಥಾ ನೃಣಾಂ ಸರ್ವಪಾತಕ ನಾಶನಃ ॥ ೮೮ ॥
ವಯಂ ಸ್ಥಾಸ್ಯಾಮಹೇ ನಿತ್ಯಮತ್ರೈವ ಸುರಸತ್ತಮ ।
ತಪೋಽರ್ಥಂ ಭಾವಿತಾತ್ಮಾನೋ ಯಾವನ್ಮೋಕ್ಷಗತಿರ್ಧ್ರುವಾ ॥ ೮೯ ॥

ಇಂದ್ರ ಉವಾಚ :—

ತ್ರೈಲೋಕ್ಯೇಽಪಿ ಸುವಿಖ್ಯಾತ ಆಶ್ರಮೋ ವೋ ಭವಿಷ್ಯತಿ ।
ತಥಾ ಕಾಮಪ್ರದಶ್ಚೈವ ಲೋಕಾನಾಂ ಸಂಭವಿಷ್ಯತಿ ॥ ೯೦ ॥
ಯೋ ಯಂ ಕಾಮಮಭಿಧ್ಯಾಯ ಶ್ರಾದ್ಧಮತ್ರ ಕರಿಷ್ಯತಿ ।
ಶ್ರಾವಣೇ ಪೌರ್ಣಮಾಸ್ಯಾಂ ಚ ಸ ತಂ ಸರ್ವಮವಾಪ್ಸ್ಯತಿ ॥ ೯೧ ॥
ನಿಷ್ಕಾಮೋ ವಾ ನರೋ ಯಸ್ತು ಶ್ರಾದ್ಧಂ ದಾನಮಥಾಽಪಿ ವಾ ।
ಪ್ರಕರಿಷ್ಯತಿ ಮೋಕ್ಷಂ ಸ ಸಮವಾಪ್ಸ್ಯತ್ಯಸಂಶಯಂ ॥ ೯೨ ॥

---

೮೭. ಇಂದ್ರನು ಹೇಳುತ್ತಾನೆ:—ವ್ರತಿಗಳೆ! ನನ್ನ ದರ್ಶನವು ಒಂದು ಸಾರಿಯೂ ವ್ಯರ್ಥವಾಗುವುದಿಲ್ಲ. ಆದ್ದರಿಂದ ನಿಮ್ಮ ಮನಸ್ಸಿನ ಇಷ್ಟಾರ್ಥವನ್ನು ಸ್ವೀಕರಿಸಿರಿ.

೮೮. ಋಷಿಗಳು ಹೇಳುತ್ತಾರೆ:—ಇಂದ್ರ! ಮಾನವರ ಸಕಲ ಪಾಪಗಳನ್ನು ನಿವಾರಿಸುವ ಈ ಆಶ್ರಮವು ಭೂಮಿಯಲ್ಲಿ ನಮ್ಮ ಹೆಸರಿನಿಂದ ಪ್ರಸಿದ್ಧವಾಗಲಿ.

೮೯. ನಾವು ಇಲ್ಲಿಯೇ ಯಾವಾಗಲೂ ಆತ್ಮಧ್ಯಾನನಿರತರಾಗಿ ಮೋಕ್ಷಪ್ರಾಪ್ತಿಯವರೆಗೆ ತಪಸ್ಸಿಗಾಗಿ ವಾಸಮಾಡುವೆವು.

೯೦. ಇಂದ್ರನು ಹೇಳುತ್ತಾನೆ:—ನಿಮ್ಮ ಆಶ್ರಮವು ಮೂರು ಲೋಕಗಳಲ್ಲಿ ಪ್ರಸಿದ್ಧವಾಗುವುದು. ಹಾಗೆಯೇ ಮಾನವರಿಗೆ ಇಷ್ಟಾರ್ಥವನ್ನು ನೀಡುವುದು.

೯೧. ಶ್ರಾವಣ ಶುದ್ಧ ಹುಣ್ಣಿಮೆ ದಿನ ಮಾನವನು ಯಾವ ಇಷ್ಟಾರ್ಥವನ್ನು ಚಿಂತಿಸಿ ಇಲ್ಲಿ ಶ್ರಾದ್ಧಮಾಡುವನೊ, ಅವನು ಅದನ್ನು ಸಂಪೂರ್ಣವಾಗಿ ಹೊಂದುವನು.

೯೨. ನರನು ನಿಷ್ಕಾಮನಾಗಿ ಶ್ರಾದ್ಧ ಅಥವಾ ದಾನಗಳನ್ನು ಇಲ್ಲಿ ಮಾಡಿದರೆ ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು.

ಯೇ ಚಾಽತ್ರ ದೇಹಂ ತ್ಯಕ್ಷ್ಯಂತಿ ಯುಷ್ಮಾಕಂ ಚಾಶ್ರಮೇ ಶುಭೇ ।
ಅಪಿ ಪಾಪಸಮಾಯುಕ್ತಾಸ್ತೇ ಯಾಸ್ಯಂತಿ ಪರಾಂ ಗತಿಂ ॥ ೯೩ ॥
ಇಂಗುದೈರ್ಬದರೈರ್ವಾಽಪಿ ಬಿಲ್ವೈರ್ಭಲ್ಲಾತಕೈರಪಿ ।
ಪಿತೄನುದ್ದಿಶ್ಯ ಯಃ ಶ್ರಾದ್ಧಂ ಕರಿಷ್ಯತಿ ಸಮಾಹಿತಃ ॥ ೯೪ ॥
ಸ ಯಾಸ್ಯತಿ ಪರಾಂ ಸಿದ್ಧಿಂ ದುರ್ಲಭಾಂ ತ್ರಿದಶೈರಪಿ ।
ಸರ್ವಪಾಪವಿನಿರ್ಮುಕ್ತಃ ಸ್ತೂಯಮಾನಶ್ಚ ಕಿನ್ನರೈಃ ॥ ೯೫ ॥

ಸೂತ ಉವಾಚ :—

ಏವಮುಕ್ತ್ವಾ ಸಹಸ್ರಾಕ್ಷಸ್ತೈಃ ಸರ್ವೈರಭಿನಂದಿತಃ ।
ಜಗಾಮಾದರ್ಶನಂ ತೇಽಪಿ ಸ್ಥಿತಾಸ್ತತ್ರ ದ್ವಿಜೋತ್ತಮಾಃ ॥ ೯೬ ॥
ತತಃ ಕಾಲೇ ಗತೇ ತೇಽಪಿ ಕೃತ್ವಾ ತೀವ್ರಂ ಮಹತ್ತಪಃ ।
ಸಂಪ್ರಾಪ್ತಾಃ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೯೭ ॥
ತೈಸ್ತತ್ರ ಸ್ಥಾಪಿತಂ ಲಿಂಗಂ ದೇವದೇವಸ್ಯ ಶೂಲಿನಃ ।
ತಸ್ಯ ಸಂದರ್ಶನಾದೇವ ನರಃ ಪಾಪಾದ್ವಿಮುಚ್ಯತೇ ॥ ೯೮ ॥
ಯಸ್ತಲ್ಲಿಂಗಂ ಪುನರ್ಭಕ್ತ್ಯಾ ಪುಷ್ಪಧೂಪಾನುಲೇಪನೈಃ ।
ಅರ್ಚಯೇತ್ಸ ಧ್ರುವಂ ಮುಕ್ತಿಂ ಪ್ರಾಪ್ನೋತಿ ದ್ವಿಜಸತ್ತಮಾಃ ॥ ೯೯ ॥

---

೯೩. ನಿಮ್ಮ ಶುಭಕರವಾದ ಆಶ್ರಮದಲ್ಲಿ ದೇಹವನ್ನು ತ್ಯಜಿಸುವ ಮಾನವರು ಪಾಪಿಗಳಾದರೂ ಉತ್ತಮ ಗತಿಯನ್ನು ಹೊಂದುವರು.

೯೪–೯೫. ಪಿತೃಗಳನ್ನುದ್ದೇಶಿಸಿ ಇಂಗುದ, ಬದರ, ಬಿಲ್ವ ಅಥವಾ ಭಲ್ಲಾತಕ ಫಲಗಳಿಂದ ಶ್ರಾದ್ಧಮಾಡುವವನು ಸಮಸ್ತ ಪಾಪಗಳಿಂದ ಮುಕ್ತನಾಗಿ ಕಿನ್ನರರಿಂದ ಸ್ತುತಿಸಲ್ಪಡುತ್ತ ದೇವತೆಗಳಿಗೂ ದುರ್ಲಭವಾದ ಉತ್ತಮಗತಿಯನ್ನು ಪಡೆಯುವನು.

೯೬. ಸೂತನು ಹೇಳುತ್ತಾನೆ:—ಇಂದ್ರನು ಹೀಗೆ ಹೇಳಿ ಅವರೆಲ್ಲರಿಂದ ಶ್ಲಾಘಿಸಲ್ಪಟ್ಟವನಾಗಿ ಕಣ್ಮರೆಯಾದನು. ಆ ಋಷಿಗಳು ಅಲ್ಲಿಯೇ ನೆಲಸಿದರು.

೯೭. ಬಳಿಕ ಕಾಲವು ಕಳೆಯಲು ಅವರು ಕಠಿಣ ತಪಸ್ಸನ್ನು ಮಾಡಿ ಜರಾಮರಣವಿಲ್ಲದ ಉತ್ತಮಸ್ಥಾನವನ್ನು ಹೊಂದಿದರು.

೯೮. ಅವರು ಅಲ್ಲಿ ಮಹೇಶ್ವರನ ಲಿಂಗವನ್ನು ಸ್ಥಾಪಿಸಿದರು. ಮಾನವನು ಆ ಲಿಂಗವನ್ನು ನೋಡುವುದರಿಂದ ಪಾಪಮುಕ್ತನಾಗುವನು.

೯೯. ದ್ವಿಜವರ್ಯರೆ! ಭಕ್ತಿಯಿಂದ ಆ ಲಿಂಗವನ್ನು ಪುಷ್ಪ, ಧೂಪ, ಗಂಧಗಳಿಂದ ಅರ್ಚಿಸುವವನು ನಿಶ್ಚಯವಾಗಿಯೂ ಮುಕ್ತನಾಗುವನು.

ಏತತ್ಪವಿತ್ರಮಾಯುಷ್ಯಂ ಸರ್ವಪಾತಕನಾಶನಂ ।
ಸಪ್ತರ್ಷೀಣಾಂ ಸಮಾಖ್ಯಾತಮಾಶ್ರಮಸ್ಯಾನುಕೀರ್ತನಂ ॥ ೧೦೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಪ್ತರ್ಷ್ಯಾಶ್ರಮಮಾಹಾತ್ಮ್ಯವರ್ಣನಂ"
ನಾಮ ದ್ವಾತ್ರಿಂಶೋಽಧ್ಯಾಯಃ

---

೧೦೦. ಈ ಪವಿತ್ರವೂ, ಆಯುಷ್ಯವನ್ನುಂಟುಮಾಡುವುದೂ, ಸಕಲ ಪಾಪಗಳನ್ನು ನಿವಾರಿಸುವುದೂ ಆದ ಸಪ್ತರ್ಷಿಗಳ ಆಶ್ರಮದ ಮಾಹಾತ್ಮ್ಯೆಯನ್ನು ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಪ್ತರ್ಷ್ಯಾಶ್ರಮಮಾಹಾತ್ಮ್ಯವರ್ಣನ"ವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯಸ್ತ್ರಿಂಶೋಽಧ್ಯಾಯಃ

### ಅಗಸ್ತ್ಯಾಶ್ರಮಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಗಸ್ತ್ಯಸ್ಯಾಶ್ರಮೋಽನ್ಯೋಽಸ್ತಿ ತಥಾ ತತ್ರ ದ್ವಿಜೋತ್ತಮಾಃ ।
ಯತ್ರ ತಿಷ್ಠತಿ ವಿಶ್ವಾತ್ಮಾ ಸ್ವಯಂ ದೇವೋ ಮಹೇಶ್ವರಃ ॥ ೧ ॥
ಶುಕ್ಲಪಕ್ಷೇ ಚತುರ್ದಶ್ಯಾಂ ಚೈತ್ರಮಾಸೇ ದಿವಾಕರಃ ।
ಸ್ವಯಮಭ್ಯೇತ್ಯ ದೇವೇಶಂ ಪೂಜಯತ್ಯೇವ ಶಂಕರಂ ॥ ೨ ॥
ತಸ್ಮಾದನ್ಯೋಽಪಿ ಯಸ್ತತ್ರ್ಯಾಂ ಭಕ್ತ್ಯಾಚಾಗತ್ಯ ಶಂಕರಂ ।
ತಮೇವ ಪೂಜಯೇದ್ಭಕ್ತ್ಯಾ ಸ ಯಾತಿ ಶಿವಮಂದಿರಂ ॥ ೩ ॥
ಯಸ್ತತ್ರ ಕುರುತೇ ಶ್ರಾದ್ಧಂ ಸಮ್ಯಕ್ ಶ್ರದ್ಧಾಸಮನ್ವಿತಃ ।
ಪಿತರಸ್ತಸ್ಯ ತೃಪ್ಯಂತಿ ಪಿತೃಮೇಧೇ ಕೃತೇ ಯಥಾ ॥ ೪ ॥

ಋಷಯ ಊಚುಃ :—

ಅಗಸ್ತ್ಯಸ್ಯಾಶ್ರಮಂ ಪ್ರಾಪ್ಯ ಕಸ್ಮಾದ್ದೇವೋ ದಿವಾಕರಃ ।
ಪ್ರದಕ್ಷಿಣಾಂ ಪ್ರಕುರುತೇ ವದೈತನ್ನೋ ಸುವಿಸ್ತರಂ ॥ ೫ ॥

---

### ಕನ್ನಡದ ಅನುವಾದ

### ಅಗಸ್ತ್ಯಾಶ್ರಮಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ಅಲ್ಲಿ ಇನ್ನೊಂದು ಅಗಸ್ತ್ಯರ ಆಶ್ರಮವಿರುವುದು. ಆ ಆಶ್ರಮದಲ್ಲಿ ವಿಶ್ವಸ್ವರೂಪನಾದ ಮಹೇಶ್ವರನಿರುವನು.

೨. ಚೈತ್ರಮಾಸದ ಶುಕ್ಲಪಕ್ಷ ಚತುರ್ದಶೀ ದಿನ ಸೂರ್ಯನು ತಾನೇ ಇಲ್ಲಿಗೆ ಬಂದು ಶಂಕರನನ್ನು ಪೂಜಿಸುವನು.

೩. ಆದ್ದರಿಂದ ಇತರ ಮಾನವನು ಅಲ್ಲಿಗೆ ಬಂದು ಭಕ್ತಿಯಿಂದ ಆ ಶಂಕರನನ್ನು ಪೂಜಿಸಿದರೆ ಅವನು ಶಿವಮಂದಿರವನ್ನು ಸೇರುವನು.

೪. ಅಲ್ಲಿ ಶ್ರದ್ಧೆಯಿಂದ ಶ್ರಾದ್ಧಮಾಡಿದವನ ಪಿತೃಗಳು ಪಿತೃಮೇಧಮಾಡಿದಂತೆ ತೃಪ್ತಿಗೊಳ್ಳುವರು.

೫. ಋಷಿಗಳು ಹೇಳುತ್ತಾರೆ :—ಸೂರ್ಯನು ಅಗಸ್ತ್ಯಾಶ್ರಮಕ್ಕೆ ಹೋಗಿ ಏಕೆ ಪ್ರದಕ್ಷಿಣೆ ಮಾಡುವನು ? ಇದನ್ನು ವಿಸ್ತಾರವಾಗಿ ನಮಗೆ ಹೇಳು.

ಸೂತ ಉವಾಚ:—

ಕಥಯಾಮಿ ಕಥಾಮೇತಾಂ ಶೃಣುತ ದ್ವಿಜಸತ್ತಮಾಃ ।
ಅಸ್ತಿ ವಿಂಧ್ಯ ಇತಿ ಖ್ಯಾತಃ ಪರ್ವತಃ ಪೃಥಿವೀತಲೇ ॥ ೬ ॥
ಯಸ್ಯ ವೃಕ್ಷಾಗ್ರಶಾಖಾಯಾಂ ಸಂಲಗ್ನಾಸ್ತರಣೇಃ ಕರಾಃ ।
ಪುಷ್ಪಪೂಗಾ ಇವಾಧಸ್ಥೈರ್ಲಕ್ಷ್ಯಂತೇ ಮುಗ್ಧಸಿದ್ಧಕೈಃ ॥ ೭ ॥
ಅನಭಿಜ್ಞಾಸ್ತಮಿಸ್ರಸ್ಯ ಯಸ್ಯ ಸಾನುನಿವಾಸಿನಃ ।
ರತ್ನಪ್ರಭಾಪ್ರಣುನ್ನಸ್ಯ ಕೃಷ್ಣಪಕ್ಷ ನಿಶಾಸ್ವಪಿ ॥ ೮ ॥
ಯಸ್ಯ ಸಾನುಷು ಮುಂಚಂತೋ ಭಾಂತಿ ಪುಷ್ಪಾಣಿ ಪಾದಪಾಃ ।
ವಾಯುವೇಗವಶಾನ್ನೂನಂ ನೀರೌದಂ ನೀರದಾ ಇವ ॥ ೯ ॥
ಯಸ್ಮಿನ್ನಾನಾಮೃಗಾ ಭಾಂತಿ ಧಾವಮಾನಾ ಇತಸ್ತತಃ ।
ಕಲತ್ರಪುತ್ರಪುಷ್ಟ್ಯರ್ಥಂ ಲೋಭಾರ್ಥಂ ಮಾನವಾ ಇವ ॥ ೧೦ ॥
ನಿರ್ಯಾಸಚ್ಛದ್ಮನಾ ಬಾಷ್ಪಂ ವಾಸಿತಾಶೇಷದಿಙ್ಮುಖಂ ।
ಮುಂಚಂತಿ ತರವೋ ಯತ್ರ ದಂತಿದಂತಕ್ಷತತ್ವಚಃ ॥ ೧೧ ॥
ಚೀರಿಕಾವಿರುತೈರ್ದೀರ್ಘೈರುದಂತ ಇವಚಾಪರೇ ।
ಹಸ್ತಿಹಸ್ತಹತಾವೃಕ್ಷಾ ಮನ್ಯಂತೇ ಯಸ್ಯ ಸಾನುಷು ॥ ೧೨ ॥

---

೬. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಈ ಕಥೆಯನ್ನು ಹೇಳುತ್ತೇನೆ. ಕೇಳಿರಿ. ಭೂಮಿಯಲ್ಲಿ ವಿಂಧ್ಯ ಎಂಬ ಪರ್ವತವಿದೆ.

೭. ಈ ಪರ್ವತದಲ್ಲಿರುವ ಮರಗಳ ಕೊಂಬೆಯಲ್ಲಿ ಅಂಟಿಕೊಂಡಿರುವ ಸೂರ್ಯನ ಕಿರಣಗಳನ್ನು ಕೆಳಗಿರುವ ಮೂಢರಾದ ಸಿದ್ಧರು ಹೂವುಗಳ ಸಮೂಹಗಳೆಂದು ತಿಳಿಯುವರು.

೮. ರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ಈ ಪರ್ವತದ ತಪ್ಪಲಿನಲ್ಲಿ ವಾಸಿಸುವ ಜನರು ಕೃಷ್ಣಪಕ್ಷದ ರಾತ್ರಿಗಳಲ್ಲಿಯೂ ಕತ್ತಲೆಯನ್ನರಿಯುವುದಿಲ್ಲ.

೯. ಇದರ ತಪ್ಪಲುಗಳಲ್ಲಿ ಗಾಳಿಯ ವೇಗದಿಂದ ಹೂವುಗಳನ್ನು ಸುರಿಸುವ ಮರಗಳು ನೀರನ್ನು ಸುರಿಸುವ ಮೋಡಗಳಂತೆ ಕಾಣುವುವು.

೧೦–೧೨. ಇದರಲ್ಲಿ ಇಲ್ಲಿ ಅಲ್ಲಿ ಓಡುತ್ತಿರುವ ನಾನಾಮೃಗಗಳು ಹೆಂಡತಿ ಮಕ್ಕಳ ಪೋಷಣೆಗಾಗಿ ಇಲ್ಲಿ ಅಲ್ಲಿ ಆಶೆಯಿಂದ ಸಂಚರಿಸುವ ಮನುಷ್ಯರಂತೆ ಪ್ರಕಾಶಿಸುವುವು. ಇಲ್ಲಿ ಆನೆಗಳ ದನ್ತಗಳಿಂದ ಗಾಯಗೊಂಡ ತೊಗಟೆಗಳುಳ್ಳ ಮರಗಳು ರಸಗಳ ನೆಪದಿಂದ ದಿಕ್ಕುಗಳನ್ನು ಸುವಾಸನೆ ಗೊಳಿಸುವ ಕಣ್ಣೀರನ್ನು ಸುರಿಸುವುವು. ಇದರ ತಪ್ಪಲುಗಳಲ್ಲಿ ಆನೆಗಳ ಸೊಂಡಿಲುಗಳಿಂದ ಘರ್ಷಿಸಲ್ಪಟ್ಟ ಮರಗಳು ದೀರ್ಘವಾದ ಚೀರಿಕಾ ಹುಳುಗಳ ಧ್ವನಿಗಳಿಂದ ಅಳುತ್ತಿರುವುವೊ ಎಂದು ಜನರು ತಿಳಿಯುತ್ತಾರೆ.

ಇತಶ್ಚೇತಶ್ಚ ಗಚ್ಛದ್ಭಿರ್ನಿರ್ಝರಾಂಭೋಭಿರಾವೃತಃ ।
ಶುಶುಭೇ ಸಿತವಸ್ತ್ರಾಢ್ಯೈಃ ಪುಮಾನಿವ ವಿಭೂಷಿತಃ ॥ ೧೩ ॥
ಯಸ್ಯ ಸ್ಪರ್ಧಾ ಸಮುತ್ಪನ್ನಾ ಪೂರ್ವಂ ಸಹ ಸುಮೇರುಣಾ ।
ತತಃ ಪ್ರಾಹ ಸಹಸ್ರಾಂಶುಂ ಗತ್ವಾ ಸ ಕ್ರೋಧಮೂರ್ಛಿತಃ ॥ ೧೪ ॥
ಕಸ್ಮಾದ್ಭಾಸ್ಕರ ಮೇರೋಸ್ತ್ವಂ ಪ್ರಕರೋಷಿ ಪ್ರದಕ್ಷಿಣಾಂ ।
ಕುಲಪರ್ವತಸಂಜ್ಞೋಽಪಿ ನ ಕರೋಷಿ ಕಥಂ ಮಯಿ ॥ ೧೫ ॥

ಭಾಸ್ಕರ ಉವಾಚ :—

ನ ಸ್ವಯಂ ಶ್ರದ್ಧಯಾ ತಸ್ಯ ಗಿರೇಃ ಕುರ್ವೇ ಪ್ರದಕ್ಷಿಣಾಂ ।
ಏಷ ಮೇ ವಿಹಿತಃ ಪಂಥಾ ಯೇನೇದಂ ನಿರ್ಮಿತಂ ಜಗತ್ ॥ ೧೬ ॥
ತಸ್ಯ ತುಂಗಾನಿ ಶೃಂಗಾಣಿ ವ್ಯಾಪ್ಯ ಖಂ ಸಂಶ್ರಿತಾನಿ ಚ ।
ತೇನ ಸಂಜಾಯತೇ ತಸ್ಯ ಬಲಾದೇವ ಪ್ರದಕ್ಷಿಣಾ ॥ ೧೭ ॥
ಏತಚ್ಛ್ರುತ್ವಾ ವಿಶೇಷೇಣ ಸಂಕ್ರುದ್ಧೋ ವಿಂಧ್ಯಪರ್ವತಃ ।
ಪ್ರೋವಾಚ ಪಶ್ಯ ಭಾನೋ ತ್ವಂ ತರ್ಹಿ ತುಂಗತ್ವಮದ್ಯ ಮೇ ।
ರುರೋಧಾಽಥ ನಭೋಮಾರ್ಗಂ ಯೇನ ಗಚ್ಛತಿ ಭಾಸ್ಕರಃ ॥ ೧೮ ॥

---

೧೩. ಇಲ್ಲಿ ಅಲ್ಲಿ ಹರಿಯುತ್ತಿರುವ ಗಿರಿನದಿಯ ನೀರಿನಿಂದ ಮುಚ್ಚಿರುವ ಈ ಪರ್ವತವು ಬಿಳಿ ವಸ್ತ್ರಗಳಿಂದ ಅಲಂಕೃತನಾದ ಪುರುಷನಂತೆ ಪ್ರಕಾಶಿಸುವುದು.

೧೪. ಹಿಂದೆ ಈ ವಿಂಧ್ಯಪರ್ವತವು ಮೇರುಪರ್ವತದೊಡನೆ ಸ್ಪರ್ಧಿಸಿತು. ಅದರಿಂದ ಇದು ಕೋಪಗೊಂಡು ಸೂರ್ಯನೆಡೆಗೆ ಹೋಗಿ ಹೀಗೆಂದಿತು.

೧೫. ಭಾಸ್ಕರ! ನೀನು ಮೇರುಪರ್ವತವನ್ನು ಏತಕ್ಕೆ ಪ್ರದಕ್ಷಿಣೆಮಾಡುವೆ? ನಾನು ಕುಲಪರ್ವತವೆಂದು ಹೆಸರನ್ನು ಪಡೆದಿದ್ದರೂ ಏತಕ್ಕೆ ನನ್ನನ್ನು ಪ್ರದಕ್ಷಿಣೆ ಮಾಡುವುದಿಲ್ಲ?

೧೬. ಭಾಸ್ಕರನು ಹೇಳುತ್ತಾನೆ :— ಮೇರುಪರ್ವತವು ಈ ಜಗತ್ತನ್ನು ಧರಿಸಿರುವುದರಿಂದ ನನ್ನ ದಾರಿಯು ಪ್ರದಕ್ಷಿಣಾಕಾರವಾಗಿರುವುದು. ನಾನು ಅದನ್ನು ಶ್ರದ್ಧೆಯಿಂದ ಪ್ರದಕ್ಷಿಣೆ ಮಾಡುವುದಿಲ್ಲ.

೧೭. ಅದರ ಉನ್ನತವಾದ ಶಿಖರಗಳು ಆಕಾಶವನ್ನು ವ್ಯಾಪಿಸಿರುವುದರಿಂದ ನಾನು ಬಲಾತ್ಕಾರವಾಗಿ ಅದನ್ನು ಪ್ರದಕ್ಷಿಣೆ ಮಾಡಬೇಕಾಗಿದೆ.

೧೮. ವಿಂಧ್ಯಪರ್ವತವು ಇದನ್ನು ಕೇಳಿ ಕೋಪಗೊಂಡು ಭಾಸ್ಕರ! ಈಗ ನನ್ನ ಔನ್ನತ್ಯವನ್ನು ನೋಡು ಎಂದಿತು. ಬಳಿಕ ಸೂರ್ಯನ ದಾರಿಯನ್ನು ತಡೆಯಿತು.

ಅಥ ರುದ್ಧಂ ಸಮಾಲೋಕ್ಯ ಮಾರ್ಗಂ ವಾಸರನಾಯಕಃ ।
ಚಿಂತಯಾಮಾಸ ಚಿತ್ತೇ ಸ್ವೇ ಸಾಂಪ್ರತಂ ಕಿಂ ಕರೋಮ್ಯಹಂ ॥ ೧೯ ॥
ಕರೋಮಿ ಯದ್ಯಹಂ ಚಾಽಸ್ಯ ಪರ್ವತಸ್ಯ ಪ್ರದಕ್ಷಿಣಾಂ ।
ತದ್ಭವಿಷ್ಯತಿ ಕಾಲಸ್ಯ ಚಲನಂ ಭುವನತ್ರಯೇ ॥ ೨೦ ॥
ಮಾಸರ್ತುಭುವನಾನಾಂ ಚ ತಥಾಭಾವೀ ವಿಪರ್ಯಯಃ ।
ಅಗ್ನಿಷ್ಟೋಮಾದಿಕಾಃ ಸರ್ವಾಃ ಕ್ರಿಯಾ ಯಾಸ್ಯಂತಿ ಸಂಕ್ಷಯಂ ।
ನಷ್ಟಯಜ್ಞೋತ್ಸವೇ ಲೋಕೇ ದೇವಾನಾಂ ಸ್ಯಾನ್ಮಹಾವ್ಯಥಾ ॥ ೨೧ ॥
ಏವಂ ಸಂಚಿಂತ್ಯ ಚಿತ್ತೇನ ಬಹುಧಾ ತೀಕ್ಷ್ಣದೀಧಿತಿಃ ।
ಜಗಾಮ ಮನಸಾ ಭೀತಃ ಸೋಽಗಸ್ತ್ಯಂ ಮುನಿಪುಂಗವಂ ॥ ೨೨ ॥
ನಾಽನ್ಯೋಽಸ್ತಿ ವಾರಣೇ ಶಕ್ತೋ ವಿಂಧ್ಯಸ್ಯಾಸ್ಯ ಹಿ ತಂ ವಿನಾ ।
ಅಗಸ್ತ್ಯಂ ಬ್ರಾಹ್ಮಣಶ್ರೇಷ್ಠಂ ಮಿತ್ರಾವರುಣಸಂಭವಂ ॥ ೨೩ ॥
ತತೋ ದ್ವಿಜಮಯಂ ರೂಪಂ ಸ ಕೃತ್ವಾ ತೀಕ್ಷ್ಣದೀಧಿತಿಃ ।
ಚಮತ್ಕಾರಪುರಕ್ಷೇತ್ರೇ ತಸ್ಯಾಶ್ರಮಪದಂ ಯಯೌ ॥ ೨೪ ॥
ತತಸ್ತು ವೈಶ್ವದೇವಾಂತೇ ವೇದೋಚ್ಚಾರಪರಾಯಣಃ ।
ಪ್ರೋವಾಚ ಸೋಽತಿಥಿಃ ಪ್ರಾಪ್ತಸ್ತವಾಽಹಂ ಮುನಿಸತ್ತಮ ॥ ೨೫ ॥

---

೧೯. ಸೂರ್ಯನು ತನ್ನ ದಾರಿಯನ್ನು ಪರ್ವತವು ತಡೆದಿರುವುದನ್ನು ಕಂಡು ಈಗ ಏನನ್ನು ಮಾಡಲಿ ಎಂದು ಮನಸ್ಸಿನಲ್ಲಿ ಆಲೋಚಿಸಿದನು.

೨೦. ನಾನು ಈ ಪರ್ವತವನ್ನು ಪ್ರದಕ್ಷಿಣೆ ಮಾಡಿದರೆ ತ್ರಿಭುವನದಲ್ಲಿ ಕಾಲವು ವ್ಯತ್ಯಾಸವಾಗುವುದು.

೨೧. ಮಾಸ, ಋತು, ಭುವನಗಳು ವ್ಯತ್ಯಾಸವಾಗುವುವು. ಅಗ್ನಿಷ್ಟೋಮ ಮೊದಲಾದ ಸಕಲ ಕಾರ್ಯಗಳು ಕ್ಷಯಿಸುವುವು. ಲೋಕದಲ್ಲಿ ಯಜ್ಞೋತ್ಸವಗಳು ನಷ್ಟವಾಗಲು ದೇವತೆಗಳಿಗೆ ಮಹಾವ್ಯಥೆಯುಂಟಾಗುವುದು.

೨೨. ಸೂರ್ಯನು ಹೀಗೆ ಮನಸ್ಸಿನಲ್ಲಿ ಅನೇಕ ಬಗೆಯಾಗಿ ಆಲೋಚಿಸಿ ಭೀತನಾಗಿ ಅಗಸ್ತ್ಯಮುನಿಯನ್ನು ಚಿಂತಿಸಿದನು.

೨೩. ಮಿತ್ರಾವರುಣರ ಮಗನಾದ ಆ ಅಗಸ್ತ್ಯಮುನಿವರ್ಯನನ್ನು ಬಿಟ್ಟು ಈ ವಿಂಧ್ಯಪರ್ವತವನ್ನು ತಡೆಯಲು ಬೇರೆ ಯಾರೂ ಶಕ್ತರಲ್ಲ.

೨೪. ಆ ಸೂರ್ಯನು ಹೀಗೆ ಆಲೋಚಿಸಿದ ತರುವಾಯ ಬ್ರಾಹ್ಮಣ ರೂಪವನ್ನು ತಾಳಿ ಚಮತ್ಕಾರಪುರಕ್ಷೇತ್ರದಲ್ಲಿರುವ ಅವನ ಆಶ್ರಮಕ್ಕೆ ಹೋದನು.

೨೫. ಬಳಿಕ ಅವನು ವೈಶ್ವದೇವದ ಕೊನೆಯಲ್ಲಿ ವೇದವನ್ನುಚ್ಚರಿಸುತ್ತ ಮುನಿವರ್ಯನೆ! ನಾನು ಅತಿಥಿಯಾಗಿ ಬಂದಿರುವೆನು ಎಂದನು.

ತತೋಽಗಸ್ತ್ಯಃ ಕೃತಾನಂದಃ ಸ್ವಾಗತಂ ತೇ ಮಹಾಮುನೇ ।
ಮನೋರಥ ಇವಾಧ್ಯಾತೋ ಯೋಽಗ್ನಿಕಾರ್ಯಾಂತ ಆಗತಃ ॥ ೨೬ ॥
ತತ್ವಂ ಬ್ರೂಹಿ ಮುನಿಶ್ರೇಷ್ಠ ಯದ್ದದಾಮಿ ತವೇಪ್ಸಿತಂ ।
ಅದೇಯಂ ನಾಽಸ್ತಿ ಮೇ ಕಿಂಚಿತ್ಕಾಲೇಽಸ್ಮಿನ್ ಪ್ರಾರ್ಥಿತಸ್ಯ ಚ ॥ ೨೭ ॥

ಭಾಸ್ಕರ ಉವಾಚ :—

ಅಹಂ ಭಾಸ್ಕರ ಆಯಾತೋ ವಿಪ್ರರೂಪೇಣ ಸನ್ಮುನೇ ।
ಸರ್ವಕಾರ್ಯಕ್ಷಮಂ ಮತ್ವಾ ತ್ವಾಮೇಕಂ ಭುವನತ್ರಯೇ ॥ ೨೮ ॥
ತ್ವಯಾ ಪೂರ್ವಂ ಸುರಾರ್ಥಾಯ ಪ್ರಪೀತಃ ಪಯಸಾಂ ನಿಧಿಃ ।
ವಾತಾಪಿಶ್ಚ ತಥಾ ದೈತ್ಯೋ ಭಕ್ಷಿತೋ ದ್ವಿಜಕಂಟಕಃ ॥ ೨೯ ॥
ತಸ್ಮಾದ್ಗತಿರ್ಭವಾಽಸ್ಮಾಕಂ ಸಾಂಪ್ರತಂ ಮುನಿಸತ್ತಮ ।
ದೇವಾನಾಮಿಹ ವರ್ಣಾನಾಂ ತ್ವಮೇವ ಶರಣಂ ಯತಃ ॥ ೩೦ ॥

ಸೂತ ಉವಾಚ :—

ತಚ್ಛ್ರುತ್ವಾ ಸ ಮುನಿರ್ವಿಪ್ರಾ ವಿಶೇಷೇಣ ಪ್ರಹರ್ಷಿತಃ ।
ಅರ್ಘ್ಯಂ ದತ್ವಾ ದಿನೇಶಾಯ ತತಃ ಪ್ರೋವಾಚ ಸಾದರಂ ॥ ೩೧ ॥
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮೇ ತ್ವಂ ಗೃಹಮಾಗತಃ ।
ತಸ್ಮಾದ್ಬ್ರೂಹಿ ಕರಿಷ್ಯಾಮಿ ತವ ವಾಕ್ಯಮಖಂಡಿತಂ ॥ ೩೨ ॥

---

೨೬. ಅಗಸ್ತ್ಯನು ಆನಂದಗೊಂಡು ಮಹರ್ಷಿಯೆ! ನಿನಗೆ ಸುಖಾಗಮನವೆ? ಅಗ್ನಿಕಾರ್ಯದ ಕೊನೆಯಲ್ಲಿ ಬಂದ ನೀನು ನನ್ನ ಮನೋಭೀಷ್ಟದಂತಿರುವೆ.

೨೭. ನಿನಗಿಷ್ಟವಾದುದನ್ನು ಹೇಳು. ಅದನ್ನು ಕೊಡುವೆನು. ಈ ಸಮಯದಲ್ಲಿ ಪ್ರಾರ್ಥಿಸುವ ನಿನಗೆ ಕೊಡದಿರುವುದು ಯಾವುದೂ ಇಲ್ಲ.

೨೮. ಭಾಸ್ಕರನು ಹೇಳುತ್ತಾನೆ:— ಮುನಿಯೆ! ಸೂರ್ಯನಾದ ನಾನು ಮೂರುಲೋಕಗಳಲ್ಲಿ ನೀನೊಬ್ಬನೇ ಸಕಲ ಕಾರ್ಯಗಳಲ್ಲಿ ಸಮರ್ಥನೆಂದರಿತು ಬ್ರಾಹ್ಮಣ ರೂಪದಿಂದ ನಿನ್ನೆಡೆಗೆ ಬಂದಿರುವೆನು.

೨೯. ನೀನು ಹಿಂದೆ ದೇವತೆಗಳಿಗಾಗಿ ಸಮುದ್ರವನ್ನು ಪಾನಮಾಡಿರುವೆ. ಬ್ರಾಹ್ಮಣರಿಗೆ ಶತ್ರುವಾದ ವಾತಾಪಿ ದಾನವನನ್ನು ಭಕ್ಷಿಸಿರುವೆ.

೩೦. ಮುನಿವರ್ಯನೆ! ದೇವತೆಗಳಿಗೂ, ಸಕಲ ವರ್ಣದವರಿಗೂ ನೀನೇ ರಕ್ಷಕನಾಗಿರುವುದರಿಂದ ಈಗ ನಮಗೆ ರಕ್ಷಕನಾಗು.

೩೧–೩೨. ಸೂತನು ಹೇಳುತ್ತಾನೆ:—ವಿಪ್ರರೆ! ಆ ಅಗಸ್ತ್ಯನು ಆ ಮಾತನ್ನು ಕೇಳಿ ಅತ್ಯಂತ ಸಂತೋಷಗೊಂಡು ಸೂರ್ಯನಿಗೆ ಅರ್ಘ್ಯವನ್ನಿತ್ತು ಪ್ರೀತಿಯಿಂದ ಇಂತೆಂದನು. ನೀನು ನನ್ನ ಮನೆಗೆ ಬಂದಿರುವುದರಿಂದ ನಾನು ಧನ್ಯನೂ, ಅನುಗೃಹೀತನೂ ಆಗಿರುವೆನು. ಆದ್ದರಿಂದ ಹೇಳು. ನಿನ್ನ ಮಾತನ್ನು ಸಂಪೂರ್ಣವಾಗಿ ನಡೆಸುವೆನು.

ಭಾಸ್ಕರ ಉವಾಚ :—

ಏಷ ವಿಂಧ್ಯಾಚಲೋಽಸ್ಮಾಕಂ ಮಾರ್ಗಮಾವೃತ್ಯ ಸಂಸ್ಥಿತಃ ।
ಸ್ಪರ್ಧಯಾ ಗಿರಿಮುಖ್ಯಸ್ಯ ಸುಮೇರೋರ್ಮುನಿಸತ್ತಮ ॥ ೩೩ ॥
ಸಾಮಾದ್ಯೈರ್ವಿವಿಧೋಪಾಯೈಸ್ತಸ್ಮಾದೇನಂ ನಿವಾರಯ ।
ಕಾಲಾತ್ಯಯೋ ಯಥಾ ನ ಸ್ಯಾದ್ಗತೇರ್ಭಂಗಸ್ತಥಾ ಕುರು ॥ ೩೪ ॥

ಅಗಸ್ತ್ಯ ಉವಾಚ :—

ಅಹಂ ತೇ ವಾರಯಿಷ್ಯಾಮಿ ವರ್ಧಮಾನಂ ಕುಲಾಚಲಂ ।
ಸ್ವಸ್ಥಾನಂ ಗಚ್ಛ ತಸ್ಮಾತ್ತ್ವಂ ಸುಖೀಭವ ದಿವಾಕರ ॥ ೩೫ ॥
ತತಃ ಸ ಪ್ರೇಷಿತಸ್ತೇನ ಭಾಸ್ಕರಸ್ತೀಕ್ಷ್ಣದೀಧಿತಿಃ ।
ಸ್ವಂ ಸ್ಥಾನಂ ಪ್ರಯಯೌ ಹೃಷ್ಟಸ್ತಮಾಮಂತ್ರ್ಯ ಮುನೀಶ್ವರಂ ॥ ೩೬ ॥
ಅಗಸ್ತ್ಯೋಽಪಿ ದ್ರುತಂ ಗತ್ವಾ ವಿಂಧ್ಯಂ ಪ್ರೋವಾಚ ಸಾದರಂ ।
ನ್ಯೂನತಾಂ ವ್ರಜ ಮದ್ವಾಕ್ಯಾಚ್ಛೀಘ್ರಂ ಪರ್ವತಸತ್ತಮ ॥ ೩೭ ॥
ದಾಕ್ಷಿಣಾತ್ಯೇಷು ತೀರ್ಥೇಷು ಸ್ನಾನೇ ಜಾತಾಽದ್ಯ ಮೇ ಮತಿಃ ।
ತವಾಯತ್ತಾ ಗಿರೇ ಸೈವ ತತ್ಕುರುಷ್ವ ಯಥೋಚಿತಂ ॥ ೩೮ ॥

---

೩೩. ಭಾಸ್ಕರನು ಹೇಳುತ್ತಾನೆ:—ಮುನಿವರ್ಯನೆ! ಈ ವಿಂಧ್ಯಾಚಲವು ಸುಮೇರುವೆಂಬ ಪರ್ವತಶ್ರೇಷ್ಠದೊಡನೆ ಸ್ಪರ್ಧೆಯಿಂದ ನನ್ನ ಮಾರ್ಗವನ್ನು ತಡೆದು ನಿಂತಿದೆ.

೩೪. ಆದ್ದರಿಂದ ಇದನ್ನು ಸಾಮಮೊದಲಾದ ನಾನಾ ಉಪಾಯಗಳಿಂದ ತಡೆ. ನನ್ನ ಗತಿಭಂಗದಿಂದ ಕಾಲವಿಳಂಬವಾಗದಂತೆ ಮಾಡು.

೩೫. ಅಗಸ್ತ್ಯನು ಹೇಳುತ್ತಾನೆ:—ಭಾಸ್ಕರ! ನಾನು ಬೆಳೆಯುತ್ತಿರುವ ಈ ಪರ್ವತವನ್ನು ತಡೆಯುವೆನು. ಆದ್ದರಿಂದ ನೀನು ನಿನ್ನ ಸ್ಥಳಕ್ಕೆ ಹೋಗು. ಸುಖಿಯಾಗಿರು.

೩೬. ಮುನಿಯು ಹೀಗೆ ಹೇಳಿಕಳುಹಿಸಲು ಸೂರ್ಯನು ಸಂತೋಷಗೊಂಡು ಮುನಿಯ ಅನುಮತಿಯಿಂದ ತನ್ನ ಸ್ಥಾನಕ್ಕೆ ತೆರಳಿದನು.

೩೭. ಅಗಸ್ತ್ಯನೂ ಶೀಘ್ರವಾಗಿ ಹೋಗಿ ವಿಂಧ್ಯಪರ್ವತವನ್ನು ಕುರಿತು ಪ್ರೀತಿಯಿಂದ ಇಂತೆಂದನು. ಪರ್ವತೋತ್ತಮನೆ! ನನ್ನ ಮಾತಿನಿಂದ ಬೇಗನೆ ಕಡಮೆಯಾಗು.

೩೮. ವಿಂಧ್ಯ! ನಾನು ದಕ್ಷಿಣದೇಶದ ತೀರ್ಥಗಳಲ್ಲಿ ಸ್ನಾನಮಾಡಬೇಕೆಂದು ಆಲೋಚಿಸಿರುವೆನು. ಅದು ನಿನ್ನ ಅಧೀನವಾಗಿರುವುದು. ಆದ್ದರಿಂದ ನೀನು ಔಚಿತ್ಯವನ್ನನುಸರಿಸಿ ಕಾರ್ಯವನ್ನು ಮಾಡು.

ಸ ತಸ್ಯ ವಚನಂ ಶ್ರುತ್ವಾ ವಿಂಧ್ಯಃ ಪರ್ವತಸತ್ತಮಃ ।
ಅಭಜನ್ನಿಮ್ನತಾಂ ಸದ್ಯೋ ವಿನಯೇನ ಸಮನ್ವಿತಃ ॥ ೩೯ ॥
ಅಗಸ್ತ್ಯೋಽಪಿ ಸಮಾಸಾದ್ಯ ತಸ್ಯಾಂತಂ ದಕ್ಷಿಣಂ ದ್ವಿಜಾಃ ।
ತ್ವಯೈವಂ ಸಂಸ್ಥಿತೇನೇವ ಸ್ಥಾತವ್ಯಮಿತ್ಯುವಾಚ ತಂ ॥ ೪೦ ॥
ಯಾವದಾಗಮನಂ ಮಹ್ಯಂ ನಾಽತ್ರ ಕಾರ್ಯಾ ವಿಚಾರಣಾ ।
ನೋಚೇಚ್ಛಾಪಂ ಪ್ರದಾಸ್ಯಾಮಿ ಯೇನ ಸಂಯಾಸ್ಯಸಿ ಕ್ಷಯಂ ॥ ೪೧ ॥
ಸ ತಥೇತಿ ಪ್ರತಿಜ್ಞಾಯ ಶಾಪಾದ್ಭೀತೋ ನಗೋತ್ತಮಃ ।
ನ ಜಗಾಮ ಪುನರ್ವೃದ್ಧಿಂ ತಸ್ಯಾಽಽಗಮನವಾಂಛಯಾ ॥ ೪೨ ॥
ಸೋಽಪಿ ತೇನೈವ ಮಾರ್ಗೇಣ ನಿವೃತ್ತಿಂ ನ ಕರೋತಿ ಚ ।
ಯಾವದದ್ಯಾಽಪಿ ವಿಪ್ರೇಂದ್ರಾ ದಕ್ಷಿಣಾಂ ದಿಶಮಾಶ್ರಿತಃ ॥ ೪೩ ॥
ಅಥ ತತ್ರೈವ ಚಾಽಽನೀಯ ಲೋಪಾಮುದ್ರಾಂ ಮುನೀಶ್ವರಃ ।
ಸಮಾಹೂಯ ಸಹಸ್ರಾಂಶುಂ ತತಃ ಪ್ರೋವಾಚ ಸಾದರಂ ॥ ೪೪ ॥
ತವ ವಾಕ್ಯಾನ್ಮಯಾ ತ್ಯಕ್ತಃ ಸ್ವಾಶ್ರಮಸ್ತೀಕ್ಷ್ಣದೀಧಿತೇ ।
ತವಾರ್ಥೇ ಚ ನ ಗಂತವ್ಯಂ ಭೂಯಸ್ತತ್ರ ಕಥಂಚನ ॥ ೪೫ ॥
ತಸ್ಮಾನ್ಮದ್ವಚನಾದ್ಭಾನೋ ಚತುರ್ದಶ್ಯಾಂ ಮಧೌ ಸಿತೇ ।
ಯನ್ಮಯಾ ಸ್ಥಾಪಿತಂ ತತ್ರ ಲಿಂಗಂ ಪೂಜ್ಯಂ ಹಿ ತತ್ತ್ವಯಾ ॥ ೪೬ ॥

---

೩೯—೪೧. ವಿಂಧ್ಯಪರ್ವತವು ಅಗಸ್ತ್ಯನ ಮಾತನ್ನು ಕೇಳಿ ವಿನಯದಿಂದ ಕೂಡಲೆ ಬಗ್ಗಿತು. ಅಗಸ್ತ್ಯನೂ ಅದರ ಕೊನೆಯಾದ ದಕ್ಷಿಣದಿಕ್ಕನ್ನು ಸೇರಿ ನಾನು ಹಿಂದಿರುಗಿ ಬರುವವರೆಗೆ ನೀನು ಹೀಗೆಯೇ ಇರು. ಈ ವಿಷಯದಲ್ಲಿ ಆಲೋಚಿಸ ಬೇಡ. ಹಾಗೆ ಮಾಡದಿದ್ದರೆ ಶಾಪವನ್ನೀಯುವೆನು. ಅದ್ದರಿಂದ ನೀನು ಹಾಳಾಗುವೆ ಎಂದನು.

೪೨. ಆ ವಿಂಧ್ಯಪರ್ವತವು ಶಾಪದಿಂದ ಭಯಗೊಂಡು ಹಾಗೆಯೇ ಆಗ ಲೆಂದು ಒಪ್ಪಿ ಅವನು ಹಿಂದಿರುಗಿಬರುವನೆಂಬ ಆಶೆಯಿಂದ ತಿರುಗಿ ಬೆಳೆಯಲಿಲ್ಲ.

೪೩. ಆಗಸ್ತ್ಯನೂ ಆ ಮಾರ್ಗದಿಂದ ಹಿಂದಿರುಗಲಿಲ್ಲ. ಈಗಲೂ ದಕ್ಷಿಣ ದಿಕ್ಕಿನಲ್ಲಿರುವನು.

೪೪. ತರುವಾಯ ಅಗಸ್ತ್ಯನು ಲೋಪಾಮುದ್ರೆಯನ್ನು ಅಲ್ಲಿಗೆ ಕರೆಯಿ ಸಿದನು. ಸೂರ್ಯನನ್ನು ಕರೆದು ಪ್ರೀತಿಯಿಂದ ಇಂತೆಂದನು.

೪೫. ಸೂರ್ಯನೆ! ನಿನ್ನ ಮಾತಿನಿಂದ ನಾನು ನನ್ನ ಆಶ್ರಮವನ್ನು ತ್ಯಜಿ ಸಿರುವೆನು. ಮರಳಿ ನಾನು ಅಲ್ಲಿಗೆ ಹೋಗುವುದಿಲ್ಲ.

೪೬. ಆದ್ದರಿಂದ ನೀನು ನನ್ನ ಮಾತಿನಿಂದ ಚೈತ್ರ ಶುದ್ಧ ಚತುರ್ದಶೀದಿನ ನಾನು ಪ್ರತಿಷ್ಠೆಮಾಡಿರುವ ಲಿಂಗವನ್ನು ಪೂಜಿಸು.

ಭಾಸ್ಕರ ಉವಾಚ :—

ಏವಂ ಮುನೇ ಕರಿಷ್ಯಾಮಿ ತವ ವಾಕ್ಯಾದಸಂಶಯಂ ।
ಪೂಜಯಿಷ್ಯಾಮಿ ತಲ್ಲಿಂಗಂ ವರ್ಷಾಂತೇ ಸ್ವಯಮೇವ ಹಿ ॥ ೪೭ ॥
ಯೋಽನ್ಯೋಽಹಿ ತದ್ದಿನೇ ಲಿಂಗಂ ಪೂಜಯಿಷ್ಯತಿ ಮಾನವಃ ।
ಮಮ ಲೋಕಂ ಸಮಾಸಾದ್ಯ ಸ ಭವಿಷ್ಯತಿ ಮುಕ್ತಿಭಾಕ್ ॥ ೪೮ ॥

ಸೂತ ಉವಾಚ :—

ಏತಸ್ಮಾತ್ಕಾರಣಾತ್ತತ್ರ ಭಗವಾಂಸ್ತೀಕ್ಷ್ಣದೀಧಿತಿಃ ।
ಚೈತ್ರಶುಕ್ಲಚತುರ್ದಶ್ಯಾಂ ಸಾನ್ನಿಧ್ಯಂ ಕುರುತೇ ಸದಾ ॥ ೪೯ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಭೂಯೋ ವದತ ವೈ ಕಶ್ಚಿತ್ಸಂದೇಹಶ್ಚೇದ್ಧೃದಿ ಸ್ಥಿತಃ ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಗಸ್ತ್ಯಾಶ್ರಮಮಾಹಾತ್ಮ್ಯವರ್ಣನಂ" ನಾಮ
ತ್ರಯಸ್ತ್ರಿಂಶೋಽಧ್ಯಾಯಃ

---

೪೭. ಭಾಸ್ಕರನು ಹೇಳುತ್ತಾನೆ :—ಮುನಿಯೆ ! ನಿನ್ನ ಮಾತಿನಿಂದ ನಿಶ್ಚಯವಾಗಿಯೂ ಹೀಗೆ ಮಾಡುವೆನು. ವರ್ಷಾವಸಾನದಲ್ಲಿ ನಾನೇ ಆ ಲಿಂಗವನ್ನು ಆರಾಧಿಸುವೆನು.

೪೮. ಆ ಲಿಂಗವನ್ನು ಆದಿನ ಪೂಜಿಸುವ ಇತರ ಮಾನವನೂ ನನ್ನ ಲೋಕವನ್ನು ಸೇರಿ ಮುಕ್ತನಾಗುವನು.

೪೯. ಸೂತನು ಹೇಳುತ್ತಾನೆ :—ಈ ಕಾರಣದಿಂದ ಪೂಜ್ಯನಾದ ಸೂರ್ಯನು ಚೈತ್ರ ಶುಕ್ಲ ತ್ರಯೋದಶೀ ದಿನ ಅಲ್ಲಿ ಸನ್ನಿಹಿತನಾಗಿರುವನು.

೫೦. ದ್ವಿಜವರ್ಯರೆ ! ನೀವು ಕೇಳಿದ್ದನ್ನೆಲ್ಲ ಹೇಳಿರುವೆನು. ಮರಳಿ ಮನಸ್ಸಿನಲ್ಲಿ ಸಂದೇಹವಿದ್ದರೆ ಹೇಳಿರಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಗಸ್ತ್ಯಾಶ್ರಮಮಾಹಾತ್ಮ್ಯವರ್ಣನ"ವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಚತುಸ್ತ್ರಿಂಶೋಽಧ್ಯಾಯಃ

## ದೇವಾಸುರಸಂಗ್ರಾಮವರ್ಣನಂ

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ತಂ ಮುನಿಂ ಪ್ರತಿ ಸೂತಜ ।
ತ್ವಯಾ ಪುರಾ ಸುರಾರ್ಥಾಯ ಪ್ರಪೀತಃ ಪಯಸಾಂ ನಿಧಿಃ ॥ ೧ ॥
ತತ್ತ್ವಂ ಸೂತಜ ನೋ ಬ್ರೂಹಿ ವಿಸ್ತರೇಣ ಮಹಾಮತೇ ।
ಯಥಾ ತೇನ ಪುರಾ ಪೀತೋ ಮುನಿನಾ ಪಯಸಾಂ ನಿಧಿಃ ॥ ೨ ॥

ಸೂತ ಉವಾಚ:—

ಕಾಲೇಯಾ ಇತಿ ವಿಖ್ಯಾತಾಃ ಪುರಾ ದಾನವಸತ್ತಮಾಃ ।
ಸಂಭೂತಾಃ ಸರ್ವದೇವಾನಾಂ ವೀರ್ಯೋತ್ಸಾಹಪ್ರಣಾಶಕಾಃ ॥ ೩ ॥
ತತಸ್ತೈಃ ಪೀಡಿತಂ ದೃಷ್ಟ್ವಾ ವಿಷ್ಣುನಾ ಪ್ರಭವಿಷ್ಣುನಾ ।
ತ್ರೈಲೋಕ್ಯಂ ಶಕ್ತಿಯೋಗೇನ ಪ್ರೋಕ್ತೋ ದೇವೋ ಮಹೇಶ್ವರಃ ॥ ೪ ॥
ಏತದೀಶಾನ ದೈತೇಯೈಸ್ತ್ರೈಲೋಕ್ಯಂ ಪರಿಪೀಡಿತಂ ।
ಕಾಲಿಕೇಯೈರ್ಮಹಾವೀರ್ಯೈಸ್ತಸ್ಮಾತ್ಕಾರ್ಯೋ ಮಹಾಹವಃ ।
ಅದ್ಯೈವ ತೈಃ ಸಮಂ ದೇವ ಸಮಾಸಾದ್ಯ ಧರಾತಲಂ ॥ ೫ ॥

---

## ಕನ್ನಡದ ಅನುವಾದ

### ದೇವಾಸುರಸಂಗ್ರಾಮವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಿಂದೆ ಅಗಸ್ತ್ಯಮುನಿಯು ದೇವತೆಗಳಿಗಾಗಿ ಸಮುದ್ರವನ್ನು ಪಾನಮಾಡಿದನೆಂದು ಹೇಳಿರುತ್ತೀಯೆ.

೨. ಆ ಮುನಿಯು ಹಿಂದೆ ಹೇಗೆ ಸಮುದ್ರವನ್ನು ಪಾನಮಾಡಿದನೆಂಬುದನ್ನು ನಮಗೆ ವಿಸ್ತಾರವಾಗಿ ಹೇಳು.

೩. ಸೂತನು ಹೇಳುತ್ತಾನೆ:—ಹಿಂದೆ ಸಮಸ್ತದೇವತೆಗಳ ವೀರ್ಯ ಮತ್ತು ಉತ್ಸಾಹವನ್ನು ನಾಶಗೊಳಿಸುವ ಕಾಲೇಯರೆಂಬ ದಾನವರು ಹುಟ್ಟಿದರು.

೪. ಬಳಿಕ ಸಮರ್ಥನಾದ ವಿಷ್ಣುವು ಆ ಕಾಲಿಕೇಯರು ಶಕ್ತಿಯಿಂದ ಪೀಡಿಸುತ್ತಿರುವ ಮೂರು ಲೋಕಗಳನ್ನು ಕಂಡು ಮಹೇಶ್ವರನನ್ನು ಕುರಿತು ಹೀಗೆಂದನು.

೫. ಈಶ್ವರ! ಅತಿ ಬಲಿಷ್ಠರಾದ ಕಾಲಿಕೇಯರೆಂಬ ದೈತ್ಯರು ಮೂರು ಲೋಕಗಳನ್ನು ಪೀಡಿಸುತ್ತಿರುವರು. ಆದ್ದರಿಂದ ಈಗಲೆ ಭೂಮಿಗೆ ಹೋಗಿ ಅವರೊಡನೆ ಯುದ್ಧಮಾಡಬೇಕು.

ತತೋ ರುದ್ರಶ್ಚ ವಿಷ್ಣುಶ್ಚ ಸಹಸ್ರಾಕ್ಷಃ ಸುರೈಃ ಸಹ ।
ಶಿತಶಸ್ತ್ರಧರಾಃ ಸರ್ವೇ ಸಂಪ್ರಾಪ್ತಾ ಧರಣೀತಲಂ ॥ ೬ ॥
ಅಥ ತೇ ದಾನವಾಃ ಸರ್ವೇ ಶ್ರುತ್ವಾ ದೇವಾನ್ ಸಮಾಗತಾನ್ ।
ಯುದ್ಧಾರ್ಥಂ ಸಹಸಾ ಜಗ್ಮುಃ ಸಂಮುಖಾಃ ಕೋಪಸಂಯುತಾಃ ॥ ೭ ॥
ತತೋಽಭವನ್ಮಹಾಯುದ್ಧಂ ದೇವಾನಾಂ ದಾನವೈಃ ಸಹ ।
ತ್ರೈಲೋಕ್ಯಂ ಕಂಪಿತಂ ಯೇನ ಸಮಸ್ತಂ ಭಯವಿಹ್ವಲಂ ॥ ೮ ॥
ಅಥಕಾಲಪ್ರಭೋನಾಮ ದಾನವೋ ಬಲಗರ್ವಿತಃ ।
ಸ ಶಕ್ರಂ ಪುರತೋ ದೃಷ್ಟ್ವಾ ವಜ್ರೋಚ್ಛ್ರಿತಕರಂ ಸ್ಥಿತಂ ।
ಪ್ರೋವಾಚ ಪ್ರಹಸನ್ವಾಕ್ಯಂ ಮೇಘಗಂಭೀರನಿಃಸ್ವನಃ ॥ ೯ ॥
ಮುಂಚ ವಜ್ರಂ ಸಹಸ್ರಾಕ್ಷ ಪಶ್ಯಾಮಿ ತವ ಪೌರುಷಂ ।
ಚಿರಾತ್ಪ್ರಾಪ್ತೋಽಸಿ ಮೇ ದೃಷ್ಟಿಂ ದಿಷ್ಟ್ಯಾ ತ್ವಂ ತ್ರಿದಶೇಶ್ವರಃ ॥ ೧೦ ॥
ತತಶ್ಚಿಕ್ಷೇಪ ಸಂಕ್ರುದ್ಧಸ್ತಸ್ಯ ವಜ್ರಂ ಶತಕ್ರತುಃ ।
ಸೋಽಪಿ ತಲ್ಲೀಲಯಾ ಧೃತ್ವಾ ಜಗೃಹೇ ಸವ್ಯಪಾಣಿನಾ ॥ ೧೧ ॥
ತತಃ ಶಕ್ರಂ ಸಮುದ್ದಿಶ್ಯ ಗದಾಂ ಗುರ್ವೀಂ ಮುಮೋಚ ಸಃ ।
ಸರ್ವಾಯಸಮಯೀಂ ರೌದ್ರಾಂ ಯಮಜಿಹ್ವಾಮಿವಾಽಪರಾಂ ॥ ೧೨ ॥

---

೬. ತರುವಾಯ ವಿಷ್ಣು, ರುದ್ರ, ಇಂದ್ರ ಇವರು ದೇವತೆಗಳೊಡನೆ ಹರಿತವಾದ ಶಸ್ತ್ರಗಳನ್ನು ಧರಿಸಿ ಭೂಮಿಗೆ ಬಂದರು.

೭. ದಾನವರೆಲ್ಲ ದೇವತೆಗಳು ಯುದ್ಧಕ್ಕಾಗಿ ಬಂದಿರುವುದನ್ನು ಕೇಳಿ ಕೂಡಲೆ ಕೋಪದಿಂದ ಅಭಿಮುಖರಾಗಿ ಹೋದರು.

೮. ಬಳಿಕ ದೇವತೆಗಳಿಗೆ ದಾನವರೊಡನೆ ಮಹಾಯುದ್ಧವಾಯಿತು. ಆದರಿಂದ ಮೂರುಲೋಕಗಳು ಭಯದಿಂದ ನಡುಗಿದುವು.

೯. ಅನಂತರ ಕಾಲಪ್ರಭನೆಂಬ ದಾನವನು ಬಲದಿಂದ ಗರ್ವಗೊಂಡು ಕೈಯಿಂದ ವಜ್ರವನ್ನು ಎತ್ತಿಕೊಂಡು ನಿಂತಿರುವ ಶಕ್ರನನ್ನು ನೋಡಿ ಮೇಘದಂತೆ ಗಂಭೀರವಾದ ಧ್ವನಿಯುಳ್ಳವನಾಗಿ ನಗುತ್ತ ಇಂತೆಂದನು.

೧೦. ಇಂದ್ರ! ವಜ್ರವನ್ನು ಪ್ರಯೋಗಿಸು. ನಿನ್ನ ಪೌರುಷವನ್ನು ನೋಡುತ್ತೇನೆ. ದೇವರಾಜನಾದ ನೀನು ಅದೃಷ್ಟವಶದಿಂದ ಬಹುಕಾಲದ ಮೇಲೆ ನನಗೆ ಗೋಚರನಾಗಿರುವೆ.

೧೧. ಬಳಿಕ ಇಂದ್ರನು ಕುಪಿತನಾಗಿ ಆ ದೈತ್ಯನ ಮೇಲೆ ವಜ್ರವನ್ನು ಪ್ರಯೋಗಿಸಿದನು. ಆ ದೈತ್ಯನೂ ಅದನ್ನು ಎಡಗೈಯಿಂದ ಹಿಡಿದುಕೊಂಡನು.

೧೨. ಅನಂತರ ಇಂದ್ರನಮೇಲೆ ಮತ್ತೊಂದು ಯಮನ ನಾಲಿಗೆಯಂತಿರುವ ಕಬ್ಬಿಣದ ಭಯಂಕರ ಗದೆಯನ್ನು ಪ್ರಯೋಗಿಸಿದನು.

ತಯಾ ಹತಃ ಸಹಸ್ರಾಕ್ಷೋ ವಿಸಂಜ್ಞೋ ರುಧಿರಪ್ಲುತಃ ।
ಧ್ವಜಯಷ್ಟಿಂ ಸಮಾಶ್ರಿತ್ಯ ಸನ್ನಿವಿಷ್ಟೋ ರಥೋಪರಿ ॥ ೧೩ ॥
ಅಥ ತಂ ಮಾತಲಿರ್ದೃಷ್ಟ್ವಾ ವಿಸಂಜ್ಞಂ ಬಲಘಾತಿನಂ ।
ಪ್ರಾಙ್ಮುಖಂ ಚ ರಥಂ ಚಕ್ರೇ ಸಂಸ್ಮರನ್ ಸಾರಥೇರ್ನಯಂ ॥ ೧೪ ॥
ತತಃ ಪರಾಙ್ಮುಖೀಭೂತೇ ರಥೇ ಶಕ್ರಸ್ಯ ಸಂಗರೇ ।
ದುದ್ರುವುರ್ಭಯಸಂತ್ರಸ್ತಾಃ ಸರ್ವೇ ದೇವಾಃ ಸಮಂತತಃ ॥ ೧೫ ॥
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।
ವ್ರೀಡಾಂ ವಿಹಾಯ ವಿಧ್ವಸ್ತಾಃ ಪೃಷ್ಠದೇಶೇ ಶಿತೈಃ ಶರೈಃ ॥ ೧೬ ॥
ಅಥ ಭಗ್ನಂ ಬಲಂ ದೃಷ್ಟ್ವಾ ದಾನವೈರ್ಮಧುಸೂದನಃ ।
ಆರುಹ್ಯ ಗರುಡಂ ತೂರ್ಣಂ ಕಾಲಪ್ರಭಮುಪಾದ್ರವತ್ ॥ ೧೭ ॥
ತತಸ್ತೇ ದಾನವಾಃ ಸರ್ವೇ ಪರಿವಾರ್ಯ ಶಿತೈಃ ಶರೈಃ ।
ಸಮ್ಯಗಾಚ್ಛಾದಯಾಮಾಸುರ್ಗರ್ಜಮಾನಾ ಮುಹುರ್ಮುಹುಃ ॥ ೧೮ ॥
ಸ ತೈರಾಚ್ಛಾದಿತೋ ವಿಷ್ಣುಃ ಶುಶುಭೇ ಚ ಸಮಂತತಃ ।
ಸಮ್ಯಕ್ ಪುಲಕಿತಾಂಗಶ್ಚ ರಕ್ತಾಽಚಲ ಇವಾಽಪರಃ ॥ ೧೯ ॥

---

೧೩. ಗದೆಯಿಂದ ತಾಡಿತನಾದ ಇಂದ್ರನು ಮೂರ್ಛೆಗೊಂಡು ರಕ್ತದಿಂದ ಒದ್ದೆಯಾಗಿ ಧ್ವಜಸ್ತಂಭವನ್ನು ಹಿಡಿದುಕೊಂಡು ರಥದಮೇಲೆ ಕೂತುಕೊಂಡನು.

೧೪. ತರುವಾಯ ಮಾತಲಿಯು ಇಂದ್ರನು ಮೂರ್ಛಿತನಾಗಿರುವುದನ್ನು ನೋಡಿ ಸಾರಥಿಯ ನೀತಿಯನ್ನು ಸ್ಮರಿಸುತ್ತ ರಥವನ್ನು ಪೂರ್ವಮುಖವಾಗಿ ತಿರುಗಿಸಿದನು.

೧೫. ಇಂದ್ರನ ರಥವು ಹಿಂದಿರುಗಲು ಸಮಸ್ತ ದೇವತೆಗಳು ಭಯದಿಂದ ಸುತ್ತಲೂ ಓಡಿದರು.

೧೬. ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವತೆಗಳು, ಮರುತ್ತುಗಳು ಇವರು ನಾಚಿಕೆಯನ್ನು ತ್ಯಜಿಸಿ ಓಡುತ್ತ ಬೆನ್ನಿನಮೇಲೆ ತೀಕ್ಷ್ಣವಾದ ಬಾಣಗಳಿಂದ ತಾಡಿತರಾದರು.

೧೭. ತರುವಾಯ ವಿಷ್ಣುವು ದಾನವರು ದೇವಬಲವನ್ನು ನಾಶಮಾಡಿರುವುದನ್ನು ನೋಡಿ ಬೇಗನೆ ಗರುಡನನ್ನೇರಿ ಕಾಲಪ್ರಭನನ್ನು ಅಟ್ಟಿಸಿಕೊಂಡು ಹೋದನು.

೧೮. ಆಗ ದಾನವರೆಲ್ಲ ವಿಷ್ಣುವನ್ನು ಸುತ್ತಿಕೊಂಡು ಗರ್ಜಿಸುತ್ತ ಹರಿತವಾದ ಬಾಣಗಳಿಂದ ಮುಚ್ಚಿದರು.

೧೯. ಹಾಗೆ ಬಾಣಗಳಿಂದ ಮುಚ್ಚಲ್ಪಟ್ಟ ವಿಷ್ಣುವು ರೋಮಾಂಚಗೊಂಡು ಮತ್ತೊಂದು ರಕ್ತಪರ್ವತದಂತೆ ಪ್ರಕಾಶಿಸಿದನು.

ತತಃ ಶಾರ್ಙ್ಗವಿನಿರ್ಮುಕ್ತೈಃ ಶರೈಃ ಕಂಕಪತತ್ರಿಭಿಃ ।
ಛೇದಯಿತ್ವೇಷುಜಾಲಾನಿ ದೈತೇಯಾನ್ನಿಜಘಾನ ಸಃ ॥ ೨೦ ॥
ತತೋ ದೈತ್ಯಗಣಾಃ ಸರ್ವೇ ಹನ್ಯಮಾನಾ ಮುರಾರಿಣಾ ।
ತ್ರಾತಾರಂ ನಾಭ್ಯಗಚ್ಛಂತ ಮೃಗಾಃ ಸಿಂಹಾರ್ದಿತಾ ಇವ ॥ ೨೧ ॥
ಏತಸ್ಮಿನ್ನಂತರೇ ದೈತ್ಯಃ ಕಾಲಖಂಜ ಇತಿ ಸ್ಮೃತಃ ।
ಸ ಕೋಪವಶಮಾಪನ್ನೋ ವಾಸುದೇವಮುಪಾದ್ರವತ್ ॥ ೨೨ ॥
ಸ ಹತ್ವಾ ಪಂಚಭಿರ್ಬಾಣೈರ್ವಾಸುದೇವಂ ಶಿಲಾಶಿತೈಃ ।
ಜಘಾನ ಗರುಡಂ ಕ್ರುದ್ಧೋ ದಶಭಿರ್ನತಪರ್ವಭಿಃ ॥ ೨೩ ॥
ತತಃ ಸುದರ್ಶನಂ ಚಕ್ರಂ ತಸ್ಯ ದೈತ್ಯಸ್ಯ ಮಾಧವಃ ।
ಪ್ರಮುಮೋಚ ವಧಾರ್ಥಾಯ ಜ್ವಾಲಾಮಾಲಾಸಮಾವೃತಂ ॥ ೨೪ ॥
ಸೋಽಪಿ ತಚ್ಚಕ್ರಮಾಲೋಕ್ಯ ವಾಸುದೇವಕರಾಚ್ಚ್ಯುತಂ ।
ಆಗಚ್ಛಂತಂ ಪ್ರಸಾರ್ಯಾಸ್ಯಂ ಗ್ರಸ್ತುಂ ತತ್ಸಂಮುಖೋ ಯಯೌ ॥ ೨೫ ॥
ಅಗ್ರಸಚ್ಚ ಮಹಾದೈತ್ಯಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ।
ವಾಸುದೇವಂ ಸಮುದ್ದಿಶ್ಯ ತತಶ್ಚಿಕ್ಷೇಪ ಸಾಯಕಾನ್ ॥ ೨೬ ॥

---

೨೦. ಬಳಿಕ ಆ ವಿಷ್ಣುವು ಶಾರ್ಙ್ಗವೆಂಬ ತನ್ನ ಬಿಲ್ಲಿನಿಂದ ಹದ್ದಿನ ರೆಕ್ಕೆಗಳನ್ನು ಕಟ್ಟಿರುವ ಬಾಣಗಳನ್ನು ಪ್ರಯೋಗಿಸಿ ದೈತ್ಯರನ್ನು ಕೊಂದನು.

೨೧. ತರುವಾಯ ವಿಷ್ಣುವಿನಿಂದ ಹೊಡೆಯಲ್ಪಡುತ್ತಿರುವ ದಾನವರು ಸಿಂಹದಿಂದ ಪೀಡಿತಗಳಾದ ಜಿಂಕೆಗಳಂತೆ ರಕ್ಷಕರನ್ನು ಹೊಂದಲಿಲ್ಲ.

೨೨. ಇಷ್ಟರಲ್ಲಿ ಕಾಲಖಂಜನೆಂಬ ದೈತ್ಯನು ಕುಪಿತನಾಗಿ ವಿಷ್ಣುವನ್ನು ದ್ದೇಶಿಸಿ ಓಡಿಬಂದನು.

೨೩. ಅವನು ಕಲ್ಲಿನಂತೆ ಚೂಪಾದ ಐದು ಬಾಣಗಳಿಂದ ವಿಷ್ಣುವನ್ನೂ ಹತ್ತು ಬಾಣಗಳಿಂದ ಗರುಡನನ್ನೂ ಹೊಡೆದನು.

೨೪. ತರುವಾಯ ಮಾಧವನು ಕಾಲಖಂಜನನ್ನು ಕೊಲ್ಲಲು ಜ್ವಾಲೆಗಳಿಂದ ಪ್ರಜ್ವಲಿಸುವ ಸುದರ್ಶನವೆಂಬ ಚಕ್ರವನ್ನು ಪ್ರಯೋಗಿಸಿದನು.

೨೫. ಅವನು ವಿಷ್ಣುವಿನ ಹಸ್ತದಿಂದ ಬರುತ್ತಿರುವ ಆ ಚಕ್ರವನ್ನು ನೋಡಿ ಬಾಯಿಯನ್ನು ತೆರೆದುಕೊಂಡು, ಅದನ್ನು ನುಂಗಲು ಎದುರಾಗಿ ಹೋದನು.

೨೬. ಆ ಕಾಲಖಂಜನು ಆ ಚಕ್ರವನ್ನು ನುಂಗಿ ವಿಷ್ಣುವನ್ನು ಕುರಿತು ನಿಲ್ಲು, ನಿಲ್ಲು ಎಂದು ಹೇಳಿ ಬಾಣಗಳನ್ನು ಎಸೆದನು.

ತತಶ್ಚಕ್ರೇ ಸ ದೈತ್ಯೇನ ಗ್ರಸ್ತಚಕ್ರೇಣ ತಾಡಿತಃ ।
ಸುಪರ್ಣೇನ ಸಮಾಯುಕ್ತೋ ಜಗಾಮ ವಿಷಮಾಂ ವ್ಯಥಾಂ ॥ ೨೭ ॥
ಏತಸ್ಮಿನ್ನಂತರೇ ಕ್ರುದ್ಧೋ ಭಗವಾಂಸ್ತ್ರಿಪುರಾಂತಕಃ ।
ದೃಷ್ಟ್ವಾ ಹರಿಂ ತಥಾಭೂತಂ ಶಕ್ರಂ ಚಾಽಪಿ ಪರಾಙ್ಮುಖಂ ॥ ೨೮ ॥
ತತಃ ಶೂಲಪ್ರಹಾರೇಣ ತಂ ನಿಹತ್ಯ ದನೋಃಸುತಂ ।
ಶರೈಃ ಪಿನಾಕನಿರ್ಮುಕ್ತೈರ್ಜಘಾನೋಚ್ಚೈಸ್ತಥಾ ಪರಾನ್ ॥ ೨೯ ॥
ಕಾಲಪ್ರಭಂ ಪ್ರಕಾಲಂಚ ಕಾಲಾಸ್ಯಂ ಕಾಲವಿಗ್ರಹಂ ।
ಜಘಾನ ಭಗವಾಂಛಂಭುಸ್ತಥಾಽನ್ಯಾನಪಿ ನಾಯಕಾನ್ ॥ ೩೦ ॥
ತತಃ ಪ್ರಧಾನಾಸ್ತೇ ಸರ್ವೇ ದಾನವಾ ಅಪಿ ದಾರುಣಾಃ ।
ಪಲಾಯನಪರಾ ಜಾತಾ ನಿರುತ್ಸಾಹಾ ದ್ವಿಷಜ್ಜಯೇ ॥ ೩೧ ॥
ತತಃ ಶಕ್ರಶ್ಚ ವಿಷ್ಣುಶ್ಚ ಲಬ್ಧಸಂಜ್ಞೌ ಧೃತಾಯುಧೌ ।
ಶ್ಲಾಘಯಂತೌ ಮಹಾದೇವಂ ಸಂಸ್ಥಿತೌ ರಣಮೂರ್ಧನಿ ॥ ೩೨ ॥
ಏತಸ್ಮಿನ್ನಂತರೇ ಭಗ್ನಾನ್ ಸಮುದ್ವೀಕ್ಷ್ಯ ದನೋಃಸುತಾನ್ ।
ಜಘ್ನುಃಶರಶತೈಃ ಶಸ್ತ್ರೈಃ ಸರ್ವೇ ದೇವಾಃ ಸವಾಸವಾಃ ॥ ೩೩ ॥

---

೨೭. ಚಕ್ರವನ್ನು ನುಂಗಿದ ಆ ದೈತ್ಯನು ವಿಷ್ಣುವನ್ನು ಹೀಗೆ ಹೊಡೆಯಲು ಮಾಧವನು ಗರುಡನೊಡನೆ ಅತಿಶಯವ್ಯಥೆಯನ್ನು ಹೊಂದಿದನು.

೨೮–೨೯. ಈ ಸಮಯದಲ್ಲಿ ಮಹೇಶ್ವರನು ಹಾಗೆ ವ್ಯಥೆಗೊಂಡ ವಿಷ್ಣುವನ್ನೂ, ಹಿಂದಿರುಗಿದ ಇಂದ್ರನನ್ನೂ ನೋಡಿ ಕುಪಿತನಾಗಿ ಶೂಲದಿಂದ ಆ ದೈತ್ಯನನ್ನು ಕೊಂದು ಇತರ ದಾನವರನ್ನೂ ಪಿನಾಕಬಿಲ್ಲಿನಿಂದ ಬಾಣಗಳನ್ನು ಪ್ರಯೋಗಿಸಿ ಕೊಂದನು.

೩೦. ಹಾಗೆಯೇ ಮಹೇಶ್ವರನು ಕಾಲಪ್ರಭ, ಪ್ರಕಾಲ, ಕಾಲಾಸ್ಯ, ಕಾಲವಿಗ್ರಹ ಎಂಬ ಇತರ ಮುಖ್ಯರಾದ ದಾನವರನ್ನು ವಧಿಸಿದನು.

೩೧. ತರುವಾಯ ಭಯಂಕರರಾದ ಪ್ರಧಾನ ದಾನವರು ಶತ್ರುಜಯದಲ್ಲಿ ಉತ್ಸಾಹವಿಲ್ಲದವರಾಗಿ ಓಡಿಹೋದರು.

೩೨. ತರುವಾಯ ಇಂದ್ರ ಮತ್ತು ನಾರಾಯಣರು ಎಚ್ಚರಗೊಂಡು ಆಯುಧಗಳನ್ನು ಹಿಡಿದು ಮಹೇಶ್ವರನನ್ನು ಹೊಗಳುತ್ತ ಯುದ್ಧಕ್ಕೆ ನಿಂತರು.

೩೩. ಈ ಸಮಯದಲ್ಲಿ ಇಂದ್ರಾದಿದೇವತೆಗಳು ದಾನವರು ಭಗ್ನರಾಗಿರುವುದನ್ನು ನೋಡಿ ಅನೇಕ ಶಸ್ತ್ರಗಳಿಂದ ಅವರನ್ನು ಹೊಡೆದರು.

ಅಥ ತೇ ಹತಭೂಯಿಷ್ಠಾ ದಾನವಾ ಬಲವತ್ತರಾಃ ।
ಹನ್ಯಮಾನಾ ಶಿತೈರ್ಬಾಣೈಸ್ತ್ರಿದಶೈರ್ಜಿತಕಾಶಿಭಿಃ ॥ ೩೪ ॥
ಅಗಮ್ಯಂ ಮನಸಾ ತೇಷಾಂ ಪ್ರವಿಷ್ಟಾ ವರುಣಾಲಯಂ ।
ಶಸ್ತ್ರೈಶ್ಚ ಕ್ಷತಸರ್ವಾಂಗಾ ಹತನಾಥಾಃ ಸುದುಃಖಿತಾಃ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದೇವಾಸುರಸಂಗ್ರಾಮವರ್ಣನಂ"ನಾಮ
ಚತುಸ್ತ್ರಿಂಶೋಽಧ್ಯಾಯಃ

---

೩೪–೩೫. ಜಯಶೀಲರಾದ ದೇವತೆಗಳು ಹೀಗೆ ಹರಿತವಾದ ಬಾಣಗಳಿಂದ ಹೊಡೆಯುತ್ತಿರಲು ಬಲಿಷ್ಠರಾದ ಅನಾಥ ದಾನವರು ಗಾಯಗೊಂಡ ಶರೀರವುಳ್ಳವರಾಗಿ ದೇವತೆಗಳಿಗೆ ಮನಸ್ಸಿನಿಂದಲೂ ಅಗಮ್ಯವಾದ ಸಮುದ್ರವನ್ನು ಪ್ರವೇಶಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದೇವಾಸುರಸಂಗ್ರಾಮವರ್ಣನ"ವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚತ್ರಿಂಶೋಽಧ್ಯಾಯಃ

### ಚಿತ್ರೇಶ್ವರಪೀಠನಾಮಪೂರ್ವಕವರಪ್ರದಾನವರ್ಣನಂ

ಸೂತ ಉವಾಚ :—

ಏವಂ ತೇಷು ಪ್ರಭಗ್ನೇಷು ಹತೇಷು ಚ ಸುರೋತ್ತಮಾಃ ।
ಪ್ರಹೃಷ್ಟಮನಸಃ ಸರ್ವೇ ಸ್ತುತ್ವಾದೇವಂ ಮಹೇಶ್ವರಂ ॥ ೧ ॥
ತೇನೈವ ಚಾಽಥ ನಿರ್ಮುಕ್ತಾಃ ಪ್ರಣಮ್ಯ ಚ ಮುಹುರ್ಮುಹುಃ ।
ಸ್ವಂ ಸ್ವಂ ಸ್ಥಾನಮಥಾಜಗ್ಮುಃ ಶಕ್ರವಿಷ್ಣುಪುರಃಸರಾಃ ॥ ೨ ॥
ತೇಽಪಿ ದಾನವಶಾರ್ದೂಲಾ ಹತಾಶಾಶ್ಚ ಸುರೋತ್ತಮೈಃ ।
ಮಂತ್ರಂ ಪ್ರಚಕ್ರಿರೇ ಸರ್ವೇ ನಾಶಾಯ ತ್ರಿದಿವೌಕಸಾಂ ॥ ೩ ॥
ತೇಷಾಂ ಮಂತ್ರಯತಾಮೇಷ ನಿಶ್ಚಯಃ ಸಮಪದ್ಯತ ।
ನಾಽನ್ಯತ್ರ ಧರ್ಮವಿಧ್ವಂಸಾದ್ದೇವಾನಾಂ ಜಾಯತೇ ಕ್ಷಯಃ ॥ ೪ ॥
ತಸ್ಮಾತ್ತಪಸ್ವಿನೋ ಯೇ ಚ ಯೇ ಚ ಯಜ್ಞಪರಾಯಣಾಃ ।
ತಥಾಽನ್ಯೇ ನಿರತಾ ಧರ್ಮೇ ನಿಹಂತವ್ಯಾ ನಿಶಾಗಮೇ ॥ ೫ ॥
ಏವಂ ತೇ ನಿಶ್ಚಯಂ ಕೃತ್ವಾ ನಿಷ್ಕ್ರಮ್ಯ ವರುಣಾಲಯಾತ್ ।
ರಾತ್ರೌ ಸದೈವ ನಿಘ್ನಂತಿ ಜನಾನ್ ಧರ್ಮಪರಾಯಣಾನ್ ॥ ೬ ॥

---

## ಕನ್ನಡದ ಅನುವಾದ

### ಚಿತ್ರೇಶ್ವರಪೀಠನಾಮಪೂರ್ವಕವರಪ್ರದಾನವರ್ಣನ

೧–೨. ಸೂತನು ಹೇಳುತ್ತಾನೆ:—ಹೀಗೆ ಆ ದಾನವರು ಹತರಾಗಲು ಇಂದ್ರಾದಿ ಸುರಶ್ರೇಷ್ಠರು ಸಂತುಷ್ಟರಾಗಿ ಮಹೇಶ್ವರನನ್ನು ಸ್ತುತಿಸಿ ನಮಸ್ಕರಿಸಿ ಅವನಿಂದ ಬಿಡಲ್ಪಟ್ಟವರಾಗಿ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು.

೩. ದಾನವೋತ್ತಮರೂ ದೇವತೆಗಳಿಂದ ಭಗ್ನಾಶರಾಗಿ ಅವರ ನಾಶಕ್ಕಾಗಿ ಮಂತ್ರಾಲೋಚನೆಯನ್ನು ಮಾಡಿದರು.

೪. ಅವರು ಆಲೋಚಿಸಿ ಹೀಗೆ ನಿರ್ಣಯಿಸಿದರು. ಧರ್ಮವನ್ನು ನಾಶಗೊಳಿಸದಿದ್ದರೆ ದೇವತೆಗಳು ನಾಶವಾಗುವುದಿಲ್ಲ.

೫. ಆದ್ದರಿಂದ ರಾತ್ರಿವೇಳೆ ಮುನಿಗಳನ್ನೂ, ಯಜ್ಞಗಳನ್ನು ಮಾಡುವವರನ್ನೂ, ಧರ್ಮಿಷ್ಠರನ್ನೂ ಕೊಲ್ಲಬೇಕು.

೬. ಅವರು ಹೀಗೆ ನಿಶ್ಚಯಿಸಿ ರಾತ್ರಿವೇಳೆ ಸಮುದ್ರದಿಂದ ಹೊರಟು ಧರ್ಮನಿರತರಾದ ಜನರನ್ನು ಯಾವಾಗಲೂ ಕೊಲ್ಲುತ್ತಿದ್ದರು.

ಯತ್ರ ಯತ್ರ ಭವೇದ್ಯಜ್ಞಃ ಸತ್ರಂ ವಾಽಪ್ಯುತ್ಸವೋಽಥ ವಾ ।
ತತ್ರ ಗತ್ವಾ ನಿಶಾಯೋಗೇ ಪ್ರಕುರ್ವಂತಿ ಜನಕ್ಷಯಂ ॥ ೭ ॥
ತೈಃ ಪ್ರಭೂತಾ ಮುಖಾ ಧ್ವಸ್ತಾ ದೀಕ್ಷಿತಾ ವಿನಿಪಾತಿತಾಃ ।
ಋತ್ವಿಜಶ್ಚ ತಥಾಽನ್ಯೇಽಪಿ ಸಾಮಾನ್ಯಾ ದ್ವಿಜಸತ್ತಮಾಃ ॥ ೮ ॥
ಆಶ್ರಮೇ ಮುನಿಮುಖ್ಯಸ್ಯ ಶಾಂಡಿಲ್ಯಸ್ಯ ಮಹಾತ್ಮನಃ ।
ಸಹಸ್ರಂ ಬ್ರಾಹ್ಮಣೇಂದ್ರಾಣಾಂ ಭಕ್ಷಿತಂ ತೈರ್ದುರಾತ್ಮಭಿಃ ॥ ೯ ॥
ಶತಾನಿ ಚ ಸಹಸ್ರಾಣಿ ನಿಹತಾನಿ ದ್ವಿಜನ್ಮನಾಂ ।
ವಿಶ್ವಾಮಿತ್ರಸ್ಯ ಪಂಚೈವ ಸಪ್ತಾಽತ್ರೇಶ್ಚೈವ ಧೀಮತಃ ॥ ೧೦ ॥
ಏತಸ್ಮಿನ್ನೇವ ಕಾಲೇ ತು ಸಮಸ್ತಂ ಧರಣೀತಲಂ ।
ನಷ್ಟಯಜ್ಞೋತ್ಸವಂ ಜಾತಂ ಕಾಲೇಯಭಯಪೀಡಿತಂ ॥ ೧೧ ॥
ನ ಕಶ್ಚಿಚ್ಛಯನಂ ರಾತ್ರೌ ಪ್ರಕರೋತಿ ಮಹೀತಲೇ ।
ಧೃತಾಯುಧಾ ಜನಾಃ ಸರ್ವೇ ತಿಷ್ಠಂತಿ ಸಹ ತಾಪಸೈಃ ॥ ೧೨ ॥
ರಾತ್ರೌ ಸ್ವಪಂತಿ ಯೇ ಕೇಚಿದ್ವಿಶ್ವಸ್ತಾ ಧರ್ಮಭಾಜನಾಃ ।
ತೇಷಾಮಸ್ಥೀನಿ ದೃಶ್ಯಂತೇ ಪ್ರಾತರೇವ ಹಿ ಕೇವಲಂ ॥ ೧೩ ॥
ಅಥ ದೇವಗಣಾಃ ಸರ್ವೇ ಯಜ್ಞಭಾಗವಿನಾಕೃತಾಃ ।
ಪ್ರಜಗ್ಮುಃ ಪರಮಾಮಾರ್ತಿಂ ಬ್ರಹ್ಮವಿಷ್ಣುಪುರಸ್ಸರಾಃ ॥ ೧೪ ॥

---

೭. ಎಲ್ಲಿ ಯಜ್ಞವಾಗಲಿ, ಸತ್ರವಾಗಲಿ, ಉತ್ಸವವಾಗಲಿ ನಡೆಯುವುದೊ ಅಲ್ಲಿಗೆ ರಾತ್ರಿವೇಳೆ ಹೋಗಿ ಜನರನ್ನು ಕೊಲ್ಲುತ್ತಿದ್ದರು.

೮. ಅವರು ಅನೇಕ ಯಜ್ಞಗಳನ್ನು ಹಾಳುಮಾಡಿದರು. ದೀಕ್ಷಿತರನ್ನೂ, ಋತ್ವಜರನ್ನೂ ಇತರ ಸಾಮಾನ್ಯ ಜನರನ್ನೂ ಕೊಂದರು.

೯. ಆ ದುರಾತ್ಮರು ಮಹಾತ್ಮನಾದ ಶಾಂಡಿಲ್ಯಮುನಿಯ ಆಶ್ರಮದಲ್ಲಿ ಸಾವಿರ ಮಂದಿ ಬ್ರಾಹ್ಮಣರನ್ನು ಭಕ್ಷಿಸಿದರು.

೧೦. ವಿಶ್ವಾಮಿತ್ರನ ಆಶ್ರಮದಲ್ಲಿ ಐದುಸಾವಿರ, ಅತ್ರಿಯ ಆಶ್ರಮದಲ್ಲಿ ಏಳುಸಾವಿರ ಒಟ್ಟಿಗೆ ಒಂದು ಲಕ್ಷ ಬ್ರಾಹ್ಮಣರನ್ನು ಕೊಂದರು.

೧೧. ಈ ಸಮಯದಲ್ಲಿ ಸಕಲಭೂಮಂಡಲವು ಕಾಲೇಯದಾನವರ ಭಯ ದಿಂದ ಯಜ್ಞೋತ್ಸವಗಳಿಲ್ಲದ್ದಾಯಿತು.

೧೨. ಭೂಮಿಯಲ್ಲಿ ಒಬ್ಬನೂ ರಾತ್ರಿವೇಳೆ ಮಲಗುತ್ತಿರಲಿಲ್ಲ. ಜನರೆಲ್ಲ ಋಷಿಗಳೊಡನೆ ಆಯುಧಧಾರಿಗಳಾಗಿದ್ದರು.

೧೩–೧೪. ರಾತ್ರಿಕಾಲದಲ್ಲಿ ನಂಬಿಕೆಯಿಂದ ಮಲಗಿದ ಧರ್ಮಿಷ್ಠರ ಅಸ್ಥಿಗಳು ಮಾತ್ರ ಬೆಳಗ್ಗೆ ಕಾಣುತ್ತಿದ್ದುವು. ಬಳಿಕ ಬ್ರಹ್ಮಾದಿ ದೇವತೆಗಳು ಯಜ್ಞಭಾಗಗಳಿಲ್ಲದೆ ಅತ್ಯಂತ ದುಃಖಗೊಂಡರು.

ತತೋ ಗತ್ವಾ ಸಮುದ್ರಾಂತಂ ವಧಾಯ ಸುರವಿದ್ವಿಷಾಂ ।
ನ ಶೇಕುರ್ವಿಷಮಸ್ಥಾಂಸ್ತಾನ್ಮನಸಾಽಪಿ ಪ್ರಧರ್ಷಿತುಂ ॥ ೧೫ ॥
ತತಃ ಸಮುದ್ರನಾಶಾಯ ಮಂತ್ರಂ ಚಕ್ರುಃ ಸುದುಃಖಿತಾಃ ।
ತಸ್ಮಿನ್ನಷ್ಟೇ ಭವಂತ್ಯೇವ ವಧ್ಯಾ ದಾನವಸತ್ತಮಾಃ ॥ ೧೬ ॥
ಅಗಸ್ತ್ಯೇನ ವಿನಾ ನೈಷ ಶೋಷಂ ಯಾಸ್ಯತಿ ಸಾಗರಃ ।
ತಸ್ಮಾತ್ಸಂಪ್ರಾರ್ಥಯಾಮೋಽತ್ರ ಕೃತ್ಯೇ ಗತ್ವಾ ಮುನೀಶ್ವರಂ ॥ ೧೭ ॥
ಚಮತ್ಕಾರಪುರೇ ಕ್ಷೇತ್ರೇ ಸ ತಿಷ್ಠತಿ ಚ ಸನ್ಮುನಿಃ ।
ತಸ್ಮಾತ್ತತ್ರೈವ ಗಚ್ಛಾಮೋ ಯೇನ ಗಚ್ಛತಿ ಸತ್ವರಂ ॥ ೧೮ ॥
ಏವಂ ನಿಶ್ಚಿತ್ಯ ತೇ ಸರ್ವೇ ತ್ರಿದಶಾಸ್ತಸ್ಯ ಚಾಶ್ರಮಂ ।
ಸಂಪ್ರಾಪ್ತಾ ಮುನಿಮುಖ್ಯಸ್ಯ ಮಿತ್ರಾವರುಣಜನ್ಮನಃ ॥ ೧೯ ॥
ಸೋಽಪಿ ಸರ್ವಾನ್ ಸಮಾಲೋಕ್ಯ ಸಂಪ್ರಾಪ್ತಾನ್ ಸುರಸತ್ತಮಾನ್ ।
ಪ್ರಹೃಷ್ಟಃ ಸಂಮುಖಸ್ತೂರ್ಣಂ ಜಗಾಮಾಽತೀವ ಸನ್ಮುನಿಃ ॥ ೨೦ ॥
ಪ್ರೋವಾಚ ಪ್ರಾಂಜಲಿರ್ವಾಕ್ಯಂ ಹರ್ಷಗದ್ಗದಯಾ ಗಿರಾ ।
ಬ್ರಹ್ಮಾದೀಂಸ್ತಾನ್ ಸುರಾನ್ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಃ ॥ ೨೧ ॥

---

೧೫. ಅನಂತರ ಅವರು ದೈತ್ಯರ ನಾಶಕ್ಕಾಗಿ ಸಮುದ್ರದ ಕೊನೆಗೆ ಹೋಗಿ ವಿಷಮಸ್ಥಳದಲ್ಲಿರುವ ಅವರನ್ನು ಮನಸ್ಸಿನಿಂದಲೂ ತಿರಸ್ಕರಿಸಲು ಶಕ್ತರಾಗಲಿಲ್ಲ.

೧೬. ಆದ್ದರಿಂದ ಸಮುದ್ರವನ್ನು ನಾಶಗೊಳಿಸಿದರೆ ದಾನವರು ವಧ್ಯರಾಗುವರೆಂದು ದುಃಖದಿಂದ ಸಮುದ್ರವನ್ನು ನಾಶಗೊಳಿಸಬೇಕೆಂದಾಲೋಚಿಸಿದರು.

೧೭. ಅಗಸ್ತ್ಯನಲ್ಲದೆ ಬೇರೆ ಯಾರಿಂದಲೂ ಈ ಸಮುದ್ರವು ಒಣಗುವುದಿಲ್ಲ. ಆದ್ದರಿಂದ ಈ ಕೆಲಸಕ್ಕಾಗಿ ಆ ಮುನಿಯೆಡೆಗೆ ಹೋಗಿ ಪ್ರಾರ್ಥಿಸೋಣ.

೧೮. ಆ ಮುನಿಯು ಚಮತ್ಕಾರಪುರದಲ್ಲಿರುವನು. ಆದ್ದರಿಂದ ಅಲ್ಲಿಗೆ ಹೋಗಿ ಆ ಮುನಿಯು ಬೇಗನೆ ಹೋಗುವಂತೆ ಮಾಡೋಣ.

೧೯. ಆ ದೇವತೆಗಳೆಲ್ಲ ಹೀಗೆ ನಿಶ್ಚಯಿಸಿ ಆ ಅಗಸ್ತ್ಯಮುನಿಯ ಆಶ್ರಮವನ್ನು ಸೇರಿದರು.

೨೦. ಆ ಮುನಿಯು ಬಂದಿರುವ ದೇವತೆಗಳನ್ನೆಲ್ಲ ನೋಡಿ ಸಂತೋಷದಿಂದ ಬೇಗನೆ ಎದುರುಗೊಂಡನು.

೨೧. ಅವನು ಬ್ರಹ್ಮಾದಿದೇವತೆಗಳನ್ನು ನೋಡಿ ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಕೈಮುಗಿದುಕೊಂಡು ಸಂತೋಷದಿಂದ ಗದ್ಗದವಾದ ಧ್ವನಿಯಿಂದ ಇಂತೆಂದನು.

ಚಮತ್ಕಾರಪುರಂ ಕ್ಷೇತ್ರಮೇತನ್ಮೇಧ್ಯಮಪಿ ಸ್ಥಿತಂ ।
ಭೂಯೋ ಮೇಧ್ಯತರಂ ಜಾತಂ ಯುಷ್ಮಾಕಂ ಹಿ ಸಮಾಶ್ರಯಾತ್ ॥೨೨॥
ತಸ್ಮಾದ್ವದತ ಯತ್ಕೃತ್ಯಂ ಮಯಾ ಸಂಸಿಧ್ಯತೇಽಧುನಾ ।
ತತ್ಸರ್ವಂ ಪ್ರಕರಿಷ್ಯಾಮಿ ಯದ್ಯಪಿ ಸ್ಯಾತ್ಸುದುಷ್ಕರಂ ॥ ೨೩ ॥

ದೇವಾ ಊಚುಃ:—

ಕಾಲೇಯಾ ಇತಿ ದೈತ್ಯಾ ಯೇ ಹತಶೇಷಾಃ ಸುರೈಃ ಕೃತಾಃ ।
ತೇ ಸಮುದ್ರಂ ಸಮಾಶ್ರಿತ್ಯ ನಿಘ್ನಂತಿ ಶುಭಕಾರಿಣಃ ॥ ೨೪ ॥
ಶುಭೇ ನಾಶಮನುಪ್ರಾಪ್ತೇ ಧ್ರುವಂ ನಾಶೋ ದಿವೌಕಸಾಂ ।
ತಸ್ಮಾತ್ತೇಷಾಂ ವಧಾರ್ಥಾಯ ತ್ವಂ ಶೋಷಯ ಮಹಾರ್ಣವಂ ॥ ೨೫ ॥
ಯೇನ ತೇ ಗೋಚರಂ ಪ್ರಾಪ್ತಾ ದೃಷ್ಟೇರ್ದಾನವಸತ್ತಮಾಃ ।
ಬಧ್ಯಂತೇ ವಿಬುಧೈಃ ಸರ್ವೇ ಜಾಯಂತೇ ಚ ಮಖಾ ಇಹ ॥ ೨೬ ॥

ಅಗಸ್ತ್ಯ ಉವಾಚ:—

ಅಹಂ ಸಂವತ್ಸರಸ್ಯಾಂತೇ ಶೋಷಯಿಷ್ಯಾಮಿ ಸಾಗರಂ ।
ವಿದ್ಯಾಬಲಂ ಸಮಾಶ್ರಿತ್ಯ ಯೋಗಿನೀನಾಂ ಸುರೋತ್ತಮಾಃ ॥ ೨೭ ॥

---

೨೨. ಅತಿ ಪವಿತ್ರವಾದ ಈ ಚಮತ್ಕಾರಪುರವು ನಿಮ್ಮ ಆಶ್ರಯದಿಂದ ಮರಳಿ ಅತ್ಯಂತ ಶುದ್ಧವಾಯಿತು.

೨೩. ಆದ್ದರಿಂದ ನಿಮಗೆ ಈಗ ನನ್ನಿಂದ ಆಗಬೇಕಾದ ಕಾರ್ಯವಾವುದು? ಅದನ್ನು ಹೇಳಿರಿ. ಅದು ದುಷ್ಕರವಾಗಿದ್ದರೂ ಮಾಡುವೆನು.

೨೪. ದೇವತೆಗಳು ಹೇಳುತ್ತಾರೆ:—ದೇವತೆಗಳು ಕೊಂದುಳಿದ ಕಾಲೇಯ ರೆಂಬ ದೈತ್ಯರು ಸಮುದ್ರವನ್ನಾಶ್ರಯಿಸಿ ಸತ್ಕಾರ್ಯವನ್ನಾಚರಿಸುವ ಜನರನ್ನು ಕೊಲ್ಲುತ್ತಿದ್ದಾರೆ.

೨೫. ಶುಭಕಾರ್ಯವು ನಾಶವಾದರೆ ನಿಶ್ಚಯವಾಗಿಯೂ ದೇವತೆಗಳು ನಾಶ ವಾಗುವರು. ಆದ್ದರಿಂದ ಅವರನ್ನು ಕೊಲ್ಲುವುದಕ್ಕಾಗಿ ನೀನು ಸಮುದ್ರವನ್ನು ಒಣಗಿಸು.

೨೬. ಅದರಿಂದ ದೃಷ್ಟಿಗೋಚರರಾದ ದಾನವರನ್ನು ದೇವತೆಗಳು ಕೊಲ್ಲು ವರು. ಭೂಮಿಯಲ್ಲಿ ಯಜ್ಞಗಳು ನಡೆಯುವುವು.

೨೭. ಅಗಸ್ತ್ಯನು ಹೇಳುತ್ತಾನೆ:—ದೇವತೆಗಳೆ! ನಾನು ಒಂದು ವರ್ಷದ ಕೊನೆಯಲ್ಲಿ ಯೋಗಿನಿಯರ ವಿದ್ಯಾಬಲವನ್ನಾಶ್ರಯಿಸಿ ಸಮುದ್ರವನ್ನು ಒಣಗಿಸು ವೆನು.

ತಸ್ಮಾದ್ವ್ರಜತ ಹರ್ಮ್ಯಾಣಿ ಯೂಯಂ ಯಾತಿ ಹಿ ವತ್ಸರಂ ।
ಯಾವದಬ್ದೋಽಪಿ ವರ್ಷಾಂತೇ ಕಾರ್ಯಮಾಗಮನಂ ಧ್ರುವಂ ॥೨೮॥
ತತೋ ಮಯಾ ಸಮಂ ಗತ್ವಾ ಶೋಷಿತೇ ವರುಣಾಲಯೇ ।
ಹಂತವ್ಯಾ ದಾನವಾ ದುಷ್ಟಾ ಹಂತ ಯೈಃ ಪೀಡತೇ ಜಗತ್ ॥ ೨೯ ॥
ತತೋ ದೇವಗಣಾಃ ಸರ್ವೇ ಗತಾಃ ಸ್ವೇ ಸ್ವೇ ನಿಕೇತನೇ ।
ಅಗಸ್ತ್ಯೋಽಪಿ ಸಮುದ್ಯೋಗಂ ಚಕ್ರೇ ವಿದ್ಯಾಸಮುದ್ಭವಂ ॥ ೩೦ ॥
ತತಃ ಸರ್ವಾಣಿ ಪೀಠಾನಿ ಯಾನಿ ಸಂತಿ ಧರಾತಲೇ ।
ತಾನಿ ತತ್ರಾನಯಾಮಾಸ ಮಂತ್ರಶಕ್ತ್ಯಾ ಮಹಾಮುನಿಃ ॥ ೩೧ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ತೇಷು ಸಂಪೂಜ್ಯ ಭಕ್ತಿತಃ ।
ಯೋಗಿನೀನಾಂ ಚ ವೃಂದಾನಿ ಕನ್ಯಕಾನಾಂ ವಿಶೇಷತಃ ॥ ೩೨ ॥
ವಿದ್ಯಾಂ ವಿಶೋಷಿಣೀಂ ನಾಮ ಸಮಾರಾಧಯತ ದ್ವಿಜಃ ।
ಪೂಜಯಿತ್ವಾ ದಿಶಾಂ ಪಾಲಾನ್ಕ್ಷೇತ್ರ ಪಾಲಾನಪಿ ದ್ವಿಜಃ ।
ಆಕಾಶಚಾರಿಣೀಂ ಚೈವ ದೇವತಾಂ ಶ್ರದ್ಧಯಾ ದ್ವಿಜಃ ॥ ೩೩ ॥
ತತಃ ಸಂವತ್ಸರಸ್ಯಾಂತೇ ಪ್ರಸನ್ನಾ ತಸ್ಯ ದೇವತಾ ।
ಪ್ರೋವಾಚ ವದ ಯತ್ಕೃತ್ಯಂ ಸಿದ್ಧಾಽಹಂ ತತ್ರ ಸನ್ಮುನೇ ॥ ೩೪ ॥

---

೨೮. ಆದ್ದರಿಂದ ನೀವು ನಿಮ್ಮ ಮನೆಗಳಿಗೆ ತೆರಳಿರಿ. ಸಂವತ್ಸರವು ಕಳೆಯುವುದು. ವರ್ಷದ ಕೊನೆಯಲ್ಲಿ ಮರಳಿ ಇಲ್ಲಿಗೆ ಬನ್ನಿರಿ.

೨೯. ತರುವಾಯ ನನ್ನೊಡನೆ ಹೋಗಿ ಸಮುದ್ರವನ್ನು ಒಣಗಿಸಿದ ಕೂಡಲೆ ಜಗತ್ತನ್ನು ಪೀಡಿಸುವ ದುಷ್ಟದಾನವರನ್ನು ಕೊಲ್ಲಿರಿ.

೩೦. ಬಳಿಕ ದೇವತೆಗಳೆಲ್ಲ ತಮ್ಮ ತಮ್ಮ ಮನೆಗೆ ಹೋದರು. ಅಗಸ್ತ್ಯನೂ ವಿದ್ಯಾವಿಷಯಕವಾಗಿ ಪ್ರಯತ್ನಮಾಡಿದನು.

೩೧. ಅವನು ಭೂಮಿಯಲ್ಲಿರುವ ಪೀಠಗಳನ್ನೆಲ್ಲ ಮಂತ್ರಶಕ್ತಿಯಿಂದ ಅಲ್ಲಿಗೆ ಕರೆಯಿಸಿದನು.

೩೨–೩೩. ಅವುಗಳಲ್ಲಿ ಅಷ್ಟಮಿ, ಚತುರ್ದಶೀ ದಿನಗಳಲ್ಲಿ ಯೋಗಿನಿಯರು ಮತ್ತು ಕನ್ಯಕೆಯರ ಸಮೂಹವನ್ನೂ, ದಿಕ್ಪಾಲಕರನ್ನೂ, ಕ್ಷೇತ್ರಪಾಲಕರನ್ನೂ ಆಕಾಶಚಾರಿಣಿಯಾದ ದೇವತೆಯನ್ನೂ ಶ್ರದ್ಧೆಯಿಂದ ಪೂಜಿಸಿ ವಿಶೋಷಿಣೀ ಎಂಬ ವಿದ್ಯೆಯನ್ನು ಆರಾಧಿಸಿದನು.

೩೪. ತರುವಾಯ ಒಂದು ವರ್ಷದ ಕೊನೆಯಲ್ಲಿ ಆ ದೇವತೆಯು ಪ್ರಸನ್ನಳಾಗಿ ಮುನಿಯೆ! ನಾನು ನಿನಗೆ ಸಿದ್ಧಳಾಗಿರುವೆನು. ಯಾವ ಕೆಲಸವನ್ನು ಮಾಡಬೇಕು? ಹೇಳು. ಎಂದಳು.

ಅಗಸ್ತ್ಯ ಉವಾಚ :—

ಯದಿ ದೇವಿ ಪ್ರಸನ್ನಾ ಮೇ ತದಾಸ್ಯಂ ವಿಶ ಸತ್ವರಂ ।
ಯೇನ ಸಂಶೋಷಯಾಮ್ಯಾಶು ಸಮುದ್ರಂ ದೇವಿ ವಾಗ್ಯತಃ ॥ ೩೫ ॥
ಸಾ ತಥೇತಿ ಪ್ರತಿಜ್ಞಾಯ ಪ್ರವಿಷ್ಟಾ ಸತ್ವರಂ ಮುಖೇ ।
ಸಂಶೋಷಣೀ ಮಹಾವಿದ್ಯಾ ತಸ್ಯರ್ಷೇರ್ಭಾವಿತಾತ್ಮನಃ ॥ ೩೬ ॥
ಏತಸ್ಮಿನ್ನಂತರೇ ಪ್ರಾಪ್ತಾಃ ಸರ್ವೇ ದೇವಾಃ ಸವಾಸವಾಃ ।
ಧೃತಾಯುಧಕರಾ ಹೃಷ್ಟಾಃ ಸನ್ನದ್ಧಾ ಯುದ್ಧಹೇತವೇ ॥ ೩೭ ॥
ತತಃ ಸಂಪ್ರಸ್ಥಿತೋ ವಿಪ್ರೋ ದೇವೈಃ ಸರ್ವೈಃ ಸಮಾಹಿತಃ ।
ವಾರಿರಾಶಿಂ ಸಮುದ್ದಿಶ್ಯ ಸಂಶುಷ್ಕವದನಸ್ತಥಾ ॥ ೩೮ ॥
ಅಥ ಗತ್ವಾ ಸಮುದ್ರಾಂತಂ ಸ್ತೂಯಮಾನೋ ದಿವಾಲಯೈಃ ।
ಪಿಪಾಸಾಕುಲಿತೋಽತೀವ ಸರ್ವಾನ್ದೇವಾನುವಾಚ ಹ ॥ ೩೯ ॥
ಏಷೋಽಹಂ ಸಾಗರಂ ಸದ್ಯಃ ಶೋಷಯಿಷ್ಯಾಮಿ ಸಾಂಪ್ರತಂ ।
ಯೂಯಂ ಭವತ ಸೋದ್ಯೋಗಾ ವಧಾಯ ಸುರವಿದ್ವಿಷಾಂ ॥ ೪೦ ॥

ಸೂತ ಉವಾಚ :—

ಏವಮುಕ್ತ್ವಾ ಮುನಿಃ ಸೋಽಥ ಮತ್ಸ್ಯಕಚ್ಛಪಸಂಕುಲಂ ।
ಹೇಲಯಾ ಪ್ರಪಪೌ ಕೃತ್ಸ್ನಂ ಗ್ರಾಹೈಃ ಕೀರ್ಣಂ ಮಹಾರ್ಣವಂ ॥ ೪೧ ॥

---

೩೫. ಅಗಸ್ತ್ಯನು ಹೇಳುತ್ತಾನೆ:—ದೇವಿ! ನೀನು ಪ್ರಸನ್ನಳಾಗಿದ್ದರೆ ಬೇಗನೆ ನನ್ನ ಬಾಯಿಯನ್ನು ಪ್ರವೇಶಿಸು. ಅದರಿಂದ ನಾನು ಮೌನವನ್ನು ತಾಳಿ ಸಮುದ್ರವನ್ನು ಒಣಗಿಸುವೆನು.

೩೬. ಸಂಶೋಷಿಣೀ ಮಹಾವಿದ್ಯೆಯು ಹಾಗೆಯೇ ಆಗಲೆಂದು ಒಪ್ಪಿ ಧ್ಯಾನಿಸುತ್ತಿರುವ ಆ ಮುನಿಯ ಬಾಯಿಯನ್ನು ಶೀಘ್ರವಾಗಿ ಪ್ರವೇಶಿಸಿದಳು.

೩೭. ಈ ಸಮಯದಲ್ಲಿ ಇಂದ್ರಾದಿ ದೇವತೆಗಳು ಆಯುಧಗಳನ್ನು ಹಿಡಿದುಕೊಂಡು ಸಂತೋಷದಿಂದ ಯುದ್ಧಕ್ಕೆ ಸಿದ್ಧರಾದರು.

೩೮. ತರುವಾಯ ಅಗಸ್ತ್ಯನು ಸಮಸ್ತ ದೇವತೆಗಳೊಡನೆ ಒಣಗಿದ ಮುಖವುಳ್ಳವನಾಗಿ ಸಮುದ್ರವನ್ನುದ್ದೇಶಿಸಿ ಹೊರಟನು.

೩೯–೪೦. ಅವನು ಸಮುದ್ರದ ತೀರವನ್ನು ಸೇರಿ ದೇವತೆಗಳಿಂದ ಸ್ತುತಿಸಲ್ಪಡುತ್ತ ಬಾಯಾರಿಕೆಯಿಂದ ವ್ಯಥೆಗೊಂಡು ಸಮಸ್ತ ದೇವತೆಗಳನ್ನು ಕುರಿತು ಹೀಗೆಂದನು. ಈಗ ನಾನು ಕೂಡಲೆ ಸಮುದ್ರವನ್ನು ಒಣಗಿಸುವೆನು. ನೀವು ದಾನವರನ್ನು ಕೊಲ್ಲಲು ಪ್ರಯತ್ನಿಸಿರಿ.

೪೧. ಸೂತನು ಹೇಳುತ್ತಾನೆ:—ಆ ಅಗಸ್ತ್ಯನು ಹೀಗೆ ಹೇಳಿ ಮೀನು, ಮೊಸಳೆ, ಆಮೆಗಳಿಂದ ಕೂಡಿರುವ ಸಮುದ್ರವನ್ನು ಅನಾಯಾಸವಾಗಿ ಕುಡಿದನು.

ತತಃ ಸ್ಥಲೋಪಮೇ ಜಾತೇ ತೇ ದೈತ್ಯಾಃ ಸುರಸತ್ತಮೈಃ ।
ವಧ್ಯಂತೇ ನಿಶಿತೈರ್ಬಾಣೈಃ ಸಮಂತಾದ್ವಿಜಿಗೀಷುಭಿಃ ॥ ೪೨ ॥
ಅಥ ಕೃತ್ವಾ ಮಹದ್ಯುದ್ಧಂ ಯಥಾ ಶಕ್ತ್ಯಾಽತಿದಾರುಣಂ ।
ಹತಭೂಯಿಷ್ಟಶೇಷಾ ಯೇ ಭಿತ್ವಾ ಭೂಮಿಂ ಗತಾ ಅಧಃ ॥ ೪೩ ॥
ತತಃ ಪ್ರೋಚುಃ ಸುರಾಃ ಸರ್ವೇ ಸ್ತುತ್ವಾ ತಂ ಮುನಿಸತ್ತಮಂ ।
ಪರಿತ್ಯಜ್ಯ ಜಲಂ ಭೂಯಃ ಪೂರಣಾರ್ಥಂ ಮಹೋದಧೇಃ ॥ ೪೪ ॥
ನೈಷಾ ವಸುಮತೀ ವಿಪ್ರ ಸಮುದ್ರೇಣ ವಿನಾಕೃತಾ ।
ರಾಜತೇ ವಸ್ತ್ರಸಂತ್ಯಕ್ತಾ ಯಥಾ ನಾರೀ ವಿಭೂಷಿತಾ ॥ ೪೫ ॥

ಅಗಸ್ತ್ಯ ಉವಾಚ :—

ಯಾ ಮಯಾರಾಧಿತಾ ವಿದ್ಯಾ ವರ್ಷಂ ಯಾವತ್ಪ್ರಶೋಷಣೀ ।
ತಯಾ ಪೀತಮಿದಂ ತೋಯಂ ಪರಿಣಾಮಗತಂ ತಥಾ ॥ ೪೬ ॥
ಏಷ ಯಾಸ್ಯತಿ ವೈ ಪೂರ್ತಿಂ ಭೂಯೋऽಪಿ ವರುಣಾಲಯಃ ।
ಖಾತಶ್ಚಾಗಾಧತಾಂ ಪ್ರಾಪ್ತೋ ಗಂಗಾತೋಯೈಃ ಸುನಿರ್ಮಲೈಃ ॥ ೪೭ ॥
ಸಗರೋ ನಾಮ ಭೂಪಾಲೋ ಭವಿಷ್ಯತಿ ಮಹೀತಲೇ ।
ತತ್ಪುತ್ರಾಃ ಷಷ್ಟಿಸಾಹಸ್ರಾಃ ಖನಿಷ್ಯಂತಿ ನ ಸಂಶಯಃ ॥ ೪೮ ॥
ತಸ್ಯೈವಾನ್ವಯವಾನ್ರಾಜಾ ಭವಿಷ್ಯತಿ ಭಗೀರಥಃ ।
ಸ ಜ್ಞಾತಿಕಾರಣಾದ್ಗಂಗಾಂ ಬ್ರಹ್ಮಾಂಡಾದಾನಯಿಷ್ಯತಿ ॥ ೪೯ ॥

---

೪೨. ಬಳಿಕ ಸಮುದ್ರವು ನೆಲದಂತಾಗಲು ಜಯಿಸಲಪೇಕ್ಷೆಯುಳ್ಳ ದೇವತೆಗಳು ದಾನವರನ್ನು ಹರಿತವಾದ ಬಾಣಗಳಿಂದ ಹೊಡೆದರು.

೪೩. ಹೀಗೆ ಶಕ್ತ್ಯನುಸಾರ ಭಯಂಕರ ಯುದ್ಧಮಾಡಿ ಮಡಿದುಳಿದ ಆ ದಾನವರು ಭೂಮಿಯನ್ನು ಸೀಳಿಕೊಂಡು ಕೆಳಗಿಳಿದರು.

೪೪—೪೫. ತರುವಾಯ ಸಕಲ ದೇವತೆಗಳು ಆ ಅಗಸ್ತ್ಯ ಮುನಿವರ್ಯನನ್ನು ಹೊಗಳಿ ಮಹರ್ಷಿಯೆ! ಸಮುದ್ರವಿಲ್ಲದ ಈ ಭೂಮಿಯು ಒಡವೆಗಳಿಲ್ಲದೆ ಅಲಂಕರಿಸಿದ ಹೆಂಗಸಿನಂತೆ ವಿರಾಜಿಸುವುದಿಲ್ಲ. ಆದ್ದರಿಂದ ಇದು ತುಂಬುವುದಕ್ಕಾಗಿ ನೀರನ್ನು ಬಿಡು ಎಂದರು.

೪೬. ಅಗಸ್ತ್ಯನು ಹೇಳುತ್ತಾನೆ:—ನಾನು ಒಂದು ವರ್ಷಕಾಲ ಆರಾಧಿಸಿದ ಪ್ರಶೋಷಿಣೀ ವಿದ್ಯೆಯು ನೀರನ್ನು ಕುಡಿದಿರುವುದರಿಂದ ಹೀಗೆ ಪರಿಣಮಿಸಿದೆ.

೪೭—೪೮. ಈ ಸಮುದ್ರವು ಮರಳಿ ಅಗೆಯಲ್ಪಟ್ಟು ಆಳವಾಗಿ ನಿರ್ಮಲವಾದ ಗಂಗಾಜಲದಿಂದ ಪೂರ್ತಿಗೊಳ್ಳುವುದು. ಭೂಮಿಯಲ್ಲಿ ಸಗರನೆಂಬ ರಾಜನು ಜನಿಸುವನು. ಅವನ ಅರವತ್ತುಸಾವಿರ ಮಕ್ಕಳು ಇದನ್ನು ಅಗೆಯುವರು.

೪೯. ಅವನ ವಂಶದಲ್ಲಿ ಜನಿಸಿದ ಭಗೀರಥನೆಂಬ ರಾಜನು ಬಂಧುಗಳಿಗಾಗಿ ಬ್ರಹ್ಮಾಂಡದಿಂದ ಗಂಗೆಯನ್ನು ತರುವನು.

ಪ್ರವಾಹೇಣ ತತಸ್ತಸ್ಯಾಃ ಸಮುಂತಾದಂಭಸಾಂ ನಿಧಿಃ ।
ಭವಿಷ್ಯತಿ ಸುಸಂಪೂರ್ಣಃ ಸತ್ಯಮೇತನ್ಮಯೋದಿತಂ ॥ ೫೦ ॥

ದೇವಾ ಊಚುಃ:—

ದೇವಕೃತ್ಯಂ ಮುನಿಶ್ರೇಷ್ಠ ಭವತಾ ಹ್ಯುಪಪಾದಿತಂ ।
ತಸ್ಮಾತ್ಪ್ರಾರ್ಥಯ ಚಿತ್ತಸ್ಥಂ ವರಂ ಸರ್ವಂ ಮುನೀಶ್ವರ ॥ ೫೧ ॥

ಅಗಸ್ತ್ಯ ಉವಾಚ:—

ಚಮತ್ಕಾರಪುರೇ ಕ್ಷೇತ್ರೇ ಮಯಾ ಪೀಠಾನ್ಯಶೇಷತಃ ।
ಆನೀತಾನಿ ಪ್ರಭಾವೇನ ಮಂತ್ರಾಣಾಂ ಸುರಸತ್ತಮಾಃ ॥ ೫೨ ॥
ತಸ್ಮಾತ್ತೇಷಾಂ ಸದಾ ವಾಸಸ್ತತ್ರೈವಾಸ್ತು ಪ್ರಭಾವತಃ ।
ಸರ್ವಾಸಾಂ ಯೋಗಿನೀನಾಂ ಚ ಮಾತೄಣಾಂ ಚ ವಿಶೇಷತಃ ॥ ೫೩ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ತಾನಿ ಯಃ ಶ್ರದ್ಧಯಾನ್ವಿತಃ ।
ಪೂಜಯಿಷ್ಯತಿ ತಸ್ಯ ಸ್ಯಾತ್ಸಮಸ್ತಂ ಮನಸೇಪ್ಸಿತಂ ॥ ೫೪ ॥

ದೇವಾ ಊಚುಃ:—

ಯಸ್ಮಾಚ್ಚಿತ್ರಾಣಿ ಪೀಠಾನಿ ತ್ವಯಾಽಽನೀತಾನಿ ತತ್ರ ಹಿ ।
ತಸ್ಮಾಚ್ಚಿತ್ರೇಶ್ವರಂ ನಾಮ ಪೀಠಮೇಕಂ ಭವಿಷ್ಯತಿ ॥ ೫೫ ॥
ಯೋ ಯಂ ಕಾಮಮಭಿಧ್ಯಾಯ ತತ್ರ ಪೂಜಾಂ ಕರಿಷ್ಯತಿ ।
ಯೋಗಿನೀನಾಂ ಚ ವಿದ್ಯಾನಾಂ ಮಾತೄಣಾಂಚ ವಿಶೇಷತಃ ॥ ೫೬ ॥

---

೫೦. ಬಳಿಕ ಅದರ ಪ್ರವಾಹದಿಂದ ಸಮುದ್ರವು ಸುತ್ತಲೂ ತುಂಬಿರುವುದು. ನಾನು ಹೇಳಿರುವ ಈ ಮಾತು ನಿಜ.

೫೧. ದೇವತೆಗಳು ಹೇಳುತ್ತಾರೆ:—ಮುನಿವರ್ಯನೆ! ನೀನು ದೇವತೆಗಳ ಕಾರ್ಯವನ್ನು ಮಾಡಿರುವೆ. ಆದ್ದರಿಂದ ನಿನ್ನ ಮನಸ್ಸಿನಲ್ಲಿರುವ ವರವನ್ನೆಲ್ಲ ಕೇಳು.

೫೨. ಅಗಸ್ತ್ಯನು ಹೇಳುತ್ತಾನೆ:—ಸುರವರ್ಯರೆ! ನಾನು ಮಂತ್ರಪ್ರಭಾವದಿಂದ ಚಮತ್ಕಾರಪುರಕ್ಕೆ ಸಕಲ ಯೋಗಿನೀಪೀಠಗಳನ್ನು ತಂದಿರುವೆನು.

೫೩. ಆದ್ದರಿಂದ ಅಲ್ಲಿಯೇ ಸಕಲ ಯೋಗಿನಿಯರೂ, ಮಾತೃಗಳೂ ಯಾವಾಗಲೂ ವಾಸಮಾಡಲಿ.

೫೪. ಅಷ್ಟಮಿ, ಚತುರ್ದಶೀ ದಿನಗಳಲ್ಲಿ ಆ ಪೀಠಗಳನ್ನು ಶ್ರದ್ಧೆಯಿಂದ ಪೂಜಿಸುವವನಿಗೆ ಸಮಸ್ತೇಷ್ಟಾರ್ಥಗಳು ಲಭಿಸಲಿ.

೫೫. ದೇವತೆಗಳು ಹೇಳುತ್ತಾರೆ:—ನೀನು ಅಲ್ಲಿಗೆ ಆಶ್ಚರ್ಯಕರವಾದ ಪೀಠಗಳನ್ನು ತಂದಿರುವುದರಿಂದ ಆ ಒಂದು ಪೀಠವು ಚಿತ್ರೇಶ್ವರವೆಂದು ನಾಮವನ್ನು ಹೊಂದುವುದು.

೫೬–೫೭. ಮಾನವನು ಅಲ್ಲಿ ಯಾವಯಾವ ಅಭೀಷ್ಟವನ್ನು ಚಿಂತಿಸಿ

ತಂ ತಂ ಕಾಮಂ ನರಃ ಶೀಘ್ರಂ ಸಂಪ್ರಾಪ್ಸ್ಯತಿ ಮಹಾಮುನೇ ।
ಅಸ್ಮಾಕಂ ವರದಾನೇನ ಯದ್ಯಪಿ ಸ್ಯಾತ್ಸುಪಾಪಕೃತ್ ॥ ೫೭ ॥
ಏವಮುಕ್ತ್ವಾ ಸುರಾಃ ಸರ್ವೇ ತಮಾಮಂತ್ರ್ಯ ಮುನೀಶ್ವರಂ ।
ಗತಾಸ್ತ್ರಿವಿಷ್ಟಪಂ ಹೃಷ್ಟಾಃ ಸೋಽಪ್ಯಗಸ್ತ್ಯಃ ಸ ಮಾಶ್ರಮಂ ॥ ೫೮ ॥
ಸೂತ ಉವಾಚ :—
ಏತದ್ವಃ ಸರ್ವಮಾಖ್ಯಾತಂ ಯಥಾ ಸ ಪಯಸಾಂ ನಿಧಿಃ ।
ಅಗಸ್ತ್ಯೇನ ಪುರಾ ಪೀತೋ ದೇವಕಾರ್ಯಪ್ರಸಿದ್ಧಯೇ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಿತ್ರೇಶ್ವರಪೀಠನಾಮಪೂರ್ವಕವರಪ್ರದಾನವರ್ಣನಂ"
ನಾಮ ಪಂಚತ್ರಿಂಶೋಽಧ್ಯಾಯಃ

---

ಯೋಗಿನೀ ವಿದ್ಯೆಗಳನ್ನೂ, ಮಾತೆಯರನ್ನೂ ಪೂಜಿಸುವನೊ, ಅವನು ಪಾಪಿಯಾದರೂ ನಮ್ಮ ವರದಾನದಿಂದ ಅದನ್ನು ಪಡೆಯುವನು.

೫೮. ಆ ದೇವತೆಗಳೆಲ್ಲ ಹೀಗೆ ಹೇಳಿ ಆ ಮುನಿವರ್ಯನನ್ನು ಕೇಳಿಕೊಂಡು ಸಂತೋಷದಿಂದ ಸ್ವರ್ಗಕ್ಕೆ ತೆರಳಿದರು. ಆ ಅಗಸ್ತ್ಯನೂ ತನ್ನ ಆಶ್ರಮಕ್ಕೆ ಹೋದನು.

೫೯. ಸೂತನು ಹೇಳುತ್ತಾನೆ:—ಹಿಂದೆ ಅಗಸ್ತ್ಯಮುನಿಯು ದೇವತೆಗಳ ಕಾರ್ಯದ ಸಿದ್ಧಿಗಾಗಿ ಸಮುದ್ರವನ್ನು ಹೇಗೆ ಪಾನಮಾಡಿದನೆಂಬುದನ್ನು ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರೇಶ್ವರಪೀಠನಾಮಪೂರ್ವಕವರಪ್ರದಾನವರ್ಣನ" ವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ತ್ರಿಂಶೋಽಧ್ಯಾಯಃ

### ಚಿತ್ರೇಶ್ವರಪೀಠಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ಚಿತ್ರೇಶ್ವರಮಿದಂ ಪೀಠಮಗಸ್ತ್ಯಮುನಿನಿರ್ಮಿತಂ ।
ಯತ್ಪ್ರಮಾಣಂ ಯತ್ಪ್ರಭಾವಂ ತದಸ್ಮಾಕಂ ಪ್ರಕೀರ್ತಯ ॥ ೧ ॥

ಸೂತ ಉವಾಚ :—

ತಸ್ಯ ಪೀಠಸ್ಯ ಮಾಹಾತ್ಮ್ಯಂ ವಕ್ತುಂ ನೋ ಶಕ್ಯತೇ ದ್ವಿಜಾಃ ।
ಸಹಸ್ರೇಣಾಽಪಿ ವರ್ಷಾಣಾಂ ಮುಖಾನಾಮಯುತೈರಪಿ ॥ ೨ ॥
ತತ್ರ ಸಿದ್ಧಿಮನುಪ್ರಾಪ್ತಾಃ ಶತಶೋಽಥ ಸಹಸ್ರಶಃ ।
ಅನುಧ್ಯಾನಸಮಾಯುಕ್ತಾ ಯೋಗಿನಃ ಶಂಸಿತವ್ರತಾಃ ॥ ೩ ॥
ಅನ್ಯಪೀಠೇಷು ಯಾ ಸಿದ್ಧಿರ್ವರ್ಷಾಽನುಷ್ಠಾನತೋ ಭವೇತ್ ।
ದಿನೇನೈಕೇನ ತಾಂ ಸಿದ್ಧಿಂ ಲಭಂತೇ ಯೋಗಿನೋ ಧ್ರುವಂ ॥ ೪ ॥
ಯಸ್ತತ್ರಾಽಥರ್ವಣಾನ್ಮಂತ್ರಾಂಜಪೇಚ್ಛ್ರದ್ಧಾಸಮನ್ವಿತಃ ।
ತೇಷಾಮುಥೋದ್ಭವಂ ಕೃತ್ಸ್ನಂ ಫಲಂ ಪ್ರಾಪ್ನೋತಿ ಸ ಧ್ರುವಂ ॥ ೫ ॥

---

### ಕನ್ನಡದ ಅನುವಾದ

#### ಚಿತ್ರೇಶ್ವರಪೀಠಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಅಗಸ್ತ್ಯಮುನಿಯು ನಿರ್ಮಿಸಿರುವ ಈ ಚಿತ್ರೇಶ್ವರ ಪೀಠವು ಎಷ್ಟು ಪ್ರಮಾಣವುಳ್ಳುದು? ಎಂತಹ ಪ್ರಭಾವವುಳ್ಳುದು? ಅದನ್ನು ನಮಗೆ ಹೇಳು.

೨. ಸೂತನು ಹೇಳುತ್ತಾನೆ:—ದ್ವಿಜರೆ! ಆ ಪೀಠದ ಮಾಹಾತ್ಮ್ಯೆಯನ್ನು ಸಾವಿರ ವರ್ಷಗಳಿಂದಲೂ, ಹತ್ತುಸಾವಿರ ಮುಖಗಳಿಂದಲೂ ಹೇಳಲು ಸಾಧ್ಯವಿಲ್ಲ.

೩. ಅಲ್ಲಿ ಧ್ಯಾನನಿರತರೂ, ಶ್ಲಾಘ್ಯವ್ರತರೂ ಆದ ಸಹಸ್ರಾರು ಮಂದಿ ಯೋಗಿಗಳು ಸಿದ್ಧಿಯನ್ನು ಪಡೆದಿರುವರು.

೪. ಯೋಗಿಗಳು ಇತರ ಪೀಠಗಳಲ್ಲಿ ಒಂದು ವರ್ಷ ಅನುಷ್ಠಾನಮಾಡು ವುದರಿಂದ ಪಡೆಯುವ ಸಿದ್ಧಿಯನ್ನು ಇಲ್ಲಿ ಒಂದೇ ದಿನದಲ್ಲಿ ಪಡೆಯುವರು.

೫. ಅಲ್ಲಿ ಅಥರ್ವಣ ಮಂತ್ರವನ್ನು ಶ್ರದ್ಧೆಯಿಂದ ಜಪಿಸುವವನು ಅದರಿಂದ ಪ್ರತಿಪಾದ್ಯವಾದ ಸಮಸ್ತ ಐಹಿಕಾಮುಷ್ಮಿಕ ಫಲಗಳನ್ನು ಹೊಂದುವನು.

ಪುತ್ರಕಾಮೋ ನರಸ್ತತ್ರ ಪುಲಿಂಗಾನ್ಯೋ ಜಪೇನ್ನರಃ ।
ಸ ಲಭೇತೇಪ್ಸಿತಾನ್ ಪುತ್ರಾನ್ಯದ್ಯಪಿ ಸ್ಯಾಜ್ಜರಾನ್ವಿತಃ ॥ ೬ ॥
ಗರ್ಭೋಪನಿಷದಂ ತತ್ರ ಪುತ್ರಕಾಮೋ ಜಪೇನ್ನರಃ ।
ಅಪಿ ವಂಧ್ಯಾಪ್ರಸಂಗೇನ ಸ್ಯಾತ್ಸ ಪುತ್ರಸಮನ್ವಿತಃ ॥ ೭ ॥
ಶತ್ರುಲೋಕವಿನಾಶಾಯ ಯೋ ಜಪೇಚ್ಛತರುದ್ರಿಯಂ ।
ತಸ್ಮಿನ್ಪೀಠೇಽರಯಸ್ತಸ್ಯ ಸದ್ಯೋ ಗಚ್ಛಂತಿ ಸಂಕ್ಷಯಂ ॥ ೮ ॥
ಭೂತಪ್ರೇತಪಿಶಾಚಾದಿರಕ್ಷಾರ್ಥಂ ತತ್ರ ಮಾನವಃ ।
ಯೋ ಜಪೇದ್ವಾಮದೇವ್ಯಂ ಚ ಸ ಸ್ಯಾದ್ಧಿ ನಿರುಪದ್ರವಃ ॥ ೯ ॥
ಕೋಽದದಾತಿ ನರಸ್ತತ್ರ ಕನ್ಯಾರ್ಥಂ ಯೋ ಜಪೇದೃಚಂ ।
ಯಾಂ ಕನ್ಯಾಂ ಧ್ಯಾಯಮಾನಸ್ತು ಸ ತಾಂ ಪ್ರಾಪ್ನೋತ್ಯಸಂಶಯಂ ॥೧೦॥
ಯೋ ಭೂಪಾಲಪ್ರಸಾದಾರ್ಥಮಿಮಂ ದೇವಾ ನಿಶಂ ಜಪೇತ್ ।
ನಿರರ್ಗಲಃ ಪ್ರಸಾದಃ ಸ್ಯಾತ್ತಸ್ಯ ಪಾರ್ಥಿವಸಂಭವಃ ॥ ೧೧ ॥
ಸ್ವಸ್ತ್ರೀಸ್ನೇಹಕೃತೇ ಯಸ್ತು ತಂ ಪತ್ನೀಭಿರಿತಿದ್ವಿಜಾಃ ।
ಜಪೇದ್ಭಾರ್ಯಾ ಭವೇತ್ಸಾಧ್ವೀ ತಸ್ಯ ಸಾ ಸ್ನೇಹವತ್ಸಲಾ ॥ ೧೨ ॥
ಯೋ ಲೋಕಾನುಗ್ರಹಾರ್ಥಾಯ ಜಪೇದದಿತಿರಿತ್ಯಪಿ ।
ತಸ್ಯ ಲೋಕಾನುರಾಗಃ ಸ್ಯಾತ್ಸಲಾಭಶ್ಚ ವಿಶೇಷತಃ ॥ ೧೩ ॥

---

೬. ಪುತ್ರಕಾಮನಾಗಿ ಪುಲ್ಲಿಂಗ ಮಂತ್ರಗಳನ್ನು ಜಪಿಸುವ ಮಾನವನು ಮುದುಕನಾಗಿದ್ದರೂ ಇಷ್ಟರಾದ ಪುತ್ರರನ್ನು ಪಡೆಯುವನು.

೭. ಪುತ್ರರನ್ನು ಬಯಸುವ ಮಾನವನು ಅಲ್ಲಿ ಗರ್ಭೋಪನಿಷತ್ತನ್ನು ಜಪಿಸಿದರೆ ವಂಧ್ಯಾಸಂಗದಿಂದಲೂ ಪುತ್ರರನ್ನು ಹೊಂದುವನು.

೮. ಆ ಪೀಠದಲ್ಲಿ ಶತ್ರುನಾಶಕ್ಕಾಗಿ ಶತರುದ್ರಿಯವನ್ನು ಜಪಿಸಿದವನ ಶತ್ರುಗಳು ಕೂಡಲೆ ನಾಶವಾಗುವರು.

೯. ಭೂತಪ್ರೇತ ಪಿಶಾಚಾದಿಗಳ ರಕ್ಷಣೆಗಾಗಿ ವಾಮದೇವ್ಯ ಸಾಮವನ್ನು ಅಲ್ಲಿ ಜಪಿಸಿದ ಮಾನವನು ಉಪದ್ರವರಹಿತನಾಗುವನು.

೧೦. ನರನು ಯಾವ ಕನ್ಯೆಯನ್ನು ಚಿಂತಿಸುತ್ತ ಅವಳಿಗಾಗಿ ಕೋಽದದಾತಿ ಮಂತ್ರವನ್ನು ಜಪಿಸುವನೊ, ಅವಳನ್ನು ನಿಶ್ಚಯವಾಗಿಯೂ ಪಡೆಯುವನು.

೧೧. ರಾಜನ ಅನುಗ್ರಹಕ್ಕಾಗಿ ಇಮಂ ದೇವಾ ನಿಶಂ ಎಂಬ ಮಂತ್ರವನ್ನು ಜಪಿಸಿದವನಿಗೆ ಅಡ್ಡಿಯಿಲ್ಲದೆ ರಾಜನ ಅನುಗ್ರಹವು ಉಂಟಾಗುವುದು.

೧೨. ತನ್ನ ಪತ್ನಿಯ ಪ್ರೀತಿಗಾಗಿ ತಂಪತ್ನೀಭಿರಿತ್ಯಾದಿ ಮಂತ್ರವನ್ನು ಜಪಿಸಿದವನ ಭಾರ್ಯೆಯು ಪತಿವ್ರತೆಯೂ, ಪ್ರೀತಿಯುಳ್ಳವಳೂ ಆಗುವಳು.

೧೩. ಲೋಕಾನುಗ್ರಹಕ್ಕಾಗಿ ಅದಿತಿರಿತ್ಯಾದಿ ಮಂತ್ರವನ್ನು ಜಪಿಸಿದವನಿಗೆ ಲೋಕಾನುರಾಗವೂ ಲಾಭವೂ ಉಂಟಾಗುವುದು.

ವಿತ್ತಾರ್ಥೀ ಯೋ ಜಪೇತ್ತತ್ರ ಶ್ರೀಸೂಕ್ತಂ ಮನುಜೋ ದ್ವಿಜಾಃ ।
ಸರ್ವತಸ್ತಸ್ಯ ವಿತ್ತಾನಿ ಸಮಾಗಚ್ಛಂತ್ಯನೇಕಶಃ ॥ ೧೪ ॥
ಭೂಮೀತಿ ಯೋ ಜಪೇತ್ಸಾಮ ಭೂಮ್ಯರ್ಥಂ ತತ್ರ ಮಾನವಃ ।
ಸ ಭವೇದ್ಭೂಪತಿರ್ನೂನಂ ನೀಚಜಾತಿರಪಿ ಧ್ರುವಂ ॥ ೧೫ ॥
ಜಪೇದ್ರಥಂತರಂ ಸಾಮ ಯಾನಾರ್ಥಂ ತತ್ರ ಯೋ ನರಃ ।
ಸ ಪ್ರಾಪ್ನೋತಿ ಹಿ ಯಾನಾನಿ ಶೀಘ್ರಗಾನಿ ಶುಭಾನಿ ಚ ॥ ೧೬ ॥
ಗಜಾರ್ಥೀ ಯೋ ಜಪೇತ್ತತ್ರ ಗಣಾನಾಂ ದ್ವಿಜಸತ್ತಮಾಃ ।
ಸ ಪ್ರಾಪ್ನೋತಿ ಗಜಾನ್ ಮರ್ತ್ಯೋ ಮದಪ್ಲಾವಿತಭೂತಲಾನ್ ॥ ೧೭ ॥
ನ ತದ್ರಕ್ಷೇತಿ ಯೋ ಮಂತ್ರಂ ಜಪೇದ್ರಕ್ಷಾಕೃತೇ ನರಃ ।
ತಸ್ಯ ಸ್ಯಾತ್ಸರ್ವತೋ ರಕ್ಷಾ ಸಮೇಷು ವಿಷಮೇಷು ಚ ॥ ೧೮ ॥
ಸಪ್ತರ್ಷಯ ಇತಿ ಶ್ರೇಷ್ಠಾಂ ಯೋ ಜಪೇತ್ತು ಸಮಾಹಿತಃ ।
ಋಚಂ ರೋಗವಿನಾಶಾಯ ಸ ರೋಗೈಃ ಪರಿಮುಚ್ಯತೇ ॥ ೧೯ ॥
ಯದುಭೀ ಯೋ ಜಪೇತ್ತತ್ರ ಗ್ರಹಪೀಡಾರ್ದಿತೋ ಜನಃ ।
ಸಾನುಕೂಲಾ ಗ್ರಹಾಸ್ತಸ್ಯ ಪ್ರಭವಂತಿ ನ ಸಂಶಯಃ ॥ ೨೦ ॥
ಭೂತಪೀಡಾರ್ದಿತೋ ಯಶ್ಚ ಬೃಹತ್ಸಾಮ ಜಪೇನ್ನರಃ ।
ಪಿತೃವಜ್ಜಾಯತೇ ತಸ್ಯ ಸ ಭೂತೋಽಪ್ಯಂತಕೋಽಪಿ ಚೇತ್ ॥ ೨೧ ॥

---

೧೪. ದ್ರವ್ಯವನ್ನು ಬಯಸುವ ಮಾನವನು ಅಲ್ಲಿ ಶ್ರೀಸೂಕ್ತವನ್ನು ಜಪಿಸಿದರೆ ಎಲ್ಲೆಡೆಯಲ್ಲಿಯೂ ಅವನಿಗೆ ಬಹು ದ್ರವ್ಯಗಳು ದೊರೆಯುವುವು.

೧೫. ಭೂಮಿಗಾಗಿ ಭೂಮಿತ್ಯಾದಿ ಸಾಮಮಂತ್ರವನ್ನು ಜಪಿಸಿದವನು ನೀಚಜಾತಿಯವನಾದರೂ ರಾಜನಾಗುವನು.

೧೬. ವಾಹನಕ್ಕಾಗಿ ರಥಂತರಸಾಮವನ್ನು ಜಪಿಸುವವನೂ ಶೀಘ್ರಗಾಮಿಯೂ, ಮಂಗಳಕರವೂ ಆದ ವಾಹನಗಳನ್ನು ಹೊಂದುವನು.

೧೭. ದ್ವಿಜರೆ! ಗಜಾರ್ಥಿಯು ಗಣಾನಾಮಿತ್ಯಾದಿ ಮಂತ್ರವನ್ನು ಜಪಿಸಿದರೆ ಅವನು ಮದದಿಂದ ಒದ್ದೆಮಾಡಲ್ಪಟ್ಟ ಭೂಮಿಯುಳ್ಳ ಆನೆಗಳನ್ನು ಪಡೆಯುವನು.

೧೮. ರಕ್ಷಣೆಗಾಗಿ ನ ತದ್ರಕ್ಷೇತ್ಯಾದಿ ಮಂತ್ರವನ್ನು ಜಪಿಸಿದ ನರನಿಗೆ ಸಮ ವಿಷಮಸ್ಥಳಗಳಲ್ಲಿ ರಕ್ಷೆಯುಂಟಾಗುವುದು.

೧೯. ಸಪ್ತರ್ಷಯ ಇತ್ಯಾದಿಮಂತ್ರವನ್ನು ರೋಗಪರಿಹಾರಕ್ಕಾಗಿ ಜಪಿಸಿದರೆ ರೋಗಮುಕ್ತನಾಗುವನು.

೨೦. ಗ್ರಹಗಳಿಂದ ಪೀಡಿತರಾಗಿ ದುಃಖಗೊಂಡವರು ಯದುಭೀ ಇತ್ಯಾದಿ ಮಂತ್ರಗಳನ್ನು ಜಪಿಸಿದರೆ ಗ್ರಹಗಳು ಅನುಕೂಲವಾಗುವುವು.

೨೧. ಭೂತದಿಂದ ಪೀಡಿತನಾದವನು ಬೃಹತ್ಸಾಮವನ್ನು ಜಪಿಸಿದರೆ ಆ ಭೂತವು ನಾಶಕವಾಗಿದ್ದರೂ ತಂದೆಯಂತಾಗುವುದು.

ಯಾತ್ರಾಸಿದ್ಧಿಕೃತೇ ಯಶ್ಚ ಜಪೇತ್ಸೂಕ್ತಂ ಚ ಶಾಕುನಂ ।
ತಸ್ಯ ಸಂಸಿಧ್ಯತೇ ಯಾತ್ರಾ ಯದ್ಯಪಿ ಸ್ಯಾದಕಿಂಚನಃ ॥ ೨೨ ॥
ಸರ್ಪನಾಶಾಯ ಯಸ್ತತ್ರ ಸಾರ್ಪಸೂಕ್ತಂ ಜಪೇನ್ನರಃ ।
ನ ತಸ್ಯ ಮಂದಿರೇ ಸರ್ಪಾಃ ಪ್ರವಿಶಂತಿ ಕಥಂಚನ ॥ ೨೩ ॥
ವಿಷನಾಶಾಯ ಯಸ್ತತ್ರ ಜಪೇಚ್ಛ್ರದ್ಧಾಸಮನ್ವಿತಃ ।
ಉತ್ತಿಷ್ಠೇತಿ ವಿಷಂ ಸದ್ಯಸ್ತಸ್ಯ ನಾಶಂ ಪ್ರಯಾಸ್ಯತಿ ॥ ೨೪ ॥
ಸ್ಥಾವರಂ ಜಂಗಮಂ ವಾಽಪಿ ಕೃತ್ರಿಮಂ ಯದಿ ವಾ ವಿಷಂ ।
ತಸ್ಯ ನಾಮ್ನಾ ವಿನಿರ್ಯಾತಿ ತಮಃ ಸೂರ್ಯೋದಯೇ ಯಥಾ ॥ ೨೫ ॥
ವ್ಯಾಘ್ರಸಾಮ ಜಪೇದ್ಯಸ್ತು ತತ್ರ ಶ್ರದ್ಧಾಸಮನ್ವಿತಃ ।
ತಸ್ಯ ವ್ಯಾಘ್ರಾದಯೋ ವ್ಯಾಲಾ ಜಾಯಂತೇ ಸೌಮ್ಯಚೇತಸಃ ॥ ೨೬ ॥
ಕೃಷಿಕರ್ಮಪ್ರಸಿದ್ಧ್ಯರ್ಥಂ ಯೋ ಜಪೇಲ್ಲಾಂಗಲಾನಿ ಚ ।
ವೃಷ್ಟಿಹೀನೇಽಪಿ ಲೋಕೇಽಸ್ಮಿನ್ ಕೃಷಿಸ್ತಸ್ಯ ಪ್ರಸಿದ್ಧ್ಯತಿ ॥ ೨೭ ॥
ಈತಿನಾಶಾಯ ತತ್ರೈವ ಜಪೇದ್ದೇವವ್ರತಂ ನರಃ ।
ತತಃ ಸಂಕೀರ್ತನಾದೇವ ಈತಯೋ ಯಾಂತಿ ಸಂಕ್ಷಯಂ ॥ ೨೮ ॥

---

೨೨. ಯಾತ್ರಾಸಿದ್ಧಿಗಾಗಿ ಶಾಕುನ ಸೂಕ್ತವನ್ನು ಜಪಿಸಿದರೆ ಬಡವನಾಗಿದ್ದರೂ ಯಾತ್ರೆಯು ಸಿದ್ಧಿಸುವುದು.

೨೩. ಸರ್ಪನಾಶಕ್ಕಾಗಿ ಸರ್ಪಸೂಕ್ತವನ್ನು ಜಪಿಸಿದರೆ ಅವನ ಮನೆಯಲ್ಲಿ ಸರ್ಪವು ಯಾವಾಗಲೂ ಪ್ರವೇಶಿಸುವುದಿಲ್ಲ.

೨೪. ವಿಷನಾಶಕ್ಕಾಗಿ ಶ್ರದ್ಧೆಯಿಂದ ಉತ್ತಿಷ್ಠೇತ್ಯಾದಿ ಮಂತ್ರವನ್ನು ಜಪಿಸಿದರೆ ವಿಷವು ಕೂಡಲೆ ನಾಶವಾಗುವುದು.

೨೫. ಸ್ಥಾವರ, ಜಂಗಮ, ಅಥವಾ ಕೃತ್ರಿಮ ವಿಷವು, ಆ ಮಂತ್ರದ ನಾಮೋಚ್ಚಾರಣೆಯಿಂದಲೆ ಸೂರ್ಯೋದಯದಲ್ಲಿ ತಮಸ್ಸು ನಾಶವಾಗುವಂತೆ ಪರಿಹಾರವಾಗುವುದು.

೨೬. ವ್ಯಾಘ್ರಸಾಮವನ್ನು ಶ್ರದ್ಧೆಯಿಂದ ಜಪಿಸಿದರೆ ವ್ಯಾಘ್ರಾದಿ ದುಷ್ಟ ಜಂತುಗಳು ಸೌಮ್ಯವಾಗುವುವು.

೨೭. ಕೃಷಿಸಿದ್ಧಿಗಾಗಿ ಲಾಂಗಲಾನೀತ್ಯಾದಿ ಮಂತ್ರವನ್ನು ಜಪಿಸಿದರೆ ಲೋಕದಲ್ಲಿ ಮಳೆಯಿಲ್ಲದಿದ್ದರೂ ಕೃಷಿಯು ಸಿದ್ಧಿಸುವುದು.

೨೮. ಅಲ್ಲಿ ಈತಿ ಬಾಧೆಗಳ ನಾಶಕ್ಕಾಗಿ ದೇವವ್ರತ ಮಂತ್ರವನ್ನು ಜಪಿಸಬೇಕು. ಹಾಗೆ ಜಪಿಸುವುದರಿಂದಲೇ ಈತಿಗಳು ನಾಶವಾಗುವುವು.

ಅನಾವೃಷ್ಟಿಹತೇ ಲೋಕೇ ಪಂಚೇಂದ್ರಂ ತತ್ರ ಯೋ ಜಪೇತ್ ।
ತಸ್ಯ ಹಸ್ತಕೃತೇ ಹೋಮೇ ತನ್ಮಂತ್ರೈಃ ಸ್ಯಾಜ್ಜಲಾಗಮಃ ॥ ೨೯ ॥
ದಂಷ್ಟ್ರಾಭ್ಯಾಮಿತಿ ಯಸ್ತತ್ರ ನರಶ್ಚೌರಾರ್ದಿತಃ ಪಠೇತ್ ।
ನೋಪದ್ರವೋ ಭವೇತ್ತಸ್ಯ ಕದಾಚಿಚ್ಚೌರಸಂಭವಃ ॥ ೩೦ ॥
ವಿವಾದಾರ್ಥಂ ಜಪೇದ್ಯಸ್ತು ಸಂಸೃಷ್ಟಮಿತಿ ತತ್ರ ಚ ।
ವಿವಾದೇ ವಿಜಯಸ್ತಸ್ಯ ಪಾಪಸ್ಯಾಽಪಿ ಪ್ರಜಾಯತೇ ॥ ೩೧ ॥
ಯೋ ರಿಪೂಚ್ಚಾಟನಾರ್ಥಾಯ ನರೋ ರುದ್ರಶಿರೋ ಜಪೇತ್ ।
ತಸ್ಯ ತೇ ರಿಪವೋ ಯಾಂತಿ ದೇಶಂ ತ್ಯಕ್ತ್ವಾ ಕುಬುದ್ಧಿತಃ ॥ ೩೨ ॥
ಮೋಹನಾಯ ರಿಪೂಣಾಂ ಚ ಯೋ ಜಪೇದ್ವಿಷ್ಣುಸಂಹಿತಾಂ ।
ತಸ್ಯ ಮೋಹಾಭಿಭೂತಾಸ್ತೇ ಜಾಯಂತೇ ರಿಪವೋ ಧ್ರುವಂ ॥ ೩೩ ॥
ವಶೀಕರಣಹೇತೋಃ ಯಃ ಕೂಷ್ಮಾಂಡೀಃ ಪ್ರಜಪೇನ್ನರಃ ।
ಶತ್ರವೋಽಪಿ ವಶೇ ತಸ್ಯ ಕಿಂ ಪುನಃ ಪ್ರಮದಾದಯಃ ॥ ೩೪ ॥
ಯಃ ಸ್ತಂಭಾಯ ರಿಪೂಣಾಂ ವೈ ಪ್ರಾಜಾಪತ್ಯಂ ಚ ವಾರುಣಂ ।
ಮಂತ್ರಂ ಜಪೇದ್ದ್ವಿಜಶ್ರೇಷ್ಠಾಃ ಸಮ್ಯಕ್ಛ್ರದ್ಧಾಪರಾಯಣಃ ।
ಮಂತ್ರಸಂಸ್ತಂಭಿತಾಸ್ತಸ್ಯ ಜಾಯಂತೇ ಸರ್ವಶತ್ರವಃ ॥ ೩೫ ॥

---

೨೯. ಲೋಕವು ಅನಾವೃಷ್ಟಿಯಿಂದ ಪೀಡಿತವಾಗಿರಲು ಪಂಚೇಂದ್ರ ಮಂತ್ರವನ್ನು ಜಪಿಸಿ ಹೋಮಮಾಡಿದರೆ ನೀರುಂಟಾಗುವುದು.

೩೦. ಚೋರಪೀಡಿತನಾದವನು ಅಲ್ಲಿ ದಂಷ್ಟ್ರಾಭ್ಯಾಮಿತ್ಯಾದಿ ಮಂತ್ರವನ್ನು ಪಠಿಸಿದರೆ ಕಳ್ಳರ ಉಪದ್ರವವು ಉಂಟಾಗುವುದಿಲ್ಲ.

೩೧. ವಿವಾದಕ್ಕಾಗಿ ಸಂಸೃಷ್ಟಮಿತ್ಯಾದಿ ಮಂತ್ರವನ್ನು ಜಪಿಸಿದ ಪಾಪಿಗೂ ವಾದದಲ್ಲಿ ಜಯವುಂಟಾಗುವುದು.

೩೨. ರಿಪುಗಳನ್ನು ಓಡಿಸಲು ರುದ್ರಶಿರಸ್ಸನ್ನು ಜಪಿಸಿದವನ ಶತ್ರುಗಳು ತಮ್ಮ ಕುಬುದ್ಧಿಯಿಂದ ದೇಶವನ್ನೇ ತ್ಯಜಿಸಿ ಹೊರಟುಹೋಗುವರು.

೩೩. ಶತ್ರುಗಳನ್ನು ಮೋಹಗೊಳಿಸುವುದಕ್ಕಾಗಿ ವಿಷ್ಣುಸಂಹಿತೆಯನ್ನು ಜಪಿಸಿದರೆ ಆ ಶತ್ರುಗಳು ನಿಶ್ಚಯವಾಗಿಯೂ ಮೋಹಗೊಳ್ಳುವರು.

೩೪. ವಶೀಕರಣಕ್ಕಾಗಿ ಕೂಷ್ಮಾಂಡ ಮಂತ್ರಗಳನ್ನು ಜಪಿಸಿದ ಮಾನವನ ವಶದಲ್ಲಿ ಶತ್ರುಗಳಿರುವರು. ಸ್ತ್ರೀ ಮೊದಲಾದವರ ವಿಷಯವಿನ್ನೇನು?

೩೫. ಶತ್ರುಗಳನ್ನು ತಡೆಯುವುದಕ್ಕಾಗಿ ಪ್ರಾಜಾಪತ್ಯ ಮತ್ತು ವಾರುಣ ಮಂತ್ರಗಳನ್ನು ಶ್ರದ್ಧೆಯಿಂದ ಜಪಿಸಿದವನ ಸಮಸ್ತಶತ್ರುಗಳು ಮಂತ್ರದಿಂದ ಸ್ತಬ್ಧರಾಗುವರು.

ಜಪೇತ್ಕಾಲೀ ಕರಾಲೀತಿ ಯಃ ಶೋಷಾಯ ನರೋ ದ್ವಿಜಾಃ ।
ಸ ಶೋಷಯತಿ ತತ್ಕೃತ್ಸ್ನಂ ಯಚ್ಚಿತ್ತೇ ಧಾರಯೇನ್ನರಃ ॥ ೩೬ ॥
ಏಷ ಮಂತ್ರಸ್ತದಾ ಜಪ್ತೋ ಹ್ಯಗಸ್ತ್ಯೇನ ಮಹಾತ್ಮನಾ ।
ಯತ್ಪ್ರಭಾವಾನ್ನದೀನಾಥಸ್ತೇನ ಸಂಶೋಷಿತೋ ಧ್ರುವಂ ॥ ೩೭ ॥
ಏತತ್ಪ್ರಭಾವಂ ಯತ್ಪೀಠಂ ಮಂತ್ರಾಣಾಂ ಸಿದ್ಧಿಕಾರಕಂ ।
ಐಹಿಕಾನಾಂ ಫಲಾನಾಂ ಚ ತನ್ಮಯಾ ವಃ ಪ್ರಕೀರ್ತಿತಂ ॥ ೩೮ ॥
ಯೋ ವಾಂಛತಿ ಪುನಃ ಸ್ವರ್ಗಂ ಸ ತತ್ರ ದ್ವಿಜಸತ್ತಮಾಃ ।
ಸ್ನಾನಂ ಕರೋತು ದಾನಂ ಚ ಶ್ರಾದ್ಧಂ ಚಾಽಪಿ ವಿಶೇಷತಃ ॥ ೩೯ ॥
ಅಥ ವಾಂಛತಿ ಯೋ ಮೋಕ್ಷಂ ವಿರಕ್ತೋ ಭವಸಾಗರಾತ್ ।
ನಿಷ್ಕಾಮಸ್ತತ್ರ ಸಂತುಷ್ಟಸ್ತಪಸ್ತಪ್ಯೇತ್ಸುಬುದ್ಧಿಮಾನ್ ॥ ೪೦ ॥

ಋಷಯ ಊಚುಃ:—

ಮಂತ್ರಜಾಪ್ಯಸ್ಯ ಮಾಹಾತ್ಮ್ಯಂ ಯತ್ತ್ವಯಾ ನಃ ಪ್ರಕೀರ್ತಿತಂ ।
ತತ್ಕಥಂ ಸಿದ್ಧಿಮಾಯಾತಿ ಮಂತ್ರಜಾಪ್ಯಂ ಹಿ ಸೂತಜ ॥ ೪೧ ॥

ಸೂತ ಉವಾಚ:—

ಅತ್ರ ತತ್ಕಥಯಿಷ್ಯಾಮಿ ಯನ್ಮಯಾ ಪಿತೃತಃ ಶ್ರುತಂ ।
ವದತೋ ಬ್ರಾಹ್ಮಣೇಂದ್ರಸ್ಯ ಪುರಾ ದುರ್ವಾಸಸೋ ಮುನೇಃ ॥ ೪೨ ॥

---

೩೬. ಒಣಗಿಸುವುದಕ್ಕಾಗಿ ಕಾಲೀ, ಕರಾಲೀ ಇತ್ಯಾದಿ ಮಂತ್ರಗಳನ್ನು ಜಪಿಸಿದವನ ಮನಸ್ಸಿನಲ್ಲಿರುವುದು ಒಣಗುವುದು.

೩೭. ಮಹಾತ್ಮನಾದ ಅಗಸ್ತ್ಯನು ಈ ಮಂತ್ರವನ್ನು ಜಪಿಸಿ ಇದರ ಪ್ರಭಾವದಿಂದ ಸಮುದ್ರವನ್ನು ಒಣಗಿಸಿದನು.

೩೮. ಐಹಿಕ ಫಲಗಳ ಸಿದ್ಧಿಯನ್ನುಂಟುಮಾಡುವ ಈ ಪೀಠವನ್ನೂ, ಇದರ ಪ್ರಭಾವವನ್ನೂ ನಿಮಗೆ ನಾನು ಹೇಳಿರುವೆನು.

೩೯. ದ್ವಿಜವರ್ಯರೆ! ಸ್ವರ್ಗವನ್ನು ಬಯಸುವವನು ಅಲ್ಲಿ ಸ್ನಾನ, ದಾನ, ಶ್ರಾದ್ಧಗಳನ್ನುಮಾಡಲಿ.

೪೦. ಸಂಸಾರ ಸಮುದ್ರದಿಂದ ವೈರಾಗ್ಯಗೊಂಡು ನಿಷ್ಕಾಮನಾಗಿ ಮೋಕ್ಷವನ್ನಪೇಕ್ಷಿಸುವವನು ಅಲ್ಲಿ ತಪಸ್ಸನ್ನು ಮಾಡಬೇಕು.

೪೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಮಂತ್ರಜಪದ ಮಾಹಾತ್ಮ್ಯೆಯನ್ನು ಹೇಳಿರುವೆ. ಆ ಮಂತ್ರಜಪವು ಹೇಗೆ ಸಿದ್ಧಿಗೊಳ್ಳುವುದು?

೪೨. ಸೂತನು ಹೇಳುತ್ತಾನೆ:—ಹಿಂದೆ ನನ್ನ ತಂದೆಯು ಬ್ರಾಹ್ಮಣೋತ್ತಮನಾದ ದುರ್ವಾಸ ಮುನಿಗೆ ಹೇಳುತ್ತಿರುವಾಗ ಕೇಳಿದ್ದನ್ನು ನಿಮಗೆ ಹೇಳುವೆನು.

ತೇನ ಪೂರ್ವಂ ಪಿತಾಽಸ್ಮಾಕಂ ಪೃಷ್ಟೋ ದುರ್ವಾಸಸಾ ದ್ವಿಜಾಃ ।
ಮಂತ್ರವಾದಕೃತೇ ಯಚ್ಚ ಶೃಣುಧ್ವಂ ಸುಸಮಾಹಿತಾಃ ॥ ೪೩ ॥
ದುರ್ವಾಸಾ ಉವಾಚ :—
ಸಾಧಯಿಷ್ಯಾಮ್ಯಹಂ ಮಂತ್ರಮಭೀಷ್ಟಂ ಕಮಪಿ ವ್ರತೀ ।
ತಸ್ಯ ಸಿದ್ಧಿಕೃತೇ ಬ್ರೂಹಿ ವಿಧಾನಂ ಶಾಸ್ತ್ರಸಂಭವಂ ॥ ೪೪ ॥
ಲೋಮಹರ್ಷಣ ಉವಾಚ :—
ಮಂತ್ರಾಣಾಂ ಸಾಧನಂ ಕಷ್ಟಂ ಸರ್ವೇಷಾಮಪಿ ಸನ್ಮುನೇ ।
ಪ್ರತ್ಯವಾಯಸಮೋಪೇತಂ ಬಹುಚ್ಛಿದ್ರಸಮಾಕುಲಂ ॥ ೪೫ ॥
ತಸ್ಮಾನ್ಮಂತ್ರಕೃತೇ ಸಿದ್ಧಿಂ ಯದಿ ತ್ವಂ ವಾಂಛಸಿ ದ್ವಿಜ ।
ಚಮತ್ಕಾರಪುರೇ ಕ್ಷೇತ್ರೇ ತತ್ರ ತ್ವಂ ಗಂತುಮರ್ಹಸಿ ॥ ೪೬ ॥
ತತ್ರ ಚಿತ್ರೇಶ್ವರೀ ಪೀಠಮಗಸ್ತ್ಯೇನ ವಿನಿರ್ಮಿತಂ ।
ಸದ್ಯಃ ಸಿದ್ಧಿಕರಂ ಪ್ರೋಕ್ತಂ ಮಂತ್ರಾಣಾಂ ಹೃದಿವರ್ತಿನಾಂ ॥ ೪೭ ॥
ನ ತತ್ರ ಜಾಯತೇ ಛಿದ್ರಂ ಪ್ರತ್ಯವಾಯೋ ನ ಚ ದ್ವಿಜ ।
ನಾಽಸಿದ್ಧಿರ್ವರದಾನೇನ ಸರ್ವೇಷಾಂ ತ್ರಿದಿವೌಕಸಾಂ ॥ ೪೮ ॥
ಚಾತುರ್ಯುಗ್ಯಂ ಹಿ ತತ್ಪೀಠಂ ಸ್ಥಿತಾನಾಂ ಸಿದ್ಧಿಮಾಹರೇತ್ ।
ಯುಗಾನುರೂಪತಃ ಸದ್ಯಸ್ತತೋ ವಕ್ಷ್ಯಾಮ್ಯಹಂ ದ್ವಿಜ ॥ ೪೯ ॥

---

೪೩. ದ್ವಿಜರೆ! ಹಿಂದೆ ದುರ್ವಾಸಮುನಿಯು ಮಂತ್ರವಾದದ ವಿಷಯದಲ್ಲಿ ನನ್ನ ತಂದೆಯನ್ನು ಕುರಿತು ಏನನ್ನು ಪ್ರಶ್ನೆಮಾಡಿದನೆಂಬುದನ್ನು ಕೇಳಿರಿ.

೪೪. ದುರ್ವಾಸ ಮುನಿಯು ಹೇಳುತ್ತಾನೆ:—ನಾನು ವ್ರತಿಯಾಗಿ ಯಾವುದಾದರೊಂದು ಮಂತ್ರವನ್ನು ಸಾಧಿಸುವೆನು. ಅದರ ಸಿದ್ಧಿಗಾಗಿ ಶಾಸ್ತ್ರ ಸಮ್ಮತವಾದ ವಿಧಿಯನ್ನು ಹೇಳು.

೪೫. ಲೋಮಹರ್ಷಣನು ಹೇಳುತ್ತಾನೆ:—ಮುನಿಯೆ! ಸಮಸ್ತಮಂತ್ರಗಳನ್ನು ಸಾಧಿಸುವುದು ಕಷ್ಟಕರವಾದುದು. ಆ ಸಾಧನವು ಪ್ರತ್ಯವಾಯಗಳಿಂದಲೂ, ಅನೇಕೋಪದ್ರವಗಳಿಂದಲೂ ಕೂಡಿರುವುದು.

೪೬. ದ್ವಿಜನೆ! ಆದ್ದರಿಂದ ಮಂತ್ರಸಿದ್ಧಿಯನ್ನು ನೀನು ಇಚ್ಛಿಸುವುದಾದರೆ ಚಮತ್ಕಾರ ಪುರಕ್ಷೇತ್ರಕ್ಕೆ ಹೋಗು.

೪೭. ಅಲ್ಲಿ ಅಗಸ್ತ್ಯನು ನಿರ್ಮಿಸಿರುವ ಚಿತ್ರೇಶ್ವರ ಪೀಠವು ಮನಸ್ಸಿನಲ್ಲಿರುವ ಮಂತ್ರಗಳಿಗೆ ಸಿದ್ಧಿಯನ್ನು ಕೊಡುವುದೆಂದು ವಿಖ್ಯಾತವಾಗಿದೆ.

೪೮—೪೯. ದ್ವಿಜನೆ! ಅಲ್ಲಿ ಛಿದ್ರವೂ, ಪ್ರತ್ಯವಾಯವೂ ಅಸಿದ್ಧಿಯೂ ಸಕಲ ದೇವತೆಗಳ ವರದಾನದಿಂದ ಉಂಟಾಗುವುದಿಲ್ಲ. ನಾಲ್ಕು ಯುಗಗಳಲ್ಲಿಯೂ ಇರುವ ಆ ಪೀಠವು ಅಲ್ಲಿ ವಾಸಿಸುವ ಮಾನವರಿಗೆ ಯುಗಾನುಗುಣವಾಗಿ ಸಿದ್ಧಿಯನ್ನು ಕೊಡುವುದು. ಆದ್ದರಿಂದ ನಾನು ಅದನ್ನು ಹೇಳುತ್ತೇನೆ.

ಯೋ ಯಂ ಸಾಧಯಿತುಂ ಮಂತ್ರಮಿಚ್ಛತಿ ದ್ವಿಜಸತ್ತಮ ।
ಸ ತಸ್ಯ ಪೂರ್ವಮೇವಾಽಥ ಲಕ್ಷಮೇಕಂ ಜಪೇನ್ನರಃ ॥ ೫೦ ॥
ತತೋ ಭವತಿ ಸಂಸಿದ್ಧೋ ಮಂತ್ರಾರ್ಹಃ ಸ ನರಃ ಶುಚಿಃ ।
ಜಪೇದ್ಬ್ರಾಹ್ಮಣಶಾರ್ದೂಲ ತತೋ ಲಕ್ಷಚತುಷ್ಟಯಂ ।
ದಶಾಂಶೇನ ತು ಹೋಮಃ ಸ್ಯಾತ್ಸುಸಮಿದ್ಧೇ ಹುತಾಶನೇ ॥ ೫೧ ॥
ತತಸ್ತು ಜಾಯತೇ ಸಿದ್ಧಿರ್ನೂನಂ ತನ್ಮಂತ್ರಸಂಭವಾ ।
ತತ್ರ ಸೌಮ್ಯೇಷು ಕೃತ್ಯೇಷು ಹೋಮಃ ಸಿದ್ಧಾರ್ಥಕೈಃ ಸಿತೈಃ ॥ ೫೨ ॥
ಜಾತಿಪುಷ್ಪೈಶ್ಚ ವಿಪ್ರೇಂದ್ರ ಸ್ಮೃತೋ ಬ್ರಾಹ್ಮಣಭೋಜನೈಃ ।
ತಥಾ ರೌದ್ರೇಷು ಕೃತ್ಯೇಷು ರಕ್ತಪುಷ್ಪೈಃ ಸಗುಗ್ಗುಲೈಃ ।
ತರ್ಪಣೈಃ ಕನ್ಯಕಾನಾಂಚ ಹೋಮಃ ಸ್ಯಾತ್ಸಫಲಪ್ರದಃ ॥ ೫೩ ॥
ಏತತ್ಕೃತಯುಗೇ ಪ್ರೋಕ್ತಂ ಮಂತ್ರಸಾಧನಮುತ್ತಮಂ ।
ಸರ್ವೇಷಾಂ ಸಾಧಕಾನಾಂ ಚ ಮಯಾ ಪ್ರೋಕ್ತಂ ದ್ವಿಜೋತ್ತಮ ॥ ೫೪ ॥
ಏತತ್ತ್ರೇತಾಯುಗೇ ಪ್ರೋಕ್ತಂ ಪಾದೋನಂ ಮಂತ್ರಸಾಧನಂ ।
ಯುಗ್ಮಾರ್ಧಂ ದ್ವಾಪರೇ ಕಾರ್ಯಂ ಚತುರ್ಥಾಂಶಂ ಕಲೌ ಯುಗೇ ॥

---

೫೦. ದ್ವಿಜವರ್ಯನೆ:—ಯಾವನು ಯಾವ ಮಂತ್ರವನ್ನು ಸಾಧಿಸಲು ಬಯಸುವನೊ, ಅವನು ಅದಕ್ಕಿಂತ ಮುಂಚೆ ಒಂದು ಲಕ್ಷಸಾರಿ ಆ ಮಂತ್ರವನ್ನು ಜಪಿಸಬೇಕು.

೫೧. ಅದರಿಂದ ಶುದ್ಧನಾದ ಆ ಮಾನವನು ಮಂತ್ರಾರ್ಹನಾಗುವನು. ಬಳಿಕ ಅವನು ನಾಲ್ಕು ಲಕ್ಷಸಾರಿ ಮಂತ್ರವನ್ನು ಜಪಿಸಬೇಕು. ಅದರ ಹತ್ತನೆ ಒಂದಂಶದಿಂದ ಜ್ವಲಿಸುವ ಅಗ್ನಿಯಲ್ಲಿ ಹೋಮಮಾಡಬೇಕು.

೫೨—೫೩. ಬಳಿಕ ನಿಶ್ಚಯವಾಗಿಯೂ ಆ ಮಂತ್ರವು ಸಿದ್ಧಿಸುವುದು. ಸೌಮ್ಯಕಾರ್ಯಗಳಲ್ಲಿ ಬಿಳಿಸಾಸಿವೆ, ಜಾಜಿ ಹೂವುಗಳಿಂದ ಹೋಮಮಾಡಿ ಬ್ರಾಹ್ಮಣರನ್ನು ಭೋಜನಮಾಡಿಸಬೇಕು. ರೌದ್ರಕಾರ್ಯಗಳಲ್ಲಿ ಗುಗ್ಗುಲ, ಕೆಂಪುಹೂವು, ಕನ್ಯಕಾಭೋಜನ ಇವುಗಳಿಂದ ಹೋಮಮಾಡಿದರೆ ಫಲವುಂಟಾಗುವುದು.

೫೪. ಈ ಉತ್ತಮವಾದ ಮಂತ್ರಸಾಧನವು ಕೃತಯುಗದಲ್ಲಿ ಸಾಧಿಸುವ ಮಾನವರಿಗೆ ವಿಹಿತವಾಗಿರುವುದು.

೫೫. ತ್ರೇತಾಯುಗದಲ್ಲಿ ನಾಲ್ಕನೆ ಒಂದಂಶದಿಂದ ಕಡಮೆಯಾದ ಈ ವಿಧಿಯನ್ನೂ, ದ್ವಾಪರಯುಗದಲ್ಲಿ ಅರ್ಧಭಾಗವನ್ನೂ, ಕಲಿಯುಗದಲ್ಲಿ ನಾಲ್ಕನೆ ಒಂದು ಭಾಗವನ್ನೂ ಅನುಷ್ಠಾನಮಾಡಬೇಕು.

ಏವಂ ತತ್ರ ಸಮಾಸಾದ್ಯ ಸಿದ್ಧಿಂ ಮಂತ್ರಸಮುದ್ಭವಾಂ ।
ತತ್ರ ಪೀಠೇ ತತಃ ಕೃತ್ಯಂ ಸಾಧಯೇತ್ಸ್ವೇಚ್ಛಯಾ ನರಃ ॥ ೫೬ ॥
ಶಾಪಾನುಗ್ರಹಸಾಮರ್ಥ್ಯಸಂಯುತಸ್ತೇಜಸಾನ್ವಿತಃ ।
ಅಜೇಯಃ ಸರ್ವಭೂತಾನಾಂ ಸಾಧೂನಾಂ ಸಮ್ಮತಸ್ತಥಾ ॥ ೫೭ ॥

ಸೂತ ಉವಾಚ :—

ತಚ್ಛ್ರುತ್ವಾ ಸ ಮುನಿಸ್ತಸ್ಯ ಪಿತುರ್ವಾಮ ವಚೋಽಖಿಲಂ ।
ತತಶ್ಚಿತ್ರೇಶ್ವರಂ ಪೀಠಂ ಸಮಾಯಾತೋಽಥ ಸನ್ಮುನಿಃ ॥ ೫೮ ॥
ತತ್ರ ಸಂಸಾಧಯಾಮಾಸ ಸರ್ವಾನ್ಮಂತ್ರಾನ್ ಯಥಾಕ್ರಮಂ ।
ವಿಧಿನಾ ಶಾಸ್ತ್ರದೃಷ್ಟೇನ ಶ್ರದ್ಧಯಾ ಪರಯಾ ಯುತಃ ॥ ೫೯ ॥
ಇತಿ ಸಂಸಿದ್ಧಮಂತ್ರಃ ಸ ಚಮತ್ಕಾರಪುರಂ ಗತಃ ।
ವಿಪ್ರಾಣಾಂ ಪ್ರಾರ್ಥನಾರ್ಥಾಯ ಭೂಮಿಖಂಡಕೃತೇ ದ್ವಿಜಾಃ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಿತ್ರೇಶ್ವರಪೀಠಮಾಹಾತ್ಮ್ಯವರ್ಣನಂ" ನಾಮ
ಷಟ್ತ್ರಿಂಶೋಽಧ್ಯಾಯಃ

---

೫೬—೫೭. ಹೀಗೆ ಮಾನವನು ಅಲ್ಲಿ ಮಂತ್ರಸಿದ್ಧಿಯನ್ನು ಪಡೆದು ಶಾಪಾನುಗ್ರಹ ಸಮರ್ಥನೂ, ತೇಜಸ್ವಿಯೂ, ಅಜೇಯನೂ, ಸಮಸ್ತಪ್ರಾಣಿಗಳಿಗೆ ಸಮ್ಮತನೂ ಆಗಿ ತನಗಿಷ್ಟವಾದ ಕಾರ್ಯವನ್ನು ಸಾಧಿಸಬೇಕು.

೫೮. ಸೂತನು ಹೇಳುತ್ತಾನೆ:— ಆ ದುರ್ವಾಸಮುನಿಯು ತನ್ನ ತಂದೆಯ ಎಲ್ಲ ಮಾತುಗಳನ್ನು ಕೇಳಿ ಚೈತ್ರೇಶ್ವರ ಪೀಠಕ್ಕೆ ಬಂದನು.

೫೯. ಅಲ್ಲಿ ಶಾಸ್ತ್ರವಿಧಿಯಂತೆ ಶ್ರದ್ಧೆಯಿಂದ ಕೂಡಿ ಸಕಲಮಂತ್ರಗಳನ್ನೂ ಸಾಧಿಸಿದನು.

೬೦. ಹೀಗೆ ಮಂತ್ರಸಿದ್ಧಿಯನ್ನು ಹೊಂದಿದ ಆ ಮುನಿಯು ಸ್ವಲ್ಪ ಭೂಮಿಗಾಗಿ ಬ್ರಾಹ್ಮಣರನ್ನು ಪ್ರಾರ್ಥನೆಮಾಡಲು ಚಮತ್ಕಾರಪುರಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರೇಶ್ವರಪೀಠಮಾಹಾತ್ಮ್ಯವರ್ಣನ"ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ರಿಂಶೋಽಧ್ಯಾಯಃ

### ದುಃಶೀಲಾಖ್ಯಪ್ರಾಸಾದೋತ್ಪತ್ತಿವರ್ಣನಂ

ಸೂತ ಉವಾಚ :—

ಅಥಾಽಪಶ್ಯತ್ಸ ವಿಪ್ರಾಣಾಂ ವೃಂದಂ ವೃಂದಾರಕೋಪಮಂ ।
ಸನ್ನಿವಿಷ್ಟಂ ಧರಾಪೃಷ್ಠೇ ಲೀಲಾಭಾಜಿ ದ್ವಿಜೋತ್ತಮಾಃ ॥ ೧ ॥
ಏಕೇ ವೇದವಿದಸ್ತತ್ರ ವೇದವ್ಯಾಖ್ಯಾನತತ್ಪರಾಃ ।
ಪರಸ್ಪರಂ ಸುಸಂಕ್ರುದ್ಧಾ ವಿವದಂತಿ ಜಿಗೀಷವಃ ॥ ೨ ॥
ಯಜ್ಞವಿದ್ಯಾವಿದೋಽನ್ಯೇಽಪಿ ಯಜ್ಞಾಖ್ಯಾನಪರಾಯಣಾಃ ।
ತತ್ರ ವಿಪ್ರಾಃ ಪ್ರದೃಶ್ಯಂತೇ ಶತಶೋ ಬ್ರಹ್ಮವಾದಿನಃ ॥ ೩ ॥
ಅನ್ಯೇ ಬ್ರಾಹ್ಮಣಶಾರ್ದೂಲಾ ವೇದಾಂಗೇಷು ವಿಚಕ್ಷಣಾಃ ।
ಪ್ರವದಂತಿ ಚ ಸಂದೇಹಾನ್ವೃಂದಾನಾಮಗ್ರತಃ ಸ್ಥಿತಾಃ ॥ ೪ ॥
ವೇದಾಽಭ್ಯಾಸಪರಾಶ್ಚಾಽನ್ಯೇ ತಾರನಾದೇವ ಸರ್ವಶಃ ।
ನಾದಯಂತೋ ದಿಶಾಂ ಚಕ್ರಂ ತತ್ರ ಸಮ್ಯಗ್ದ್ವಿಜೋತ್ತಮಾಃ ॥ ೫ ॥

---

### ಕನ್ನಡದ ಅನುವಾದ

#### ದುಃಶೀಲಾಖ್ಯಪ್ರಾಸಾದೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ತರುವಾಯ ಆ ದುರ್ವಾಸ ಮುನಿಯು ನೆಲದಲ್ಲಿ ಕುಳಿತಿರುವ ದೇವತೆಗಳಂತಿರುವ ಬ್ರಾಹ್ಮಣರ ಗುಂಪನ್ನು ಕಂಡನು.

೨. ಅದರಲ್ಲಿ ಕೆಲವು ವೇದಜ್ಞರಾದ ಬ್ರಾಹ್ಮಣರು ವೇದವ್ಯಾಖ್ಯಾನದಲ್ಲಿ ನಿರತರಾಗಿ ಕೋಪದಿಂದ ಪರಸ್ಪರ ಜಯಿಸಲಾಶೆಯಿಂದ ವಾದಮಾಡುತ್ತಿದ್ದರು.

೩. ಯಜ್ಞ ವಿದ್ಯೆಯನ್ನರಿತವರೂ ಯಜ್ಞವನ್ನು ವರ್ಣಿಸುವುದರಲ್ಲಿ ಆಸಕ್ತರೂ ಬ್ರಹ್ಮಜ್ಞಾನಿಗಳೂ ಆದ ನೂರಾರು ಮಂದಿ ಇತರ ಬ್ರಾಹ್ಮಣರೂ ಕಾಣುತ್ತಿದ್ದರು.

೪. ವೇದಾಂಗಗಳಲ್ಲಿ ನಿಪುಣರಾದ ಇತರ ಬ್ರಾಹ್ಮಣೋತ್ತಮರು ಆ ಗುಂಪಿನ ಮುಂದೆ ನಿಂತು ಸಂದೇಹಗಳನ್ನು ಹೇಳುತ್ತಿದ್ದರು.

೫. ಇತರರು ವೇದಾಧ್ಯಯನ ನಿರತರಾಗಿ ದಿಕ್ಕುಗಳ ಸಮೂಹವನ್ನು ಧ್ವನಿಗೊಳಿಸುತ್ತಿದ್ದರು.

ಅನ್ಯೇ ಕೌತೂಹಲಾವಿಷ್ಟಾಃ ಸಂಚರನ್ವಿಷಮಾನ್ಮಿಥಃ ।
ಪಪ್ರಚ್ಛುರ್ಜಹಸುಶ್ಚಾಽನ್ಯೇ ಜ್ಞಾತ್ವಾ ಮಾರ್ಗಪ್ರವರ್ತಿನಂ ॥ ೬ ॥
ಸ್ಮೃತಿವಾದಪರಾಶ್ಚಾಽನ್ಯೇ ತಥಾಽನ್ಯೇ ಶ್ರುತಿಪಾಠಕಾಃ ।
ಸಂದೇಹಾನ್ ಸ್ಮೃತಿಜಾನನ್ಯೇ ಪೃಚ್ಛಂತಿ ಚ ಪರಸ್ಪರಂ ॥ ೭ ॥
ಕೀರ್ತಯಂತಿ ತಥಾ ಚಾಽನ್ಯೇ ಪುರಾಣಾ ಬ್ರಾಹ್ಮಣೋತ್ತಮಾಃ ।
ವೃದ್ಧಾನಾಂ ಪುರತಸ್ತತ್ರ ಸಭಾಮಧ್ಯೇ ವ್ಯವಸ್ಥಿತಾಃ ॥ ೮ ॥
ಅಥ ತಾನ್ ಸ ಮುನಿರ್ದೃಷ್ಟ್ವಾ ಬ್ರಾಹ್ಮಣಾನ್ ಸಂಶಿತವ್ರತಾನ್ ।
ಅಭಿವಾದ್ಯ ತತಃ ಪ್ರಾಹ ಸಾದರಂ ವಿನಯಾನ್ವಿತಃ ॥ ೯ ॥
ಮಮ ಬುದ್ಧಿಃ ಸಮುತ್ಪನ್ನಾ ಶಂಭೋರಾಯತನಂ ಪ್ರತಿ ।
ಕರ್ತುಂ ಬ್ರಾಹ್ಮಣಶಾರ್ದೂಲಾಸ್ತಸ್ಮಾತ್ಸ್ಥಾನಂ ಪ್ರದರ್ಶ್ಯತಾಂ ॥ ೧೦ ॥
ತತ್ರಾಽಹಂ ದೇವದೇವಸ್ಯ ಶಂಭೋಃ ಪ್ರಾಸಾದಮುತ್ತಮಂ ।
ವಿಧಾಯಾರಾಧಯಿಷ್ಯಾಮಿ ತಮೇವ ವೃಷಭಧ್ವಜಂ ॥ ೧೧ ॥
ಸ ಏವಂ ಜಲ್ಪಮಾನೋಽಪಿ ಮುಹುರ್ಮುಹುರತಂದ್ರಿತಃ ।
ನ ತೇಷಾಮುತ್ತರಂ ಲೇಭೇ ಶುಭಂ ವಾ ಯದಿ ವಾಽಶುಭಂ ॥ ೧೨ ॥
ತತಃ ಕೋಪಪರೀತಾತ್ಮಾ ಸ ಮುನಿಸ್ತಾನ್ದ್ವಿಜೋತ್ತಮಾನ್ ।
ಶಶಾಪ ತಾರಶಬ್ದೇನ ಯಥಾ ಶೃಣ್ವಂತಿ ಕೃತ್ಸ್ನಶಃ ॥ ೧೩ ॥

---

೬. ಇತರರು ಕೌತೂಹಲವುಳ್ಳವರಾಗಿ ವಿಷಮ ಕವಲುಗಳನ್ನು ಪ್ರಶ್ನೆಮಾಡುತ್ತಿದ್ದರು. ಇತರರು ಸರಿಯಾಗಿ ಹೇಳುತ್ತಿರುವವನನ್ನು ನೋಡಿ ನಗುತ್ತಿದ್ದರು.

೭-೮. ಇತರರು ಸ್ಮೃತಿವಾದನಿರತರೂ, ಇನ್ನು ಕೆಲವರು ವೇದಪಾಠಕರೂ, ಕೆಲವರು ಸ್ಮೃತಿಗಳಿಂದುಂಟಾದ ಸಂದೇಹಗಳನ್ನು ಪ್ರಶ್ನೆಮಾಡುವವರೂ ಆಗಿದ್ದರು. ಮತ್ತೆ ಕೆಲವರು ಸಭೆಯ ನಡುವೆ ವೃದ್ಧರ ಮುಂದೆ ಪುರಾಣವನ್ನು ಹೇಳುತ್ತಿದ್ದರು.

೯. ತರುವಾಯ ಆ ಮುನಿಯು ಶ್ಲಾಘ್ಯವ್ರತರಾದ ಆ ಬ್ರಾಹ್ಮಣರನ್ನು ನೋಡಿ ನಮಸ್ಕರಿಸಿ ವಿನಯದಿಂದ ಇಂತೆಂದನು.

೧೦. ಬ್ರಾಹ್ಮಣೋತ್ತಮರೆ! ನನಗೆ ಶಿವಾಲಯವನ್ನು ಕಟ್ಟಿಸಬೇಕೆಂದು ಅಪೇಕ್ಷೆಯುಂಟಾಗಿದೆ. ಆದ್ದರಿಂದ ಸ್ಥಳವನ್ನು ತೋರಿಸಿರಿ.

೧೧. ಅಲ್ಲಿ ನಾನು ಶಂಕರನ ಉತ್ತಮವಾದ ಆಲಯವನ್ನು ರಚಿಸಿ ಅವನನ್ನು ಪೂಜಿಸುವೆನು.

೧೨. ಆ ಮುನಿಯು ಹೀಗೆ ಅನೇಕ ಬಾರಿ ಬೇಸರವಿಲ್ಲದೆ ಹೇಳುತ್ತಿದ್ದರೂ ಅವರಿಂದ ಒಳ್ಳೆಯ ಅಥವಾ ಕೆಟ್ಟ ಉತ್ತರವನ್ನು ಪಡೆಯಲಿಲ್ಲ.

೧೩. ಬಳಿಕ ಕುಪಿತನಾದ ಆ ಮುನಿಯು ಆ ಬ್ರಾಹ್ಮಣರನ್ನು ಅವರು ಕೇಳುವಂತೆ ಗಟ್ಟಿಯಾದ ಧ್ವನಿಯಿಂದ ಶಪಿಸಿದನು.

ದುರ್ವಾಸಾ ಉವಾಚ :—

ವಿದ್ಯಾಮದೋ ಧನಮದ ಸ್ತೃತೀಯೋಽಭಿಜನೋದ್ಭವಃ ।
ಏತೇ ಮದಾವಲಿಪ್ತಾನಾಮೇತ ಏವ ಸತಾಂ ದಮಾಃ ॥ ೧೪ ॥
ತತ್ರ ಯೇಽಪಿ ಹಿ ಯುಷ್ಮಾಕಂ ಮದಾ ಏವ ವ್ಯವಸ್ಥಿತಾಃ ।
ಯತಸ್ತತೋನ್ವಯೇಽಪ್ಯೇವಂ ಭವಿಷ್ಯಂತಿ ಮದಾನ್ವಿತಾಃ ॥ ೧೫ ॥
ಸದಾ ಸೌಹೃದನಿರ್ಮುಕ್ತಾಃ ಪಿತರೋಽಪಿ ಸುತೈಃಸಹ ।
ಭವಿಷ್ಯಂತಿ ಪುರೇಹ್ಯಸ್ಮಿನ್ಕಿಂ ಪುನರ್ಬಾಂಧವಾದಯಃ ॥ ೧೬ ॥
ಏವಮುಕ್ತ್ವಾ ಸ ವಿಪ್ರೇಂದ್ರೋ ನಿವೃತ್ತಸ್ತದನಂತರಂ ।
ಅಪಮಾನಂ ಪರಂ ಪ್ರಾಪ್ಯ ಬ್ರಾಹ್ಮಣಾನಾಂ ದ್ವಿಜೋತ್ತಮಾಃ ॥ ೧೭ ॥
ಅಥ ತನ್ಮಧ್ಯಗೋವಿಪ್ರ ಆಸೀದ್ವೃದ್ಧತಮಃ ಸುಧೀಃ ।
ಸುಶೀಲ ಇತಿ ವಿಖ್ಯಾತೋ ವೇದವೇದಾಂಗಪಾರಗಃ ॥ ೧೮ ॥
ಸ ದೃಷ್ಟ್ವಾ ತಂ ಮುನಿಂ ಕ್ರುದ್ಧಂ ಗಚ್ಛಂತಮುಪಮಾನಿತಂ ।
ಸತ್ವರಂ ಪ್ರಯಯೌ ಪೃಷ್ಠೇ ತಿಷ್ಠ ತಿಷ್ಠೇತಿ ಚ ಬ್ರುವನ್ ॥ ೧೯ ॥
ಅಥಾಸಾದ್ಯ ಗತಂ ದೂರಂ ಪ್ರಣಿಪತ್ಯ ಮುನಿಂ ಚ ಸಃ ।
ಪ್ರೋವಾಚ ಕ್ಷಮ್ಯತಾಂ ವಿಪ್ರ ವಿಪ್ರಾಣಾಂ ವಚನಾನ್ಮಮ ॥ ೨೦ ॥

---

೧೪. ದುರ್ವಾಸನು ಹೇಳುತ್ತಾನೆ:—ಅಹಂಕಾರಿಗಳಿಗೆ ವಿದ್ಯಾಮದ, ಧನಮದ, ಸತ್ಕುಲಮದ ಇವುಗಳು ಮದವನ್ನುಂಟುಮಾಡುವುವು. ಸಜ್ಜನರಿಗೆ ಇವೇ ಇಂದ್ರಿಯನಿಗ್ರಹಕ್ಕೆ ಸಾಧನಗಳಾಗಿ ದಮವಾಗುವುವು.

೧೫. ಈ ವಿದ್ಯಾಮದಾದಿಗಳು ನಿಮಗೆ ಮದವಾಗಿಯೇ ಇರುವುದರಿಂದ ನಿಮ್ಮ ವಂಶದಲ್ಲಿಯೂ ಮದವುಳ್ಳವರೇ ಜನಿಸುವರು.

೧೬. ಈ ಪಟ್ಟಣದಲ್ಲಿ ತಂದೆತಾಯಿಗಳು ಪುತ್ರರೊಡನೆ ಯಾವಾಗಲೂ ಪ್ರೀತಿಯಿಲ್ಲದವರಾಗುವರು. ಬಂಧುಗಳೇ ಮೊದಲಾದವರಿನ್ನೇನು?

೧೭. ದ್ವಿಜವರೇಣ್ಯರೆ! ಆ ಬ್ರಾಹ್ಮಣೋತ್ತಮನು ಅತಿಶಯಾಪಮಾನವನ್ನು ಹೊಂದಿ ಈ ರೀತಿ ಶಪಿಸಿ ಹಿಂದಿರುಗಿದನು.

೧೮. ಬಳಿಕ ಆ ಬ್ರಾಹ್ಮಣರಲ್ಲಿ ವೃದ್ಧನೂ, ವಿದ್ವಾಂಸನೂ, ವೇದವೇದಾಂಗಪಾರಂಗತನೂ ಆದ ಸುಶೀಲನೆಂಬ ಮಧ್ಯಗನಿದ್ದನು.

೧೯. ಅವನು ಅಪಮಾನಗೊಂಡು ಕುಪಿತನಾಗಿ ಹೋಗುತ್ತಿರುವ ಮುನಿಯನ್ನು ಕಂಡು ನಿಲ್ಲು ನಿಲ್ಲು ಎಂದು ಹೇಳುತ್ತ ಬೇಗನೆ ಹಿಂದೆ ಹೋದನು.

೨೦. ಆ ಮಧ್ಯಗನು ದೂರ ಹೋದ ಮುನಿಯನ್ನು ಹೊಂದಿ ನಮಸ್ಕರಿಸಿ ಹೀಗೆಂದನು. ನನ್ನ ಮಾತಿನಿಂದ ಬ್ರಾಹ್ಮಣರನ್ನು ಕ್ಷಮಿಸು.

ಏತೈಃ ಸ್ವಾಧ್ಯಾಯಸಂಪನ್ನೈರ್ನ ಶ್ರುತಂ ವಚನಂ ತವ ।
ನೋತ್ತರಂ ತೇನ ಸಂದತ್ತಂ ಸತ್ಯಮೇತದ್ಬ್ರವೀಮ್ಯಹಂ ॥ ೨೧ ॥
ತಸ್ಮಾದ್ಭೂಮಿರ್ಮಯಾದತ್ತಾ ಶಂಭುಹರ್ಮ್ಯಕೃತೇ ತವ ।
ಅಸ್ಮಿನ್‌ಸ್ಥಾನೇ ದ್ವಿಜಶ್ರೇಷ್ಠ ಪ್ರಾಸಾದಂ ಕರ್ತುಮರ್ಹಸಿ ॥ ೨೨ ॥
ತಸ್ಯ ತದ್ವಚನಂ ಶ್ರುತ್ವಾ ದುರ್ವಾಸಾ ಹರ್ಷಸಂಯುತಃ ।
ಕ್ಷಿತಿದಾನೋದ್ಭವಾಂ ಚಕ್ರೇ ಸ್ವಸ್ತಿಂ ಬ್ರಾಹ್ಮಣಸತ್ತಮಾಃ ।
ಪ್ರಾಸಾದಂ ನಿರ್ಮಮೇ ಪಶ್ಚಾತ್ತಸ್ಯ ವಾಕ್ಯೇ ವ್ಯವಸ್ಥಿತಃ ॥ ೨೩ ॥
ಅಥ ತೇ ಬ್ರಾಹ್ಮಣಾ ಜ್ಞಾತ್ವಾ ಸುಶೀಲೇನ ವಸುಂಧರಾ ।
ದೇವತಾಯತನಾರ್ಥಾಯ ದತ್ತಾ ತಸ್ಮೈ ತಪಸ್ವಿನೇ ॥ ೨೪ ॥
ಸರ್ವೇ ಕೋಪಸಮಾಯುಕ್ತಾಃ ಸುಶೀಲಂಪ್ರತಿ ತೇ ದ್ವಿಜಾಃ ॥ ೨೫ ॥
ತತಃ ಪ್ರೋಚುಃ ಸಮಾಸಾದ್ಯ ಯೇನ ಶಪ್ತಾ ದುರಾತ್ಮನಾ ।
ಏಯುಂ ತಸ್ಮೈ ತ್ವಯಾ ದತ್ತಾ ಪ್ರಾಸಾದಾರ್ಥಂ ವಸುಂಧರಾ ॥ ೨೬ ॥
ತಸ್ಮಾತ್ತ್ವಮಪಿ ಚಾಸ್ಮಾಕಂ ಬಾಹ್ಯ ಏವ ಭವಿಷ್ಯಸಿ ।
ಸುಶೀಲೋಽಪಿ ಹಿ ದುಃಶೀಲೋ ನಾಮ್ನಾ ಸಂಕೀರ್ತ್ಯತೇ ಬುಧೈಃ ॥ ೨೭ ॥
ಏಷೋಽಪಿ ತಾಪಸೋ ದುಷ್ಟೋ ಯಃ ಕರೋತಿ ಶಿವಾಲಯಂ ।
ನೈವ ತಸ್ಯ ಭವೇತ್ಸಿದ್ಧಿಶ್ಚಾಽಪಿ ವರ್ಷಶತೈರಪಿ ॥ ೨೮ ॥

---

೨೧. ಈ ಬ್ರಾಹ್ಮಣರು ವೇದಾಧ್ಯಯನ ಮಾಡುತ್ತಿದ್ದುದರಿಂದ ನಿನ್ನ ಮಾತನ್ನು ಕೇಳಲಿಲ್ಲ. ಆದರಿಂದಲೇ ಉತ್ತರವನ್ನೀಯಲಿಲ್ಲ. ನಾನು ಸತ್ಯವನ್ನು ನುಡಿಯುವೆನು.

೨೨. ಆದ್ದರಿಂದ ನಾನು ನಿನಗೆ ಶಿವದೇವಾಲಯಕ್ಕಾಗಿ ಭೂಮಿಯನ್ನು ಕೊಟ್ಟಿರುವೆನು. ಇಲ್ಲಿ ನೀನು ಪ್ರಾಸಾದನನ್ನು ನಿರ್ಮಿಸು.

೨೩. ಆ ದುರ್ವಾಸಮುನಿಯು ಅವನ ಆ ಮಾತನ್ನು ಕೇಳಿ ಸಂತೋಷದಿಂದ ಭೂದಾನ ಮಾಡಿದ್ದಕ್ಕಾಗಿ ಮಂಗಳವನ್ನು ಹರಸಿದನು. ಅನಂತರ ಅವನ ಮಾತಿನಂತೆ ದೇವಾಲಯವನ್ನು ನಿರ್ಮಿಸಿದನು.

೨೪–೨೬. ತರುವಾಯ ಆ ಬ್ರಾಹ್ಮಣರು ಸುಶೀಲನು ದುರ್ವಾಸಮುನಿಗೆ ಶಿವ ದೇವಾಲಯವನ್ನು ನಿರ್ಮಿಸಲು ಭೂಮಿಯನ್ನು ದಾನಮಾಡಿರುವುದನ್ನು ಕೇಳಿ ಕುಪಿತರಾಗಿ ಆ ಸುಶೀಲನನ್ನು ಕುರಿತು ನೀನು ನಮ್ಮನ್ನು ಶಪಿಸಿರುವ ದುರಾತ್ಮನಾದ ಆ ಮುನಿಗೆ ಶಿವ ದೇವಾಲಯಕ್ಕಾಗಿ ಭೂಮಿಯನ್ನು ಕೊಟ್ಟಿರುವೆ.

೨೭. ಆದ್ದರಿಂದ ನೀನೂ ನಮಗೆ ಬಾಹ್ಯನಾಗುವೆ. ವಿದ್ವಾಂಸರು ಸುಶೀಲನಾಗಿದ್ದರೂ ನಿನ್ನನ್ನು ದುಶ್ಶೀಲನೆಂದು ಕರೆಯುವರು.

೨೮. ಈ ಶಿವಾಲಯವನ್ನು ನಿರ್ಮಿಸುವ ದುಷ್ಟ ತಾಪಸನಿಗೆ ನೂರು ವರ್ಷಗಳವರೆಗೂ ಸಿದ್ಧಿಯಾಗುವುದಿಲ್ಲ.

ತಥಾ ಕೀರ್ತಿಕೃತಾಂ ಲೋಕೇ ಕೀರ್ತನಂ ಕ್ರಿಯತೇ ಸರ್ವೈಃ ।
ತತಃ ಸಂಪಶ್ಯತಾಂ ಚಾಽಸ್ಯ ಕೀರ್ತಿನಾಽಽಸ್ಯತು ದುರ್ಮತೇಃ ॥ ೨೯ ॥
ಏಷ ದುಃಶೀಲಸಂಜ್ಞೋಽವೈ ತವ ನಾಮ್ನಾ ಭವಿಷ್ಯತಿ ।
ಪ್ರಾಸಾದೋ ನಾಮಮಾತ್ರೇಣ ನ ಸಂಪೂರ್ಣಃ ಕದಾಚನ ॥ ೩೦ ॥
ಯಸ್ಮಾತ್ಸೌಹೃದನಿರ್ಮುಕ್ತಾಃ ಕೃತಾಸ್ತೇನ ವಯಂ ದ್ವಿಜಾಃ ।
ಮದೈಸ್ತ್ರಿಭಿಃ ಸಮಾಯುಕ್ತಾಃ ಸರ್ವಾನ್ವಯಸಮನ್ವಿತಾಃ ॥ ೩೧ ॥
ತಸ್ಮಾದೇಷೋಽಪಿ ಪಾಪಾತ್ಮಾ ಭವಿಷ್ಯತಿ ಸ ಕೋಪಭಾಕ್ ।
ತಪ್ತಂ ತಪ್ತಂ ತಪೋ ಯೇನ ಸಂಪ್ರಯಾಸ್ಯತಿ ಸಂಕ್ಷಯಂ ॥ ೩೨ ॥
ಏವಮುಕ್ತ್ವಾಽಥ ತೇ ವಿಪ್ರಾಃ ಕೋಪಸಂರಕ್ತಲೋಚನಾಃ ।
ದುಃಶೀಲಂ ಸಂಪರಿತ್ಯಜ್ಯ ಪ್ರವಿಷ್ಟಾಃ ಸ್ವಪುರೇ ತತಃ ॥ ೩೩ ॥
ದುಃಶೀಲೋಽಪಿ ಬಹಿಶ್ಚಕ್ರೇ ಗೃಹಂ ತಸ್ಯ ಪುರಸ್ಯ ಚ ।
ದೇವಶರ್ಮಾ ಯಥಾಪೂರ್ವಂ ಸಂತ್ಯಕ್ತಃ ಪುರವಾಸಿಭಿಃ ॥ ೩೪ ॥
ತಸ್ಯಾನ್ವಯೇಽಪಿ ಯೇ ಜಾತಾಸ್ತೇ ಬಾಹ್ಯಾಃ ಸಂಪ್ರಕೀರ್ತಿತಾಃ ।
ಬಾಹ್ಯಾಃ ಕ್ರಿಯಾಸು ಸರ್ವಾಸು ಸರ್ವೇಷಾಂ ಪುರವಾಸಿನಾಂ ॥ ೩೫ ॥

ಸೂತ ಉವಾಚ:—

ಏವಂ ತೇಷು ದ್ವಿಜೇಂದ್ರೇಷು ಶಾಪಂ ದತ್ವಾ ಗತೇಷು ಚ ।
ದುರ್ವಾಸಾಃ ಪ್ರಾಹ ದುಃಶೀಲಂ ಕೋಪಸಂರಕ್ತಲೋಚನಃ ॥ ೩೬ ॥

---

೨೯. ಲೋಕದಲ್ಲಿ ಕೀರ್ತಿವಂತರನ್ನು ಜನರು ಹೊಗಳುವಂತೆ ಈ ದುಷ್ಟನ ಕೀರ್ತಿಯನ್ನು ಯಾರೂ ನೋಡದಿರಲಿ.

೩೦. ಇವನು ನಿನ್ನಂತೆಯೇ ದುಶ್ಶೀಲನೆಂದು ಹೆಸರನ್ನು ಹೊಂದಲಿ. ಆಲಯವು ಹೆಸರಿನಿಂದ ಮಾತ್ರ ದೇವಾಲಯವಾಗಲಿ, ಸಂಪೂರ್ಣವಾಗದಿರಲಿ.

೩೧—೩೩. ಅವನು ನಮ್ಮನ್ನು ವಂಶಸಹಿತವಾಗಿ ಸೌಹೃದವಿಲ್ಲದವರನ್ನಾಗಿಯೂ, ಮೂರು ಮದವುಳ್ಳವರನ್ನಾಗಿಯೂ ಮಾಡಿರುವುದರಿಂದ ಪಾಪಿಷ್ಠನಾದ ಅವನೂ ಕೋಪಿಷ್ಠನಾಗುವನು. ಅವನು ತಪಸ್ಸನ್ನು ಮಾಡಿದಹಾಗೆಲ್ಲ ಅದು ನಾಶವಾಗಲಿ. ಆ ಬ್ರಾಹ್ಮಣರು ಓೀಗೆ ಹೇಳಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವರಾಗಿ ಆ ದುಶ್ಶೀಲನನ್ನು ತ್ಯಜಿಸಿ ತಮ್ಮ ಪಟ್ಟಣವನ್ನು ಪ್ರವೇಶಿಸಿದರು.

೩೪. ದುಶ್ಶೀಲನೂ ಪಟ್ಟಣಿಗರಿಂದ ಬಿಡಲ್ಪಟ್ಟ ದೇವಶರ್ಮನಂತೆ ತನ್ನ ಮನೆಯನ್ನು ಆ ಪಟ್ಟಣದ ಹೊರಗೆ ಮಾಡಿಕೊಂಡನು.

೩೫. ಅವನ ವಂಶದಲ್ಲಿ ಹುಟ್ಟಿದವರೂ ಪಟ್ಟಣಿಗರ ಸಕಲ ಕಾರ್ಯಗಳಲ್ಲಿ ಬಹುವಾಗಿ ಬಾಹ್ಯರೆಂದು ಹೇಳಿಸಿಕೊಂಡರು.

೩೬—೩೭. ಸೂತನು ಹೇಳುತ್ತಾನೆ:—ಹೀಗೆ ಆ ಬ್ರಾಹ್ಮಣೋತ್ತಮರು ಶಾಪವನ್ನಿತ್ತು ಹೊರಟು ಹೋಗಲು ದುರ್ವಾಸನು ಕೋಪದಿಂದ ಕೆಂಪಾದ

ಮಮ ಸಿದ್ಧಿಂ ಗತಾ ಮಂತ್ರಾಃ ಸಮರ್ಥಾಃ ಶತ್ರುಸಂಕ್ಷಯೇ ।
ಅಥರ್ವಣಾಸ್ತಥಾಚಾಽನ್ಯೇ ವೇದತ್ರಯ ಸಮುದ್ಭವಾಃ ॥ ೩೭ ॥
ತಸ್ಮಾದೇತತ್ಪುರಂ ಕೃತ್ಸ್ನಂ ಪಶುಪಕ್ಷಿಸಮನ್ವಿತಂ ।
ನಾಶಮದ್ಯ ನಯಿಷ್ಯಾಮಿ ಯಥಾ ಶತ್ರೋರ್ಹಿ ದುಷ್ಟಕಃ ॥ ೩೮ ॥

ದುಃಶೀಲ ಉವಾಚ:—

ನೈತದ್ಯುಕ್ತಂ ನರಶ್ರೇಷ್ಠ ತವ ಕರ್ತುಂ ಕಥಂಚನ ।
ಬ್ರಾಹ್ಮಣಾನಾಂ ಕೃತೇ ಕರ್ಮ ಬ್ರಾಹ್ಮಣಸ್ಯ ವಿಶೇಷತಃ ॥ ೩೯ ॥
ನಿಘ್ನಂತೋವಾ ಶಪಂತೋವಾ ವದಂತೋ ವಾಽಪಿ ನಿಷ್ಠುರಂ ।
ಪೂಜನೀಯಾಃ ಸದಾ ವಿಪ್ರಾ ದಿವ್ಯಾಂಲ್ಲೋಕಾನಭೀಪ್ಸುಭಿಃ ॥ ೪೦ ॥
ಬ್ರಾಹ್ಮಣೈರ್ನಿರ್ಜಿತೈರ್ನೀನೇ ಯ ಆತ್ಮಾನಂ ಜಯಾನ್ವಿತಂ ।
ತಾಮಿಸ್ರಾದಿಷು ಘೋರೇಷು ನರಕೇಷು ಸ ಪಚ್ಯತೇ ॥ ೪೧ ॥
ಆತ್ಮನಶ್ಚ ಪರಾಭೂತಿಂ ತಸ್ಮಾದ್ವಿಪ್ರಾತ್ಸಹೇತ ವೈ ।
ಯ ಇಚ್ಛೇದ್ವಸತಿಂ ಸ್ವರ್ಗೇ ಶಾಶ್ವತೀಂ ದ್ವಿಜಸತ್ತಮ ॥ ೪೨ ॥
ಏತೇಷಾಂ ಬ್ರಾಹ್ಮಣೇಂದ್ರಾಣಾಂ ಕ್ಷೇತ್ರೇ ಸಿದ್ಧಿಂ ಸಮಾಗತಾಃ ।
ಮಂತ್ರಾಸ್ತೇ ತತ್ಕಥಂ ನಾಶಂ ತ್ವಮೇತೇಷಾಂ ಕರಿಷ್ಯಸಿ ॥ ೪೩ ॥

---

ಕಣ್ಣುಳ್ಳವನಾಗಿ ಇಂತೆಂದನು. ನನಗೆ ಶತ್ರುನಾಶದಲ್ಲಿ ಸಮರ್ಥವಾದ ಆಥರ್ವಣ ಮಂತ್ರಗಳೂ, ಮೂರು ವೇದಗಳ ಮಂತ್ರಗಳೂ ಸಿದ್ಧಿಸಿರುವುವು.

೩೮. ಆದ್ದರಿಂದ ಪಶುಪಕ್ಷಿಗಳಿಂದ ಕೂಡಿರುವ ಈ ಸಮಗ್ರ ಪಟ್ಟಣವನ್ನು ದುಷ್ಟ ಶತ್ರುವಿನಂತೆ ನಾಶಗೊಳಿಸುವೆನು.

೩೯. ದುಶ್ಶೀಲನು ಹೇಳುತ್ತಾನೆ:—ಮುನಿಯೆ! ಬ್ರಾಹ್ಮಣನಾದ ನಿನಗೆ ಬ್ರಾಹ್ಮಣರಿಗಾಗಿ ಈ ಕಾರ್ಯವನ್ನು ಮಾಡುವುದು ಉಚಿತವಲ್ಲ.

೪೦. ದಿವ್ಯಲೋಕವನ್ನು ಬಯಸುವವರು ಕೊಲ್ಲುವ, ಶಪಿಸುವ ಅಥವಾ ಕಠಿನವಾಗಿ ನುಡಿಯುವವರಾದ ಬ್ರಾಹ್ಮಣರನ್ನೂ ಪೂಜಿಸಬೇಕು.

೪೧. ಬ್ರಾಹ್ಮಣರನ್ನು ಸೋಲಿಸಿ ತಾನು ಜಯಶೀಲನಾಗಿರುವೆನೆಂದರಿತವನು ತಾಮಿಸ್ರಾದಿ ಘೋರ ನರಕಗಳಲ್ಲಿ ದುಃಖಗೊಳ್ಳುವನು.

೪೨. ಶಾಶ್ವತವಾಗಿ ಸ್ವರ್ಗದಲ್ಲಿ ವಾಸವನ್ನಪೇಕ್ಷಿಸುವವನು ಬ್ರಾಹ್ಮಣನಿಂದ ತನಗಾದ ಪರಾಭವವನ್ನು ಸಹಿಸಬೇಕು.

೪೩. ನಿನ್ನ ಮಂತ್ರಗಳು ಈ ಬ್ರಾಹ್ಮಣರ ಕ್ಷೇತ್ರದಲ್ಲಿ ಸಿದ್ಧಿಯನ್ನು ಹೊಂದಿರುವುವು. ಆದ್ದರಿಂದ ನೀನು ಇವರನ್ನು ಹೇಗೆ ನಾಶಗೊಳಿಸುವೆ?

ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೪೪ ॥
ತಸ್ಮಾತ್ಕೋಪೋ ನ ಕರ್ತವ್ಯಃ ಕ್ಷೇತ್ರೇ ಚಾಽತ್ರ ವ್ಯವಸ್ಥಿತೈಃ ।
ಕ್ಷಮಾಂ ಕುರು ಮುನಿಶ್ರೇಷ್ಠ ಕೃಪಾಂ ಕುರು ಮಮೋಪರಿ ॥ ೪೫ ॥

ಸೂತ ಉವಾಚ :—

ಸ ತಥೇತಿ ಪ್ರತಿಜ್ಞಾಯ ತತ್ರ ಕೃತ್ವಾಽವಸತ್ತಪಃ ।
ಪ್ರಾಪ್ತಶ್ಚ ಪರಮಾಂ ಸಿದ್ಧಿಂ ದುರ್ಲಭಾಂ ತ್ರಿದಶೈರಪಿ ॥ ೪೬ ॥
ದುಃಶೀಲಾಖ್ಯಃ ಕ್ಷಿತೌ ಸೋಽಪಿ ಪ್ರಾಸಾದಃ ಖ್ಯಾತಿಮಾಗತಃ ।
ಯಸ್ಯ ಸಂದರ್ಶನಾದೇವ ನರಃ ಪಾಪಾತ್ಪ್ರಮುಚ್ಯತೇ ॥ ೪೭ ॥
ತಸ್ಯ ಮಧ್ಯಗತಂ ಲಿಂಗಂ ಶುಕ್ಲಾಷ್ಟಮ್ಯಾಂ ಸದಾ ನರಃ ।
ಯಃ ಪಶ್ಯತಿ ಕ್ಷಣಂ ಧ್ಯಾತ್ವಾ ನರಕಂ ಸ ನ ಪಶ್ಯತಿ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ದುಃಶೀಲಾಖ್ಯಪ್ರಾಸಾದೋತ್ಪತ್ತಿವರ್ಣನಂ"
ನಾಮ ಸಪ್ತತ್ರಿಂಶೋಽಧ್ಯಾಯಃ

---

೪೪. ಸಜ್ಜನರು ಬ್ರಹ್ಮಘ್ನ, ಸುರಾಪಾಯಿ, ಕಳ್ಳ, ವ್ರತಭ್ರಷ್ಟ ಇವರಿಗೆ ಪ್ರಾಯಶ್ಚಿತ್ತವನ್ನು ವಿಧಿಸಿರುವರು. ಕೃತಘ್ನನಿಗೆ ಪ್ರಾಯಶ್ಚಿತ್ತವನ್ನು ವಿಧಿಸಲಿಲ್ಲ.

೪೫. ಮುನಿವರ್ಯನೆ! ಆದ್ದರಿಂದ ನನ್ನ ಮೇಲೆ ದಯೆಯಿಟ್ಟು ಈ ಕ್ಷೇತ್ರವಾಸಿಗಳಲ್ಲಿ ಕೋಪಿಸಿಕೊಳ್ಳಬೇಡ. ಕ್ಷಮಿಸು.

೪೬. ಸೂತನು ಹೇಳುತ್ತಾನೆ:—ಅವನು ಹಾಗೆಯೇ ಆಗಲೆಂದೊಪ್ಪಿ ತಪಸ್ಸನ್ನು ಮಾಡುತ್ತ ಅಲ್ಲಿಯೇ ವಾಸಮಾಡಿ ದೇವತೆಗಳಿಗೂ ದುರ್ಲಭವಾದ ಉತ್ತಮ ಸಿದ್ಧಿಯನ್ನು ಪಡೆದನು.

೪೭. ಆ ದೇವಾಲಯವೂ ದುಶ್ಶೀಲವೆಂಬ ಹೆಸರಿನಿಂದ ಭೂಮಿಯಲ್ಲಿ ಖ್ಯಾತಿಗೊಂಡಿತು. ಇದನ್ನು ನೋಡುವುದರಿಂದಲೇ ಮಾನವನು ಪಾಪರಹಿತನಾಗುವನು.

೪೮. ಅದರ ನಡುವೆ ಇರುವ ಲಿಂಗವನ್ನು ಶುಕ್ಲಪಕ್ಷದ ಅಷ್ಟಮಿ ದಿನ ನೋಡಿ ಕ್ಷಣಕಾಲ ಚಿಂತಿಸಿದವನು ನರಕವನ್ನು ನೋಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ದುಃಶೀಲಾಖ್ಯಪ್ರಾಸಾದೋತ್ಪತ್ತಿವರ್ಣನ" ವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥಾಽಷ್ಟತ್ರಿಂಶೋಽಧ್ಯಾಯಃ

## ಧುಂಧುಮಾರೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರೈವ ಸ್ಥಾಪಿತಂ ಲಿಂಗಂ ಧುಂಧುಮಾರೇಣ ಭೂಭುಜಾ ।
ಸರ್ವರತ್ನಮಯಂ ಕೃತ್ವಾ ಪ್ರಾಸಾದಂ ಸುಮನೋಹರಂ ॥ ೧ ॥
ತತ್ರ ಕೃತ್ವಾಶ್ರಮಂ ಶ್ರೇಷ್ಠಂ ತಪಸ್ತೇಪೇ ಸುದಾರುಣಂ ।
ಯತ್ಪ್ರಭಾವಾದಯಂ ದೇವಸ್ತಸ್ಮಿಂಲ್ಲಿಂಗೇ ವ್ಯವಸ್ಥಿತಃ ॥ ೨ ॥
ತಸ್ಯ ಸನ್ನಿಹಿತಾ ವಾಪೀ ಕೃತಾ ತೇನ ಮಹಾತ್ಮನಾ ।
ಸುನಿರ್ಮಲಜಲಾಪೂರ್ಣಾ ಸರ್ವತೀರ್ಥೋಪಮಾ ಶುಭಾ ॥ ೩ ॥
ಧುಂಧುಮಾರೇಶ್ವರಂ ಪಶ್ಯೇತ್ತತ್ರ ಸ್ನಾತ್ವಾ ನರೋತ್ತಮಃ ।
ನ ಸ ಪಶ್ಯತಿ ದುರ್ಗಾಣಿ ನರಕಾಣಿ ಯಮಾಲಯೇ ॥ ೪ ॥

ಋಷಯ ಊಚುಃ :—

ಧುಂಧುಮಾರೋ ಮಹೀಪಾಲಃ ಕಸ್ಮಿನ್ ವಂಶೇ ಬಭೂವ ಸಃ ।
ಕಸ್ಮಿನ್ ಕಾಲೇ ತಪಸ್ತಪ್ತಂ ತೇನಾಽತ್ರ ಸುಮಹಾತ್ಮನಾ ॥ ೫ ॥

---

## ಕನ್ನಡದ ಅನುವಾದ

### ಧುಂಧುಮಾರೇಶ್ವರಮಾಹಾತ್ಮ್ಯವರ್ಣನ

೧. ಅಲ್ಲಿಯೇ ಧುಂಧುಮಾರನೆಂಬ ರಾಜನು ಸಕಲ ರತ್ನಮಯವಾದ ರಮ್ಯ ದೇವಾಲಯವನ್ನು ನಿರ್ಮಿಸಿ ಲಿಂಗವನ್ನು ಸ್ಥಾಪಿಸಿದನು.

೨. ಅವನು ಅಲ್ಲಿ ಆಶ್ರಮವನ್ನು ರಚಿಸಿಕೊಂಡು ದಾರುಣ ತಪವನ್ನಾಚರಿಸಿದನು. ಅದರ ಪ್ರಭಾವದಿಂದ ಮಹೇಶ್ವರನು ಆ ಲಿಂಗದಲ್ಲಿ ನೆಲೆಸಿದನು.

೩. ಮಹಾತ್ಮನಾದ ಆ ರಾಜನು ಆ ಲಿಂಗದ ಹತ್ತಿರ ನಿರ್ಮಲ ನೀರಿನಿಂದ ತುಂಬಿರುವುದೂ, ಸಕಲ ತೀರ್ಥಗಳಿಗೆ ಸಮಾನವೂ ಆದ ಒಂದು ವಾಪಿಯನ್ನು ನಿರ್ಮಿಸಿರುವನು.

೪. ಆ ವಾಪಿಯಲ್ಲಿ ಮಿಂದು ಧುಂಧುಮಾರೇಶ್ವರನನ್ನು ನೋಡಿದ ಮಾನವನು ಯಮಾಲಯದಲ್ಲಿ ದುರ್ಗಮವಾದ ನರಕಗಳನ್ನು ಕಾಣುವುದಿಲ್ಲ.

೫. ಋಷಿಗಳು ಹೇಳುತ್ತಾರೆ :—ಧುಂಧುಮಾರ ರಾಜನು ಯಾವ ವಂಶದಲ್ಲಿ ಜನಿಸಿದನು? ಮಹಾತ್ಮನಾದ ಅವನು ಯಾವಾಗ ತಪಸ್ಸನ್ನಾಚರಿಸಿದನು?

ಸೂತ ಉವಾಚ :—

ಸೂರ್ಯವಂಶಸಮುದ್ಭೂತೋ ಬೃಹದಶ್ವಸುತೋ ಬಲೀ ।
ಖ್ಯಾತಃ ಕುವಲಯಾಶ್ವೇತಿ ಧುಂಧುಮಾರಸ್ತಥೈವ ಸಃ ॥ ೬ ॥
ತೇನ ಧುಂಧುರ್ಮಹಾದೈತ್ಯೋ ನಿಹತೋ ಮರುಜಾಂಗಲೇ ।
ಧುಂಧುಮಾರಃ ಸ್ಮೃತಸ್ತೇನ ವಿಖ್ಯಾತೋ ಭುವನತ್ರಯೇ ॥ ೭ ॥
ಚಮತ್ಕಾರಪುರಂ ಕ್ಷೇತ್ರಂ ಸ ಗತ್ವಾ ಪಾವನಂ ಮಹತ್ ।
ತಪಸ್ತೇಪೇ ವಯೋಽಂತೇ ಚ ಧ್ಯಾಯಮಾನೋ ಮಹೇಶ್ವರಂ ॥ ೮ ॥
ಸಂಸ್ಥಾಪ್ಯ ಸುಮಹಲ್ಲಿಂಗಂ ಪ್ರಾಸಾದೇ ರತ್ನಮಂಡಿತೇ ।
ಬಲಿಪೂಜೋಪಹಾರಾದ್ಯೈಃ ಪುಷ್ಪಧೂಪಾನುಲೇಪನೈಃ ॥ ೯ ॥
ತತಸ್ತಸ್ಯ ಮಹಾದೇವಃ ಸ್ವಯಮೇವ ಮಹೇಶ್ವರಃ ।
ಪ್ರತ್ಯಕ್ಷೋಽಭೂದ್ವೃಷಾರೂಢೋ ಗೌರ್ಯಾ ಸಹ ತಥಾ ಗಣೈಃ ॥ ೧೦ ॥
ಉವಾಚ ವರದೋಽಸ್ಮೀತಿ ಪ್ರಾರ್ಥಯಸ್ವ ಯಥೇಪ್ಸಿತಂ ।
ಸರ್ವಂ ತೇಽಹಂ ಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೧ ॥

ಧುಂಧುಮಾರ ಉವಾಚ :—

ಯದಿ ದೇಯೋ ವರೋಽಸ್ಮಾಕಂ ತ್ವಯಾ ಸರ್ವಸುರೇಶ್ವರ ।
ಸನ್ನಿಧಾನಂ ಪ್ರಕರ್ತವ್ಯಂ ಲಿಂಗೇಽಸ್ಮಿನ್ ವೃಷಭಧ್ವಜ ॥ ೧೨ ॥

---

೬. ಸೂತನು ಹೇಳುತ್ತಾನೆ:—ಸೂರ್ಯವಂಶದಲ್ಲಿ ಜನಿಸಿದವನೂ, ಬೃಹದಶ್ವನ ಮಗನೂ, ಬಲಿಷ್ಠನೂ ಆದ ಅವನು ಕುವಲಯಾಶ್ವ, ಧುಂಧುಮಾರ ಎಂದು ವಿಖ್ಯಾತನಾದನು.

೭. ಅವನು ಮರುಜಾಂಗಲದಲ್ಲಿ ಧುಂಧುವೆಂಬ ಮಹಾದೈತ್ಯನನ್ನು ಕೊಂದುದರಿಂದ ಮೂರು ಲೋಕಗಳಲ್ಲಿ ಧುಂಧುಮಾರನೆಂದು ವಿಖ್ಯಾತನಾದನು.

೮-೯. ಅವನು ಮುಪ್ಪಿನಲ್ಲಿ ಪವಿತ್ರವಾದ ಚಮತ್ಕಾರಪುರ ಕ್ಷೇತ್ರಕ್ಕೆ ಹೋಗಿ ಶಿವನನ್ನು ಧ್ಯಾನಿಸುತ್ತ ರತ್ನಾಲಂಕೃತವಾದ ಪ್ರಾಸಾದದಲ್ಲಿ ದೊಡ್ಡ ಲಿಂಗವನ್ನು ಸ್ಥಾಪಿಸಿ ಬಲಿ, ಪೂಜೆ, ಕಾಣಿಕೆ, ಪುಷ್ಪ, ಧೂಪ, ಗಂಧ ಇವುಗಳಿಂದ ಆರಾಧಿಸುತ್ತ ತಪಸ್ಸನ್ನು ಮಾಡಿದನು.

೧೦. ಬಳಿಕ ಅವನಿಗೆ ಮಹಾದೇವನು ವೃಷಭವನ್ನೇರಿ ಗಣಗಳು ಮತ್ತು ಗೌರಿಯೊಡನೆ ಪ್ರತ್ಯಕ್ಷನಾದನು.

೧೧. ಅವನು ನಾನು ನಿನಗೆ ವರವನ್ನೀಯುವೆನು. ಇಷ್ಟವಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು ಎಂದನು.

೧೨. ಧುಂಧುಮಾರನು ಹೇಳುತ್ತಾನೆ:—ಸುರೇಶ್ವರ! ನೀನು ನಮಗೆ ವರವನ್ನು ಕೊಡುವುದಾದರೆ ಈ ಲಿಂಗದಲ್ಲಿ ಸನ್ನಿಹಿತನಾಗಿರು.

ಶ್ರೀ ಭಗವಾನುವಾಚ :—

ಚೈತ್ರೇ ಶುಕ್ಲಚತುರ್ದಶ್ಯಾಂ ಸಾನ್ನಿಧ್ಯಂ ನೃಪಸತ್ತಮ ।
ಅಹಂ ಸದಾ ಕರಿಷ್ಯಾಮಿ ಗೌರ್ಯಾ ಸಾರ್ಧಂ ನ ಸಂಶಯಃ ॥ ೧೩ ॥
ತತ್ರ ವಾಪ್ಯಾಂ ನರಃ ಸ್ನಾತ್ವಾ ಯೋ ಮಾಂ ಸಂಪೂಜಯಿಷ್ಯತಿ ।
ಲಿಂಗೇಽಸ್ಮಿನ್ ಸಂಸ್ಥಿತಂ ಭೂಪ ಮಮಲೋಕಂ ಸ ಯಾಸ್ಯತಿ ॥ ೧೪ ॥

ಸೂತ ಉವಾಚ :—

ಏವಮುಕ್ತ್ವಾ ಸ ಭಗವಾಂಸ್ತತಶ್ಚಾದರ್ಶನಂ ಗತಃ ।
ಸೋಽಪಿ ರಾಜಾ ಪ್ರಹೃಷ್ಟಾತ್ಮಾ ಸ್ಥಿತಸ್ತತ್ರೈವ ಮುಕ್ತಿಭಾಕ್ ॥ ೧೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧುಂಧುಮಾರೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟತ್ರಿಂಶೋಽಧ್ಯಾಯಃ

---

೧೩. ಶ್ರೀ ಭಗವಂತನು ಹೇಳುತ್ತಾನೆ:—ನರೇಂದ್ರ! ನಾನು ಚೈತ್ರ ಶುಕ್ಲ ಚತುರ್ದಶೀ ದಿನ ಗೌರಿಯೊಡನೆ ಈ ಲಿಂಗದಲ್ಲಿ ಸನ್ನಿಹಿತನಾಗಿರುವೆನು.

೧೪. ಈ ಲಿಂಗದಲ್ಲಿರುವ ನನ್ನನ್ನು ಆ ವಾಪಿಯಲ್ಲಿ ಮಿಂದು ಪೂಜಿಸುವವನು ನನ್ನ ಲೋಕಕ್ಕೆ ತೆರಳುವನು.

೧೫. ಸೂತನು ಹೇಳುತ್ತಾನೆ:—ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಆ ರಾಜನೂ ಸಂತೋಷಗೊಂಡು ಅಲ್ಲಿಯೇ ವಾಸಿಸುತ್ತ ಮುಕ್ತಿಯನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧುಂಧುಮಾರೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಯಯಾತೀಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಸ್ಯೈವೋತ್ತರದಿಗ್ಭಾಗೇ ಧುಂಧುಮಾರೇಶ್ವರಸ್ಯ ಚ ।
ಯಯಾತಿನಾ ನರೇಂದ್ರೇಣ ಸ್ಥಾಪಿತಂ ಲಿಂಗಮುತ್ತಮಂ ॥ ೧ ॥
ದೇವಯಾನ್ಯಾ ತಥಾನ್ಯಚ್ಚ ತಥಾ ಶರ್ಮಿಷ್ಠಯಾ ದ್ವಿಜಾಃ ।
ಭಾರ್ಯಯಾ ಭೂಪತೇಸ್ತಸ್ಯ ಸರ್ವಕಾಮಫಲಪ್ರದಂ ॥ ೨ ॥
ಸ ಯದಾ ಸರ್ವಭೋಗಾನಾಂ ತೃಪ್ತಿಂ ಪ್ರಾಪ್ತೋ ದ್ವಿಜೋತ್ತಮಾಃ ।
ತದಾ ಪುತ್ರಸ್ಯ ರಾಜ್ಯಂ ಸ್ವಂ ವಪುಶ್ಚೈವ ನ್ಯವೇದಯತ್ ॥ ೩ ॥
ಜರಾಮಾದಾಯ ತದ್ಗಾತ್ರಾದ್ಭಾರ್ಯಾಭ್ಯಾಂ ಸಹಿತಸ್ತದಾ ।
ಪಪ್ರಚ್ಛ ವಿನಯೋಪೇತೋ ಮಾರ್ಕಂಡಂ ಮುನಿಸತ್ತಮಂ ॥ ೪ ॥
ಭಗವನ್ ಸರ್ವತೀರ್ಥಾನಾಂ ಕ್ಷೇತ್ರಾಣಾಂ ಚ ವದಸ್ವ ಮೇ ।
ಯತ್ಪ್ರಧಾನಂ ಪವಿತ್ರಂ ಯತ್ತದಸ್ಮಾಕಂ ಪ್ರಕೀರ್ತಯ ॥ ೫ ॥

ಶ್ರೀ ಮಾರ್ಕಂಡೇಯ ಉವಾಚ :—

ಕ್ಷೇತ್ರಾಣಾಮಿಹ ಸರ್ವೇಷಾಂ ತೀರ್ಥೈಃ ಸರ್ವೈರಲಂಕೃತಂ ।
ಚಮತ್ಕಾರಪುರಂ ಕ್ಷೇತ್ರಂ ಸಾಂಪ್ರತಂ ಪ್ರತಿಭಾತಿ ನಃ ॥ ೬ ॥

---

### ಕನ್ನಡದ ಅನುವಾದ

#### ಯಯಾತೀಶ್ವರಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ :—ಆ ಧುಂಧುಮಾರೇಶ್ವರದ ಉತ್ತರ ದಿಕ್ಕಿನಲ್ಲಿ ಯಯಾತಿಯು ತನ್ನ ಪತ್ನಿಯರಾದ ದೇವಯಾನಿ ಶರ್ಮಿಷ್ಠೆಯರೊಡನೆ ಸ್ಥಾಪಿಸಿರುವ ಸಕಲೇಷ್ಟಾರ್ಥಗಳನ್ನೀಯುವ ಲಿಂಗವಿರುವುದು.

೩–೪. ಆ ಯಯಾತಿಯು ಸರ್ವ ಭೋಗಗಳಿಂದ ತೃಪ್ತಿಗೊಂಡು ಮಗನಿಗೆ ತನ್ನ ರಾಜ್ಯ ಮತ್ತು ಶರೀರವನ್ನು ಒಪ್ಪಿಸಿ ಅವನ ಶರೀರದಿಂದ ಮುಪ್ಪನ್ನು ತೆಗೆದುಕೊಂಡು ಪತ್ನಿಯರೊಡನೆ ವಿನಯದಿಂದ ಮಾರ್ಕಂಡ ಮುನಿವರ್ಯನನ್ನು ಹೀಗೆ ಪ್ರಶ್ನಿಸಿದನು.

೫. ಪೂಜ್ಯನೆ! ಸಮಸ್ತ ತೀರ್ಥಕ್ಷೇತ್ರಗಳಲ್ಲಿ ಯಾವುದು ಮುಖ್ಯವಾದುದು? ಅವನ್ನು ನನಗೆ ಹೇಳು.

೬. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:— ಸಮಸ್ತ ಕ್ಷೇತ್ರಗಳಲ್ಲಿ ಸಕಲ ತೀರ್ಥಗಳಿಂದ ಅಲಂಕಾರಗೊಂಡ ಚಮತ್ಕಾರಪುರಕ್ಷೇತ್ರವು ಮುಖ್ಯವಾದುದೆಂದು ಈಗ ನನಗೆ ತೋರುವುದು.

ಯತ್ರ ವಿಷ್ಣುಪದೀ ಗಂಗಾ ಜಂತೂನಾಂ ಪಾಪನಾಶಿನೀ ।
ಸ್ವಯಂ ಸ್ಥಿತಾ ನೃಪಶ್ರೇಷ್ಠ ತಥಾ ದೇವಾ ಹರಾದಯಃ ॥ ೭ ॥
ತಥಾಽನ್ಯಾನಿ ಚ ತೀರ್ಥಾನಿ ಯಾನಿ ಸಂತಿ ಧರಾತಲೇ ।
ತೇಷಾಂ ಯತ್ರ ಚ ಸಾನ್ನಿಧ್ಯಂ ಸರ್ವದಾ ನೃಪಸತ್ತಮ ॥ ೮ ॥
ಶಿಲಾ ಯತ್ರ ದ್ವಿಪಂಚಾಶದ್ಧಸ್ತಾನಾಂ ಪರಿಸಂಖ್ಯಯಾ ।
ಪಿತಾಮಹೇನ ನಿರ್ಮುಕ್ತಾ ಪ್ರಮೋದಾಯ ದ್ವಿಜನ್ಮನಾಂ ॥ ೯ ॥
ಯದನ್ಯತ್ರ ಶುಭಂ ಕರ್ಮ ವರ್ಷೇಣೈಕೇನ ಸಿಧ್ಯತಿ ।
ತತ್ತತ್ರ ದಿವಸೇನಾಽಪಿ ಸಿದ್ಧಿಂ ಯಾತಿ ಕ್ಷಿತೀಶ್ವರ ॥ ೧೦ ॥
ತಸ್ಮಾತ್ತತ್ರ ದ್ರುತಂ ಗತ್ವಾ ತಪಃ ಕುರು ಮಹೀಪತೇ ।
ಯೇನ ಪ್ರಾಪ್ಸ್ಯಸಿ ಚಿತ್ತಸ್ಥಾಂಲ್ಲೋಕಾನ್ ಭಾರ್ಯಾಸಮನ್ವಿತಃ ॥ ೧೧ ॥
ತಸ್ಯ ತದ್ವಚನಂ ಶ್ರುತ್ವಾ ಸ ರಾಜಾ ನಹುಷಾತ್ಮಜಃ ।
ಚಮತ್ಕಾರಪುರೇ ಕ್ಷೇತ್ರೇ ಭಾರ್ಯಾಭ್ಯಾಂ ಸಹಿತೋ ಯಯೌ ॥ ೧೨ ॥
ತತಃ ಸಂಸ್ಥಾಪ್ಯ ತಲ್ಲಿಂಗಂ ದೇವದೇವಸ್ಯ ಶೂಲಿನಃ ।
ಸಮ್ಯಗಾರಾಧಯಾಮಾಸ ಶ್ರದ್ಧಯಾ ಪರಯಾ ಯುತಃ ॥ ೧೩ ॥
ತತಸ್ತಸ್ಯ ಪ್ರಭಾವೇನ ಭಾರ್ಯಾಭ್ಯಾಂ ಸಹಿತೋ ನೃಪಃ ।
ವಿಮಾನವರಮಾರೂಢೋ ಜಗಾಮ ತ್ರಿದಿವಾಲಯಂ ॥ ೧೪ ॥

---

೭. ಅಲ್ಲಿ ಪ್ರಾಣಿಗಳ ಪಾಪಗಳನ್ನು ನಿವಾರಿಸುವ ವಿಷ್ಣುಪದೀ ಗಂಗೆಯೂ, ಶಂಕರಾದಿ ದೇವತೆಗಳೂ ಇರುವರು.

೮. ಅರಸ! ಭೂಮಿಯಲ್ಲಿರುವ ಇತರ ತೀರ್ಥಗಳೂ ಅಲ್ಲಿ ಯಾವಾಗಲೂ ಸನ್ನಿಹಿತವಾಗಿರುವುವು.

೯. ಅಲ್ಲಿ ಪಿತಾಮಹನು ಬ್ರಾಹ್ಮಣರ ಸಂತೋಷಕ್ಕಾಗಿ ಐವತ್ತೆರಡುಮೊಳ ಪರಿಮಾಣದ ಶಿಲೆಯನ್ನು ಸ್ಥಾಪಿಸಿರುವನು.

೧೦. ಇತರ ಸ್ಥಳದಲ್ಲಿ ಒಂದು ವರ್ಷದಲ್ಲಿ ಸಿದ್ಧಿಸುವ ಶುಭ ಕರ್ಮವು ಅಲ್ಲಿ ಒಂದು ದಿನದಲ್ಲಿ ಸಿದ್ಧಿಸುವುದು.

೧೧. ನರೇಂದ್ರ! ಆದ್ದರಿಂದ ನೀನು ಪತ್ನಿಯೊಡನೆ ಅಲ್ಲಿಗೆ ಹೋಗಿ ತಪಸ್ಸನ್ನು ಮಾಡು. ಅದರಿಂದ ಇಷ್ಟವಾದ ಲೋಕವನ್ನು ಪಡೆಯುವೆ.

೧೨. ನಹುಷನ ಮಗನಾದ ಆ ಯಯಾತಿಯು ಅವನ ಆ ಮಾತನ್ನು ಕೇಳಿ ಚಮತ್ಕಾರ ಪುರಕ್ಷೇತ್ರಕ್ಕೆ ಪತ್ನಿಯರೊಡನೆ ಹೋದನು.

೧೩. ಬಳಿಕ ಮಹೇಶ್ವರನ ಲಿಂಗವನ್ನು ಸ್ಥಾಪಿಸಿ ಅತಿಶಯ ಶ್ರದ್ಧೆಯಿಂದ ಚೆನ್ನಾಗಿ ಆರಾಧಿಸಿದನು.

೧೪–೧೫. ಆ ಲಿಂಗದ ಪ್ರಭಾವದಿಂದ ಪತ್ನಿಯರೊಡನೆ ಉತ್ತಮ ವಿಮಾನ ವನ್ನೇರಿ ಕಿನ್ನರರಿಂದ ಗಾನಮಾಡಲ್ಪಡುತ್ತ, ಚಾರಣರಿಂದ ಸ್ತುತಿಸಲ್ಪಡುತ್ತ,

ತೈಸ್ತೈರ್ಗೀಯಮಾನಶ್ಚ ಸ್ತೂಯಮಾನಶ್ಚ ಚಾರಣೈಃ ।
ಸ್ಪರ್ಧಮಾನಃ ಸಮಂ ದೇವೈರ್ದ್ವಾದಶಾರ್ಕಸಮಪ್ರಭಃ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಯಾತೀಶ್ವರಮಾಹಾತ್ಮ್ಯವರ್ಣನಂ"
ನಾಮೈಕೋನಚತ್ವಾರಿಂಶೋಽಧ್ಯಾಯಃ

---

ದೇವತೆಗಳೊಡನೆ ಸ್ಪರ್ಧಿಸುತ್ತ ದ್ವಾದಶಾದಿತ್ಯರಂತೆ ಕಾಂತಿಯುಳ್ಳವನಾಗಿ ದೇವಲೋಕಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಯಾತೀಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತ್ವಾರಿಂಶೋಽಧ್ಯಾಯಃ

### ಚಿತ್ರಶಿಲಾಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಯದೇಷಾ ಭವತಾ ಪ್ರೋಕ್ತಾ ಬ್ರಾಹ್ಮೀ ತತ್ರ ಮಹಾಶಿಲಾ ।
ಮೋಕ್ಷದಾ ಸರ್ವಜಂತೂನಾಂ ತಥಾ ಪಾತಕನಾಶಿನೀ ॥ ೧ ॥
ಸಾ ಕಥಂ ಸ್ಥಾಪಿತಾ ತತ್ರ ಕಿಂ ಪ್ರಭಾವಾ ಚ ಸೂತಜ ।
ಏತನ್ನೋ ಬ್ರೂಹಿ ನಿಃಶೇಷಂ ನ ಹಿ ತೃಪ್ಯಾಮಹೇ ವಯಂ ॥ ೨ ॥

ಸೂತ ಉವಾಚ :—

ಬ್ರಹ್ಮಲೋಕನಿವಿಷ್ಟಸ್ಯ ಬ್ರಹ್ಮಣೋಽವ್ಯಕ್ತಜನ್ಮನಃ ।
ಪುರಾಽಭೂನ್ಮಹತೀ ಚಿಂತಾ ತೀರ್ಥಯಾತ್ರಾಸಮುದ್ಭವಾ ॥ ೩ ॥
ಸರ್ವೇಷಾಮೇವ ದೇವಾನಾಂ ಸಂತಿ ತೀರ್ಥಾನಿ ಭೂತಲೇ ।
ಮುಕ್ತ್ವಾ ಮಾಂ ತನ್ಮಯಾ ಕಾರ್ಯಂ ತೀರ್ಥಮೇಕಂ ಧರಾತಲೇ ॥ ೪ ॥
ಯತ್ರ ತ್ರಿಕಾಲಮಾಸಾದ್ಯ ಕರ್ಮಸಂಧ್ಯಾಸಮುದ್ಭವಂ ।
ಮರ್ತ್ಯಲೋಕಂ ಸಮಾಸಾದ್ಯ ಕರೋಮಿ ತದನಂತರಂ ॥ ೫ ॥

---

## ಕನ್ನಡದ ಅನುವಾದ

### ಚಿತ್ರಶಿಲಾಮಾಹಾತ್ಮ್ಯವರ್ಣನ

೧-೨. ಋಷಿಗಳು ಹೇಳುತ್ತಾರೆ:— ಸೂತ! ನೀನು ಸಕಲ ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವುದೂ, ಪಾಪವನ್ನು ನಿವಾರಿಸುವುದೂ ಆದ ಬ್ರಾಹ್ಮೀ ಶಿಲೆಯನ್ನು ಹೇಳಿದೆಯಷ್ಟೆ. ಅದನ್ನು ಬ್ರಹ್ಮನು ಹೇಗೆ ಪ್ರತಿಷ್ಠೆಮಾಡಿದನು? ಅದು ಎಂತಹ ಪ್ರಭಾವವುಳ್ಳದು? ಇದನ್ನೆಲ್ಲ ನಮಗೆ ಹೇಳು. ನಾವು ತೃಪ್ತರಾಗಲಿಲ್ಲ.

೩. ಸೂತನು ಹೇಳುತ್ತಾನೆ :— ಬ್ರಹ್ಮಲೋಕದಲ್ಲಿರುವ ಜನನ ರಹಿತನಾದ ಬ್ರಹ್ಮನಿಗೆ ಹಿಂದೆ ತೀರ್ಥಯಾತ್ರೆ ಮಾಡಬೇಕೆಂದು ಅಪೇಕ್ಷೆಯುಂಟಾಯಿತು.

೪. ಭೂಮಿಯಲ್ಲಿ ನನ್ನನ್ನು ಬಿಟ್ಟು ಉಳಿದ ಸಕಲ ದೇವತೆಗಳ ತೀರ್ಥಗಳಿರುವುವು. ಆದ್ದರಿಂದ ನಾನೊಂದು ತೀರ್ಥವನ್ನು ರಚಿಸಬೇಕು.

೫. ಅನಂತರ ನಾನು ಭೂಲೋಕಕ್ಕೆ ಹೋಗಿ ತ್ರಿಕಾಲಗಳಲ್ಲಿ ಸಂಧ್ಯಾವಂದನೆಯನ್ನು ಮಾಡುವೆನು.

ತಥಾಽನ್ಯದಪಿ ಯತ್ಕಿಂಚಿತ್ಕರ್ಮ ಧರ್ಮ್ಯಂ ಹಿತಾವಹಂ ।
ತತ್ಕರೋಮಿ ಯಥಾಽನ್ಯೇಽಪಿ ಚಕ್ರುರ್ದೇವಾಃ ಶಿವಾದಯಃ ॥ ೬ ॥
ನ ಸ್ವರ್ಗೇಽಸ್ತಿ ಹಿ ಕೃತ್ಯಾನಾಮಧಿಕಾರೋಽತ್ರ ಕಶ್ಚನ ।
ಶುಭಾನಾಂ ಕರ್ಮಣಾಮೇವ ಕೇವಲಂ ಭುಜ್ಯತೇ ಫಲಂ ॥ ೭ ॥
ತಸ್ಮಾದ್ಯತ್ರ ಧರಾಪೃಷ್ಠೇ ಶಿಲೇಯಂ ನಿಪತಿಷ್ಯತಿ ।
ತ್ರಿಸಂಧ್ಯಂ ತತ್ರ ಗಂತವ್ಯಮನುಷ್ಠಾನಾರ್ಥಮೇವ ಹಿ ॥ ೮ ॥
ಏವಮುಕ್ತ್ವಾ ಸುವಿಸ್ತೀರ್ಣಾಂ ಶಿಲಾಂ ತಾಮಾಸನೋದ್ಭವಾಂ ।
ಪ್ರಚಿಕ್ಷೇಪ ಧರಾಪೃಷ್ಠಂ ಸಮುದ್ದಿಶ್ಯ ಪಿತಾಮಹಃ ॥ ೯ ॥
ಅಥ ಸಾ ಪತಿತಾ ಭೂಮೌ ಸರ್ವರತ್ನಮಯೀ ಶಿಲಾ ।
ಚಮತ್ಕಾರಪುರೇ ಕ್ಷೇತ್ರೇ ಸರ್ವಕ್ಷೇತ್ರಮಹೋದಯೇ ॥ ೧೦ ॥
ತತ ಆಗತ್ಯ ಲೋಕೇಶಃ ಸ್ವಯಮೇವ ಧರಾತಲಂ ।
ತತ್ಕ್ಷೇತ್ರಂ ವೀಕ್ಷಯಾಮಾಸ ವ್ಯಾಪ್ತಂ ತೀರ್ಥೈಃ ಸಮಂತತಃ ॥ ೧೧ ॥
ತತಃ ಪುಣ್ಯತಮೇ ದೇಶೇ ದೃಷ್ಟ್ವಾ ತಾಂ ಸಮುಪಸ್ಥಿತಾಂ ।
ಶಿಲಾಮಾನಂದಮಾಪನ್ನಃ ಪ್ರೋವಾಚ ತದನಂತರಂ ॥ ೧೨ ॥
ಅಹೋ ಧನ್ಯತಮೋ ಮತ್ತೋ ನಾಽನ್ಯೋಽಸ್ತಿ ಭುವನತ್ರಯೇ ।
ಸರ್ವತೀರ್ಥಮಯೇ ಕ್ಷೇತ್ರೇ ಯತೋ ಜಾತಾಽತ್ರ ಸಂಸ್ಥಿತಿಃ ॥ ೧೩ ॥

---

೬. ಇತರ ಶಿವಾದಿಗಳು ಮಾಡುವಂತೆ ನಾನೂ ಧರ್ಮದಿಂದ ಕೂಡಿರುವುದೂ ಹಿತಕರವೂ ಆದ ಇತರ ಕಾರ್ಯಗಳನ್ನು ಮಾಡುವೆನು.

೭. ಈ ಸ್ವರ್ಗದಲ್ಲಿ ಕರ್ಮಾಧಿಕಾರವಿಲ್ಲ. ಇಲ್ಲಿ ಶುಭಕರ್ಮಗಳ ಫಲವನ್ನು ಮಾತ್ರ ಅನುಭವಿಸುವರು.

೮. ಆದ್ದರಿಂದ ಭೂಮಿಯಲ್ಲಿ ಯಾವ ಸ್ಥಳದಲ್ಲಿ ಈ ಶಿಲೆಯು ಬೀಳುವುದೋ, ಅಲ್ಲಿಗೆ ತ್ರಿಕಾಲಗಳಲ್ಲಿ ಕರ್ಮಾನುಷ್ಠಾನಕ್ಕಾಗಿ ಹೋಗುವೆನು.

೯. ಬ್ರಹ್ಮನು ಹೀಗೆ ಹೇಳಿ ವಿಸ್ತೀರ್ಣವಾದ ಆಸನ ಶಿಲೆಯನ್ನು ಭೂಮಿಗೆ ಎಸೆದನು.

೧೦. ಬಳಿಕ ರತ್ನಮಯವಾದ ಆ ಶಿಲೆಯು ಸಕಲಕ್ಷೇತ್ರಗಳಿಂದ ಕೂಡಿರುವ ಚಮತ್ಕಾರಪುರಕ್ಷೇತ್ರದಲ್ಲಿ ಬಿದ್ದಿತು.

೧೧. ಬಳಿಕ ಬ್ರಹ್ಮನು ತಾನೇ ಭೂಮಿಗೆ ಬಂದು ಸುತ್ತಲೂ ತೀರ್ಥಗಳಿಂದ ವ್ಯಾಪ್ತವಾದ ಆ ಕ್ಷೇತ್ರವನ್ನು ನೋಡಿದನು.

೧೨. ಪವಿತ್ರವಾದ ಸ್ಥಳದಲ್ಲಿ ಆ ಶಿಲೆಯು ಬಿದ್ದಿರುವುದನ್ನು ನೋಡಿ ಸಂತೋಷಗೊಂಡು ಇಂತೆಂದನು.

೧೩. ಸಕಲ ತೀರ್ಥಗಳುಳ್ಳ ಈ ಕ್ಷೇತ್ರದಲ್ಲಿ ಶಿಲೆಯು ಬಿದ್ದಿರುವುದರಿಂದ ಮೂರು ಲೋಕಗಳಲ್ಲಿ ನನಗಿಂತ ಪುಣ್ಯವಂತನಿಲ್ಲ.

ಸಲಿಲೇನ ವಿನಾ ಯಸ್ಮಾನ್ನ ಕ್ರಿಯಾ ಸಂಪ್ರವರ್ತತೇ ।
ತಸ್ಮಾದತ್ರ ಮಯಾ ಕಾರ್ಯಃ ಶುಚಿತೋಯೋ ಮಹಾಹ್ರದಃ ॥ ೧೪ ॥
ತತಃ ಸಂಚಿಂತಯಾಮಾಸ ಸ್ವಸುತಾಂ ಚ ಸರಸ್ವತೀಂ ।
ಜನಸಂಸ್ಪರ್ಶಭೀತ್ಯಾ ಚ ಪಾತಾಲತಲವಾಹಿನೀಂ ॥ ೧೫ ॥
ಅಥ ಭೂಮಿತಲಂ ಭಿತ್ವಾ ಪ್ರಾದುರ್ಭೂತಾ ಮಹಾನದೀ ।
ತಾಂ ಶಿಲಾಮಮಲೈಸ್ತೋಯೈಃ ಕ್ಷಾಲಯಂತೀ ಸಮಂತತಃ ॥ ೧೬ ॥
ಅಥ ಮೂರ್ತಿಮತೀ ಭೂತ್ವಾ ಪ್ರೋವಾಚ ಪ್ರಪಿತಾಮಹಂ ।
ಕಿಮರ್ಥಂ ಸಂಸ್ಮೃತಾ ದೇವ ಮಮಾದೇಶಃ ಪ್ರದೀಯತಾಂ ॥ ೧೭ ॥

ಬ್ರಹ್ಮೋವಾಚ:—

ತ್ವಯಾತ್ರೈವ ಸದಾ ಸ್ಥೇಯಂ ಶಿಲಾಯಾಂ ಮಮ ಸನ್ನಿಧೌ ।
ಸಂಧ್ಯಾತ್ರಯೇಽಪಿ ತ್ವತ್ತೋಯೈರ್ಯೇನ ಕೃತ್ಯಂ ಕರೋಮ್ಯಹಂ ॥ ೧೮ ॥
ತಥಾ ಯೇ ಮಾನವಾಃ ಸ್ನಾನಂ ಕರಿಷ್ಯಂತಿ ಜಲೇ ತವ ।
ತೇ ಯಾಸ್ಯಂತಿ ಪರಾಂ ಸಿದ್ಧಿಂ ದುರ್ಲಭಾಂ ದೇವಮಾನುಷೈಃ ॥ ೧೯ ॥

ಸರಸ್ವತ್ಯುವಾಚ:—

ಅಹಂ ಕನ್ಯಾ ಸುರಶ್ರೇಷ್ಠ ಪಾತಾಲತಲವಾಹಿನೀ ।
ಜನಸ್ಪರ್ಶಭಯಾದ್ಭೀತಾ ನಾಗಚ್ಛಾಮಿ ಮಹೀತಲೇ ॥ ೨೦ ॥

---

೧೪. ಕಾರ್ಯಗಳು ನೀರಿಲ್ಲದೆ ಆಗದಿರುವುದರಿಂದ ನಾನಿಲ್ಲಿ ಶುದ್ಧವಾದ ನೀರುಳ್ಳ ಸರೋವರವನ್ನು ನಿರ್ಮಿಸುವೆನು.

೧೫. ಬಳಿಕ ಜನರ ಸ್ಪರ್ಶದ ಭಯದಿಂದ ಪಾತಾಳದಲ್ಲಿ ಹರಿಯುತ್ತಿರುವ ತನ್ನ ಮಗಳಾದ ಸರಸ್ವತಿಯನ್ನು ಚಿಂತಿಸಿದನು.

೧೬. ತರುವಾಯ ಆ ಮಹಾನದಿಯು ಭೂಮಿಯನ್ನು ಸೀಳಿ ಮೇಲಕ್ಕೆ ಬಂದು ಶುದ್ಧ ಜಲದಿಂದ ಆ ಶಿಲೆಯನ್ನು ತೊಳೆಯಿತು.

೧೭. ಅವಳು ಶರೀರವನ್ನು ಧರಿಸಿ ಬ್ರಹ್ಮನನ್ನು ಕುರಿತು ಸ್ವಾಮಿ! ನೀನು ನನ್ನನ್ನು ಏಕೆ ಸ್ಮರಿಸಿರುವೆ? ಅಪ್ಪಣೆಯನ್ನುಕೊಡು. ಎಂದಳು.

೧೮. ಬ್ರಹ್ಮನು ಹೇಳುತ್ತಾನೆ:—ನೀನು ಇಲ್ಲಿ ಈ ಶಿಲೆಯಲ್ಲಿಯೇ ನನ್ನ ಹತ್ತಿರ ಯಾವಾಗಲೂ ಇರಬೇಕು. ನಾನು ಮೂರು ಸಂಜೆಗಳಲ್ಲಿಯೂ ನಿನ್ನ ನೀರಿನಿಂದಲೇ ಕಾರ್ಯವನ್ನೆಸಗುವೆನು.

೧೯. ಹಾಗೆಯೇ ನಿನ್ನ ನೀರಿನಲ್ಲಿ ಸ್ನಾನಮಾಡುವ ಮಾನವರು ದೇವ ಮಾನುಷರಿಗೆ ದುರ್ಲಭವಾದ ಸಿದ್ಧಿಯನ್ನು ಪಡೆಯುವರು.

೨೦. ಸರಸ್ವತಿಯು ಹೇಳುತ್ತಾಳೆ:—ನಿನ್ನ ಕನ್ಯೆಯಾದ ನಾನು ಪಾತಾಳದಲ್ಲಿ ಹರಿಯುತ್ತ ಜನರ ಸ್ಪರ್ಶದ ಭಯದಿಂದ ಭೂಮಿಗೆ ಬರುವುದಿಲ್ಲ.

ತವಾದೇಶೋಽನ್ಯಥಾ ನೈವ ಮಯಾ ಕಾರ್ಯಃ ಕಥಂಚನ ।
ಏವಂ ಮತ್ವಾ ಸುರಶ್ರೇಷ್ಠ ಯದ್ಯುಕ್ತಂ ತತ್ಸಮಾಚರ ॥ ೨೧ ॥

ಬ್ರಹ್ಮೋವಾಚ :—

ತವಾರ್ಥೇ ಕಲ್ಪಯಿಷ್ಯಾಮಿ ಸ್ಥಾನೇಽತ್ರೈವ ಮಹಾಹ್ರದಂ ।
ಅಗಮ್ಯಂ ಸರ್ವಮರ್ತ್ಯಾನಾಂ ತತ್ರ ತ್ವಂ ಸ್ಥಾತುಮರ್ಹಸಿ ॥ ೨೨ ॥
ಏವಮುಕ್ತ್ವಾ ಸ ದೇವೇಶಶ್ಚಖಾನ ಚ ಮಹಾಹ್ರದಂ ।
ತತಃ ಸರಸ್ವತೀ ತತ್ರ ಸ್ವಸ್ಥಾನಮಕರೋದಥ ॥ ೨೩ ॥
ತತೋ ದೃಷ್ಟಿವಿಷಾನ್ ಸರ್ಪಾನಾದಿದೇಶ ಪಿತಾಮಹಃ ।
ಯುಷ್ಮಾಭಿಃ ಸರ್ವದಾ ಸ್ಥೇಯಂ ಹ್ರದೇಽಸ್ಮಿಂಛಾಸನಾನ್ಮಮ ॥ ೨೪ ॥
ಯಥಾ ಸರಸ್ವತೀಂ ಮರ್ತ್ಯಾ ನ ಸ್ಪೃಶಂತಿ ಕಥಂಚನ ।
ಭವದ್ಭಿಃ ಸರ್ವಥಾ ಕಾರ್ಯಂ ತಥಾ ಪನ್ನಗಸತ್ತಮಾಃ ॥ ೨೫ ॥

ಸೂತ ಉವಾಚ :—

ಏವಂ ಬ್ರಹ್ಮಾ ವ್ಯವಸ್ಥಾಪ್ಯ ತತ್ರ ಕ್ಷೇತ್ರೇ ಸರಸ್ವತೀಂ ।
ತಾಂ ಚ ಚಿತ್ರಶಿಲಾಂ ಮಧ್ಯೇ ಬ್ರಹ್ಮಲೋಕಂ ಜಗಾಮ ಹ ॥ ೨೬ ॥
ಅಥ ಮಂಕಣಕೋ ನಾಮ ಮಹರ್ಷಿಃ ಸಂಶಿತವ್ರತಃ ।
ಕ್ಷೇತ್ರೇ ತತ್ರ ಸಮಾಯಾತೋ ವಿಷವಿದ್ಯಾವಿಚಕ್ಷಣಃ ॥ ೨೭ ॥

---

೨೧. ನನ್ನ ಆದೇಶವನ್ನು ನಾನು ವ್ಯತ್ಯಾಸಗೊಳಿಸಬಾರದು. ಸುರೋತ್ತಮ! ಇದನ್ನರಿತು ಉಚಿತವಾದುದನ್ನು ಆಚರಿಸು.

೨೨. ಬ್ರಹ್ಮನು ಹೇಳುತ್ತಾನೆ:—ನಾನು ನಿನಗಾಗಿ ಈ ಸ್ಥಳದಲ್ಲಿಯೇ ಸಕಲ ಮಾನವರಿಗೆ ಅಗಮ್ಯವಾದ ಒಂದು ಸರೋವರವನ್ನು ನಿರ್ಮಿಸುವೆನು. ನೀನು ಅಲ್ಲಿರಲು ಅರ್ಹಳಾಗಿರುವೆ.

೨೩. ಬ್ರಹ್ಮನು ಹೀಗೆ ಹೇಳಿ ದೊಡ್ಡ ಸರೋವರವನ್ನು ಅಗೆದನು. ಸರಸ್ವತಿಯು ಅಲ್ಲಿ ವಾಸಮಾಡಿದಳು.

೨೪—೨೫. ಬಳಿಕ ಬ್ರಹ್ಮನು ದೃಷ್ಟಿಯಲ್ಲಿ ವಿಷವುಳ್ಳ ಸರ್ಪಗಳನ್ನು ಕುರಿತು ಹೀಗೆ ಅಪ್ಪಣೆಮಾಡಿದನು. ನೀವು ನನ್ನ ಅಪ್ಪಣೆಯಿಂದ ಈ ಹ್ರದದಲ್ಲಿ ಯಾವಾಗಲೂ ಇರಬೇಕು. ಸರಸ್ವತೀನದಿಯನ್ನು ಮಾನವರು ಮುಟ್ಟದಂತೆ ಯಾವಾಗಲೂ ಕಾದಿರಬೇಕು.

೨೬. ಸೂತನು ಹೇಳುತ್ತಾನೆ:—ಬ್ರಹ್ಮನು ಹೀಗೆ ಆ ಕ್ಷೇತ್ರದಲ್ಲಿ ಸರಸ್ವತಿಯನ್ನು ಸ್ಥಾಪಿಸಿ ಅದರ ನಡುವೆ ಆ ಚಿತ್ರಶಿಲೆಯನ್ನಿಟ್ಟು ಬ್ರಹ್ಮಲೋಕಕ್ಕೆ ತೆರಳಿದನು.

೨೭. ಬಳಿಕ ತೀಕ್ಷ್ಣವ್ರತಧಾರಿಯೂ, ವಿಷವಿದ್ಯೆಯಲ್ಲಿ ನಿಪುಣನೂ ಆದ ಮಂಕಣಕನೆಂಬ ಮಹರ್ಷಿಯು ಆ ಕ್ಷೇತ್ರಕ್ಕೆ ಬಂದನು.

ಸ ಕ್ರಮಾದ್ಭ್ರಮಮಾಣಸ್ತು ತಸ್ಮಿನ್ ಸರ್ಪಾಽಭಿರಕ್ಷಿತೇ ।
ತಂ ಮುನಿಂ ವೇಷ್ಟಯಾಮಾಸುರ್ಬಬಂಧುಶ್ಚೈವ ಪಾಶಕೈಃ ॥ ೨೮ ॥
ಸೋಽಪಿ ವಿದ್ಯಾಬಲಾತ್ಸರ್ಪಾನ್ನಿರ್ವಿಷಾಂಸ್ತಾಂಶ್ಚಕಾರ ಹ ।
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಕೃತ್ವಾ ಚ ಪಿತೃತರ್ಪಣಂ ।
ನಿಷ್ಕ್ರಾಂತಃ ಸಲಿಲಾತ್ತಸ್ಮಾತ್ಕೃತಕೃತ್ಯೋ ಮುದಾನ್ವಿತಃ ॥ ೨೯ ॥
ತತಶ್ಚಕ್ರೇ ಮುನಿರ್ಯಾನತ್ಸನ್ಮ್ಯಕ್ಕುಶಪರಿಗ್ರಹಂ ।
ದರ್ಭಾಗ್ರೇಣಾಸ್ಯ ಹಸ್ತಾಗ್ರಂ ಪಾಟಿತಂ ತಾವದೇವ ಹಿ ॥ ೩೦ ॥
ಅಥ ತಸ್ಮಾತ್ಕ್ಷತಾಜ್ಜಾತಸ್ತಸ್ಯ ಶಾಕರಸೋ ಮಹಾನ್ ।
ತಂ ದೃಷ್ಟ್ವಾ ಸ ವಿಶೇಷೇಣ ಹರ್ಷಿತೋ ವಿಸ್ಮಯಾನ್ವಿತಃ ॥ ೩೧ ॥
ಸಿದ್ಧೋಽಹಮಿತಿ ವಿಜ್ಞಾಯ ನೃತ್ಯಂ ಚಕ್ರೇ ತತಃ ಪರಂ ।
ಬ್ರಾಹ್ಮೀಂ ಶಿಲಾಂ ಸಮಾರುಹ್ಯ ಆನಂದಾಶ್ರುಪರಿಪ್ಲುತಃ ॥ ೩೨ ॥
ಅಥೈವಂ ನೃತ್ಯಮಾನಸ್ಯ ಮುನೇಸ್ತಸ್ಯ ಮಹಾತ್ಮನಃ ।
ಲಾಸ್ಯಂ ಚಕ್ರೇ ತತಃ ಸರ್ವಂ ಜಗತ್ಸ್ಥಾವರಜಂಗಮಮ್ ॥ ೩೩ ॥
ಚಮತ್ಕಾರಪುರಂ ಕೃತ್ಸ್ನಂ ಭಗ್ನಂ ನಷ್ಟಾ ದ್ವಿಜೋತ್ತಮಾಃ ।
ಪ್ರಾಸಾದೈರ್ಧ್ವಂಸಿತೈಸ್ತತ್ರ ಹಾಹಾಕಾರೋ ಮಹಾನಭೂತ್ ॥ ೩೪ ॥

---

೨೮. ಅವನು ಸರ್ಪಗಳು ರಕ್ಷಿಸುತ್ತಿರುವ ಆ ಕ್ಷೇತ್ರದಲ್ಲಿ ಸಂಚರಿಸುತ್ತಿರಲು ಆ ಸರ್ಪಗಳು ಅವನನ್ನು ಸುತ್ತಿಕೊಂಡು ಕಟ್ಟಿದುವು.

೨೯. ಅವನು ತನ್ನ ವಿದ್ಯಾಬಲದಿಂದ ಸರ್ಪಗಳನ್ನು ವಿಷವಿಲ್ಲವವುಗಳನ್ನಾಗಿ ಮಾಡಿ ಆ ಸರೋವರದಲ್ಲಿ ಮಿಂದು ಶುದ್ಧನಾಗಿ ಪಿತೃತರ್ಪಣಮಾಡಿ ಧನ್ಯನಾಗಿ ಸಂತೋಷದಿಂದ ಅಲ್ಲಿಂದ ಹೊರಟನು.

೩೦. ಬಳಿಕ ಅವನು ದರ್ಭೆಯನ್ನು ತೆಗೆದುಕೊಳ್ಳುತ್ತಿರಲು ಆ ದರ್ಭೆಯ ಕೊನೆಯಿಂದ ಅವನ ಕೈಯಿಯ ಕೊನೆಯು ಸೀಳಿತು.

೩೧. ಅವನ ಆ ಗಾಯದಿಂದ ಅತಿಶಯವಾದ ಶಾಕರಸವು ಉಂಟಾಗಲು ಮುನಿಯು ಅದನ್ನು ನೋಡಿ ಸಂತೋಷ ಮತ್ತು ಆಶ್ಚರ್ಯಗಳುಳ್ಳವನಾದನು.

೩೨. ನಾನು ಸಿದ್ಧನಾದೆನೆಂದು ತಿಳಿದು ಬ್ರಾಹ್ಮೀಶಿಲೆಯನ್ನು ಹತ್ತಿ ಆನಂದ ಬಾಷ್ಪಗಳನ್ನು ಸುರಿಸುತ್ತ ಕುಣಿದನು.

೩೩. ಮಹಾತ್ಮನಾದ ಆ ಮುನಿಯು ಹೀಗೆ ಕುಣಿಯುತ್ತಿರಲು ಸಕಲ ಸ್ಥಾವರ ಜಂಗಮ ಪ್ರಪಂಚವು ಕುಣಿಯಿತು.

೩೪. ಚಮತ್ಕಾರಪುರವು ಸಂಪೂರ್ಣವಾಗಿ ಹಾಳಾಯಿತು. ಬ್ರಾಹ್ಮಣೋತ್ತಮರು ನಾಶವಾದರು. ಮಹಡಿಮನೆಗಳು ಧ್ವಂಸವಾಗಲು ಅತ್ಯಂತ ಹಾಹಾಕಾರವುಂಟಾಯಿತು.

ತತೋ ದೇವಗಣಾಃ ಸರ್ವೇ ತದ್ದೃಷ್ಟ್ವಾ ತಸ್ಯ ಚೇಷ್ಟಿತಂ ।
ಲಾಸ್ಯಸ್ಯ ವಾರಣಾರ್ಥಾಯ ಪ್ರೋಚುರ್ವೃಷಭವಾಹನಂ ॥ ೩೫ ॥
ಅನೇನ ನೃತ್ಯಮಾನೇನ ಜಗತ್ಸ್ಥಾವರಜಂಗಮಂ ।
ನೃತ್ಯಂ ಕರೋತಿ ದೇವೇಶ ತಸ್ಮಾದ್ಗತ್ವಾ ನಿವಾರಯ ॥ ೩೬ ॥
ನಾಽನ್ಯಃ ಶಕ್ತಃ ಸುರಶ್ರೇಷ್ಠ ಮುನಿಮೇನಂ ಕಥಂಚನ ।
ನಿಷೇದಯಿತುಮೀಶಾನ ತತಃ ಕುರು ಜಗದ್ಧಿತಂ ॥ ೩೭ ॥
ಅಥ ತೇಷಾಂ ವಚಃ ಶ್ರುತ್ವಾ ಭಗವಾನ್ ವೃಷಭಧ್ವಜಃ ।
ಕೃತ್ವಾ ರೂಪಂ ದ್ವಿಜೇಂದ್ರಸ್ಯ ತತ್ಸಕಾಶಮುಪಾದ್ರವತ್ ॥ ೩೮ ॥
ಅಬ್ರವೀಚ್ಚ ಮುನೇ ಕಸ್ಮಾತ್ತ್ವಯೈತನ್ನೃತ್ಯತೇಽಧುನಾ ।
ತಸ್ಮಾತ್ಕಾರ್ಯಂ ವದಾಶು ತ್ವಂ ಪರಂ ಕೌತೂಹಲಂ ಹಿ ನಃ ॥ ೩೯ ॥
ಏವಮುಕ್ತಃ ಸ ವಿಪ್ರೇಂದ್ರಃ ಶಂಕರೇಣ ದ್ವಿಜೋತ್ತಮಾಃ ।
ಹಸ್ತಂ ಸಂದರ್ಶಯಾಮಾಸ ತಸ್ಯ ಶಾಕರಸಾನ್ವಿತಂ ॥ ೪೦ ॥
ಕಿಂ ನ ಪಶ್ಯಸಿ ಮೇ ಬ್ರಹ್ಮನ್ಕರಾಚ್ಛಾಕರಸೋ ಮಹಾನ್ ।
ಸಂಜಾತಃ ಕ್ಷತವಕ್ತ್ರೇಣ ತಸ್ಮಾತ್ಸಿದ್ಧಿರುಪಸ್ಥಿತಾ ॥ ೪೧ ॥

---

೩೫. ಬಳಿಕ ಸಮಸ್ತದೇವತೆಗಳು ಆ ಬ್ರಾಹ್ಮಣನ ಆ ಕೆಲಸವನ್ನು ಕಂಡು ನೃತ್ಯವನ್ನು ತಡೆಯುವುದಕ್ಕಾಗಿ ಶಿವನನ್ನು ಕುರಿತು ಇಂತೆಂದರು.

೩೬. ಶಂಕರ! ಇವನು ಕುಣಿಯುತ್ತಿರುವಾಗ ಸ್ಥಾವರಜಂಗಮಾತ್ಮಕ ಪ್ರಪಂಚವು ಕುಣಿಯುವುದು. ಆದ್ದರಿಂದ ನೀನು ಅಲ್ಲಿಗೆ ಹೋಗಿ ಅವನನ್ನು ತಡೆ.

೩೭. ಸುರೋತ್ತಮ! ಈ ಮುನಿಯನ್ನು ತಡೆಯಲು ಶಕ್ತರಾರೂ ಇಲ್ಲ. ಆದ್ದರಿಂದ ನೀನು ಜಗತ್ತಿಗೆ ಹಿತವನ್ನುಂಟುಮಾಡು.

೩೮. ಬಳಿಕ ಅವರ ಮಾತನ್ನು ಕೇಳಿ ಪೂಜ್ಯನಾದ ಶಂಕರನು ಬ್ರಾಹ್ಮಣನ ರೂಪವನ್ನು ತಾಳಿ ಆ ಮಂಕಣಕನ ಹತ್ತಿರಕ್ಕೆ ಹೋದನು.

೩೯. ಮುನಿಯೆ! ಈಗ ನೀನು ಏಕೆ ಕುಣಿಯುತ್ತಿರುವೆ? ಅದರ ಪ್ರಯೋಜನವಾವುದು? ನನಗೆ ಅತ್ಯಂತ ಕುತೂಹಲವುಂಟಾಗಿದೆ. ಅದನ್ನು ನನಗೆ ಹೇಳು ಎಂದನು.

೪೦. ದ್ವಿಜವರ್ಯರೆ! ಶಂಕರನು ಹೀಗೆನ್ನಲು ಆ ಮುನಿಯು ತನ್ನ ಶಾಕರಸದಿಂದ ಕೂಡಿದ ಕೈಯನ್ನು ತೋರಿಸಿದನು.

೪೧. ಬ್ರಾಹ್ಮಣ! ನೀನು ನನ್ನ ಕೈಯಲ್ಲಾದ ಗಾಯದಿಂದ ಬರುತ್ತಿರುವ ಶಾಕರಸವನ್ನು ಕಾಣುವುದಿಲ್ಲವೊ? ಅದರಿಂದ ನನಗೆ ಸಿದ್ಧಿಯುಂಟಾಗಿರುವುದು.

ಏತಸ್ಮಾತ್ಕಾರಣಾದ್ವಿಪ್ರ ನೃತ್ಯಮೇತತ್ಕರೋಮ್ಯಹಂ ।
ಆನಂದಂ ಪರಮಂ ಪ್ರಾಪ್ಯ ಸಿದ್ಧಿಜಂ ಸಿದ್ಧಸತ್ತಮ ॥ ೪೨ ॥
ಏವಂ ತು ವದತಸ್ತಸ್ಯ ಭಗವಾನ್ ವೃಷಭಧ್ವಜಃ ।
ಅಂಗುಷ್ಠಂ ತಾಡಯಾಮಾಸ ಸ್ವಾಂಗುಲ್ಯಗ್ರೇಣ ತತ್ಕ್ಷಣಾತ್ ॥ ೪೩ ॥
ನಿಶ್ಚಕ್ರಾಮ ತತೋ ಭಸ್ಮ ಹಿಮಸ್ಫಟಿಕಸನ್ನಿಭಂ ।
ಕ್ಷತಾಗ್ರಾತ್ಸಹಸಾ ತಸ್ಯ ಮಹಾವಿಸ್ಮಯಕಾರಕಂ ॥ ೪೪ ॥
ತತಃ ಪ್ರೋವಾಚ ತಂ ವಿಪ್ರಂ ಸ ದೇವೋ ದ್ವಿಜಸತ್ತಮಾಃ ।
ಯಸ್ಯಾಂಗುಷ್ಠಾಗ್ರತೋ ಮಹ್ಯಂ ನಿಷ್ಕ್ರಾಂತಂ ಭಸ್ಮಪಾಂಡುರಂ ॥ ೪೫ ॥
ತಥಾಪ್ಯಹಂ ಮುನಿಶ್ರೇಷ್ಠ ನ ನೃತ್ಯಂ ಕರ್ತುಮುತ್ಸಹೇ ।
ತ್ವಂ ಪುನರ್ನೃತ್ಯಸೇ ಕಸ್ಮಾದಪಿ ಶಾಕರಸೇಕ್ಷಣಾತ್ ॥ ೪೬ ॥
ವಿರಾಮಂ ಕುರು ತಸ್ಮಾತ್ತ್ವಂ ನೃತ್ಯಾದಸ್ಮಾದ್ವಿಗರ್ಹಿತಾತ್ ।
ತಪಃ ಕ್ಷರತಿ ವಿಪ್ರೇಂದ್ರ ನೃತ್ಯಗೀತಾದ್ದ್ವಿಜನ್ಮನಃ ॥ ೪೭ ॥
ಅಥಾಽಸೌ ತತ್ಸಮುದ್ವೀಕ್ಷ್ಯ ಕ್ಷತಾದ್ಭಸ್ಮವಿಸರ್ಜನಂ ।
ನೃತ್ಯಂ ವ್ರೀಡಾನ್ವಿತಸ್ತ್ಯಕ್ತ್ವಾ ತಸ್ಯ ಚಕ್ರೇ ನಮಸ್ಕೃತಿಂ ॥ ೪೮ ॥

---

೪೨. ಸಿದ್ಧವರ್ಯನೆ! ಆದ್ದರಿಂದ ನಾನು ಸಿದ್ಧಿಯಿಂದ ಅತಿಶಯಾನಂದವನ್ನು ಹೊಂದಿ ಕುಣಿಯುತ್ತಿರುವೆನು.

೪೩. ಅವನು ಹೀಗೆ ಹೇಳುತ್ತಿರಲು ಪೂಜ್ಯನಾದ ಶಂಕರನು ಕೂಡಲೆ ತನ್ನ ಬೆರಳಿನ ಕೊನೆಯಿಂದ ಅಂಗುಷ್ಠಬೆರಳನ್ನು ಹೊಡೆದನು.

೪೪. ತರುವಾಯ ಅವನ ಗಾಯದ ಕೊನೆಯಿಂದ ಹಿಮ ಮತ್ತು ಸ್ಫಟಿಕಗಳಂತಿರುವ ಅವನಿಗೆ ಆಶ್ಚರ್ಯವನ್ನುಂಟುಮಾಡುವ ಭಸ್ಮವು ಹೊರಟಿತು.

೪೫. ದ್ವಿಜವರ್ಯರೆ! ಆಗ ಶಂಕರನು ಆ ಬ್ರಾಹ್ಮಣನನ್ನು ಕುರಿತು ಹೀಗೆಂದನು. ನನ್ನ ಅಂಗುಷ್ಠದ ಕೊನೆಯಿಂದ ಬೆಳ್ಳಗಿರುವ ಭಸ್ಮವು ಹೊರಟಿರುವುದು.

೪೬. ಅದರೂ ನಾನು ನೃತ್ಯಮಾಡಲು ಇಚ್ಛಿಸುವುದಿಲ್ಲ. ನೀನು ಶಾಕರಸವನ್ನು ನೋಡಿ ಏಕೆ ಕುಣಿಯುತ್ತಿರುವೆ?

೪೭. ಆದ್ದರಿಂದ ನೀನು ಈ ನಿಂದ್ಯವಾದ ಕುಣಿತವನ್ನು ನಿಲ್ಲಿಸು. ದ್ವಿಜವರ್ಯನೆ! ನೃತ್ಯಗೀತಗಳಿಂದ ಬ್ರಾಹ್ಮಣನ ತಪಸ್ಸು ಹಾಳಾಗುವುದು.

೪೮. ಬಳಿಕ ಈ ಬ್ರಾಹ್ಮಣನು ಗಾಯದಿಂದ ಭಸ್ಮವು ಬರುತ್ತಿರುವುದನ್ನು ಕಂಡು ನಾಚಿಕೆಯಿಂದ ನೃತ್ಯವನ್ನು ತ್ಯಜಿಸಿ ಆ ಬ್ರಾಹಣರೂಪಿಯಾದ ಶಿವನಿಗೆ ವಂದಿಸಿದನು.

ಅಬ್ರವೀತ್ತ್ವಾಮಹಂ ಮನ್ಯೇ ನಾऽನ್ಯಂ ದೇವಾನ್ಮಹೇಶ್ವರಾತ್ ।
ತಸ್ಮಾತ್ಕುರು ಪ್ರಸಾದಂ ಮೇ ಯಥಾ ನ ಸ್ಯಾತ್ತಪಃಕ್ಷತಿಃ ॥ ೪೯ ॥
ಶ್ರೀ ಭಗವಾನುವಾಚ :—
ತಪಸ್ತೇ ಮತ್ಪ್ರಸಾದೇನ ವೃದ್ಧಿಂ ಯಾಸ್ಯತಿ ನಿತ್ಯಶಃ ।
ಸ್ಥಾನೇऽತ್ರ ಭವತಾ ಸಾರ್ಧಮಹಂ ಸ್ಥಾಸ್ಯಾಮಿ ಸರ್ವದಾ ॥ ೫೦ ॥
ಆನಂದಿತೇನ ಭವತಾ ಪ್ರಾರ್ಥಿತೋऽಹಂ ಯತೋ ಮುನೇ ।
ಆನಂದೇಶ್ವರಸಂಜ್ಞಸ್ತು ಖ್ಯಾತಿಂ ಯಾಸ್ಯಾಮಿ ಭೂತಲೇ ।
ಏತತ್ಪುರಂ ಚ ಮೇ ನಾಮ್ನಾ ಆನಂದಾಖ್ಯಂ ಭವಿಷ್ಯತಿ ॥ ೫೧ ॥
ಏವಮುಕ್ತ್ವಾ ಮಹಾದೇವೋ ಗತಶ್ಚಾऽದರ್ಶನಂ ತತಃ ।
ಸೋऽಪಿ ಮಂಕಣಕಸ್ತತ್ರ ತಪಸ್ತೇಪೇ ಮುನೀಶ್ವರಃ ॥ ೫೨ ॥
ಅಥ ತೇ ಪನ್ನಗಾಃ ಪ್ರೋಚುಃ ಪ್ರಣಿಪತ್ಯ ಮುನೀಶ್ವರಂ ।
ಭಗವನ್ನಿರ್ವಿಷಾಃ ಸರ್ವೇ ವಯಂ ಹಿ ಭವತಾ ಕೃತಾಃ ॥ ೫೩ ॥
ತಸ್ಮಾತ್ಕುರು ಪ್ರಸಾದಂ ನೋ ಯಥಾ ಸ್ಯಾದ್ದಾರುಣಂ ವಿಷಂ ।
ನೋ ಚೇದ್ವಯಂ ಗಮಿಷ್ಯಾಮಃ ಸರ್ವಲೋಕಪರಾಭವಂ ॥ ೫೪ ॥

---

೪೯. ನೀನು ಮಹೇಶ್ವರನ ಹೊರತು ಬೇರೆ ಯಾರೂ ಅಲ್ಲ. ಆದ್ದರಿಂದ ನನ್ನ ತಪಸ್ಸು ಹಾಳಾಗದಂತೆ ಅನುಗ್ರಹಮಾಡು ಎಂದನು.

೫೦. ಶ್ರೀ ಭಗವಂತನು ಹೇಳುತ್ತಾನೆ:—ನಿನ್ನ ತಪಸ್ಸು ನನ್ನ ಅನುಗ್ರಹದಿಂದ ನಿತ್ಯವೂ ವೃದ್ಧಿಯಾಗುವುದು. ಈ ಸ್ಥಳದಲ್ಲಿ ನಾನು ಯಾವಾಗಲೂ ನಿನ್ನೊಡನೆ ಇರುವೆನು.

೫೧. ಮುನಿಯೆ! ಆನಂದಗೊಂಡ ನೀನು ನನ್ನನ್ನು ಪ್ರಾರ್ಥಿಸಿರುವುದರಿಂದ ನಾನು ಭೂಮಿಯಲ್ಲಿ ಆನಂದೇಶ್ವರನೆಂದು ಪ್ರಖ್ಯಾತನಾಗುವೆನು. ಈ ಪಟ್ಟಣವೂ ನನ್ನ ಹೆಸರಿನಿಂದಲೇ ಆನಂದೇಶ್ವರವೆನ್ನಿಸಿಕೊಳ್ಳುವುದು.

೫೨. ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಆ ಮಂಕಣಕನೂ ಅಲ್ಲಿ ತಪವನ್ನಾಚರಿಸಿದನು.

೫೩. ಬಳಿಕ ಆ ಸರ್ಪಗಳೆಲ್ಲ ಆ ಮಂಕಣಕನನ್ನು ವಂದಿಸಿ ಹೀಗೆಂದುವು. ಪೂಜ್ಯನೆ! ನೀನು ನಮ್ಮನ್ನೆಲ್ಲ ನಿರ್ವಿಷರನ್ನಾಗಿ ಮಾಡಿರುವೆ.

೫೪. ಆದ್ದರಿಂದ ನಮ್ಮ ವಿಷವು ದಾರುಣವಾಗುವಂತೆ ಅನುಗ್ರಹ ಮಾಡು. ಹಾಗಿಲ್ಲದಿದ್ದರೆ ನಾವು ಸಮಸ್ತ ಜನರಿಂದ ಪರಾಭವವನ್ನು ಹೊಂದುವೆವು.

ಮಂಕಣಕ ಉವಾಚ :—

ಅನೃತಂ ನ ಮಯಾ ಪ್ರೋಕ್ತಂ ಸ್ವೈರೇಣಾಽಪಿ ಕದಾಚನ ।
ತಸ್ಮಾದೇವಂವಿಧಾಃ ಸರ್ವೇ ಜಲಸರ್ಪಾ ಭವಿಷ್ಯಥ ॥ ೫೫ ॥

ಸೂತ ಉವಾಚಃ —

ತತಃಪ್ರಭೃತಿ ಸಂಜಾತಾ ಜಲಸರ್ಪಾ ಮಹೀತಲೇ ।
ತದ್ವದ್ರೂಪಾ ದ್ವಿಜಿಹ್ವಾಶ್ಚ ಕೇವಲಂ ವಿಷವರ್ಜಿತಾಃ ॥ ೫೬ ॥
ಅಥ ತಸ್ಮಿನ್ ಹ್ರದೇ ಮರ್ತ್ಯಾಃ ಸ್ನಾತ್ವಾ ಸಾರಸ್ವತೇ ಶುಭೇ ।
ಸ್ಪೃಷ್ಟ್ವಾ ಚಿತ್ರಶಿಲಾಂ ತಾಂ ಚ ಪ್ರಯಾಂತಿ ಪರಮಾಂ ಗತಿಂ ॥ ೫೭ ॥
ಅಥ ಭೀತಃ ಸಹಸ್ರಾಕ್ಷೋ ಗತ್ವಾ ದೇವಂ ಪಿತಾಮಹಂ ।
ಯಮೇನ ಸಹಿತಸ್ತೂರ್ಣಂ ಪ್ರೋವಾಚೇದಂ ವಚಸ್ತದಾ ॥ ೫೮ ॥
ತ್ವತ್ಪ್ರಸಾದಾತ್ಸಮುದ್ವೀಕ್ಷ್ಯ ಗಚ್ಛಂತಿ ಮನುಜಾ ದಿವಂ ।
ಪಿತಾಮಹ ಮಹಾತೀರ್ಥಂ ಯತ್ತ್ವಯಾ ವಿಹಿತಂ ಕ್ಷಿತೌ ।
ಸಾರಸ್ವತಂ ನರಾಸ್ತತ್ರ ಸ್ನಾತ್ವಾ ಯಾಂತಿ ತ್ರಿವಿಷ್ಟಪಂ ॥ ೫೯ ॥
ಅಪಿ ಪಾಪಸಮಾಚಾರಾಃ ಸರ್ವಧರ್ಮಬಹಿಷ್ಕೃತಾಃ ।
ತತ್ರ ಸ್ನಾತ್ವಾ ಶಿಲಾಂ ಸ್ಪೃಷ್ಟ್ವಾ ತದೈವಾಯಾಂತಿ ಸದ್ಗತಿಂ ॥ ೬೦ ॥

---

೫೫. ಮಂಕಣಕನು ಹೇಳುತ್ತಾನೆ:—ನಾನು ಯಾವಾಗಲೂ ಸ್ವೇಚ್ಛೆಯಿಂದಲೂ ಸುಳ್ಳನ್ನು ನುಡಿಯಲಿಲ್ಲ. ಆದ್ದರಿಂದ ಹೀಗಿರುವ ನೀವೆಲ್ಲ ಜಲಸರ್ಪಗಳಾಗುವಿರಿ.

೫೬. ಸೂತನು ಹೇಳುತ್ತಾನೆ:—ಅದು ಮೊದಲ್ಗೊಂಡು ಭೂಮಿಯಲ್ಲಿ ಹಾಗೆ ಎರಡು ನಾಲಿಗೆಯುಳ್ಳವೂ, ವಿಷವಿಲ್ಲದುವೂ ಆದ ನೀರು ಹಾವುಗಳು ಉಂಟಾದುವು.

೫೭. ಬಳಿಕ ಮಾನವರು ಆ ಸಾರಸ್ವತ ಹ್ರದದಲ್ಲಿ ಮಿಂದು ಆ ಚಿತ್ರಶಿಲೆಯನ್ನು ಮುಟ್ಟಿ ಉತ್ತಮಗತಿಯನ್ನು ಪಡೆಯುತ್ತಿದ್ದರು.

೫೮. ತರುವಾಯ ಇಂದ್ರನು ಭಯಗೊಂಡು ಯಮನೊಡನೆ ಬ್ರಹ್ಮನೆಡೆಗೆ ಬೇಗನೆ ಹೋಗಿ ಹೀಗೆಂದನು.

೫೯. ಪಿತಾಮಹ! ಮಾನವರು ನೀನು ಭೂಮಿಯಲ್ಲಿ ರಚಿಸಿರುವ ತೀರ್ಥವನ್ನು ಸೇವಿಸಿ ದೇವಲೋಕಕ್ಕೆ ಹೋಗುವರು. ಸಾರಸ್ವತ ತೀರ್ಥದಲ್ಲಿ ಮಿಂದವರೂ ಸ್ವರ್ಗಕ್ಕೆ ತೆರಳುವರು.

೬೦. ಪಾಪಾಚಾರವುಳ್ಳವರೂ, ಸಕಲ ಧರ್ಮಬಾಹ್ಯರೂ ಅಲ್ಲಿ ಮಿಂದು ಬ್ರಾಹ್ಮೀ ಶಿಲೆಯನ್ನು ಮುಟ್ಟಿ ಆಗಲೇ ದೇವಲೋಕವನ್ನು ಸೇರುವರು.

ಯಮ ಉವಾಚ :—

ಅಪ್ರಮಾಣಂ ವಿಭೋ ಕರ್ಮ ಸಂಪ್ರಯಾತಂ ಮಮೋಚಿತಂ ।
ಶುಭಾಶುಭಪರಿಜ್ಞಾನಂ ಸರ್ವೇಷಾಮೇವ ದೇಹಿನಾಮ್ ॥ ೬೧ ॥
ತಸ್ಮಾತ್ತ್ಯಜ ತ್ವಂ ಮಾಂ ದೇವ ಯದ್ವಾ ತತ್ತೀರ್ಥಮುತ್ತಮಂ ।
ಯತ್ಪ್ರಭಾವಾಜ್ಜನೈರ್ಹೀನಾಃ ಸಂಜಾತಾ ನರಕಾ ಮಮ ॥ ೬೨ ॥
ತಸ್ಯ ತದ್ವಚನಂ ಶ್ರುತ್ವಾ ಯಮಸ್ಯ ಪ್ರಪಿತಾಮಹಃ ।
ಪ್ರಾಹ ಪಾರ್ಶ್ವಸ್ಥಿತಂ ಶಕ್ರಂ ತತ್ತೀರ್ಥಂ ನಯ ಸಂಕ್ಷಯಂ ॥ ೬೩ ॥
ತತಃ ಶಕ್ರೋ ಹ್ರದಂ ಗತ್ವಾ ಪೂರಯಾಮಾಸ ಪಾಂಸುಭಿಃ ।
ಹ್ರದಂ ಸಾರಸ್ವತಂ ತಂ ಚ ತಾಂ ಚ ಚಿತ್ರಶಿಲಾಂ ದ್ವಿಜಾಃ ॥ ೬೪ ॥
ಅದ್ಯಾಪಿ ಮನುಜಃ ಸಮ್ಯಕ್ತಸ್ಮಿನ್ ಸ್ಥಾನೇ ವ್ಯವಸ್ಥಿತಃ ।
ಯಃ ಕರೋತಿ ತಪಶ್ಚರ್ಯಾಂ ಸ ಶೀಘ್ರಂ ಸಿದ್ಧಿಮಾಪ್ನುಯಾತ್ ॥ ೬೫ ॥
ಸೋಽಪಿ ಮಂಕಣಕಸ್ತತ್ರ ಸಾರ್ಧಂ ದೇವೇನ ಶಂಭುನಾ ।
ತಿಷ್ಠತ್ಯದ್ಯಾಪಿ ವಿಪ್ರೇಂದ್ರ ಪೂರಿತಂ ಚೈವ ಪಾಂಸುಭಿಃ ॥ ೬೬ ॥
ಲಿಂಗಂ ಮಂಕಣಕನ್ಯಸ್ತಂ ತತ್ರಾಽಸ್ತಿ ಸುಮಹೋದಯಂ ।
ತತ್ಸಂಸ್ಪೃಶ್ಯ ಮಾನವಾಃ ಪಾಪೈರ್ಮುಚ್ಯಂತೇ ದ್ವಿಜಸತ್ತಮಾಃ ॥ ೬೭ ॥

---

೬೧. ಯಮನು ಹೇಳುತ್ತಾನೆ :—ಸ್ವಾಮಿ ! ಸಕಲ ಮಾನವರ ಶುಭಾಶುಭ ವನ್ನು ತಿಳಿಯುವ ನನ್ನ ಉಚಿತ ಕರ್ಮವು ಅಪ್ರಮಾಣವಾಗಿದೆ.

೬೨. ಆದ್ದರಿಂದ ನೀನು ನನ್ನನ್ನಾಗಲಿ, ಉತ್ತಮವಾದ ಆ ತೀರ್ಥವನ್ನಾಗಲಿ ತ್ಯಜಿಸು. ಆ ತೀರ್ಥದ ಪ್ರಭಾವದಿಂದ ನನ್ನ ನರಕವು ಜನರಿಂದ ಶೂನ್ಯವಾಗಿದೆ.

೬೩. ಬ್ರಹ್ಮನು ಯಮನ ಆ ಮಾತನ್ನು ಕೇಳಿ ಹತ್ತಿರದಲ್ಲಿರುವ ಇಂದ್ರನಿಗೆ ಆ ತೀರ್ಥವನ್ನು ನಾಶಗೊಳಿಸು ಎಂದನು.

೬೪. ಬಳಿಕ ಇಂದ್ರನು ಆ ಸಾರಸ್ವತ ಹ್ರದಕ್ಕೆ ಹೋಗಿ ಅದನ್ನೂ, ಆ ಚಿತ್ರಶಿಲೆಯನ್ನೂ ಧೂಳಿನಿಂದ ಮುಚ್ಚಿದನು.

೬೫. ಈಗಲೂ ಮಾನವನು ಆ ಸ್ಥಳದಲ್ಲಿದ್ದು ತಪವನ್ನಾಚರಿಸಿದರೆ ಶೀಘ್ರವಾಗಿ ಸಿದ್ಧಿಯನ್ನು ಹೊಂದುವನು.

೬೬—೬೭. ಆ ಮಂಕಣಕನೂ ಅಲ್ಲಿ ಶಿವನೊಡನೆ ಈಗಲೂ ಇರುವನು. ಮಂಕಣಕನು ಪ್ರತಿಷ್ಠೆಮಾಡಿದ ಧೂಳಿನಿಂದ ತುಂಬಿದ ಆ ಲಿಂಗವನ್ನು ಸ್ಪರ್ಶಮಾಡಿದ ಮಾನವರು ಪಾಪಮುಕ್ತರಾಗುವರು.

ಮಾಘಶುಕ್ಲಚತುರ್ದಶ್ಯಾಂ ಯಸ್ತಂ ಪೂಜಯತೇ ನರಃ ।
ಸ ಪಾಪೈರಪಿ ಸಂಯುಕ್ತಃ ಶಿವಲೋಕೇ ಮಹೀಯತೇ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಿತ್ರಶಿಲಾಮಾಹಾತ್ಮ್ಯವರ್ಣನಂ"
ನಾಮ ಚತ್ವಾರಿಂಶೋಽಧ್ಯಾಯಃ

---

೬೮. ಮಾಘಶುಕ್ಲಚತುರ್ದಶೀ ದಿನ ಆ ಲಿಂಗವನ್ನು ಪೂಜಿಸಿದ ಮಾನವನು ಪಾಪಿಯಾಗಿದ್ದರೂ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರಶಿಲಾಮಾಹಾತ್ಮ್ಯವರ್ಣನ"ವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕಚತ್ವಾರಿಂಶತ್ತಮೋಽಧ್ಯಾಯಃ

### ಜಲಶಾಯ್ಯುತ್ಪತ್ತಿವರ್ಣನಂ

ಸೂತ ಉವಾಚ :—

ತಸ್ಯೈವೋತ್ತರದಿಗ್ಭಾಗೇ ದೇವಸ್ಯ ಜಲಶಾಯಿನಃ ।
ಸ್ಥಾನಮಸ್ತಿ ಸುವಿಖ್ಯಾತಂ ಸರ್ವಪಾತಕನಾಶನಂ ॥ ೧ ॥
ಯಸ್ತತ್ಪೂಜಯತೇ ಭಕ್ತ್ಯಾ ಶಯನೇ ಬೋಧನೇ ಹರೇಃ ।
ಉಪವಾಸಪರೋ ಭೂತ್ವಾ ಸ ಗಚ್ಛೇದ್ವೈಷ್ಣವಂ ಪದಂ ॥ ೨ ॥
ಅಶೂನ್ಯಶಯನಾ ನಾಮ ದ್ವಿತೀಯಾ ದಯಿತಾ ತಿಥಿಃ ।
ಸದೈವ ದೇವದೇವಸ್ಯ ಕೃಷ್ಣಾ ಸುಪ್ತಸ್ಯ ಯಾ ಭವೇತ್ ॥ ೩ ॥
ತಸ್ಯಾಂ ಯಃ ಪೂಜಯೇತ್ತತ್ರ ತಂ ದೇವಂ ಜಲಶಾಯಿನಂ ।
ಶಾಸ್ತ್ರೋಕ್ತೇನ ವಿಧಾನೇನ ಸ ಗಚ್ಛತಿ ಹರೇಃ ಪದಂ ॥ ೪ ॥

ಋಷಯ ಊಚುಃ :—

ಜಲಶಾಯೀ ಕಥಂ ತತ್ರ ಸಂಪ್ರಾಪ್ತಃ ಸೂತನಂದನ ।
ಪೂಜ್ಯತೇ ವಿಧಿನಾ ಕೇನ ತತ್ಸರ್ವಂ ವಿಸ್ತರಾದ್ವದ ॥ ೫ ॥

---

### ಕನ್ನಡದ ಅನುವಾದ

### ಜಲಶಾಯ್ಯುತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಆ ಆನಂದೇಶ್ವರನ ಉತ್ತರ ದಿಕ್ಕಿನಲ್ಲಿ ಜಲಶಾಯಿಯ ಪ್ರಸಿದ್ಧವೂ, ಸಕಲ ಪಾಪಗಳನ್ನು ನಾಶಗೊಳಿಸುವುದೂ ಆದ ಸ್ಥಾನವಿದೆ.

೨. ಆ ಜಲಶಾಯಿಯನ್ನು ಹರಿಯ ಶಯನ ಮತ್ತು ಉತ್ಥಾನೈಕಾದಶೀ ದಿನಗಳಲ್ಲಿ ಉಪವಾಸಮಾಡಿ ಪೂಜಿಸಿದ ಮಾನವನು ವಿಷ್ಣುಲೋಕವನ್ನು ಸೇರುವನು.

೩. ಅಶೂನ್ಯಶಯನವೆಂಬ ಕೃಷ್ಣಪಕ್ಷದ ದ್ವಿತೀಯಾ ತಿಥಿಯು ಸುಪ್ತನಾದ ದೇವದೇವನಾದ ವಿಷ್ಣುವಿಗೆ ಪ್ರಿಯವಾದುದು.

೪. ಆ ತಿಥಿಯಲ್ಲಿ ಆ ಜಲಶಾಯಿಯನ್ನು ಶಾಸ್ತ್ರೋಕ್ತವಿಧಿಯಿಂದ ಪೂಜಿಸಿದವನು ವಿಷ್ಣುವಿನ ಸ್ಥಾನವನ್ನು ಹೊಂದುವನು.

೫. ಋಷಿಗಳು ಹೇಳುತ್ತಾರೆ:—ಸೂತ! ಜಲಶಾಯಿಯು ಅಲ್ಲಿಗೆ ಹೇಗೆ ಬಂದನು? ಅವನನ್ನು ಯಾವ ವಿಧಿಯಿಂದ ಪೂಜಿಸುತ್ತಾರೆ? ಅದನ್ನೆಲ್ಲ ನಮಗೆ ವಿಸ್ತಾರವಾಗಿ ಹೇಳು.

ಸೂತ ಉವಾಚ :—

ಪುರಾಽಽಸೀದ್ಬಾಷ್ಕಲಿರ್ನಾಮ ದಾನವೇಂದ್ರೋ ಮಹಾಬಲಃ ।
ಅಜೇಯಃ ಸರ್ವದೇವಾನಾಂ ಗಂಧರ್ವೋರಗರಕ್ಷಸಾಂ ॥ ೬ ॥
ಅಥಾಽಸೌ ಭೂತಲಂ ಸರ್ವಂ ವಶೀಕೃತ್ವಾ ಮಹಾಬಲಃ ।
ತತೋ ದೈತ್ಯಗಣೈಃ ಸಾರ್ಧಂ ಜಗಾಮ ತ್ರಿದಶಾಲಯಂ ॥ ೭ ॥
ತತ್ರಾಽಭವನ್ಮಹಾಯುದ್ಧಂ ದೇವಾಽಸುರವಿನಾಶಕಂ ।
ದೇವಾನಾಂ ದಾನವಾನಾಂ ಚ ಕ್ರುದ್ಧಾನಾಮಿತರೇತರಂ ॥ ೮ ॥
ವರ್ಷಾಣಾಮಯುತಂ ತಾವದಹನ್ಯಹನಿ ದಾರುಣಂ ।
ತತ್ರಾಽಸೃಕ್ಕರ್ದಮೋ ಜಾತಃ ಪರ್ವತಶ್ಚಾಽಸ್ಥಿಸಂಭವಃ ॥ ೯ ॥
ತತೋ ವರ್ಷಸಹಸ್ರಾಂತೇ ದಶಮೇ ಸಮುಪಸ್ಥಿತೇ ।
ಜಿತಸ್ತೇನ ಸಹಸ್ರಾಕ್ಷಃ ಸಸೈನ್ಯಃ ಸಪರಿಗ್ರಹಃ ॥ ೧೦ ॥
ತತಃ ಸ್ವರ್ಗಂ ಪರಿತ್ಯಜ್ಯ ಸರ್ವದೇವಗಣೈಃ ಸಹ ।
ಜಗಾಮ ಶರಣಂ ವಿಷ್ಣೋಃ ಶ್ವೇತದ್ವೀಪಂ ಪ್ರತಿಶ್ರಯಂ ॥ ೧೧ ॥
ಯತ್ರಾಸ್ತೇ ಭಗವಾನ್ ವಿಷ್ಣುರ್ಯೋಗನಿದ್ರಾವಶಂ ಗತಃ ।
ಶಯಾನಃ ಶೇಷಪರ್ಯಂಕೇ ಲಕ್ಷ್ಮ್ಯಾ ಸಂವಾಹಿತಾಂಘ್ರಿಯುಕ್ ॥ ೧೨ ॥
ತತೋ ವೇದೋದ್ಭವೈಃ ಸೂಕ್ತೈಃ ಸ್ತುತಿಂ ಚಕ್ರುಃ ಸಮಂತತಃ ।
ತಸ್ಯ ದೇವಸ್ಯ ಸದ್ಭಕ್ತಾಃ ಸರ್ವೇ ದೇವಾಃ ಸವಾಸವಾಃ ॥ ೧೩ ॥

---

೬-೭. ಸೂತನು ಹೇಳುತ್ತಾನೆ :—ಹಿಂದೆ ಸಕಲ ದೇವತೆಗಳಿಗೂ, ಗಂಧರ್ವ, ಉರಗ, ರಾಕ್ಷಸರಿಗೂ ಅಜೇಯನೂ, ಅತಿ ಬಲಿಷ್ಠನೂ ಆದ ಬಾಷ್ಕಲಿಯೆಂಬ ದಾನವೇಂದ್ರನಿದ್ದನು. ಅತಿ ಬಲಿಷ್ಠನಾದ ಇವನು ಸಮಗ್ರ ಭೂಮಿಯನ್ನು ವಶಮಾಡಿಕೊಂಡು ದೈತ್ಯರೊಡನೆ ದೇವಲೋಕಕ್ಕೆ ಹೋದನು.

೮-೯. ಅಲ್ಲಿ ಪರಸ್ಪರ ಕುಪಿತರಾದ ದೇವ ದಾನವರಿಗೆ ದೇವಾಸುರರನ್ನು ನಾಶಗೊಳಿಸುವ ಮಹಾಯುದ್ಧವು ಪ್ರತಿದಿನವೂ ಭಯಂಕರವಾಗಿ ನಡೆಯಿತು. ಆ ಯುದ್ಧದಲ್ಲಿ ರಕ್ತದ ಕೆಸರೂ, ಅಸ್ಥಿಯ ಪರ್ವತವೂ ಉಂಟಾಯಿತು.

೧೦. ಅನಂತರ ಹತ್ತುಸಾವಿರ ವರ್ಷಗಳ ಕೊನೆಯಲ್ಲಿ ಆ ದಾನವನು ಇಂದ್ರನನ್ನು ಪರಿವಾರದೊಡನೆ ಗೆದ್ದನು.

೧೧. ಇಂದ್ರನು ಸ್ವರ್ಗವನ್ನು ತ್ಯಜಿಸಿ ಸಮಸ್ತ ದೇವತೆಗಳೊಡನೆ ವಿಷ್ಣುವಿನ ವಾಸಸ್ಥಾನವಾದ ಶ್ವೇತದ್ವೀಪಕ್ಕೆ ಹೋದನು.

೧೨. ಅಲ್ಲಿ ಪೂಜ್ಯನಾದ ವಿಷ್ಣುವು ಯೋಗನಿದ್ರಾವಶನಾಗಿ ಲಕ್ಷ್ಮಿಯಿಂದ ಕಾಲುಗಳನ್ನು ಒತ್ತಿಸಿಕೊಳ್ಳುತ್ತ ಶೇಷಶಯನದಲ್ಲಿ ಮಲಗಿರುವನು.

೧೩. ಬಳಿಕ ವಿಷ್ಣುಭಕ್ತರಾದ ಇಂದ್ರಾದಿ ದೇವತೆಗಳು ವೇದಸೂಕ್ತಗಳಿಂದ ವಿಷ್ಣುವನ್ನು ಸ್ತೋತ್ರಮಾಡಿದರು.

ಅಥೋತ್ಥಾಯ ಜಗನ್ನಾಥಃ ಪ್ರೋವಾಚ ಬಲಸೂದನಂ ।
ಕಚ್ಚಿತ್ಕ್ಷೇಮಂ ಸಹಸ್ರಾಕ್ಷ ಸಾಂಪ್ರತಂ ಭುವನತ್ರಯೇ ।
ಯತ್ತ್ವಂ ದೇವಗಣೈಃ ಸಾರ್ಧಂ ಸ್ವಯಮೇವ ಇಹಾಗತಃ ॥ ೧೪ ॥

ಶಕ್ರ ಉವಾಚ :—

ಬಾಷ್ಕಲಿರ್ನಾಮ ದೈತ್ಯೇಂದ್ರೋ ಹರಲಬ್ಧವರೋ ಬಲೀ ।
ಅಜೇಯಃ ಸಂಗರೇ ದೇವೈಸ್ತೇನಾಽಹಂ ವಿಜಿತೋ ರಣೇ ॥ ೧೫ ॥
ಸಂಸ್ಥಿತಿಶ್ಚ ಕೃತಾ ಸ್ವರ್ಗೇ ಸಾಂಪ್ರತಂ ಮಧುಸೂದನ ।
ತೇನೈಷ ಶರಣಂ ಪ್ರಾಪ್ತೋ ದೇವೈಃ ಸಾರ್ಧಂ ಸುರೋತ್ತಮ ॥ ೧೬ ॥
ಹಿರಣ್ಯಾಕ್ಷಭಯಾದ್ದೇವಾ ಹಿರಣ್ಯಕಶಿಪೋಃ ಪುರಾ ।
ತ್ವಯಾ ತ್ರಾತಾ ವಯಂ ಸರ್ವೇ ತಥಾಽನ್ಯೇಷಾಂ ದುರಾತ್ಮನಾಂ ॥ ೧೭ ॥
ತಸ್ಮಾದಸ್ಮಾದಪಿ ತ್ರಾಹಿ ದಾನವಾದ್ಬಲವತ್ತರಾತ್ ।
ಬಾಷ್ಕಲೇರ್ನಾಽಸ್ತಿ ದೇವೇಶ ತ್ವಾಂ ಮುಕ್ತ್ವಾಽನ್ಯಾ ಪರಾ ಗತಿಃ ॥ ೧೮ ॥

ಶ್ರೀ ಭಗವಾನುವಾಚ :—

ಅಹಂ ತಂ ನಿಗ್ರಹಿಷ್ಯಾಮಿ ಸಂಪ್ರಾಪ್ತೇ ಸಮಯೇ ಸ್ವಯಂ ।
ತಸ್ಮಾತ್ತ್ವಂ ಸಮಯಂ ಯಾವತ್ಕುರು ಶಕ್ರ ತಪೋ ಮಹತ್ ॥ ೧೯ ॥

---

೧೪. ತರುವಾಯ ಜಗದೊಡೆಯನಾದ ವಿಷ್ಣುವು ಇಂದ್ರನನ್ನು ಹೀಗೆ ಪ್ರಶ್ನಿಸಿದನು. ದೇವೇಂದ್ರ! ಈಗ ನೀನು ದೇವತೆಗಳೊಡನೆ ಇಲ್ಲಿಗೆ ಬಂದಿರುವೆಯೇಕೆ? ಮೂರು ಲೋಕಗಳಲ್ಲಿ ಕ್ಷೇಮವುಂಟಾಗಿರುವುದೊ?

೧೫. ಇಂದ್ರನು ಹೇಳುತ್ತಾನೆ:—ಶಿವನಿಂದ ಹೊಂದಲ್ಪಟ್ಟ ವರವುಳ್ಳವನೂ, ದೇವತೆಗಳಿಗೆ ಅಜೇಯನೂ ಆದ ಬಾಷ್ಕಲಿಯೆಂಬ ದೈತ್ಯನಿರುವನು. ಅವನು ಯುದ್ಧದಲ್ಲಿ ನನ್ನನ್ನು ಜಯಿಸಿರುವನು.

೧೬. ಅವನೀಗ ಸ್ವರ್ಗದಲ್ಲಿ ವಾಸಿಸುತ್ತಿರುವುದರಿಂದ ನಾನು ದೇವತೆಗಳೊಡನೆ ನಿನ್ನನ್ನು ಮರೆಹೊಕ್ಕೆನು.

೧೭. ನೀನು ಹಿಂದೆ ಹಿರಣ್ಯಕಶಿಪು, ಹಿರಣ್ಯಾಕ್ಷರಿಂದಲೂ, ಇತರ ದುರಾತ್ಮರಿಂದಲೂ ನಮ್ಮನ್ನು ಕಾಪಾಡಿರುವೆ.

೧೮. ಆದ್ದರಿಂದ ಈ ಬಲಿಷ್ಠನಾದ ಬಾಷ್ಕಲಿಯಿಂದ ನಮ್ಮನ್ನು ರಕ್ಷಿಸು. ದೇವೇಶ! ನಿನ್ನನ್ನು ಬಿಟ್ಟು ನಮಗೆ ಬೇರೆ ಯಾರೂ ಗತಿಯಿಲ್ಲ.

೧೯. ಶ್ರೀ ಭಗವಂತನು ಹೇಳುತ್ತಾನೆ:—ನಾನು ಕಾಲವು ಒದಗಿದಾಗ ಅವನನ್ನು ನಿಗ್ರಹಿಸುವೆನು. ಆದ್ದರಿಂದ ನೀನು ಆ ಸಮಯದವರೆಗೆ ಮಹಾ ತಪಸ್ಸನ್ನು ಮಾಡು.

ಯೇನ ತೇ ಜಾಯತೇ ಶಕ್ತಿಸ್ತಪೋವೀರ್ಯೇಣ ವಾಸವ ।
ವಧಾಯ ತಸ್ಯ ದೈತ್ಯಸ್ಯ ಬಲಯುಕ್ತಸ್ಯ ಬಾಷ್ಕಲೇಃ ॥ ೨೦ ॥

ಶಕ್ರ ಉವಾಚ :—

ಕಸ್ಮಿನ್ ಕ್ಷೇತ್ರೇ ಜಗನ್ನಾಥ ಕರೋಮಿ ಸುಮಹತ್ತಪಃ ।
ತಸ್ಯ ದೈತ್ಯಸ್ಯ ನಾಶಾರ್ಥಂ ತದಸ್ಮಾಕಂ ಪ್ರಕೀರ್ತಯ ॥ ೨೧ ॥

ಸೂತ ಉವಾಚ :—

ತಚ್ಛ್ರುತ್ವಾ ಭಗವಾನ್ ವಿಷ್ಣುಃ ಪ್ರೋವಾಚಾಽಥ ಪುರಂದರಂ ।
ಚಿರಂ ಮನಸಿ ನಿಶ್ಚಿತ್ಯ ಕ್ಷೇತ್ರಾಣ್ಯಾಯತನಾನಿ ಚ ॥ ೨೨ ॥
ಚಮತ್ಕಾರಪುರಂ ಕ್ಷೇತ್ರಂ ಶಕ್ರ ಸಿದ್ಧಿಪ್ರದಾಯಕಂ ।
ತಸ್ಮಾತ್ತತ್ರ ದ್ರುತಂ ಗತ್ವಾ ತದ್ವಧಾರ್ಥಂ ತಪಃ ಕುರು ॥ ೨೩ ॥

ಶಕ್ರ ಉವಾಚ :—

ನ ವಯಂ ಭವತಾ ಹೀನಾ ಯಾಸ್ಯಾಮೋಽನ್ಯತ್ರ ಕೇಶವ ।
ಬಾಷ್ಕಲೇರ್ದಾನವೇಂದ್ರಸ್ಯ ಭಯಾದ್ಭೀತಾಃ ಕಥಂಚನ ॥ ೨೪ ॥
ತಸ್ಮಾದಾಗಚ್ಛ ತತ್ರ ತ್ವಂ ಸ್ವಯಮೇವ ಸುರೇಶ್ವರ ।
ತ್ವಯಾ ಸಂರಕ್ಷಿತೋ ಯೇನ ಕರೋಮಿ ಸುಮಹತ್ತಪಃ ॥ ೨೫ ॥

ಸೂತ ಉವಾಚ :—

ತತಃ ಸ ಭಗವಾನ್ ವಿಷ್ಣುಸ್ತಥೇತ್ಯುಕ್ತ್ವಾ ಸುರೈಃ ಸಹ ।
ಚಮತ್ಕಾರಪುರಂ ಕ್ಷೇತ್ರಮಾಜಗಾಮ ಸಹ ಶ್ರಿಯಾ ॥ ೨೬ ॥

---

೨೦. ಆ ತಪಸ್ಸಿನ ಸಾಮರ್ಥ್ಯದಿಂದ ನಿನಗೆ ಬಲಿಷ್ಠನಾದ ಆ ದೈತ್ಯನನ್ನು ಕೊಲ್ಲಲು ಶಕ್ತಿಯುಂಟಾಗುವುದು.

೨೧. ಇಂದ್ರನು ಹೇಳುತ್ತಾನೆ:—ಜಗನ್ನಾಥ! ನಾನು ಆ ದೈತ್ಯನನ್ನು ಕೊಲ್ಲಲು ಯಾವ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಲಿ? ಅದನ್ನು ನನಗೆ ಹೇಳು.

೨೨. ಸೂತನು ಹೇಳುತ್ತಾನೆ:—ಪೂಜ್ಯನಾದ ವಿಷ್ಣುವು ಅದನ್ನು ಕೇಳಿ ದೇವಾಲಯ ಕ್ಷೇತ್ರಗಳನ್ನು ಬಹಳಹೊತ್ತು ಮನಸ್ಸಿನಲ್ಲಿ ಆಲೋಚಿಸಿ ಹೀಗೆಂದನು.

೨೩. ಇಂದ್ರ! ಚಮತ್ಕಾರಪುರಕ್ಷೇತ್ರವು ಸಿದ್ಧಿಯನ್ನು ಕೊಡುವುದು. ಆದ್ದರಿಂದ ಅಲ್ಲಿಗೆ ಶೀಘ್ರವಾಗಿ ಹೋಗಿ ಆ ದೈತ್ಯನನ್ನು ಕೊಲ್ಲಲು ತಪವನ್ನಾಚರಿಸು.

೨೪–೨೫. ಇಂದ್ರನು ಹೇಳುತ್ತಾನೆ:—ಕೇಶವ! ಬಾಷ್ಕಲಿ ದಾನವನಿಂದ ಭೀತರಾದ ನಾವು ನೀನಿಲ್ಲದೆ ಅಲ್ಲಿಗೆ ಹೋಗಲಾರೆವು. ಆದ್ದರಿಂದ ನೀನೂ ಅಲ್ಲಿಗೆ ಬಾ. ನಿನ್ನಿಂದ ರಕ್ಷಿಸಲ್ಪಟ್ಟ ನಾನು ತಪಸ್ಸನ್ನು ಮಾಡುವೆನು.

೨೬. ಸೂತನು ಹೇಳುತ್ತಾನೆ:–ಬಳಿಕ ಆ ವಿಷ್ಣುವು ಹಾಗೆಯೇ ಆಗಲೆಂದು ಹೇಳಿ ದೇವತೆಗಳಿಂದಲೂ ಲಕ್ಷ್ಮಿಯಿಂದಲೂ ಕೂಡಿ ಚಮತ್ಕಾರಪುರ ಕ್ಷೇತ್ರಕ್ಕೆ ಬಂದನು.

ಅಥ ದೇವಗಣಾಃ ಸರ್ವೇ ತತ್ರ ಗತ್ವಾ ತದಾಽಽಶ್ರಮಾನ್ ।
ಚಕ್ರುಃ ಪೃಥಕ್ಪೃಥಗ್ಘೃಷ್ಟಾಸ್ತಪೋರ್ಥಂ ಕೃತನಿಶ್ಚಯಾಃ ॥ ೨೭ ॥
ವಾಸುದೇವೋಽಪಿ ಸಂಸ್ಮೃತ್ಯ ಕ್ಷೀರೋದಂ ತತ್ರ ಸಾಗರಂ ।
ಆನಿನಾಯಾಶು ವಿಸ್ತೀರ್ಣಂ ಹ್ರದೇ ತಸ್ಮಿನ್ ಪುರಾತನೇ ॥ ೨೮ ॥
ಚಕಾರ ಶಯನಂ ತತ್ರ ಶ್ವೇತದ್ವೀಪೇ ಯಥಾ ಪುರಾ ।
ಸ್ತೂಯಮಾನಃ ಸುರೈಃ ಸರ್ವೈಃ ಸಮಂತಾದ್ವಿನಯಾನ್ವಿತೈಃ ॥ ೨೯ ॥
ಅಥಾಷಾಢಸ್ಯ ಸಂಪ್ರಾಪ್ತೇ ದ್ವಿತೀಯಾ ದಿವಸೇ ಶುಭೇ ।
ಕೃಷ್ಣಪಕ್ಷೇ ಸಹಸ್ರಾಕ್ಷಂ ಸ್ವಯಮೇವ ಬೃಹಸ್ಪತಿಃ ।
ಪ್ರೋವಾಚ ವಚನಂ ಶ್ಲಕ್ಷ್ಣಂ ಬಾಷ್ಪವ್ಯಾಕುಲಲೋಚನಂ ॥ ೩೦ ॥

ಬೃಹಸ್ಪತಿರುವಾಚ :—

ಅಶೂನ್ಯಶಯನಾ ನಾಮ ದ್ವಿತೀಯಾಽದ್ಯ ಪುರಂದರ ।
ಅತೀವ ದಯಿತಾ ವಿಷ್ಣೋಃ ಪ್ರಸುಪ್ತಸ್ಯ ಜಲಾಶಯೇ ॥ ೩೧ ॥
ಅಸ್ಯಾಂ ಸಂಪೂಜಿತೋ ವಿಷ್ಣುರ್ಯಾವನ್ಮಾಸಚತುಷ್ಟಯಂ ।
ದದಾತಿ ಸಕಲಾನ್ಕಾಮಾನ್ ಧ್ಯಾತಶ್ಚೇತಸಿ ಸರ್ವದಾ ।
ಶಾಸ್ತ್ರೋಕ್ತವಿಧಿನಾ ಸಮ್ಯಗ್ವ್ರತಸ್ಥೋ ಜಲಶಾಯಿನಂ ॥ ೩೨ ॥

---

೨೭. ಬಳಿಕ ದೇವತೆಗಳೆಲ್ಲ ಸಂತೋಷದಿಂದ ತಪಸ್ಸನ್ನು ಮಾಡಲು ಬೇರೆ ಬೇರೆಯಾಗಿ ಅಲ್ಲಿ ಆಶ್ರಮಗಳನ್ನು ರಚಿಸಿಕೊಂಡರು.

೨೮. ವಿಷ್ಣುವೂ ಅಲ್ಲಿ ಕ್ಷೀರಸಮುದ್ರವನ್ನು ಸ್ಮರಿಸಿಕೊಂಡು ಅಲ್ಲಿರುವ ಪುರಾತನಹ್ರದದಲ್ಲಿ ವಿಸ್ತೀರ್ಣವಾದ ಕ್ಷೀರಸಮುದ್ರವನ್ನು ತರಿಸಿರಿಸಿದನು.

೨೯. ಆ ಕ್ಷೀರಸಮುದ್ರದಲ್ಲಿ ಹಿಂದೆ ಶ್ವೇತದ್ವೀಪದಲ್ಲಿ ಮಲಗಿದಂತೆ ವಿಧೇಯರಾದ ಸಕಲ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತ ಮಲಗಿದನು.

೩೦. ತರುವಾಯ ಬೃಹಸ್ಪತಿಯು ಮಂಗಳಕರವಾದ ಆಷಾಢಮಾಸದ ಕೃಷ್ಣಪಕ್ಷದ ದ್ವಿತೀಯಾದಿನವು ಬರಲು ಕಣ್ಣೀರನ್ನು ಸುರಿಸುತ್ತಿರುವ ಇಂದ್ರನನ್ನು ಕುರಿತು ಮೃದುವಾಗಿ ಇಂತೆಂದನು.

೩೧. ಬೃಹಸ್ಪತಿಯು ಹೇಳುತ್ತಾನೆ:—ಪುರಂದರ! ಈ ಅಶೂನ್ಯಶಯನವೆಂಬ ದ್ವಿತೀಯಾದಿನವು ಈ ಜಲಾಶಯದಲ್ಲಿ ಮಲಗಿರುವ ವಿಷ್ಣುವಿಗೆ ಅತ್ಯಂತ ಪ್ರಿಯವಾದುದು.

೩೨. ಈ ದಿನ ಮಾನವನು ವ್ರತಸ್ಥನಾಗಿ ಶಾಸ್ತ್ರರೀತಿಯಿಂದ ನಾಲ್ಕುತಿಂಗಳ ಕಾಲ ಧ್ಯಾನಿಸಿ ಪೂಜಿಸಿದರೆ ಸಕಲೇಷ್ಟಾರ್ಥಗಳನ್ನು ಕೊಡುವನು.

ಏವಂ ಸ ಚತುರೋ ಮಾಸಾನ್ದ್ವಿತೀಯಾ ದಿವಸೇ ಹರಿಂ ।
ಪೂಜಯಿತ್ವಾ ಸಹಸ್ರಾಕ್ಷಸ್ತೇಜಸಾ ಸಹಿತೋಽಭವತ್ ॥ ೩೩ ॥
ತಂ ದೃಷ್ಟ್ವಾ ತೇಜಸಾ ಯುಕ್ತಂ ಪರಿತುಷ್ಟೋ ಜನಾರ್ದನಃ ।
ಪ್ರೋವಾಚ ಶಕ್ರ ಗಚ್ಛಾಽದ್ಯ ವಧಾರ್ಥಂ ತಸ್ಯ ಬಾಷ್ಕಲೇಃ ।
ಸರ್ವೈರ್ದೇವಗಣೈಃ ಸಾರ್ಧಂ ವಿಜಯಸ್ತೇ ಭವಿಷ್ಯತಿ ॥ ೩೪ ॥

ಶಕ್ರ ಉವಾಚ:—

ಬಿಭೇಮಿ ತಸ್ಯ ದೇವಾಽಹಂ ದಾನವೇಂದ್ರಸ್ಯ ದುರ್ಮತೇಃ ।
ತ್ವಯಾ ವಿನಾ ನ ಗಚ್ಛಾಮಿ ಸಾರ್ಧಂ ಸರ್ವೈಃ ಸುರೈರಪಿ ॥ ೩೫ ॥

ಶ್ರೀ ಭಗವಾನುವಾಚ:—

ತ್ವಯಾ ಸಹ ಸಹಸ್ರಾಕ್ಷ ಚಕ್ರಮೇತತ್ಸುದರ್ಶನಂ ।
ಗಮಿಷ್ಯತಿ ವಧಾರ್ಥಾಯ ಮದೀಯಂ ಸುರವಿದ್ವಿಷಾಂ ॥ ೩೬ ॥
ಏವಮುಕ್ತ್ವಾ ಹರಿಶ್ಚಕ್ರಂ ಪ್ರಮುಮೋಚ ಸುದರ್ಶನಂ ।
ವಧಾರ್ಥಂ ದಾನವೇಂದ್ರಾಣಾಂ ಶಕ್ರೇಣ ಸಹಿತಂ ತದಾ ॥ ೩೭ ॥
ಶಕ್ರೋಽಪಿ ಸಹಿತಸ್ತೇನ ಗತ್ವಾ ಚಕ್ರೇಣ ಕೃತ್ಸ್ನಶಃ ।
ಸರ್ವಾನುತ್ಸಾದಯಾಮಾಸ ದಾನವಾನ್ರಣಮೂರ್ಧನಿ ॥ ೩೮ ॥
ಸ ಚಾಽಪಿ ಬಾಷ್ಕಲಿಸ್ತೇನ ಭಿನ್ನಶ್ಚಕ್ರೇಣ ಕೃತ್ಸ್ನಶಃ ।
ಪಪಾತ ಧರಣೀಪೃಷ್ಠೇ ವಜ್ರಾಹತ ಇವಾಽಚಲಃ ॥ ೩೯ ॥

---

೩೩. ಆ ಇಂದ್ರನು ಹೀಗೆ ನಾಲ್ಕು ತಿಂಗಳಕಾಲ ದ್ವಿತೀಯಾದಿನ ಹರಿಯನ್ನು ಪೂಜಿಸಿ ತೇಜಸ್ವಿಯಾದನು.

೩೪. ತೇಜಸ್ವಿಯಾದ ಆ ಶಕ್ರನನ್ನು ನೋಡಿ ಸಂತೋಷಗೊಂಡ ವಿಷ್ಣುವು ಶಕ್ರ! ಈಗ ಆ ಬಾಷ್ಕಲಿಯ ವಧೆಗಾಗಿ ಸಕಲ ದೇವತೆಗಳೊಡನೆ ಹೋಗು. ನಿನಗೆ ಜಯವಾಗುವುದು ಎಂದನು.

೩೫. ಇಂದ್ರನು ಹೇಳುತ್ತಾನೆ:—ಸ್ವಾಮಿ! ನಾನು ಆ ದಾನವನಿಗೆ ಹೆದರುವೆನು. ನಿನ್ನನ್ನು ಬಿಟ್ಟು ಸಕಲ ದೇವತೆಗಳೊಡನೆಯೂ ಯುದ್ಧಕ್ಕೆ ಹೋಗಲಾರೆನು.

೩೬. ಶ್ರೀ ಭಗವಂತನು ಹೇಳುತ್ತಾನೆ:—ಇಂದ್ರ! ನಿನ್ನೊಡನೆ ನನ್ನೀ ಸುದರ್ಶನವು ದಾನವರ ವಧೆಗಾಗಿ ಹೋಗುವುದು.

೩೭–೩೮. ವಿಷ್ಣುವು ಹೀಗೆ ಹೇಳಿ ಇಂದ್ರನೊಡನೆ ದಾನವರ ವಧೆಗಾಗಿ ಚಕ್ರವನ್ನು ಕಳುಹಿಸಿದನು. ಇಂದ್ರನೂ ಆ ಚಕ್ರದೊಡನೆ ಹೋಗಿ ಯುದ್ಧದಲ್ಲಿ ಸಕಲ ದಾನವರನ್ನು ಕೊಂದನು.

೩೯. ಆ ಬಾಷ್ಕಲಿಯೂ ಆ ಚಕ್ರದಿಂದ ಸಂಪೂರ್ಣವಾಗಿ ಭೇದಿಸಲ್ಪಟ್ಟವನಾಗಿ ವಜ್ರದಿಂದ ಹೊಡೆಯಲ್ಪಟ್ಟ ಪರ್ವತದಂತೆ ಭೂಮಿಯಮೇಲೆ ಬಿದ್ದನು.

ತಥಾಽನ್ಯೇ ಬಹವಃ ಶೂರಾ ದಾನವಾ ಬಲದರ್ಪಿತಾಃ ।
ಹತ್ವಾ ಸುದರ್ಶನಂ ಚಕ್ರಂ ಭೂಯಃ ಪ್ರಾಪ್ತಂ ಹರೇಃ ಕರಂ ॥ ೪೦ ॥
ತೇಽಪಿ ಶಕ್ರಾದಯೋ ದೇವಾಃ ಪ್ರಹೃಷ್ಟಾ ಗತಸಂಶಯಾಃ ।
ಭೂಯೋ ವಿಷ್ಣುಂ ಸಮೇತ್ಯಾಽಥ ಪ್ರೋಚುರ್ನತ್ವಾ ತತಃ ಪರಂ ॥ ೪೧ ॥
ಪ್ರಭಾವಾತ್ತವ ದೇವೇಶ ಹತಾಃ ಸರ್ವೇಽಸುರಾರಯಃ ।
ಪ್ರಾಪ್ತಂ ತ್ರೈಲೋಕ್ಯರಾಜ್ಯಂ ಚ ಭೂಯೋ ನಿಹತಕಂಟಕಂ ॥ ೪೨ ॥
ತಸ್ಮಾತ್ಕೀರ್ತಯ ಯತ್ಕೃತ್ಯಂ ತಚ್ಚ ಶ್ರೇಯಸ್ಕರಂ ಮಮ ।
ಸದಾ ಸ್ಯಾತ್ಪುಂಡರೀಕಾಕ್ಷ ತಥಾ ಶತ್ರುಭಯಾವಹಂ ॥ ೪೩ ॥

ಶ್ರೀ ಭಗವಾನುವಾಚ :—

ಮಯಾಽತ್ರೈವ ಸದಾ ಸ್ಥೇಯಂ ರೂಪೇಣಾಽನೇನ ವಾಸವ ।
ಸರ್ವಲೋಕಹಿತಾರ್ಥಾಯ ಹ್ರದೇ ಪುಣ್ಯಜಲಾಶ್ರಯೇ ॥ ೪೪ ॥
ತ್ವಯಾ ತಸ್ಮಾತ್ಸಮಾಗಮ್ಯ ಚಾತುರ್ಮಾಸ್ಯಂ ಶಚೀಪತೇ ।
ಪ್ರಯತ್ನೇನ ಪ್ರಕರ್ತವ್ಯಮಶೂನ್ಯಶಯನಂ ವ್ರತಂ ॥ ೪೫ ॥
ನ ಭವಂತಿ ಸಹಸ್ರಾಕ್ಷ ಯೇನ ತೇ ಪರಿಪಂಥಿನಃ ।
ತಥಾಽಭೀಷ್ಟಫಲಾವಾಪ್ತಿರ್ಮತ್ಪ್ರಸಾದಾದಸಂಶಯಂ ॥ ೪೬ ॥

---

೪೦. ಹಾಗೆಯೇ ಆ ಚಕ್ರವು ಇತರ ಬಹುಮಂದಿ ಶೂರರೂ ಬಲದಿಂದ ಅಹಂಕಾರಗೊಂಡವರೂ ಆದ ದಾನವರನ್ನು ಕೊಂದು ಮರಳಿ ವಿಷ್ಣುವಿನ ಕೈಯನ್ನು ಸೇರಿತು.

೪೧. ಆ ಇಂದ್ರಾದಿ ದೇವತೆಗಳು ಸಂಶಯರಹಿತರಾಗಿ ಸಂತೋಷದಿಂದ ಮರಳಿ ವಿಷ್ಣುವಿನ ಹತ್ತಿರ ಹೋಗಿ ನಮಸ್ಕರಿಸಿ ಇಂತೆಂದರು.

೪೨. ದೇವೇಶ! ನಿನ್ನ ಪ್ರಭಾವದಿಂದ ಸಕಲ ದಾನವರು ಹತರಾದರು. ಶತ್ರುಗಳಿಲ್ಲದ ತ್ರೈಲೋಕ್ಯರಾಜ್ಯವನ್ನು ಮರಳಿ ಪಡೆದೆವು.

೪೩. ಆದ್ದರಿಂದ ಪುಂಡರೀಕಾಕ್ಷ! ಯಾವಾಗಲೂ ಶತ್ರುಗಳಿಗೆ ಭಯವನ್ನುಂಟುಮಾಡುವ ಶ್ರೇಯಸ್ಕರವಾದ ಕಾರ್ಯವನ್ನು ನಮಗೆ ಹೇಳು.

೪೪. ಶ್ರೀ ಭಗವಂತನು ಹೇಳುತ್ತಾನೆ:—ಇಂದ್ರ! ನಾನು ಸಕಲ ಜನರ ಹಿತಕ್ಕಾಗಿ ಈ ಪುಣ್ಯಕರವಾದ ಸರೋವರದಲ್ಲಿ ಇದೇ ರೂಪದಿಂದ ಯಾವಾಗಲೂ ಇರುವೆನು.

೪೫. ಇಂದ್ರ! ಆದ್ದರಿಂದ ನೀನು ಚಾತುರ್ಮಾಸ್ಯದಲ್ಲಿ ಇಲ್ಲಿಗೆ ಬಂದು ಅಶೂನ್ಯಶಯನವ್ರತವನ್ನಾಚರಿಸು.

೪೬. ಅದರಿಂದ ನಿನಗೆ ಶತ್ರುಗಳು ಇರುವುದಿಲ್ಲ. ಹಾಗೆಯೇ ನನ್ನ ಅನುಗ್ರಹದಿಂದ ನಿಶ್ಚಯವಾಗಿಯೂ ಇಷ್ಟಫಲವು ಲಭಿಸುವುದು.

ಅನ್ಯೋಽಪಿ ಯೋ ನರೋ ಭಕ್ತ್ಯಾ ಪೂಜಯಿಷ್ಯತಿ ಮಾಮಿಹ ।
ಸಂಪ್ರಾಪ್ಸ್ಯತಿ ಸ ತಾಂಲ್ಲೋಕಾನ್ದುರ್ಲಭಾಂಸ್ತ್ರಿದಶೈರಪಿ ॥ ೪೭ ॥
ತಸ್ಮಾದ್ಗಚ್ಛ ಸಹಸ್ರಾಕ್ಷ ಕುರು ರಾಜ್ಯಂ ತ್ರಿವಿಷ್ಟಪೇ ।
ಭೂಯೋಽಪ್ಯತ್ರೈವ ದೇವೇಶ ದ್ರಷ್ಟವ್ಯೋಽಸ್ಮಿ ನ ಸಂಶಯಃ ।
ಕಾರ್ಯಕಾಲೇ ಸಮಾಯಾತೇ ಶ್ವೇತದ್ವೀಪೇ ಯಥಾ ತಥಾ ॥ ೪೮ ॥

ಸೂತ ಉವಾಚ :—

ತತಃ ಪ್ರಣಮ್ಯ ತಂ ದೃಷ್ಟ್ವಾ ಪ್ರಜಗಾಮ ಶತಕ್ರತುಃ ।
ವಾಸುದೇವೋಽಪಿ ತತ್ರೈವ ಸ್ಥಿತೋ ಲೋಕಹಿತಾಯ ಚ ॥ ೪೯ ॥
ಏವಂ ತತ್ರ ದ್ವಿಜಶ್ರೇಷ್ಠಾ ಜಲಶಾಯೀ ಜನಾರ್ದನಃ ।
ಸರ್ವಲೋಕಹಿತಾರ್ಥಾಯ ಸಂಸ್ಥಿತಃ ಪರಮೇಶ್ವರಃ ॥ ೫೦ ॥
ಯಸ್ತಂ ಪೂಜಯತೇ ಭಕ್ತ್ಯಾ ಶ್ರದ್ಧಯಾ ಪರಯಾ ಯುತಃ ।
ಚಾತುರ್ಮಾಸ್ಯೇ ವಿಶೇಷೇಣ ಸ ಯಾತಿ ಪರಮಾಂ ಗತಿಂ ॥ ೫೧ ॥
ತಥಾ ದೇವಗಣೈಃ ಸರ್ವೈರ್ದ್ವಾರಕಾ ತತ್ರ ಸಾ ಕೃತಾ ।
ಸಂಪೂಜ್ಯ ತು ನರಾ ಯಾಂತಿ ಚಾತುರ್ಮಾಸ್ಯೇ ತ್ರಿವಿಷ್ಟಪಂ ॥ ೫೨ ॥
ಶೇಷಕಾಲೇಽಪಿ ಚಿತ್ತಸ್ಥಾನ್ಕಾಮಾನ್ಮರ್ತ್ಯಃ ಸಮಾಪ್ನುಯಾತ್ ।
ತಸ್ಮಾತ್ಸರ್ವಪ್ರಯತ್ನೇನ ಪೂಜ್ಯಾ ಸಾ ದ್ವಾರಕಾ ನರೈಃ ।
ಸರ್ವೇಷ್ವಪಿ ಹಿ ಕಾಲೇಷು ಚಾತುರ್ಮಾಸ್ಯೇ ವಿಶೇಷತಃ ॥ ೫೩ ॥

---

೪೭. ಇಲ್ಲಿರುವ ನನ್ನನ್ನು ಭಕ್ತಿಯಿಂದ ಪೂಜಿಸುವ ಇತರ ಮಾನವನೂ ದೇವತೆಗಳಿಗೂ ದುರ್ಲಭವಾದ ಉತ್ತಮಲೋಕಗಳನ್ನು ಪಡೆಯುವನು.

೪೮. ಇಂದ್ರ! ಆದ್ದರಿಂದ ಹೊರಡು, ದೇವರಾಜ್ಯವನ್ನಾಳು. ಶ್ವೇತ ದ್ವೀಪದಲ್ಲಿ ನೋಡುವಂತೆ ಕಾರ್ಯಕಾಲದಲ್ಲಿ ಇಲ್ಲಿಯೇ ನನ್ನನ್ನು ನೋಡು.

೪೯. ಸೂತನು ಹೇಳುತ್ತಾನೆ:—ಬಳಿಕ ಇಂದ್ರನು ಆ ವಿಷ್ಣುವನ್ನು ನೋಡಿ ವಂದಿಸಿ ಹೊರಟುಹೋದನು. ವಿಷ್ಣುವೂ ಲೋಕಹಿತಕ್ಕಾಗಿ ಅಲ್ಲಿಯೇ ಇದ್ದನು.

೫೦–೫೧. ದ್ವಿಜವರ್ಯರೆ! ಹೀಗೆ ವಿಷ್ಣುವು ಸಕಲ ಲೋಕಹಿತಕ್ಕಾಗಿ ಜಲ ಶಾಯಿಯಾಗಿದ್ದನು. ಚಾತುರ್ಮಾಸ್ಯದಲ್ಲಿ ಅತಿಶಯ ಶ್ರದ್ಧಾ, ಭಕ್ತಿಗಳಿಂದ ಅವನನ್ನು ಪೂಜಿಸುವವನು ಉತ್ತಮಗತಿಯನ್ನು ಪಡೆಯುವನು.

೫೨. ಹಾಗೆಯೇ ಸಕಲ ದೇವತೆಗಳು ಅದನ್ನು ದ್ವಾರಕೆಯನ್ನಾಗಿ ಮಾಡಿದರು. ಆ ಜಲಶಾಯಿಯನ್ನು ಚಾತುರ್ಮಾಸ್ಯದಲ್ಲಿ ಪೂಜಿಸಿದ ಮಾನವರು ಸ್ವರ್ಗವನ್ನು ಸೇರುವರು.

೫೩. ಇತರ ಸಮಯದಲ್ಲಿಯೂ ಮಾನವನು ಮನೋಭೀಷ್ಟವನ್ನು ಪಡೆಯುವನು. ಆದ್ದರಿಂದ ಮಾನವರು ಯಾವಾಗಲೂ, ವಿಶೇಷವಾಗಿ ಚಾತು ರ್ಮಾಸ್ಯದಲ್ಲಿಯೂ ಆ ದ್ವಾರಕೆಯನ್ನು ಪೂಜಿಸಬೇಕು.

ಏತದ್ವಃ ಸರ್ವಮಾಖ್ಯಾತಂ ಸರ್ವಪಾತಕನಾಶನಂ ।
ಆಖ್ಯಾನಂ ದೇವದೇವಸ್ಯ ಸುಪುಣ್ಯಂ ಜಲಶಾಯಿನಃ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಜಲಶಾಯ್ಯುತ್ಪತ್ತಿರ್ವರ್ಣನಂ "
ನಾಮೈಕಚತ್ವಾರಿಂಶತ್ತಮೋಽಧ್ಯಾಯಃ

---

೫೪. ದೇವದೇವನಾದ ಜಲಶಾಯಿಯ ಸಕಲ ಪಾಪಗಳನ್ನು ಪರಿಹರಿಸುವುದೂ, ಪುಣ್ಯಕರವೂ ಆದ ಈ ಆಖ್ಯಾನವನ್ನು ಸಂಪೂರ್ಣವಾಗಿ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಜಲಶಾಯ್ಯುತ್ಪತ್ತಿರ್ವರ್ಣನ "ವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ವಿಶ್ವಾಮಿತ್ರನೇನಕಾಸಮಾಗಮವರ್ಣನಂ

ಸೂತ ಉವಾಚ:—

ವಿಶ್ವಾಮಿತ್ರಸಮುದ್ಭೂತಂ ಕುಂಡಂ ತತ್ರಾಽಪರಂ ಶುಭಂ ।
ಸಂತಿಷ್ಠತೇ ದ್ವಿಜಶ್ರೇಷ್ಠಾಃ ಸರ್ವಕಾಮಪ್ರದಾಯಕಂ ॥ ೧ ॥
ತತ್ರ ಚೈತ್ರತೃತೀಯಾಯಾಂ ಕೃತೇ ಸ್ನಾನೇ ಭವೇನ್ನರಃ ।
ದಿವ್ಯರೂಪಧರಃ ಸಾಕ್ಷಾತ್ಕಾಮೋಽನ್ಯೋ ದ್ವಿಜಸತ್ತಮಾಃ ॥ ೨ ॥
ನಾರೀ ವಾ ಶ್ರದ್ಧಯೋಪೇತಾ ತತ್ರ ಸ್ನಾತ್ವಾ ಪ್ರಜಾವತೀ ।
ಭವೇತ್ಸೌಭಾಗ್ಯಸಂಯುಕ್ತಾ ಸ್ಪೃಹಣೀಯತಮಾ ಕ್ಷಿತೌ ॥ ೩ ॥

ಋಷಯ ಊಚುಃ:—

ತೀರ್ಥಂ ತಸ್ಯ ಮುನೇಸ್ತತ್ರ ಕಸ್ಮಿನ್ ಕಾಲೇ ವ್ಯವಸ್ಥಿತಂ ।
ನಿರ್ಮಲಂ ಕೇನ ನಿಃಶೇಷಂ ವದ ತ್ವಂ ಸೂತನಂದನ ॥ ೪ ॥

ಸೂತ ಉವಾಚ:—

ತತ್ರಾಽಸ್ತಿ ನಿರ್ಝರಃ ಪೂರ್ವಂ ಸಾಮಾನ್ಯೋ ದ್ವಿಜಸತ್ತಮಾಃ ।
ಅವಧೂತೋ ಧರಾಪೃಷ್ಠೇ ಮಾಹಾತ್ಮ್ಯೇನ ವ್ಯವಸ್ಥಿತಃ ॥ ೫ ॥

---

## ಕನ್ನಡದ ಅನುವಾದ

### ವಿಶ್ವಾಮಿತ್ರನೇನಕಾಸಮಾಗಮವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಅಲ್ಲಿ ಸಕಲೇಷ್ಟಾರ್ಥಗಳನ್ನು ಕೊಡುವ ಇನ್ನೊಂದು ವಿಶ್ವಾಮಿತ್ರಕುಂಡವಿದೆ.

೨. ಅಲ್ಲಿ ಚೈತ್ರಮಾಸದ ತದಿಗೆ ದಿನ ಸ್ನಾನಮಾಡಿದ ಮಾನವನು ದಿವ್ಯರೂಪವನ್ನು ಧರಿಸಿ ಸಾಕ್ಷಾತ್ ಮತ್ತೊಬ್ಬ ಮನ್ಮಥನಂತೆ ಆಗುವನು.

೩. ಅಲ್ಲಿ ಶ್ರದ್ಧೆಯಿಂದ ಸ್ನಾನಮಾಡಿದ ಯಾವ ಹೆಂಗಸೇ ಆಗಲಿ ಅವಳು ಭೂಮಿಯಲ್ಲಿ ಸೌಭಾಗ್ಯದಿಂದ ಕೂಡಿದವಳೂ, ಸುಂದರಿಯೂ ಆಗುವಳು.

೪. ಋಷಿಗಳು ಹೇಳುತ್ತಾರೆ:—ಸೂತ! ಆ ವಿಶ್ವಾಮಿತ್ರಮುನಿಯ ನಿರ್ಮಲವಾದ ತೀರ್ಥವನ್ನು ಯಾರು ಯಾವಾಗ ನಿರ್ಮಿಸಿದರು? ಅದನ್ನು ಸಂಪೂರ್ಣವಾಗಿ ನಮಗೆ ಹೇಳು.

೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಅಲ್ಲಿ ಹಿಂದೆ ಅತಿಶಯ ಮಾಹಾತ್ಮ್ಯೆಯುಳ್ಳ ಸಾಮಾನ್ಯವಾದ ಒಂದು ಗಿರಿ ನದಿಯು ಇದ್ದಿತು.

ಯತ್ರ ದೇವನದೀ ಗಂಗಾ ಸ್ವಯಮೇವ ವ್ಯವಸ್ಥಿತಾ ।
ಯಸ್ಯಾಂ ಸ್ನಾತಃ ಪುಮಾನ್ ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೬ ॥
ಯಸ್ತತ್ರ ಕುರುತೇ ಶ್ರಾದ್ಧಂ ಪಿತೄನುದ್ದಿಶ್ಯ ಭಾವಿತಃ ।
ತದಕ್ಷಯಂ ಭವೇಚ್ಛ್ರಾದ್ಧಂ ಪಿತೄಣಾಂ ತೃಪ್ತಿಕಾರಕಂ ॥ ೭ ॥
ಯತ್ಕಿಂಚಿದ್ದೀಯತೇ ದಾನಂ ತಸ್ಮಿಂಸ್ತೀರ್ಥವರೇ ದ್ವಿಜಾಃ ।
ಹುತಜಪ್ಯಾದಿಕಂ ಚೈವ ತದನಂತಫಲಂ ಭವೇತ್ ॥ ೮ ॥
ಕಸ್ಯಚಿತ್ತ್ವಥ ಕಾಲಸ್ಯ ಮೃಗೀ ವ್ಯಾಧಶರಾಹತಾ ।
ಪ್ರವಿಷ್ಟಾ ಸಲಿಲೇ ತಸ್ಮಿಂಸ್ತತ್ರ ಪಂಚತ್ವಮಾಗತಾ ॥ ೯ ॥
ಚೈತ್ರ ಶುಕ್ಲ ತೃತೀಯಾಯಾಂ ಮಧ್ಯಾಹ್ನೇ ದ್ವಿಜಸತ್ತಮಾಃ ।
ನಕ್ಷತ್ರೇ ಯಮದೈವತ್ಯೇ ಮಾರ್ತಂಡಸ್ಯ ಚ ವಾಸರೇ ॥ ೧೦ ॥
ಅಥ ತತ್ತೋಯಮಾಹಾತ್ಮ್ಯಾನ್ಮೇನಕಾ ನಾಮ ಸಾಽಭವತ್ ।
ಅಪ್ಸರಾ ತ್ರಿದಶೇಂದ್ರಸ್ಯ ಸಮಂತಾಚ್ಚಾರುಹಾಸಿನೀ ॥ ೧೧ ॥
ಸ್ಮರಮಾಣಾಽಥ ಸಾ ತಸ್ಯ ಪ್ರಭಾವಂ ವರವರ್ಣಿನೀ ।
ತೀರ್ಥಮಾಗತ್ಯ ಸದ್ಭಕ್ತ್ಯಾ ಸ್ನಾನಂ ತತ್ರ ಸಮಾಚರತ್ ।
ಚೈತ್ರಶುಕ್ಲತೃತೀಯಾಯಾಂ ಯಾಮರ್ಕ್ಷೇ ಸೂರ್ಯವಾಸರೇ ॥ ೧೨ ॥

---

೬. ಅಲ್ಲಿ ಗಂಗಾನದಿಯೂ ಇರುವುದು. ಅದರಲ್ಲಿ ಮಿಂದ ಮಾನವನು ಕೂಡಲೆ ಸಕಲ ಪಾಪಗಳಿಂದ ಮುಕ್ತನಾಗುವನು.

೭. ಅಲ್ಲಿ ಭಕ್ತಿಯಿಂದ ಪಿತೃಗಳನ್ನುದ್ದೇಶಿಸಿ ಶ್ರಾದ್ಧಮಾಡಿದರೆ ಆ ಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವುದು.

೮. ದ್ವಿಜವರ್ಯರೆ! ಆ ಶ್ರೇಷ್ಠವಾದ ತೀರ್ಥದಲ್ಲಿ ಮಾಡಿದ ದಾನವೂ, ಹೋಮ ಜಪಾದಿಗಳೂ ಅನಂತ ಫಲವನ್ನು ಕೊಡುವುವು.

೯–೧೦. ಒಂದಾನೊಂದು ಕಾಲದಲ್ಲಿ ಬೇಡನ ಶರದಿಂದ ತಾಡಿತವಾದ ಒಂದು ಹೆಣ್ಣು ಜಿಂಕೆಯು ಚೈತ್ರ ಶುಕ್ಲ ತದಿಗೆ ಭಾನುವಾರ ಯಮದೇವತಾಕವಾದ ಭರಣೀ ನಕ್ಷತ್ರದಲ್ಲಿ ಮಧ್ಯಾಹ್ನ ವೇಳೆಯಲ್ಲಿ ಆ ನೀರಿನಲ್ಲಿ ಪ್ರವೇಶಿಸಿ ಮಡಿಯಿತು.

೧೧. ಬಳಿಕ ಆ ಜಿಂಕೆಯು ಆ ನೀರಿನ ಮಾಹಾತ್ಮ್ಯೆಯಿಂದ ಮೇನಕೆಯೆಂಬ ಶಕ್ರನ ಸುಂದರಿಯಾದ ಅಪ್ಸರೆಯಾಯಿತು.

೧೨. ಆ ಮೇನಕೆಯು ಆ ತೀರ್ಥದ ಪ್ರಭಾವವನ್ನು ಸ್ಮರಿಸುತ್ತ ಅಲ್ಲಿಗೆ ಬಂದು ಚೈತ್ರ ಶುಕ್ಲ ತದಿಗೆ ಭಾನುವಾರ ಭರಣೀನಕ್ಷತ್ರದಲ್ಲಿ ಭಕ್ತಿಯಿಂದ ಮಿಂದಳು.

ಏಕದಾ ದಿವಸೇ ತಸ್ಮಿನ್ ಭ್ರಮಮಾಣೋ ಮುನೀಶ್ವರಃ ।
ವಿಶ್ವಾಮಿತ್ರ ಇತಿ ಖ್ಯಾತಸ್ತತ್ರಾಯಾತಸ್ತಪೋನ್ವಿತಃ ॥ ೧೩ ॥
ಸಾಽಪಿ ಸ್ವರ್ಗಾತ್ಸಮಾಯಾತಾ ದೇವತಾದರ್ಶನಾರ್ಥತಃ ।
ಪೂಜಯಿತ್ವಾಽಥ ತಂ ದೇವಂ ಪ್ರಸ್ಥಿತಾ ತ್ರಿದಿವಂ ಪ್ರತಿ ॥ ೧೪ ॥
ಸಾ ದೃಷ್ಟ್ವಾ ತಂ ಮುನಿಂ ತತ್ರ ಭ್ರಮಮಾಣಮಿತಸ್ತತಃ ।
ಯೌವನಸ್ಥಂ ಸುರೂಪಾಢ್ಯಂ ಪಂಚಬಾಣಮಿವಾಽಪರಂ ॥ ೧೫ ॥
ವ್ರತಪ್ರಭಾವಜೈರ್ವ್ಯಾಪ್ತಂ ತೇಜೋಭಿರ್ಭಾಸ್ಕರಂ ಯಥಾ ।
ಬಾಲ್ಯಾತ್ಪ್ರಭೃತಿ ಚೀರ್ಣೇನ ತಪಸಾ ದಗ್ಧಕಿಲ್ಬಿಷಂ ॥ ೧೬ ॥
ಸಾ ತಸ್ಯ ದರ್ಶನಾದೇವ ಕಾಮಬಾಣಪ್ರಪೀಡಿತಾ ।
ಸಾನಂದಾ ಸುರತಾರ್ಥಾಯ ಸಮೀಪಂ ಸಮುಪಾದ್ರವತ್ ॥ ೧೭ ॥
ಸ ದೃಷ್ಟ್ವಾಽದೃಷ್ಟಪೂರ್ವಾಂ ತಾಂ ಮಾರ್ಗಪೃಚ್ಛಾಕೃತೇ ತತಃ ।
ಸಮ್ಮುಖಃ ಪ್ರಯಯೌ ತೂರ್ಣಂ ಪ್ರಹೃಷ್ಟೇನಾಂತರಾತ್ಮನಾ ॥ ೧೮ ॥
ಉವಾಚ ದೇಶಂ ತಾಂ ಪೃಚ್ಛನ್ ಸ್ತ್ರೀಧರ್ಮಾಂಶ್ಚ ವಿಶೇಷತಃ ।
ಶುಭಲಾಭೋಽಸ್ತು ತೇ ಭದ್ರೇ ಮನಸಾ ಕರ್ಮಣಾ ಗಿರಾ ॥ ೧೯ ॥

---

೧೩. ಒಂದಾನೊಂದು ದಿನ ತಪಸ್ವಿಯಾದ ವಿಶ್ವಾಮಿತ್ರ ಮುನಿಯು ಸಂಚರಿಸುತ್ತ ಅಲ್ಲಿಗೆ ಬಂದನು.

೧೪. ಆ ಮೇನಕೆಯೂ ದೇವತಾದರ್ಶನಕ್ಕಾಗಿ ಸ್ವರ್ಗದಿಂದ ಬಂದು ಆ ಮಹೇಶ್ವರನನ್ನು ಪೂಜಿಸಿ ಸ್ವರ್ಗಕ್ಕೆ ಹೊರಟಳು.

೧೫-೧೭. ಅವಳು ಇಲ್ಲಿ ಅಲ್ಲಿ ಸಂಚರಿಸುತ್ತಿರುವವನೂ, ಯುವಕನೂ, ಸುಂದರನೂ, ಮತ್ತೊಬ್ಬ ಮನ್ಮಥನಂತಿರುವವನೂ, ವ್ರತಪ್ರಭಾವದಿಂದುಂಟಾದ ತೇಜಸ್ಸಿನಿಂದ ಭಾಸ್ಕರನಂತೆ ವ್ಯಾಪ್ತನೂ, ಬಾಲ್ಯಮೊದಲ್ಗೊಂಡು ಸಂಪಾದಿಸಿದ ತಪಸ್ಸಿನಿಂದ ಪರಿಹೃತವಾದ ಪಾಪವುಳ್ಳವನೂ ಆದ ಆ ವಿಶ್ವಾಮಿತ್ರನನ್ನು ಕಂಡು ಕೂಡಲೆ ಆನಂದದಿಂದ ಕಾಮಪೀಡಿತಳಾಗಿ ಸುರತಕ್ಕೋಸ್ಕರ ಸಮೀಪಕ್ಕೆ ಹೋದಳು.

೧೮. ಆ ವಿಶ್ವಾಮಿತ್ರನೂ ಹಿಂದೆ ನೋಡದಿರುವ ಅವಳನ್ನು ಕಂಡು ಸಂತೋಷಗೊಂಡ ಮನಸ್ಸಿನಿಂದ ದಾರಿಯನ್ನು ಕೇಳುವುದಕ್ಕಾಗಿ ಎದುರಾಗಿ ಹೋದನು.

೧೯. ಅವನು ಅವಳನ್ನು ಕುರಿತು ದೇಶವನ್ನೂ, ಸ್ತ್ರೀಧರ್ಮಗಳನ್ನೂ ಕೇಳುತ್ತ ಇಂತೆಂದನು. ಭದ್ರಳೆ! ನಿನಗೆ ಮನೋವಾಕ್ಕರ್ಮಗಳಿಂದ ಮಂಗಳವು ಲಭಿಸಲಿ.

ಸದೈವ ವಾಸುದೇವಸ್ಯ ಭಕ್ತಿಶ್ಚಾಽವ್ಯಭಿಚಾರಿಣೀ ।
ಕಚ್ಚಿತ್ತ್ವಂ ವರ್ತಸೇ ಪುತ್ರಿ ಪತಿಪಾದಪರಾಯಣಾ ।
ಚಾರಿತ್ರವಿನಯೋಪೇತಾ ಸರ್ವದಾ ಪ್ರಿಯವಾದಿನೀ ॥ ೨೦ ॥
ಕಚ್ಚಿತ್ತ್ವಂ ಸರ್ವದಾಭೀಷ್ಟಾ ಪತ್ಯುರ್ದಾನೈಸ್ತಥಾರ್ಚನೈಃ ।
ಬಂಧೂನ್ ಸ್ವ ಮಿತ್ರವರ್ಗಂ ಚ ತತ್ಪುರಃ ಪೃಷ್ಠತೋಽಪಿ ವಾ ॥ ೨೧ ॥
ಕಚ್ಚಿದ್ಭರ್ತರಿ ಸಂಸುಪ್ತೇ ತ್ವಂ ನಿದ್ರಾವಶಮೇಷ್ಯಸಿ ।
ಉತ್ಥಾನಮುಪ್ರಬುದ್ಧೇ ಚ ಕರೋಷಿ ವರವರ್ಣಿನಿ ॥ ೨೨ ॥
ಕಚ್ಚಿತ್ಪ್ರಾತಃ ಸಮುತ್ಥಾಯ ಕರೋಷಿ ಗೃಹಮಾರ್ಜನಂ ।
ಸ್ವಯಮೇವ ವರಾರೋಹೇ ಮಂಡನಂ ಚೋಪಮಂಡನಂ ॥ ೨೩ ॥
ಕಚ್ಚಿದ್ದೇವಾನ್ನಮಸ್ಕೃತ್ಯ ಗುರುಂ ಚ ತದನಂತರಂ ।
ಕರೋಷಿ ತ್ವಂ ಪ್ರಾಣಯಾತ್ರಾಂ ದತ್ವಾಽನ್ನಂ ಶಕ್ತಿತೋ ಜಲಂ ॥ ೨೪ ॥
ಕಚ್ಚಿದಸ್ತಂಗತೇ ಸೂರ್ಯೇ ನಾಽನ್ನಮಶ್ನಾಸಿ ಭಾಮಿನಿ ।
ಅದತ್ವಾ ವಾ ಸ್ವಭೃತ್ಯೇಭ್ಯಃ ಸಾಧುಭ್ಯಶ್ಚ ವಿಶೇಷತಃ ॥ ೨೫ ॥
ಕಚ್ಚಿತ್ಪಿಬಸಿ ಪಾನೀಯಂ ಸಪ್ತವಾರವಿಶೋಧಿತಂ ।
ನಿಬಿಡೇನ ಸ್ವವಸ್ತ್ರೇಣ ಪಾಲಯಂತೀ ಜಲೋದ್ಭವಾನ್ ॥ ೨೬ ॥

---

೨೦. ಯಾವಾಗಲೂ ವಾಸುದೇವನಲ್ಲಿ ನಿಶ್ಚಲವಾದ ಭಕ್ತಿಯುಂಟಾಗಲಿ. ಮಗು! ನೀನು ಪತಿಪಾದದಲ್ಲಿ ನಿರತಳೂ, ಚಾರಿತ್ರವಿನಯಗಳಿಂದ ಕೂಡಿದವಳೂ, ಯಾವಾಗಲೂ ಪ್ರಿಯವಾದ ಮಾತನ್ನಾಡುವವಳೂ ಆಗಿರುವೆಯೊ?

೨೧. ನೀನು ಯಾವಾಗಲೂ ಪತಿಗೆ ಪ್ರಿಯಳಾಗಿರುವೆಯೊ? ಅವನ ಮುಂದೆ ಅಥವಾ ಹಿಂದೆ ಬಂಧುಗಳನ್ನೂ, ಮಿತ್ರರನ್ನೂ ದಾನಾರ್ಚನೆಗಳಿಂದ ಸಂತೋಷಗೊಳಿಸುವೆಯೊ?

೨೨. ಪತಿಯು ಮಲಗಲು ನೀನು ನಿದ್ರಿಸುವೆಯೊ? ಅವನು ಏಳುವುದಕ್ಕಿಂತ ಮುಂಚೆ ಏಳುವೆಯೊ?

೨೩–೨೪. ಬೆಳಗ್ಗೆ ಎದ್ದು ಸ್ವಂತವಾಗಿ ಮನೆಯನ್ನು ಗುಡಿಸಿ ಅಲಂಕರಿಸುವೆಯೊ? ದೇವತೆಗಳನ್ನು ವಂದಿಸಿ ಅನಂತರ ಗುರುವನ್ನು ನಮಸ್ಕರಿಸಿ ಶಕ್ತ್ಯನುಸಾರ ಅನ್ನೋದಕಗಳನ್ನು ದಾನಮಾಡಿ ಜೀವಿಸುತ್ತಿರುವೆಯೊ?

೨೫. ಸುಂದರಿಯೆ! ಸೂರ್ಯನು ಮುಳುಗಲು ಭೃತ್ಯರಿಗೂ, ಸಾಧುಗಳಿಗೂ ದಾನಮಾಡದೆ ಊಟಮಾಡುವುದಿಲ್ಲವೊ?

೨೬. ಜಲಜಂತುಗಳನ್ನು ಕಾಪಾಡುವುದಕ್ಕಾಗಿ ದಟ್ಟವಾದ ಬಟ್ಟೆಯಿಂದ ಏಳುಸಾರಿ ಶೋಧಿಸಿದ ನೀರನ್ನು ಕುಡಿಯುತ್ತಿರುವೆಯೋ?

ಕಚ್ಚಿದ್ದಯಾಸಮೋಪೇತಾ ಗಾತ್ರಕ್ಲೇಶಕರಾನಪಿ ।
ಯೂಕಾಮತ್ಕುಣದಂಶಾದೀನ್ಪುತ್ರವತ್ಪರಿರಕ್ಷಸಿ ॥ ೨೭ ॥
ಕಚ್ಚಿತ್ಸಾಧುಮುಖಾನ್ನಿತ್ಯಂ ಶಿವಧರ್ಮಂ ಸುಭಕ್ತಿತಃ ।
ಶೃಣೋಷಿ ಭಕ್ತಿತೋ ಭದ್ರೇ ಪ್ರಕರೋಷಿ ಚ ಸಾದರಂ ॥ ೨೮ ॥
ಕ್ವಚಿಚ್ಛ್ರುತ್ವಾಗಮಂ ಪುಣ್ಯಂ ಪ್ರಕರೋಷಿ ಚ ಪೂಜನಂ ।
ಶಾಸ್ತ್ರಸ್ಯ ವಾಚಕಸ್ಯಾಽಪಿ ವ್ಯಾಖ್ಯಾತುಶ್ಚ ವಿಶೇಷತಃ ॥ ೨೯ ॥
ಕಚ್ಚಿತ್ಪುರಾಣಶಾಸ್ತ್ರಾಣಿ ಪ್ರಣೀತಾನಿ ಜನೇಶ್ವರೈಃ ।
ಸಂಲೇಖ್ಯಾಕ್ಷರರಮ್ಯಾಣಿ ಸಾಧುಭ್ಯಃ ಸಂಪ್ರಯಚ್ಛಸಿ ॥ ೩೦ ॥
ಯಃ ಶ್ರುತ್ವಾ ಸರ್ವಶಾಸ್ತ್ರಾಣಿ ನಿಷ್ಕ್ರಯಂ ನ ಪ್ರಯಚ್ಛತಿ ।
ಶಾಸ್ತ್ರಚೌರಃ ಸ ವಿಜ್ಞೇಯೋ ನ ಚೈವಾಪ್ನೋತಿ ತತ್ಫಲಂ ॥ ೩೧ ॥
ಕಚ್ಚಿಚ್ಛಿವಾಲಯೇ ನೃತ್ಯಗೀತವಾದ್ಯಾದಿಕಾಃ ಕ್ರಿಯಾಃ ।
ಬಲಿಪೂಜೋಪಹಾರಾಂಶ್ಚ ತ್ವಂ ಕರೋಷಿ ಚ ಶಕ್ತಿತಃ ॥ ೩೨ ॥
ಕಚ್ಚಿತ್ಪ್ರಾವರಣಂ ವಸ್ತ್ರಂ ಸುಭಗೇ ಸರ್ವಮೇವ ಚ ।
ಸಂಪ್ರಯಚ್ಛಸಿ ಸಾಧುಭ್ಯಃ ಪ್ರಣಿಪಾತಪುರಃಸರಂ ॥ ೩೩ ॥

---

೨೭. ಶರೀರಕ್ಕೆ ಕಷ್ಟವನ್ನುಂಟುಮಾಡುವ ಹೇನು, ತಿಗಣೆ, ನೊಣ ಮೊದಲಾದುವುಗಳಲ್ಲಿ ದಯೆಯುಳ್ಳವಳಾಗಿ ಅವುಗಳನ್ನು ಮಗನಂತೆ ಕಾಪಾಡುವೆಯೊ?

೨೮. ಸಾಧುಗಳ ಮುಖದಿಂದ ಶಿವಧರ್ಮವನ್ನು ಭಕ್ತಿಯಿಂದ ಕೇಳುತ್ತ ಪ್ರೀತಿಯಿಂದ ಅದನ್ನು ಆಚರಿಸುತ್ತಿರುವೆಯೊ?

೨೯. ಪುಣ್ಯಕರವಾದ ಶಾಸ್ತ್ರವನ್ನು ಶ್ರವಣಮಾಡಿ ಆ ಶಾಸ್ತ್ರವನ್ನೂ, ಅದನ್ನು ಹೇಳುವವನನ್ನೂ ಪೂಜಿಸುವೆಯೊ?

೩೦. ಮಹನೀಯರು ರಚಿಸಿದ ಪುರಾಣಶಾಸ್ತ್ರಗಳನ್ನು ರಮ್ಯಾಕ್ಷರಗಳಿಂದ ಬರೆದು ಸಾಧುಗಳಿಗೆ ದಾನಮಾಡುವೆಯೊ?

೩೧. ಸಕಲ ಶಾಸ್ತ್ರಗಳನ್ನು ಶ್ರವಣಮಾಡಿ ಅದಕ್ಕೆ ಪ್ರತೀಕಾರಮಾಡದವನು ಶಾಸ್ತ್ರಚೋರನೆನ್ನಿಸಿಕೊಳ್ಳುವನು. ಅವನು ಅದರ ಫಲವನ್ನು ಪಡೆಯುವುದಿಲ್ಲ.

೩೨. ನೀನು ಶಿವಾಲಯದಲ್ಲಿ ಶಕ್ತ್ಯನುಸಾರ ನೃತ್ಯ, ಗೀತ, ವಾದ್ಯ ಮೊದಲಾದುವುಗಳನ್ನೂ, ಬಲಿ, ಪೂಜೆಗಳನ್ನೂ ಮಾಡುತ್ತಿರುವೆಯೊ?

೩೩. ಸುಂದರಿಯೆ! ಸಜ್ಜನರಿಗೆ ನಮಸ್ಕಾರಮಾಡಿ ಹೊದ್ದಿಕೆಯ ವಸ್ತ್ರಗಳನ್ನು ದಾನಮಾಡುವಿಯೊ?

ನ್ವೃಥಾ ಪರ್ಯಟನಂ ನಿತ್ಯಂ ಕಚ್ಚಿನ್ನ ಪರಮಂದಿರೇ ।
ತ್ವಂ ಕರೋಷಿ ವಿಶಾಲಾಕ್ಷಿ ವಿಶೇಷೇಣ ನಿಶಾಗಮೇ ॥ ೩೪ ॥
ಕಚ್ಚಿನ್ನಾಶ್ನಾಸಿ ಭದ್ರೇ ತ್ವಂ ಸ್ವಭರ್ತರಿ ಬುಭುಕ್ಷಿತೇ ।
ಆಜ್ಞಾಭಂಗಂ ಪ್ರಯತ್ನೇನ ಕಚ್ಚಿತ್ತತ್ರ ಪ್ರರಕ್ಷಸಿ ॥ ೩೫ ॥
ಕಚ್ಚಿತ್ಪ್ರಕುಪಿತೇ ಕಾಂತೇ ನೋತ್ತರಾಣಿ ಪ್ರಯಚ್ಛಸಿ ।
ತಸ್ಯ ಕೋಪಪ್ರಣಾಶಾರ್ಥಂ ಪ್ರಿಯಂ ಕಚ್ಚಿಚ್ಚ ಜಲ್ಪಸಿ ॥ ೩೬ ॥
ಕಚ್ಚಿತ್ತ್ವಂ ಪ್ರೋಷಿತೇ ಕಾಂತೇ ಮಲಿನಾಂಬರಧಾರಿಣೀ ।
ಜಾಯಸೇ ಚ ತಥಾ ದೀನಾ ವಿವರ್ಣವದನಾ ಕೃಶಾ ॥ ೩೭ ॥
ಕಚ್ಚಿನ್ಮಂದಿರಪೃಷ್ಠೇ ತ್ವಂ ನ ಧತ್ಸೇ ಭಿನ್ನಭಾಜನಂ ।
ಉಚ್ಛಿಷ್ಟಂ ವಾ ಜನೈಸ್ತ್ಯಕ್ತಮಪಿ ಕಾರ್ಯೋಪಕಾರಕಂ ॥ ೩೮ ॥
ಕಚ್ಚಿದ್ವ್ರಜಸಿ ನೋ ರಾತ್ರೌ ಜಾಗರೇಷು ಕಥಾಸು ಚ ।
ನಿರ್ಝರೇಷು ವಿವಿಕ್ತೇಷು ಪುಲಿನೇಷು ವನೇಷು ಚ ॥ ೩೯ ॥
ಕಚ್ಚಿನ್ನ ಕುರುಷೇ ಮೈತ್ರೀಂ ಬಂಧಕೀಭಿಃ ಸಮಂ ಶುಭೇ ।
ಧಾತ್ರೀಭಿರ್ಮಾಲಿಕಸ್ತ್ರೀಭೀ ರಜಕೀಭಿಶ್ಚ ಭಾಮಿನಿ ॥ ೪೦ ॥

---

೩೪. ವಿಶಾಲಾಕ್ಷಿ! ನೀನು ರಾತ್ರಿವೇಳೆ ನಿತ್ಯವೂ ಪರರಮನೆಯಲ್ಲಿ ಸಂಚರಿಸುವುದಿಲ್ಲವೊ?

೩೫. ನಿನ್ನ ಪತಿಯು ಹಸಿವುಗೊಂಡಿರುವಾಗ ನೀನು ಭುಂಜಿಸುವುದಿಲ್ಲವೊ? ಅವನ ಆಜ್ಞೆಯನ್ನು ಮೀರುವುದಿಲ್ಲವೊ?

೩೬. ಕಾಂತನು ಕುಪಿತನಾಗಿರುವಾಗ ಉತ್ತರಗಳನ್ನು ಕೊಡುವುದಿಲ್ಲವೊ? ಅವನ ಕೋಪಶಾಂತಿಗಾಗಿ ಹಿತವನ್ನು ನುಡಿಯುವೆಯೊ?

೩೭. ಪ್ರಿಯನು ದೇಶಾಂತರಕ್ಕೆ ಹೋಗಿರುವಾಗ ಮಲಿನವಸ್ತ್ರವನ್ನುಟ್ಟವಳೂ, ದೀನಳೂ, ಕಳೆಗುಂದಿದ ಮುಖವುಳ್ಳವಳೂ ಆಗುವೆಯೊ?

೩೮. ಮನೆಯ ಹಿಂಭಾಗದಲ್ಲಿ ಒಡೆದ ಪಾತ್ರೆಗಳನ್ನೂ, ಕಾರ್ಯಸಾಧಕವಾಗಿದ್ದರೂ ಜನರು ತ್ಯಜಿಸಿದ ಉಚ್ಛಿಷ್ಟವನ್ನೂ ಇಟ್ಟುಕೊಳ್ಳುವುದಿಲ್ಲವೊ?

೩೯. ರಾತ್ರಿವೇಳೆ ಜಾಗರಣೆ, ಕಥೆ, ಗಿರಿನದಿ, ರಹಸ್ಯಸ್ಥಳ, ಪುಲಿನ, ವನ ಇವುಗಳಿಗೆ ಹೋಗುವುದಿಲ್ಲವೊ?

೪೦. ಸುಂದರಿ! ನೀನು ವ್ಯಭಿಚಾರಿಣಿ, ದಾದಿ, ಹೂವು ಮಾರುವವಳು, ಅಗಸಗಿತ್ತಿ ಇವರೊಡನೆ ಸ್ನೇಹಮಾಡುವುದಿಲ್ಲವೊ?

**ಕಚ್ಚಿದ್ಧಾಸಿ ನಿತ್ಯಂ ತ್ವಂ ಮುಖಂ ಕುಂಕುಮರಂಜಿತಂ ।**
**ಶಿರಃ ಪುಷ್ಪಸಮಾಕೀರ್ಣಂ ನೇತ್ರೇ ಕಜ್ಜಲರಂಜತೇ ॥ ೪೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ವಿಶ್ವಾಮಿತ್ರಮೇನಕಾಸಮಾಗಮವರ್ಣನಂ"**
**ನಾಮ ದ್ವಿಚತ್ವಾರಿಂಶೋಽಧ್ಯಾಯಃ**

---

೪೧. ನಿತ್ಯವೂ ಕುಂಕುಮದಿಂದ ಅಲಂಕಾರಗೊಂಡ ಮುಖ, ಹೂವುಗಳಿಂದ ಕೂಡಿದ ತಲೆ, ಕಾಡಿಗೆಯಿಂದ ಅಲಂಕಾರಗೊಂಡ ಕಣ್ಣು ಇವುಗಳನ್ನು ಹೊಂದಿರುವೆಯೊ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಶ್ವಾಮಿತ್ರಮೇನಕಾಸಮಾಗಮವರ್ಣನ"ವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಚತ್ವಾರಿಂಶೋಽಧ್ಯಾಯಃ

### ವಿಶ್ವಾಮಿತ್ರಮೇನಕಾಸಂವಾದವರ್ಣನಂ

ಮೇನಕೋವಾಚ :—

ಅನ್ಯಾಸ್ತಾ ನಾಯಿಕಾ ವಿಪ್ರ ಯಾಸಾಂ ಧರ್ಮಸ್ತ್ವಯೋದಿತಃ ।
ಸ್ವೇಚ್ಛಾಚಾರವಿಹಾರಿಣ್ಯೋ ವಯಂ ವೇಶ್ಯಾ ದಿವೌಕಸಾಂ ॥ ೧ ॥
ಸ ತ್ವಂ ವದ ಮಹಾಭಾಗ ಕಸ್ಮಾದ್ದೇಶಾತ್ಸಮಾಗತಃ ।
ಮಮ ಚಿತ್ತಹರೋ ನಾಽಪಿ ತೀರ್ಥೇ ಧರ್ಮಿಷ್ಠಸಂಶ್ರಯೇ ॥ ೨ ॥
ತ್ವಾಂ ದೃಷ್ಟ್ವಾಽಹಂ ಮಹಾಭಾಗ ಕಾಮದೇವಸಮಾಕೃತಿಂ ।
ಪುಲಕಾಂಚಿತಸರ್ವಾಂಗೀ ಕಾಮಬಾಣಪ್ರಪೀಡಿತಾ ॥ ೩ ॥
ತಸ್ಮಾದ್ಭಜಸ್ವ ಮಾಂ ರಕ್ತಾಂ ನೋ ಚೇದ್ಯಾಸ್ಯಾಮಿ ಸಂಕ್ಷಯಂ ।
ಕಾಮಬಾಣಪ್ರದಗ್ಧಾ ವೈ ಪುರೋಽಪಿ ತವ ತಾಪಸ ।
ತತಃ ಸ್ತ್ರೀವಧಪಾಪೇನ ಲಿಪ್ಯಸೇ ತ್ವಂ ನ ಸಂಶಯಃ ॥ ೪ ॥

---

### ಕನ್ನಡದ ಅನುವಾದ

#### ವಿಶ್ವಾಮಿತ್ರಮೇನಕಾಸಂವಾದವರ್ಣನ

೧. ಮೇನಕೆಯು ಹೇಳುತ್ತಾಳೆ:—ಬ್ರಾಹ್ಮಣ! ನೀನು ಇತರ ನಾಯಿಕೆಯರ ಧರ್ಮವನ್ನು ಹೇಳಿರುವೆ. ನಾವು ಸೇಚ್ಛಾಚಾರದಿಂದ ವಿಹರಿಸುವ ದೇವತೆಗಳ ವೇಶ್ಯೆಯರು.

೨. ಮಹಾತ್ಮನೆ! ನನ್ನ ಮನಸ್ಸನ್ನು ಅಪಹರಿಸಿರುವ ನೀನು ಯಾವ ದೇಶದಿಂದ ಧರ್ಮಿಷ್ಠರಿಗೆ ಆಶ್ರಯವಾದ ಈ ತೀರ್ಥಕ್ಕೆ ಬಂದಿರುವೆ?

೩. ನಾನು ಮನ್ಮಥನಂತೆ ಆಕೃತಿಯುಳ್ಳ ನಿನ್ನನ್ನು ನೋಡಿ ರೋಮಾಂಚಗೊಂಡ ಸಮಸ್ತಾವಯವವುಳ್ಳವಳೂ, ಮನ್ಮಥನ ಬಾಣಗಳಿಂದ ವ್ಯಥೆಗೊಂಡವಳೂ ಆಗಿರುವೆನು.

೪. ಆದ್ದರಿಂದ ಅನುರಾಗಗೊಂಡ ನನ್ನನ್ನು ಉಪಭೋಗಿಸು. ಹಾಗೆಮಾಡದಿದ್ದರೆ ಮನ್ಮಥನ ಬಾಣದಿಂದ ದಗ್ಧಳಾದ ನಾನು ನಿನ್ನ ಮುಂದೆ ಮಡಿಯುವೆನು. ಅದರಿಂದ ನಿನಗೆ ನಿಶ್ಚಯವಾಗಿಯೂ 'ಸ್ತ್ರೀವಧೆಯಿಂದುಂಟಾದ ಪಾಪವು ಸಂಭವಿಸುವುದು.

ತಾಪಸ ಉವಾಚ:—

ವಯಂ ವ್ರತಧರಾಃ ಸುಭ್ರು ಬ್ರಹ್ಮಚರ್ಯಪರಾಯಣಾಃ ।
ಮೂರ್ಖಾಃ ಕಾಮವಿಧೌ ಭದ್ರೇ ನಿರತಾಃ ಶಿವಶಾಸನೇ ॥ ೫ ॥
ಸರ್ವೇಷಾಂ ವ್ರತಿನಾಂ ಮೂಲಂ ಬ್ರಹ್ಮಚರ್ಯಮುದಾಹೃತಂ ।
ವಿಶೇಷಾಚ್ಛಿವಭಕ್ತಾನಾಮೇವಂ ಭೂಯೋ ವಿಧಾಸ್ಯಸಿ ॥ ೬ ॥
ಅಪಿ ವರ್ಷಶತಂ ಸಾಗ್ರಂ ಯತ್ತಪಃ ಕುರುತೇ ವ್ರತೀ ।
ಸಕೃತ್ಸ್ತ್ರೀ ಸಂಗಮಾನ್ನಾಶಂ ಯಾತಿ ಪಾಶುಪತಸ್ಯ ಚ ॥ ೭ ॥
ಮಾಂ ಚ ಪಾಶುಪತಂ ಲಬ್ಧ್ವಾ ಕಸ್ಮಾತ್ತ್ವಂ ಭೀರು ಭಾಷಸೇ ।
ಈದೃಕ್ಪಾಪತಮಂ ಕರ್ಮ ಗರ್ಹಿತಂ ಶಿವಶಾಸನೇ ॥ ೮ ॥
ಯಃ ಸ್ತ್ರೀಂ ಭಜತಿ ಪಾಪಾತ್ಮಾ ವೃಥಾ ಪಾಶುಪತವ್ರತೀ ।
ಸೋಽತೀತಾನ್ದಶ ಚಾದಾಯ ಪುರುಷಾನ್ನರಕೇ ಪಚೇತ್ ॥ ೯ ॥
ಆಸ್ತಾಂ ತಾವತ್ಸಮಾಸಂಗಂ ಸಂಸ್ಪರ್ಶಂ ಚ ಪರಾನನೇ ।
ಸಂಭಾಷಮಪಿ ಪಾಪಾಯ ಸ್ತ್ರೀಭಿಃ ಪಾಶುಪತಸ್ಯ ಚ ॥ ೧೦ ॥

---

೫. ತಾಪಸನು ಹೇಳುತ್ತಾನೆ:—ಸುಂದರಿ! ನಾವು ವ್ರತವನ್ನು ಧರಿಸಿದವರೂ, ಬ್ರಹ್ಮಚರ್ಯನಿರತರೂ, ಕಾಮವಿಧಿಯನ್ನು ಅರಿಯದವರೂ, ಶಿವನ ಶಾಸನದಲ್ಲಿ ಆಸಕ್ತರೂ ಆಗಿರುವೆವು.

೬. ಸಕಲವ್ರತಿಗಳಿಗೂ ಬ್ರಹ್ಮಚರ್ಯೆಯು ಮೂಲವಾದುದು. ಆದರಲ್ಲಿಯೂ ವಿಶೇಷವಾಗಿ ಶಿವಭಕ್ತರಿಗೆ ಅದು ಮೂಲವಾದುದು. ನೀನು ಮರಳಿ ಹೀಗೆ ಮಾಡಬೇಡ.

೭. ಶಿವಭಕ್ತನಾದ ವ್ರತಿಯು ನೂರು ವರ್ಷಗಳಿಗಿಂತ ಹೆಚ್ಚುಕಾಲ ತಪಸ್ಸನ್ನು ಮಾಡಿದ್ದರೂ ಆ ತಪಸ್ಸು ಒಂದುಸಾರಿ ಸ್ತ್ರೀ ಸಹವಾಸದಿಂದ ಹಾಳಾಗುವುದು.

೮. ಭಯಶೀಲಳೆ! ನೀನು ಪಾಶುಪತನಾದ ನನ್ನಲ್ಲಿ ಅತ್ಯಾಶೆಯುಳ್ಳವಳಾಗಿ ಏಕೆ ಹೀಗೆ ಮಾತಾಡುತ್ತಿರುವೆ? ಶಿವಶಾಸನದಲ್ಲಿ ಇಂತಹ ಪಾಪಕರ್ಮವು ನಿಂದಿತವಾಗಿರುವುದು.

೯. ಪಾಶುಪತವ್ರತವನ್ನು ಧರಿಸಿದ ಪಾಪಿಷ್ಠನಾದ ಯಾವ ಮಾನವನು ಹೆಂಗಸನ್ನು ಉಪಭೋಗಿಸುವನೊ, ಅವನು ಹಿಂದಿನ ಹತ್ತು ತಲೆಯವರೊಡನೆ ನರಕದಲ್ಲಿ ದುಃಖಗೊಳ್ಳುವನು.

೧೦. ಪಾಶುಪತನಿಗೆ ಸ್ತ್ರೀ ಸಂಗವು ಅಂತಿರಲಿ. ಸ್ತ್ರೀಯ ಸ್ಪರ್ಶಸಂಭಾಷಣೆಗಳೂ ಪಾಪವನ್ನುಂಟುಮಾಡುವುವು.

ತಸ್ಮಾದ್ದ್ರುತತರಂ ಗಚ್ಛ ಸ್ಥಾನಾದಸ್ಮಾದ್ವರಾಂಗನೇ ।
ಯತ್ರಾಽವಾಪ್ಸ್ಯಸಿ ಚಾಽಭೀಷ್ಟಂ ತತ್ರ ತ್ವಂ ಗಂತುಮರ್ಹಸಿ . ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಶ್ವಾಮಿತ್ರಮೇನಕಾಸಂವಾದವರ್ಣನಂ"
ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

೧೧. ಸುಂದರಿ! ಆದ್ದರಿಂದ ನೀನು ಶೀಘ್ರವಾಗಿ ಇಲ್ಲಿಂದ ಹೊರಡು. ನಿನ್ನ ಅಭೀಷ್ಟವು ಎಲ್ಲಿ ನೆರವೇರುವುದೊ, ಅಲ್ಲಿಗೆ ತೆರಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಶ್ವಾಮಿತ್ರಮೇನಕಾಸಂವಾದವರ್ಣನ"ವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ವಿಶ್ವಾಮಿತ್ರೇಶ್ವರಮಾಹಾತ್ಮ್ಯವರ್ಣನಂ

ಮೇನಕೋವಾಚ :—

ನೂನಂ ಹಿ ಕಾಮಧರ್ಮೇ ತ್ವಂ ನ ಪ್ರವೀಣೋ ಮಹಾದ್ಯುತೇ ।
ತೇನ ಮಾಮೀದೃಶೈರ್ವಾಕ್ಯೈರ್ನಿವಾರಯಸಿ ರಾಗಿಣೀಂ ॥ ೧ ॥

ಸೂತ ಉವಾಚ :—

ಏವಮುಕ್ತಸ್ತತೋ ಭೂಯೋ ವಿಶ್ವಾಮಿತ್ರೋಽಬ್ರವೀದಿದಂ ।
ಕೋಪೇನ ಮಹತಾ ಯುಕ್ತೋ ನಿಃಸ್ಪೃಹಸ್ತತ್ಪರಿಗ್ರಹೇ ॥ ೨ ॥

ವಿಶ್ವಾಮಿತ್ರ ಉವಾಚ :—

ತ್ವಂ ಜೀವ ಗಚ್ಛ ವಾ ಮೃತ್ಯುಂ ನಾಽಹಂ ಕರ್ತಾಽಸ್ಮಿ ತೇ ವಚಃ ।
ವ್ರತನಾಶಾತ್ತು ಯತ್ಪಾಪಮಧಿಕಂ ಸ್ತ್ರೀವಧಾದ್ಭವೇತ್ ॥ ೩ ॥
ಪ್ರಾಯಶ್ಚಿತ್ತಂ ಬುಧೈರುಕ್ತಂ ವ್ರತಿನಾಂ ಸ್ತ್ರೀವಧೇ ಕೃತೇ ।
ನ ಸಂಗಾತ್ತು ಪುನಸ್ತಾಸಾಂ ತಸ್ಮಾತ್ತ್ವಂ ಗಂತುಮರ್ಹಸಿ ॥ ೪ ॥

---

## ಕನ್ನಡದ ಅನುವಾದ

### ವಿಶ್ವಾಮಿತ್ರೇಶ್ವರಮಾಹಾತ್ಮ್ಯವರ್ಣನ

೧. ಮೇನಕೆಯು ಹೇಳುತ್ತಾಳೆ:—ತೇಜಸ್ವಿಯೆ ! ನೀನು ನಿಶ್ಚಯವಾಗಿಯೂ ಕಾಮಧರ್ಮದಲ್ಲಿ ನಿಪುಣನಲ್ಲ. ಆದ್ದರಿಂದ ನಿನ್ನಲ್ಲಿ ಅನುರಾಗವುಳ್ಳ ನನ್ನನ್ನು ಇಂತಹ ಮಾತುಗಳಿಂದ ತಡೆಯುತ್ತಿದ್ದೀಯೆ.

೨. ಸೂತನು ಹೇಳುತ್ತಾನೆ:—ಅವಳು ಹೀಗೆನ್ನಲು ವಿಶ್ವಾಮಿತ್ರನು ಅವಳನ್ನು ಸ್ವೀಕರಿಸುವುದರಲ್ಲಿ ಆಶೆಯಿಲ್ಲದವನಾಗಿ ಅತಿಕೋಪದಿಂದ ಇಂತೆಂದನು.

೩. ವಿಶ್ವಾಮಿತ್ರನು ಹೇಳುತ್ತಾನೆ :—ನೀನು ಬದುಕು. ಅಥವಾ ಮೃತಳಾಗು. ನಾನು ನಿನ್ನ ಮಾತನ್ನು ನಡೆಯಿಸುವುದಿಲ್ಲ. ಸ್ತ್ರೀವಧೆಗಿಂತ ವ್ರತನಾಶದಿಂದ ಅಧಿಕ ಪಾಪವುಂಟಾಗುವುದು.

೪. ವ್ರತಿಗಳು ಸ್ತ್ರೀಯನ್ನು ವಧಿಸಿದರೆ ಅವರಿಗೆ ವಿದ್ವಾಂಸರು ಪ್ರಾಯಶ್ಚಿತ್ತವನ್ನು ಹೇಳಿರುವರು. ಸ್ತ್ರೀ ಸಂಗಕ್ಕೆ ಪ್ರಾಯಶ್ಚಿತ್ತವನ್ನು ಹೇಳಲಿಲ್ಲ. ಆದ್ದರಿಂದ ನೀನು ಹೊರಡು.

ನ ಕೇವಲಂ ವ್ರತೋಪೇತಾಃ ಸ್ತ್ರೀ ಸಂಗಾತ್ಪಾಪಮಾಪ್ನುಯುಃ ।
ವ್ರತಬಾಹ್ಯಾ ಅಪಿ ನರಾಃ ಸಕ್ತಾಃ ಸ್ತ್ರೀಷು ಪತಂತ್ಯಧಃ ॥ ೫ ॥
ಸಂಸಾರಭ್ರಮಣಂ ನಾರೀ ಪ್ರಥಮೇಽಪಿ ಸಮಾಗಮೇ ।
ವಹ್ನಿಪ್ರದಕ್ಷಿಣಾವ್ಯಾಜನ್ಯಾಯೇನೈವ ಪ್ರದರ್ಶಯೇತ್ ॥ ೬ ॥
ತಸ್ಮಾತ್ಸ್ತ್ರೀಭಿಃ ಸಮಂ ಪ್ರಾಜ್ಞಃ ಸಂಭಾಷಾಮಪಿ ವರ್ಜಯೇತ್ ।
ಆಸ್ತಾಂ ತಾವತ್ಸಮಾಸಂಗಂ ಯ ಇಚ್ಛೇಚ್ಛ್ರೇಯ ಆತ್ಮನಃ ॥ ೭ ॥
ಅಂಗಾರಸದೃಶಾ ನಾರೀ ಘೃತಕುಂಭಸಮಃ ಪುಮಾನ್ ।
ಅಸ್ಪರ್ಶಾದ್ದೃಢತಾಮೇತಿ ತತ್ಸಂಪರ್ಕಾದ್ವಿಲೀಯತೇ ॥ ೮ ॥
ಸ್ತ್ರಿಯೋ ಮೂಲಮನರ್ಥಾನಾಂ ಸರ್ವೇಷಾಂ ಪ್ರಾಣಿನಾಂ ಭುವಿ ।
ತಸ್ಮಾತ್ತ್ಯಾಜ್ಯಾಃ ಸುದೂರೇಣ ತಾಃ ಸ್ವರ್ಗಸ್ಯ ನಿರೋಧಕಾಃ ॥ ೯ ॥
ಕುಲೀನಾ ವಿತ್ತವತ್ಯಶ್ಚ ನಾಥವತ್ಯೋಽಪಿ ಯೋಷಿತಃ ।
ಏಕಸ್ಮಿನ್ನಂತರೇ ರಾಗಂ ಕುರ್ವಂತ್ಯೇತಾಃ ಸುಚಂಚಲಾಃ ॥ ೧೦ ॥
ನ ಸ್ತ್ರೀಭ್ಯಃ ಕಿಂಚಿದನ್ಯದ್ಧಿ ಪಾಪಾಯ ವಿದ್ಯತೇ ಭುವಿ ।
ಯಾಸಾಂ ಸಂಗಂ ಸಮಾಸಾದ್ಯ ಸಂಸಾರೇ ಭ್ರಮತೇ ಜನಃ ॥ ೧೧ ॥

---

೫. ವ್ರತಿಗಳು ಮಾತ್ರ ಸ್ತ್ರೀಸಂಗದಿಂದ ಪಾಪವನ್ನು ಹೊಂದುವುದಿಲ್ಲ. ವ್ರತಬಾಹಿರರೂ ಸ್ತ್ರೀಯರಲ್ಲಿ ಆಸಕ್ತರಾದರೆ ಪತಿತರಾಗುವರು.

೬. ನಾರಿಯು ಪ್ರಥಮ ಸಮಾಗಮದಲ್ಲಿಯೇ ಅಗ್ನಿಪ್ರದಕ್ಷಿಣೆಯ ನೆಪದಿಂದ ಸಂಸಾರಭ್ರಮಣವನ್ನು ತೋರಿಸುವಳು.

೭. ಆದ್ದರಿಂದ ತನ್ನ ಶ್ರೇಯಸ್ಸನ್ನು ಬಯಸುವ ಪ್ರಾಜ್ಞನು ಸ್ತ್ರೀಯರ ಸಂಗವಿರಲಿ, ಅವರೊಡನೆ ಸಂಭಾಷಣೆಯನ್ನೂ ಮಾಡುವುದಿಲ್ಲ.

೮. ನಾರಿಯು ಬೆಂಕಿಯ ಕೆಂಡದಂತಿರುವಳು. ಪುರುಷನು ತುಪ್ಪದ ಕೊಡದಂತಿರುವನು. ಪುರುಷನು ಸ್ತ್ರೀ ಸ್ಪರ್ಶವನ್ನು ಮಾಡದಿದ್ದರೆ ದೃಢಕಾಯನಾಗಿರುವನು. ಅವಳ ಸಂಬಂಧದಿಂದ ಹಾಳಾಗುವನು (ಕರಗುವನು).

೯. ಲೋಕದಲ್ಲಿ ಸಕಲ ಪ್ರಾಣಿಗಳಿಗೂ ಹೆಂಗಸರು ಅನರ್ಥಕಾರಣರು. ಆದ್ದರಿಂದ ಸ್ವರ್ಗಕ್ಕೆ ಅಡ್ಡಿಯನ್ನುಂಟುಮಾಡುವ ಹೆಂಗಸರನ್ನು ದೂರದಿಂದಲೆ ತ್ಯಜಿಸಬೇಕು.

೧೦. ಕುಲೀನರೂ, ಧನಿಕರೂ, ರಕ್ಷಕರಿರುವವರೂ ಆದ ಹೆಂಗಸರು ಚಂಚಲಚಿತ್ತರಾಗಿ ಇತರ ಪುರುಷನಲ್ಲಿ ಅನುರಾಗಮಾಡುವರು.

೧೧. ಲೋಕದಲ್ಲಿ ಪಾಪಕಾರಣವು ಸ್ತ್ರೀಯರಿಗಿಂತ ಬೇರೆ ಯಾವುದೂ ಇಲ್ಲ. ಜನರು ಇವರ ಸಂಗವನ್ನು ಮಾಡಿ ಸಂಸಾರದಲ್ಲಿ ಅಲೆಯುತ್ತಿರುವರು.

ನೀಚೋಽಪಿ ಕುರುತೇ ಸೇವಾಂ ಯಸ್ತಾಸಾಂ ವಿಜನೇಷ್ವಥ ।
ವಿರೂಪಂ ವಾಽಪಿ ನೀಚಂ ವಾ ತಂ ಸೇವಂತೇ ಹಿ ತಾಃ ಸ್ತ್ರಿಯಃ ॥ ೧೨ ॥
ಅನರ್ಥತ್ವಾನ್ಮನುಷ್ಯಾಣಾಂ ಭಯಾತ್ಪರಿಜನಸ್ಯ ಚ ।
ಮರ್ಯಾದಾಯಾಮಮರ್ಯಾದಾಃ ಸ್ತ್ರಿಯಸ್ತಿಷ್ಠಂತಿ ಭರ್ತೃಷು ॥ ೧೩ ॥

ಸೂತ ಉವಾಚ :—

ಏವಂ ಸಂಭರ್ತ್ಸಿತಾ ತೇನ ಮೇನಕಾ ಕೋಪಸಂಯುತಾ ।
ಶಶಾಪ ತಂ ಮುನಿಶ್ರೇಷ್ಠಂ ಸ್ಫುರಮಾಣೋಷ್ಠಸಂಪುಟಾ ॥ ೧೪ ॥
ಯಸ್ಮಾತ್ತ್ವಯಾ ಪರಿತ್ಯಕ್ತಾ ಸಕಾಮಾಽಹಂ ಸುದುರ್ಮತೇ ।
ತ್ಯಜತಾ ಕಾಮಜಂ ಧರ್ಮಂ ತಸ್ಮಾಚ್ಛಾಪಂ ಗೃಹಾಣ ಮೇ ॥ ೧೫ ॥
ಅದ್ಯೈವ ಭವ ದುರ್ಬುದ್ಧೇ ವಲೀಪಲಿತಸಂಯುತಃ ।
ಜರಾಜರ್ಜರಿತಾಂಗಶ್ಚ ತುಚ್ಛದೃಷ್ಟಿರ್ವಿರಾಗಿತಃ ॥ ೧೬ ॥

ಸೂತ ಉವಾಚ :—

ಉಕ್ತಮಾತ್ರೇ ತು ವಚನೇ ತತ್ಕ್ಷಣಾನ್ಮುನಿಸತ್ತಮಃ ।
ಬಭೂವ ತಾದೃಶಃ ಸದ್ಯಸ್ತಯಾ ಯಾದೃಕ್ಪ್ರಕೀರ್ತಿತಃ ॥ ೧೭ ॥
ತತಃ ಕೋಪಪರೀತಾತ್ಮಾ ಸೋಽಪಿ ತಾಂ ಶಪ್ತುಮುದ್ಯತಃ ।
ಕಮಂಡಲೋರ್ಜಲಂ ಗೃಹ್ಯ ಸಂತಾಪಾದ್ರಕ್ತಲೋಚನಃ ॥ ೧೮ ॥

---

೧೨. ಹೆಂಗಸರು ರಹಸ್ಯದಲ್ಲಿ ತಮ್ಮನ್ನು ಸೇವಿಸುವವನು ಕುರೂಪಿಯಾಗಲಿ ನೀಚನಾಗಲಿ ಅವನನ್ನು ಸೇವಿಸುವರು.

೧೩. ಮರ್ಯಾದಾಹೀನರಾದ ಹೆಂಗಸರು ಮನುಷ್ಯರಿಗೆ ಅನರ್ಥವನ್ನುಂಟು ಮಾಡುವುದರಿಂದಲೂ, ಪರಿಜನರ ಭಯದಿಂದಲೂ ಪತಿಯ ವಿಷಯದಲ್ಲಿ ಮರ್ಯಾದೆಯಿಂದಿರುವರು.

೧೪. ಸೂತನು ಹೇಳುತ್ತಾನೆ:—ವಿಶ್ವಾಮಿತ್ರನು ಹೀಗೆ ಗದರಿಸಲು ಕುಪಿತೆಳಾದ ಮೇನಕೆಯು ಅದರುತ್ತಿರುವ ತುಟಿಗಳುಳ್ಳವಳಾಗಿ ಆ ಮುನಿವರ್ಯನನ್ನು ಹೀಗೆ ಶಪಿಸಿದಳು.

೧೫—೧೬. ದುರ್ಬುದ್ಧಿಯೆ! ನೀನು ಕಾಮಧರ್ಮವನ್ನು ತ್ಯಜಿಸಿ ಕಾಮುಕೆಳಾದ ನನ್ನನ್ನು ತ್ಯಜಿಸಿದ ಕಾರಣ ನನ್ನ ಶಾಪವನ್ನು ಸ್ವೀಕರಿಸು. ದುರ್ಬುದ್ಧಿಯೆ! ನೀನು ಈಗಲೆ ಸುಕ್ಕು ನೆರೆಕೂದಲುಳ್ಳವನೂ, ಮುಪ್ಪಿನಿಂದ ಶಿಥಿಲವಾದ ಅಂಗವುಳ್ಳವನೂ, ನೀಚನೋಟವುಳ್ಳವನೂ, ವಿರಾಗಿಯೂ ಆಗು.

೧೭—೧೮. ಸೂತನು ಹೇಳುತ್ತಾನೆ:—ಮೇನಕೆಯು ಹೀಗೆ ಹೇಳಿದ ಕೂಡಲೆ ಆ ವಿಶ್ವಾಮಿತ್ರಮುನಿವರ್ಯನು ಅವಳು ಹೇಳಿದಂತೆಯೇ ಆದನು. ಬಳಿಕ ಕುಪಿತನಾದ ಆ ಮುನಿಯೂ ಸಂಕಟದಿಂದ ಕೆಂಪು ಕಣ್ಣುಗಳುಳ್ಳವನಾಗಿ ಕಮಂಡಲುವಿನಿಂದ ನೀರನ್ನು ತೆಗೆದುಕೊಂಡು ಆ ಮೇನಕೆಯನ್ನು ಶಪಿಸಲುದ್ಯುಕ್ತನಾದನು.

ನಿರ್ದೋಷೋಽಪಿ ತ್ವಯಾ ಯಸ್ಮಾಚ್ಛಪ್ತೋಽಹಂ ಗಣಿಕಾಧಮೇ ।
ತಸ್ಮಾದ್ಭವ ತ್ವಮಪ್ಯಾಶು ಜರಾಜರ್ಜರಿತಾಂಗಿಕಾ ॥ ೧೯ ॥
ಸಾಽಪಿ ತದ್ವಚನಾತ್ಸದ್ಯಸ್ತಾದೃಗ್ರೂಪಾ ವ್ಯಜಾಯತ ।
ಯಾದೃಶೋಽಸೌ ಮುನಿಶ್ರೇಷ್ಠೋ ವಲೀಪಲಿತಗಾತ್ರಭೃತ್ ॥ ೨೦ ॥
ಅಥ ತಾದೃಕ್ಸ್ವರೂಪೇಣ ಸ್ನಾತಾ ತತ್ರ ಜಲಾಶಯೇ ।
ಭೂಯೋಽಪಿ ತಾದೃಶೀ ಜಾತಾ ಯಾದೃಶೀ ಸಂಸ್ಥಿತಾ ಪುರಾ ॥ ೨೧ ॥
ತದ್ದೃಷ್ಟ್ವಾ ಪರಮಾಶ್ಚರ್ಯಮತೀವ ತ್ವರಯಾನ್ವಿತಃ ।
ಸೋಽಪಿ ತತ್ರಾಕರೋತ್ಸ್ನಾನಂ ಸಂಜಾತಶ್ಚ ಯಥಾ ಪುರಾ ॥ ೨೨ ॥
ತತಸ್ತೌ ತೀರ್ಥಮಾಹಾತ್ಮ್ಯಾದ್ರೂಪೌದಾರ್ಯಗುಣಾನ್ವಿತೌ ।
ಮಿಥ ಆಮಂತ್ರ್ಯ ಸಂಹೃಷ್ಟೌ ಗತೌ ದೇಶಂ ಯಥೇಪ್ಸಿತಂ ॥ ೨೩ ॥
ಏವಂ ತೀರ್ಥಸ್ಯ ಮಾಹಾತ್ಮ್ಯಂ ವಿಜ್ಞಾಯ ಭಗವಾನೃಷಿಃ ।
ಲಿಂಗಂ ಸಂಸ್ಥಾಪಯಾಮಾಸ ದೇವದೇವಸ್ಯ ಶೂಲಿನಃ ॥ ೨೪ ॥
ತಪಶ್ಚಕಾರ ಸುಮಹತ್ತಸ್ಮಿಂಸ್ತೀರ್ಥವರೇ ತದಾ ।
ಕುಶಸ್ತಂಬೇನ ಕೃತವಾಂಸ್ತತ್ಸರೋ ವಿಪುಲಂ ವಿಭುಃ ॥ ೨೫ ॥
ತತ್ರ ಸ್ನಾತ್ವಾ ನರೋ ಯಸ್ತು ಪೂಜಯೇಲ್ಲಿಂಗಮುತ್ತಮಂ ।
ವಿಶ್ವಾಮಿತ್ರೇಶ್ವರಂ ಖ್ಯಾತಂ ಸ ಗಚ್ಛೇಚ್ಛಿವಮಂದಿರಂ ॥ ೨೬ ॥

---

೧೯. ಅಧಮಗಣಿಕೆಯೆ! ನಿರ್ದುಷ್ಟನಾದ ನನ್ನನ್ನು ಶಪಿಸಿರುವುದರಿಂದ ನೀನೂ ಮುಪ್ಪಿನಿಂದ ಶಿಥಿಲಾಂಗಳಾಗು.

೨೦. ಆ ಮೇನಕೆಯೂ ಆ ಮುನಿಯ ಮಾತಿನಿಂದ ಕೂಡಲೆ ಅವನಂತೆಯೇ ಸುಕ್ಕು, ನೆರೆಗೂದಲುಗಳುಳ್ಳ ಶರೀರವುಳ್ಳವಳಾದಳು.

೨೧. ಬಳಿಕ ಅವಳು ಅದೇ ರೂಪದಿಂದ ಆ ಸರೋವರದಲ್ಲಿ ಮಿಂದವಳಾಗಿ ಮರಳಿ ಮೊದಲಿನಂತೆಯೇ ಆದಳು.

೨೨. ಆ ವಿಶ್ವಾಮಿತ್ರನೂ ಆ ಪರಮಾಶ್ಚರ್ಯವನ್ನು ಕಂಡು ಬೇಗನೆ ಅಲ್ಲಿ ಮಿಂದು ಮೊದಲಿನಂತೆಯೇ ಆದನು.

೨೩. ಹೀಗೆ ಅವರಿಬ್ಬರು ಆ ತೀರ್ಥದ ಮಾಹಾತ್ಮ್ಯೆಯಿಂದ ಶೌರ್ಯೌದಾರ್ಯಗಳಿಂದ ಸಹಿತರಾಗಿ ಪರಸ್ಪರ ಬೀಳುಕೊಂಡು ಇಷ್ಟವಾದ ದೇಶಕ್ಕೆ ತೆರಳಿದರು.

೨೪. ಹೀಗೆ ಆ ಪೂಜ್ಯನಾದ ವಿಶ್ವಾಮಿತ್ರನು ಆ ತೀರ್ಥದ ಮಾಹಾತ್ಮ್ಯೆಯನ್ನು ತಿಳಿದು ಅಲ್ಲಿ ಮಹೇಶ್ವರಲಿಂಗವನ್ನು ಸ್ಥಾಪಿಸಿದನು.

೨೫. ಮತ್ತು ಆ ತೀರ್ಥದಲ್ಲಿ ಮಹಾತಪಸ್ಸನ್ನು ಮಾಡಿ ಅದನ್ನು ದರ್ಭೆ ಗುಚ್ಛದಿಂದ ವಿಶಾಲಗೊಳಿಸಿದನು.

೨೬. ಆ ಸರೋವರದಲ್ಲಿ ಮಿಂದು ವಿಶ್ವಾಮಿತ್ರೇಶ್ವರಲಿಂಗವನ್ನು ಪೂಜಿಸುವವನು ಶಿವಾಲಯಕ್ಕೆ ಹೋಗುವನು.

ಅದ್ಯಾಽಪಿ ದೃಶ್ಯತೇ ತತ್ರ ಗಂಗೋದಕಸಮಂ ಜಲಂ ।
ಸರ್ವಪಾಪಹರಂ ಪುಣ್ಯಂ ಸರ್ವಕಾಮಪ್ರದಾಯಕಂ ॥ ೨೭ ॥
ಯಸ್ತತ್ರ ಕುರುತೇ ಸ್ನಾನಂ ಶ್ರದ್ಧಾಪೂತೇನ ಚೇತಸಾ ।
ಸ ದೇವಲೋಕಮಾಸಾದ್ಯ ಪಿತೃಭಿಃ ಸಹ ಮೋದತೇ ॥ ೨೮ ॥
ತತಃಪ್ರಭೃತಿ ತತ್ತೀರ್ಥಂ ಖ್ಯಾತಿಂ ಪ್ರಾಪ್ತಂ ಮಹೀತಲೇ ।
ಪಾತಾಲೇ ಸ್ವರ್ಗಲೋಕೇ ಚ ರೂಪೌದಾರ್ಯಪ್ರದಂ ನೃಣಾಂ ॥ ೨೯ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ವಿಶ್ವಾಮಿತ್ರೇಶಮಾಹಾತ್ಮ್ಯಂ ಸರ್ವಪಾತಕನಾಶನಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಶ್ವಾಮಿತ್ರೇಶ್ವರಮಾಹಾತ್ಮ್ಯವರ್ಣನಂ"
ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೨೭. ಅಲ್ಲಿ ಈಗಲೂ ಸಕಲ ಪಾಪಗಳನ್ನು ಪರಿಹರಿಸುವುದೂ, ಪುಣ್ಯಕರವೂ ಸಕಲೇಷ್ಟಾರ್ಥಗಳನ್ನು ಕೊಡುವುದೂ ಆದ ಗಂಗಾಜಲದಂತಿರುವ ನೀರು ಕಾಣಿಸುವುದು.

೨೮. ಅಲ್ಲಿ ಶ್ರದ್ಧೆಗೊಂಡ ಮನಸ್ಸಿನಿಂದ ಸ್ನಾನಮಾಡಿದವನು ದೇವಲೋಕವನ್ನು ಸೇರಿ ಪಿತೃಗಳೊಡನೆ ಆನಂದಪಡುವನು.

೨೯. ಅದು ಮೊದಲ್ಗೊಂಡು ಮಾನವರಿಗೆ ರೂಪೌದಾರ್ಯಗಳನ್ನೀಯುವ ಆ ತೀರ್ಥವು ಪಾತಾಳ, ಸ್ವರ್ಗ, ಭೂಮಿಗಳಲ್ಲಿ ಪ್ರಖ್ಯಾತವಾಯಿತು.

೩೦. ದ್ವಿಜವರ್ಯರೆ! ನೀವು ಕೇಳಿದ ಸಮಸ್ತಪಾಪಗಳನ್ನು ನಿವಾರಿಸುವ ವಿಶ್ವಾಮಿತ್ರೇಶನ ಮಾಹಾತ್ಮ್ಯೆಯನ್ನು ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಶ್ವಾಮಿತ್ರೇಶ್ವರಮಾಹಾತ್ಮ್ಯವರ್ಣನ"ವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ತ್ರಿಪುಷ್ಕರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರೈವಾಽಸ್ತಿ ದ್ವಿಜಶ್ರೇಷ್ಠಾಃ ಸುಪುಣ್ಯಂ ಪುಷ್ಕರತ್ರಯಂ ।
ಯತ್ರ ಪೂರ್ವಂ ತಪಸ್ತಪ್ತಮಾನರ್ತಾಧಿಪಭೂಭುಜಾ ॥ ೧ ॥
ಯಸ್ತತ್ರ ಕಾರ್ತಿಕೇ ಮಾಸಿ ಕೃತ್ತಿಕಾಸ್ಥೇ ನಿಶಾಕರೇ ।
ಮಧ್ಯಾಹ್ನೇ ಕುರುತೇ ಸ್ನಾನಂ ಸ ಗಚ್ಛತಿ ಪರಾಂ ಗತಿಂ ॥ ೨ ॥

ಋಷಯ ಊಚುಃ :—

ಕಥಂ ತತ್ರ ಸಮಾಯಾತಂ ಸುಪುಣ್ಯಂ ಪುಷ್ಕರತ್ರಯಂ ।
ಕಸ್ಮಿನ್ ಸ್ಥಾನೇ ಚ ವಿಜ್ಞೇಯಂ ಕೈಶ್ಚಿಹ್ನೈರ್ವದ ಸೂತಜ ॥ ೩ ॥

ಸೂತ ಉವಾಚ :—

ಅಹಂ ವಃ ಕೀರ್ತಯಿಷ್ಯಾಮಿ ಯೈಶ್ಚಿಹ್ನೈಃ ಪುಷ್ಕರತ್ರಯಂ ।
ಪ್ರಾಗ್ದೃಷ್ಟಂ ಮುನಿನಾ ತತ್ರ ವಿಶ್ವಾಮಿತ್ರೇಣ ಧೀಮತಾ ॥ ೪ ॥
ಪುರಾ ನಿವಸತಸ್ತಸ್ಯ ವಿಶ್ವಾಮಿತ್ರಸ್ಯ ಸನ್ಮುನೇಃ ।
ಸಂಪ್ರಾಪ್ತಾ ಕಾರ್ತಿಕೀ ಪುಣ್ಯಾ ಕೃತ್ತಿಕಾಯೋಗಸಂಯುತಾ ॥ ೫ ॥

---

## ಕನ್ನಡದ ಅನುವಾದ

### ತ್ರಿಪುಷ್ಕರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಅಲ್ಲಿಯೇ ಹಿಂದೆ ಆನರ್ತ ರಾಜನು ತಪಸ್ಸನ್ನುಮಾಡಿರುವ ಪುಣ್ಯಕರವಾದ ಮೂರು ಪುಷ್ಕರಗಳಿರುವುವು.

೨. ಕಾರ್ತಿಕಮಾಸದಲ್ಲಿ ಚಂದ್ರನು ಕೃತ್ತಿಕಾನಕ್ಷತ್ರದಲ್ಲಿರಲು ಮಧ್ಯಾಹ್ನ ವೇಳೆ ಅಲ್ಲಿ ಮಿಂದವನು ಉತ್ತಮಗತಿಯನ್ನು ಪಡೆಯುವನು.

೩. ಋಷಿಗಳು ಹೇಳುತ್ತಾರೆ :—ಸೂತ! ಪುಣ್ಯಕರವಾದ ಪುಷ್ಕರತ್ರಯವು ಅಲ್ಲಿಗೆ ಹೇಗೆ ಬಂದಿತು? ಅದು ಯಾವ ಸ್ಥಳದಲ್ಲಿದೆಯೆಂದು ಯಾವ ಚಿಹ್ನೆಗಳಿಂದ ತಿಳಿಯಬೇಕು, ಹೇಳು.

೪. ಸೂತನು ಹೇಳುತ್ತಾನೆ:—ಬುದ್ಧಿಶಾಲಿಯಾದ ವಿಶ್ವಾಮಿತ್ರನು ಅಲ್ಲಿ ಯಾವ ಚಿಹ್ನೆಗಳಿಂದ ಪುಷ್ಕರತ್ರಯವನ್ನು ನೋಡಿದನೆಂಬುದನ್ನು ನಿಮಗೆ ಹೇಳುವೆನು.

೫. ಹಿಂದೆ ವಿಶ್ವಾಮಿತ್ರಮುನಿಯು ಅಲ್ಲಿ ವಾಸಿಸುತ್ತಿರಲು ಕೃತ್ತಿಕಾನಕ್ಷತ್ರದಿಂದ ಕೂಡಿದ ಪುಣ್ಯಕರವಾದ ಪೂರ್ಣಿಮೆಯು ಸಂಭವಿಸಿತು.

ಸರ್ವತೀರ್ಥಮಯಂ ಕ್ಷೇತ್ರಂ ತದ್ವಿಜ್ಞಾಯ ತಪೋನಿಧಿಃ ।
ತತಶ್ಚ ಚಿಂತಯಾಮಾಸ ಸ್ವಚಿತ್ತೇ ಗಾಧಿನಂದನಃ ॥ ೬ ॥
ಅದ್ಯೇಯಂ ಕಾರ್ತಿಕೀ ಪುಣ್ಯಾ ಕೃತ್ತಿಕಾಯೋಗಸಂಯುತಾ ।
ಯಸ್ಯಾಂ ಸ್ನಾನೇ ನರೈಃ ಶ್ರೇಯಃ ಪ್ರಾಪ್ಯತೇ ಪುಷ್ಕರೋದಕೇ ।
ಆದ್ಯಂ ತು ಪುಷ್ಕರಂ ದೂರೇ ನ ಗಂತುಂ ಶಕ್ಯತೇಽಧುನಾ ॥ ೭ ॥
ತಸ್ಮಾದತ್ರ ಸ್ಥಿತಂ ಯಚ್ಚ ತಸ್ಮಿನ್ ಸ್ನಾನಂ ಕರೋಮ್ಯಹಂ ।
ಸ ಏವಂ ನಿಶ್ಚಯಂ ಕೃತ್ವಾ ಶ್ರದ್ಧಾಪೂತೇನ ಚೇತಸಾ ॥ ೮ ॥
ತತಶ್ಚಾನ್ವೇಷಯಾಮಾಸ ಪುಷ್ಕರಾಣಿ ಸಮಂತತಃ ।
ಬಹುತ್ವಾತ್ತತ್ರ ತೀರ್ಥಾನಾಂ ನಿಶ್ಚಯಂ ನಾಽನ್ವಪದ್ಯತ ॥ ೯ ॥
ದೃಷ್ಟ್ವಾ ದೃಷ್ಟ್ವಾ ಜಲಸ್ಥಾನಂ ಸ್ನಾನಂ ಚಕ್ರೇ ತತಃ ಪರಂ ।
ಸ ತದಾ ಶ್ರಮಮಾಪನ್ನೋ ಭ್ರಮಮಾಣ ಇತಸ್ತತಃ ॥ ೧೦ ॥
ವೃಕ್ಷಮೂಲಂ ಸಮಾಶ್ರಿತ್ಯ ನಿವಿಷ್ಟಶ್ಚ ಕ್ಷಿತೌ ತತಃ ।
ತುಷ್ಟಾವಾಽಥ ಶುಚಿರ್ಭೂತ್ವಾ ಶ್ರದ್ಧಯಾ ಚ ತ್ರಿಪುಷ್ಕರಂ ॥ ೧೧ ॥
ಮಧ್ಯಮಾದ್ಯೋಜನಂ ಸ್ವರ್ಗಃ ಕನಿಷ್ಠಾದರ್ಧಯೋಜನಂ ।
ಜ್ಯೇಷ್ಠಕುಂಡಾತ್ಪುನಃ ಖ್ಯಾತೋ ಹಸ್ತಪ್ರಾಯಃ ಶುಭಾತ್ಮಭಿಃ ॥ ೧೨ ॥

---

೬. ತಪಸ್ವಿಯಾದ ವಿಶ್ವಾಮಿತ್ರನು ಆ ಕ್ಷೇತ್ರವು ಸಕಲತೀರ್ಥರೂಪವಾದುದೆಂದರಿತು ಮನಸ್ಸಿನಲ್ಲಿ ಹೀಗೆ ಚಿಂತಿಸಿದನು.

೭. ಈದಿನ ಕೃತ್ತಿಕಾನಕ್ಷತ್ರದಿಂದ ಕೂಡಿದ ಪುಣ್ಯಕರವಾದ ಹುಣ್ಣಿಮೆಯು ಸಂಭವಿಸಿದೆ. ಇದರಲ್ಲಿ ಸ್ನಾನಮಾಡಿದ ಮಾನವರು ಶ್ರೇಯಸ್ಸನ್ನು ಪಡೆಯುವರು. ಆದ್ಯಪುಷ್ಕರವು ದೂರದಲ್ಲಿರುವುದರಿಂದ ಈಗ ಅಲ್ಲಿಗೆ ಹೋಗಲು ಸಾಧ್ಯವಿಲ್ಲ.

೮–೯. ಆದ್ದರಿಂದ ಇಲ್ಲಿರುವ ಆ ತೀರ್ಥದಲ್ಲಿ ಸ್ನಾನಮಾಡುವೆನು. ಅವನು ಶ್ರದ್ಧೆಯಿಂದ ಪವಿತ್ರವಾದ ಮನಸ್ಸಿನಿಂದ ಹೀಗೆ ನಿಶ್ಚಯಿಸಿ ಸುತ್ತಲೂ ಪುಷ್ಕರತೀರ್ಥಗಳನ್ನು ಹುಡುಕಿದನು. ತೀರ್ಥಗಳು ಬಹಳವಾಗಿರುವುದರಿಂದ ನಿರ್ಣಯವನ್ನು ಹೊಂದಲಿಲ್ಲ.

೧೦. ಆಗ ಅವನು ನೀರಿರುವ ಸ್ಥಳಗಳನ್ನೆಲ್ಲ ನೋಡಿ ನೋಡಿ ಅಲ್ಲಿ ಮಿಂದು ಇಲ್ಲಿ ಅಲ್ಲಿ ಸಂಚರಿಸುತ್ತ ಆಯಾಸಗೊಂಡನು.

೧೧. ಬಳಿಕ ಮರದ ಕೆಳಗೆ ನೆಲದ ಮೇಲೆ ಕೂತುಕೊಂಡು ಶುದ್ಧನಾಗಿ ಶ್ರದ್ಧೆಯಿಂದ ತ್ರಿಪುಷ್ಕರವನ್ನು ಸ್ತುತಿಸಿದನು.

೧೨. ಮಧ್ಯಮ ಕುಂಡದಿಂದ ಸ್ವರ್ಗವು ಒಂದು ಯೋಜನದೂರದಲ್ಲಿಯೂ, ಕನಿಷ್ಠ ಕುಂಡದಿಂದ ಅರ್ಧಯೋಜನದೂರದಲ್ಲಿಯೂ, ಜ್ಯೇಷ್ಠ ಕುಂಡದಿಂದ ಒಂದು ಮೊಳದೂರದಲ್ಲಿಯೂ ಇರುವುದೆಂದು ಪುಣ್ಯಾತ್ಮರಾದ ಮಹನೀಯರು ಹೇಳಿರುತ್ತಾರೆ.

ಪಾವಯಂತಿ ಹಿ ತೀರ್ಥಾನಿ ಸ್ನಾನದಾನಾದಸಂಶಯಂ ।
ಪುಷ್ಕರಾಲೋಕನಾದೇವ ನರಃ ಪಾಪಾತ್ಪ್ರಮುಚ್ಯತೇ ॥ ೧೩ ॥
ಪುಷ್ಕರಾರಣ್ಯಮಾಶ್ರಿತ್ಯ ಶಾಕಮೂಲಫಲೈರಪಿ ।
ಏಕಸ್ಮಿನ್ ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ॥ ೧೪ ॥
ಪುಷ್ಕರೇ ದುಷ್ಕರಂ ಸ್ನಾನಂ ಪುಷ್ಕರೇ ದುಷ್ಕರಂ ತಪಃ ।
ಪುಷ್ಕರೇ ದುಷ್ಕರೋ ವಾಸಃ ಸರ್ವಂ ಪುಷ್ಕರ ದುಷ್ಕರಂ ॥ ೧೫ ॥
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಪುಷ್ಕರೇ ಸ್ನಾತಿ ಯೋ ನರಃ ।
ಸ ಕ್ಷಣಾನ್ಮುಚ್ಯತೇ ಪಾಪಾದಾಜನ್ಮಮರಣೋದ್ಭವಾತ್ ॥ ೧೬ ॥
ಜ್ಯೇಷ್ಠೇ ಪ್ರಾತಶ್ಚ ಮಧ್ಯಾಹ್ನೇ ಮಧ್ಯಮೇ ಸ್ನಾತಿ ಯೋ ನರಃ ।
ಕನಿಷ್ಠೇಽಸ್ತಮಿತೇ ಭಾನೌ ಸಕೃತ್ಸ್ವರ್ಗಮವಾಪ್ನುಯಾತ್ ॥ ೧೭ ॥
ತಾವತ್ತಿಷ್ಠತಿ ದೇಹೇಷು ಪಾತಕಂ ಸರ್ವದೇಹಿನಾಂ ।
ಯಾವನ್ನ ಪೌಷ್ಕರೈಸ್ತೋಯೈಃ ಸ್ನಾನಂ ವೈ ಕುರ್ವತೇ ನರಾಃ ॥ ೧೮ ॥
ದಿವಾಕರಕರೈಃ ಸ್ಪೃಷ್ಟಂ ತಮೋ ಯದ್ವತ್ಪ್ರಣಶ್ಯತಿ ।
ಪುಷ್ಕರೋದಕಸಂಸ್ಪರ್ಶಾಚ್ಛೀಘ್ರಂ ಗಚ್ಛತಿ ಪಾತಕಂ ॥ ೧೯ ॥

---

೧೩. ತೀರ್ಥಗಳು ನಿಶ್ಚಯವಾಗಿಯೂ ಸ್ನಾನದಾನಗಳಿಂದ ಪವಿತ್ರಗೊಳಿಸುವುವು. ನರನು ಈ ಪುಷ್ಕರದರ್ಶನದಿಂದಲೇ ಪವಿತ್ರನಾಗುವನು.

೧೪. ಈ ಪುಷ್ಕರದಲ್ಲಿ ಶಾಕ, ಮೂಲಫಲಗಳಿಂದ ಒಬ್ಬ ಬ್ರಾಹ್ಮಣನನ್ನು ಭೋಜನಮಾಡಿಸಿದರೆ ಕೋಟಿಮಂದಿ ಬ್ರಾಹ್ಮಣರನ್ನು ಭೋಜನಮಾಡಿಸಿದಂತಾಗುವುದು.

೧೫. ಈ ಪುಷ್ಕರಕ್ಷೇತ್ರದಲ್ಲಿ ಸ್ನಾನವೂ, ತಪಸ್ಸೂ, ವಾಸವೂ ಎಲ್ಲವೂ ದುಷ್ಕರವಾದುವು.

೧೬. ಕೃತ್ತಿಕಾ ನಕ್ಷತ್ರದ ಸಂಬಂಧವಿರುವ ಕಾರ್ತಿಕ ಶುದ್ಧ ಪೂರ್ಣಿಮಾ ದಿನ ಈ ಪುಷ್ಕರ ಕ್ಷೇತ್ರದಲ್ಲಿ ಮಿಂದ ಮಾನವನು ಹುಟ್ಟಿದಮೊದಲ್ಗೊಂಡು ಮರಣಕಾಲದವರೆಗೆ ಮಾಡಿದ ಪಾಪಗಳಿಂದ ಮುಕ್ತನಾಗುವನು.

೧೭. ಪ್ರಾತಃಕಾಲದಲ್ಲಿ ಜ್ಯೇಷ್ಠಪುಷ್ಕರದಲ್ಲಿಯೂ, ಮಧ್ಯಾಹ್ನದಲ್ಲಿ ಮಧ್ಯಮ ಪುಷ್ಕರದಲ್ಲಿಯೂ, ಸಾಯಂಕಾಲದಲ್ಲಿ ಕನಿಷ್ಠಪುಷ್ಕರದಲ್ಲಿಯೂ ಮಿಂದ ಮಾನವನು ಸ್ವರ್ಗಕ್ಕೆ ಹೋಗುವನು.

೧೮. ನರನು ಪುಷ್ಕರಜಲದಲ್ಲಿ ಸ್ನಾನಮಾಡುವವರೆಗೆ ಮಾತ್ರ ಅವರ ಶರೀರದಲ್ಲಿ ಪಾಪವಿರುವುದು.

೧೯. ಸೂರ್ಯನ ಕಿರಣಗಳಿಂದ ಕತ್ತಲೆಯು ಅಳಿಯುವಂತೆ ಪುಷ್ಕರೋದಕದ ಸಂಬಂಧದಿಂದ ಬೇಗನೆ ಪಾಪದ ಪರಿಹಾರವಾಗುವುದು.

ಬ್ರಹ್ಮಹತ್ಯಾದಿಕಂ ಪಾಪಂ ಕೃತ್ವಾಽಪಿ ಪುರುಷೋ ಭುವಿ ।
ಕಾರ್ತಿಕ್ಯಾಂ ಪುಷ್ಕರೇ ಸ್ನಾತ್ವಾ ನಿರ್ದೋಷತ್ವಂ ಪ್ರಪದ್ಯತೇ ॥ ೨೦ ॥
ಕಿಂ ದಾನೈಃ ಕಿಂ ವ್ರತೈರ್ಹೋಮೈಃ ಕಿಂ ಯಜ್ಞೈರ್ಬಹುವಿಸ್ತರೈಃ ।
ಕಾರ್ತಿಕ್ಯಾಂ ಪುಷ್ಕರೇ ಸ್ನಾನೈಃ ಸರ್ವೇಷಾಂ ಲಭ್ಯತೇ ಫಲಂ ॥ ೨೧ ॥
ಯದ್ಯೇಷಾ ಭಾರತೀ ಸತ್ಯಾ ಮಯಾ ಸಮ್ಯಗುದೀರಿತಾ ।
ತನ್ಮೇ ಸ್ಯಾದ್ದರ್ಶನಂ ಶೀಘ್ರಂ ಸದ್ಯಃ ಪುಷ್ಕರಸಂಭವಂ ॥ ೨೨ ॥
ಏವಂ ತಸ್ಯ ಬ್ರುವಾಣಸ್ಯ ವಿಶ್ವಾಮಿತ್ರಸ್ಯ ಧೀಮತಃ ।
ಅಶರೀರಾಽಭವದ್ವಾಣೀ ಗಗನಾದ್ದ್ವಿಜಸತ್ತಮಾಃ ॥ ೨೩ ॥
ವಿಶ್ವಾಮಿತ್ರ ಮುನಿಶ್ರೇಷ್ಠ ಸದಾ ಮೇ ಗಗನೇ ಸ್ಥಿತಿಃ ।
ಮುಕ್ತ್ವೈಕಾಂ ಕಾರ್ತಿಕೀಂ ಚೈವ ಕೃತ್ತಿಕಾಯೋಗಂಯುತಾಂ ॥ ೨೪ ॥
ತದತ್ರ ದಿವಸೇ ವಾಸೋ ಮಮ ಭೂಮಿತಲೇ ಧ್ರುವಂ ।
ಅಸ್ಮಿನ್ನೇವ ವನೇ ಪುಣ್ಯೇ ತತ್ತ್ವಂ ಸ್ನಾನಂ ಸಮಾಚರ ॥ ೨೫ ॥

ವಿಶ್ವಾಮಿತ್ರ ಉವಾಚ:—

ಸರ್ವೇಷಾಮೇವ ತೀರ್ಥಾನಾಂ ಶ್ರೂಯತೇ ಚ ಸಮಾಶ್ರಯಃ ।
ತತ್ಕಥಂ ವೇದ್ಮಿ ತೀರ್ಥೇಶ ತ್ವಾಮತ್ರೈವ ವ್ಯವಸ್ಥಿತಂ ॥ ೨೬ ॥

---

೨೦. ಮನುಷ್ಯನು ಬ್ರಹ್ಮಹತ್ಯೆಮೊದಲಾದ ಪಾಪಗಳನ್ನು ಮಾಡಿದ್ದರೂ ಕಾರ್ತಿಕ ಪೂರ್ಣಿಮಾದಿನ ಪುಷ್ಕರದಲ್ಲಿ ಮಿಂದರೆ ನಿರ್ದುಷ್ಟನಾಗುವನು.

೨೧. ದಾನ, ವ್ರತ, ಹೋಮ, ಬಹುವಿಸ್ತಾರವಾದ ಯಜ್ಞ ಇವುಗಳಿಂದೇನು ಪ್ರಯೋಜನ? ಕಾರ್ತಿಕ ಪೂರ್ಣಿಮಾದಿನ ಪುಷ್ಕರಕ್ಷೇತ್ರದ ನೀರಿನಲ್ಲಿ ಮಿಂದರೆ ಸಕಲಫಲಗಳೂ ಲಭಿಸುವುವು.

೨೨. ನಾನೀಗ ಹೇಳಿದ ಮಾತು ಸತ್ಯವಾದರೆ ಶೀಘ್ರವಾಗಿ ಪುಷ್ಕರಕ್ಷೇತ್ರದ ದರ್ಶನವು ನನಗೆ ಲಭಿಸಲಿ.

೨೩. ದ್ವಿಜವರ್ಯರೆ! ಹೀಗೆ ವಿಶ್ವಾಮಿತ್ರನು ಹೇಳುತ್ತಿರಲು ಆಕಾಶದಿಂದ ಅಶರೀರವಾಣಿಯಾಯಿತು.

೨೪. ಮುನಿವರ್ಯನಾದ ವಿಶ್ವಾಮಿತ್ರನೆ! ನಾನು ಕೃತ್ತಿಕಾನಕ್ಷತ್ರದಿಂದ ಕೂಡಿರುವ ಕಾರ್ತಿಕ ಶುದ್ಧ ಪೂರ್ಣಿಮಾದಿನವನ್ನುಳಿದು ಇತರದಿನಗಳಲ್ಲಿ ಆಕಾಶದಲ್ಲಿರುವೆನು.

೨೫. ಆದಿನ ನಾನು ಭೂಮಿಯಲ್ಲಿ ನಿಶ್ಚಯವಾಗಿಯೂ ವಾಸಿಸುವೆನು.. ಆದ್ದರಿಂದ ನೀನು ಈ ಪುಣ್ಯಕರವಾದ ವನದಲ್ಲಿ ಸ್ನಾನಮಾಡು.

೨೬. ವಿಶ್ವಾಮಿತ್ರನು ಹೇಳುತ್ತಾನೆ:—ಉತ್ತಮವಾದ ತೀರ್ಥವೆ! ಇಲ್ಲಿ ಎಲ್ಲ ತೀರ್ಥಗಳೂ ನೆಲೆಸಿರುವುವು. ಇಲ್ಲಿರುವ ನಿನ್ನನ್ನು ನಾನು ಹೇಗೆ ಅರಿಯಲಿ?

ತದೋತ್ಥಿತಾ ಪುನರ್ವಾಣೀ ತಾರಾ ಗಗನಗೋಚರಾ ।
ವಿಶ್ವಾಮಿತ್ರಂ ಮುನಿಶ್ರೇಷ್ಠಂ ಹರ್ಷಯಂತೀ ದ್ವಿಜೋತ್ತಮಾಃ ॥ ೨೭ ॥
ನಾಽತಿದೂರೇ ವನಾದಸ್ಮಾದತ್ರ ಸಂತಿ ಜಲಾಶಯಾಃ ।
ತೇಷಾಮೇಕತಮೇ ಪದ್ಮಂ ವಿದ್ಯತೇಽಧೋಮುಖಂ ಸ್ಥಿತಂ ॥ ೨೮ ॥
ಊರ್ಧ್ವವಕ್ತ್ರಂ ದ್ವಿತೀಯೇ ಚ ತಿರ್ಯಗ್ವಕ್ತ್ರಂ ತೃತೀಯಕೇ ।
ತತ್ರೋರ್ಧ್ವಾಸ್ಯೈಃ ಸರೋಜೈಶ್ಚ ವಿಜ್ಞೇಯಂ ಜ್ಯೇಷ್ಠಪುಷ್ಕರಂ ॥ ೨೯ ॥
ಪಾರ್ಶ್ವವಕ್ತ್ರೈರ್ದ್ವಿಜಶ್ರೇಷ್ಠ ಮಧ್ಯಮಂ ಪರಿಕೀರ್ತಿತಂ ।
ಅಧೋವಕ್ತ್ರೈಸ್ತಥಾ ಜ್ಞೇಯಂ ಕನಿಷ್ಠಂ ಪುಷ್ಕರಂ ಕ್ಷಿತೌ ॥ ೩೦ ॥
ಏತೈಶ್ಚಿಹ್ನೈರ್ಮುನಿಶ್ರೇಷ್ಠ ಜ್ಞಾತ್ವಾ ಸ್ನಾನಂ ಸಮಾಚರ ।
ತಚ್ಛ್ರುತ್ವಾ ಸ ಮುನಿಸ್ತೂರ್ಣಂ ಸಮುತ್ಥಾಯ ತತಃ ಯಯೌ ॥ ೩೧ ॥
ತಾದೃಶೈಃ ಕಮಲೈಸ್ತತ್ರ ಸಂಸ್ಥಿತಾಸ್ತೇ ಜಲಾಶಯಾಃ ।
ತಾನ್ ದೃಷ್ಟ್ವಾ ಶ್ರದ್ಧಯೋಪೇತಃ ಕೃತ್ವಾ ಸ್ನಾನಂ ಯಥಾಕ್ರಮಂ ॥ ೩೨ ॥
ತತಶ್ಚ ವಿಧಿನಾ ಸಮ್ಯಕ್ಚಕಾರ ಪಿತೃತರ್ಪಣಂ ॥ ೩೩ ॥
ತತಃ ಶಾಕೈಶ್ಚ ಮೂಲೈಶ್ಚ ನೀವಾರೈಃ ಫಲಸಂಯುತೈಃ ।
ಚಕಾರ ವಿಧಿನಾ ಶ್ರಾದ್ಧಂ ತತ್ರೈವ ದ್ವಿಜಸತ್ತಮಾಃ ॥ ೩೪ ॥

---

೨೭. ದ್ವಿಜವರ್ಯರೆ! ಆಗ ಉಚ್ಚವಾದ ಆಕಾಶವಾಣಿಯು ವಿಶ್ವಾಮಿತ್ರನನ್ನು ಸಂತೋಷಗೊಳಿಸುತ್ತ ಉಂಟಾಯಿತು.

೨೮. ಇಲ್ಲಿ ಈ ವನದ ಹತ್ತಿರದಲ್ಲಿಯೇ ಸರೋವರಗಳು ಇವೆ. ಅವುಗಳಲ್ಲಿ ಒಂದರಲ್ಲಿ ಕೆಳಮುಖವಾದ ಕಮಲವು ಇರುವುದು.

೨೯. ಎರಡನೆ ಸರೋವರದಲ್ಲಿ ಮೇಲ್ಮುಖವೂ, ಮೂರನೆಯದರಲ್ಲಿ ಅಡ್ಡವಾದ ಮುಖವುಳ್ಳುದೂ ಆದ ಕಮಲವು ಇರುವುವು. ಮೇಲ್ಮುಖವಾದ ಕಮಲವುಳ್ಳುದನ್ನು ಜ್ಯೇಷ್ಠಪುಷ್ಕರವೆಂದರಿಯಬೇಕು.

೩೦. ಅಡ್ಡಮುಖವುಳ್ಳ ಕಮಲಗಳಿಂದ ಮಧ್ಯಮಪುಷ್ಕರವನ್ನೂ, ಕೆಳಮುಖ ಕಮಲಗಳಿಂದ ಕನಿಷ್ಠಪುಷ್ಕರವನ್ನೂ ತಿಳಿಯಬೇಕು.

೩೧. ಮುನಿವರ್ಯನೆ! ಈ ಚಿಹ್ನೆಗಳಿಂದ ನನ್ನನ್ನರಿತು ಸ್ನಾನಮಾಡು. ಆ ಮುನಿಯು ಅದನ್ನು ಕೇಳಿ, ಬೇಗನೆ ಎದ್ದು ಅಲ್ಲಿಂದ ಹೊರಟನು.

೩೨–೩೩. ಆ ಸರೋವರಗಳು ಅಂತಹ ಕಮಲಗಳಿಂದ ಸಹಿತವಾಗಿದ್ದುವು. ಮುನಿಯು ಅವುಗಳನ್ನು ನೋಡಿ ಶ್ರದ್ಧೆಯಿಂದ ಕ್ರಮವಾಗಿ ಮಿಂದು ವಿಧಿಯಂತೆ ಪಿತೃತರ್ಪಣಗೈದನು.

೩೪. ಬಳಿಕ ಶಾಕ, ಮೂಲ, ನವಣೆ, ಹಣ್ಣು ಇವುಗಳಿಂದ ಅಲ್ಲಿಯೇ ವಿಧಿಯಂತೆ ಶ್ರಾದ್ಧಮಾಡಿದನು.

ತತ್ರ ತಸ್ಯೈವ ತೀರಸ್ಥೋ ವೀಕ್ಷಾಂ ಚಕ್ರೇ ಸಮಾಹಿತಃ ।
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಚಿಹ್ನದರ್ಶನಲಾಲಸಃ ॥ ೩೫ ॥

ಬ್ರಾಹ್ಮಣಾ ಊಚುಃ:—

ಕೀದೃಶಂ ಜಾಯತೇ ಚಿಹ್ನಂ ಕಾರ್ತಿಕ್ಯಾಂ ಜ್ಯೇಷ್ಠಪುಷ್ಕರೇ ।
ಸಂಪ್ರಾಪ್ತೇ ಕೃತ್ತಿಕಾಯೋಗೇ ಸರ್ವಂ ತತ್ರ ವದಾಶು ನಃ ॥ ೩೬ ॥

ಸೂತ ಉವಾಚ:—

ಕಾರ್ತಿಕ್ಯಾಂ ಕೃತ್ತಿಕಾಯೋಗೇ ಯದಾಗಚ್ಛತಿ ಚಂದ್ರಮಾಃ ।
ತದಾ ನಿಷ್ಕ್ರಾಮತಿ ಶ್ರೇಷ್ಠಂ ಕಮಲಂ ಜಲಮಧ್ಯತಃ ॥ ೩೭ ॥
ತನ್ಮಧ್ಯೇಽಂಗುಷ್ಠಮಾತ್ರಸ್ತು ಪುರುಷೋ ದೃಶ್ಯತೇ ಜನೈಃ ।
ಸುಸ್ನಾತೈಃ ಶ್ರದ್ಧಯೋಪೇತೈಸ್ತತಸ್ತೀರ್ಥಫಲಂ ಲಭೇತ್ ॥ ೩೮ ॥
ಏತಸ್ಮಾತ್ಕಾರಣಾತ್ಸ್ನಾತ್ವಾ ವಿಶ್ವಾಮಿತ್ರೋ ಮಹಾಮುನಿಃ ।
ತಚ್ಚಿಹ್ನಂ ವೀಕ್ಷಯಾಮಾಸ ಮಹದ್ಯತ್ನಂ ಸಮಾಶ್ರಿತಃ ॥ ೩೯ ॥
ತಸ್ಯೈವಂ ವೀಕ್ಷಮಾಣಸ್ಯ ವಿಶ್ವಾಮಿತ್ರಸ್ಯ ಧೀಮತಃ ।
ಆನರ್ತಾಧಿಪತಿಸ್ತತ್ರ ಪ್ರಾಪ್ತೋ ರಾಜಾ ಬೃಹದ್ಬಲಃ ॥ ೪೦ ॥
ಅತ್ಯಂತಂ ಮೃಗಯಾಶ್ರಾಂತೋ ಹತ್ವಾ ಮೃಗಗಣಾನ್ಬಹೂನ್ ।
ಋಕ್ಷಾಂಶ್ಚೈವ ವರಾಹಾಂಶ್ಚ ಸಾರಂಗಾನಥ ಸಂಬರಾನ್ ॥ ೪೧ ॥

---

೩೫. ಆ ಸರೋವರದ ದಡದಲ್ಲಿ ಕೃತ್ತಿಕಾಯೋಗವಿರುವ ಕಾರ್ತಿಕ ಶುದ್ಧ ಹುಣ್ಣಿಮೆಯಲ್ಲಿ ಉಂಟಾಗುವ ಚಿಹ್ನೆಗಳನ್ನು ನೋಡಲಾಸಕ್ತನಾಗಿ ನಿಂತನು.

೩೬. ಬ್ರಾಹ್ಮಣರು ಹೇಳುತ್ತಾರೆ:—ಜ್ಯೇಷ್ಠಪುಷ್ಕರದಲ್ಲಿ ಕೃತ್ತಿಕಾನಕ್ಷತ್ರದ ಯೋಗವಿರುವ ಕಾರ್ತಿಕ ಶುದ್ಧ ಹುಣ್ಣಿಮೆದಿನ ಎಂತಹ ಚಿಹ್ನೆಯು ಉಂಟಾಗುವುದು? ಅದನ್ನೆಲ್ಲ ನಮಗೆ ಹೇಳು.

೩೭. ಸೂತನು ಹೇಳುತ್ತಾನೆ:—ಕಾರ್ತಿಕಶುದ್ಧ ಹುಣ್ಣಿಮೆದಿನ ಚಂದ್ರನು ಕೃತ್ತಿಕಾನಕ್ಷತ್ರದಿಂದ ಕೂಡಿರಲು ನೀರಿನ ಮಧ್ಯದಿಂದ ಶ್ರೇಷ್ಠವಾದ ಕಮಲವು ಮೇಲಕ್ಕೇಳುವುದು.

೩೮. ಅದರ ನಡುವೆ ಮಿಂದವರೂ, ಶ್ರದ್ಧೆಯುಳ್ಳವರೂ ಆದ ಮಾನವರಿಗೆ ಅಂಗುಷ್ಠಪರಿಮಾಣದ ಪುರುಷನು ಕಾಣಿಸುವನು.

೩೯. ಈ ಕಾರಣದಿಂದ ವಿಶ್ವಾಮಿತ್ರಮಹಾಮುನಿಯು ಅಲ್ಲಿ ಮಿಂದು ಅತ್ಯಂತ ಪ್ರಯತ್ನದಿಂದ ಆ ಚಿಹ್ನೆಯನ್ನು ನೋಡಿದನು.

೪೦–೪೨. ಬುದ್ಧಿವಂತನಾದ ಆ ವಿಶ್ವಾಮಿತ್ರನು ಹೀಗೆ ನೋಡುತ್ತಿರಲು ಬೃಹದ್ಬಲನೆಂಬ ಆನರ್ತರಾಜನು ಕರಡಿ, ಹಂದಿ, ಸಾರಂಗ, ಸಂಬರ, ಸಿಂಹ, ಹುಲಿ, ತೋಳ ಇವುಗಳನ್ನೂ ಇತರ ಹಿಂಸ್ರಜಂತುಗಳನ್ನೂ ಬಹುವಾಗಿ ಕೊಂದು

ಸಿಂಹಾನ್ ವ್ಯಾಘ್ರಾನ್ ವೃಕಾಂಶ್ಚೈವ ಹಿಂಸ್ರಾನ್ಸಾರಣ್ಯಚಾರಿಣಃ ।
ತಥಾಽನ್ಯಾನಪಿ ಮಧ್ಯಾಹ್ನೇ ತೇನ ಮಾರ್ಗೇಣ ಸಂಗತಃ ॥ ೪೨ ॥
ಅಥಾಽಪಶ್ಯದ್ದ್ರುಮೋಪಾಂತೇ ವಿಶ್ವಾಮಿತ್ರಂ ಮುನೀಶ್ವರಂ ।
ಉಪವಿಷ್ಟಂ ಕೃತಸ್ನಾನಂ ವೀಕ್ಷಮಾಣಂ ಜಲಾಶಯಂ ॥ ೪೩ ॥
ತತಸ್ತಂ ಪ್ರಣಿಪತ್ಯೋಚ್ಚೈರವತೀರ್ಯ ತುರಂಗಮಾತ್ ।
ಶ್ರಮಾರ್ತಃ ಸಲಿಲೇ ತಸ್ಮಿನ್ಪ್ರವಿವೇಶ ನೃಪೋತ್ತಮಃ ॥ ೪೪ ॥
ಏತಸ್ಮಿನ್ನಂತರೇ ತೋಯಾತ್ಕಮಲಂ ತದ್ವಿನಿರ್ಗತಂ ।
ಸಹಸ್ರಪತ್ರಸಂಜುಷ್ಟಂ ದ್ವಾದಶಾರ್ಕಸಮಪ್ರಭಂ ॥ ೪೫ ॥
ತದ್ದೃಷ್ಟ್ವಾ ಸ ಮಹೀಪಾಲಃ ಪದ್ಮಮತ್ಯದ್ಭುತಂ ಮಹತ್ ।
ಜಗ್ರಾಹ ಕೌತುಕಾವಿಷ್ಟಃ ಸ್ವಯಂ ಸವ್ಯೇನ ಪಾಣಿನಾ ॥ ೪೬ ॥
ಸ್ಪೃಷ್ಟಮಾತ್ರೇ ತತಸ್ತಸ್ಮಿನ್ಕಮಲೇ ದ್ವಿಜಸತ್ತಮಾಃ ।
ಉತ್ಥಿತಃ ಸುಮಹಾಂಛಬ್ದೋ ವಿಶ್ವಂ ಯೇನ ಪ್ರಪೂರಿತಂ ॥ ೪೭ ॥
ತಂ ಶಬ್ದಂ ಸ ಮಹೀಪಾಲಃ ಶ್ರುತ್ವಾ ಮೂರ್ಛಾಮುಪಾವಿಶತ್ ।
ಪತಿತಶ್ಚ ಜಲೇ ತಸ್ಮಿನ್ಪದ್ಮಂ ಚಾಽದರ್ಶನಂ ಗತಂ ॥ ೪೮ ॥
ತತಃ ಕೃಚ್ಛ್ರೇಣ ಮಹತಾ ಕರ್ಷಿತಃ ಸಲಿಲಾದ್ಬಹಿಃ ।
ಸೇವಕೈರ್ದುಃಖಶೋಕಾರ್ತೈರ್ಹಾಹೇತಿ ಪ್ರತಿಜಲ್ಪಕೈಃ ॥ ೪೯ ॥

---

ಅತ್ಯಂತವಾಗಿ ಬೇಟೆಯಿಂದ ಬಳಲಿದವನಾಗಿ ಮಧ್ಯಾಹ್ನವೇಳೆಯಲ್ಲಿ ಆ ಮಾರ್ಗವಾಗಿ ಬಂದನು.

೪೩–೪೪. ಬಳಿಕ ಅವನು ಮರದ ಹತ್ತಿರ ಸ್ನಾನಮಾಡಿ ಸರೋವರವನ್ನು ನೋಡುತ್ತ ಕುಳಿತಿರುವ ವಿಶ್ವಾಮಿತ್ರನನ್ನು ಕಂಡನು. ಕುದುರೆಯಿಂದ ಇಳಿದು ಆ ಮುನಿಗೆ ವಂದಿಸಿ ಆಯಾಸಗೊಂಡವನಾಗಿ ಆ ಸರೋವರದ ನೀರಿನಲ್ಲಿಳಿದನು.

೪೫. ಈ ಸಮಯದಲ್ಲಿ ಆ ನೀರಿನಿಂದ ಸಹಸ್ರದಳವುಳ್ಳದೂ, ದ್ವಾದಶಾದಿತ್ಯರಿಗೆ ಸಮವಾದ ಕಾಂತಿಯುಳ್ಳದೂ ಆದ ಕಮಲವು ಹೊರಟಿತು.

೪೬. ಆ ಬೃಹದ್ಬಲನು ಆಶ್ಚರ್ಯಕರವಾದ ಆ ಕಮಲವನ್ನು ನೋಡಿ ಎಡಗೈಯಿಂದ ಕುತೂಹಲದಿಂದ ಅದನ್ನು ತೆಗೆದುಕೊಂಡನು.

೪೭. ದ್ವಿಜವರ್ಯರೆ! ರಾಜನು ಆ ಕಮಲವನ್ನು ಮುಟ್ಟದ ಕೂಡಲೆ ಪ್ರಪಂಚವು ತುಂಬುವಷ್ಟು ದೊಡ್ಡ ಶಬ್ದವುಂಟಾಯಿತು.

೪೮. ದೊರೆಯು ಆ ಶಬ್ದವನ್ನು ಕೇಳಿ ಮೂರ್ಛೆಗೊಂಡು ನೀರಿನಲ್ಲಿ ಬಿದ್ದನು. ಪದ್ಮವು ಅದೃಶ್ಯವಾಯಿತು.

೪೯. ಅನಂತರ ದುಃಖಗೊಂಡು ಅಯ್ಯೋ! ಎಂದು ಕೂಗುತ್ತಿರುವ ಸೇವಕರು ದೊರೆಯನ್ನು ನೀರಿನಿಂದ ಹೊರಗೆ ಅತಿ ಕಷ್ಟದಿಂದ ಎಳೆದರು.

ತತಸ್ತೀರಂ ಸಮಾಸಾದ್ಯ ಕೃಚ್ಛ್ರಾತ್ಪ್ರಾಪ್ಯಾಽಥ ಚೇತನಾಂ ।
ಯಾವದ್ವೀಕ್ಷಯತಿ ಸ್ವಾಂಗಂ ತಾವತ್ಕುಷ್ಠಂ ಸಮಾಗತಂ ॥ ೫೦ ॥
ತತೋ ವಿಷಾದಮಾಪನ್ನೋ ದೃಷ್ಟ್ವಾ ತಾದೃಙ್ನಿಜಂ ವಪುಃ ।
ಶೀರ್ಣಘ್ರಾಣಾಂಘ್ರಿಹಸ್ತಂ ಚ ಘುರ್ಘುರಸ್ವರಸಂಯುತಂ ॥ ೫೧ ॥
ಅಥ ಗತ್ವಾ ಮುನೇಃ ಪಾರ್ಶ್ವೇ ವಿಶ್ವಾಮಿತ್ರಸ್ಯ ಭೂಮಿಪಃ ।
ಉವಾಚ ವಚನಂ ದೀನಂ ಬಾಷ್ಪಗದ್ಗದಯಾ ಗಿರಾ ॥ ೫೨ ॥
ಭಗವನ್ಪಶ್ಯ ಮೇ ಜಾತಂ ಯಾದೃಶಂ ವಪುರೇವ ಹಿ ।
ಅಕಸ್ಮಾದೇವ ಮಗ್ನಸ್ಯ ಸಲಿಲೇಽತ್ರ ವಿಗರ್ಹಿತಂ ॥ ೫೩ ॥
ತತ್ಕಿಂ ಪಾನೀಯದೋಷೋ ವಾ ಕಿಂ ವಾ ಭೂಮೇರ್ಮುನೀಶ್ವರ ।
ಯೇನೇದೃಕ್ ಸಹಸಾಯಾತಂ ವಿಕೃತಿಂ ಮೇ ಶರೀರಕಂ ॥ ೫೪ ॥

ವಿಶ್ವಾಮಿತ್ರ ಉವಾಚ :—

ಸಾವಿತ್ರಂ ಪದ್ಮಮೇವೈತದ್ಯತ್ಸ್ಪೃಷ್ಟಂ ಭೂಪತೇ ತ್ವಯಾ ।
ಉಚ್ಛಿಷ್ಟೇನ ರವಿರ್ಮಧ್ಯೇ ಸ್ವಯಂ ಯಸ್ಯ ವ್ಯವಸ್ಥಿತಃ ॥ ೫೫ ॥
ಯದಾ ಸ್ಯಾತ್ಕೃತ್ತಿಕಾಯೋಗಃ ಕಾರ್ತಿಕೇ ಮಾಸಿ ಪಾರ್ಥಿವ ।
ಶಶಾಂಕಸ್ಯ ತದಾ ಚೈತಜ್ಜಾಯತೇ ಪೌಷ್ಕರೇ ಜಲೇ ॥ ೫೬ ॥

---

೫೦. ಆ ದೊರೆಯು ದಡವನ್ನು ಸೇರಿ ಕಷ್ಟದಿಂದ ಜ್ಞಾನವನ್ನು ಹೊಂದಿ ತನ್ನ ಅವಯವಗಳನ್ನು ನೋಡುವಷ್ಟರಲ್ಲಿ ಕುಷ್ಠರೋಗವು ಸಂಭವಿಸಿತು.

೫೧. ಬಳಿಕ ಅವನು ಸೀಳಿದ ಮೂಗು, ಕಾಲು, ಕೈಗಳುಳ್ಳುದೂ, ಘುರ್ಘುರ ಧ್ವನಿಯಿಂದ ಕೂಡಿರುವುದೂ ಆದ ತನ್ನ ಶರೀರವನ್ನು ನೋಡಿ ವ್ಯಥೆಗೊಂಡನು.

೫೨. ಬಳಿಕ ದೊರೆಯು ವಿಶ್ವಾಮಿತ್ರನ ಹತ್ತಿರಕ್ಕೆ ಹೋಗಿ ಕಣ್ಣೀರಿನಿಂದ ಗದ್ಗದವಾದ ಮಾತಿನಿಂದ ಇಂತೆಂದನು.

೫೩. ಪೂಜ್ಯನೆ! ಅಕಸ್ಮಾತ್ತಾಗಿ ಈ ನೀರಿನಲ್ಲಿ ಮುಳುಗಿದ ನನ್ನ ಶರೀರವು ಎಂತು ನಿಂದ್ಯವಾಯಿತು?

೫೪. ಈ ನೀರಿನ ದೋಷವೊ? ಅಥವಾ ಭೂಮಿಯ ದೋಷವೊ? ಯಾವುದರಿಂದ ನನ್ನ ಶರೀರವು ಹೀಗೆ ವಿಕಾರಗೊಂಡಿದೆ?

೫೫. ವಿಶ್ವಾಮಿತ್ರನು ಹೇಳುತ್ತಾನೆ:—ಮಹಾರಾಜ! ಉಚ್ಛಿಷ್ಟನಾದ ನೀನು ಮಧ್ಯದಲ್ಲಿ ಸೂರ್ಯನಿರುವ ಈ ತಾವರೆ ಹೂವನ್ನು ಮುಟ್ಟಿರುವೆ.

೫೬. ಕಾರ್ತಿಕಮಾಸದಲ್ಲಿ ಚಂದ್ರನಿಗೆ ಕೃತ್ತಿಕಾನಕ್ಷತ್ರದ ಸಂಬಂಧವಾದಾಗ ಪುಷ್ಕರ ಜಲದಲ್ಲಿ ಈ ಪದ್ಮವು ಹುಟ್ಟುವುದು.

ತದಿದಂ ಪುಷ್ಕರಂ ಜ್ಯೇಷ್ಠಂ ಭವಾನ್ ಯತ್ರ ಶ್ರಮಾತುರಃ ।
ಪ್ರವಿಷ್ಟಃ ಕಾರ್ತಿಕೀ ಚಾಽದ್ಯ ಕೃತ್ತಿಕಾಯೋಗಸಂಯುತಾ ॥ ೫೭ ॥
ಏತದ್ವೀಕ್ಷ್ಯ ನರೋ ಹ್ಯತ್ರ ಸ್ನಾನಂ ಕುರ್ಯಾಜ್ಜಲಾಶಯೇ ।
ಶ್ರದ್ಧಯಾ ಪರಯಾ ಯುಕ್ತಃ ಸ ಗಚ್ಛತಿ ಪರಾಂ ಗತಿಂ ॥ ೫೮ ॥
ಉಚ್ಛಿಷ್ಟೇನ ತ್ವಯಾ ರಾಜನ್ ಹರಣಾಯ ಹಿ ಕೇವಲಂ ।
ಏತತ್ಸರೋರುಹಂ ಸ್ಪೃಷ್ಟಂ ತೇನೇದೃಕ್ಸಂಸ್ಥಿತಂ ಫಲಂ ॥ ೫೯ ॥

ಬೃಹದ್ಬಲ ಉವಾಚ :—

ಕಥಂ ಮೇ ಸ್ಯಾನ್ಮುನಿಶ್ರೇಷ್ಠ ಕುಷ್ಠವ್ಯಾಧಿಪರಿಕ್ಷಯಃ ।
ತಪಸಾ ನಿಯಮೇನಾಽಪಿ ವ್ರತೇನಾಽಪಿ ಕೃತೇನ ವೈ ॥ ೬೦ ॥

ವಿಶ್ವಾಮಿತ್ರ ಉವಾಚ :—

ಆರಾಧಯ ಸಹಸ್ರಾಂಶುಮಸ್ಮಿನ್ ಕ್ಷೇತ್ರೇ ಮಹೀಪತೇ ।
ತತಃ ಪ್ರಾಪ್ಸ್ಯಸಿ ಸಂಸಿದ್ಧಿಂ ಕುಷ್ಠನಾಶಸಮುದ್ಭವಾಂ ॥ ೬೧ ॥
ತಚ್ಛ್ರುತ್ವಾ ಸ ಮುನೇರ್ವಾಕ್ಯಂ ಭೂಮಿಪಾಲೋ ಬೃಹದ್ಬಲಃ ।
ತತ್ಕ್ಷಣಾತ್ಸ್ಥಾಪಯಾಮಾಸ ಸೂರ್ಯಸ್ಯ ಪ್ರತಿಮಾಂ ತದಾ ॥ ೬೨ ॥
ಅರ್ಚಯಾಮಾಸ ವಿಧಿವತ್ಪುಷ್ಪಧೂಪಾನುಲೇಪನೈಃ ।
ಶ್ರದ್ಧಯಾ ಪರಯಾ ಯುಕ್ತೋ ರವಿವಾರೇ ವಿಶೇಷತಃ ॥ ೬೩ ॥

---

೫೭. ನೀನು ಆಯಾಸಗೊಂಡವನಾಗಿ ಪ್ರವೇಶಿಸಿದ ಇದು ಜ್ಯೇಷ್ಠ ಪುಷ್ಕರವು. ಈದಿನ ಕೃತ್ತಿಕಾಸಂಬಂಧವುಳ್ಳ ಪೂರ್ಣಿಮೆಯಾಗಿರುವುದು.

೫೮. ಇದನ್ನು ನೋಡಿ ಈ ಸರೋವರದಲ್ಲಿ ಶ್ರದ್ಧೆಯಿಂದ ಮಿಂದ ಮಾನವನು ಉತ್ತಮಗತಿಯನ್ನು ಪಡೆಯುವನು.

೫೯. ಉಚ್ಛಿಷ್ಟನಾದ ನೀನು ತೆಗೆದುಕೊಳ್ಳುವುದಕ್ಕಾಗಿ ಈ ಕಮಲವನ್ನು ಮುಟ್ಟಿದ್ದರಿಂದ ಇಂತಹ ಫಲವುಂಟಾಯಿತು.

೬೦. ಬೃಹದ್ಬಲನು ಹೇಳುತ್ತಾನೆ:—ಮುನಿವರ್ಯನೆ! ನನ್ನೀವ್ಯಾಧಿ ನಾಶವು ಹೇಗಾಗುವುದು? ತಪಸ್ಸು, ನಿಯಮ, ವ್ರತಗಳಲ್ಲಿ ಯಾವುದನ್ನು ಮಾಡುವುದರಿಂದಾದೀತು?

೬೧. ವಿಶ್ವಾಮಿತ್ರನು ಹೇಳುತ್ತಾನೆ:—ಅರಸ! ಈ ಕ್ಷೇತ್ರದಲ್ಲಿ ಸೂರ್ಯನನ್ನು ಆರಾಧಿಸು. ಅದರಿಂದ ಕುಷ್ಠವು ನಾಶವಾಗುವುದು.

೬೨. ಆ ಬೃಹದ್ಬಲರಾಜನು ವಿಶ್ವಾಮಿತ್ರನ ಆ ಮಾತನ್ನು ಕೇಳಿ ಕೂಡಲೆ ಸೂರ್ಯನ ಪ್ರತಿಮೆಯನ್ನು ಪ್ರತಿಷ್ಠೆಮಾಡಿದನು.

೬೩. ಭಾನುವಾರದ ದಿನ ಅತಿಶಯಶ್ರದ್ಧೆಯಿಂದ ವಿಧಿಯಂತೆ ಹೂವು, ಧೂಪ, ಗಂಧಗಳಿಂದ ಪೂಜಿಸಿದನು.

ಉಪವಾಸಪರೋ ಭೂತ್ವಾ ರಕ್ತಚಂದನಸಂಯುತೈಃ ।
ಪೂಜಯನ್ರಕ್ತಪುಷ್ಪೈಶ್ಚ ಶ್ರದ್ಧಯಾ ಪರಯಾ ಯುತಃ ॥ ೬೪ ॥
ತತಃ ಸಂವತ್ಸರಸ್ಯಾಂತೇ ಸ ಬಭೂವ ಮಹೀಪತಿಃ ।
ಕುಷ್ಠವ್ಯಾಧಿವಿನಿರ್ಮುಕ್ತೋ ದ್ವಾದಶಾರ್ಕಸಮಪ್ರಭಃ ॥ ೬೫ ॥
ತತಃ ಸ್ವಂ ರಾಜ್ಯಮಾಸಾದ್ಯ ಭುಕ್ತ್ವಾ ಭೋಗಾನನೇಕಶಃ ।
ದೇಹಾಂತೇ ದಿನನಾಥಸ್ಯ ಸಂಪ್ರಾಪ್ತೋ ಮಂದಿರಂ ತಥಾ ॥ ೬೬ ॥

ಸೂತ ಉವಾಚ :—

ಏವಂ ತತ್ರ ದ್ವಿಜಶ್ರೇಷ್ಠಾ ವಿಶ್ವಾಮಿತ್ರೇಣ ಧೀಮತಾ ।
ಪ್ರಕಟಂ ಸರ್ವಲೋಕಸ್ಯ ವಿಹಿತಂ ಪುಷ್ಕರತ್ರಯಂ ॥ ೬೭ ॥
ಯಸ್ತತ್ರ ಕಾರ್ತಿಕೇ ಮಾಸೇ ಕಾರ್ತಿಕ್ಯಾಂ ಕೃತ್ತಿಕಾಸು ಚ ।
ಪ್ರಕರೋತಿ ನರಃ ಸ್ನಾನಂ ಬ್ರಹ್ಮಲೋಕಂ ಸ ಗಚ್ಛತಿ ॥ ೬೮ ॥
ತಥಾ ಯೋ ಭಾಸ್ಕರಂ ಪಶ್ಯೇದ್ಬೃಹದ್ಬಲಪ್ರತಿಷ್ಠಿತಂ ।
ವತ್ಸರಂ ರವಿವಾರೇಣ ಯಾವತ್ಕೃತ್ವಾ ಕ್ಷಣಂ ನರಃ ।
ಸ ಮುಚ್ಯತೇ ನರೋ ರೋಗೈರ್ಯದಿ ಸ್ಯಾದ್ರೋಗಸಂಯುತಃ ॥ ೬೯ ॥
ನೀರೋಗೋ ವಾ ನರಃ ಸದ್ಯೋ ಲಭತೇ ಮನಸೇಪ್ಸಿತಂ ।
ನಿಷ್ಕಾಮೋ ಮೋಕ್ಷಮಾಪ್ನೋತಿ ಪ್ರಸಾದಾತ್ತೀಕ್ಷ್ಣದೀಧಿತೇಃ ॥ ೭೦ ॥

---

೬೪–೬೫. ಹೀಗೆ ಉಪವಾಸಮಾಡಿ ಅತಿಶಯಶ್ರದ್ಧೆಯಿಂದ ಕೆಂಪುಗಂಧ, ಕೆಂಪು ಹೂವುಗಳಿಂದ ಪೂಜಿಸುತ್ತ ಒಂದು ವರ್ಷದ ಕೊನೆಯಲ್ಲಿ ಅವನು ಕುಷ್ಠ ವ್ಯಾಧಿಯಿಲ್ಲದವನಾಗಿ ದ್ವಾದಶಾದಿತ್ಯರಂತೆ ಕಾಂತಿಯುಳ್ಳವನಾದನು.

೬೬. ತರುವಾಯ ತನ್ನ ರಾಜ್ಯವನ್ನು ಹೊಂದಿ ಅನೇಕ ಭೋಗಗಳನ್ನು ಅನುಭವಿಸಿ ದೇಹಾವಸಾನದಲ್ಲಿ ಸೂರ್ಯನ ಆಲಯವನ್ನು ಸೇರಿದನು.

೬೭. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಹೀಗೆ ಅಲ್ಲಿ ವಿಶ್ವಾಮಿತ್ರನು ಸಮಸ್ತಜನರಿಗೆ ಸ್ಪಷ್ಟವಾಗಿ ತೋರುವ ಪುಷ್ಕರತ್ರಯವನ್ನು ರಚಿಸಿದನು.

೬೮. ಕಾರ್ತಿಕಮಾಸದಲ್ಲಿ ಕೃತ್ತಿಕಾನಕ್ಷತ್ರಯೋಗವಿರುವ ಹುಣ್ಣಿಮೆದಿನ ಅಲ್ಲಿ ಮಿಂದವನು ಬ್ರಹ್ಮಲೋಕಕ್ಕೆ ಹೋಗುವನು.

೬೯. ಹಾಗೆಯೇ ಬೃಹದ್ಬಲನು ಸ್ಥಾಪಿಸಿರುವ ಸೂರ್ಯನನ್ನು ಒಂದು ವರ್ಷಕಾಲ ಭಾನುವಾರದ ದಿನ ಅವಕಾಶಮಾಡಿಕೊಂಡು ನೋಡಿದ ಮಾನವನು ರೋಗಿಯಾಗಿದ್ದರೂ ರೋಗಮುಕ್ತನಾಗುವನು.

೭೦. ನೀರೋಗನು ಕೂಡಲೆ ಮನೋಭೀಷ್ಟವನ್ನು ಪಡೆಯುವನು. ನಿಷ್ಕಾಮನು ಸೂರ್ಯನ ಅನುಗ್ರಹದಿಂದ ಮೋಕ್ಷವನ್ನು ಹೊಂದುವನು.

ಕಾರ್ತಿಕ್ಯಾಂ ಕೃತ್ತಿಕಾಯೋಗೇ ವೃಷೋತ್ಸರ್ಗಂ ಕರೋತಿ ಯಃ ।
ಪುಷ್ಕರೇಷು ಸುಪುಣ್ಯೇಷು ಸೋಽಶ್ವಮೇಧಫಲಂ ಲಭೇತ್ ॥ ೭೧ ॥
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೭೨ ॥
ಏಕತಃ ಸರ್ವತೀರ್ಥಾನಿ ಸರ್ವದಾನಾನಿ ಚೈಕತಃ ।
ಏಕತಸ್ತು ವೃಷೋತ್ಸರ್ಗಃ ಕಾರ್ತಿಕ್ಯಾಂ ಪುಷ್ಕರೇಷು ಚ ॥ ೭೩ ॥
ಯಶ್ಚೈತಚ್ಛೃಣುಯಾನ್ನಿತ್ಯಂ ಪಠೇದ್ವಾ ಶ್ರದ್ಧಯಾನ್ವಿತಃ ।
ಸಂಪ್ರಾಪ್ಯ ಸರ್ವಕಾಮಾನ್ ವೈ ಬ್ರಹ್ಮಲೋಕೇ ಮಹೀಯತೇ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತ್ರಿಪುಷ್ಕರಮಾಹಾತ್ಮ್ಯವರ್ಣನಂ" ನಾಮ
ಪಂಚಚತ್ವಾರಿಂಶೋಽಧ್ಯಾಯಃ

---

೭೧. ಪುಣ್ಯಕರವಾದ ಆ ಪುಷ್ಕರದಲ್ಲಿ ಕಾರ್ತಿಕಮಾಸದ ಹುಣ್ಣಿಮೆಯ ದಿನ ವೃಷೋತ್ಸರ್ಗವನ್ನುಮಾಡಿದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೭೨. ಬಹುಮಂದಿ ಮಕ್ಕಳನ್ನು ಅಪೇಕ್ಷಿಸಬೇಕು. ಅವರಲ್ಲಿ ಒಬ್ಬನಾದರೂ ಗಯೆಗೆ ಹೋದಾನು. ಅಥವಾ ಅಶ್ವಮೇಧಯಾಗವನ್ನು ಮಾಡಿಯಾನು. ಅಥವಾ ನೀಲವೃಷೋತ್ಸರ್ಗ ಮಾಡಿಯಾನು.

೭೩. ಸಕಲತೀರ್ಥಗಳನ್ನೂ ಸಮಸ್ತದಾನಗಳನ್ನೂ ಒಂದೆಡೆಯಲ್ಲಿಯೂ, ಕಾರ್ತಿಕ ಮಾಸದಲ್ಲಿ ಪುಷ್ಕರದಲ್ಲಿ ಮಾಡುವ ವೃಷೋತ್ಸರ್ಗವನ್ನು ಇನ್ನೊಂದೆಡೆಯಲ್ಲಿಯೂ ಇಟ್ಟರೆ ಫಲವು ಸಮಾನವಾಗುವುದು.

೭೪. ನಿತ್ಯವೂ ಇದನ್ನು ಕೇಳುವವನೂ, ಶ್ರದ್ಧೆಯಿಂದ ಪಠಿಸುವವನೂ ಸಕಲೇಷ್ಟಾರ್ಥಗಳನ್ನು ಪಡೆದು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತ್ರಿಪುಷ್ಕರಮಾಹಾತ್ಮ್ಯವರ್ಣನ"ವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಚತ್ವಾರಿಂಶೋಽಧ್ಯಾಯಃ

### ಸರಸ್ವತೀತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಅನ್ಯಾನಿ ತತ್ರ ತೀರ್ಥಾನಿ ಯಾನಿ ಸಂತಿ ಮಹಾಮತೇ ।
ತಾನಿ ಕೀರ್ತಯ ಸರ್ವಾಣಿ ಪರಂ ಕೌತೂಹಲಂ ಹಿ ನಃ ॥ ೧ ॥

ಸೂತ ಉವಾಚ :—

ತತ್ರ ಸಾರಸ್ವತಂ ತೀರ್ಥಮನ್ಯದಸ್ತಿ ಸುಶೋಭನಂ ।
ಯತ್ರ ಸ್ನಾತೋಽತಿಮೂಕೋಽಪಿ ಭವೇದ್ವಾಕ್ಯವಿಚಕ್ಷಣಃ ॥ ೨ ॥
ಲಭತೇ ಚೇಪ್ಸಿತಾನ್ಕಾಮಾನ್ಮಾನುಷಾನ್ದೈವಿಕಾನಪಿ ।
ಬ್ರಹ್ಮಲೋಕಾದಿಪರ್ಯಂತಾಂಸ್ತಥಾ ಲೋಕಾನ್ದ್ವಿಜೋತ್ತಮಾಃ ॥ ೩ ॥
ಪುರಾಽಽಸೀತ್ಪಾರ್ಥಿವೋ ನಾಮ್ನಾ ವಿಖ್ಯಾತೋ ಬಲವರ್ಧನಃ ।
ಸಮುದ್ರವಲಯಾಮುರ್ವೀಂ ಬುಭುಜೇ ಯೋ ಭುಜಾರ್ಜಿತಾಂ ॥ ೪ ॥
ತಸ್ಯ ಪುತ್ರಃ ಸಮುತ್ಪನ್ನಃ ಸರ್ವಲಕ್ಷಣಸಂಯುತಃ ।
ತಸ್ಯ ನಾಮ ಪಿತಾ ಚಕ್ರೇ ಸಂಪ್ರಾಪ್ತೇ ದ್ವಾದಶೇಽಹನಿ ।
ಅಂಬುವೀಚಿರಿತಿ ಸ್ಪಷ್ಟಂ ಸಮಾಹೂಯ ದ್ವಿಜೋತ್ತಮಾನ್ ॥ ೫ ॥

---

## ಕನ್ನಡದ ಅನುವಾದ

### ಸರಸ್ವತೀತೀರ್ಥಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಅಲ್ಲಿರುವ ಇತರ ತೀರ್ಥಗಳನ್ನೂ ಹೇಳು. ನಮಗೆ ಅತ್ಯಂತ ಕುತೂಹಲವುಂಟಾಗಿದೆ.

೨. ಸೂತನು ಹೇಳುತ್ತಾನೆ:—ಅಲ್ಲಿ ಸಾರಸ್ವತವೆಂಬ ಮತ್ತೊಂದು ಮಂಗಳಕರವಾದ ತೀರ್ಥವಿದೆ. ಅಲ್ಲಿ ಮಿಂದ ಮಾನವನು ಅತ್ಯಂತ ಮೂಕನಾಗಿದ್ದರೂ ಮಾತಿನಲ್ಲಿ ನಿಪುಣನಾಗುವನು.

೩. ದ್ವಿಜವರ್ಯರೆ! ಮತ್ತು ಅವನು ಮಾನುಷ ದೈವಿಕೇಷ್ಟಾರ್ಥಗಳನ್ನು ಬ್ರಹ್ಮಲೋಕದವರೆಗಿನ ಲೋಕಗಳನ್ನು ಪಡೆಯುವನು.

೪. ಹಿಂದೆ ತನ್ನ ತೋಳಿನಿಂದ ಸಂಪಾದಿಸಿದ ಸಮುದ್ರದವರೆಗಿನ ಸಕಲ ಭೂಮಿಯನ್ನು ಆಳುತ್ತಿದ್ದ ಬಲವರ್ಧನನೆಂಬ ಚಕ್ರವರ್ತಿಯಿದ್ದನು.

೫. ಅವನಿಗೆ ಸಮಸ್ತ ಲಕ್ಷಣಸಂಪನ್ನನಾದ ಓರ್ವ ಪುತ್ರನು ಜನಿಸಿದನು. ತಂದೆಯು ಹನ್ನೆರಡನೆ ದಿನ ಬ್ರಾಹ್ಮಣರನ್ನು ಕರೆದು ಆ ಪುತ್ರನಿಗೆ ಅಂಬುವೀಚಿಯೆಂದು ಹೆಸರನ್ನಿಟ್ಟನು.

ತತಃ ಸ ವವೃಧೇ ಬಾಲೋ ಲಾಲಿತಸ್ತೇನ ಭೂಭುಜಾ ।
ಮೂಕಭಾವಂ ಸಮಾಪನ್ನೋ ನ ಶಕ್ನೋತಿ ಪ್ರಜಲ್ಪಿತುಂ ॥ ೬ ॥
ತತೋಽಸ್ಯ ಸಪ್ತಮೇ ವರ್ಷೇ ಸಂಪ್ರಾಪ್ತೇ ಬಲವರ್ಧನಃ ।
ಪಂಚತ್ವಂ ಸಮನುಪ್ರಾಪ್ತಃ ಸಂಗ್ರಾಮೇ ಶತ್ರುಭಿರ್ಹತಃ ॥ ೭ ॥
ತತೋ ಮೂಕೋಽಪಿ ಬಾಲೋಽಪಿ ಮಂತ್ರಿಭಿಸ್ತಸ್ಯ ಭೂಪತೇಃ ।
ಸ ಸುತಃ ಸ್ಥಾಪಿತೋ ರಾಜ್ಯೇ ಅಭಾವೇಽನ್ಯಸುತಸ್ಯ ಚ ॥ ೮ ॥
ಏವಂ ತಸ್ಯ ಮಹೀಪಸ್ಯ ರಾಜ್ಯಸ್ಥಸ್ಯ ಜಡಾತ್ಮನಃ ।
ಬಾಲತ್ವೇ ವರ್ತಮಾನಸ್ಯ ರಾಜ್ಯಂ ವಿಪ್ಲವಮಭ್ಯಗಾತ್ ॥ ೯ ॥
ತತೋ ಜಲಚರನ್ಯಾಯಃ ಸಂಪ್ರವೃತ್ತೋ ಮಹೀತಲೇ ।
ಪೀಡ್ಯಂತೇ ಸರ್ವಲೋಕಾಸ್ತು ದುರ್ಬಲಾ ಬಲವತ್ತರೈಃ ॥ ೧೦ ॥
ತತಸ್ತೇ ಮಂತ್ರಿಣಃ ಪ್ರೋಚುರ್ವಸಿಷ್ಠಂ ಸ್ವಪುರೋಹಿತಂ ।
ವಚೋಽರ್ಥಂ ನೃಪತೇರಸ್ಯ ಕುರೂಪಾಯಂ ಮಹಾಮುನೇ ॥ ೧೧ ॥
ಪಶ್ಯ ಕೃತ್ಸ್ನಂ ಧರಾಪೃಷ್ಠಂ ಶೂನ್ಯತಾಂ ಸಮುಪಸ್ಥಿತಂ ।
ಜಡತ್ವಾನ್ನೃಪತೇರಸ್ಯ ತಸ್ಮಾತ್ಕುರು ಯಥೋಚಿತಂ ॥ ೧೨ ॥
ತತಸ್ತು ಸುಚಿರಂ ಧ್ಯಾತ್ವಾ ದೀನಾನ್ ಪ್ರೋವಾಚ ಮಂತ್ರಿಣಃ ।
ಸರ್ವಾನಾರ್ತಿಸಮೋಪೇತಾಂಛೃಣ್ವತಸ್ತಸ್ಯ ಭೂಪತೇಃ ॥ ೧೩ ॥

---

೬. ಆ ದೊರೆಯ ಲಾಲನೆಯಿಂದ ವೃದ್ಧಿಗೊಂಡ ಆ ಬಾಲಕನು ಮೂಕನಾಗಿ ಮಾತನಾಡಲು ಸಮರ್ಥನಾಗಲಿಲ್ಲ.

೭. ಬಳಿಕ ಆ ಬಾಲಕನಿಗೆ ಏಳುವರ್ಷವಯಸ್ಸಾಗಲು ಶತ್ರುಗಳಿಂದ ಹೊಡೆಯಲ್ಪಟ್ಟು ಬಲವರ್ಧನನು ಮಡಿದನು.

೮. ತರುವಾಯ ಮಂತ್ರಿಗಳು ಆ ರಾಜನಿಗೆ ಇತರ ಮಕ್ಕಳಿಲ್ಲದಿರುವುದರಿಂದ ಮೂಕನಾಗಿದ್ದರೂ ಆ ಬಾಲಕನನ್ನು ರಾಜ್ಯದಲ್ಲಿ ಸ್ಥಾಪಿಸಿದರು.

೯. ಹೀಗೆ ಜಡನಾದ ಎಳೆವಯಸ್ಸಿನ ರಾಜನು ರಾಜ್ಯವಾಳುತ್ತಿರಲು ರಾಜ್ಯದಲ್ಲಿ ತೊಂದರೆಯುಂಟಾಯಿತು.

೧೦. ಪ್ರಪಂಚದಲ್ಲಿ ಜಲಚರಪ್ರಾಣಿಗಳ ನ್ಯಾಯವು ಉಂಟಾಯಿತು. ಬಲಿಷ್ಠರು ದುರ್ಬಲರನ್ನು ಪೀಡಿಸಿದರು.

೧೧–೧೨. ತರುವಾಯ ಮಂತ್ರಿಗಳು ಪುರೋಹಿತನಾದ ವಸಿಷ್ಠನನ್ನು ಕುರಿತು ಇಂತೆಂದರು. ಈ ರಾಜನು ಮಾತಾಡಲು ಉಪಾಯವನ್ನು ಮಾಡು. ಇವನು ಜಡನಾದ್ದರಿಂದ ಶೂನ್ಯವಾಗಿರುವ ಪ್ರಪಂಚವನ್ನು ನೋಡು. ಆದ್ದರಿಂದ ಯುಕ್ತವಾದುದನ್ನಾಚರಿಸು.

೧೩. ಬಳಿಕ ಆ ವಸಿಷ್ಠನು ಬಹಳಹೊತ್ತು ಆಲೋಚಿಸಿ ಆ ರಾಜನುಕೇಳುತ್ತಿರುವಾಗಲೆ ದೀನರೂ, ದುಃಖಗೊಂಡವರೂ ಆದ ಆ ಮಂತ್ರಿಗಳನ್ನು ಕುರಿತು ಇಂತೆಂದನು.

ಅಸ್ತಿ ಸಾರಸ್ವತಂ ತೀರ್ಥಂ ಸರ್ವಕಾಮಪ್ರದಂ ನೃಣಾಂ ।
ಹಾಟಕೇಶ್ವರಜೇ ಕ್ಷೇತ್ರೇ ತತ್ರಾಽಯಂ ಸ್ನಾತು ಭೂಪತಿಃ ॥ ೧೪ ॥
ಅಥ ತದ್ವಚನಾತ್ಸದ್ಯಃ ಸ ಗತ್ವಾ ತತ್ರ ಸತ್ವರಂ ।
ಸ್ನಾನಾತ್ತೀರ್ಥೇಽಥ ಸಂಜಾತಸ್ತತ್ಕ್ಷಣಾತ್ಸ ಕಲಸ್ವನಃ ॥ ೧೫ ॥
ತತ್ಪ್ರಭಾವಂ ಸರಸ್ವತ್ಯಾಃ ಸ ವಿಜ್ಞಾಯ ಮಹೀಪತಿಃ ।
ಶ್ರದ್ಧಯಾ ಪರಯಾ ಯುಕ್ತೋ ಧ್ಯಾಯಮಾನಃ ಸರಸ್ವತೀಂ ॥ ೧೬ ॥
ತತಸ್ತೂರ್ಣಂ ಸಮಾದಾಯ ಮೃತ್ತಿಕಾಂ ಸ ನದೀತಟಾತ್ ।
ಚಕಾರ ಭಾರತೀಂ ದೇವೀಂ ಸ್ವಯಮೇವ ಚತುರ್ಭುಜಾಂ ॥ ೧೭ ॥
ದಧತೀಂ ದಕ್ಷಿಣೇ ಹಸ್ತೇ ಕಮಲಂ ಸುಮನೋಹರಂ ।
ಅಕ್ಷಮಾಲಾಂ ತಥಾಽನ್ಯಸ್ಮಿಂ ಜಿತತಾರಕವರ್ಚಸಂ ॥ ೧೮ ॥
ಕಮಂಡಲುಂ ತಥಾಽನ್ಯಸ್ಮಿನ್ದಿವ್ಯವಾರಿಪ್ರಪೂರಿತಂ ।
ಪುಸ್ತಕಂ ಚ ತಥಾ ವಾಮೇ ಸರ್ವವಿದ್ಯಾಸಮುದ್ಭವಂ ॥ ೧೯ ॥
ತತೋ ಮೇಧ್ಯೇ ಶಿಲಾಪೃಷ್ಠೇ ತಾಂ ನಿವೇಶ್ಯ ಪ್ರಯತ್ನತಃ ।
ಪೂಜಯಾಮಾಸ ಸದ್ಭಕ್ತ್ಯಾ ಧೂಪಮಾಲ್ಯಾನುಲೇಪನೈಃ ॥ ೨೦ ॥
ಚಕಾರ ಚ ಸ್ತುತಿಂ ಪಶ್ಚಾಚ್ಛ್ರದ್ಧಾಪೂತೇನ ಚೇತಸಾ ।
ತದಗ್ರೇ ಪ್ರಯತೋ ಭೂತ್ವಾ ಸ್ವರೇಣ ಮಹತಾ ನೃಪಃ ॥ ೨೧ ॥

---

೧೪. ಹಾಟಕೇಶ್ವರ ಕ್ಷೇತ್ರದಲ್ಲಿ ಮಾನವರಿಗೆ ಸಕಲೇಷ್ಟಾರ್ಥಗಳನ್ನು ಕೊಡುವ ಸಾರಸ್ವತವೆಂಬ ತೀರ್ಥವಿರುವುದು. ಈ ರಾಜನು ಅಲ್ಲಿ ಸ್ನಾನಮಾಡಲಿ.

೧೫. ತರುವಾಯ ಆ ರಾಜನು ಮುನಿಯ ಮಾತಿನಿಂದ ಬೇಗನೆ ಆ ತೀರ್ಥಕ್ಕೆ ಹೋಗಿ ಅಲ್ಲಿ ಮಿಂದು ಕೂಡಲೆ ಇಂಪಾದ ಧ್ವನಿಯುಳ್ಳವನಾದನು.

೧೬–೧೭. ಅವನು ಸರಸ್ವತಿಯ ಪ್ರಭಾವವನ್ನರಿತು ಅತಿ ಶ್ರದ್ಧೆಯಿಂದ ಸಹಿತನಾಗಿ ಸರಸ್ವತಿಯನ್ನು ಧ್ಯಾನಿಸುತ್ತ ಬೇಗನೆ ನದಿಯ ದಡದಿಂದ ಮೃತ್ತಿಕೆಯನ್ನು ತೆಗೆದುಕೊಂಡು ತಾನೇ ನಾಲ್ಕು ತೋಳುಗಳುಳ್ಳ ಸರಸ್ವತೀದೇವಿಯನ್ನು ನಿರ್ಮಿಸಿದನು.

೧೮–೨೦. ಬಲಗೈಯಲ್ಲಿ ರಮ್ಯವಾದ ಕಮಲವನ್ನೂ, ಇನ್ನೊಂದು ಕೈಯಲ್ಲಿ ಜಪಸರವನ್ನೂ, ಮತ್ತೊಂದು ಕೈಯಲ್ಲಿ ದಿವ್ಯಜಲದಿಂದ ತುಂಬಿರುವ ಕಮಂಡಲುವನ್ನೂ, ಎಡಗೈಯಲ್ಲಿ ಸಕಲ ವಿದ್ಯೆಗಳಿರುವ ಪುಸ್ತಕವನ್ನೂ ಧರಿಸಿ ನಕ್ಷತ್ರದಂತೆ ಹೊಳೆಯುತ್ತಿರುವ ಆ ಸರಸ್ವತೀ ಪ್ರತಿಮೆಯನ್ನು ಪವಿತ್ರವಾದ ಕಲ್ಲಿನಲ್ಲಿ ಸ್ಥಾಪಿಸಿ ಭಕ್ತಿಯಿಂದ ಧೂಪ, ಮಾಲೆ, ಗಂಧಗಳಿಂದ ಅರ್ಚಿಸಿದನು.

೨೧. ಅನಂತರ ಶ್ರದ್ಧೆಗೊಂಡ ಮನಸ್ಸಿನಿಂದ ಅವಳ ಮುಂದೆ ಶುದ್ಧನಾಗಿ ಮಹಾಸ್ವರದಿಂದ ಸ್ತುತಿಮಾಡಿದನು.

ಸದಸದ್ದೇವಿ ಯತ್ಕಿಂಚಿದ್ಬಂಧಮೋಕ್ಷಾತ್ಮಕಂ ಪದಂ ।
ತತ್ಸರ್ವಂ ಗುಪ್ತಯಾ ವ್ಯಾಪ್ತಂ ತ್ವಯಾ ಕಾಷ್ಠಂ ಯಥಾಗ್ನಿನಾ ॥ ೨೨ ॥
ಸರ್ವಸ್ಯ ಸಿದ್ಧಿರೂಪೇಣ ತ್ವಂ ಜನಸ್ಯ ಹೃದಿ ಸ್ಥಿತಾ ।
ವಾಚಾರೂಪೇಣ ಜಿಹ್ವಾಯಾಂ ಜ್ಯೋತೀರೂಪೇಣ ಚಕ್ಷುಷಿ ॥ ೨೩ ॥
ಭಕ್ತಿಗ್ರಾಹ್ಯಾಽಸಿ ದೇವೇಶಿ ತ್ವಮೇಕಾ ಭುವನತ್ರಯೇ ।
ಶರಣಾಗತದೀನಾರ್ತಪರಿತ್ರಾಣಪರಾಯಣೇ ॥ ೨೪ ॥
ತ್ವಂ ಕೀರ್ತಿಸ್ತ್ವಂ ಧೃತಿರ್ಮೇಧಾ ತ್ವಂ ಭಕ್ತಿಸ್ತ್ವಂ ಪ್ರಭಾ ಸ್ಮೃತಾ ।
ತ್ವಂ ನಿದ್ರಾ ತ್ವಂ ಕ್ಷುಧಾ ಕೀರ್ತಿಃ ಸರ್ವಭೂತನಿವಾಸಿನೀ ॥ ೨೫ ॥
ತುಷ್ಟಿಃ ಪುಷ್ಟಿರ್ವಪುಃ ಪ್ರೀತಿಃ ಸ್ವಧಾ ಸ್ವಾಹಾ ವಿಭಾವರೀ ।
ರತಿಃ ಪ್ರೀತಿಃ ಕ್ಷಿತಿರ್ಗಂಗಾ ಸತ್ಯಂ ಧರ್ಮೋ ಮನಸ್ವಿನೀ ॥ ೨೬ ॥
ಲಜ್ಜಾ ಶಾಂತಿಃ ಸ್ಮೃತಿರ್ದಕ್ಷಾ ಕ್ಷಮಾ ಗೌರೀ ಚ ರೋಹಿಣೀ ।
ಸಿನೀವಾಲೀ ಕುಹೂ ರಾಕಾ ದೇವಮಾತಾ ದಿತಿಸ್ತಥಾ ॥ ೨೭ ॥
ಬ್ರಹ್ಮಾಣೀ ವಿನತಾ ಲಕ್ಷ್ಮೀಃ ಕದ್ರೂರ್ದಾಕ್ಷಾಯಣೀ ಶಿವಾ ।
ಗಾಯತ್ರೀ ಚಾಽಥ ಸಾವಿತ್ರೀ ಕೃಷಿರ್ವೃಷ್ಟಿಃ ಶ್ರುತಿಃ ಕಲಾ ॥ ೨೮ ॥
ಬಲಾ ನಾಡೀ ತುಷ್ಟಿಕಾಷ್ಠಾ ರಸನಾ ಚ ಸರಸ್ವತೀ ।
ಯತ್ಕಿಂಚಿತ್ತ್ರಿಷು ಲೋಕೇಷು ಬಹುತ್ವಾದ್ಯನ್ನ ಕೀರ್ತಿತಂ ॥ ೨೯ ॥

---

೨೨. ದೇವಿ! ನೀನು ಸದಸದಾತ್ಮಕವೂ, ಬಂಧಮೋಕ್ಷರೂಪವೂ ಆದ ಸ್ಥಾನವನ್ನು ಅಗ್ನಿಯು ಕಟ್ಟಿಗೆಯಲ್ಲಿ ಗುಪ್ತವಾಗಿ ವ್ಯಾಪಿಸಿರುವಂತೆ ವ್ಯಾಪಿಸಿರುವೆ.

೨೩. ನೀನು ಸಕಲ ಜನರ ಮನಸ್ಸಿನಲ್ಲಿ ಸಿದ್ಧಿರೂಪದಿಂದಲೂ, ನಾಲಿಗೆಯಲ್ಲಿ ವಾಗ್ರೂಪದಿಂದಲೂ, ಕಣ್ಣಿನಲ್ಲಿ ಜ್ಯೋತಿರೂಪದಿಂದಲೂ ನೆಲೆಸಿರುವೆ.

೨೪. ಶರಣಾಗತರೂ, ದೀನರೂ, ದುಃಖಿತರೂ ಆದ ಜನರನ್ನು ಕಾಪಾಡುವ ದೇವೇಶಿ! ನೀನೊಬ್ಬಳೇ ತ್ರಿಭುವನದಲ್ಲಿ ಭಕ್ತಿಪರವಶಳಾಗಿರುವೆ.

೨೫—೩೧. ದೇವಿ! ನೀನು ಕೀರ್ತಿ, ಧೃತಿ, ಮೇಧಾ, ಭಕ್ತಿ, ಪ್ರಭಾ, ನಿದ್ರಾ, ಕ್ಷುಧಾ, ಕೀರ್ತಿ, ಸರ್ವಭೂತ ನಿವಾಸಿನೀ, ತುಷ್ಟಿ, ಪುಷ್ಟಿ, ವಪುಃ, ಪ್ರೀತಿ, ಸ್ವಧಾ, ಸ್ವಾಹಾ, ರಾತ್ರಿ, ರತಿ, ಭೂಮಿ, ಗಂಗಾ, ಸತ್ಯ, ಧರ್ಮ, ಮನಸ್ವಿನೀ, ಲಜ್ಜಾ, ಶಾಂತಿ, ಸ್ಮೃತಿ, ದಕ್ಷಾ, ಕ್ಷಮಾ, ಗೌರೀ, ರೋಹಿಣೀ, ಸಿನೀವಾಲೀ, ಕುಹೂ, ರಾಕಾ, ದೇವಮಾತೆ, ದಿತಿ, ಬ್ರಹ್ಮಾಣೀ, ವಿನತಾ, ಲಕ್ಷ್ಮೀ, ಕದ್ರೂ, ದಾಕ್ಷಾಯಣೀ, ಶಿವಾ, ಗಾಯತ್ರೀ, ಸಾವಿತ್ರೀ, ಕೃಷಿ, ವೃಷ್ಟಿ, ಶ್ರುತಿ, ಕಲಾ, ಬಲಾ, ನಾಡೀ, ತುಷ್ಟಿ, ಕಾಷ್ಠಾ, ರಸನಾ, ಸರಸ್ವತೀ ಈ ರೂಪಳಾಗಿರುವೆ. ಮೂರು ಲೋಕಗಳಲ್ಲಿರುವ ನಿನ್ನ ಇಂಗಿತನೇಂಗಿತ ಮೊದ

ಇಂಗಿತಂ ನೇಂಗಿತಂ ತಚ್ಚ ತದ್ರೂಪಂ ತೇ ಸುರೇಶ್ವರಿ ।
ಗಂಧರ್ವಾಃ ಕಿನ್ನರಾ ದೇವಾಃ ಸಿದ್ಧವಿದ್ಯಾಧರೋರಗಾಃ ॥ ೩೦ ॥
ಯಕ್ಷಗುಹ್ಯಕಭೂತಾಶ್ಚ ದೈತ್ಯಾ ಯೇ ಚ ವಿನಾಯಕಾಃ ।
ತ್ವತ್ಪ್ರಸಾದೇನ ತೇ ಸರ್ವೇ ಸಂಸಿದ್ಧಿಂ ಪರಮಾಂ ಗತಾಃ ॥ ೩೧ ॥
ತಥಾಽನ್ಯೇಽಪಿ ಬಹುತ್ವಾದ್ಯೇ ನ ಮಯಾ ಪರಿಕೀರ್ತಿತಾಃ ।
ಆರಾಧಿತಾಸ್ತು ಕೃಚ್ಛ್ರೇಣ ಪೂಜಿತಾಶ್ಚ ಸುವಿಸ್ತರೈಃ ।
ಹರಂತಿ ದೇವತಾಃ ಪಾಪಮನ್ಯೇ ತ್ವಂ ಕೀರ್ತಿತಾಽಪಿ ಚ ॥ ೩೨ ॥
ಏವಂ ಸ್ತುತಾ ಸಾ ದೇವೇಶೀ ಭೂಭುಜಾ ತೇನ ಭಾರತೀ ।
ಯಯೌ ಪ್ರತ್ಯಕ್ಷತಾಂ ತೂರ್ಣಂ ಪ್ರಾಹ ಚೇದಂ ಸುಹರ್ಷಿತಾ ॥ ೩೩ ॥

ಸರಸ್ವತ್ಯುವಾಚ :—

ಸ್ತೋತ್ರೇಣಾನೇನ ಭೂಪಾಲ ಭಕ್ತ್ಯಾ ಸುಸ್ಥಿರಯಾ ಸದಾ ।
ಪರಿತುಷ್ಟಾಽಸ್ಮಿ ತೇನಾಽಽಶು ವರಂ ವೃಣು ಯಥೇಪ್ಸಿತಂ ॥ ೩೪ ॥

ರಾಜೋವಾಚ :—

ಅದ್ಯಪ್ರಭೃತಿ ಮದ್ವಾಕ್ಯಾತ್ತ್ವಯಾ ಸ್ಥೇಯಮಸಂಶಯಂ ।
ಅತ್ರಾರ್ಚಾಯಾಂ ತ್ರಿಲೋಕೇಽಸ್ಮಿನ್ಯಾವತ್ಕೀರ್ತಿರ್ಮಮ ಸ್ಥಿರಾ ॥ ೩೫ ॥

---

ಲಾದ ರೂಪಗಳು ಅಧಿಕವಾಗಿರುವುದರಿಂದ ಹೇಳಲಿಲ್ಲ. ಗಂಧರ್ವರು, ಕಿನ್ನರರು, ದೇವತೆಗಳು, ಸಿದ್ಧರು, ವಿಧ್ಯಾಧರರು, ಉರಗರು, ಯಕ್ಷರು, ಗುಹ್ಯರು, ಭೂತಗಳು, ದೈತ್ಯರು, ವಿನಾಯಕರು ಇವರು ನಿನ್ನ ಅನುಗ್ರಹದಿಂದ ಉತ್ತಮ ಸಿದ್ಧಿಯನ್ನು ಪಡೆದಿರುವರು.

೩೨. ನಿನ್ನ ಅನುಗ್ರಹದಿಂದ ಸಿದ್ಧಿಯನ್ನು ಪಡೆದಿರುವ ಇತರರು ಅಧಿಕರಾಗಿರುವುದರಿಂದ ಅವರನ್ನು ಹೇಳಲಿಲ್ಲ. ಇತರ ದೇವತೆಗಳು ಕಷ್ಟದಿಂದ ಆರಾಧಿಸಲ್ಪಟ್ಟವರೂ, ಬಹುವಾಗಿ ಪೂಜಿಸಲ್ಪಟ್ಟವರೂ ಆಗಿ ಪಾಪವನ್ನು ಪರಿಹರಿಸುವರು. ನೀನು ನಾಮಕೀರ್ತನೆಯಿಂದಲೆ ಪಾಪವನ್ನು ನಿವಾರಿಸುವೆ.

೩೩. ಆ ಅರಸನು ಹೀಗೆ ಸ್ತುತಿಸಲು ಸರಸ್ವತಿಯು ಬೇಗನೆ ಪ್ರತ್ಯಕ್ಷಳಾಗಿ ಸಂತೋಷದಿಂದ ಇಂತೆಂದಳು.

೩೪. ಸರಸ್ವತಿಯು ಹೇಳುತ್ತಾಳೆ:—ಅರಸ! ನಾನು ನಿನ್ನ ಈ ಸ್ತೋತ್ರದಿಂದಲೂ, ಸ್ಥಿರಭಕ್ತಿಯಿಂದಲೂ ಸಂತೋಷಗೊಂಡಿರುವೆನು. ಆದ್ದರಿಂದ ಇಷ್ಟವಾದ ವರವನ್ನು ಕೇಳಿಕೊ.

೩೫. ರಾಜನು ಹೇಳುತ್ತಾನೆ:—ನೀನು ನನ್ನ ಮಾತಿನಿಂದ ಇದು ಮೊದಲ್ಗೊಂಡು ನನ್ನ ಕೀರ್ತಿಯು ಮೂರು ಲೋಕಗಳಲ್ಲಿ ಸ್ಥಿರವಾಗಿರುವವರೆಗೆ ಇಲ್ಲಿ ಪೂಜೆಮಾಡಿಸಿಕೊಳ್ಳುತ್ತಿರಬೇಕು.

ಯಸ್ತ್ವಾಮಾರಾಧಯೇತ್ಸನ್ಮ್ಯಗತ್ರಸ್ಥಾಂ ಮನ್ನಿಮಿತ್ತತಃ ।
ಭಕ್ತ್ಯಾನುರೂಪಮೇವಾಽಽಶು ತಸ್ಮೈ ದೇಯಂ ತ್ವಯಾ ಹಿ ತತ್ ॥ ೩೬ ॥

ಸರಸ್ವತ್ಯುವಾಚ :—

ಯೋ ಮಾಮತ್ರ ಸ್ಥಿತಾಂ ನಿತ್ಯಂ ಸ್ನಾತ್ವಾಽತ್ರ ಸಲಿಲೇ ಶುಭೇ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಪೂಜಯಿಷ್ಯತಿ ಮಾನವಃ ।
ತಸ್ಯಾಽಹಂ ವಾಂಛಿತಾನ್ ಕಾಮಾನ್ ಸಂಪ್ರದಾಸ್ಯಾಮಿ ಪಾರ್ಥಿವ ॥ ೩೭ ॥

ಸೂತ ಉವಾಚ :—

ಏವಂ ತತ್ರ ಸ್ಥಿತಾ ದೇವೀ ಸ್ವಯಮೇವ ಸರಸ್ವತೀ ।
ತತಃಪ್ರಭೃತಿ ಲೋಕಾನಾಂ ಹಿತಾಯ ಪರಮೇಶ್ವರೀ ॥ ೩೮ ॥
ಅಷ್ಟಮ್ಯಾಂ ಚ ಚತುರ್ದಶ್ಯಾಮುಪವಾಸಪರಾಯಣಃ ॥ ೩೯ ॥
ಯಸ್ತಾಂ ಪೂಜಯತೇ ಮರ್ತ್ಯಃ ಶ್ವೇತಪುಷ್ಪಾನುಲೇಪನೈಃ ।
ಸ ಸ್ಯಾದ್ವಾಗ್ಮೀ ಸುಮೇಧಾವೀ ಸದಾ ಜನ್ಮನಿ ಜನ್ಮನಿ ॥ ೪೦ ॥
ಸರಸ್ವತ್ಯಾಃ ಪ್ರಸಾದೇನ ಜಾಯಮಾನಃ ಪುನಃ ಪುನಃ ।
ಅನ್ವಯೇಽಪಿ ನ ತಸ್ಯೈವ ಕಶ್ಚಿನ್ಮೂರ್ಖಃ ಪ್ರಜಾಯತೇ ॥ ೪೧ ॥
ಯೋ ಧರ್ಮಶ್ರವಣಂ ತಸ್ಯಾಃ ಪುರತಃ ಕುರುತೇ ನರಃ ।
ಸ ನೂನಂ ವಸತಿ ಸ್ವರ್ಗೇ ತತ್ಪ್ರಭಾವಾದ್ಯುಗತ್ರಯಂ ॥ ೪೨ ॥

---

೩೬. ನನಗಾಗಿ ಇಲ್ಲಿ ನೆಲಸಿರುವ ನಿನ್ನನ್ನು ಭಕ್ತಿಯಿಂದ ಪೂಜಿಸುವವರಿಗೆ ಇಷ್ಟಾರ್ಥವನ್ನು ನೀಡು.

೩೭. ಸರಸ್ವತಿಯು ಹೇಳುತ್ತಾಳೆ:—ದೊರೆಯೆ! ಈ ನೀರಿನಲ್ಲಿ ಮಿಂದು ಇಲ್ಲಿರುವ ನನ್ನನ್ನು ಅಷ್ಟಮೀ ಚತುರ್ದಶೀ ದಿನಗಳಲ್ಲಿ ಪೂಜಿಸುವ ಮಾನವನಿಗೆ ಇಷ್ಟಾರ್ಥಗಳನ್ನು ಕೊಡುವೆನು.

೩೮. ಸೂತನು ಹೇಳುತ್ತಾನೆ:—ಹೀಗೆ ಸರಸ್ವತೀ ದೇವಿಯು ಲೋಕಕ್ಷೇಮಕ್ಕಾಗಿ ಅದು ಮೊದಲ್ಗೊಂಡು ಅಲ್ಲಿ ನೆಲೆಸಿದಳು.

೩೯—೪೦. ಅವಳನ್ನು ಅಷ್ಟಮೀ ಚತುರ್ದಶೀ ದಿನಗಳಲ್ಲಿ ಉಪವಾಸಮಾಡಿ ಶ್ವೇತಪುಷ್ಪ, ಗಂಧಗಳಿಂದ ಪೂಜಿಸುವ ಮಾನವನು ಪ್ರತಿ ಜನ್ಮದಲ್ಲಿಯೂ ವಾಚಾಲನೂ, ಬುದ್ಧಿವಂತನೂ ಆಗುವನು.

೪೧. ಅವನ ವಂಶದಲ್ಲಿ ಹುಟ್ಟುವವನೂ ಸರಸ್ವತಿಯ ಅನುಗ್ರಹದಿಂದ ಮೂರ್ಖನಾಗುವುದಿಲ್ಲ.

೪೨. ಅವಳ ಮುಂದೆ ಧರ್ಮಶ್ರವಣ ಮಾಡುವವನೂ ಅವಳ ಪ್ರಭಾವದಿಂದ ಮೂರು ಯುಗಗಳ ಕಾಲ ನಿಶ್ಚಯವಾಗಿಯೂ ಸ್ವರ್ಗದಲ್ಲಿ ವಾಸಮಾಡುವನು.

ವಿದ್ಯಾದಾನಂ ನರೋ ಯಶ್ಚ ತಸ್ಯಾ ಹ್ಯಾಯತನೇ ಸದಾ ।
ಕರೋತಿ ಶ್ರದ್ಧಯಾ ಯುಕ್ತಃ ಸೋಽಶ್ವಮೇಧಫಲಂ ಲಭೇತ್ ॥ ೪೩ ॥
ಯೋ ಯಚ್ಛತಿ ದ್ವಿಜೇಂದ್ರಾಯ ಧರ್ಮಶಾಸ್ತ್ರಸಮುದ್ಭವಂ ।
ಪುಸ್ತಕಂ ವಾಜಮೇಧಸ್ಯ ಸ ಸಮಗ್ರಂ ಫಲಂ ಲಭೇತ್ ॥ ೪೪ ॥
ಯೋ ವೇದಾಽಧ್ಯಯನಂ ತಸ್ಯಾಃ ಕರೋತಿ ಪುರತಃ ಸ್ಥಿತಃ ।
ಸೋಽಗ್ನಿಷ್ಟೋಮಸ್ಯ ಯಜ್ಞಸ್ಯ ಕೃತ್ಸ್ನಂ ಫಲಮವಾಪ್ನುಯಾತ್ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸರಸ್ವತೀತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

೪೩. ಸರಸ್ವತೀ ದೇವಾಲಯದಲ್ಲಿ ಶ್ರದ್ಧೆಯಿಂದ ವಿದ್ಯಾದಾನ ಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೪೪. ಇಲ್ಲಿ ಬ್ರಾಹ್ಮಣನಿಗೆ ಧರ್ಮಶಾಸ್ತ್ರದ ಪುಸ್ತಕವನ್ನು ದಾನಮಾಡುವವನು ವಾಜಪೇಯಯಾಗದ ಸಂಪೂರ್ಣ ಫಲವನ್ನು ಪಡೆಯುವನು.

೪೫. ಆ ಸರಸ್ವತಿಯ ಮುಂದೆ ವೇದಾಧ್ಯಯನ ಮಾಡುವವನು ಅಗ್ನಿಷ್ಟೋಮ ಯಾಗದ ಸಂಪೂರ್ಣ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸರಸ್ವತೀತೀರ್ಥಮಾಹಾತ್ಮ್ಯವರ್ಣನ"ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಚತ್ವಾರಿಂಶೋಽಧ್ಯಾಯಃ

### ಮಹಾಕಾಲೇಶ್ವರಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಮಹಾಕಾಲಸ್ಯ ಮಾಹಾತ್ಮ್ಯಂ ವಿಸ್ತರೇಣ ಮಹಾಮತೇ ।
ಅಸ್ಮಾಕಂ ಸೂತಜ ಬ್ರೂಹಿ ಸರ್ವಂ ವೇತ್ತಿ ಯತೋ ಭವಾನ್ ॥ ೧ ॥

ಸೂತ ಉವಾಚ :—

ಆಸೀತ್ಪೂರ್ವಂ ಮಹೀಪಾಲ ಇಕ್ಷ್ವಾಕುಕುಲನಂದನಃ ।
ರುದ್ರಸೇನ ಇತಿ ಖ್ಯಾತಃ ಸರ್ವಶತ್ರುನಿಷೂದನಃ ॥ ೨ ॥
ಸಮುದ್ರ ಇವ ಗಾಂಭೀರ್ಯೇ ಸೌಮ್ಯತ್ವೇ ಶಶಿಸನ್ನಿಭಃ ।
ವೀರ್ಯೇ ಯಥಾ ಸಹಸ್ರಾಕ್ಷೋ ರೂಪೇ ಕಂದರ್ಪಸನ್ನಿಭಃ ॥ ೩ ॥
ತಸ್ಯ ಕಾಂತೀತಿ ವಿಖ್ಯಾತಾ ಪುರೀ ಸರ್ವಗುಣಾನ್ವಿತಾ ।
ರಾಜಧಾನ್ಯಭವಚ್ಛ್ರೇಷ್ಠಾ ಪ್ರೋಚ್ಚಪ್ರಾಕಾರತೋರಣಾ ॥ ೪ ॥
ತಥೈವಾಸೀತ್ಪ್ರಿಯಾ ತಸ್ಯ ಭಾರ್ಯಾ ಪರಮಸಂಮತಾ ।
ಖ್ಯಾತಾ ಪದ್ಮವತೀ ನಾಮ ರೂಪೌದಾರ್ಯಗುಣಾನ್ವಿತಾ ॥ ೫ ॥

---

### ಕನ್ನಡದ ಅನುವಾದ

#### ಮಹಾಕಾಲೇಶ್ವರಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಎಲ್ಲವನ್ನೂ ತಿಳಿದಿರುವುದರಿಂದ ಮಹಾಕಾಲನ ಮಾಹಾತ್ಮ್ಯೆಯನ್ನು ವಿಸ್ತಾರವಾಗಿ ನಮಗೆ ಹೇಳು.

೨. ಸೂತನು ಹೇಳುತ್ತಾನೆ:—ಹಿಂದೆ ಸಕಲ ಶತ್ರುಗಳನ್ನು ನಾಶಗೊಳಿಸುವ ಇಕ್ಷ್ವಾಕುವಂಶದ ರುದ್ರಸೇನನೆಂಬ ರಾಜನಿದ್ದನು.

೩. ಅವನು ಗಾಂಭೀರ್ಯದಲ್ಲಿ ಸಮುದ್ರದಂತೆಯೂ, ಸಾಧುತ್ವದಲ್ಲಿ ಚಂದ್ರನಂತೆಯೂ, ಪರಾಕ್ರಮದಲ್ಲಿ ಇಂದ್ರನಂತೆಯೂ, ಸೌಂದರ್ಯದಲ್ಲಿ ಮನ್ಮಥನಂತೆಯೂ ಇದ್ದನು.

೪. ಅವನಿಗೆ ಸಕಲ ಗುಣಗಳಿಂದ ಕೂಡಿರುವುದೂ, ಉನ್ನತವಾದ ಪ್ರಾಕಾರ ತೋರಣಗಳಿಂದ ಸಹಿತವಾಗಿರುವುದೂ, ಉತ್ತಮವೂ ಆದ ಕಾಂತಿಯೆಂಬ ಪಟ್ಟಣವು ರಾಜಧಾನಿಯಾಗಿದ್ದಿತು.

೫. ಹಾಗೆಯೇ ಅವನಿಗೆ ಪ್ರಿಯಳೂ, ಅತ್ಯಂತ ಸಮ್ಮತಳೂ, ರೂಪೌದಾರ್ಯ ಗುಣಗಳಿಂದ ಕೂಡಿದವಳೂ ಆದ ಪದ್ಮವತಿಯೆಂಬ ಪತ್ನಿಯಿದ್ದಳು.

ಸ ತಯಾ ಸಹಿತೋ ರಾಜಾ ವೈಶಾಖ್ಯಾದಿವಸೇ ಸದಾ ।
ಸಮಭ್ಯೇತಿ ನಿಜಸ್ಥಾನಾತ್ಸೈನ್ಯೇನಾಲ್ಪೇನ ಸಂವೃತಃ ॥ ೬ ॥
ಚಮತ್ಕಾರಪುರೇ ಕ್ಷೇತ್ರೇ ಪೀಠೇ ತತ್ರ ದ್ವಿಜೋತ್ತಮಾಃ ।
ಮಹಾಕಾಲಸ್ಯ ದೇವಸ್ಯ ಪುರತೋ ರಾತ್ರಿಜಾಗರಂ ।
ಕರೋತಿ ಶ್ರದ್ಧಯಾ ಯುಕ್ತಃ ಸಭಾರ್ಯಃ ಸ ಮಹೀಪತಿಃ ॥ ೭ ॥
ಉಪವಾಸಪರೋ ಭೂತ್ವಾ ಧ್ಯಾಯಮಾನೋ ಮಹೇಶ್ವರಂ ।
ಗೀತವಾದ್ಯೇನ ಹೃದ್ಯೇನ ನೃತ್ಯೇನ ದ್ವಿಜಸತ್ತಮಾಃ ।
ಧರ್ಮಾಖ್ಯಾನೇನ ವಿಪ್ರಾಣಾಂ ವೇದಾಧ್ಯಯನವಿಸ್ತರೈಃ ॥ ೮ ॥
ತತಃ ಪ್ರಾತಃ ಸಮುತ್ಥಾಯ ಸ್ನಾತ್ವಾ ಧೌತಾಂಬರಃ ಶುಚಿಃ ।
ದದೌ ದಾನಾನಿ ವಿಪ್ರೇಭ್ಯಸ್ತಪಸ್ವಿಭ್ಯೋ ವಿಶೇಷತಃ ॥ ೯ ॥
ದೀನಾಂಧಕೃಪಣೇಭ್ಯಶ್ಚ ತಥಾಽನ್ಯೇಭ್ಯಃ ಸಹಸ್ರಶಃ ।
ವರ್ಷೇ ವರ್ಷೇ ಸದೈವಂ ಸ ಸಮಭ್ಯೇತ್ಯ ಮಹೀಪತಿಃ ।
ವೈಶಾಖ್ಯಾಂ ಜಾಗರಂ ತಸ್ಯ ದೇವಸ್ಯ ಪುರತೋಽಕರೋತ್ ॥ ೧೦ ॥
ಯಥಾ ಯಥಾ ಸ ಭೂಪಾಲಃ ಕುರುತೇ ರಾತ್ರಿಜಾಗರಂ ।
ಮಹಾಕಾಲಾಗ್ರತಸ್ತಸ್ಯ ತಥಾ ವೃದ್ಧಿಃ ಪ್ರಜಾಯತೇ ॥ ೧೧ ॥
ಶತ್ರವೋ ವಿಲಯಂ ಯಾಂತಿ ಲಕ್ಷ್ಮೀರ್ವೃದ್ಧಿಂ ಪ್ರಗಚ್ಛತಿ ।
ಏಕದಾ ಸ ಸಮಾಯಾತಸ್ತತ್ರ ಯಾವನ್ಮಹೀಪತಿಃ ॥ ೧೨ ॥

---

೬–೮. ಆ ರುದ್ರಸೇನ ರಾಜನು ವೈಶಾಖಮಾಸದ ದಿನಗಳಲ್ಲಿ ಆ ಪತ್ನಿಯಿಂದಲೂ, ಸ್ವಲ್ಪ ಸೈನ್ಯದಿಂದಲೂ ಸಹಿತನಾಗಿ ತನ್ನ ಸ್ಥಳದಿಂದ ಹೊರಟು ಚಮತ್ಕಾರಪುರ ಕ್ಷೇತ್ರದ ಈ ಪೀಠಕ್ಕೆ ಬಂದು ಉಪವಾಸಮಾಡಿ ಶಿವನನ್ನು ಧ್ಯಾನಿಸುತ್ತ ಅತ್ಯಂತ ಶ್ರದ್ಧೆಯಿಂದ ಮಹಾಕಾಲನ ಮುಂದೆ ಗೀತ, ವಾದ್ಯ, ಮನೋಹರವಾದ ನೃತ್ಯ, ಧರ್ಮಕಥನ, ಬ್ರಾಹ್ಮಣರ ವೇದಾಧ್ಯಯನ ಇವುಗಳಿಂದ ರಾತ್ರಿ ಜಾಗರಣೆ ಮಾಡುತ್ತಿದ್ದನು.

೯–೧೦. ತರುವಾಯ ಬೆಳಗ್ಗೆ ಎದ್ದು ಮಿಂದು ಮಡಿಬಟ್ಟೆಯನ್ನುಟ್ಟು ಶುದ್ಧನಾಗಿ ಬ್ರಾಹ್ಮಣರಿಗೂ, ಮುನಿಗಳಿಗೂ, ದೀನರಿಗೂ, ಅಂಧ ಕೃಪಣರಿಗೂ, ಇನ್ನೂ ಇತರ ಸಹಸ್ರಾರು ಮಂದಿಗೂ ದಾನಗಳನ್ನಿತ್ತನು. ಹೀಗೆ ಆ ರಾಜನು ಪ್ರತಿವರ್ಷವೂ ವೈಶಾಖ ಮಾಸದಲ್ಲಿ ಅಲ್ಲಿಗೆ ಬಂದು ಆ ಶಿವನ ಮುಂದೆ ಜಾಗರಣೆ ಮಾಡುತ್ತಿದ್ದನು.

೧೧. ಆ ರಾಜನು ಆ ಮಹಾಕಾಲನ ಮುಂದೆ ರಾತ್ರಿ ಜಾಗರಣೆ ಮಾಡಿದ ಹಾಗೆಲ್ಲ ಅವನ ಎಲ್ಲ ವಸ್ತುಗಳಿಗೂ ವೃದ್ಧಿಯುಂಟಾಗುವುದು.

೧೨–೧೫. ಹಾಗೆಯೇ ಶತ್ರುಗಳು ನಾಶವಾದರು. ಸಂಪತ್ತು ಹೆಚ್ಚಿತು.

ತತ್ರೈವ ದಿವಸೇ ತಾವನ್ಮಹಾಕಾಲಸ್ಯ ಜಾಗ್ರತಃ ।
ಅಪಶ್ಯದ್ಬ್ರಾಹ್ಮಣಶ್ರೇಷ್ಠಾನ್ನಾನಾದಿಗ್ಭ್ಯಃ ಸಮಾಗತಾನ್ ॥ ೧೩ ॥
ವೇದಾಧ್ಯಯನಸಂಪನ್ನಾನ್ ವ್ರತನಿಷ್ಠಾಪರಾಯಣಾನ್ ।
ಏಕೇ ತತ್ರ ಕಥಾಶ್ಚಕ್ರುಃ ಸುಪುಣ್ಯಾ ಬ್ರಾಹ್ಮಣೋತ್ತಮಾಃ ॥ ೧೪ ॥
ರಾಜರ್ಷೀಣಾಂ ಪುರಾಣಾನಾಂ ದೇವರ್ಷೀಣಾಂ ತಥಾ ಪರೇ ।
ತೀರ್ಥಾನಾಂ ಚ ತಥಾ ಚಾಽನ್ಯೇ ಬ್ರಹ್ಮರ್ಷೀಣಾಂ ತಥಾ ಪರೇ ।
ಯಜ್ಞಾನಾಂ ಸಾಗರಾಣಾಂ ಚ ದ್ವೀಪಾನಾಂ ಚ ಮನೋಹರಾಃ ॥ ೧೫ ॥
ಅಥ ತಾನ್ ಪೃಥಿವೀಪಾಲಃ ಸ ಪ್ರಣಮ್ಯ ಯಥಾಕ್ರಮಂ ।
ಉಪವಿಷ್ಟಃ ಸಭಾಮಧ್ಯೇ ತೈಃ ಸರ್ವೈಶ್ಲಾಘಿನಂದಿತಃ ॥ ೧೬ ॥
ಕಸ್ಮಿಂಶ್ಚಿದಥ ಸಂಪ್ರಾಪ್ತೇ ಕಥಾಂತೇ ತೇ ಮುನೀಶ್ವರಾಃ ।
ಪಪ್ರಚ್ಛುರ್ಭೂಮಿಪಾಲಂ ತು ಕೌತೂಹಲಸಮನ್ವಿತಾಃ ॥ ೧೭ ॥
ವೈಶಾಖೀದಿವಸೇ ರಾಜಂಸ್ತ್ವಂ ಸದಾಽಭ್ಯೇತ್ಯ ದೂರತಃ ।
ವರ್ಷೇ ವರ್ಷೇಽಸ್ಯ ದೇವಸ್ಯ ಪುರತೋ ರಾತ್ರಿಜಾಗರಂ ॥ ೧೮ ॥
ಪ್ರಕರೋಷಿ ಪ್ರಯತ್ನೇನ ತ್ಯಕ್ತ್ವಾಽನ್ಯಾಃ ಸಕಲಾಃ ಕ್ರಿಯಾಃ ।
ಸ್ನಾನದಾನಾದಿಕಾ ಯಾಶ್ಚ ನಿರ್ದಿಷ್ಟಾಃ ಶಾಸ್ತ್ರಚಿಂತಕೈಃ ॥ ೧೯ ॥

---

ಒಂದಾನೊಂದು ದಿನ ಅವನು ಅಲ್ಲಿಗೆ ಬಂದಾಗ ಮಹಾಕಾಲನ ಮುಂದೆ ನಾನಾ ದಿಕ್ಕುಗಳಿಂದ ಬಂದವರೂ, ವೇದಾಧ್ಯಯನ ಸಂಪನ್ನರೂ, ವ್ರತನಿರತರೂ ಆದ ಬ್ರಾಹ್ಮಣರನ್ನು ಕಂಡನು. ಅವರಲ್ಲಿ ಕೆಲವು ಮಂದಿ ಬ್ರಾಹ್ಮಣರು ಹಿಂದಿನ ರಾಜರ್ಷಿಗಳ ಕಥೆಗಳನ್ನೂ, ಇನ್ನು ಕೆಲವರು ದೇವರ್ಷಿಗಳ ಕಥೆಯನ್ನೂ, ಮತ್ತೆ ಕೆಲವರು ತೀರ್ಥಗಳ ಕಥೆಯನ್ನೂ, ಇನ್ನು ಕೆಲವರು ಬ್ರಹ್ಮರ್ಷಿಗಳು, ಯಜ್ಞ, ಸಾಗರಗಳು, ದ್ವೀಪಗಳು ಇವುಗಳ ಮನೋಹರ ಕಥೆಗಳನ್ನೂ ಹೇಳುತ್ತಿದ್ದರು.

೧೬. ಬಳಿಕ ಆ ರಾಜನು ಅವರನ್ನು ಕ್ರಮವಾಗಿ ನಮಸ್ಕರಿಸಿ ಅವರೆಲ್ಲರಿಂದಲೂ ಶ್ಲಾಘಿತನಾಗಿ ಸಭೆಯ ಮಧ್ಯದಲ್ಲಿ ಕುಳಿತನು.

೧೭. ಆ ಮುನಿವರ್ಯರು ಯಾವುದೊ ಒಂದು ಕಥೆಯು ಅವಸಾನಗೊಂಡಾಗ ಕುತೂಹಲದಿಂದ ರಾಜನನ್ನು ಹೀಗೆ ಪ್ರಶ್ನೆಮಾಡಿದರು.

೧೮–೧೯. ಮಹಾರಾಜ! ನೀನು ಪ್ರತಿವರ್ಷವೂ ವೈಶಾಖ ಮಾಸದ ಹುಣ್ಣಿಮೆಯ ದಿನ ದೂರದಿಂದ ಬಂದು ಶಾಸ್ತ್ರಕಾರರು ವಿಧಿಸಿರುವ ಸ್ನಾನ ದಾನ ಮೊದಲಾದ ಇತರ ಕಾರ್ಯಗಳನ್ನು ತ್ಯಜಿಸಿ ಈ ಮಹೇಶ್ವರನ ಮುಂದೆ ರಾತ್ರಿ ಜಾಗರಣೆ ಮಾಡುವೆ.

ನ ತೇ ಯದಿ ರಹಸ್ಯಂ ಸ್ಯಾತ್ತದಾಽಶೇಷಂ ಪ್ರಕೀರ್ತಯ ।
ನೂನಂ ತ್ವಂ ವೇತ್ಸಿ ತತ್ಸರ್ವಂ ಯತ್ಫಲಂ ರಾತ್ರಿಜಾಗರೇ ॥ ೨೦ ॥
ರಾಜೋವಾಚ :—
ರಹಸ್ಯಂ ಪರಮಂ ಚೈವ ಯತ್ಪೃಷ್ಟೋಽಹಂ ದ್ವಿಜೋತ್ತಮಾಃ ।
ಯುಷ್ಮಾಭಿಃ ಕೀರ್ತಯಿಷ್ಯಾಮಿ ತಥಾಽಪ್ಯಖಿಲಮೇವ ಹಿ ॥ ೨೧ ॥
ಅಹಮಾಸಂ ವಣಿಗ್ಜಾತ್ಯಾ ಪುರಾ ವೈ ವೈದಿಶೇ ಪುರೇ ।
ನಿರ್ಧನೋ ಬಂಧುಭಿರ್ಮುಕ್ತಃ ಪರಿಭೂತಃ ಪದೇ ಪದೇ ॥ ೨೨ ॥
ಕಸ್ಯಚಿತ್ತ್ವಥ ಕಾಲಸ್ಯ ಭಗವಾನ್ ಪಾಕಶಾಸನಃ ।
ವೈದಿಶೇ ನಾಽಕರೋದ್ವೃಷ್ಟಿಂ ಸಪ್ತವರ್ಷಾಣಿ ಪಂಚ ಚ ॥ ೨೩ ॥
ತತೋ ವೃಷ್ಟಿನಿರೋಧೇನ ಸರ್ವೇ ಲೋಕಾಃ ಕ್ಷುಧಾರ್ದಿತಾಃ ।
ಅನ್ನಾಽಭಾವಾನ್ಮೃತಾಃ ಕೇಚಿತ್ಕೇಚಿದ್ದೇಶಾಂತರೇ ಗತಾಃ ॥ ೨೪ ॥
ತತೋಽಹಂ ಸ್ವಾಂ ಸಮಾದಾಯ ಪತ್ನೀಂ ಕ್ಷುತ್ಕ್ಷಾಮಗಾತ್ರಿಕಾಂ ।
ಅಶ್ರುಪೂರ್ಣಮುಖೀಂ ದೀನಾಂ ಪ್ರಸ್ಖಲಂತೀಂ ಪದೇ ಪದೇ ॥ ೨೫ ॥
ಸೌರಾಷ್ಟ್ರಂ ಮನಸಿ ಧ್ಯಾತ್ವಾ ಪ್ರಸ್ಥಿತಸ್ತದನಂತರಂ ।
ಸುಭಿಕ್ಷಂ ಲೋಕತಃ ಶ್ರುತ್ವಾ ಜೀವನಾಯ ದ್ವಿಜೋತ್ತಮಾಃ ॥ ೨೬ ॥

---

೨೦. ಇದು ರಹಸ್ಯವಲ್ಲದಿದ್ದರೆ ಎಲ್ಲವನ್ನೂ ನಮಗೆ ಹೇಳು. ರಾತ್ರಿ ಜಾಗರಣೆಮಾಡುವುದರಿಂದಾಗುವ ಫಲವನ್ನೆಲ್ಲ ನೀನು ತಿಳಿದಿರುವೆ.

೨೧. ರಾಜನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಕೇಳಿರುವ ವಿಷಯವು ಅತ್ಯಂತ ರಹಸ್ಯವಾದುದು. ಹಾಗಾದರೂ ಅದನ್ನೆಲ್ಲ ನಿಮಗೆ ಹೇಳುವೆನು.

೨೨. ಹಿಂದೆ ನಾನು ವೈದಿಶಪುರದಲ್ಲಿ ಬಡವನೂ, ಬಂಧುಗಳಿಂದ ಬಿಡಲ್ಪಟ್ಟು ಆಗಾಗ ತಿರಸ್ಕರಿಸಲ್ಪಟ್ಟವನೂ ಆದ ವೈಶ್ಯನಾಗಿದ್ದೆನು.

೨೩. ಒಂದಾನೊಂದು ಕಾಲದಲ್ಲಿ ಪೂಜ್ಯನಾದ ಇಂದ್ರನು ವೈದಿಶಪಟ್ಟಣದಲ್ಲಿ ಹನ್ನೆರಡು ವರ್ಷಕಾಲ ಮಳೆಯನ್ನು ಸುರಿಸಲಿಲ್ಲ.

೨೪. ಅನಂತರ ಮಳೆಯು ಸುರಿಯದಿರುವುದರಿಂದ ಹಸಿವಿನಿಂದ ಪೀಡಿತರಾದ ಜನರಲ್ಲಿ ಕೆಲವರು ಅನ್ನವಿಲ್ಲದಿರುವುದರಿಂದ ಮೃತರಾದರು. ಕೆಲವರು ದೇಶಾಂತರಕ್ಕೆ ಹೋದರು.

೨೫—೨೬. ದ್ವಿಜವರ್ಯರೆ! ನಾನು ಹಸಿವಿನಿಂದ ಕೃಶವಾದ ಶರೀರವುಳ್ಳವಳೂ, ಕಣ್ಣೀರಿನಿಂದ ತುಂಬಿದ ಮುಖವುಳ್ಳವಳೂ, ದೀನಳೂ, ಪ್ರತಿಹೆಜ್ಜೆಯಲ್ಲಿಯೂ ಜಾರಿ ಬೀಳುತ್ತಿರುವವಳೂ ಆದ ನನ್ನ ಪತ್ನಿಯನ್ನು ಕರೆದುಕೊಂಡು ಸೌರಾಷ್ಟ್ರದೇಶವನ್ನಾಲೋಚಿಸಿ ಅದು ಜೀವನಕ್ಕೆ ಸುಭಿಕ್ಷೆಯಾಗಿರುವುದೆಂದು ಜನರಿಂದ ತಿಳಿದು ಅಲ್ಲಿಗೆ ಹೊರಟೆನು.

ಕ್ರಮೇಣ ಗಚ್ಛಮಾನೋಽಥ ಭಿಕ್ಷಾನ್ನಕೃತಭೋಜನಃ ।
ಆನರ್ತವಿಷಯಂ ಪ್ರಾಪ್ತಶ್ಚಮತ್ಕಾರಪುರಾಂತಿಕೇ ॥ ೨೭ ॥
ತತ್ರ ರಮ್ಯಂ ಮಯಾ ದೃಷ್ಟಂ ಪದ್ಮಿನೀಖಂಡಮಂಡಿತಂ ।
ಸರಃ ಸ್ವಚ್ಛೋದಕಾಪೂರ್ಣಂ ಜಲಪಕ್ಷಿಭಿರಾವೃತಂ ॥ ೨೮ ॥
ತತೋಽಹಂ ತತ್ಸಮಾಸಾದ್ಯ ಸ್ನಾತಃ ಶೀತೇನ ವಾರಿಣಾ ।
ಕ್ಷುಧಾರ್ತಶ್ಚ ತೃಷಾರ್ತಶ್ಚ ಶ್ರಮಾರ್ತಶ್ಚ ವಿಶೇಷತಃ ॥ ೨೯ ॥
ಅಥಾಽಹಂ ಭಾರ್ಯಯಾ ಪ್ರೋಕ್ತೋ ಗೃಹಾಣೇಶ ಜಲಾಶಯಾತ್ ।
ಜಲಜಾನಿ ಕ್ರಯಾರ್ಥಾಯ ಯೇನ ಸ್ಯಾದದ್ಯ ಭೋಜನಂ ॥ ೩೦ ॥
ಏತತ್ಸಂದೃಶ್ಯತೇ ದೂರಾತ್ಪುರಂದರಪುರೋಪಮಂ ।
ಪುರಶ್ರೇಷ್ಠಂ ಸಮಾಸಾದ್ಯ ವಿಕ್ರಯಂ ಕರ್ತುಮರ್ಹಸಿ ॥ ೩೧ ॥
ತತೋ ಮಯಾ ಗೃಹೀತಾನಿ ಪದ್ಮಾನಿ ದ್ವಿಜಸತ್ತಮಾಃ ।
ವಿಕ್ರಯಾರ್ಥಂ ಪ್ರಭೂತಾನಿ ವಾಂಛಮಾನೇನ ಭೋಜನಂ ॥ ೩೨ ॥
ಚಮತ್ಕಾರಪುರಂ ಪ್ರಾಪ್ಯ ತತೋಽಹಂ ದ್ವಿಜಸತ್ತಮಾಃ ।
ಭ್ರಾಂತಸ್ತ್ರಿಕೇಷು ಸರ್ವೇಷು ಚತ್ವರೇಷು ಗೃಹೇಷು ಚ ॥ ೩೩ ॥

---

೨೭. ಭಿಕ್ಷಾನ್ನವನ್ನು ಭುಂಜಿಸುತ್ತ ಕ್ರಮವಾಗಿ ಹೋಗಿ ಚಮತ್ಕಾರಪುರದ ಹತ್ತಿರವಿರುವ ಆನರ್ತದೇಶವನ್ನು ಸೇರಿದೆನು.

೨೮. ಅಲ್ಲಿ ನಾನು ಮನೋಹರವೂ, ಕಮಲಗಳ ಸಮೂಹದಿಂದ ಅಲಂಕಾರಗೊಂಡುದೂ, ನಿರ್ಮಲವಾದ ನೀರಿನಿಂದ ತುಂಬಿರುವುದೂ, ನೀರಿನ ಪಕ್ಷಿಗಳಿಂದ ಕೂಡಿರುವುದೂ ಆದ ಒಂದು ಸರೋವರವನ್ನು ಕಂಡೆನು.

೨೯. ಬಳಿಕ ಹಸಿವು, ಬಾಯಾರಿಕೆ, ಆಯಾಸಗಳಿಂದ ಪೀಡಿತನಾದ ನಾನು ಆ ಸರೋವರವನ್ನು ಹೊಂದಿ ತಣ್ಣಗಿರುವ ನೀರಿನಿಂದ ಮಿಂದೆನು.

೩೦. ಆಗ ನನ್ನ ಪತ್ನಿಯು ಹೀಗೆಂದಳು. ನಾಥ! ಈ ಕೊಳದಲ್ಲಿರುವ ಕಮಲಗಳನ್ನು ಮಾರುವುದಕ್ಕಾಗಿ ತೆಗೆದುಕೊ. ಆದರಿಂದ ನಮಗೆ ಈ ದಿನದ ಊಟವು ದೊರೆಯುವುದು.

೩೧. ದೂರದಲ್ಲಿ ಇಂದ್ರನ ಅಮರಾವತಿಯಂತಿರುವ ಉತ್ತಮವಾದ ಪಟ್ಟಣವು ತೋರುವುದು. ಅದಕ್ಕೆ ಹೋಗಿ ಈ ಹೂವುಗಳನ್ನು ಮಾರು.

೩೨. ದ್ವಿಜವರ್ಯರೆ! ಬಳಿಕ ನಾನು ಭೋಜನಾಪೇಕ್ಷೆಯಿಂದ ಮಾರುವುದಕ್ಕಾಗಿ ಬಹಳ ತಾವರೆ ಹೂವುಗಳನ್ನು ತೆಗೆದುಕೊಂಡೆನು.

೩೩. ಚಮತ್ಕಾರಪುರಕ್ಕೆ ಹೋಗಿ ಸಮಸ್ತ ಚೌಕ, ಅಂಗಣ, ಮನೆಗಳಲ್ಲಿ ಅಲೆದೆನು.

ನ ಕಶ್ಚಿತ್ಪ್ರತಿಗೃಹ್ಣಾತಿ ತಾನಿ ಪದ್ಮಾನಿ ಮಾನವಃ ।
ಮಮ ಭಾಗ್ಯವಶಾಲ್ಲೋಕೋ ಜಾತಃ ಕ್ರಯಪರಾಙ್ಮುಖಃ ॥ ೩೪ ॥
ಅಥ ಕ್ಷುತ್ಕ್ಷಾಮಕಂಠಸ್ಯ ಶ್ರಾಂತಸ್ಯ ಮಮ ಭಾಸ್ಕರಃ ।
ಅಸ್ತಾಚಲಮನುಪ್ರಾಪ್ತಃ ಸಂಧ್ಯಾಕಾಲಸ್ತತೋಽಭವತ್ ॥ ೩೫ ॥
ತತೋ ವೈರಾಗ್ಯಮಾಪನ್ನಃ ಸುಪ್ತೋಽಹಂ ಭಗ್ನಮಂದಿರೇ ।
ತಾನಿ ಪದ್ಮಾನಿ ಭೂಪೃಷ್ಠೇ ನಿಧಾಯ ಸಹಭಾರ್ಯಯಾ ॥ ೩೬ ॥
ಅಥಾರ್ಧರಾತ್ರೇ ಸಂಪ್ರಾಪ್ತೇ ಶ್ರುತೋ ಗೀತಧ್ವನಿರ್ಮಯಾ ।
ತತಶ್ಚ ಚಿಂತಿತಂ ಚಿತ್ತೇ ಜಾಗರೋಽಯಮಸಂಶಯಂ ॥ ೩೭ ॥
ತಸ್ಮಾದ್ಗಚ್ಛಾಮಿ ಚೇತ್ಕಶ್ಚಿತ್ಪದ್ಮಾನ್ಯೇತಾನಿ ಮೇ ನರಃ ।
ಮೂಲ್ಯೇನ ಪ್ರತಿಗೃಹ್ಣಾತಿ ಭೋಜನಂ ಜಾಯತೇ ತತಃ ॥ ೩೮ ॥
ಏವಂ ವಿನಿಶ್ಚಯಂ ಕೃತ್ವಾ ಪದ್ಮಾನ್ಯಾದಾಯ ಸತ್ವರಂ ।
ಸಭಾರ್ಯಃ ಪ್ರಸ್ಥಿತಸ್ತತ್ರ ಯತ್ರ ಗೀತಸ್ಯ ನಿಃಸ್ವನಃ ॥ ೩೯ ॥
ತತಶ್ಚಾಯತನೇ ತಸ್ಮಿನ್ಪ್ರಾಪ್ತೋಽಹಂ ಮುನಿಪುಂಗವಾಃ ।
ಅಪಶ್ಯಂ ದೇವದೇವೇಶಂ ಮಹಾಕಾಲಂ ಪ್ರಪೂಜಿತಂ ।
ಅಗ್ರಸ್ಥಿತೈರ್ದ್ವಿಜಶ್ರೇಷ್ಠೈರ್ಜಪಗೀತಪರಾಯಣೈಃ ॥ ೪೦ ॥

---

೩೪. ಯಾವ ಮನುಷ್ಯನೂ ಆ ಕಮಲಗಳನ್ನು ತೆಗೆದುಕೊಳ್ಳಲಿಲ್ಲ. ನನ್ನ ಅದೃಷ್ಟವಶದಿಂದ ಜನರು ಕೊಂಡುಕೊಳ್ಳುವುದನ್ನು ಬಿಟ್ಟರು.

೩೫. ನಾನು ಹಸಿವಿನಿಂದ ಕುಗ್ಗಿದ ಧ್ವನಿಯುಳ್ಳವನೂ, ಬಳಲಿದವನೂ ಆಗಿರಲು ಸೂರ್ಯನು ಅಸ್ತಂಗತನಾದನು. ಅನಂತರ ಸಂಧ್ಯಾಕಾಲವಾಯಿತು.

೩೬. ತರುವಾಯ ನಾನು ವೈರಾಗ್ಯಗೊಂಡು ಆ ತಾವರೆ ಹೂವುಗಳನ್ನು ನೆಲದಲ್ಲಿಟ್ಟು ಪತ್ನಿಯೊಡನೆ ಮುರಿದ ಮನೆಯಲ್ಲಿ ಮಲಗಿದೆನು.

೩೭. ಅಲ್ಲಿ ಅರ್ಧರಾತ್ರಿ ವೇಳೆಯಲ್ಲಿ ನಾನು ಸಂಗೀತ ಧ್ವನಿಯನ್ನು ಕೇಳಿ ಇದು ಜಾಗರವೆಂದು ಮನಸ್ಸಿನಲ್ಲಿ ಚಿಂತಿಸಿದೆನು.

೩೮. ಆದ್ದರಿಂದ ನಾನು ಅಲ್ಲಿಗೆ ಹೋಗುವೆನು. ಯಾವನಾದರೂ ನರನು ಈ ಕಮಲಗಳನ್ನು ಕೊಂಡುಕೊಳ್ಳುವನು. ಅದರಿಂದ ನಮಗೆ ಭೋಜನವು ದೊರೆಯುವುದು.

೩೯. ನಾನು ಹೀಗೆ ನಿಶ್ಚಯಿಸಿ ಬೇಗನೆ ಪದ್ಮಗಳನ್ನು ತೆಗೆದುಕೊಂಡು ಪತ್ನಿಯೊಡನೆ ಸಂಗೀತವು ಕೇಳುವ ಸ್ಥಳಕ್ಕೆ ಹೊರಟೆನು.

೪೦. ಬಳಿಕ ಆ ದೇವಾಲಯಕ್ಕೆ ಹೋಗಿ ಅಲ್ಲಿ ಜಪ, ಸಂಗೀತಗಳಲ್ಲಿ ನಿರತರಾದ ಮುಂದಿರುವ ಬ್ರಾಹ್ಮಣೋತ್ತಮರಿಂದ ಪೂಜಿತನಾದ ಮಹಾಕಾಲನನ್ನು ನೋಡಿದೆನು.

ಏಕೇ ನೃತ್ಯಂ ಪ್ರಕುರ್ವಂತಿ ಗೀತಮನ್ಯೇ ಜಪಂ ಪರೇ ।
ಅನ್ಯೇ ಹೋಮಂ ದ್ವಿಜಶ್ರೇಷ್ಠಾ ಧರ್ಮಾಖ್ಯಾನಮಥಾಪರೇ ॥ ೪೧ ॥
ತತಃ ಕಶ್ಚಿನ್ಮಯಾ ಪೃಷ್ಟಃ ಕ್ರಿಯತೇ ಜಾಗರೋಽತ್ರ ಕಿಂ ।
ತ ಏತೇ ಜಾಗರಾಸಕ್ತಾ ಲೋಕಾಃ ಕೀರ್ತಯ ಮೇ ದ್ರುತಂ ॥ ೪೨ ॥
ತೇನೋಕ್ತಮೇಷ ದೇವಸ್ಯ ಮಹಾಕಾಲಸ್ಯ ಜಾಗರಃ ।
ಕ್ರಿಯತೇ ಬ್ರಾಹ್ಮಣೈರ್ಭಕ್ತ್ಯಾ ಉಪವಾಸಪರಾಯಣೈಃ ॥ ೪೩ ॥
ಅದ್ಯ ಪುಣ್ಯತಿಥಿರ್ನಾಮ ವೈಶಾಖೀ ಪುಣ್ಯದಾಪರಾ ।
ಯಸ್ಯಾಮಸ್ಯ ಪುರೋ ಭಕ್ತ್ಯಾ ನರಃ ಕುರ್ಯಾತ್ಪ್ರಜಾಗರಂ ।
ಮಹಾಕಾಲಸ್ಯ ದೇವಸ್ಯ ಸೌಖ್ಯಂ ಪ್ರಾಪ್ನೋತ್ಯಸಂಶಯಂ ॥ ೪೪ ॥
ಸಂತಿ ಪದ್ಮಾನಿ ಮೇ ಯಚ್ಛ ಮೂಲ್ಯಮಾದಾಯ ಭದ್ರಕ ।
ಭೋಜನಾರ್ಥಮಹಂ ದದ್ಮಿ ಕಲಧೌತಪಲತ್ರಯಂ ॥ ೪೫ ॥
ತತೋಽವಧಾರಿತಂ ಚಿತ್ತೇ ಮಯಾ ಬ್ರಾಹ್ಮಣಸತ್ತಮಾಃ ।
ಪೂಜಯಾಮಿ ಮಹಾಕಾಲಂ ಪದ್ಮೈರೇತೈಃ ಸುರೇಶ್ವರಂ ॥ ೪೬ ॥
ನ ಮಯಾ ಸುಕೃತಂ ಕಿಂಚಿದನ್ಯದೇಹಾಂತರೇ ಕೃತಂ ।
ನಿಯತಂ ತೇನ ಸಂಭೂತ ಇತ್ಥಂಭೂತೋಽಸ್ಮಿ ದುರ್ಗತಃ ॥ ೪೭ ॥

---

೪೧. ಅವರಲ್ಲಿ ಕೆಲವರು ಕುಣಿಯುತ್ತಿದ್ದರು. ಇನ್ನು ಕೆಲವರು ಸಂಗೀತವನ್ನು ಹಾಡುತ್ತಿದ್ದರು. ಮತ್ತೆ ಕೆಲವರು ಜಪಿಸುತ್ತಿದ್ದರು. ಇನ್ನು ಕೆಲವರು ಹೋಮಮಾಡುತ್ತಿದ್ದರು. ಮತ್ತೆ ಕೆಲವರು ಧರ್ಮವನ್ನು ಹೇಳುತ್ತಿದ್ದರು.

೪೨. ಬಳಿಕ ನಾನು ಒಬ್ಬನನ್ನು ಕುರಿತು ಜನರು ಇಲ್ಲಿ ಜಾಗರಣೆಮಾಡುತ್ತಿರುವರೆ? ಜಾಗರಣೆ ಮಾಡುತ್ತಿರುವ ಈ ಜನರಾರು ? ಬೇಗನೆ ನನಗೆ ಹೇಳು ಎಂದೆನು.

೪೩. ಅವನು ಉಪವಾಸ ನಿರತರಾದ ಈ ಬ್ರಾಹ್ಮಣರು ಮಹಾಕಾಲನ ಮುಂದೆ ಜಾಗರಣೆ ಮಾಡುತ್ತಿರುವರು.

೪೪. ಈ ದಿನ ಪುಣ್ಯಕರವಾದ ವೈಶಾಖ ಪೂರ್ಣಿಮೆಯಾಗಿರುವುದು. ಈ ಹುಣ್ಣಿಮೆಯಲ್ಲಿ ಮಹಾಕಾಲನ ಮುಂದೆ ಜಾಗರಣೆ ಮಾಡಿದ ಮಾನವನು ನಿಶ್ಚಯವಾಗಿಯೂ ಸೌಖ್ಯವನ್ನು ಹೊಂದುವನು.

೪೫. ಮಂಗಳಕರನೆ! ನಿನ್ನಲ್ಲಿರುವ ಕಮಲಗಳನ್ನು ಬೆಲೆಯನ್ನು ತೆಗೆದುಕೊಂಡು ನನಗೆ ಕೊಡು. ನಿನ್ನ ಭೋಜನಕ್ಕಾಗಿ ನಾನು ಮೂರು ತೊಲೆ ಚಿನ್ನವನ್ನು ಕೊಡುವೆನು. ಎಂದನು.

೪೬. ಬ್ರಾಹ್ಮಣವರ್ಯರೆ! ಬಳಿಕ ನಾನು ಮನಸ್ಸಿನಲ್ಲಿ ಹೀಗೆ ಚಿಂತಿಸಿದೆನು. ಈ ಪದ್ಮಗಳಿಂದ ಸುರೇಶ್ವರನಾದ ಮಹಾಕಾಲನನ್ನು ಪೂಜಿಸುತ್ತೇನೆ.

೪೭. ನಾನು ನಿಶ್ಚಯವಾಗಿಯೂ ಇನ್ನೊಂದು ಜನ್ಮದಲ್ಲಿ ಸ್ವಲ್ಪವೂ ಪುಣ್ಯವನ್ನು ಮಾಡಲಿಲ್ಲ. ಆದರಿಂದ ಹೀಗೆ ಬಡವನಾಗಿದ್ದೇನೆ.

ಪರಂ ಕ್ಷುತ್ಕ್ಷಾಮಕಂಠೇಯಂ ಭಾರ್ಯಾ ಮೇ ಪ್ರಿಯವಾದಿನೀ ।
ಅನ್ನಾಭಾವಾನ್ನ ಸಂದೇಹಃ ಪ್ರಾತರ್ಯಾಸ್ಯತಿ ಸಂಕ್ಷಯಂ ॥ ೪೮ ॥
ಏವಂ ಚಿಂತಯಮಾನಸ್ಯ ಮಮ ಸಾ ದಯಿತಾ ತತಃ ।
ಪ್ರೋವಾಚ ಮಧುರಂ ವಾಕ್ಯಂ ವಿನಯಾಽವನತಾ ಸ್ಥಿತಾ ॥ ೪೯ ॥
ಮಾ ನಾಥ ಕುರು ಪದ್ಮಾನಾಂ ವಿಕ್ರಯಂ ಧನಲೋಭತಃ ।
ಕುರುಷ್ವ ಚ ಹಿತಂ ವಾಕ್ಯಂ ಯತ್ತೇ ವಕ್ಷ್ಯಾಮಿ ಸಾಂಪ್ರತಂ ॥ ೫೦ ॥
ಉಪವಾಸೋ ಬಲಾಜ್ಜಾತಃ ಸಸ್ಯಾಭಾವಾದಸಂಶಯಂ ।
ಅಸ್ಮಾಕಂ ಜಾಗರಂ ಚಾಽಪಿ ಭವಿಷ್ಯತಿ ಬುಭುಕ್ಷಯಾ ॥ ೫೧ ॥
ತತೋಽಭಾಭ್ಯಾಂ ಕೃತಂ ಸ್ನಾನಂ ದಿವಾ ಸರಸಿ ಶೋಭನೇ ।
ಘರ್ಮಾರ್ತಾಭ್ಯಾಂ ಶ್ರಮಾರ್ತಾಭ್ಯಾಂ ಕೃತಂ ದೇವಾರ್ಚನಂ ತಥಾ ॥ ೫೨ ॥
ತಸ್ಮಾದ್ದೇವಂ ಮಹಾಕಾಲಂ ಪೂಜಯಾವೋಽಧುನಾ ವಯಂ ।
ಪದ್ಮೈರೇತೈಃ ಪರಂ ಶ್ರೇಯ ಆವಯೋರ್ಯೇನ ಜಾಯತೇ ॥ ೫೩ ॥

ರಾಜೋವಾಚ :—

ಉಭಾಭ್ಯಾಮಥ ಹೃಷ್ಟಾಭ್ಯಾಂ ಪೂಜಿತೋಽಯಂ ಮಹೇಶ್ವರಃ ।
ತೈಃ ಪದ್ಮೈಃ ಸತ್ವಮಾಸ್ಥಾಯ ಕೃತ್ವಾ ಪೂಜಾಂ ದ್ವಿಜೋತ್ತಮಾಃ ॥ ೫೪ ॥

---

೪೮. ಆದರೆ ಹಸಿವಿನಿಂದ ಒಣಗುತ್ತಿರುವ ಗಂಟಲುಳ್ಳ ಈ ನನ್ನ ಪತ್ನಿಯು ಅನ್ನವಿಲ್ಲದಿರುವುದರಿಂದ ನಿಶ್ಚಯವಾಗಿಯೂ ಬೆಳಗ್ಗೆ ಮಡಿಯುವಳು.

೪೯. ನಾನು ಹೀಗೆ ಚಿಂತಿಸುತ್ತಿರಲು ನನ್ನ ಆ ಪ್ರೇಯಸಿಯು ವಿನಯದಿಂದ ಇಂಪಾಗಿ ಹೀಗೆ ನುಡಿದಳು.

೫೦. ನಾಥ! ಧನದ ಆಶೆಯಿಂದ ಕಮಲಗಳನ್ನು ಮಾರಬೇಡ. ನಾನು ಈಗ ಹೇಳುವ ಹಿತವಾದ ಮಾತನ್ನು ನಡೆಯಿಸು.

೫೧. ನಮಗೆ ಆಹಾರವಿಲ್ಲದಿರುವುದರಿಂದ ಬಲಾತ್ಕಾರದಿಂದ ಉಪವಾಸವಾಯಿತು. ನಾವು ಹಸಿವುಗೊಂಡಿರುವುದರಿಂದ ಜಾಗರಣೆಯೂ ಆಗುವುದು.

೫೨. ಅಲ್ಲಿ ಉಷ್ಣದಿಂದಲೂ, ಆಯಾಸದಿಂದಲೂ ಪೀಡಿತರಾದ ನಾವು ಹಗಲು ಮಂಗಳಕರವಾದ ಸರೋವರದಲ್ಲಿ ಮಿಂದು ದೇವಪೂಜೆಯನ್ನು ಮಾಡಿದೆವು.

೫೩. ಆದ್ದರಿಂದ ಈಗ ನಾವು ಮಹಾಕಾಲನನ್ನು ಈ ಕಮಲಗಳಿಂದ ಪೂಜಿಸುವೆವು: ಇದರಿಂದ ನಮಗೆ ಶ್ರೇಯಸ್ಸುಂಟಾಗುವುದು.

೫೪. ರಾಜನು ಹೇಳುತ್ತಾನೆ:—ಬಳಿಕ ಸಂತೋಷಗೊಂಡ ನಾವಿಬ್ಬರು ಸಾತ್ವಿಕಭಾವವನ್ನಾಶ್ರಯಿಸಿ ಮಹೇಶ್ವರನನ್ನು ಪೂಜಿಸಿದೆವು.

ಕ್ಷುತ್ಪೀಡಯಾ ಸಮಾಯಾತಾ ನೈವ ನಿದ್ರಾ ಕಥಂಚನ ।
ಸ್ವಲ್ಪಾಽಪಿ ಮಂದಿರೇ ಚಾಽತ್ರ ಸ್ಥಿತಯೋರ್ಹರಸನ್ನಿಧೌ ॥ ೫೫ ॥
ತತಃ ಪ್ರಭಾತಸಮಯೇ ಪ್ರೋದ್ಗತೇ ರವಿಮಂಡಲೇ ।
ಮೃತೋಽಹಂ ಕ್ಷುಧಯಾವಿಷ್ಟಃ ಸ್ಥಾನೇಽತ್ರೈವ ದ್ವಿಜೋತ್ತಮಾಃ ॥ ೫೬ ॥
ಅಥ ಸಾ ದಯಿತಾ ಮಹ್ಯಂ ತದಾದಾಯ ಕಲೇವರಂ ।
ಹರ್ಷೇಣ ಮಹತಾವಿಷ್ಟಾ ಪ್ರವಿಷ್ಟಾ ಹವ್ಯವಾಹನಂ ॥ ೫೭ ॥
ತತ್ಪ್ರಭಾವಾದಹಂ ಜಾತಃ ಕಾಂತೀನಾಥೋ ಮಹೀಪತಿಃ ।
ದಶಾರ್ಣಾಧಿಪತೇಃ ಕನ್ಯಾ ಸಾಽಪಿ ಜಾತಿಸ್ಮರಾ ಸತೀ ॥ ೫೮ ॥
ತತಃ ಸ್ವಯಂವರಂ ಪ್ರಾಪ್ತಾ ಮಾಂ ವಿಜ್ಞಾಯ ನಿಜಂ ಪತಿಂ ।
ಮಯಾಽಪಿ ಸೈವ ವಿಜ್ಞಾಯ ಪೂರ್ವಪತ್ನೀ ಸಮಾಹೃತಾ ॥ ೫೯ ॥
ಏತಸ್ಮಾತ್ಕಾರಣಾದಸ್ಯ ಮಹಾಕಾಲಸ್ಯ ಜಾಗರಂ ।
ವರ್ಷೇ ವರ್ಷೇ ಚ ವೈಶಾಖ್ಯಾಂ ಕರೋಮಿ ದ್ವಿಜಸತ್ತಮಾಃ ॥ ೬೦ ॥
ಅನಯಾ ಪ್ರಿಯಯಾ ಸಾರ್ಧಂ ಪುಷ್ಪಧೂಪಾನುಲೇಪನೈಃ ।
ಪೂಜಯಿತ್ವಾ ಮಹಾಕಾಲಂ ಸತ್ಯಮೇತನ್ಮಯೋದಿತಂ ॥ ೬೧ ॥
ಕೃತೋ ವಿಪ್ರಾ ಮಯಾತ್ವೇಷ ಸ ತದಾ ರಾತ್ರಿಜಾಗರಃ ।
ಯಥಾಪ್ಯೇತತ್ಫಲಂ ಜಾತಂ ದೇವಸ್ಯಾಸ್ಯ ಪ್ರಭಾವತಃ ॥ ೬೨ ॥

---

೫೫. ಹಸಿವಿನಿಂದ ಪೀಡಿತರಾದ ಹರನ ಹತ್ತಿರವಿರುವ ನಾವು ಸ್ವಲ್ಪವೂ ನಿದ್ರಿಸಲಿಲ್ಲ.

೫೬–೫೭. ತರುವಾಯ ಬೆಳಗ್ಗೆ ಸೂರ್ಯನು ಉದಯಿಸಲು ಹಸಿವುಗೊಂಡ ನಾನು ಈ ಸ್ಥಳದಲ್ಲಿಯೇ ಮಡಿದೆನು. ನನ್ನ ಪತ್ನಿಯು ಶವವನ್ನು ತೆಗೆದುಕೊಂಡು ಅತ್ಯಂತ ಸಂತೋಷದಿಂದ ಅಗ್ನಿಪ್ರವೇಶಮಾಡಿದಳು.

೫೮. ಅದರ ಪ್ರಭಾವದಿಂದ ನಾನು ಕಾಂತಿ ದೇಶದ ರಾಜನೂ, ಆ ನನ್ನ ಪತ್ನಿಯು ಪೂರ್ವ ಜಾತಿಸ್ಮರಣೆಯುಳ್ಳ ದಶಾರ್ಣರಾಜನ ಕನ್ಯೆಯೂ ಆದೆವು.

೫೯. ಅನಂತರ ಸ್ವಯಂವರದಲ್ಲಿ ಅವಳು ನನ್ನನ್ನು ತನ್ನ ಹಿಂದಿನ ಪತಿಯೆಂದರಿತು ವರಿಸಿದಳು. ನಾನೂ ಅವಳು ನನ್ನ ಹಿಂದಿನ ಪತ್ನಿಯೆಂದು ತಿಳಿದು ಅವಳನ್ನು ಕರೆದುಕೊಂಡು ಬಂದೆನು.

೬೦–೬೧. ದ್ವಿಜವರ್ಯರೆ! ಈ ಕಾರಣದಿಂದಲೇ ನಾನು ವೈಶಾಖ ಶುದ್ಧ ಪೂರ್ಣಿಮಾದಿನ ಈ ಪ್ರಿಯೆಯೊಡನೆ ಪುಷ್ಪ, ಧೂಪ, ಗಂಧಗಳಿಂದ ಮಹಾಕಾಲನನ್ನು ಪೂಜಿಸಿ ಜಾಗರಣೆಮಾಡುವೆನು. ನಾನು ಹೇಳಿದ ಈ ಮಾತು ನಿಜ.

೬೨. ವಿಪ್ರರೆ! ನಾನು ಯಾವಾಗಲೂ ರಾತ್ರಿಜಾಗರಣೆಮಾಡಿರುವೆನು. ಮಹಾಕಾಲನ ಪ್ರಭಾವದಿಂದ ಅದಕ್ಕೆ ಈ ಫಲವುಂಟಾಗಿದೆ.

ಅಧುನಾ ಶ್ರದ್ಧಯಾ ಯುಕ್ತೋ ಯಥೋಕ್ತವಿಧಿನಾ ತತಃ ।
ಯತ್ಕರೋಮಿ ನ ಜಾನಾಮಿ ಕಿಂ ಮೇ ಸಂಯುಚ್ಛತೇ ಫಲಂ ॥ ೬೩ ॥
ಏತದ್ವಃ ಸರ್ವಮಾಖ್ಯಾತಂ ಮಯಾ ಸತ್ಯಂ ದ್ವಿಜೋತ್ತಮಾಃ ।
ಯೇನ ಸತ್ಯೇನ ತೇನೈಷ ಮಹಾಕಾಲಃ ಪ್ರಸೀದತು ॥ ೬೪ ॥

ಸೂತ ಉವಾಚ :—

ಏತಚ್ಛ್ರುತ್ವಾ ದ್ವಿಜಶ್ರೇಷ್ಠಾ ವಿಸ್ಮಯೋತ್ಫುಲ್ಲಲೋಚನಾಃ ।
ಪ್ರಚಕ್ರುರ್ನೃಪತೇಸ್ತಸ್ಯ ಸಾಧುವಾದಾನನೇಕಶಃ ॥ ೬೫ ॥

ಬ್ರಾಹ್ಮಣಾ ಊಚುಃ :—

ಸತ್ಯಮುಕ್ತಂ ಮಹೀಪಾಲ ತ್ವಯೈತದಖಿಲಂ ವಚಃ ।
ಮಹಾಕಾಲಪ್ರಸಾದೇನ ನ ಕಿಂಚಿದ್ದುರ್ಲಭಂ ಭುವಿ ॥ ೬೬ ॥
ತಸ್ಮಾದ್ವಿಶೇಷತಃ ಸರ್ವೇ ವರ್ಷೇ ವರ್ಷೇ ವಯಂ ನೃಪ ।
ಕರಿಷ್ಯಾಮೋಽಸ್ಯ ದೇವಸ್ಯ ಶ್ರದ್ಧಯಾ ರಾತ್ರಿಜಾಗರಂ ॥ ೬೭ ॥
ತತಃ ಸ ಪಾರ್ಥಿವಸ್ತೇ ಚ ಸರ್ವ ಏವ ದ್ವಿಜಾತಯಃ ।
ಪ್ರಚಕ್ರುರ್ಜಾಗರಂ ತಸ್ಯ ಮಹಾಕಾಲಸ್ಯ ಸನ್ನಿಧೌ ॥ ೬೮ ॥
ವಿಶೇಷಾದ್ಧರ್ಷಸಂಯುಕ್ತಾ ವಿವಿಧೈರ್ಗೀತವಾದನೈಃ ।
ಧರ್ಮಾಖ್ಯಾನೈಶ್ಚ ನೃತ್ಯೈಶ್ಚ ವೇದೋಚ್ಚಾರೈಃ ಪೃಥಗ್ವಿಧೈಃ ।
ತದಾರಭ್ಯ ನೃಪಾಃ ಸರ್ವೇ ಪ್ರಚಕ್ರುರ್ವಿಸ್ಮಯಾನ್ವಿತಾಃ ॥ ೬೯ ॥

---

೬೩. ಈಗ ಶ್ರದ್ಧೆಯಿಂದ ವಿಧಿಯಂತೆ ಜಾಗರಣೆಮಾಡುತ್ತಿರುವೆನು. ಇದಕ್ಕೆ ನನಗೆ ಶಿವನು ಯಾವ ಫಲವನ್ನು ಕೊಡುವನೊ ಅರಿಯೆನು.

೬೪. ದ್ವಿಜವರ್ಯರೆ! ನಾನು ನಿಮಗೆ ಸತ್ಯವಿಷಯವನ್ನೆಲ್ಲ ಹೇಳಿದ್ದೇನೆ. ಈ ಸತ್ಯದಿಂದ ಮಹಾಕಾಲನು ಪ್ರಸನ್ನನಾಗಲಿ.

೬೫. ಸೂತನು ಹೇಳುತ್ತಾನೆ:—ದ್ವಿಜೋತ್ತಮರು ಇದನ್ನು ಕೇಳಿ ಆಶ್ಚರ್ಯದಿಂದ ವಿಕಾಸಗೊಂಡ ಕಣ್ಣುಳ್ಳವರಾಗಿ ಆ ರಾಜನನ್ನು ಬಹುವಾಗಿ ಶ್ಲಾಘಿಸಿದರು.

೬೬. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನೀನು ಹೇಳಿದಮಾತೆಲ್ಲ ನಿಜ. ಮಹಾಕಾಲನ ಅನುಗ್ರಹದಿಂದ ಲೋಕದಲ್ಲಿ ದುರ್ಲಭವಾದದು ಏನೂ ಇಲ್ಲ.

೬೭. ಮಹಾರಾಜ! ಆದ್ದರಿಂದ ನಾವೆಲ್ಲ ಪ್ರತಿವರ್ಷವೂ ಶ್ರದ್ಧೆಯಿಂದ ಈ ಮಹಾಕಾಲನ ಮುಂದೆ ಜಾಗರಣಮಾಡುವೆವು.

೬೮-೬೯, ತರುವಾಯ ಆ ರಾಜನೂ, ಆ ಎಲ್ಲ ಬ್ರಾಹ್ಮಣರೂ ಆ ಮಹಾಕಾಲನ ಹತ್ತಿರ ಸಂತೋಷದಿಂದಲೂ, ನಾನಾವಿಧ ಗೀತಗಳಿಂದಲೂ, ಧರ್ಮವ್ಯಾಖ್ಯಾನಗಳಿಂದಲೂ, ನೃತ್ಯ, ಮತ್ತು ಬಗೆಬಗೆಯ ವೇದೋಚ್ಚಾರಣೆಗಳಿಂದಲೂ ಅದು ಮೊದಲ್ಗೊಂಡು ಜಾಗರಣೆಮಾಡಿದರು.

ತತಃ ಪ್ರಭಾತೇ ವಿಮಲೇ ಸಮುತ್ಥಾಯ ಸ ಭೂಪತಿಃ ।
ಪೂಜಯಿತ್ವಾ ಮಹಾಕಾಲಂ ತಾಂಶ್ಚ ಸರ್ವಾನ್ದ್ವಿಜೋತ್ತಮಾನ್ ।
ಅನುಜ್ಞಾಪ್ಯ ಯಯೌ ಹೃಷ್ಟಃ ಸ ಸೈನ್ಯಃ ಸ್ವಪುರಂಪ್ರತಿ ॥ ೭೦ ॥
ತತಃ ಕಾಲೇನ ಸಂಪ್ರಾಪ್ಯ ದೇಹಾಂತಂ ಸ ಮಹೀಪತಿಃ ।
ಸಂಪ್ರಾಪ್ತಃ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೭೧ ॥
ಏತದ್ವಃ ಸರ್ವಮಾಖ್ಯಾತಂ ಮಹಾಕಾಲಸಮುದ್ಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೭೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಹಾಕಾಲೇಶ್ವರಮಾಹಾತ್ಮ್ಯವರ್ಣನಂ" ನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

೭೦. ಆ ರಾಜನು ಬೆಳಗ್ಗೆ ಎದ್ದು ಮಹಾಕಾಲನನ್ನೂ, ಸಕಲ ಬ್ರಾಹ್ಮಣರನ್ನೂ ಕೇಳಿಕೊಂಡು ಸೈನ್ಯದೊಡನೆ ತನ್ನ ಪಟ್ಟಣಕ್ಕೆ ಸಂತೋಷದಿಂದ ಹೋದನು.

೭೧. ಅನಂತರ ಆ ದೊರೆಯು ಬಹುಕಾಲದ ಮೇಲೆ ಮೃತನಾಗಿ ಜರಾಮರಣವಿಲ್ಲದ ಉತ್ತಮಸ್ಥಾನವನ್ನು ಪಡೆದನು.

೭೨. ಬ್ರಾಹ್ಮಣವರ್ಯರೆ! ನಿಮಗೆ ಈ ಸಕಲ ಪಾಪಗಳನ್ನು ಪರಿಹರಿಸುವ ಮಹಾಕಾಲನ ಮಾಹಾತ್ಮ್ಯೆಯನ್ನು ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮಹಾಕಾಲೇಶ್ವರಮಾಹಾತ್ಮ್ಯವರ್ಣನ"ವೆಂಬ
ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಚತ್ವಾರಿಂಶೋಽಧ್ಯಾಯಃ

### ಉಮಾಮಹೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರೈವಾಸ್ಯ ಸಮುದ್ದೇಶೇ ಹರಿಶ್ಚಂದ್ರಸ್ಯ ಭೂಪತೇಃ ।
ಆಶ್ರಮೋಽಸ್ತಿ ಸುವಿಖ್ಯಾತೋ ನಾನಾದ್ರುಮಸಮಾವೃತಃ ॥ ೧ ॥
ಯತ್ರ ತೇನ ತಪಸ್ತಪ್ತಂ ಸಂಸ್ಥಾಪ್ಯೋಮಾಮಹೇಶ್ವರೌ ।
ಯಚ್ಛತಾ ವಿವಿಧಂ ದಾನಂ ಬ್ರಾಹ್ಮಣೇಭ್ಯೋಽಭಿವಾಂಛಿತಂ ॥ ೨ ॥
ಆಸೀದ್ರಾಜಾ ಹರಿಶ್ಚಂದ್ರಸ್ತ್ರಿಶಂಕುತನಯಃ ಪುರಾ ।
ಅಯೋಧ್ಯಾಧಿಪತಿಃ ಶ್ರೀಮಾನ್ ಸೂರ್ಯವಂಶಸಮುದ್ಭವಃ ॥ ೩ ॥
ನ ದುರ್ಭಿಕ್ಷಂ ನ ಚ ವ್ಯಾಧಿರ್ನಾಽಕಾಲಮರಣಂ ಧ್ರುವಂ ।
ತಸ್ಮಿಂಛಾಸತಿ ಧರ್ಮೇಣ ನ ಚ ಚೌರಕೃತಂ ಭಯಂ ॥ ೪ ॥
ಕಾಲವರ್ಷೀ ಸದಾ ಮೇಘಃ ಸಸ್ಯಾನಿ ಪ್ರಚುರಾಣಿ ಚ ।
ರಸವಂತಿ ಚ ತೋಯಾನಿ ಸರ್ವರ್ತುಫಲಿತಾ ದ್ರುಮಾಃ ॥ ೫ ॥

---

### ಕನ್ನಡದ ಅನುವಾದ

#### ಉಮಾಮಹೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಅದೇ ಸ್ಥಳದಲ್ಲಿ ಹರಿಶ್ಚಂದ್ರರಾಜನ ಪ್ರಸಿದ್ಧವೂ, ಅನೇಕ ಮರಗಳಿಂದ ಕೂಡಿರುವುದೂ ಆದ ಆಶ್ರಮವಿದೆ.

೨. ಅಲ್ಲಿ ಬ್ರಾಹ್ಮಣರಿಗೆ ಇಷ್ಟವಾದ ವಿವಿಧದಾನಗಳನ್ನು ಕೊಡುತ್ತಿರುವ ಆ ಹರಿಶ್ಚಂದ್ರರಾಜನು ಉಮಾಮಹೇಶ್ವರರನ್ನು ಪ್ರತಿಷ್ಠೆಮಾಡಿ ತಪವನ್ನಾಚರಿಸಿದನು.

೩. ಹಿಂದೆ ಅಯೋಧ್ಯಾರಾಜನೂ, ಸೂರ್ಯವಂಶೋತ್ಪನ್ನನೂ, ತ್ರಿಶುಂಕುವಿನ ಮಗನೂ ಆದ ಹರಿಶ್ಚಂದ್ರನೆಂಬ ರಾಜನಿದ್ದನು.

೪. ಆ ರಾಜನು ಧರ್ಮದಿಂದ ರಾಜ್ಯವನ್ನಾಳುತ್ತಿರಲು ದುರ್ಭಿಕ್ಷೆ, ರೋಗ, ಅಕಾಲ ಮರಣ, ಕಳ್ಳರು ಇವರ ಭಯವಿರಲಿಲ್ಲ.

೫. ಮೇಘವು ಯಾವಾಗಲೂ ಮಳೆಯನ್ನು ಸುರಿಸುತ್ತಿದ್ದಿತು. ಸಸ್ಯಗಳು ಬಹಳವಾಗಿ ಬೆಳೆದುವು. ನೀರು ರುಚಿಯಾಗಿದ್ದಿತು. ಮರಗಳು ಎಲ್ಲ ಋತುಗಳಲ್ಲಿಯೂ ಫಲಿಸುತ್ತಿದ್ದುವು.

ದಂಡಸ್ತತ್ರಾಽಭವದ್ವಾಸ್ತೌ ಗೃಹರೋಧೋಽಕ್ಷದೇವನೇ ।
ಏಕೋ ದೋಷಾಕರಶ್ಚಂದ್ರಃ ಪ್ರಿಯದೋಷಾಶ್ಚ ಕೌಶಿಕಾಃ ॥ ೬ ॥
ಸ್ನೇಹಕ್ಷಯಶ್ಚ ದೀಪೇಷು ವಿವಾಹೇ ಚ ಕರಗ್ರಹಃ ।
ವೃತ್ತಭಂಗಸ್ತಥಾ ಗದ್ಯೇ ದಾನೋತ್ಪತ್ತಿರ್ಗಜಾನನೇ ॥ ೭ ॥
ತಸ್ಯೈವಂ ಗುಣಯುಕ್ತಸ್ಯ ಸಾರ್ವಭೌಮಸ್ಯ ಭೂಪತೇಃ ।
ಏಕ ಏವ ಮಹಾನಾಸೀದ್ದೋಷಃ ಪುತ್ರವಿವರ್ಜಿತಃ ॥ ೮ ॥
ತತಃ ಪುತ್ರಕೃತೇ ಗತ್ವಾ ಚಕಾರ ಸುಮಹತ್ತಪಃ ।
ಚಮತ್ಕಾರಪುರೇ ಕ್ಷೇತ್ರೇ ಲಿಂಗಂ ಸಂಸ್ಥಾಪ್ಯ ಭಕ್ತಿತಃ ॥ ೯ ॥
ಪಂಚಾಽಗ್ನಿಸಾಧಕೋ ಗ್ರೀಷ್ಮೇ ವರ್ಷಾಸ್ವಾಕಾಶಸಂಸ್ಥಿತಃ ।
ಜಲಾಶ್ರಯಶ್ಚ ಹೇಮಂತೇ ಸ ಧ್ಯಾಯತಿ ಮಹೇಶ್ವರಂ ॥ ೧೦ ॥
ತತೋ ವರ್ಷಸಹಸ್ರಾಂತೇ ತಸ್ಯ ತುಷ್ಟೋ ಮಹೇಶ್ವರಃ ।
ಪ್ರತ್ಯಕ್ಷೋಽಭೂತ್ಸಮಂ ಗೌರ್ಯಾ ಗಣಸಂಘೈಃ ಸಮಾವೃತಃ ॥ ೧೧ ॥
ಉವಾಚ ವರದೋಽಸ್ಮೀತಿ ಪ್ರಾರ್ಥಯಸ್ವ ಯಥೇಪ್ಸಿತಂ ।
ಅಹಂ ತೇ ಸಂಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೨ ॥

---

೬. ಅವನ ರಾಜ್ಯದಲ್ಲಿ ದಂಡವು ವಾಸ್ತುವಿನಲ್ಲಿಯೂ, ಮನೆಯ ತಡೆಯು ಅಕ್ಷಕ್ರೀಡೆಯಲ್ಲಿಯೂ, ಚಂದ್ರನೊಬ್ಬನೇ ದೋಷಾಕರನೂ, ಗೂಬೆಗಳು ಇಷ್ಟವಾದ ರಾತ್ರಿಯುಳ್ಳುವೂ (ಇಷ್ಟದೋಷವುಳ್ಳುವೂ) ಆಗಿದ್ದುವು.

೭. ದೀಪಗಳಲ್ಲಿ ಎಣ್ಣೆನಾಶವೂ (ಸ್ನೇಹವಿಲ್ಲದಿರುವಿಕೆಯೂ) ಮದುವೆಯಲ್ಲಿ ಹಸ್ತಗ್ರಹಣವೂ (ಕಂದಾಯವನ್ನು ತೆಗೆದುಕೊಳ್ಳುವುದೂ) ಗದ್ಯಕಾವ್ಯದಲ್ಲಿ ವೃತ್ತಭಂಗವೂ (ನಡತೆಯಭ್ರಂಶವೂ) ಆನೆಯ ಮುಖದಲ್ಲಿ ಮದೋದಕದ ಉತ್ಪತ್ತಿಯೂ (ದಾನೋತ್ಥಾನವೂ) ಇದ್ದಿತು.

೮–೯. ಹೀಗೆ ಗುಣಶಾಲಿಯಾದ ಆ ರಾಜನಲ್ಲಿ ಪುತ್ರಾಭಾವವೆಂಬ ಒಂದು ದೋಷ ಮಾತ್ರ ಇದ್ದಿತು. ಬಳಿಕ ಅವನು ಚಮತ್ಕಾರಪುರಕ್ಕೆ ಹೋಗಿ ಅಲ್ಲಿ ಭಕ್ತಿಯಿಂದ ಲಿಂಗವನ್ನು ಸ್ಥಾಪಿಸಿ ಪುತ್ರನಿಗಾಗಿ ಮಹಾತಪವನ್ನಾಚರಿಸಿದನು.

೧೦. ಅವನು ಗ್ರೀಷ್ಮಕಾಲದಲ್ಲಿ ಪಂಚಾಗ್ನಿಮಧ್ಯದಲ್ಲಿಯೂ, ಮಳೆಗಾಲದಲ್ಲಿ ಅನಾವರಣಸ್ಥಳದಲ್ಲಿಯೂ, ಹೇಮಂತಕಾಲದಲ್ಲಿ ನೀರಿನಲ್ಲಿಯೂ ಇದ್ದು ಮಹೇಶ್ವರನನ್ನು ಧ್ಯಾನಮಾಡಿದನು.

೧೧. ಅನಂತರ ಸಾವಿರವರ್ಷಗಳ ಕೊನೆಯಲ್ಲಿ ಮಹೇಶ್ವರನು ಅವನಲ್ಲಿ ಸಂತುಷ್ಟನಾಗಿ ಗೌರಿ ಮತ್ತು ಗಣಗಳೊಡನೆ ಪ್ರತ್ಯಕ್ಷನಾದನು.

೧೨. ನಾನು ನಿನಗೆ ವರವನ್ನು ಕೊಡುವೆನು. ಇಷ್ಟವಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನೆಂದನು.

ತತಸ್ತಂ ಪ್ರಣಿಪತ್ಯೋಚ್ಚೈಃ ಸ್ತುತ್ವಾ ಸೂಕ್ತೈಃ ಶ್ರುತೈರಪಿ ।
ಪ್ರೋವಾಚ ವಿನಯೋಪೇತಃ ಕೃತಾಂಜಲಿಪುಟಃ ಸ್ಥಿತಃ ॥ ೧೩ ॥
ತ್ವತ್ಪ್ರಸಾದಾತ್ಸುರಶ್ರೇಷ್ಠ ಯತ್ಕಿಂಚಿದ್ಧರಣೀತಲೇ ।
ತದಸ್ತಿ ಮೇ ಗೃಹೇ ಸರ್ವಂ ವಾಂಛಿತಂ ಸ್ವೇನ ಚೇತಸಾ ॥ ೧೪ ॥
ಸುರೂಪಾಣಿ ಕಲತ್ರಾಣಿ ರಾಜ್ಯಂ ನಿಹತಕಂಟಕಂ ।
ಶರೀರಂ ರೋಗನಿರ್ಮುಕ್ತಂ ಸಂಖ್ಯಾಹೀನಂ ತಥಾ ಧನಂ ॥ ೧೫ ॥
ಏಕಂ ಮೇ ಸುಮಹದ್ದುಃಖಂ ಯದಪತ್ಯಂ ನ ವಿದ್ಯತೇ ।
ತಸ್ಮಾದ್ದೇಹಿ ಸುತಂ ದೇವ ಪ್ರಸನ್ನೋ ಯದಿ ಶಂಕರ ॥ ೧೬ ॥

ಶ್ರೀ ಭಗವಾನುವಾಚ :—

ಅಚಿರೇಣ ನೃಪಶ್ರೇಷ್ಠ ಪುತ್ರಸ್ತವ ಭವಿಷ್ಯತಿ ।
ಮತ್ಪ್ರಸಾದಾನ್ನ ಸಂದೇಹಸ್ತಸ್ಮಾದ್ಗಚ್ಛ ದ್ರುತಂ ಗೃಹಂ ॥ ೧೭ ॥

ಸೂತ ಉವಾಚ :—

ಏತಸ್ಮಿನ್ನಂತರೇ ಗೌರೀ ಕೋಪಸಂರಕ್ತಲೋಚನಾ ।
ಭರ್ತ್ಸಯಿತ್ವಾ ಮಹಾದೇವಂ ತತಃ ಪ್ರೋವಾಚ ತಂ ನೃಪಂ ॥ ೧೮ ॥
ಯಸ್ಮಾತ್ತ್ವಯಾ ಮಹಾಮೂರ್ಖ ನ ಪ್ರಮಾಣಃ ಕೃತೋ ಮಮ ।
ಹರಾದನಂತರಂ ತಸ್ಮಾಚ್ಛಾಪಂ ದಾಸ್ಯಾಮ್ಯಹಂ ತವ ॥ ೧೯ ॥

---

೧೩. ಬಳಿಕ ಹರಿಶ್ಚಂದ್ರನು ಆ ಮಹೇಶ್ವರನನ್ನು ವಂದಿಸಿ ಸೂಕ್ತಗಳಿಂದ ಸ್ತುತಿಸಿ ವಿನಯದಿಂದ ಕೈಮುಗಿದುಕೊಂಡು ಇಂತೆಂದನು.

೧೪. ಸುರೋತ್ತಮ! ನಿನ್ನ ಅನುಗ್ರಹದಿಂದ ಭೂಮಿಯಲ್ಲಿರುವ ನನಗೆ ಇಷ್ಟವಾದ ಎಲ್ಲವೂ ನನ್ನ ಮನೆಯಲ್ಲಿರುವುವು.

೧೫. ನನಗೆ ಸುಂದರಿಯರಾದ ಪತ್ನಿಯರೂ, ಶತ್ರುಗಳಿಲ್ಲದ ರಾಜ್ಯವೂ, ರೋಗವಿಲ್ಲದ ಶರೀರವೂ, ಮಿತಿಯಿಲ್ಲದ ಧನವೂ ಇರುವುವು.

೧೬. ನನಗೆ ಮಕ್ಕಳಿಲ್ಲದಿರುವುದೊಂದು ಮಹಾದುಃಖವಾಗಿರುವುದು. ಆದ್ದರಿಂದ ಶಂಕರ! ನೀನು ಪ್ರಸನ್ನನಾಗಿದ್ದರೆ ನನಗೆ ಪುತ್ರನನ್ನು ಕೊಡು.

೧೭. ಶ್ರೀ ಭಗವಂತನು ಹೇಳುತ್ತಾನೆ:—ನನ್ನ ಅನುಗ್ರಹದಿಂದ ಶೀಘ್ರವಾಗಿಯೇ ನಿನಗೆ ಪುತ್ರನು ಜನಿಸುವನು. ಆದ್ದರಿಂದ ಬೇಗನೆ ಮನೆಗೆ ಹೋಗು.

೧೮. ಈ ಸಮಯದಲ್ಲಿ ಗೌರಿಯು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವಳಾಗಿ ಮಹಾದೇವನನ್ನು ಗದರಿಸಿ ಆ ರಾಜನನ್ನು ಕುರಿತು ಇಂತೆಂದಳು.

೧೯. ಮೂರ್ಖ! ನೀನು ಶಿವನ ಅನಂತರ ನನ್ನನ್ನು ವಂದಿಸದಿರುವುದರಿಂದ ನಾನು ನಿನಗೆ ಶಾಪವನ್ನೀಯುವೆನು.

ತವ ಸಂಲಪ್ಸ್ಯತೇ ಪುತ್ರೋ ಯಥೋಕ್ತಃ ಶೂಲಪಾಣಿನಾ ।
ಪರಂ ತನ್ಮೃತ್ಯುಜಂ ದುಃಖಂ ತ್ವಂ ಶಿಶುತ್ವೇಽಪಿ ಲಪ್ಸ್ಯಸೇ ॥ ೨೦ ॥
ಏವಮುಕ್ತ್ವಾ ಭಗವತೀ ಸಾರ್ಧಂ ದೇವೇನ ಶಂಭುನಾ ।
ಅದರ್ಶನಂ ಯಯೌ ಪಶ್ಚಾತ್ತಥಾಽನ್ಯೈರಪಿ ಪಾರ್ಶ್ವಗೈಃ ॥ ೨೧ ॥
ಸೋಽಪಿ ರಾಜಾ ವರಂ ಲಬ್ಧ್ವಾ ಶಾಪಂ ಚ ತದನಂತರಂ ।
ನ ಜಗಾಮ ಗೃಹಂ ಭೂಯಶ್ಚಕಾರ ಸುಮಹತ್ತಪಃ ॥ ೨೨ ॥
ಏಕಾಸನಂ ಸಮಾರೂಢೌ ಕೃತ್ವಾ ಗೌರೀಮಹೇಶ್ವರೌ ।
ತತಶ್ಚಾರಾಧಯಾಮಾಸ ಸಮಂ ಪುಷ್ಪಾನುಲೇಪನೈಃ ॥ ೨೩ ॥
ವಿಶೇಷೇಣ ದದೌ ದಾನಂ ಬ್ರಾಹ್ಮಣೇಭ್ಯೋ ಮಹೀಪತಿಃ ।
ಭೂಮಿಶಾಯೀ ಪ್ರಶಾಂತಾತ್ಮಾ ಷಷ್ಠಕಾಲಕೃತಾಽಶನಃ ॥ ೨೪ ॥
ತತಃ ಸಂವತ್ಸರಸ್ಯಾಂತೇ ಭಗವಾನ್ ವೃಷಭಧ್ವಜಃ ।
ಪಾರ್ವತ್ಯಾ ಸಹಿತೋ ಭೂಯಸ್ತಸ್ಯ ಸಂದರ್ಶನಂ ಗತಃ ॥ ೨೫ ॥
ತತಃ ಸ ನೃಪತಿಸ್ತಾಭ್ಯಾಂ ಯುಗಪದ್ವಿಧಿಪೂರ್ವಕಂ ।
ಕೃತ್ವಾ ನತಿಂ ತತೋ ವಾಕ್ಯಂ ವಿನಯಾದಿದಮಬ್ರವೀತ್ ॥ ೨೬ ॥
ಪುರಾ ದೇವಿ ಮಯಾನಂದಪುರೇ ವ್ಯಾಕುಲಚೇತಸಾ ।
ನ ನತಾ ತ್ವಂ ನ ಮೇ ಕೋಪಂ ತಸ್ಮಾತ್ತ್ವಂ ಕರ್ತುಮರ್ಹಸಿ ॥ ೨೭ ॥

---

೨೦. ಶಂಕರನು ಹೇಳಿದಂತೆ ನೀನು ಪುತ್ರನನ್ನು ಪಡೆಯುವೆ. ಆದರೆ ಶಿಶುವಾಗಿರುವಾಗಲೆ ಅವನ ಮರಣದಿಂದ ದುಃಖವನ್ನು ಹೊಂದುವೆ.

೨೧. ಪಾರ್ವತಿಯು ಹೀಗೆ ಹೇಳಿ ಶಂಕರನೊಡನೆಯೂ, ಇತರ ಪರಿವಾರದವರೊಡನೆಯೂ ಅದೃಶ್ಯಳಾದಳು.

೨೨. ಆ ರಾಜನು ವರವನ್ನೂ, ಅನಂತರ ಶಾಪವನ್ನೂ ಹೊಂದಿ ಮನೆಗೆ ಹೋಗದೆ ಮಹಾತಪವನ್ನಾಚರಿಸಿದನು.

೨೩. ಗೌರೀಶಂಕರರನ್ನು ಒಂದೇ ಆಸನದಲ್ಲಿ ಕುಳ್ಳಿರಿಸಿ ಪುಷ್ಪಗಂಧಗಳಿಂದ ಆರಾಧಿಸಿದನು.

೨೪. ಭೂಮಿಯಲ್ಲಿ ಮಲಗಿದವನೂ, ಶಾಂತಮನಸ್ಕನೂ, ಆರನೆ ಕಾಲದಲ್ಲಿ ಭುಂಜಿಸುವವನೂ ಆಗಿ ಬ್ರಾಹ್ಮಣರಿಗೆ ವಿಶೇಷವಾಗಿ ದಾನವನ್ನಿತ್ತನು.

೨೫. ತರುವಾಯ ಒಂದು ವರ್ಷದ ಅನಂತರ ಪೂಜ್ಯನಾದ ಮಹೇಶ್ವರನು ಪಾರ್ವತಿಯೊಡನೆ ಅವನಿಗೆ ದರ್ಶನವನ್ನಿತ್ತನು.

೨೬. ಆ ದೊರೆಯು ಆ ಪಾರ್ವತೀ ಪರಮೇಶ್ವರರಿಗೆ ಒಂದೇಸಾರಿ ವಿಧಿಯಂತೆ ನಮಸ್ಕರಿಸಿ ವಿನಯದಿಂದ ಇಂತೆಂದನು.

೨೭. ದೇವಿ! ಹಿಂದೆ ಆನಂದಪುರದಲ್ಲಿ ವ್ಯಥೆಗೊಂಡ ಮನಸ್ಸುಳ್ಳ ನಾನು ನಿನ್ನನ್ನು ವಂದಿಸಲಿಲ್ಲ. ಆದ್ದರಿಂದ ಕೋಪಗೊಳ್ಳಬೇಡ.

ದೇಹಾರ್ಧಧಾರಿಣೀ ದೇವಿ ಸದಾ ತ್ವಂ ಶೂಲಧಾರಿಣಃ ।
ತದೈಕಸ್ಮಿನ್ನತೇ ಕಸ್ಮಾನ್ನ ನತಾ ತ್ವಂ ವದಸ್ವ ಮೇ ॥ ೨೮ ॥
ಯಸ್ತಂ ನಮತಿ ದೇವೇಶಂ ತೇನ ತ್ವಂ ಸರ್ವದಾ ನತಾ ।
ನತಾಯಾಂ ತ್ವಯಿ ದೇವೇಶೋ ನತಃ ಸ್ಯಾದಿತಿ ಮೇ ಮತಿಃ ॥ ೨೯ ॥
ತಥಾಽಪಿ ಚ ಪೃಥಕ್ತ್ವೇನ ಮಯಾ ತ್ವಂ ತು ನತಾ ಸಹ ।
ಏಕಾಸನಂ ಸಮಾರೂಢಾ ತತ್ಸಮಂ ದೇವಿ ಪೂಜಿತಾ ॥ ೩೦ ॥
ತಸ್ಮಾತ್ಕುರು ಪ್ರಸಾದಂ ಮೇ ಯಃ ಪುರೋಕ್ತಃ ಪುರಾರಿಣಾ ।
ಸೋಽಸ್ತು ವೈ ಸಫಲಃ ಸದ್ಯೋ ವರಃ ಪುತ್ರಕೃತೇ ಮಮ ॥ ೩೧ ॥
ಯಥಾ ವಂಶಧರಃ ಪುತ್ರೋ ದೀರ್ಘಾಯುರ್ದೃಢವಿಕ್ರಮಃ ।
ತ್ವತ್ಪ್ರಸಾದಾದ್ಭವೇದ್ದೇವಿ ತಥಾ ತ್ವಂ ಕರ್ತುಮರ್ಹಸಿ ॥ ೩೨ ॥

ಶ್ರೀ ದೇವ್ಯುವಾಚ :—

ನಾಽನ್ಯಥಾ ಮೇ ವಚೋ ರಾಜಂ ಜಾಯತೇಽತ್ರ ಕಥಂಚನ ।
ತಸ್ಮಾದ್ಬಾಲೋಽಪಿ ತೇ ಪುತ್ರಃ ಪಂಚತ್ವಂ ಸಮುಪೈಷ್ಯತಿ ॥ ೩೩ ॥
ದರ್ಶಯಿತ್ವಾ ತು ತೇ ದುಃಖಮಲ್ಪಮೃತ್ಯುಸಮುದ್ಭವಂ ।
ಭೂಯಃ ಸಂಪ್ರಾಪ್ಸ್ಯತಿ ಪ್ರಾಣಾನಚಿರಾನ್ಮೇ ಪ್ರಸಾದತಃ ॥ ೩೪ ॥

---

೨೮. ನೀನು ಯಾವಾಗಲೂ ಶಂಕರನ ಅರ್ಧಾಂಗಿಯಾಗಿರುವೆ. ಆದ್ದರಿಂದ ಶಂಕರನೊಬ್ಬನನ್ನು ವಂದಿಸಿದರೆ ನೀನು ಹೇಗೆ ವಂದಿತಳಾಗಲಿಲ್ಲ? ನನಗೆ ಹೇಳು.

೨೯. ಶಂಕರನನ್ನು ವಂದಿಸಿದವನು ನಿನ್ನನ್ನು ನಮಸ್ಕಾರಮಾಡಿದವನಂತಾಗುವನು. ನಿನ್ನನ್ನು ನಮಸ್ಕಾರಮಾಡಿದವನು ಶಂಕರನನ್ನು ನಮಸ್ಕಾರಮಾಡಿದವನಂತಾಗುವನು.

೩೦. ಹಾಗಾದರೂ ನಾನು ಏಕಾಸನದಲ್ಲಿ ಕುಳಿತಿರುವ ನಿನ್ನನ್ನು ಬೇರೆಯಾಗಿಯೂ, ಒಟ್ಟಿಗೂ ಪೂಜಿಸಿದೆನು.

೩೧. ಆದ್ದರಿಂದ ನೀನು ನನ್ನಲ್ಲಿ ಅನುಗ್ರಹಮಾಡು. ಪುತ್ರನಿಗಾಗಿ ಹಿಂದೆ ಶಂಕರನು ಕೊಟ್ಟ ವರವು ಸಫಲವಾಗಲಿ.

೩೨. ದೇವಿ! ನಿನ್ನ ಅನುಗ್ರಹದಿಂದ ನನಗೆ ವಂಶೋದ್ಧಾರಕನೂ, ದೀರ್ಘಾಯುಷ್ಮಂತನೂ, ಸ್ಥಿರಪರಾಕ್ರಮಿಯೂ ಆದ ಪುತ್ರನು ಜನಿಸುವಂತೆ ಅನುಗ್ರಹಿಸು.

೩೩. ಶ್ರೀ ದೇವಿಯು ಹೇಳುತ್ತಾಳೆ :—ರಾಜನೆ! ನನ್ನ ಮಾತು ವ್ಯತ್ಯಾಸವಾಗುವುದಿಲ್ಲ. ಆದ್ದರಿಂದ ನಿನ್ನ ಪುತ್ರನು ಬಾಲಕನಾಗಿಯೇ ಮಡಿಯುವನು.

೩೪. ಅವನು ನಿನಗೆ ಮರಣದಿಂದುಂಟಾದ ಅಲ್ಪದುಃಖವನ್ನು ತೋರಿಸಿ ಮರಳಿ ನನ್ನ ಅನುಗ್ರಹದಿಂದ ಬೇಗನೆ ಬದುಕುವನು.

ಭವಿಷ್ಯತಿ ಚ ದೀರ್ಘಾಯುಸ್ತತೋ ವಂಶಭರೋ ಜಯೀ ।
ಸಾರ್ವಭೌಮಪ್ರಧಾನಶ್ಚ ದಾನೀ ಯಜ್ವಾ ಚ ಧರ್ಮವಿತ್ ॥ ೩೫ ॥
ತಸ್ಮಾದ್ರಾಜನ್ ಗೃಹಂ ಗತ್ವಾ ಕುರು ರಾಜ್ಯಮಭೀಪ್ಸಿತಂ ।
ಸಂಪ್ರಾಪ್ಸ್ಯಸಿ ಸುತಂ ಶ್ರೇಷ್ಠಂ ಯಾದೃಶಂ ಕೀರ್ತಿತಂ ಮಯಾ ॥ ೩೬ ॥
ಅನ್ಯೋಽಪಿ ಮಾನವೋ ಯೋ ಮಾಂ ರೂಪೇಣಾನೇನ ಸಂಸ್ಥಿತಾಂ ।
ಪೂಜಯಿಷ್ಯತಿ ಚಾತ್ರೈವ ಸಮಂ ದೇವೇನ ಶಂಭುನಾ ॥ ೩೭ ॥
ತಸ್ಯಾಹಂ ಸಂಪ್ರದಾಸ್ಯಾಮಿ ಪುತ್ರಾನ್ ಹೃದಯವಾಂಛಿತಾನ್ ।
ತಥಾಽನ್ಯದಪಿ ಯತ್ಕಿಂಚಿದಚಿರಾನ್ನಾಽತ್ರ ಸಂಶಯಃ ॥ ೩೮ ॥

ಶ್ರೀ ಮಹದೇವ ಉವಾಚ :–

ಭೂಯ ಏವ ನೃಪಶ್ರೇಷ್ಠ ಮತ್ತಃ ಪ್ರಾರ್ಥಯ ವಾಂಛಿತಂ ।
ನ ವೃಥಾ ದರ್ಶನಂ ಮೇ ಸ್ಯಾತ್ಸತ್ಯಮೇತದ್ಬ್ರವೀಮಿ ತೇ ॥ ೩೯ ॥

ಹರಿಶ್ಚಂದ್ರ ಉವಾಚ :–

ಕೃತಕೃತ್ಯೋಽಸ್ಮಿ ದೇವೇಶ ಸರ್ವಮಸ್ತಿ ಗೃಹೇ ಮಮ ।
ಪುತ್ರಂ ತ್ಯಕ್ತ್ವಾ ಮಯಾ ಸೋಽಪಿ ದತ್ತೋ ವಂಶಧರೋ ಜಯೀ ॥ ೪೦ ॥
ತಥಾಽಪಿ ನ ತವಾದೇಶೋ ವ್ಯರ್ಥಃ ಕಾರ್ಯಃ ಕಥಂಚನ ।
ಏತಸ್ಮಾತ್ಕಾರಣಾದ್ದೇವ ಯಾಚಯಿಷ್ಯಾಮಿ ವಾಂಛಿತಂ ॥ ೪೧ ॥

---

೩೫. ಅವನು ಅನಂತರ ದೀರ್ಘಾಯುಷ್ಮಂತನೂ, ವಂಶೋದ್ಧಾರಕನೂ, ಜಯಶಾಲಿಯೂ, ಪ್ರಧಾನಚಕ್ರವರ್ತಿಯೂ, ದಾನಶೀಲನೂ, ಯಾಗಮಾಡುವವನೂ, ಧರ್ಮಜ್ಞನೂ ಆಗುವನು.

೩೬. ಅರಸ! ಆದ್ದರಿಂದ ಅರಮನೆಗೆ ಹೋಗಿ ರಾಜ್ಯವನ್ನಾಳು. ನಾನು ಹೇಳಿದಂತೆ ಇಷ್ಟನೂ, ಶ್ರೇಷ್ಠನೂ ಆದ ಪುತ್ರನನ್ನು ಪಡೆಯುವೆ.

೩೭–೩೮. ಈ ರೂಪದಿಂದ ಇಲ್ಲಿರುವ ನನ್ನನ್ನು ಶಂಕರನೊಡನೆ ಪೂಜಿಸುವ ಇತರ ಮಾನವನಿಗೂ ಇಷ್ಟರಾದ ಪುತ್ರರನ್ನೂ, ಇಷ್ಟಾರ್ಥಗಳನ್ನೂ ಬೇಗನೆ ನಿಶ್ಚಯವಾಗಿಯೂ ಅನುಗ್ರಹಿಸುವೆನು.

೩೯. ಶ್ರೀಮಹಾದೇವನು ಹೇಳುತ್ತಾನೆ:— ನೃಪೋತ್ತಮನೆ! ಮರಳಿ ನನ್ನಿಂದ ಇಷ್ಟಾರ್ಥಗಳನ್ನು ಕೇಳಿಕೊ. ನನ್ನ ದರ್ಶನವು ವ್ಯರ್ಥವಾಗುವುದಿಲ್ಲ. ಇದನ್ನು ನಾನು ನಿಜವಾಗಿಯೂ ಹೇಳುವೆನು.

೪೦. ಹರಿಶ್ಚಂದ್ರನು ಹೇಳುತ್ತಾನೆ:—ದೇವೇಶ! ನಾನು ಧನ್ಯನಾದೆನು. ನನ್ನ ಮನೆಯಲ್ಲಿ ಪುತ್ರನನ್ನುಳಿದು ಇತರ ಎಲ್ಲವೂ ಇರುವುವು. ನೀನು ವಂಶೋದ್ಧಾರಕನೂ, ಜಯಶೀಲನೂ ಆದ ಪುತ್ರನನ್ನು ಕೊಟ್ಟಿರುವೆ.

೪೧. ಆದರೂ ನಿನ್ನ ಅಪ್ಪಣೆಯನ್ನು ವ್ಯರ್ಥಗೊಳಿಸಬಾರದು. ಈ ಕಾರಣದಿಂದ ನಿನ್ನಲ್ಲಿ ನನ್ನ ಇಷ್ಟಾರ್ಥವನ್ನು ಬೇಡಿಕೊಳ್ಳುವೆನು.

ರಾಜಸೂಯಕೃತೇಽಸ್ಮಾಕಂ ಸದಾ ಬುದ್ಧಿಃ ಪ್ರವರ್ತತೇ ।
ನಿಷೇಧಯಂತಿ ಮಾಂ ಸರ್ವೇ ಮಂತ್ರಿಣಃ ಸುಹೃದಸ್ತಥಾ ॥ ೪೨ ॥
ಸರ್ವೈಸ್ತೈರ್ಜಾಯತೇ ಯಜ್ಞಃ ಪಾರ್ಥಿವೈಃ ಕರದೀಕೃತೈಃ ।
ಯುದ್ಧಂ ವಿನಾ ಕರಂ ತೇಽಪಿ ನ ಯಚ್ಛಂತಿ ಯತೋ ವಿಭೋ ॥ ೪೩ ॥
ತತೋ ಯುದ್ಧಾರ್ಥಿನಂ ಮಾಂ ತೇ ವಾರಯಂತಿ ಹಿತೈಷಿಣಃ ।
ಕೃತೋತ್ಸಾಹಂ ಮಖಪ್ರಾಪ್ತೌ ನೀತಿಮಾರ್ಗಸಮಾಶ್ರಿತಾಃ ॥ ೪೪ ॥
ತಸ್ಮಾತ್ತವ ಪ್ರಸಾದೇನ ರಾಜಸೂಯೋ ಭವೇನ್ಮಖಃ ।
ಅವಿಘ್ನಃ ಸಿದ್ಧಿಮಾಯಾತು ಮಮ ನಾಽನ್ಯದ್ವೃಣೋಮ್ಯಹಂ ॥ ೪೫ ॥

ಸೂತ ಉವಾಚ :—

ಸ ತಥೇತಿ ಪ್ರತಿಜ್ಞಾಯ ಜಗಾಮಾದರ್ಶನಂ ಹರಃ ।
ಸೋಽಪಿ ಲಬ್ಧವರೋ ಭೂಪಃ ಸ್ವಮೇವ ಭವನಂ ಗತಃ ॥ ೪೬ ॥
ಏವಂ ತೇನ ನರೇಂದ್ರೇಣ ಪೂರ್ವಂ ತತ್ರ ವಿನಿರ್ಮಿತೌ ।
ಉಮಾಮಹೇಶ್ವರೌ ಪಶ್ಚಾನ್ನಿರ್ಮಿತಾವಿತರೈರಪಿ ॥ ೪೭ ॥

---

೪೨. ನನಗೆ ಯಾವಾಗಲೂ ರಾಜಸೂಯಯಾಗವನ್ನು ಮಾಡಬೇಕೆಂದು ಅಭಿಪ್ರಾಯವಿದೆ. ನನ್ನನ್ನು ಸಮಸ್ತ ಮಂತ್ರಿಗಳೂ, ಮಿತ್ರರೂ ತಡೆಯುತ್ತಿದ್ದಾರೆ.

೪೩. ರಾಜರೆಲ್ಲರೂ ಕಪ್ಪವನ್ನು ಕೊಟ್ಟರೆ ಯಜ್ಞವು ನಡೆಯುವುದು. ಸ್ವಾಮಿ! ಯುದ್ಧವಿಲ್ಲದೆ ಅವರು ಕಪ್ಪವನ್ನು ಕೊಡುವುದಿಲ್ಲ.

೪೪. ಆದುದರಿಂದ ಹಿತವನ್ನು ಬಯಸುವವರೂ, ನೀತಿಮಾರ್ಗಾವಲಂಬಿಗಳೂ ಆದ ಅವರು ಯುದ್ಧದಲ್ಲಿ ಅಪೇಕ್ಷೆಯುಳ್ಳವನೂ, ಯಜ್ಞಮಾಡಲು ಉತ್ಸಾಹವುಳ್ಳವನೂ ಆದ ನನ್ನನ್ನು ಬೇಡವೆಂದು ತಡೆಯುತ್ತಾರೆ.

೪೫. ಆದುದರಿಂದ ನಿನ್ನ ಅನುಗ್ರಹದಿಂದ ರಾಜಸೂಯಯಾಗವು ಅವಿಘ್ನವಾಗಿ ನಡೆದು ಸಿದ್ಧಿಯನ್ನು ಹೊಂದಲಿ. ನಾನು ಬೇರೆ ಏನನ್ನೂ ಕೇಳಿಕೊಳ್ಳುವುದಿಲ್ಲ.

೪೬. ಸೂತನು ಹೇಳುತ್ತಾನೆ:—ಮಹೇಶ್ವರನು ಹಾಗೆಯೇ ಆಗಲೆಂದು ಒಪ್ಪಿ ಕಣ್ಮರೆಯಾದನು. ವರವನ್ನು ಪಡೆದ ಆ ದೊರೆಯೂ ತನ್ನ ಅರಮನೆಗೆ ತೆರಳಿದನು.

೪೭. ಹೀಗೆ ಆ ದೊರೆಯು ಅಲ್ಲಿ ಉಮಾಮಹೇಶ್ವರರನ್ನು ಪ್ರತಿಷ್ಠೆಮಾಡಿದನು. ಅನಂತರ ಇತರರೂ ಅಲ್ಲಿ ಉಮಾಮಹೇಶ್ವರರನ್ನು ಸ್ಥಾಪಿಸಿದರು.

ಯಸ್ತಾಭ್ಯಾಂ ಕುರುತೇ ಪೂಜಾಂ ಸಂಪ್ರಾಪ್ತೇ ಪಂಚಮೀ ದಿನೇ ।
ಫಲೈಃ ಸರ್ವೇಷು ಗಾತ್ರೇಷು ಯಾವತ್ಸಂವತ್ಸರಂ ದ್ವಿಜಾಃ ।
ಸುತಂ ಪ್ರಾಪ್ನೋತಿ ಸೋಽಭೀಷ್ಟಂ ಸ್ವವಂಶೋದ್ಧರಣಕ್ಷಮಂ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಉಮಾಮಹೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ"
ನಾಮಾಷ್ಟಚತ್ವಾರಿಂಶೋಽಧ್ಯಾಯಃ

---

೪೮. ಪಂಚಮೀ ದಿನ ಒಂದು ವರ್ಷಕಾಲ ಉಮಾಮಹೇಶ್ವರರ ಸರ್ವಾವಯವಗಳಲ್ಲಿ ಫಲಗಳಿಂದ ಪೂಜೆಮಾಡಿದವನು ತನ್ನ ವಂಶವನ್ನು ಉದ್ಧರಿಸುವ ಇಷ್ಟನಾದ ಪುತ್ರನನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಉಮಾಮಹೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶತ್ತಮೋಽಧ್ಯಾಯಃ

### ಕಲಶನೃಪತೇರ್ದುರ್ವಾಸಸಃ ಶಾಪೇನ ವ್ಯಾಘ್ರತ್ವಪ್ರಾಪ್ತಿವರ್ಣನಂ

ಸೂತ ಉವಾಚ:—

ತತ್ರೈವಾಽಸ್ತಿ ಮಹಾಪುಣ್ಯೋ ಹ್ರದತೀರೇ ವ್ಯವಸ್ಥಿತಃ ।
ಕಲಶೇಶ್ವರ ಇತ್ಯಾಖ್ಯಃ ಸರ್ವಪಾಪಪ್ರಣಾಶನಃ ॥ ೧ ॥
ದೃಷ್ಟ್ವಾ ಪ್ರಮುಚ್ಯತೇ ಪಾಪಾನ್ಮನುಷ್ಯಃ ಕಲಶೇಶ್ವರಂ ॥ ೨ ॥
ಪುರಾಸೀತ್ಕಲಶೋ ನಾಮ ಯದುವಂಶಸಮುದ್ಭವಃ ।
ಯಜ್ವಾ ದಾನಪತಿರ್ದಕ್ಷಃ ಸರ್ವಲೋಕಹಿತೇ ರತಃ ॥ ೩ ॥
ಕಸ್ಯಚಿತ್ತ್ವಥ ಕಾಲಸ್ಯ ದುರ್ವಾಸಾ ಮುನಿಸತ್ತಮಃ ।
ಚಾತುರ್ಮಾಸ್ಯವ್ರತಂ ಕೃತ್ವಾ ತದ್ಗೃಹಂ ಸಮುಪಸ್ಥಿತಃ ॥ ೪ ॥
ಅಥೋತ್ಥಾಯ ನೃಪಸ್ತೂರ್ಣಂ ಸಂಮುಖಃ ಪ್ರಯಯೌ ಮುದಾ ।
ಸ್ವಾಗತಂ ಸ್ವಾಗತಂ ತೇಽಸ್ತು ಬ್ರುವಾಣ ಇತಿ ಸಾದರಂ ॥ ೫ ॥

---

## ಕನ್ನಡದ ಅನುವಾದ

### ಕಲಶನೃಪತಿವ್ಯಾಘ್ರತ್ವಪ್ರಾಪ್ತಿವರ್ಣನ

೧. ಸೂತನು ಹೇಳುತ್ತಾನೆ:—ಅಲ್ಲಿಯೇ ಸರೋವರದ ದಡದಲ್ಲಿ ಅತಿ ಪುಣ್ಯಕರನೂ, ಸಕಲ ಪಾಪಗಳನ್ನು ನಾಶಗೊಳಿಸುವವನೂ ಆದ ಕಲಶೇಶ್ವರ ವಿರಾಜಿಸುತ್ತಿರುವನು.

೨. ಆ ಕಲಶೇಶ್ವರನನ್ನು ದರ್ಶನಮಾಡಿದ ಮಾನವನು ಪಾಪಮುಕ್ತನಾಗುವನು.

೩. ಹಿಂದೆ ಯದುವಂಶ ಸಂಭೂತನೂ, ಯಾಗ ಮಾಡುವವನೂ, ದಾತನೂ, ದಕ್ಷನೂ, ಸಮಸ್ತ ಜನರ ಹಿತದಲ್ಲಿ ನಿರತನೂ ಆದ ಕಲಶನೆಂಬ ರಾಜನಿದ್ದನು.

೪. ಒಂದಾನೊಂದು ಕಾಲದಲ್ಲಿ ದುರ್ವಾಸನೆಂಬ ಮುನಿವರ್ಯನು ಚಾತುರ್ಮಾಸ್ಯ ವ್ರತವನ್ನಾಚರಿಸಿ ಅವನ ಮನೆಗೆ ಬಂದನು.

೫. ಆಗ ದೊರೆಯು ಎದ್ದು "ಸ್ವಾಗತಂ ಸ್ವಾಗತಂ" ಎಂದು ಹೇಳುತ ಪ್ರೀತಿಯಿಂದ ಆತನನ್ನು ಎದುರುಗೊಂಡನು.

ತತಃ ಪ್ರಣಮ್ಯ ತಂ ಭಕ್ತ್ಯಾ ಪ್ರಕ್ಷಾಲ್ಯ ಚರಣೌ ಸ್ವಯಂ ।
ದತ್ವಾರ್ಘಮಿತಿಹೋವಾಚ ಹರ್ಷಬಾಷ್ಪಾಕುಲೇಕ್ಷಣಃ ॥ ೬ ॥
ಇದಂ ರಾಜ್ಯಮಮೀ ಪುತ್ರಾ ಇಮಾ ನಾರ್ಯ ಇದಂ ಧನಂ ।
ಬ್ರೂಹಿ ಸರ್ವಂ ಮುನೇ ತ್ವಂ ಚ ತವ ಕಾರ್ಯಂ ದದಾಮ್ಯಹಂ ॥ ೭ ॥

ದುರ್ವಾಸಾ ಉವಾಚ :—

ಯುಕ್ತಮೇತನ್ಮಹಾರಾಜ ವಕ್ತುಂ ತೇ ಕಾರ್ಯಮೀದೃಶಂ ।
ಗೃಹಾಗತಾಯ ವಿಪ್ರಾಯ ವ್ರತಿನೇಽಸ್ಮದ್ವಿಧಾಯ ಚ ॥ ೮ ॥
ನ ಮೇ ಕಿಂಚಿದ್ಧನೈಃ ಕಾರ್ಯಂ ನ ರಾಜ್ಯೇನ ನೃಪೋತ್ತಮ ।
ಚಾತುರ್ಮಾಸ್ಯವ್ರತೋಽತೋಽಹಂ ಪಾರಣಂ ಕರ್ತುಮುತ್ಸಹೇ ॥ ೯ ॥
ತಸ್ಮಾದ್ಯತ್ಕಿಂಚಿದನ್ನಂ ತೇ ಸಿದ್ಧಮಸ್ತಿ ಗೃಹೇ ನೃಪ ।
ತದ್ದೇಹಿ ಭೋಜನಾರ್ಥಂ ಮೇ ಬುಭುಕ್ಷಾತೀವ ವರ್ಧತೇ ॥ ೧೦ ॥

ಸೂತ ಉವಾಚ :—

ತತಃ ಸ ಪೃಥಿವೀಪಾಲೋ ಯಥಾಸಿದ್ಧಂ ಸುಸಂಸ್ಕೃತಂ ।
ಅನ್ನಂ ಭೋಜ್ಯಕೃತೇ ತಸ್ಮೈ ಪ್ರದದೌ ಸ್ವಯಮೇವ ಹಿ ॥ ೧೧ ॥

---

೬. ಬಳಿಕ ಅವನನ್ನು ವಂದಿಸಿ ಕಾಲುಗಳನ್ನು ತೊಳೆದುಕೊಂಡು ಅರ್ಘ್ಯ ವನ್ನಿತ್ತು ಆನಂದಬಾಷ್ಪವನ್ನು ಸುರಿಸುತ್ತ ಇಂತೆಂದನು.

೭. "ಮುನಿಯೆ! ಇದು ನನ್ನ ರಾಜ್ಯ. ಇವರು ನನ್ನ ಪುತ್ರರು. ಇವರು ನನ್ನ ನಾರಿಯರು. ಇದು ನನ್ನ ಧನವು. ನಿನಗೆ ಯಾವುದರಿಂದ ಏನಾಗಬೇಕು? ತಿಳಿಸು. ಅದನ್ನು ಕೊಡುವೆನು."

೮–೯. ದುರ್ವಾಸನು ಹೇಳುತ್ತಾನೆ:—ಮಹಾರಾಜ! ಇಂತಹ ಮಾತು ಗಳನ್ನು ಹೇಳುವುದು ನಿನಗೆ ಯುಕ್ತವಾದುದು. ಮನೆಗೆ ಬಂದ ನನ್ನಂತಹ ವ್ರತವನ್ನು ಅನುಷ್ಠಾನಮಾಡುವ ಬ್ರಾಹ್ಮಣನಿಗೆ ಧನ ಮತ್ತು ರಾಜ್ಯಗಳಿಂದೇನೂ ಪ್ರಯೋಜನವಿಲ್ಲ. ಚಾತುರ್ಮಾಸ್ಯ ವ್ರತವನ್ನು ಅನುಷ್ಠಾನಮಾಡುತ್ತಿದ್ದ ನಾನು. ಪಾರಣೆಮಾಡಲು ಅಪೇಕ್ಷಿಸುತ್ತಿರುವೆನು.

೧೦. ಆದುದರಿಂದ ನಿನ್ನ ಮನೆಯಲ್ಲಿ ಸಿದ್ಧವಾದ ಏನಾದರೂ ಅನ್ನ ವಿದ್ದರೆ ಅದನ್ನು ಭೋಜನಕ್ಕಾಗಿ ನನಗೆ ಕೊಡು. ಹಸಿವು ಬಹಳವಾಗಿ ಹೆಚ್ಚುತ್ತಿದೆ.

೧೧. ಸೂತನು ಹೇಳುತ್ತಾನೆ:—ಅನಂತರ ಆ ರಾಜನು ತಾನೇ ಆ ಮುನಿಗೆ ಚೆನ್ನಾಗಿ ಪಕ್ವಮಾಡಿ ಸಿದ್ಧವಾಗಿರುವ ಅನ್ನವನ್ನು ಕೊಟ್ಟನು.

ವ್ಯಂಜನಾನಿ ವಿಚಿತ್ರಾಣಿ ಪಕ್ವಾನ್ನಾನಿ ಬಹೂನಿ ಚ ।
ಪೇಯಂ ಚೋಷ್ಯಂಚ ಖಾದ್ಯಂಚ ಲೇಹ್ಯಮನ್ನಮನೇಕಧಾ ।
ತಥಾ ಮಾಂಸಂ ವಿಚಿತ್ರಂಚ ಲವಣಾದ್ಯೈಃ ಸುಸಂಸ್ಕೃತಂ ॥ ೧೨ ॥
ಅಥಾಽಸೌ ಬುಭುಜೇ ವಿಪ್ರಃ ಕ್ಷುತ್ಕ್ಷಾಮಸ್ತ್ವರಯಾನ್ವಿತಃ ।
ಅವಿಂದನ್ನ ರಸಾಸ್ವಾದಂ ಬೃಹದ್ಗ್ರಾಸೈರ್ಮುದಾನ್ವಿತಃ ॥ ೧೩ ॥
ಅಥ ತೃಪ್ತೇನ ಮಾಂಸಸ್ಯ ಜ್ಞಾತಸ್ತೇನ ರಸೋ ದ್ವಿಜಾಃ ।
ತತಃ ಕೋಪಪರೀತಾತ್ಮಾ ತಂ ಶಶಾಪ ಮುನೀಶ್ವರಃ ॥ ೧೪ ॥
ಯಸ್ಮಾನ್ಮಾಂಸಂ ತ್ವಯಾ ದತ್ತ್ವಾ ವ್ರತಭಂಗಃ ಕೃತೋ ಮಮ ।
ತಸ್ಮಾತ್ತ್ವಮಾಮಿಷಾಹಾರೋ ರೌದ್ರೋ ವ್ಯಾಘ್ರೋ ಭವಿಷ್ಯಸಿ ॥ ೧೫ ॥
ತತಃ ಸ ಭೂಪತಿರ್ಭೀತಃ ಪ್ರಣಮ್ಯ ಚ ಮುನೀಶ್ವರಂ ।
ಪ್ರೋವಾಚ ದೀನವದನೋ ವೇಪಮಾನಃ ಸುದುಃಖಿತಃ ॥ ೧೬ ॥
ತವ ಕ್ಷುತ್ಕ್ಷಾಮಕಂಠಸ್ಯ ಮಯಾ ಭಕ್ತಿಃ ಕೃತಾ ಮುನೇ ।
ಯಥಾ ಸಿದ್ಧೇನ ಭೋಜ್ಯೇನ ತತ್ಕಸ್ಮಾಚ್ಛಪ್ತುಮುದ್ಯತಃ ॥ ೧೭ ॥
ತಸ್ಮಾತ್ಕುರು ಪ್ರಸಾದಂ ಮೇ ಭಕ್ತಸ್ಯ ವಿನತಸ್ಯ ಚ ।
ಶಾಪಸ್ಯಾಽನುಗ್ರಹೇಣೈವ ಶೀಘ್ರಂ ಬ್ರಾಹ್ಮಣಸತ್ತಮ ॥ ೧೮ ॥

---

೧೨–೧೩. ಬಳಿಕ ಹಸಿವಿನಿಂದ ಪೀಡಿತನಾದ ಆ ಮುನಿಯು ರುಚಿಯನ್ನರಿಯದೆ ದೊಡ್ಡ ದೊಡ್ಡ ಕವಳಗಳಿಂದ ನಾನಾ ವಿಧ ವ್ಯಂಜನಗಳನ್ನೂ, ಬಹಳವಾದ ಪಕ್ವಾನ್ನಗಳನ್ನೂ, ಪೇಯ, ಚೋಷ್ಯ, ಖಾದ್ಯ, ಲೇಹ್ಯ ಇವುಗಳನ್ನೂ, ಉಪ್ಪು ಮೊದಲಾದುವುಗಳಿಂದ ಸಂಸ್ಕಾರಗೊಂಡ ಮಾಂಸವನ್ನೂ ಸಂತೋಷದಿಂದ ಭುಂಜಿಸಿದನು.

೧೪. ತೃಪ್ತನಾದ ತರುವಾಯ ಆ ಮುನಿಯು ಮಾಂಸದ ರಸವನ್ನರಿತನು. ಅದರಿಂದ ಕುಪಿತನಾಗಿ ಆ ರಾಜನನ್ನು ಹೀಗೆ ಶಪಿಸಿದನು.

೧೫. "ನೀನು ನನಗೆ ಮಾಂಸವನ್ನಿತ್ತು ವ್ರತವನ್ನು ಕೆಡಿಸಿದಕಾರಣ ಮಾಂಸವನ್ನು ತಿನ್ನುವ ಭಯಂಕರ ವ್ಯಾಘ್ರವಾಗುವೆ."

೧೬. ತರುವಾಯ ಭಯಗೊಂಡ ಆ ರಾಜನು ಮುನಿವರ್ಯನನ್ನು ವಂದಿಸಿ ದೀನಮುಖನಾಗಿ ನಡುಗುತ್ತ ದುಃಖದಿಂದ ಇಂತೆಂದನು.

೧೭. "ಮುನಿಯೆ! ಹಸಿವಿನಿಂದ ಕ್ಷೀಣಕಂಠನಾದ ನಿನಗೆ ನಾನು ಭಕ್ತಿಯಿಂದ ಸಿದ್ಧಾನ್ನವನ್ನಿತ್ತಿರುವೆನು. ಆದುದರಿಂದ ನೀನು ಏಕೆ ಶಪಿಸಲುದ್ಯುಕ್ತನಾಗಿರುವೆ?

೧೮. ಬ್ರಾಹ್ಮಣೋತ್ತಮನೆ! ಆದುದರಿಂದ ಭಕ್ತನೂ, ವಿನತನೂ ಆದ ನನಗೆ ಬೇಗನೆ ಅನುಗ್ರಹವನ್ನು ಮಾಡು.

ದುರ್ವಾಸಾ ಉವಾಚ :—

ಮುಕ್ತ್ವಾ ಶ್ರಾದ್ಧಂ ತಥಾ ಯಜ್ಞಂ ನ ಮಾಂಸಂ ಭಕ್ಷಯೇದ್ದ್ವಿಜಃ ।
ವಿಶೇಷೇಣ ವ್ರತಸ್ಯಾಂತೇ ಚಾತುರ್ಮಾಸ್ಯೋದ್ಭವಸ್ಯಚ ॥ ೧೯ ॥
ಉಪವಾಸಪರೋ ಭೂತ್ವಾ ಮಾಂಸಮಶ್ನಾತಿ ಯೋ ದ್ವಿಜಃ ।
ವೃಥಾ ಮಾಂಸಾದ್ವೃಥಾ ತಸ್ಯ ತದ್ವ್ರತಂ ಜಾಯತೇ ಧ್ರುವಂ ॥ ೨೦ ॥
ತಸ್ಮಾದ್ವ್ರತಂ ಪ್ರಣಷ್ಟಂ ಮೇ ಚಾತುರ್ಮಾಸ್ಯಸಮುದ್ಭವಂ ।
ತೇನ ಶಪ್ತೋಽಸಿ ರಾಜೇಂದ್ರ ಮಯಾ ಕೋಪೇನ ಸಾಂಪ್ರತಂ ॥ ೨೧ ॥

ರಾಜೋವಾಚ :—

ತಥಾಽಪಿ ಕುರು ಮೇ ವಿಪ್ರ ಶಾಪಸ್ಯಾಂತಂ ಯಥೇಪ್ಸಿತಂ ।
ಭಕ್ತಿಯುಕ್ತಸ್ಯ ದೀನಸ್ಯ ನಿರ್ದೋಷಸ್ಯ ವಿಶೇಷತಃ ॥ ೨೨ ॥

ದುರ್ವಾಸಾ ಉವಾಚ :—

ಯದಾ ತೇ ನಂದಿನೀ ಧೇನುರ್ಲಿಂಗಂ ಬಾಣಾರ್ಚಿತಂ ಪುರಾ ।
ದರ್ಶಯಿಷ್ಯತಿ ತೇ ಮುಕ್ತಿಸ್ತದಾ ತೂರ್ಣಂ ಭವಿಷ್ಯತಿ ॥ ೨೩ ॥
ಏವಮುಕ್ತ್ವಾ ಸ ವಿಪ್ರೇಂದ್ರೋ ಜಗಾಮ ನಿಜಮಾಶ್ರಮಂ ।
ಬಭೂವ ಸೋಽಪಿ ಭೂಪಾಲೋ ವ್ಯಾಘ್ರೋ ರೌದ್ರತಮಾಕೃತಿಃ ॥ ೨೪ ॥

---

೧೯. ದುರ್ವಾಸನು ಹೇಳುತ್ತಾನೆ:—ಬ್ರಾಹ್ಮಣನು ಶ್ರಾದ್ಧ ಯಜ್ಞಗಳನ್ನು ಬಿಟ್ಟು ಇತರ ವೇಳೆಯಲ್ಲಿ ಮಾಂಸವನ್ನು ಭಕ್ಷಿಸಬಾರದು. ವಿಶೇಷವಾಗಿ ಚಾತುರ್ಮಾಸ್ಯವ್ರತದ ಅಂತ್ಯದಲ್ಲಿ ಭಕ್ಷಿಸಲೇಕೂಡದು.

೨೦. ಉಪವಾಸಮಾಡಿ ಮಾಂಸವನ್ನು ತಿನ್ನುವ ದ್ವಿಜನ ವ್ರತವು ಮಾಂಸ ಭಕ್ಷಣೆಯಿಂದ ನಿಷ್ಫಲವಾಗುವುದು.

೨೧. ಅರಸ! ಆದುದರಿಂದ ನನ್ನ ಚಾತುರ್ಮಾಸ್ಯವ್ರತವು ನಷ್ಟವಾಯಿತು. ಅದರಿಂದ ಕುಪಿತನಾದ ನಾನು ಈಗ ನಿನ್ನನ್ನು ಶಪಿಸಿದೆನು.

೨೨. ರಾಜನು ಹೇಳುತ್ತಾನೆ:—ಬ್ರಾಹ್ಮಣನೆ! ಆದರೂ ಭಕ್ತನೂ, ದೀನನೂ, ನಿರ್ದೋಷಿಯೂ ಆದ ನನ್ನ ಶಾಪವು ಅವಸಾನಗೊಳ್ಳುವಂತೆ ಮಾಡು.

೨೩. ದುರ್ವಾಸನು ಹೇಳುತ್ತಾನೆ:—ನಂದಿನೀಧೇನುವು ಹಿಂದೆ ಬಾಣಾಸುರನು ಪೂಜಿಸಿದ ಶಿವಲಿಂಗವನ್ನು ತೋರಿಸಿದಾಗ ನಿನಗೆ ಬೇಗನೆ ಶಾಪಮೋಕ್ಷವಾಗುವುದು.

೨೪. ಆ ಬ್ರಾಹ್ಮಣೋತ್ತಮನು ಹೀಗೆ ಹೇಳಿ ತನ್ನ ಆಶ್ರಮಕ್ಕೆ ತೆರಳಿದನು. ಆ ದೊರೆಯೂ ಭಯಂಕರಾಕೃತಿಯುಳ್ಳ ವ್ಯಾಘ್ರವಾದನು.

ನಷ್ಟಸ್ಮೃತಿಸ್ತತಸ್ತೂರ್ಣಂ ದೃಷ್ಟ್ವಾ ಜಂತೂನ್ ಪುರಃ ಸ್ಥಿತಾನ್ ।
ಜಘಾನೋಚ್ಚಾಟಿತೋಽನ್ಯೈಶ್ಚ ಪ್ರವಿವೇಶ ಮಹಾವನಂ ॥ ೨೫ ॥
ಅಥ ತೇ ಮಂತ್ರಿಣಸ್ತಸ್ಯ ಶಾಪಸ್ಯಾಂತಂ ಮಹೀಪತೇಃ ।
ವಾಂಛಂತಸ್ತಸ್ಯ ತದ್ರಾಜ್ಯಂ ಚಕ್ರುರೇವ ಸುರಕ್ಷಿತಂ ॥ ೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಲಶನೃಪತೇರ್ದುರ್ವಾಸಸಃ ಶಾಪೇನ ವ್ಯಾಘ್ರತ್ವಪ್ರಾಪ್ತಿ ವರ್ಣನಂ"
ನಾಮೈಕೋನಪಂಚಾಶತ್ತಮೋಽಧ್ಯಾಯಃ

---

೨೫. ಅವನು ಕೂಡಲೆ ಸ್ಮೃತಿರಹಿತನಾಗಿ ಮುಂದಿರುವ ಪ್ರಾಣಿಗಳನ್ನು ನೋಡಿ ಅವುಗಳನ್ನು ಕೊಂದನು. ಬಳಿಕ ಜನರು ಓಡಿಸಲು ದೊಡ್ಡ ಕಾಡನ್ನು ಪ್ರವೇಶಿಸಿದನು.

೨೬. ಬಳಿಕ ಆ ರಾಜನ ಮಂತ್ರಿಗಳು ತಮ್ಮ ದೊರೆಯ ಶಾಪಾವಸಾನವನ್ನು ಅಪೇಕ್ಷಿಸುತ್ತ ರಾಜ್ಯವನ್ನು ಚೆನ್ನಾಗಿ ಕಾಪಾಡುತ್ತಿದ್ದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಲಶನೃಪತಿವ್ಯಾಘ್ರತ್ವಪ್ರಾಪ್ತಿವರ್ಣನ"ವೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಾಶತ್ತಮೋಽಧ್ಯಾಯಃ

### ಗೋವ್ಯಾಘ್ರಸಂವಾದವರ್ಣನಂ

ಏವಂ ತಸ್ಯ ನರೇಂದ್ರಸ್ಯ ವ್ಯಾಘ್ರರೂಪಸ್ಯ ಕಾನನೇ ।
ಜಗಾಮ ಸುಮಹಾನ್ಕಾಲೋ ನಿಘ್ನತೋ ವಿವಿಧಾನ್ದ್ವಿಜ ॥ ೧ ॥
ಕಸ್ಯಚಿತ್ತ್ವಥ ಕಾಲಸ್ಯ ತಸ್ಮಿನ್ದೇಶೇ ದ್ವಿಜೋತ್ತಮಾಃ ।
ಆಯಾತಂ ಗೋಕುಲಂ ರಮ್ಯಂ ಗೋಪಗೋಪೀ ಸಮಾಕುಲಂ ॥ ೨ ॥
ತತ್ರಾಸ್ತಿ ನಂದಿನೀ ನಾಮ ಧೇನುಃ ಪೀನಪಯೋಧರಾ ।
ವಿಸ್ತೀರ್ಣಜಘನಾಭೋಗಾ ಹಂಸವರ್ಣಾ ಘಟಸ್ರವಾ ॥ ೩ ॥
ಅಥ ಸಾ ನಿಜಯೂಥಸ್ಯ ಸದಾಗ್ರೇ ತೃಣವಾಂಛಯಾ ।
ಭ್ರಮಮಾಣಾ ನಿಕುಂಜಾಂತೇ ಲಿಂಗಂ ದೇವಸ್ಯ ಶೂಲಿನಃ ॥ ೪ ॥
ಅಪಶ್ಯತ್ತೇಜಸಾ ಯುಕ್ತಂ ಸ್ವಯಮೇವ ವ್ಯವಸ್ಥಿತಂ ।
ದ್ವಾದಶಾರ್ಕಪ್ರತೀಕಾಶಂ ಚಿತ್ತಾಹ್ಲಾದಕರಂ ಪರಂ ॥ ೫ ॥
ತತಸ್ತಸ್ಯೋಪರಿ ಸ್ಥಿತ್ವಾ ಸುಸ್ರಾವ ಸುಮಹತ್ಪಯಃ ।
ಶ್ರದ್ಧಯಾ ಪರಯಾ ಯುಕ್ತಾ ತಸ್ಯ ಸ್ನಾನಕೃತೇ ದ್ವಿಜಾಃ ॥ ೬ ॥

---

### ಕನ್ನಡದ ಅನುವಾದ

#### ಗೋವ್ಯಾಘ್ರಸಂವಾದವರ್ಣನ

೧. ಹೀಗೆ ಕಾಡಿನಲ್ಲಿ ವ್ಯಾಘ್ರರೂಪನಾದ ರಾಜನು ನಾನಾವಿಧ ಜಂತುಗಳನ್ನು ಕೊಲ್ಲುತ್ತಿರಲು ಬಹುಕಾಲ ಕಳೆಯಿತು.

೨. ಒಂದಾನೊಂದು ಕಾಲದಲ್ಲಿ ಅಲ್ಲಿಗೆ ಮನೋಹರವೂ, ಹಸು ಮತ್ತು ಎತ್ತುಗಳಿಂದ ತುಂಬಿರುವುದೂ ಆದ ಗೋವುಗಳ ಗುಂಪು ಬಂದಿತು.

೩. ಆ ಗುಂಪಿನಲ್ಲಿ ಪುಷ್ಟವಾದ ಕೆಚ್ಚಲುಳ್ಳುದೂ, ವಿಶಾಲವಾದ ಜಘನವುಳ್ಳುದೂ, ಹಂಸದಂತೆ ಶ್ವೇತವರ್ಣವೂ ಆದ ನಂದಿನಿಯೆಂಬ ಹಸುವಿದ್ದಿತು.

೪–೫. ಅದು ಯಾವಾಗಲೂ ಹುಲ್ಲಿನ ಆಸೆಯಿಂದ ತನ್ನ ಹಿಂಡಿನ ಮುಂದೆ ಸಂಚರಿಸುತ್ತ ಪೊದೆಯೊಳಹೊಕ್ಕು ತೇಜಸ್ಸುಳ್ಳುದೂ, ತಾನೇ ಉದ್ಭವಿಸಿರುವುದೂ, ದ್ವಾದಶಾದಿತ್ಯರಿಗೆ ಸಮಾನವೂ, ಅತ್ಯಂತವಾಗಿ ಮನಸ್ಸನ್ನು ಆನಂದಗೊಳಿಸುವುದೂ ಆದ ಮಹೇಶ್ವರನ ಲಿಂಗವನ್ನು ನೋಡಿತು.

೬. ದ್ವಿಜರೆ! ತರುವಾಯ ಆ ಹಸುವು ಅತಿಶ್ರದ್ಧೆಯಿಂದ ಆ ಲಿಂಗವನ್ನು ಅಭಿಷೇಕ ಮಾಡುವುದಕ್ಕಾಗಿ ಅದರಮೇಲೆ ಬಹುವಾಗಿ ಹಾಲನ್ನು ಸುರಿಸಿತ್ತು.

ಏವಂ ತಾಂ ಸ್ನಪನಂ ತಸ್ಯ ಸದಾ ಲಿಂಗಸ್ಯ ಕುರ್ವತೀಂ ।
ಸ ಜಾನಾತಿ ಜನಃ ಕಶ್ಚಿದ್ವನೇ ವೃಕ್ಷಸಮಾಕುಲೇ ॥ ೭ ॥
ಅನ್ಯಸ್ಮಿನ್ದಿವಸೇ ತತ್ರ ಸ್ಥಾನೇ ವ್ಯಾಘ್ರಃ ಸಮಾಗತಃ ।
ತೀಕ್ಷ್ಣದಂಷ್ಟ್ರೋ ಮಹಾಕಾಯಃ ಸರ್ವಜಂತುಭಯಾವಹಃ ॥ ೮ ॥
ಅಥ ಸಾ ತತ್ರ ಆಯಾತಾ ಪತಿತಾ ದೃಷ್ಟಿಗೋಚರೇ ।
ನಂದಿನೀ ದ್ವೀಪಿನಸ್ತಸ್ಯ ದೈವಯೋಗಾದ್ದ್ವಿಜೋತ್ತಮಾಃ ॥ ೯ ॥
ತತಃ ಸಾ ಗೋಕುಲೇ ಬದ್ಧಂ ಸ್ಮೃತ್ವಾ ಸ್ವಂ ಲಘುವತ್ಸಕಂ ।
ಅತೃಣಾದಂ ಪಯೋವೃತ್ತಿಂ ಕರುಣಂ ಪರ್ಯದೇವಯತ್ ॥ ೧೦ ॥
ಅದ್ಯೈಕಾಽಹಂ ಚ ಸಂಪ್ರಾಪ್ತಾ ಕಾನನೇ ಜನವರ್ಜಿತೇ ।
ಪುತ್ರಂ ಬಾಲಂ ಪರಿತ್ಯಜ್ಯ ಗೋಪೈರ್ಗೋಷ್ಠೇ ನಿಯಂತ್ರಿತಂ ॥ ೧೧ ॥
ಯೇನ ಸತ್ಯೇನ ಭಕ್ತ್ಯಾಽದ್ಯ ಸ್ನಪನಾಯಾಽಹಮಾಗತಾ ।
ಶಿವಸ್ಯ ತೇನ ಸತ್ಯೇನ ಭೂಯಾನ್ಮೇ ಸುತಸಂಗಮಃ ॥ ೧೨ ॥
ಏವಂ ಸಾ ಕರುಣಂ ಯಾವನ್ನಂದಿನೀ ವಿಲಪತ್ಯಲಂ ।
ತಾವದ್ವ್ಯಾಘ್ರಃ ಸ್ಮಿತಂ ಕೃತ್ವಾ ಪ್ರೋವಾಚ ಪರುಷಾಕ್ಷರಂ ॥ ೧೩ ॥

---

೭. ಹೀಗೆ ಆ ಲಿಂಗಕ್ಕೆ ಯಾವಾಗಲೂ ಅಭಿಷೇಕ ಮಾಡುತ್ತಿರುವ ಆ ಗೋವನ್ನು ಮರಗಳಿಂದ ತುಂಬಿರುವ ಆ ಕಾಡಿನಲ್ಲಿ ಯಾವನೂ ಅರಿಯಲಿಲ್ಲ.

೮. ಮತ್ತೊಂದು ದಿನ ಅಲ್ಲಿಗೆ ಹರಿತವಾದ ಹಲ್ಲುಳ್ಳದ್ದೂ, ದೊಡ್ಡ ಶರೀರವುಳ್ಳದ್ದೂ, ಸಕಲ ಪ್ರಾಣಿಗಳಿಗೆ ಭಯವನ್ನುಂಟುಮಾಡುವುದೂ ಆದ ಒಂದು ಹುಲಿಯು ಬಂದಿತು.

೯. ದ್ವಿಜವರ್ಯರೆ! ಆಗ ಆ ಹುಲಿಗೆ ದೈವೇಚ್ಛೆಯಿಂದ ಅಲ್ಲಿಗೆ ಬಂದ ನಂದಿನೀಧೇನುವು ಕಾಣಿಸಿತು.

೧೦. ತರುವಾಯ ಆ ಧೇನುವು ಗೋಕುಲದಲ್ಲಿ ಕಟ್ಟಲ್ಪಟ್ಟಿರುವುದೂ, ಹುಲ್ಲನ್ನು ತಿನ್ನದಿರುವುದೂ, ಹಾಲಿನಿಂದ ಜೀವಿಸುವುದೂ ಆದ ಸಣ್ಣ ಕರುವನ್ನು ಸ್ಮರಿಸಿ ದೈನ್ಯದಿಂದ ಕೂಗಿತು.

೧೧. ಈ ದಿನ ನಾನು ಗೋಪಾಲಕರು ಕೊಟ್ಟಿಗೆಯಲ್ಲಿ ಕಟ್ಟಿರುವ ಎಳೆ ಕರುವನ್ನು ತ್ಯಜಿಸಿ ಒಬ್ಬಳೇ ನಿರ್ಜನವಾದ ಈ ಕಾಡಿಗೆ ಬಂದಿರುವೆನು.

೧೨. ನಾನು ಯಾವ ಸತ್ಯ, ಭಕ್ತಿಗಳಿಂದ ಈ ದಿನ ಶಿವನ ಅಭಿಷೇಕಕ್ಕಾಗಿ ಇಲ್ಲಿಗೆ ಬಂದಿರುವೆನೊ; ಆ ಸತ್ಯದಿಂದ ನನಗೆ ಮರಳಿ ಪುತ್ರಸಮಾಗಮವಾಗಲಿ.

೧೩. ಆ ನಂದಿನೀಧೇನುವು ಹೀಗೆ ದೈನ್ಯದಿಂದ ಗೋಳಾಡುತ್ತಿರಲು ಆ ಹುಲಿಯು ನಕ್ಕು ಕಠಿನವಾದ ಮಾತುಗಳಿಂದ ಇಂತೆಂದಿತು.

ವ್ಯಾಘ್ರ ಉವಾಚ :—

ಪ್ರಲಾಪಾನ್ಕಿಂ ಮುಧಾ ಧೇನೋ ಕರೋಷಿ ವಶಗಾ ಮಮ ।
ತಸ್ಮಾದಿಷ್ಟತಮಂ ದೇವಂ ಸ್ಮರ ಸ್ವರ್ಗ ಕೃತೇ ಶುಭೇ ॥ ೧೪ ॥

ಧೇನುರುವಾಚ :—

ನಾಽಹಮಾತ್ಮಕೃತೇ ವ್ಯಾಘ್ರ ವಿಲಪಾಮಿ ಸುದುಃಖಿತಾ ।
ಶಿವಾರ್ಚನಕೃತೇ ಮೃತ್ಯುರ್ಮಮ ಜಾತಃ ಶುಭಾವಹಃ ॥ ೧೫ ॥
ವತ್ಸೋ ಮೇ ಗೋಕುಲೇ ಬದ್ಧಃ ಸ್ಮರಮಾಣೋ ಮಮಾಗಮಂ ।
ಸಂತಿಷ್ಠತೇ ಪಯೋವೃತ್ತಿಃ ಕಥಂ ಸ್ಯಾತ್ಸ ಮಯಾ ವಿನಾ ॥ ೧೬ ॥
ಏತಸ್ಮಾತ್ಕಾರಣಾದ್ವ್ಯಾಘ್ರ ವಿಲಪಾಮಿ ಸುದುಃಖಿತಾ ।
ನ ಚಾತ್ಮಜೀವನಾರ್ಥಾಯ ಸತ್ಯೇನಾತ್ಮಾನಮಾಲಭೇ ॥ ೧೭ ॥
ತಸ್ಮಾನ್ಮುಂಚ ಮಹಾವ್ಯಾಘ್ರ ಮಾಂ ಸದ್ಯಃ ಸುತವತ್ಸಲಾಂ ।
ಸಖೀಜನಸ್ಯ ತಂ ದತ್ವಾ ಸಮಾಗಚ್ಛಾಮಿ ತೇಽಂತಿಕಂ ॥ ೧೮ ॥

ವ್ಯಾಘ್ರ ಉವಾಚ :—

ಕಥಂ ಮೃತ್ಯುಮುಖಂ ಪ್ರಾಪ್ಯ ನಿಷ್ಕ್ರಮ್ಯ ಚ ಕಥಂಚನ ।
ಭೂಯಸ್ತತ್ರೈವ ನಿರ್ಯಾಸಿ ತಸ್ಮಾತ್ತ್ವಾಂ ಭಕ್ಷಯಾಮ್ಯಹಂ ॥ ೧೯ ॥

---

೧೪. ಹುಲಿಯು ಹೇಳುತ್ತದೆ:—ಹಸುವೆ! ನನ್ನ ವಶಳಾಗಿರುವ ನೀನು ಏಕೆ ವ್ಯರ್ಥವಾಗಿ ಗೋಳಾಡುತ್ತಿರುವೆ? ಆದುದರಿಂದ ಶುಭಕರವಾದ ಸ್ವರ್ಗ ಸಾಧನೆಗಾಗಿ ಇಷ್ಟವಾದ ದೇವತೆಯನ್ನು ಸ್ಮರಿಸು.

೧೫. ಧೇನುವು ಹೇಳುತ್ತದೆ:—ಹುಲಿಯೆ! ನಾನು ನನಗಾಗಿ ಗೋಳಾಡುವುದಿಲ್ಲ. ಶಿವಾರ್ಚನೆಯಿಂದ ನನಗೆ ಮಂಗಳಕರವಾದ ಮೃತ್ಯುವು ಒದಗಿರುವುದು.

೧೬. ಗೋಕುಲದಲ್ಲಿ ಕಟ್ಟಿರುವ ಹಾಲಿನಿಂದ ಜೀವಿಸುವ ನನ್ನ ಕರುವು ನನ್ನ ಆಗಮನವನ್ನು ಸ್ಮರಿಸುತ್ತ ನನ್ನನ್ನು ಅಗಲಿ ಹೇಗೆ ಇರುವುದು?

೧೭. ಹುಲಿಯೆ! ಇದಕ್ಕಾಗಿ ನಾನು ದುಃಖದಿಂದ ಗೋಳಾಡುತ್ತಿರುವೆನು. ನನ್ನ ಜೀವನಕ್ಕಾಗಿ ಅಲ್ಲ. ನನ್ನಾಣೆ ನಿಜ.

೧೮. ಹುಲಿಯೆ! ಆದುದರಿಂದ ಸುತಪ್ರಿಯನಾದ ನನ್ನನ್ನು ಕೂಡಲೆ ಬಿಡು. ಆ ಸುತನನ್ನು ಸಖಿಯರಿಗಿತ್ತು ಮತ್ತೆ ನಿನ್ನ ಬಳಿಗೆ ಬರುವೆನು.

೧೯. ವ್ಯಾಘ್ರವು ಹೇಳುತ್ತದೆ:—ನೀನು ಮೃತ್ಯುವಿನ ಬಾಯಿಯನ್ನು ಹೊಂದಿ ಕಷ್ಟದಿಂದ ಅದನ್ನು ಬಿಡಿಸಿಕೊಂಡು ಮರಳಿ ಹೇಗೆ ಆ ಮೃತ್ಯುವಿನ ಬಾಯಿಯನ್ನು ಸೇರುವೆ? ಆದುದರಿಂದ ನಿನ್ನನ್ನು ನಾನು ಭಕ್ಷಿಸುವೆನು.

ನಂದಿನ್ಯುವಾಚ :—

ಶಪಥೈರಾಗಮಿಷ್ಯಾಮಿ ಯೈಃ ಪುನರ್ವ್ಯಾಘ್ರ ತೇಽಂತಿಕಂ ।
ತಾನಾಕರ್ಣಯ ಮೇ ವಕ್ತ್ರಾತ್ತತೋ ಯುಕ್ತಂ ಸಮಾಚರ ॥ ೨೦ ॥
ಯತ್ಪಾಪಂ ಬ್ರಹ್ಮಹತ್ಯಾಯಾಂ ಮಾತಾಪಿತ್ರೋಶ್ಚ ವಂಚನೇ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೧ ॥
ವಿವಸ್ತ್ರಸ್ನಾನಸಕ್ತಾನಾಂ ದಿವಾಮೈಥುನಗಾಮಿನಾಂ ।
ಯತ್ಪಾಪಂ ತೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೨ ॥
ರಜಸ್ವಲಾನುಸಕ್ತಾನಾಂ ಯತ್ಪಾಪಂ ನಗ್ನಶಾಯಿನಾಂ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೩ ॥
ವಿಶ್ವಾಸಘಾತುಕಾನಾಂ ಚ ಕೃತಘ್ನಾನಾಂ ಚ ಯದ್ಭವೇತ್ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೪ ॥
ಗೋಕನ್ಯಾಬ್ರಾಹ್ಮಣಾನಾಂ ಚ ದೂಷಕಾನಾಂ ಚ ಯದ್ಭವೇತ್ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೫ ॥
ವೃಥಾಪಾಕಪ್ರಕರ್ತೄಣಾಂ ವೃಥಾ ಮಾಂಸಾಶಿನಾಂ ಚ ಯತ್ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೬ ॥
ವ್ರತಭಂಗಪ್ರಕರ್ತೄಣಾಮನೃತೌ ಗಾಮಿನಾಂ ಚ ಯತ್ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೭ ॥

---

೨೦ ನಂದಿನಿಯು ಹೇಳುತ್ತಳೆ:—ಹುಲಿಯೆ! ಯಾವ ಶಪಥಗಳಿಂದ ನಾನು ನಿನ್ನೆಡೆಗೆ ಬರುವೆನೆಂಬುದನ್ನು ನನ್ನ ಬಾಯಿಯಿಂದ ಕೇಳು. ಅನಂತರ ಯುಕ್ತವಾದುದನ್ನಾಚರಿಸು.

೨೧. ನಾನು ಮರಳಿ ಬಾರದಿದ್ದರೆ ಬ್ರಹ್ಮಹತ್ಯೆಯಿಂದಲೂ, ತಾಯಿತಂದೆಗಳ ವಂಚನೆಯಿಂದಲೂ ಉಂಟಾಗುವ ಪಾಪದಿಂದ ಲಿಪ್ತಳಾಗುವೆನು.

೨೨. ನಾನು ಮರಳಿ ಬಾರದಿದ್ದರೆ ಬತ್ತಲೆಯಾಗಿ ಸ್ನಾನಮಾಡುವವರಿಗೂ, ಹಗಲುಮೈಥುನದಲ್ಲಿ ಆಸಕ್ತರಾದವರಿಗೂ ಉಂಟಾಗುವ ಪಾಪದಿಂದ ಲಿಪ್ತಳಾಗುವೆನು.

೨೩—೨೮. ರಜಸ್ವಲಾಸಂಗಮಾಡಿದವರಿಗೂ, ಬತ್ತಲೆಯಾಗಿ ಮಲಗುವವರಿಗೂ, ವಿಶ್ವಾಸಘಾತುಕರಿಗೂ, ಕೃತಘ್ನರಿಗೂ, ಗೋವು, ಕನ್ಯೆ, ಬ್ರಾಹ್ಮಣರು ಇವರನ್ನು ದೂಷಿಸುವವರಿಗೂ, ವ್ಯರ್ಥವಾಗಿ ಅಡಿಗೆ ಮಾಡುವವರಿಗೂ, ವ್ಯರ್ಥವಾಗಿ ಮಾಂಸವನ್ನು ಭುಜಿಸುವವರಿಗೂ, ವ್ರತಭಂಗವನ್ನುಂಟುಮಾಡಿದವರಿಗೂ, ಋತುಭಿನ್ನಕಾಲದಲ್ಲಿ ಸ್ತ್ರೀಗಮನ ಮಾಡಿದವರಿಗೂ, ಚಾಡಿ ಹೇಳುವವರಿಗೂ,

ಪೈಶುನ್ಯಸೂಚಕಾನಾಂ ಚ ಯತ್ಪಾಪಂ ಶಸ್ತ್ರಕರ್ಮಣಾಂ ।
ತೇನ ಪಾಪೇನ ಲಿಪ್ಯೇಽಹಂ ನಾಗಚ್ಛಾಮಿ ಪುನರ್ಯದಿ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗೋವ್ಯಾಘ್ರಸಂವಾದವರ್ಣನಂ" ನಾಮ
ಪಂಚಾಶತ್ತಮೋಽಧ್ಯಾಯಃ

---

ಶಸ್ತ್ರಕಾರ್ಯವನ್ನು ಮಾಡುವವರಿಗೂ ಉಂಟಾಗುವ ಪಾಪದಿಂದ ಲಿಪ್ತ ಳಾಗುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗೋವ್ಯಾಘ್ರಸಂವಾದವರ್ಣನ"ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಪಂಚಾಶತ್ತಮೋಽಧ್ಯಾಯಃ

### ಕಲಶೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥ ತಾಂಚ್ಛಪಥಾಂಚ್ಛ್ರುತ್ವಾ ಸ ವ್ಯಾಘ್ರೋ ವಿಸ್ಮಯಾನ್ವಿತಃ ।
ಸತ್ಯಂ ಮತ್ವಾ ಪುನಃ ಪ್ರಾಹ ನಂದಿನೀಂ ಪುತ್ರವತ್ಸಲಾಂ ॥ ೧ ॥
ಯದ್ಯೇವಂ ತ್ವದ್ಗೃಹಂ ಗಚ್ಛ ವೀಕ್ಷಯಸ್ವ ನಿಜಾತ್ಮಜಂ ।
ಸಖೀನಾಮರ್ಪಯಿತ್ವಾಽಥ ಭೂಯ ಆಗಮನಂ ಕುರು ॥ ೨ ॥

ಸೂತ ಉವಾಚ :—

ಇತಿ ವ್ಯಾಘ್ರವಚಃ ಶ್ರುತ್ವಾ ಸುಶೀಲಾ ನಂದಿನೀ ತದಾ ।
ಗತಾಲಯಂ ಸಮುದ್ದಿಶ್ಯ ಯತ್ರ ಬಾಲಃ ಸುತಃ ಸ್ಥಿತಃ ॥ ೩ ॥
ಅಥಾಽಕಾಲಾಗತಾಂ ದೃಷ್ಟ್ವಾ ಮಾತರಂ ತ್ರಸ್ತಚೇತಸಂ ।
ರಂಭಮಾಣಾಂ ಸಮಾಲೋಕ್ಯ ವತ್ಸಃ ಪ್ರೋವಾಚ ವಿಸ್ಮಯಾತ್ ॥ ೪ ॥
ಕಸ್ಮಾತ್ಪ್ರಾಪ್ತಾಽಸ್ಯಕಾಲೇ ತು ಕಸ್ಮಾದುದ್ಭ್ರಾಂತಮಾನಸಾ ।
ಬಾಷ್ಪಕ್ಲಿನ್ನಮುಖೀ ಕಸ್ಮಾದ್ವದಮಾತದ್ರ್ರುತಂ ಮಮ । ॥ ೫ ॥

---

## ಕನ್ನಡದ ಅನುವಾದ

### ಕಲಶೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ತರುವಾಯ ಆ ಹುಲಿಯು ಆ ಗೋವಿನ ಶಪಥಗಳನ್ನು ಕೇಳಿ ಆಶ್ಚರ್ಯಗೊಂಡು ಅದು ಮರಳಿ ಬರುವುದು ನಿಜವೆಂದರಿತು ಕರುವಿನಲ್ಲಿ ಪ್ರೀತಿಯುಳ್ಳ ಆ ನಂದಿನಿಯನ್ನು ಕುರಿತು ಇಂತೆಂದಿತು.

೨. ಎಲೈ ಹಸುವೆ! ಹೀಗಾದರೆ ನೀನು ಮನೆಗೆ ಹೋಗಿ ನಿನ್ನ ಕರುವನ್ನು ನೋಡಿ ಅದನ್ನು ಸಖಿಯರಿಗೆ ಒಪ್ಪಿಸಿ ಮರಳಿ ಬಾ.

೩. ಸೂತನು ಹೇಳುತ್ತಾನೆ:—ಒಳ್ಳೆಯ ನಡತೆಯುಳ್ಳ ಆ ನಂದಿನಿಯು ಈ ರೀತಿಯಾದ ಹುಲಿಯ ಮಾತನ್ನು ಕೇಳಿ ಸುತನಿರುವ ಮನೆಗೆ ಹೋಯಿತು.

೪. ಬಳಿಕ ಕರುವು ಅಕಾಲದಲ್ಲಿ ಬಂದಿರುವುದೂ, ಭಯಗೊಂಡ ಮನಸ್ಸುಳ್ಳುದೂ, ಕೂಗುತ್ತಿರುವುದೂ ಆದ ತಾಯಿಯನ್ನು ಕಂಡು ಆಶ್ಚರ್ಯದಿಂದ ಇಂತೆಂದಿತು.

೫. "ಅಮ್ಮಾ! ನೀನು ಏಕೆ ಈ ಸಮಯದಲ್ಲಿ ಬಂದೆ? ಏಕೆ ಭ್ರಾಂತಿಗೊಂಡ ಮನಸ್ಸುಳ್ಳವಳಾಗಿರುವೆ? ಏಕೆ ಕಣ್ಣೀರನ್ನು ಸುರಿಸುತ್ತಿರುವೆ? ಬೇಗನೆ ಹೇಳು."

ನಂದಿನ್ಯುವಾಚ :—

ಯದಿ ಪೃಚ್ಛಸಿ ಮಾಂ ಪುತ್ರ ಸ್ತನಪಾನಂ ಸಮಾಚರ ।
ಯೇನ ತೃಪ್ತಸ್ಯ ತೇ ಸರ್ವಂ ವೃತ್ತಾಂತಂ ತದ್ವದಾಮ್ಯಹಂ ॥ ೬ ॥

ಸೂತ ಉವಾಚ :—

ಸೋಽಪಿ ತದ್ವಚನಂ ಶ್ರುತ್ವಾ ಪೀತ್ವಾ ಕ್ಷೀರಂ ಯಥೋಚಿತಂ ।
ಆಘ್ರಾತಶ್ಚ ತಯಾ ಮೂರ್ಧ್ನಿ ತತಃ ಪ್ರೋವಾಚ ಸತ್ವರಂ ॥ ೭ ॥
ಸರ್ವಂ ಕೀರ್ತಯ ವೃತ್ತಾಂತಮದ್ಯಾಽರಣ್ಯಸಮುದ್ಭವಂ ।
ಯೇನ ಮೇ ಜಾಯತೇ ಸ್ವಾಸ್ಥ್ಯಂ ಶ್ರುತ್ವಾ ಮಾತಸ್ತವಾಸ್ಯತಃ ॥ ೮ ॥

ನಂದಿನ್ಯುವಾಚ :—

ಅಹಂ ಗತಾ ಮಹಾರಣ್ಯೇ ಹ್ಯದ್ಯ ಪುತ್ರ ಯಥೇಚ್ಛಯಾ ।
ವ್ಯಾಘ್ರೇಣಾಸಾದಿತಾ ತತ್ರ ಭ್ರಮಮಾಣಾ ಇತಸ್ತತಃ ॥ ೯ ॥
ಸ ಮಯಾ ಪ್ರಾರ್ಥಿತಃ ಪುತ್ರ ಭಕ್ಷಮಾಣೋ ನಖಾಯುಧಃ ।
ಶಪಥೈರಾಗಮಿಷ್ಯಾಮಿ ಗೋಕುಲೇ ವೀಕ್ಷ್ಯ ಚಾತ್ಮಜಂ ॥ ೧೦ ॥
ಸಾಽಹಂ ತೇನ ವಿನಿರ್ಮುಕ್ತಾ ಶಪಥೈರ್ಬಹುಭಿಃ ಕೃತೈಃ ।
ಭೂಯಸ್ತತ್ರೈವ ಯಾಸ್ಯಾಮಿ ಹೃಷ್ಟಃ ಸಂಭಾಷಿತೋ ಭವಾನ್ ॥ ೧೧ ॥

---

೬. ನಂದಿನಿಯು ಹೇಳುತ್ತದೆ :—ಮಗು ! ನೀನು ನನ್ನನ್ನು ಕೇಳುವುದಾದರೆ ನನ್ನ ಸ್ತನ್ಯವನ್ನು ಕುಡಿ. ಅದರಿಂದ ತೃಪ್ತಿಗೊಂಡ ನಿನಗೆ ಎಲ್ಲ ಸಮಾಚಾರವನ್ನೂ ಹೇಳುವೆನು.

೭. ಸೂತನು ಹೇಳುತ್ತಾನೆ:—ಆ ಕರುವು ಆ ಮಾತನ್ನು ಕೇಳಿ ಹಾಗೆಯೇ ಸ್ತನ್ಯವನ್ನು ಕುಡಿಯಲು, ನಂದಿನಿಯು ಅದರ ಮಸ್ತಕವನ್ನು ಆಘ್ರಾಣಿಸಿತು. ಕೂಡಲೇ ಕರುವು ತಾಯಿಯನ್ನು ಕುರಿತು ಹೀಗೆಂದಿತು.

೮. "ಅಮ್ಮ! ನೀನು ಈಗ ಕಾಡಿನ ಸಮಾಚಾರವನ್ನೆಲ್ಲ ಹೇಳು. ನಿನ್ನ ಬಾಯಿಯಿಂದ ಅದನ್ನು ಕೇಳಿದರೆ ನನ್ನ ಮನಸ್ಸಿಗೆ ಸುಖವುಂಟಾಗುವುದು."

೯. ನಂದಿನಿಯು ಹೇಳುತ್ತದೆ :—ಮಗು ! ನಾನು ಈ ದಿನ ಸ್ವೇಚ್ಛೆಯಾಗಿ ಕಾಡಿಗೆ ಹೋಗಿ ಸಂಚರಿಸುತ್ತಿರಲು ಒಂದು ಹುಲಿಯು ನನ್ನನ್ನು ಹಿಡಿದು ಕೊಂಡಿತು.

೧೦. ನಾನು ತಿನ್ನಬಯಸುತ್ತಿರುವ ಆ ಹುಲಿಯನ್ನು ಕುರಿತು ಆಣೆಯಿಟ್ಟು ಗೋಕುಲದಲ್ಲಿರುವ ಕರುವನ್ನು ನೋಡಿಕೊಂಡು ಬರುವೆನೆಂದು ಬೇಡಿಕೊಂಡೆನು.

೧೧. ನನ್ನ ಅನೇಕ ಆಣೆಗಳಿಂದ ಅದು ನನ್ನನ್ನು ಬಿಟ್ಟಿತು. ನಾನು ನಿನ್ನನ್ನು ನೋಡಿ ಮಾತನಾಡಿ ಮರಳಿ ಅಲ್ಲಿಗೇ ಹೋಗುವೆನು.

ವತ್ಸ ಉವಾಚ :—

ಅಹಂ ತತ್ರೈವ ಯಾಸ್ಯಾಮಿ ಯತ್ರ ತ್ವಂ ಹಿ ಪ್ರಗಚ್ಛಸಿ ।
ಶ್ಲಾಘ್ಯಂ ಹಿ ಮರಣಂ ಸಮ್ಯಗ್ಜ್ಮಾತುರಗ್ರೇ ಮಮಾಽಧುನಾ ॥ ೧೨ ॥
ಏಕಾಕಿನಾಽಪಿ ಮರ್ತವ್ಯಂ ತ್ವಯಾ ಹೀನೇನ ವೈ ಮಯಾ ।
ವಿನಾಽಪಿ ಕ್ಷೀರಪಾನೇನ ಸ್ವಲ್ಪೇನ ಸಮಯೇನ ತು ॥ ೧೩ ॥
ಯದಿ ಮಾತಸ್ತ್ವಯಾ ಸಾರ್ಧಂ ವ್ಯಾಘ್ರೋ ಮಾಂ ಸೂದಯಿಷ್ಯತಿ ।
ಯಾ ಗತಿರ್ಮಾತೃಭಕ್ತಾನಾಂ ಸಾ ಮೇ ನೂನಂ ಭವಿಷ್ಯತಿ ॥ ೧೪ ॥
ಅಥವಾ ಯೇ ತ್ವಯಾ ತಸ್ಯ ವಿಹಿತಾಃ ಶಪಥಾಃ ಶುಭೇ ।
ತೇ ಸಂತು ಮಮ ತಿಷ್ಠ ತ್ವಂ ತಸ್ಮಾದತ್ರೈವ ಗೋಕುಲೇ ॥ ೧೫ ॥
ನಾಽಸ್ತಿ ಮಾತೃಸಮೋ ಬಂಧುರ್ಬಾಲಾನಾಂ ಕ್ಷೀರಜೀವಿನಾಂ ।
ನಾಸ್ತಿ ಮಾತೃಸಮೋ ನಾಥೋ ನಾಸ್ತಿ ಮಾತೃಸಮಾಗತಿಃ ॥ ೧೬ ॥
ನಾಽಸ್ತಿ ಮಾತೃಸಮಃ ಪೂಜ್ಯೋ ನಾಸ್ತಿ ಮಾತೃಸಮಃ ಸಖಾ ।
ನಾಸ್ತಿ ಮಾತೃಸಮೋ ದೇವ ಇಹಲೋಕೇ ಪರತ್ರ ಚ ॥ ೧೭ ॥
ಏವಂ ಮತ್ವಾ ಸದಾ ಮಾತುಃ ಕರ್ತವ್ಯಾ ಭಕ್ತಿರುತ್ತಮೈಃ ।
ತಮೇನಂ ಪರಮಂ ಧರ್ಮಂ ಪ್ರಜಾಪತಿ ವಿನಿರ್ಮಿತಂ ।
ಅನುತಿಷ್ಠಂತಿ ಯೇ ಪುತ್ರಾಸ್ತೇ ಯಾಂತಿ ಪರಮಾಂ ಗತಿಂ ॥ ೧೮ ॥

---

೧೨. ಕರುವು ಹೇಳುತ್ತದೆ :—ನೀನು ಹೋಗುವ ಸ್ಥಳಕ್ಕೆ ನಾನೂ ಪೋಗುವೆನು. ಈಗ ನನಗೆ ತಾಯಿಯ ಮುಂದೆಯೆ ಮರಣವಾಗುವುದು ಶ್ಲಾಘ್ಯವಾದುದು.

೧೩. ಅಮ್ಮ ! ನೀನಿಲ್ಲದಿದ್ದರೆ ನಾನು ಸ್ತನ್ಯಪಾನವಿಲ್ಲದೆ ಸ್ವಲ್ಪಕಾಲದಲ್ಲಿಯೇ ಮಡಿಯುವೆನು.

೧೪. ಅಮ್ಮ ! ನಿನ್ನೊಡನೆ ಹುಲಿಯು ನನ್ನನ್ನು ಕೊಲ್ಲುವುದಾದರೆ ತಾಯಿಯಲ್ಲಿ ಭಕ್ತಿಯುಳ್ಳವರಿಗುಂಟಾಗುವ ಗತಿಯು ನನಗುಂಟಾಗುವುದು.

೧೫. ಅಥವಾ ಎಲೌ ಮಂಗಳಕರಳೆ ! ನೀನು ಹುಲಿಗೆ ಮಾಡಿರುವ ಶಪಥಗಳು ನನ್ನವಾಗಿರಲಿ. ನೀನು ಈ ಗೋಕುಲದಲ್ಲಿಯೇ ಇರು.

೧೬. ಹಾಲಿನಿಂದ ಜೀವಿಸುವ ಬಾಲಕರಿಗೆ ತಾಯಿಗೆ ಸಮವಾದ ಬಂಧುವೂ, ರಕ್ಷಕರೂ, ಗತಿಯೂ ಯಾವುದೂ ಇರುವುದಿಲ್ಲ.

೧೭. ಇಹಪರಗಳಲ್ಲಿ ತಾಯಿಗೆ ಸಮನಾದ ಪೂಜ್ಯನೂ, ಮಿತ್ರನೂ, ದೇವತೆಯೂ ಇಲ್ಲ.

೧೮. ಉತ್ತಮರು ಇದನ್ನರಿತು ಯಾವಾಗಲೂ ತಾಯಿಯಲ್ಲಿ ಭಕ್ತಿಯನ್ನಿಡಬೇಕು. ಬ್ರಹ್ಮನು ನಿರ್ಮಿಸಿದ ಈ ಉತ್ತಮ ಧರ್ಮವನ್ನು ಅನುಷ್ಠಾನಮಾಡುವ ಪುತ್ರರು ಉತ್ತಮ ಗತಿಯನ್ನು ಹೊಂದುವರು.

ತಸ್ಮಾದಹಂ ಗಮಿಷ್ಯಾಮಿ ತ್ವಂ ಚ ತಿಷ್ಠಾಽತ್ರ ಗೋಕುಲೇ ।
ಆತ್ಮಪ್ರಾಣೈಸ್ತವ ಪ್ರಾಣಾನ್ರಕ್ಷಯಿಷ್ಯಾಮ್ಯಸಂಶಯಂ ॥ ೧೯ ॥
ನಂದಿನ್ಯುವಾಚ :—
ಮಮೈವ ವಿಹಿತೋ ಮೃತ್ಯುರ್ನತೇ ಪುತ್ರಾಽದ್ಯ ವಾಸರೇ ।
ತತ್ಕಥಂ ಮಮ ಜೀವಂ ತ್ವಂ ರಕ್ಷಸ್ಯಸುಭಿರಾತ್ಮನಃ ॥ ೨೦ ॥
ಅಪಶ್ಚಿಮಮಿದಂ ಪುತ್ರ ಮಾತೃಸಂದಿಷ್ಟಮುತ್ತಮಂ ।
ತ್ವಯಾ ಕಾರ್ಯಂ ಪ್ರಯತ್ನೇನ ಮದ್ವಾಕ್ಯಮನುತಿಷ್ಠತಾ ॥ ೨೧ ॥
ಭ್ರಮಮಾಣೋ ವನೇ ಪುತ್ರ ಮಾ ಪ್ರಮಾದಂ ಕರಿಷ್ಯಸಿ ।
ಲೋಭಾತ್ಸಂಜಾಯತೇ ನಾಶ ಇಹಲೋಕೇ ಪರತ್ರ ಚ ॥ ೨೨ ॥
ಸಮುದ್ರಮಟವೀಂ ಯುದ್ಧಂ ವಿಶಂತೇ ಲೋಭಮೋಹಿತಾಃ ।
ಇಹ ತನ್ನಾಽಸ್ತಿ ಲೋಭೇನ ಯನ್ನಕುರ್ವಂತಿ ಮಾನವಾಃ ॥ ೨೩ ॥
ಲೋಭಾತ್ಪ್ರಮಾದಾದ್ವಿಶ್ರಂಭಾತ್ಪುರುಷೋ ವಧ್ಯತೇ ತ್ರಿಭಿಃ ।
ತಸ್ಮಾಲ್ಲೋಭೋ ನ ಕರ್ತವ್ಯೋ ನ ಪ್ರಮಾದೋ ನ ವಿಶ್ವಸೇತ್ ॥ ೨೪ ॥
ಆತ್ಮಾ ಪುತ್ರ ತ್ವಯಾ ರಕ್ಷ್ಯಃ ಸರ್ವದೈವ ಪ್ರಯತ್ನತಃ ।
ಸರ್ವೇಭ್ಯಃ ಶ್ವಾಪದೇಭ್ಯಶ್ಚ ಭ್ರಮತಾ ಗಹನೇ ವನೇ ॥ ೨೫ ॥

---

೧೯. ಅಮ್ಮ! ಆದುದರಿಂದ ನಾನು ಹುಲಿಯ ಹತ್ತಿರ ಹೋಗುವೆನು. ನೀನು ಈ ಗೋಕುಲದಲ್ಲಿರು. ನನ್ನ ಪ್ರಾಣದಿಂದ ನಿನ್ನ ಪ್ರಾಣವನ್ನು ನಿಶ್ಚಯವಾಗಿಯೂ ರಕ್ಷಿಸುವೆನು.

೨೦. ನಂದಿನಿಯು ಹೇಳುತ್ತದೆ:— ಮಗು! ಈ ದಿನ ನನಗೆ ಮೃತ್ಯುವು ವಿಹಿತವಾಗಿರುವುದು. ಆದುದರಿಂದ ನನ್ನ ಜೀವವನ್ನು ನೀನು ನಿನ್ನ ಪ್ರಾಣದಿಂದ ಹೇಗೆ ಕಾಪಾಡುವೆ?

೨೧. ಇದು ತಾಯಿಯ ಕೊನೆಯ ಸಂದೇಶವಾಗಿರುವುದು. ನನ್ನ ಮಾತನ್ನು ಅನುಷ್ಠಾನಮಾಡುವ ನೀನು ಇದನ್ನು ಅವಶ್ಯವಾಗಿ ನಡೆಸಬೇಕು.

೨೨. ನೀನು ಕಾಡಿನಲ್ಲಿ ಸಂಚರಿಸುತ್ತ ಪ್ರಮಾದಕ್ಕೆ ಒಳಗಾಗಬೇಡ. ಅತ್ಯಾಶೆಯಿಂದ ಇಹಪರ ಲೋಕಗಳಲ್ಲಿ ನಾಶವು ಸಂಭವಿಸುವುದು.

೨೩. ಲೋಭದಿಂದ ಮೋಹಗೊಂಡವರು ಸಮುದ್ರ, ಕಾಡು, ಯುದ್ಧಗಳನ್ನು ಪ್ರವೇಶಿಸುವರು. ಈ ಲೋಕದಲ್ಲಿ ಲೋಭದಿಂದ ಮಾನವರು ಮಾಡದಿರುವುದು ಯಾವುದೂ ಇಲ್ಲ.

೨೪. ಮಾನವನು ಲೋಭ, ಪ್ರಮಾದ ವಿಶ್ವಾಸಗಳಿಂದ ಹತನಾಗುವನು. ಆದುದರಿಂದ ಲೋಭ, ಪ್ರಮಾದ ವಿಶ್ವಾಸಗಳನ್ನು ಮಾಡಬಾರದು.

೨೫. ಮಗು! ಗಹನವಾದ ಕಾಡಿನಲ್ಲಿ ಸಂಚರಿಸುವ ನೀನು ಯಾವಾಗಲೂ ಘಾತುಕ ಪ್ರಾಣಿಗಳಿಂದ ನಿನ್ನನ್ನು ರಕ್ಷಿಸಿಕೊ.

ವಿಷಮಸ್ಥಂ ತೃಣಾನ್ನಾದ್ಯಂ ಕಥಂಚಿತ್ಪುತ್ರಕ ತ್ವಯಾ ।
ನೈಕಾಕಿನಾ ಪ್ರಗಂತವ್ಯಂ ಯೂಥಂ ತ್ಯಕ್ತ್ವಾ ನಿಜಂ ಕ್ವಚಿತ್ ॥ ೨೬ ॥
ಏವಂ ಸಂಭಾಷ್ಯ ತಂ ವತ್ಸಮವಲಿಹ್ಯ ಮುಹುರ್ಮುಹುಃ ।
ಶೋಕೇನ ಮಹತಾವಿಷ್ಟಾ ಬಾಷ್ಪವ್ಯಾಕುಲಲೋಚನಾ ॥ ೨೭ ॥
ತತಃ ಸಖೀಜನಂ ಸರ್ವಂ ಗತಾ ದ್ರಷ್ಟುಂ ದ್ವಿಜೋತ್ತಮಾಃ ।
ನಂದಿನೀ ಪುತ್ರಶೋಕೇನ ಪೀಡಿತಾಂಗೀ ಸುವಿಹ್ವಲಾ ॥ ೨೮ ॥
ತತಃ ಪ್ರೋವಾಚ ತಾಃ ಸರ್ವಾ ಗತ್ವಾಽರಣ್ಯಂ ದ್ವಿಜೋತ್ತಮಾಃ ।
ಚರಂತೀಃ ಸ್ವೇಚ್ಛಯಾ ಹೃಷ್ಟಾ ವಾಂಛಿತಾನಿ ತೃಣಾನಿ ತಾಃ ॥ ೨೯ ॥
ಬಹುಲೇ ಚಂಪಕೇ ದಾಮೇ ವಸುಧಾರೇ ಘಟಸ್ರವೇ ।
ಹಂಸನಾದಿ ಪ್ರಿಯಾನಂದೇ ಶುಭಕ್ಷೀರೇ ಮಹೋದಯೇ ॥ ೩೦ ॥
ತಥಾಽನ್ಯಾ ಧೇನವೋ ಯಾಶ್ಚ ಸಂಸ್ಥಿತಾ ಗೋಕುಲಾಂತಿಕೇ ।
ಶೃಣ್ವಂತು ವಚನಂ ಮಹ್ಯಂ ಕುರ್ವಂತು ಚ ತತಃಪರಂ ।
ಅದ್ಯಾಽಹಂ ನಿಜಯೂಥಸ್ಯ ಭ್ರಮಂತೀ ನಾಽತಿದೂರತಃ ॥ ೩೧ ॥
ತತಶ್ಚ ಗಹನಂ ಪ್ರಾಪ್ತಾ ವನಂ ಮಾನುಷವರ್ಜಿತಂ ।
ವ್ಯಾಘ್ರೇಣಾಸಾದಿತಾ ತತ್ರ ಭ್ರಮಂತೀ ತೃಣವಾಂಛಯಾ ॥ ೩೨ ॥

---

೨೬. ಮಗು! ನೀನು ವಿಷಮಸ್ಥಾನದಲ್ಲಿರುವ ಹುಲ್ಲನ್ನು ತಿನ್ನಬಾರದು. ಹಿಂಡನ್ನು ಬಿಟ್ಟು ಒಬ್ಬಂಟಿಗನೇ ಸಂಚರಿಸಬಾರದು.

೨೭–೨೮. ಅತಿ ದುಃಖದಿಂದ ಕಣ್ಣೀರನ್ನು ಸುರಿಸುತ್ತಿರುವ ಆ ನಂದಿನಿಯು ಮಗನನ್ನು ಕುರಿತು ಹೀಗೆ ಹೇಳಿ ಬಾರಿಬಾರಿಗೂ ನೆಕ್ಕಿ ಸಖಿಯರನ್ನು ನೋಡಲು ಹೊರಟುಹೋಯಿತು.

೨೯. ತರುವಾಯ ಆ ನಂದಿನಿಯು ಕಾಡಿಗೆ ಹೋಗಿ ಸ್ವೇಚ್ಛೆಯಿಂದ ಇಷ್ಟವಾದ ಹುಲ್ಲುಗಳನ್ನು ಮೇಯುತ್ತಿರುವ ಆ ಸಖಿಯರನ್ನು ಕುರಿತು ಹೀಗೆಂದಿತು.

೩೦–೩೨. "ಬಹುಲೇ! ಚಂಪಕೇ! ದಾಮೇ! ವಸುಧಾರೇ! ಘಟಸ್ರವೇ! ಹಂಸನಾದಿ! ಪ್ರಿಯಾನಂದೇ! ಶುಭಕ್ಷೀರೇ! ಮಹೋದಯೆ! ಮತ್ತು ಈ ಗೋಕುಲದಲ್ಲಿರುವ ಗೋವುಗಳೆ! ನನ್ನ ಮಾತನ್ನು ಕೇಳಿ ಅದನ್ನು ನಡೆಸಿರಿ. ನಾನು ಈ ದಿನ ನಮ್ಮ ಹಿಂಡಿನ ಹತ್ತಿರವೇ ಸಂಚರಿಸುತ್ತ ಮನುಷ್ಯರಿಲ್ಲದ ಗಹನವಾದ ಕಾಡನ್ನು ಪ್ರವೇಶಿಸಲು ಹುಲ್ಲಿನ ಆಶೆಯಿಂದ ಸಂಚರಿಸುತ್ತಿರುವ ನನ್ನನ್ನು ಹುಲಿಯೊಂದು ಹಿಡಿದುಕೊಂಡಿತು.

ಯುಷ್ಮಾಕಂ ದರ್ಶನಾರ್ಥಾಯ ಸುತಸಂಭಾಷಣಾಯ ಚ ।
ಸಂಪ್ರಾಪ್ತಾ ಶಪಥೈಃ ಕೃತ್ವಾತ್ತಂ ವಿಶ್ವಾಸ್ಯ ನಖಾಯುಧಂ ॥ ೩೩ ॥
ದೃಷ್ಟಃ ಸಂಭಾಷಿತಃ ಪುತ್ರಃ ಶಾಸಿತಶ್ಚ ಮಯಾ ಹಿ ಸಃ ।
ಅಧುನಾ ಭವತೀನಾಂ ಚ ಪ್ರದತ್ತಃ ಪುತ್ರಕೋ ಯಥಾ ॥ ೩೪ ॥
ಅಜ್ಞಾನಾಜ್ಜ್ಞಾನತೋ ವಾಽಪಿ ಭವತೀನಾಂ ಮಯಾಕೃತಂ ।
ಯತ್ಕಿಂಚಿದ್ದುಷ್ಕೃತಂ ಭದ್ರಾಸ್ತತ್ಕ್ಷಂತವ್ಯಂ ಪ್ರಸಾದತಃ ॥ ೩೫ ॥
ಅನಾಥೋ ಹ್ಯಬಲೋ ದೀನಃ ಕ್ಷೀರಪೋ ಮಮ ಬಾಲಕಃ ।
ಮಾತೃಶೋಕಾಭಿಸಂತಪ್ತಃ ಪಾಲ್ಯಃ ಸರ್ವಾಭಿರೇವ ಸಃ ॥ ೩೬ ॥
ಭ್ರಮಮಾಣೋಽಸಮೇ ಸ್ಥಾನೇ ವ್ರಜಮಾನೋಽನ್ಯಗೋಕುಲೇ ।
ಅಕಾರ್ಯೇಷು ಚ ಸಂಸಕ್ತೋ ನಿವಾರ್ಯಃ ಸರ್ವದಾದರಾತ್ ॥ ೩೭ ॥
ಅಹಂ ತತ್ರ ಗಮಿಷ್ಯಾಮಿ ಸ ವ್ಯಾಘ್ರೋ ಯತ್ರ ಸಂಸ್ಥಿತಃ ।
ಅಪಶ್ಚಿಮಪ್ರಣಾಮೋಽಯಂ ಸರ್ವಾಸಾಂ ವಿಹಿತೋ ಮಯಾ ॥ ೩೮ ॥

ಧೇನವ ಊಚುಃ:—

ನ ಗಂತವ್ಯಂ ತ್ವಯಾ ತತ್ರ ಕಥಂಚಿದಪಿ ನಂದಿನಿ ।
ಆಪದ್ಧರ್ಮಂ ನ ವೇತ್ಸಿ ತ್ವಂ ನೂನಂ ಯೇನ ಪ್ರಗಚ್ಛಸಿ ॥ ೩೯ ॥

---

೩೩–೩೪. ಆಗ ನಾನು ಆ ಹುಲಿಯನ್ನು ಅನೇಕ ಶಪಥಗಳಿಂದ ನಂಬಿಸಿ ನಿಮ್ಮನ್ನು ನೋಡುವುದಕ್ಕಾಗಿಯೂ, ಪುತ್ರನೊಡನೆ ಮಾತನಾಡುವುದಕ್ಕಾಗಿಯೂ ಇಲ್ಲಿಗೆ ಬಂದೆನು. ಈಗ ಪುತ್ರನಿಗೆ ಸದುಪದೇಶ ಮಾಡಿ ಅವನನ್ನು ನಿಮಗೆ ಒಪ್ಪಿಸಿರುವೆನು.

೩೫. ಮಂಗಳಕರರಾದ ಸಖಿಯರೆ! ನಾನು ಅಜ್ಞಾನದಿಂದಾಗಲಿ, ಜ್ಞಾನದಿಂದಾಗಲಿ ನಿಮಗೆ ಏನಾದರೂ ಕೆಟ್ಟುದನ್ನು ಮಾಡಿದ್ದರೆ ಅದನ್ನು ಅನುಗ್ರಹಿಸಿ ಕ್ಷಮಿಸಿರಿ.

೩೬–೩೭. ನೀವೆಲ್ಲ ಅನಾಥನೂ, ಬಲಹೀನನೂ, ದೀನನೂ, ಕ್ಷೀರಪಾಯಿಯೂ, ತಾಯಿಯ ಶೋಕದಿಂದ ಸಂತಪ್ತನೂ ಆದ ನನ್ನ ಈ ಬಾಲಕನನ್ನು ಕಾಪಾಡಿರಿ. ವಿಷಮಸ್ಥಾನದಲ್ಲಿ ಸಂಚರಿಸುವುದೂ, ಇತರ ಗೋಕುಲಕ್ಕೆ ಹೋಗುವುದೂ, ಅಕಾರ್ಯದಲ್ಲಿ ಆಸಕ್ತವೂ ಆದ ನನ್ನ ಕರುವನ್ನು ನೀವು ಪ್ರೀತಿಯಿಂದ ತಡೆಯಿರಿ.

೩೮. ನಾನೀಗ ಆ ವ್ಯಾಘ್ರದ ಹತ್ತಿರಕ್ಕೆ ಹೋಗುವೆನು. ನಿಮ್ಮೆಲ್ಲರಿಗೆ ಕೊನೆಯ ನಮಸ್ಕಾರವನ್ನು ಮಾಡಿದ್ದೇನೆ.

೩೯. ಧೇನುಗಳು ಹೇಳುತ್ತವೆ:—ನಂದಿನಿ! ನೀನು ಆ ಹುಲಿಯೆಡೆಗೆ ಹೋಗಲೇಕೂಡದು. ಹೀಗೆ ಅಲ್ಲಿಗೆ ಹೋಗಲುದ್ಯುಕ್ತಳಾದ ನೀನು ಆಪದ್ಧರ್ಮವನ್ನು ಅರಿತಿರುವುದಿಲ್ಲ.

ನ ಸಮ್ಪ್ರಯುಕ್ತಂ ವಚನಂ ಹಿನಸ್ತಿ
ನ ಸ್ತ್ರೀಷು ಜಾತಿರ್ನವಿವಾಹಕಾಲೇ ।
ಪ್ರಾಣಾತ್ಯಯೇ ಸರ್ವಧನಾಽಪಹಾರೇ
ಪಂಚಾನೃತಾನ್ಯಾಹುರಪಾತಕಾನಿ ॥ ೪೦ ॥
ತಸ್ಮಾತ್ತತ್ರ ನ ಗಂತವ್ಯಂ ದೋಷೋ ನಾಽಸ್ತ್ಯತ್ರ ತೇ ಶುಭೇ ।
ಪಾಲಯಸ್ವ ನಿಜಂ ಪುತ್ರಂ ವ್ರಜಾಸ್ಮಾಭಿರ್ನಿಜಂ ಗೃಹಂ ॥ ೪೧ ॥

ನಂದಿನ್ಯುವಾಚ :—

ಪರೇಷಾಂ ಪ್ರಾಣಯಾತ್ರಾರ್ಥಂ ತತ್ಕರ್ತುಂ ಯುಜ್ಯತೇ ಶುಭಾಃ ।
ಆತ್ಮಪ್ರಾಣಹಿತಾರ್ಥಾಯ ನ ಸಾಧೂನಾಂ ಪ್ರಶಸ್ಯತೇ ॥ ೪೨ ॥
ಸತ್ಯೇ ಪ್ರತಿಷ್ಠಿತೋ ಲೋಕೋ ಧರ್ಮಃ ಸತ್ಯೇ ಪ್ರತಿಷ್ಠಿತಃ ।
ಉದಧಿಃ ಸತ್ಯವಾಕ್ಯೇನ ಮರ್ಯಾದಾಂ ನ ವಿಲಂಘಯೇತ್ ॥ ೪೩ ॥
ವಿಷ್ಣವೇ ಪೃಥಿವೀಂ ದತ್ವಾ ಬಲಿಃ ಪಾತಾಲಮಾಶ್ರಿತಃ ।
ಸತ್ಯವಾಕ್ಯಂ ಸಮಾಶ್ರಿತ್ಯ ನನಿಷ್ಕ್ರಾಮತಿ ದೈತ್ಯಪಃ ॥ ೪೪ ॥
ಯಃ ಸ್ವಂ ವಾಕ್ಯಂ ಪ್ರತಿಜ್ಞಾಯ ನ ಕರೋತಿ ಯಥೋದಿತಂ ।
ಕಿಂ ತೇ ನಕೃತಂ ಪಾಪಂ ಚೌರೇಣಾಕೃತಬುದ್ಧಿನಾ ॥ ೪೫ ॥

---

೪೦. ಹಾಸ್ಯ, ಸ್ತ್ರೀಯರ ಜಾತಿ, ವಿವಾಹ, ಪ್ರಾಣನಾಶ, ಸಮಸ್ತ ಧನಾಪಹಾರ ಈ ಐದು ವಿಷಯಗಳಲ್ಲಿ ಆಡಿದ ಸುಳ್ಳು ಪಾಪವನ್ನುಂಟುಮಾಡುವುದಿಲ್ಲವೆನ್ನುವರು.

೪೧. ಆದುದರಿಂದ ನೀನು ಅಲ್ಲಿಗೆ ಹೋಗಬೇಡ. ಈ ವಿಷಯದಲ್ಲಿ ನಿನಗೆ ದೋಷವುಂಟಾಗುವುದಿಲ್ಲ. ನಿನ್ನ ಮಗನನ್ನು ಕಾಪಾಡು. ನಮ್ಮೊಡನೆ ಮನೆಗೆ ಹೋಗುವಿಯಂತೆ.

೪೨. ನಂದಿನಿಯು ಹೇಳುತ್ತದೆ:—ಪರರಿಗೆ ಹಿತವನ್ನುಂಟುಮಾಡಲು ನೀವು ಹೇಳಿದಂತೆ ಮಾಡುವುದು ಉಚಿತವಾದುದು. ಸಾಧುಗಳಿಗೆ ಆತ್ಮಪ್ರಾಣದ ಹಿತಕ್ಕಾಗಿ ಹಾಗೆ ಮಾಡುವುದು ಉಚಿತವಲ್ಲ.

೪೩. ಲೋಕವೂ, ಧರ್ಮವೂ ಸತ್ಯದಲ್ಲಿ ನೆಲಸಿರುವುವು. ಸಮುದ್ರವು ಸತ್ಯವಚನದಿಂದ ತನ್ನ ಎಲ್ಲೆಯನ್ನು ಮೀರುವುದಿಲ್ಲ.

೪೪. ವಿಷ್ಣುವಿಗೆ ಭೂಮಿಯನ್ನು ದಾನಮಾಡಿ ಪಾತಾಳವನ್ನಾಶ್ರಯಿಸಿದ ಬಲಿಯು ಸತ್ಯವಾಕ್ಯಾಶ್ರಯದಿಂದ ಅಲ್ಲಿಂದ ಹೊರಹೊರಡುವುದಿಲ್ಲ.

೪೫. ಪ್ರತಿಜ್ಞೆಮಾಡಿ ಅದರಂತೆ ನಡೆಯದ ಮೂಢನಾದ ಕಳ್ಳನು ಯಾವ ಪಾಪವನ್ನುತಾನೆ ಮಾಡಲಿಲ್ಲ.

ಸಖ್ಯ ಊಚುಃ :—

ತ್ವಂ ನಂದಿನಿ ನಮಸ್ಕಾರ್ಯಾ ಸರ್ವೈರಪಿ ಸುರಾಽಸುರೈಃ ।
ಯಾ ತ್ವಂ ಸತ್ಯಪ್ರತಿಷ್ಠಾರ್ಥಂ ಪ್ರಾಣಾಂಸ್ತ್ಯಜಸಿ ದುಸ್ತ್ಯಜಾನ್ ॥ ೪೬ ॥
ಕಿಂ ತ್ವಾಂ ಕಲ್ಯಾಣಿ ವಕ್ಷ್ಯಾಮಃ ಸ್ವಯಂ ಧರ್ಮಾರ್ಥವಾದಿನೀಂ ।
ಸರ್ವೈರಪಿ ಗುಣೈರ್ಯುಕ್ತಾಂ ನಿತ್ಯಂ ಸತ್ಯೇ ಪ್ರತಿಷ್ಠಿತಾಂ ॥ ೪೭ ॥
ತಸ್ಮಾದ್ಗಚ್ಛ ಮಹಾಭಾಗೇ ನ ಶೋಚ್ಯಃ ಪುತ್ರಕಸ್ತವ ।
ಭವತ್ಯಾ ಯದ್ವಯಂ ಪ್ರೋಕ್ತಾಸ್ತತ್ಕರಿಷ್ಯಾಮ ಏವ ಹಿ ॥ ೪೮ ॥
ಏತತ್ಸನರ್ವಯಂ ವಿದ್ಮಃ ಸದಾ ಸತ್ಯವತಾಂ ನೃಣಾಂ ।
ನ ನಿಷ್ಫಲಃ ಕ್ರಿಯಾರಂಭಃ ಕಥಂಚಿದಪಿ ಜಾಯತೇ ॥ ೪೯ ॥

ಸೂತ ಉವಾಚ :—

ಏವಂ ಸಂಭಾಷ್ಯ ತಂ ಸರ್ವಂ ನಂದಿನೀ ಸ್ವಸಖೀಜನಂ ।
ಪ್ರಸ್ಥಿತಾ ವ್ಯಾಘ್ರಮುದ್ದಿಶ್ಯ ಪುತ್ರಶೋಕೇನ ಪೀಡಿತಾ ॥ ೫೦ ॥
ಶೋಕಾಗ್ನಿನಾಽಪಿ ಸಂತಪ್ತಾ ನಿರಾಶಾ ಪುತ್ರದರ್ಶನೇ ।
ವಿಯುಕ್ತಾ ಚಕ್ರವಾಕೀವ ಲತೇವ ಪತಿತಾ ತರೋಃ ॥ ೫೧ ॥
ಅಂಧೇವ ದೃಷ್ಟಿನಿರ್ಮುಕ್ತಾ ಪ್ರಸ್ಖಲಂತೀ ಪದೇ ಪದೇ ।
ವನಾಧಿದೇವತಾಃ ಸರ್ವಾಃ ಪ್ರಾರ್ಥಯಚ್ಚ ಸುತಾರ್ಥತಃ ॥ ೫೨ ॥

---

೪೬. ಸಖಿಯರು ಹೇಳುತ್ತಾರೆ:—ನಂದಿನಿಯೆ! ಸತ್ಯಸ್ಥಾಪನೆಗಾಗಿ ಬಿಡಲಾಗದ ಪ್ರಾಣಗಳನ್ನು ತ್ಯಜಿಸುವ ನೀನು ಸಮಸ್ತ ದೇವಾಸುರರಿಂದ ನಮಸ್ಕಾರ ಮಾಡಿಸಿಕೊಳ್ಳಲರ್ಹಳಾಗಿರುವೆ.

೪೭. ಸ್ವಂತವಾಗಿ ಧರ್ಮಾರ್ಥಗಳನ್ನು ಹೇಳುವವಳೂ, ಸಕಲ ಗುಣಗಳಿಂದ ಕೂಡಿದವಳೂ, ಸತ್ಯದಲ್ಲಿರುವವಳೂ ಆದ ನಿನಗೆ ನಾವು ಏನನ್ನು ಹೇಳುವೆವು?

೪೮. ಮಹಾಭಾಗಳೆ! ಆದುದರಿಂದ ಹೊರಡು. ನಿನ್ನ ಪುತ್ರನ ವಿಷಯದಲ್ಲಿ ದುಃಖಿಸಬೇಡ. ನೀನು ಹೇಳಿದ ಮಾತನ್ನು ನಾವು ಮಾಡುವೆವು.

೪೯. ಸತ್ಯವಂತರ ಕಾರ್ಯವು ನಿಷ್ಫಲವಾಗುವುದಿಲ್ಲವೆಂಬುದನ್ನು ನಾವು ತಿಳಿದಿದ್ದೇವೆ.

೫೦. ಸೂತನು ಹೇಳುತ್ತಾನೆ:—ನಂದಿನಿಯು ಆ ಸಖಿಯರನ್ನು ಕುರಿತು ಹೀಗೆ ಹೇಳಿ ಪುತ್ರಶೋಕದಿಂದ ಪೀಡಿತಳಾಗಿ ಹುಲಿಯನ್ನು ಕುರಿತು ಹೊರಟಿತು.

೫೧—೫೨. ದುಃಖವೆಂಬ ಅಗ್ನಿಯಿಂದ ಪೀಡಿತವಾದ ಆ ನಂದಿನಿಯು ಪುತ್ರದರ್ಶನದ ಆಶೆಯಿಲ್ಲದ್ದಾಗಿ ಪತಿಯಿಂದಗಲಿದ ಚಕ್ರವಾಕಿಯಂತೆಯೂ, ಮರದಿಂದ ತಪ್ಪಿದ ಲತೆಯಂತೆಯೂ, ಕಣ್ಣಿಲ್ಲದ ಕುರುಡಿಯಂತೆಯೂ ಪ್ರತಿಹೆಜ್ಜೆಯಲ್ಲಿಯೂ ಎಡವುತ್ತ ಸಮಸ್ತ ವನದೇವತೆಗಳನ್ನೂ ಸುತನಿಗಾಗಿ ಬೇಡಿಕೊಂಡಿತು.

ಪ್ರಸುಪ್ತಂ ಭ್ರಮಮಾಣಂ ವಾ ಮಮ ಪುತ್ರಂ ಸುಬಾಲಕಂ ।
ವನಾಧಿದೇವತಾಃ ಸರ್ವಾ ರಕ್ಷಂತು ವಚನಾನ್ಮಮ ॥ ೫೩ ॥
ಏವಂ ಪ್ರಲಪ್ಯ ಮನಸಾ ಸಂಪ್ರಾಪ್ತಾ ತತ್ರ ಯತ್ರ ಸಃ ।
ಆಸ್ತೇ ವಿಸ್ಫೂರ್ಜಿತಾಸ್ಯಶ್ಚ ತೀಕ್ಷ್ಣದಂಷ್ಟ್ರೋ ಭಯಾನಕಃ ॥ ೫೪ ॥
ವ್ಯಾಘ್ರಃ ಕ್ಷುತ್ಕ್ಷಾಮಕಂಠಶ್ಚ ತಸ್ಯಾ ಮಾರ್ಗಾವಲೋಕಕಃ ।
ಸಂರಂಭಾಟೋಪ ಸಂಯುಕ್ತಃ ಸೃಕ್ಕಿಣೀಪರಿಲೇಹಯನ್ ॥ ೫೫ ॥

ನಂದಿನ್ಯುವಾಚ :—

ಆಗತಾಽಹಂ ಮಹಾವ್ಯಾಘ್ರ ಸತ್ಯೇ ಚ ಶಪಥೇ ಸ್ಥಿತಾ ।
ಕುರು ತೃಪ್ತಿಂ ಯಥಾ ಕಾಮಂ ಮಮ ಮಾಂಸೇನ ಸಾಂಪ್ರತಂ ॥ ೫೬ ॥
ತಾಂ ದೃಷ್ಟ್ವಾ ಸೋಽಪಿ ದುಷ್ಟಾತ್ಮಾ ವೈರಾಗ್ಯಂ ಪರಮಂ ಗತಃ ।
ಸತ್ಯಾಶಯಾ ಪುನಃ ಪ್ರಾಪ್ತಾಂ ಸಂತ್ಯಜ್ಯ ಪ್ರಾಣಜಂ ಭಯಂ ॥ ೫೭ ॥

ವ್ಯಾಘ್ರ ಉವಾಚ :—

ಸ್ವಾಗತಂ ತವ ಕಲ್ಯಾಣಿ ಸುಧೇನೋ ಸತ್ಯವಾದಿನಿ ।
ನ ಹಿ ಸತ್ಯವತಾಂ ಕಿಂಚಿದಶುಭಂ ವಿದ್ಯತೇ ಕ್ವಚಿತ್ ॥ ೫೮ ॥

---

೫೩. ಮಲಗಿರುವ ಅಥವಾ ಸಂಚರಿಸುತ್ತಿರುವ ಬಾಲಕನಾದ ನನ್ನ ಮಗ ನನ್ನು ನನ್ನ ಮಾತಿನಿಂದ ಸಮಸ್ತ ವನದೇವತೆಗಳೂ ಕಾಪಾಡಲಿ.

೫೪. ಆ ನಂದಿನಿಯು ಹೀಗೆ ಮನಸ್ಸಿನಿಂದ ಗೋಳಾಡಿ, ಹೊಳೆಯುವ ಮುಖ ವುಳ್ಳುದೂ, ಹರಿತವಾದ ಹಲ್ಲುಗಳುಳ್ಳುದೂ, ಭಯಂಕರವೂ ಆದ ಹುಲಿಯಿರುವ ಸ್ಥಳಕ್ಕೆ ಬಂದಿತು.

೫೫. ಆ ಹುಲಿಯು ಹಸಿವುಗೊಂಡುದೂ, ಆ ನಂದಿನಿಯ ಮಾರ್ಗವನ್ನು ನೋಡುತ್ತಿರುವುದೂ, ಕೋಪಾಟೋಪಗಳಿಂದ ಕೂಡಿರುವುದೂ, ಕಟವಾಯಿ ಗಳನ್ನು ನೆಕ್ಕುತ್ತಿರುವುದೂ ಆಗಿದ್ದಿತು.

೫೬. ನಂದಿನಿಯು ಹೇಳುತ್ತದೆ :—ಮಹಾವ್ಯಾಘ್ರ ! ಸತ್ಯಶಪಥನಿಷ್ಠ ಳಾದ ನಾನು ಇದೋ ಬಂದಿರುವೆನು, ನೋಡು. ಈಗ ನನ್ನ ಮಾಂಸದಿಂದ ಸ್ವೇಚ್ಛೆಯಾಗಿ ತೃಪ್ತಿಪಡು.

೫೭. ದುಷ್ಟವ್ಯಾಘ್ರನು ಸತ್ಯಾಶೆಯಿಂದ ಪ್ರಾಣಭಯವನ್ನು ತ್ಯಜಿಸಿ ಮರಳಿ ಬಂದ ಆ ಧೇನುವನ್ನು ಕಂಡು ಅತ್ಯಂತ ವೈರಾಗ್ಯಗೊಂಡಿತು.

೫೮. ಹುಲಿಯು ಹೇಳುತ್ತದೆ :—ಮಂಗಳಕರಳೂ, ಸತ್ಯವಾದಿನಿಯೂ ಆದ ಧೇನುವೆ ! ನಿನಗೆ ಸುಖಾಗಮನವಾಗಲಿ. ಸತ್ಯವಂತರಿಗೆ ಯಾವಾಗಲೂ ಅಮಂಗಳವುಂಟಾಗುವುದಿಲ್ಲ.

ತ್ವಯೋಕ್ತಂ ಶಪಥೈರ್ಭದ್ರೇ ಆಗಮಿಷ್ಯಾಮ್ಯಹಂ ಪುನಃ ।
ತೇನ ಮೇ ಕೌತುಕಂ ಜಾತಂ ಕಿಮೇಷಾ ಪ್ರಕರಿಷ್ಯತಿ ॥ ೫೯ ॥
ಸೋಽಹಂ ಭದ್ರೇ ದುರಾಚಾರೋ ನೃಶಂಸೋ ಜೀವಘಾತುಕಃ ।
ಯಾಸ್ಯಾಮಿ ನರಕಂ ಘೋರಂ ಕರ್ಮಣಾಽನೇನ ಸರ್ವದಾ ॥ ೬೦ ॥
ತಸ್ಮಾತ್ತ್ವಂ ಮೇ ಮಹಾಭಾಗೇ ಪಾಪಸ್ಯಾಽತಿದುರಾತ್ಮನಃ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೬೧ ॥
ಯೇನ ಮೇ ಸ್ಯಾತ್ಪರಂ ಶ್ರೇಯ ಇಹಲೋಕೇ ಪರತ್ರ ಚ ।
ನ ತೇಽಸ್ತ್ಯವಿದಿತಂ ಕಿಂಚಿತ್ಸತ್ಯಾಚಾರಾನ್ಮತಿರ್ಮಮ ॥ ೬೨ ॥
ತಸ್ಮಾತ್ತ್ವಂ ಧರ್ಮಸರ್ವಸ್ವಂ ಸಂಕ್ಷೇಪಾನ್ಮಮ ಕೀರ್ತಯ ।
ಸತ್ಸಂಗಮ ಫಲಂ ಯೇನ ಮಮ ಸಂಜಾಯತೇಽಖಿಲಂ ॥ ೬೩ ॥

ನಂದಿನ್ಯುವಾಚ :—

ತಪಃ ಕೃತೇ ಪ್ರಶಂಸಂತಿ ತ್ರೇತಾಯಾಂ ಧ್ಯಾನಮೇವ ಚ ।
ದ್ವಾಪರೇ ಯಜ್ಞಯೋಗಂ ಚ ದಾನಮೇಕಂ ಕಲೌ ಯುಗೇ ।
ಸರ್ವೇಷಾಮೇವ ದಾನಾನಾಂ ನಾಸ್ತಿ ದಾನಮತಃ ಪರಂ ॥ ೬೪ ॥
ಚರಾಚರಾಣಾಂ ಭೂತಾನಾಮಭಯಂ ಯಃ ಪ್ರಯಚ್ಛತಿ ।
ಸ ಸರ್ವಭಯನಿರ್ಮುಕ್ತಃ ಪರಂ ಬ್ರಹ್ಮಾಽಧಿಗಚ್ಛತಿ ॥ ೬೫ ॥

---

೫೯. ಮಂಗಳಕರಳೆ! ನೀನು ಮರಳಿ ಬರುವೆನೆಂದು ಶಪಥಮಾಡಿರುವುದರಿಂದ ಇವಳು ಏನು ಮಾಡುವಳೆಂದು ನನಗೆ ಕುತೂಹಲವುಂಟಾಯಿತು.

೬೦. ದುರಾಚಾರನೂ, ಘಾತುಕನೂ, ಪ್ರಾಣಿಹಿಂಸಕನೂ ಆದ ನಾನು ಯಾವಾಗಲೂ ಇಂತಹ ಕಾರ್ಯದಿಂದ ಘೋರ ನರಕಕ್ಕೆ ಹೋಗುವೆನು.

೬೧. ಆದುದರಿಂದ ನೀನು ದುರಾತ್ಮನೂ, ಪಾಪಿಯೂ ಆದ ನನಗೆ ಉಪದೇಶವನ್ನಿತ್ತು ಅನುಗ್ರಹಿಸು.

೬೨. ಅದರಿಂದ ನನಗೆ ಇಹಪರ ಲೋಕಗಳಲ್ಲಿ ಉತ್ತಮ ಶ್ರೇಯಸ್ಸುಂಟಾಗುವುದು. ನಿನಗೆ ತಿಳಿಯದ ಸತ್ಯಾಚಾರಗಳು ಇಲ್ಲವೆಂದು ನನ್ನ ಅಭಿಪ್ರಾಯ.

೬೩. ಆದುದರಿಂದ ನೀನು ಸತ್ಸಂಗದಿಂದುಟಾಗುವ ಸಕಲ ಫಲಗಳನ್ನೀಯುವ ಧರ್ಮಗಳನ್ನು ನನಗೆ ಸಂಕ್ಷೇಪವಾಗಿ ಹೇಳು.

೬೪–೬೫. ನಂದಿನಿಯು ಹೇಳುತ್ತಾಳೆ:—ಕೃತಯುಗದಲ್ಲಿ ತಪಸ್ಸನ್ನೂ, ತ್ರೇತಾಯುಗದಲ್ಲಿ ಧ್ಯಾನವನ್ನೂ, ದ್ವಾಪರಯುಗದಲ್ಲಿ ಯಜ್ಞವನ್ನೂ, ಕಲಿಯುಗದಲ್ಲಿ ದಾನವೊಂದನ್ನೂ ಹೊಗಳುತ್ತಾರೆ. ಸಕಲ ದಾನಗಳಲ್ಲಿ ಚರಾಚರಭೂತಗಳಿಗೆ ಅಭಯದಾನಮಾಡುವುದಕ್ಕಿಂತ ಉತ್ತಮ ದಾನವಿಲ್ಲ. ಹಾಗೆ ದಾನಮಾಡುವವನು ಸಮಸ್ತ ಭಯರಹಿತನಾಗಿ ಪರಬ್ರಹ್ಮನನ್ನು ಸೇರುವನು.

ವ್ಯಾಘ್ರ ಉವಾಚ:—

ಅನ್ಯೇಷಾಂ ಚೈವ ಭೂತಾನಾಂ ತದ್ದಾನಂ ಯುಜ್ಯತೇ ಶುಭೇ ।
ಅಹಿಂಸಯಾ ಭವೇದ್ಯೇಷಾಂ ಪ್ರಾಣಯಾತ್ರಾನ್ನಪೂರ್ವಕಂ ॥ ೬೬ ॥
ನ ಹಿಂಸಯಾ ವಿನಾಽಸ್ಮಾಕಂ ಯತಃ ಸ್ಯಾತ್ಪ್ರಾಣಧಾರಣಂ ।
ತಸ್ಮಾದ್ಬ್ರೂಹಿ ಮಹಾಭಾಗೇ ಕಿಂಚಿನ್ಮಮ ಸುಖಾವಹಂ ।
ಉಪದೇಶಂ ಸುಧರ್ಮಾಯ ಹಿಂಸಕಸ್ಯಾಽಪಿ ದೇಹಿನಾಂ ॥ ೬೭ ॥

ನಂದಿನ್ಯುವಾಚ:—

ಅತ್ರಾಽಸ್ತಿ ಸುಮಹಲ್ಲಿಂಗಂ ಪುರಾ ಬಾಣಪ್ರತಿಷ್ಠಿತಂ ।
ಗಹನೇ ಯತ್ಪ್ರಭಾವೇನ ತ್ವಯಾ ಮುಕ್ತಾಽಸ್ಮ್ಯಹಂ ಧ್ರುವಂ ॥ ೬೮ ॥
ತಸ್ಯ ತ್ವಂ ಪ್ರಾತರುತ್ಥಾಯ ಕುರು ನಿತ್ಯಂ ಪ್ರದಕ್ಷಿಣಾಂ ।
ಪ್ರಣಾಮಂ ಚ ತತಃ ಸಿದ್ಧಿಂ ವಾಂಛಿತಾಂ ಸಮವಾಪ್ಸ್ಯಸಿ ॥ ೬೯ ॥
ನಾಽನ್ಯಸ್ಯ ಕರ್ಮಣಃ ಶಕ್ತಿರ್ವಿದ್ಯತೇ ತೇ ನಖಾಯುಧ ।
ಪೂಜಾದಿಕಸ್ಯ ಹೀನತ್ವಾದ್ಧಸ್ತಾಭ್ಯಾಮಿತಿ ಮೇ ಮತಿಃ ॥ ೭೦ ॥
ಏವಮುಕ್ತ್ವಾಽಥ ಸಾ ಧೇನುರ್ವ್ಯಾಘ್ರಸ್ಯಾಽಥ ವನಾಂತಿಕೇ ।
ತಲ್ಲಿಂಗಂ ದರ್ಶಯಾಮಾಸ ಪುರಃ ಸ್ಥಿತ್ವಾ ದ್ವಿಜೋತ್ತಮಾಃ ॥ ೭೧ ॥
ಸೋಽಪಿ ಸಂದರ್ಶನಾತ್ತಸ್ಯ ತತ್ಕ್ಷಣಾನ್ಮುಕ್ತಿಮಾಪ್ತವಾನ್ ।
ವ್ಯಾಘ್ರತ್ವಾತ್ಪಾರ್ಥಿವೋ ಭೂಯಃ ಸ ಬಭೂವ ಯಥಾ ಪುರಾ ॥ ೭೨ ॥

---

೬೬. ಹುಲಿಯು ಹೇಳುತ್ತದೆ:—ಶುಭಕರಳೆ! ಅಹಿಂಸೆಯಿಂದ ಅನ್ನವನ್ನು ಸಂಪಾದಿಸಿ ಜೀವಿಸುವ ಇತರ ಪ್ರಾಣಿಗಳಿಗೆ ಆ ದಾನವು ಯುಕ್ತವಾಗುವುದು.

೬೭. ನಮಗೆ ಹಿಂಸೆಯಿಲ್ಲದೆ ಜೀವನವಾಗದಿರುವುದರಿಂದ ಹಿಂಸಕಪ್ರಾಣಿಗಳಿಗೂ ಧರ್ಮಸುಖಗಳನ್ನುಂಟುಮಾಡುವ ಉಪದೇಶವನ್ನು ಮಾಡು.

೬೮. ನಂದಿನಿಯು ಹೇಳುತ್ತದೆ:—ಇಲ್ಲಿ ಬಾಣನು ಪ್ರತಿಷ್ಠೆಮಾಡಿರುವ ಮಹಾಲಿಂಗವು ಇರುವುದು. ಇದರ ಪ್ರಭಾವದಿಂದ ನಾನು ಈ ಕಾಡಿನಲ್ಲಿ ನಿನ್ನಿಂದ ಮುಕ್ತಳಾಗಿರುವೆನು.

೬೯. ನೀನು ನಿತ್ಯವೂ ಬೆಳಗ್ಗೆ ಎದ್ದು ಅದಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದರೆ ಇಷ್ಟಸಿದ್ಧಿಯನ್ನು ಹೊಂದುವೆ.

೭೦. ವ್ಯಾಘ್ರ! ನಿನಗೆ ಕೈಗಳಿಲ್ಲದಿರುವುದರಿಂದ ಪೂಜೆ ಮೊದಲಾದ ಕಾರ್ಯಗಳನ್ನೆಸಗಲು ಶಕ್ತಿಯಿಲ್ಲ.

೭೧. ದ್ವಿಜವರ್ಯರೆ! ಆ ನಂದಿನಿಯು ಹೀಗೆ ಹೇಳಿ ಕಾಡಿನ ಹತ್ತಿರ ಆ ಮಹೇಶ್ವರ ಲಿಂಗವನ್ನು ಮುಂದೆ ನಿಂತು ತೋರಿಸಿತು.

೭೨. ಆ ಹುಲಿಯು ಆ ಶಿವಲಿಂಗದ ದರ್ಶನದಿಂದ ಕೂಡಲೆ ವ್ಯಾಘ್ರತ್ವದಿಂದ ಮುಕ್ತಿಯನ್ನು ಹೊಂದಿ ಮೊದಲಿನಂತೆಯೇ ರಾಜನಾಯಿತು.

ಶಾಪಂ ದುರ್ವಾಸಸಾ ದತ್ತಂ ರಾಜ್ಯಂ ಸ್ವಂ ಸಹಿತೈಃ ಸುತೈಃ ।
ಸಸ್ಮಾರ ಸ ನೃಪಶ್ರೇಷ್ಠಸ್ತತಃ ಪ್ರೋವಾಚ ನಂದಿನೀಂ ॥ ೭೩ ॥
ನೃಪಃ ಕಲಶನಾಮಾಽಹಂ ಹೈಹಯಾನ್ವಯಸಂಭವಃ ।
ಶಪ್ತೋ ದುರ್ವಾಸಸಾ ಪೂರ್ವಂ ಕಸ್ಮಿಂಶ್ಚಿತ್ಕಾರಣಾಂತರೇ ॥ ೭೪ ॥
ತತಃ ಪ್ರಸಾದಿತೇನೋಕ್ತಸ್ತೇನಾಽಹಂ ನಂದಿನೀ ಯದಾ ।
ದರ್ಶಯಿಷ್ಯತಿ ತಲ್ಲಿಂಗಂ ತದಾ ಮುಕ್ತಿರ್ಭವಿಷ್ಯತಿ ॥ ೭೫ ॥
ಸಾ ನೂನಂ ನಂದಿನೀ ತ್ವಂ ಹಿ ಜ್ಞಾತಾ ಶಾಪಾಂತತೋ ಮಯಾ ।
ತತ್ತ್ವಂ ಬ್ರೂಹಿ ಪ್ರದೇಶೋಽಯಂ ಕತಮೋ ವರಧೇನುಕೇ ॥ ೭೬ ॥
ಯೇನ ಗಚ್ಛಾಮ್ಯಹಂ ಭೂಯಃ ಸ್ವಗೃಹಂ ಪ್ರತಿ ಸತ್ವರಂ ।
ಮಾರ್ಗಂ ದೃಷ್ಟ್ವಾ ಮಹಾಭಾಗೇ ಮಾನುಷಂ ಪ್ರಾಪ್ಯ ಕಂಚನ ॥ ೭೭ ॥

ನಂದಿನ್ಯುವಾಚ :—

ಚಮತ್ಕಾರಪುರಕ್ಷೇತ್ರಮೇತತ್ಪಾತಕನಾಶನಂ ।
ಸರ್ವತೀರ್ಥಮಯಂ ರಾಜನ್ ಸರ್ವಕಾಮಪ್ರದಾಯಕಂ ॥ ೭೮ ॥
ಯದನ್ಯತ್ರ ಭವೇಚ್ಛ್ರೇಯೋ ವತ್ಸರೇಣ ತಪಸ್ವಿನಾಂ ।
ದಿನೇನೈವಾಽತ್ರ ತತ್ಸಮ್ಯಗ್ಜಾಯತೇ ನಾಽತ್ರ ಸಂಶಯಃ ॥ ೭೯ ॥

---

೭೩. ಆ ರಾಜನು ದುರ್ವಾಸಮುನಿಯು ತನಗಿತ್ತ ಶಾಪವನ್ನೂ, ಸುತಸಹಿತವಾದ ರಾಜ್ಯವನ್ನೂ ಸ್ಮರಿಸಿ ನಂದಿನಿಯನ್ನು ಕುರಿತು ಹೀಗೆಂದನು.

೭೪. ನಾನು ಹೈಹಯವಂಶದಲ್ಲಿ ಜನಿಸಿದ ಕಲಶನೆಂಬ ರಾಜನು. ಯಾವುದೊ ಒಂದು ಕಾರಣದಿಂದ ಹಿಂದೆ ದುರ್ವಾಸಮುನಿಯು ನನಗೆ ಶಾಪವನ್ನಿತ್ತನು.

೭೫. ಅನಂತರ ಸಂತೋಷಗೊಳಿಸಲ್ಪಟ್ಟ ಅವನು ನಂದಿನಿಯು ನಿನಗೆ ಶಿವಲಿಂಗವನ್ನು ತೋರಿಸಿದಾಗ ಶಾಪಮೋಕ್ಷವಾಗುವುದೆಂದು ಹೇಳಿದ್ದನು.

೭೬. ನನ್ನ ಶಾಪವು ಈಗ ಅವಸಾನಗೊಂಡದ್ದರಿಂದ ನೀನು ನಿಶ್ಚಯವಾಗಿಯೂ ಆ ನಂದಿನಿಯೆ ಆಗಿರುವೆ. ಆದುದರಿಂದ ನೀನು ಇದು ಯಾವ ಪ್ರದೇಶವೆಂಬುದನ್ನು ಹೇಳು.

೭೭. ಅದರಿಂದ ನಾನು ಬೇಗನೆ ದಾರಿಯನ್ನು ನೋಡಿ ಒಬ್ಬ ಮನುಷ್ಯನನ್ನು ಹೊಂದಿ ನನ್ನ ಮನೆಗೆ ಹೋಗುವೆನು.

೭೮. ನಂದಿನಿಯು ಹೇಳುತ್ತದೆ:—ದೊರೆಯೆ! ಇದು ಪಾಪವನ್ನು ಪರಿಹರಿಸುವುದೂ, ಸಮಸ್ತ ತೀರ್ಥರೂಪವೂ, ಸಕಲೇಷ್ಟಾರ್ಥಗಳನ್ನು ನೀಡುವುದೂ ಆದ ಚಮತ್ಕಾರಪುರಕ್ಷೇತ್ರವಾಗಿದೆ.

೭೯. ಬೇರೆ ಕಡೆಯಲ್ಲಿ ತಪಸ್ವಿಗಳಿಗೆ ಒಂದು ವರ್ಷದಲ್ಲಾಗುವ ಶ್ರೇಯಸ್ಸು ಇಲ್ಲಿ ಒಂದು ದಿನದಲ್ಲಿಯೇ ದೊರೆಯುವುದು ನಿಶ್ಚಯ.

ಏವಂ ಮತ್ವಾ ಮಯಾ ಲಿಂಗಂ ಸ್ನಾಪಿತಂ ಪಯಸಾ ಸದಾ ।
ಏತದ್ಯೂಥಂ ಪರಿತ್ಯಜ್ಯ ಭಕ್ತ್ಯಾ ಪೂತೇನ ಚೇತಸಾ ॥ ೮೦ ॥

ರಾಜೋವಾಚ :—

ಗಚ್ಛ ನಂದಿನಿ ಭದ್ರಂ ತೇ ನಿಜಂ ಪ್ರಾಪ್ನುಹಿ ಬಾಲಕಂ ।
ಗೋಕುಲಂ ಚ ಸಖೀಃ ಸ್ವಾಶ್ಚ ತಥಾಽನ್ಯಂ ಚ ಸುಹೃಜ್ಜನಂ ॥ ೮೧ ॥
ಏತತ್ಕ್ಷೇತ್ರಂ ಮಯಾ ಪೂರ್ವಂ ಬ್ರಾಹ್ಮಣಾನಾಂ ಮುಖಾಚ್ಛ್ರುತಂ ।
ವಾಂಛಿತಂ ಚ ಸದಾ ಪ್ರಷ್ಟುಂ ನ ಚ ದ್ರಷ್ಟುಂ ಪ್ರಪಾರಿತಂ ॥ ೮೨ ॥
ರಾಜ್ಯಕರ್ಮಪ್ರಸಕ್ತೇನ ಭೋಗಾಸಕ್ತೇನ ನಂದಿನಿ ।
ಸ್ವಯಮೇವಾಽಧುನಾ ಲಬ್ಧಂ ನಾಽಹಂ ಸಂತ್ಯಕ್ತುಮುತ್ಸಹೇ ॥ ೮೩ ॥
ದಿಷ್ಟ್ಯಾ ಮೇ ಮುನಿನಾ ತೇನ ದತ್ತಃ ಶಾಪೋ ಮಹಾತ್ಮನಾ ।
ಕಥಂ ಸ್ಯಾದನ್ಯಥಾ ಪ್ರಾಪ್ತಿಃ ಕ್ಷೇತ್ರಸ್ಯಾಽಸ್ಯ ಸುಶೋಭನೇ ॥ ೮೪ ॥

ಸೂತ ಉವಾಚ :—

ಏವಮುಕ್ತ್ವಾ ಮಹೀಪಾಲೋ ನಂದಿನೀಂ ತಾಂ ವಿಸೃಜ್ಯ ಚ ।
ಸ್ಥಿತಸ್ತತ್ರೈವ ತಲ್ಲಿಂಗಂ ಧ್ಯಾಯಮಾನೋ ದಿವಾನಿಶಂ ॥ ೮೫ ॥
ಪ್ರಾಸಾದಂ ತತ್ಕೃತೇ ಮುಖ್ಯಂ ವಿಧಾಯಾದ್ಭುತದರ್ಶನಂ ।
ಕೈಲಾಸಶಿಖರಾಕಾರಂ ತಪಸ್ತೇಪೇ ತದಗ್ರತಃ ॥ ೮೬ ॥

---

೮೦. ನಾನು ಇದನ್ನರಿತು ಭಕ್ತಿಯಿಂದ ಪವಿತ್ರವಾದ ಮನಸ್ಸಿನಿಂದ ಈ ಹಿಂಡನ್ನು ತ್ಯಜಿಸಿ ಈ ಶಿವಲಿಂಗಕ್ಕೆ ಹಾಲಿನಿಂದ ಅಭಿಷೇಕ ಮಾಡಿದೆನು.

೮೧. ರಾಜನು ಹೇಳುತ್ತಾನೆ:—ನಂದಿನಿ! ಇನ್ನು ನೀನು ಹೊರಡು. ನಿನಗೆ ಮಂಗಳವಾಗಲಿ. ಬಾಲಕನಾದ ನಿನ್ನ ಪುತ್ರನನ್ನೂ, ಗೋಕುಲವನ್ನೂ, ಸಖಿಯರನ್ನೂ, ಇತರ ಮಿತ್ರರನ್ನೂ ಸೇರು.

೮೨–೮೩. ನಾನು ಹಿಂದೆ ಬ್ರಾಹ್ಮಣರ ಮುಖದಿಂದ ಈ ಕ್ಷೇತ್ರವಿಚಾರವನ್ನು ಕೇಳಿರುವೆನು. ಯಾವಾಗಲೂ ಇದನ್ನು ಕೇಳಲು ಅಪೇಕ್ಷಿಸಿದೆನು. ರಾಜ್ಯಕರ್ಮ, ಭೋಗಗಳಲ್ಲಿ ಆಸಕ್ತನಾದ ನಾನು ಇದನ್ನು ನೋಡಲು ಸಮರ್ಥನಾಗಲಿಲ್ಲ. ತಾನಾಗಿಯೇ ಸಿಕ್ಕಿದ ಇದನ್ನು ಬಿಡಲು ಅಪೇಕ್ಷಿಸುವುದಿಲ್ಲ.

೮೪. ಮಹಾತ್ಮನಾದ ಆ ಮುನಿಯು ನನಗೆ ಅದೃಷ್ಟವಶದಿಂದ ಶಾಪವನ್ನಿತ್ತನು. ಹಾಗಿಲ್ಲದಿದ್ದರೆ ನನಗೆ ಈ ಕ್ಷೇತ್ರವು ಹೇಗೆ ಲಭಿಸುವುದು?

೮೫. ಸೂತನು ಹೇಳುತ್ತಾನೆ:—ರಾಜನು ಹೀಗೆ ಹೇಳಿ ಆ ನಂದಿನಿಯನ್ನು ಕಳುಹಿಸಿ, ಹಗಲು ರಾತ್ರಿ ಆ ಶಿವಲಿಂಗವನ್ನೇ ಧ್ಯಾನಿಸುತ್ತ ಅಲ್ಲಿಯೇ ಇದ್ದನು.

೮೬. ಆ ಮಹೇಶ್ವರನಿಗಾಗಿ ಆಶ್ಚರ್ಯಕರವಾದ ನೋಟವುಳ್ಳುದೂ, ಕೈಲಾಸಶಿಖರದಂತಿರುವುದೂ ಆದ ಮುಖ್ಯವಾದ ಪ್ರಾಸಾದವನ್ನು ರಚಿಸಿ ಆ ಪರಶಿವನ ಮುಂದೆ ತಪಸ್ಸನ್ನು ಮಾಡತೊಡಗಿದನು.

ತತಸ್ತಸ್ಯ ಪ್ರಭಾವೇನ ಸ್ವಲ್ಪೈರೇವ ದಿನೈರ್ದ್ವಿಜಾಃ ।
ಸಂಪ್ರಾಪ್ತಃ ಪರಮಾಂ ಸಿದ್ಧಿಂ ದುರ್ಲಭಾಂ ಯಾಜ್ಞಿಕೈರಪಿ ॥ ೪೭ ॥
ತತ್ರ ಯಃ ಕಾರ್ತಿಕೇ ಮಾಸಿ ದೀಪಕಂ ಸಂಪ್ರಯಚ್ಛತಿ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥ ೪೮ ॥
ಮಾರ್ಗಶೀರ್ಷೇ ಚ ಸಂಪ್ರಾಪ್ತೇ ಗೀತನೃತ್ಯಾದಿಕಂ ನರಃ ।
ತದಗ್ರೇ ಕುರುತೇ ಭಕ್ತ್ಯಾ ಸ ಗಚ್ಛತಿ ಪರಾಂ ಗತಿಂ ॥ ೪೯ ॥
ಏತದ್ವಃ ಸರ್ವಮಾಖ್ಯಾತಂ ಸರ್ವಪಾತಕನಾಶನಂ ।
ಕಲಶೇಶ್ವರಮಾಹಾತ್ಮ್ಯಂ ವಿಸ್ತರೇಣ ದ್ವಿಜೋತ್ತಮಾಃ ॥ ೫೦ ॥
ಭಕ್ತ್ಯಾ ಪಠತಿ ಯಶ್ಚೈತಚ್ಛ್ರದ್ಧಯಾ ಪರಯಾ ಯುತಃ ।
ಸೋಽಪಿ ಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಲಶೇಶ್ವರಮಾಹಾತ್ಮ್ಯವರ್ಣನಂ"
ನಾಮೈಕಪಂಚಾಶತ್ತಮೋಽಧ್ಯಾಯಃ

---

೪೭. ದ್ವಿಜರೆ! ತರುವಾಯ ಆ ಮಹೇಶ್ವರನ ಪ್ರಭಾವದಿಂದ ಸ್ವಲ್ಪ ದಿನಗಳಲ್ಲಿಯೇ ಯಾಜ್ಞಿಕರಿಗೂ ದುರ್ಲಭವಾದ ಉತ್ತಮ ಸಿದ್ಧಿಯನ್ನು ಹೊಂದಿದನು.

೪೮. ಅಲ್ಲಿ ಕಾರ್ತಿಕ ಮಾಸದಲ್ಲಿ ದೀಪವನ್ನು ಹೊತ್ತಿಸುವವನು ಸಕಲ ಪಾಪಮುಕ್ತನಾಗಿ ಶಿವಲೋಕದಲ್ಲಿ ಪೂಜ್ಯನಾಗುವನು.

೪೯. ಮಾರ್ಗಶೀರ್ಷ ಮಾಸದಲ್ಲಿ ಆ ಶಿವನ ಮುಂದೆ ಗೀತ ನೃತ್ಯಾದಿಗಳನ್ನು ಭಕ್ತಿಯಿಂದ ಮಾಡುವವನು ಉತ್ತಮಗತಿಯನ್ನು ಪಡೆಯುವನು.

೫೦. ದ್ವಿಜವರ್ಯರೆ! ಸಕಲ ಪಾಪಗಳನ್ನೂ ನಿವಾರಿಸುವ ಕಲಶೇಶ್ವರ ಮಾಹಾತ್ಮ್ಯವನ್ನೆಲ್ಲ ವಿಸ್ತಾರವಾಗಿ ನಿಮಗೆ ಹೇಳಿರುವೆನು.

೫೧. ಇದನ್ನು ಅತಿ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಪಠಿಸುವವನು ಪಾಪಮುಕ್ತನಾಗಿ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಲಶೇಶ್ವರಮಾಹಾತ್ಮ್ಯವರ್ಣನ" ವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಪಂಚಾಶತ್ತಮೋಽಧ್ಯಾಯಃ

## ರುದ್ರಕೋಟಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಉಮಾಮಹೇಶ್ವರೌ ತತ್ರ ಸ್ಥಾಪಿತೌ ತೇನ ಭೂಭುಜಾ ।
ಪ್ರಾಸಾದಂ ಪರಮಂ ಕೃತ್ವಾ ಸಾಧುದೃಷ್ಟಿಸುಖಪ್ರದಂ ॥ ೧ ॥
ತಸ್ಯಾಽಗ್ರತಃ ಶುಭಂ ಕುಂಡಂ ತತ್ರ ಚೈವ ವಿನಿರ್ಮಿತಂ ।
ಸ್ವಚ್ಛೋದಕೇನ ಸಂಪೂರ್ಣಂ ಪದ್ಮಿನೀಖಂಡಮಂಡಿತಂ ॥ ೨ ॥
ಸ್ನಾತ್ವಾ ತತ್ರ ನರೋ ಭಕ್ತ್ಯಾ ತೌ ಪಶ್ಯೇದ್ಯಃ ಸಮಾಹಿತಃ ।
ಮಾಘ ಶುಕ್ಲಚತುರ್ದಶ್ಯಾಂ ನ ಸ ಭೂಯೋಽತ್ರ ಜಾಯತೇ ॥ ೩ ॥
ತಸ್ಯೈವ ಪೂರ್ವದಿಗ್ಭಾಗೇಽಗಸ್ತ್ಯ ಕುಂಡಸಮೀಪತಃ ।
ಅಸ್ತಿ ವಾಪೀ ಮಹಾಪುಣ್ಯಾ ಸರ್ವಪಾತಕನಾಶಿನೀ ॥ ೪ ॥
ತಸ್ಯಾಂ ಯಃ ಕುರುತೇ ಸ್ನಾನಂ ಮಾಸಿ ವೈ ಫಾಲ್ಗುನೇ ನರಃ ।
ಸೋಪವಾಸಃ ಸಿತಾಷ್ಟಮ್ಯಾಂ ವಾಂಛಿತಂ ಲಭತೇ ಚ ಸಃ ॥ ೫ ॥

---

### ಕನ್ನಡದ ಅನುವಾದ

#### ರುದ್ರಕೋಟಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ಕಲಶರಾಜನು ಅಲ್ಲಿ ಅತಿಶಯವಾಗಿ ನೇತ್ರಾನಂದವನ್ನುಂಟುಮಾಡುವ ಉತ್ತಮ ಪ್ರಾಸಾದವನ್ನು ನಿರ್ಮಿಸಿ ಉಮಾಮಹೇಶ್ವರರನ್ನು ಪ್ರತಿಷ್ಠೆಮಾಡಿದನು.

೨. ಅವರ ಮುಂದೆ ನಿರ್ಮಲ ಜಲದಿಂದ ತುಂಬಿರುವುದೂ, ಕಮಲಗಳ ಸಮೂಹಗಳಿಂದ ಅಲಂಕಾರಗೊಂಡುದೂ ಆದ ಮಂಗಳಕರವಾದ ಕುಂಡವನ್ನು ನಿರ್ಮಿಸಿದನು.

೩. ಮಾಘ ಶುಕ್ಲ ಚತುರ್ದಶೀ ದಿನ ಅಲ್ಲಿ ಭಕ್ತಿಯಿಂದ ಮಿಂದು ಸಾವಧಾನ ಮನಸ್ಸಿನಿಂದ ಆ ಉಮಾಮಹೇಶ್ವರರನ್ನು ದರ್ಶನಮಾಡುವ ಮಾನವನು ಮರಳಿ ಜನಿಸುವುದಿಲ್ಲ.

೪. ಆ ಕುಂಡದ ಪೂರ್ವದಿಕ್ಕಿನಲ್ಲಿ ಅಗಸ್ತ್ಯಕುಂಡದ ಹತ್ತಿರ ಅತಿಶಯ ಪುಣ್ಯಕರವೂ, ಸಮಸ್ತ ಪಾಪಗಳನ್ನು ನಾಶಗೊಳಿಸುವುದೂ ಆದ ಒಂದು ಕೊಳವಿದೆ.

೫. ಆ ವಾಪಿಯಲ್ಲಿ ಫಾಲ್ಗುಣ ಶುದ್ಧ ಅಷ್ಟಮೀ ದಿನ ಮಿಂದು ಉಪವಾಸ ಮಾಡುವ ಮಾನವನು ಇಷ್ಟಾರ್ಥವನ್ನು ಪಡೆಯುವನು.

ತಸ್ಯಾ ದಕ್ಷಿಣದಿಗ್ಭಾಗೇ ತತ್ರಾಽಸ್ತಿ ಕಪಿಲಾನದೀ ।
ಕಪಿಲೋ ಯತ್ರ ಸಂಪ್ರಾಪ್ತಃ ಸಿದ್ಧಿಂ ಸಾಂಖ್ಯಸಮುದ್ಭವಾಂ ॥ ೬ ॥
ಕಪಿಲಾಯಾಶ್ಚ ಪೂರ್ವೇಣ ಸಿದ್ಧಕ್ಷೇತ್ರಂ ಪ್ರಕೀರ್ತಿತಂ ।
ಯತ್ರ ಸಿದ್ಧಿಂ ಗತಾಃ ಸಿದ್ಧಾಃ ಪುರಾ ಶತಸಹಸ್ರಶಃ ॥ ೭ ॥
ಯೋ ಯಂ ಕಾಮಮಭಿಧ್ಯಾಯ ತಪಸ್ತತ್ರ ಸಮಾಚರೇತ್ ।
ಷಣ್ಮಾಸಾಭ್ಯಂತರೇ ನೂನಂ ಸ ತಮಾಪ್ನೋತಿ ಮಾನವಃ ॥ ೮ ॥
ತಸ್ಯಾಽಧಸ್ತಾಚ್ಛಿಲಾ ವಿಪ್ರಾ ವಿದ್ಯತೇ ವೈಷ್ಣವೀ ಶುಭಾ ।
ಭ್ರಮಂತೀ ಚತುರಸ್ರಾಚ ಸರ್ವಪಾತಕನಾಶಿನೀ ॥ ೯ ॥
ಸದಾ ಮಹಾನದೀ ತೋಯಕ್ಷಾಲಿತಾ ಮುಕ್ತಿದಾ ನೃಣಾಂ ।
ಗಂಗಾಯಮುನಯೋರ್ಮಧ್ಯೇ ಸನ್ನಿವಿಷ್ಟಾ ಸರಸ್ವತೀ ॥ ೧೦ ॥
ತ್ರಿವೇಣೀ ವಹತೇ ತಸ್ಯಾಃ ಪುರತೋ ಭುಕ್ತಿಮುಕ್ತಿದಾ ।
ತಸ್ಯಾಮುಪರಿದಗ್ಧಾನಾಂ ಬ್ರಾಹ್ಮಣಾನಾಂ ವಿಶೇಷತಃ ॥ ೧೧ ॥
ನೂನಂ ಮುಕ್ತಿರ್ಭವೇತ್ತೇಷಾಂ ಚಿತಾಭಸ್ಮನಿ ಗೋಷ್ಪದಂ ।
ದೃಶ್ಯತೇ ತತ್ರ ತಜ್ಜ್ಞಾತ್ವಾ ಸಂಸ್ಕಾರ್ಯಾ ಬ್ರಾಹ್ಮಣಾ ಮೃತಾಃ ॥ ೧೨ ॥
ತಸ್ಯೈವೋತ್ತರದಿಗ್ಭಾಗೇ ರುದ್ರಕೋಟಿರ್ದ್ವಿಜೋತ್ತಮಾಃ ।
ಅಸ್ತಿ ಸಂಪೂಜಿತಾ ವಿಪ್ರೈರ್ದಾಕ್ಷಿಣಾತ್ಯೈರ್ಮಹಾತ್ಮಭಿಃ ॥ ೧೩ ॥

---

೬. ಆ ವಾಪಿಯ ದಕ್ಷಿಣದಿಕ್ಕಿನಲ್ಲಿ ಕಪಿಲಾ ಎಂಬ ನದಿಯು ಇರುವುದು. ಅಲ್ಲಿ ಕಪಿಲಮುನಿಯು ಸಾಂಖ್ಯಯೋಗದಿಂದುದ್ಭವಿಸಿದ ಜ್ಞಾನಸಿದ್ಧಿಯನ್ನು ಪಡೆದಿರುವನು.

೭. ಕಪಿಲೆಯ ಪೂರ್ವದಿಕ್ಕಿನಲ್ಲಿ ಸಿದ್ಧಿಕ್ಷೇತ್ರವಿರುವುದು. ಅಲ್ಲಿ ಹಿಂದೆ ಅನೇಕ ಮಂದಿ ಸಿದ್ಧರು ಸಿದ್ಧಿಯನ್ನು ಹೊಂದಿರುವರು.

೮. ಯಾವ ಮನುಷ್ಯನು ಅಲ್ಲಿ ಯಾವ ಇಷ್ಟಾರ್ಥವನ್ನು ಚಿಂತಿಸಿ ತಪಸ್ಸನ್ನು ಮಾಡುವನೊ ಅವನು ಆರು ತಿಂಗಳಲ್ಲಿ ನಿಶ್ಚಯವಾಗಿಯೂ ಅದನ್ನು ಹೊಂದುವನು.

೯–೧೨. ಅದರ ಕೆಳಗೆ ಸುತ್ತುತ್ತಿರುವುದೂ, ಚಚ್ಚೌಕನೆಯೂ, ಸಕಲ ಪಾಪ ನಾಶಕವೂ ಯಾವಾಗಲೂ ಮಹಾನದೀ ಜಲದಿಂದ ತೊಳೆಯಲ್ಪಟ್ಟುದೂ, ಮಾನವರಿಗೆ ಮುಕ್ತಿಯನ್ನೀಯುವುದೂ ಆದ ವೈಷ್ಣವ ಶಿಲೆಯಿರುವುದು. ಅದರ ಮುಂದೆ ಗಂಗಾ ಯಮುನಾ ನದಿಗಳ ನಡುವೆ ನೆಲೆಸಿರುವ ಭುಕ್ತಿಮುಕ್ತಿಗಳನ್ನು ಕೊಡುವ ಸರಸ್ವತೀ ನದಿಯು ಹರಿಯುತ್ತಿರುವುದು. ಆ ನದಿಯ ಮೇಲೆ ಗೋಷ್ಪದವು ಕಾಣುತ್ತಿರುವುದು. ಅದನ್ನರಿತು ಮೃತರಾದ ಬ್ರಾಹ್ಮಣರನ್ನು ಅಲ್ಲಿ ಸಂಸ್ಕರಿಸಿದರೆ ಅವರಿಗೆ ನಿಶ್ಚಯವಾಗಿಯೂ ಮೋಕ್ಷವು ಲಭಿಸುವುದು.

೧೩. ಆ ಗೋಷ್ಪದದ ಉತ್ತರ ದಿಕ್ಕಿನಲ್ಲಿ ದಕ್ಷಿಣದೇಶದ ಮಹಾತ್ಮರಾದ ಬ್ರಾಹ್ಮಣರು ಪೂಜಿಸಿದ ರುದ್ರಕೋಟಿಯಿರುವುದು.

ಮಹಾಯೋಗಿಸ್ವರೂಪೇಣ ದಾಕ್ಷಿಣಾತ್ಯಾದ್ವಿಜೋತ್ತಮಾಃ ।
ಚಮತ್ಕಾರಪುರೇ ಕ್ಷೇತ್ರೇ ಶ್ರುತ್ವಾ ಸ್ವಯಮುಮಾಪತಿಂ ॥ ೧೪ ॥
ತತಃ ಕೌತೂಹಲಾವಿಷ್ಟಾಃ ಶ್ರದ್ಧಯಾ ಪರಯಾ ಯುತಾಃ ।
ಕೋಟಿಸಂಖ್ಯಾದ್ರುತಂ ಜಗ್ಮುಸ್ತಸ್ಯ ದರ್ಶನವಾಂಛಯಾ ॥ ೧೫ ॥
ಅಹಂಪೂರ್ವಮಹಂಪೂರ್ವಂ ವೀಕ್ಷಯಿಷ್ಯಾಮಿ ತಂ ಹರಂ ।
ಇತಿ ಶ್ರದ್ಧಾಸಮೋಪೇತಾಶ್ಚಕ್ರುಸ್ತೇ ಶಪಥಂ ಗತಾಃ ॥ ೧೬ ॥
ಏತೇಷಾಂ ಮಧ್ಯತೋ ಯಸ್ತಂ ಮಹಾಯೋಗಿನಮೀಶ್ವರಂ ।
ಚರಮಂ ದೇವಮೀಕ್ಷೇತ ಭವಿಷ್ಯತಿ ಸ ಪಾಪಕೃತ್ ॥ ೧೭ ॥
ತತಸ್ತೇಷಾಮಭಿಪ್ರಾಯಂ ಜ್ಞಾತ್ವಾ ದೇವೋ ಮಹೇಶ್ವರಃ ।
ಭಕ್ತಿಪ್ರೀತೋ ಹಿತಾರ್ಥಾಯ ಕೋಟಿರೂಪೈರ್ವ್ಯವಸ್ಥಿತಃ ॥ ೧೮ ॥
ಹೇಲಯಾ ದರ್ಶನಂ ಪ್ರಾಪ್ತಃ ಸರ್ವೇಷಾಂ ದ್ವಿಜಸತ್ತಮಾಃ ।
ತತಃ ಪ್ರಭೃತಿ ತತ್ಸ್ಥಾನಂ ರುದ್ರಕೋಟೀತಿ ವಿಶ್ರುತಂ ॥ ೧೯ ॥
ತದರ್ಥಂ ಪಠಿತಃ ಶ್ಲೋಕೋ ನಾರದೇನ ಪುರಾದ್ವಿಜಾಃ ।
ರುದ್ರಾವರ್ತಂ ಸಮಾಲೋಕ್ಯ ಪ್ರಹೃಷ್ಟೇನ ದ್ವಿಜೋತ್ತಮಾಃ ॥ ೨೦ ॥
ಆಷಾಢೀಂ ಕಾರ್ತಿಕೀಂ ಮಾಘೀಂ ತಥಾ ಚೈತ್ರ ಸಮುದ್ಭವಾಂ ।
ಧನ್ಯಾಃ ಪೃಥಿವ್ಯಾಂ ಲಪ್ಸ್ಯಂತೇ ರುದ್ರಾವರ್ತೇ ಚತುರ್ದಶೀಂ ॥ ೨೧ ॥

---

೧೪–೧೭. ದಕ್ಷಿಣದೇಶದ ಕೋಟಿ ಜನರು ಚಮತ್ಕಾರಪುರಕ್ಷೇತ್ರದಲ್ಲಿ ಮಹಾಯೋಗಿ ಸ್ವರೂಪದಿಂದ ನೆಲೆಸಿರುವ ಶಂಕರನ ವಿಷಯವನ್ನು ಕೇಳಿ ಕುತೂಹಲಗೊಂಡವರಾಗಿ ಅತಿಶ್ರದ್ಧೆಯಿಂದ ಅವನನ್ನು ನೋಡಲು ಬೇಗನೆ ಹೊರಟರು. ಅವರು ನಮ್ಮಲ್ಲಿ ಮಹಾಯೋಗಿಸ್ವರೂಪನಾದ ಆ ಶಂಕರನನ್ನು ಕೊನೆಯಲ್ಲಿ ನೋಡುವವನು ಪಾಪಿಯಾಗುವನು ಎಂದು ಶಪಥಮಾಡಿ ನಾನು ಮುಂಚೆ ನೋಡುವೆನು, ನಾನು ಮುಂಚೆ ನೋಡುವೆನು ಎಂದು ಶ್ರದ್ಧೆಯಿಂದ ಹೋದರು.

೧೮–೧೯. ಮಹೇಶ್ವರನು ಆ ಬ್ರಾಹ್ಮಣರ ಅಭಿಪ್ರಾಯವನ್ನರಿತು ಭಕ್ತಿಯಿಂದ ಸಂತುಷ್ಟನಾಗಿ ಅವರ ಹಿತಕ್ಕಾಗಿ ಕೋಟಿರೂಪಗಳನ್ನು ತಾಳಿ ಅನಾಯಾಸವಾಗಿ ಅವರೆಲ್ಲರಿಗೂ ದರ್ಶನವನ್ನಿತ್ತನು. ಅದು ಮೊದಲ್ಗೊಂಡು ಆ ಸ್ಥಳವು ರುದ್ರಕೋಟಿಯೆಂದು ಪ್ರಸಿದ್ಧವಾಯಿತು.

೨೦. ಹಿಂದೆ ಈ ರುದ್ರಾವರ್ತವನ್ನು ನೋಡಿ ಸಂತೋಷಗೊಂಡ ನಾರದನು ಅದಕ್ಕಾಗಿ ಒಂದು ಶ್ಲೋಕವನ್ನು ಹೇಳಿದನು.

೨೧. ಭೂಮಿಯಲ್ಲಿ ಪುಣ್ಯವಂತರು ರುದ್ರಾವರ್ತದಲ್ಲಿ ಆಷಾಢ, ಕಾರ್ತಿಕ, ಮಾಘ, ಚೈತ್ರಮಾಸಗಳ ಚತುರ್ದಶಿಯನ್ನು ಹೊಂದುವರು.

ಆಜನ್ಮಶತಸಾಹಸ್ರಂ ಕೃತ್ವಾ ಪಾಪಂ ನರಃ ಕ್ಷಿತೌ ।
ರುದ್ರಾವರ್ತಂ ಸಮಾಲೋಕ್ಯ ವಿಪಾಪ್ಮತ್ವಂ ಪ್ರಪದ್ಯತೇ ॥ ೨೨ ॥
ರುದ್ರಾವರ್ತೇ ನರೋ ಗತ್ವಾ ದೃಷ್ಟ್ವಾ ಯೋಗೇಶ್ವರಂ ಹರಂ ।
ಶುಕ್ಲಪಕ್ಷೇ ಚತುರ್ದಶ್ಯಾಂ ವಿಪಾಪ್ಮಾ ಜಾಯತೇ ಧ್ರುವಂ ॥ ೨೩ ॥
ಯಸ್ತತ್ರ ಕುರುತೇ ಶ್ರಾದ್ಧಂ ಮಹಾಯೋಗಿಪುರೇ ದ್ವಿಜಾಃ ।
ರುದ್ರಾವರ್ತೇ ಸ ಚಾಪ್ನೋತಿ ಫಲಂ ಶತಮಖೋದ್ಭವಂ ॥ ೨೪ ॥
ಉಪವಾಸಪರೋ ಭೂತ್ವಾ ಯಃ ಕುರ್ಯಾದ್ರಾತ್ರಿಜಾಗರಂ ।
ಕಾಮಗೇನ ವಿಮಾನೇನ ಸ ಸ್ವರ್ಗೇ ಯಾತಿ ಮಾನವಃ ॥ ೨೫ ॥
ತತ್ರ ಯಃ ಕಪಿಲಾಂ ದದ್ಯಾದ್ಬ್ರಾಹ್ಮಣಾಯಾಹಿತಾಗ್ನಯೇ ।
ಸ ಗಣಃ ಸ್ಯಾನ್ನ ಸಂದೇಹೋ ಹರಸ್ಯ ದಯಿತಸ್ತಥಾ ॥ ೨೬ ॥
ಷಡಕ್ಷರಂ ಜಪೇದ್ಯಸ್ತು ಮಹಾಯೋಗಿಪುರಃಸ್ಥಿತಃ ।
ಮಂತ್ರಂ ತಸ್ಯ ಭವೇಚ್ಛ್ರೇಯಃ ಷಡ್ಗುಣಂ ರಾಜಸೂಯತಃ ॥ ೨೭ ॥
ಯಸ್ತಸ್ಯ ಪುರತೋ ಭಕ್ತ್ಯಾ ಜಪೇದ್ವಾ ಶತರುದ್ರಿಯಂ ।
ಚತುರ್ಣಾಮಪಿ ವೇದಾನಾಂ ಸೋಽಧೀತಾನಾಂ ಭಜೇತ್ಫಲಂ ॥ ೨೮ ॥

---

೨೨. ಮಾನವನು ಭೂಮಿಯಲ್ಲಿ ನೂರು ಜನ್ಮಗಳವರೆಗೆ ಪಾಪವನ್ನು ಮಾಡಿದ್ದರೂ ರುದ್ರಾವರ್ತವನ್ನು ನೋಡಿ ಪಾಪರಹಿತನಾಗುವನು.

೨೩. ಶುಕ್ಲಪಕ್ಷ ಚತುರ್ದಶೀ ದಿನ ಮಾನವನು ರುದ್ರಾವರ್ತಕ್ಕೆ ಹೋಗಿ ಯೋಗೀಶ್ವರನಾದ ಹರನನ್ನು ಸಂದರ್ಶಿಸಿದರೆ ನಿಷ್ಪಾಪನಾಗುವನು.

೨೪. ದ್ವಿಜರೆ! ಮಹಾಯೋಗಿಪುರದಲ್ಲಿರುವ ರುದ್ರಾವರ್ತದಲ್ಲಿ ಶ್ರಾದ್ಧ ಮಾಡಿದ ನರನು ನೂರು ಯಜ್ಞಗಳ ಫಲವನ್ನು ಹೊಂದುವನು.

೨೫. ಉಪವಾಸಮಾಡಿ ರಾತ್ರಿ ಜಾಗರಣೆಗೈಯುವವನು ಸ್ವೇಚ್ಛಾಚಾರಿಯಾಗಿ ವಿಮಾನದಿಂದ ಸ್ವರ್ಗಕ್ಕೆ ಹೋಗುವನು.

೨೬. ಅಲ್ಲಿ ಅಗ್ನಿಹೋತ್ರಿಯಾದ ಬ್ರಾಹ್ಮಣನಿಗೆ ಕಪಿಲಗೋವನ್ನು ದಾನಮಾಡುವವನು ಶಿವಗಣನಾಗಿ ಶಿವನಿಗೆ ಅತ್ಯಂತ ಪ್ರಿಯನಾಗುವನು.

೨೭. ಮಹಾಯೋಗೀಶ್ವರನ ಮುಂದೆ ನಿಂತು ಷಡಕ್ಷರ ಮಂತ್ರವನ್ನು ಜಪಿಸುವ ಮಾನವನಿಗೆ ರಾಜಸೂಯಯಾಗಕ್ಕಿಂತ ಆರರಷ್ಟು ಶ್ರೇಯಸ್ಸುಂಟಾಗುವುದು.

೨೮. ಅವನ ಮುಂದೆ ಭಕ್ತಿಯಿಂದ ಶತರುದ್ರಿಯವನ್ನು ಜಪಿಸುವವನು ನಾಲ್ಕು ವೇದಗಳನ್ನು ಅಧ್ಯಯನಮಾಡಿದ ಫಲವನ್ನು ಹೊಂದುವನು.

ಗೀತಂ ವಾ ಯದಿ ವಾ ನೃತ್ಯಂ ತತ್ಪುರಃ ಕುರುತೇ ನರಃ ।
ಸ ಸರ್ವೇಷಾಂ ಭಜೇಚ್ಛ್ರೇಯೋ ಮಖಾನಾಂ ನಾಽತ್ರ ಸಂಶಯಃ ॥೨೯॥
ಏವಮುಕ್ತ್ವಾ ದ್ವಿಜಶ್ರೇಷ್ಠಾಃ ಸ ಮುನಿರ್ಬ್ರಹ್ಮಸಂಭವಃ ।
ವಿರರಾಮ ತತೋ ಹೃಷ್ಟಸ್ತೀರ್ಥಯಾತ್ರಾಂ ಗತೋ ದ್ರುತಂ ॥ ೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರುದ್ರಕೋಟಿಮಾಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೨೯. ಅವನ ಮುಂದೆ ಗಾನ ಅಥವಾ ನೃತ್ಯವನ್ನು ಮಾಡುವ ಮಾನವನು ಸಕಲ ಯಜ್ಞಗಳ ಶ್ರೇಯಸ್ಸನ್ನು ಪಡೆಯುವನು. ಇದು ನಿಜ.

೩೦. ದ್ವಿಜವರ್ಯರೆ! ಬ್ರಹ್ಮಪುತ್ರನಾದ ಆ ನಾರದಮುನಿಯು ಹೀಗೆ ಹೇಳಿ ಸಂತೋಷದಿಂದ ತೀರ್ಥಯಾತ್ರೆಗೆ ಬೇಗನೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಹಾತ್ಮ್ಯದಲ್ಲಿ "ರುದ್ರಕೋಟಿಮಾಹಾತ್ಮ್ಯವರ್ಣನ"ವೆಂಬ
ಐವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಪಂಚಾಶತ್ತಮೋಽಧ್ಯಾಯಃ

## ಭ್ರೂಣಗರ್ತಾಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತತ್ರೈವೋಜ್ಜಯಿನೀ ಪೀಠಮಸ್ತಿ ಕಾಮಪ್ರದಂ ನೃಣಾಂ ।
ಪ್ರಭೂತಾಶ್ಚರ್ಯಸಂಯುಕ್ತಂ ಬಹುಸಿದ್ಧನಿಷೇವಿತಂ ॥ ೧ ॥
ಯಸ್ಯ ಮಧ್ಯಗತೋ ನಿತ್ಯಂ ಸ್ವಯಮೇವ ಮಹೇಶ್ವರಃ ।
ಮಹಾಕಾಲಸ್ವರೂಪೇಣ ಸ ತಿಷ್ಠತಿ ದ್ವಿಜೋತ್ತಮಾಃ ॥ ೨ ॥
ವೈಶಾಖ್ಯಾಂ ಯೋ ನರಸ್ತತ್ರ ಕೃತ್ವಾ ಶ್ರಾದ್ಧಂ ಸಮಾಹಿತಃ ।
ತತಃ ಪಶ್ಯತಿ ದೇವೇಶಂ ಮಹಾಕಾಲ ಇತಿ ಸ್ಮೃತಂ ।
ಪೂಜಯೇದ್ದಕ್ಷಿಣಾಂ ಮೂರ್ತಿಂ ಸಮಾಶ್ರಿತ್ಯ ದ್ವಿಜೋತ್ತಮಾಃ ॥ ೩ ॥
ದಶಪೂರ್ವಾನ್ದಶಾಽತೀತಾನಾತ್ಮಾನಂ ಚ ದ್ವಿಜೋತ್ತಮಾಃ ।
ಪುರುಷಾನ್ ಸ ಸಮುದ್ಧೃತ್ಯ ಶಿವಲೋಕೇ ಮಹೀಯತೇ ॥ ೪ ॥
ಯೋ ಯಂ ಕಾಮಮಭಿಧ್ಯಾಯ ತತ್ರ ಪೀಠಂ ಪ್ರಪೂಜಯೇತ್ ।
ಸಂಪೂಜ್ಯಯೋಗಿನೀವೃಂದಂ ಕನ್ಯಕಾವೃಂದಮೇವ ಚ ॥ ೫ ॥

---

## ಕನ್ನಡದ ಅನುವಾದ

### ಭ್ರೂಣಗರ್ತಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಅಲ್ಲಿಯೇ ಮಾನವರಿಗೆ ಇಷ್ಟಾರ್ಥವನ್ನು ಕೊಡುವುದೂ, ಅತ್ಯಂತ ಆಶ್ಚರ್ಯದಿಂದ ಕೂಡಿರುವುದೂ, ಅನೇಕಮಂದಿ ಸಿದ್ಧರಿಂದ ಸೇವಿಸಲ್ಪಟ್ಟುದೂ ಆದ ಉಜ್ಜಯಿನೀಪೀಠವಿದೆ.

೨. ಎಲೈ ದ್ವಿಜರೆ! ಇದರ ನಡುವೆ ಮಹೇಶ್ವರನು ಮಹಾಕಾಲನ ಸ್ವರೂಪದಿಂದ ಇರುವನು.

೩–೪. ಅಲ್ಲಿ ವೈಶಾಖಶುದ್ಧ ಪೂರ್ಣಿಮಾದಿನ ಶ್ರಾದ್ಧಮಾಡಿ ಮಹಾಕಾಲನನ್ನು ದರ್ಶನಮಾಡಿ ಪೂಜಿಸಿದ ಮಾನವನು ಹಿಂದಿನ ಮತ್ತು ಮುಂದಿನ ಹತ್ತು ತಲೆಯ ಪಿತೃಗಳನ್ನೂ, ತನ್ನನ್ನೂ ಉದ್ಧಾರಮಾಡಿ ಶಿವಲೋಕದಲ್ಲಿ ಪೂಜ್ಯನಾಗುವನು.

೫–೭. ಯಾವ ಮನುಷ್ಯನು ಯಾವ ಇಷ್ಟಾರ್ಥವನ್ನು ಚಿಂತಿಸಿ ಆ ಪೀಠವನ್ನೂ ಯೋಗಿನಿ ಮತ್ತು ಕನ್ಯೆಯರ ಸಮೂಹವನ್ನೂ ಪೂಜಿಸುವನೋ ಅವನು

ಸ ತತ್ಕೃತ್ಸ್ನಮವಾಪ್ನೋತಿ ಯದ್ಯಪಿ ಸ್ಯಾತ್ಸುದುರ್ಲಭಂ ।
ತತ್ರ ವೈಶಾಖಮಾಸಸ್ಯ ಪೌರ್ಣಿಮಾಸ್ಯಾಂ ಸಮಾಹಿತಃ ॥ ೬ ॥
ಶ್ರದ್ಧಾಯುಕ್ತೋ ನರೋ ಯೋ ವಾ ಉಪವಾಸಪರಃ ಶುಚಿಃ ।
ಕರೋತಿ ಜಾಗರಂ ತಸ್ಯ ಪುರತಃ ಶ್ರದ್ಧಯಾನ್ವಿತಃ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೭ ॥
ಕಿಂ ವ್ರತೈಃ ಕಿಂ ವೃಥಾದಾನೈಃ ಕಿಂ ಜಪೈರ್ನಿಯಮೇನ ವಾ ।
ಮಹಾಕಾಲಸ್ಯ ತೇ ಸರ್ವೇ ಕಲಾಂ ನಾರ್ಹಂತಿ ಷೋಡಶೀಂ ॥ ೮ ॥

ಸೂತ ಉವಾಚ :—

ತತ್ರೈವಾಽಸ್ತಿ ಮಹಾಭಾಗಾ ಭ್ರೂಣಗರ್ತೇತಿ ವಿಶ್ರುತಾ ।
ಗರ್ತಾ ಸುವಿಪುಲಾಕಾರಾ ಸರ್ವಪಾತಕನಾಶಿನೀ ॥ ೯ ॥
ಬ್ರಹ್ಮಹತ್ಯಾ ವಿನಿರ್ಮುಕ್ತಃ ಸೌದಾಸೋ ಯತ್ರ ಪಾರ್ಥಿವಃ ।
ಸ್ತ್ರೀ ಹತ್ಯಯಾ ವಿನಿರ್ಮುಕ್ತಃ ಸುಷೇಣೋ ವಸುಧಾಧಿಪಃ ॥ ೧೦ ॥

ಋಷಯ ಊಚುಃ :—

ಬ್ರಹ್ಮಹತ್ಯಾ ಕಥಂ ತಸ್ಯ ಸೌದಾಸಸ್ಯ ಮಹೀಪತೇಃ ।
ಬ್ರಹ್ಮಣ್ಯಸ್ಯಾಽಪಿ ಸಂಜಾತಾ ತದಸ್ಮಾಕಂ ಪ್ರಕೀರ್ತಯ ॥ ೧೧ ॥
ಶ್ರೂಯತೇ ಸ ಮಹೀಪಾಲೋ ಬ್ರಾಹ್ಮಣಾನಾಂ ಹಿತೇ ರತಃ ।
ಕರ್ಮಣಾ ಮನಸಾ ವಾಚಾ ಬ್ರಹ್ಮಘ್ನಃ ಸೋಽಭವತ್ಕಥಂ ॥ ೧೨ ॥

---

ಅದನ್ನು ದುರ್ಲಭವಾಗಿದ್ದರೂ ಸಂಪೂರ್ಣವಾಗಿ ಪಡೆಯುವನು. ಅಲ್ಲಿ ವೈಶಾಖ ಮಾಸದ ಹುಣ್ಣಿಮೆದಿನ ನರನು ಶ್ರದ್ಧೆಯಿಂದ ಉಪವಾಸಮಾಡಿ ಅವನ ಮುಂದೆ ಜಾಗರಣೆಮಾಡಿದರೆ ಜರಾಮರಣವಿಲ್ಲದ ಉತ್ತಮ ಸ್ಥಾನಕ್ಕೆ ತೆರಳುವನು.

೮. ವ್ರತ, ದಾನ, ಜಪ, ನಿಯಮ ಇವುಗಳಿಂದೇನು ಪ್ರಯೋಜನ? ಅವೆಲ್ಲವೂ ಮಹಾಕಾಲನ ದರ್ಶನದ ಷೋಡಶಕಲೆಗೂ ಸರಿಯಲ್ಲ.

೯. ಸೂತನು ಹೇಳುತ್ತಾನೆ :—ಅಲ್ಲಿಯೇ ವಿಶಾಲವಾದ ಆಕಾರವುಳ್ಳುದೂ, ಸಕಲಪಾಪಗಳನ್ನು ನಾಶಗೊಳಿಸುವುದೂ ಆದ ಭ್ರೂಣವೆಂಬ ಗರ್ತವಿದೆ.

೧೦. ಇಲ್ಲಿ ಸೌದಾಸನೆಂಬ ರಾಜನು ಬ್ರಹ್ಮಹತ್ಯೆಯಿಂದ ಮುಕ್ತನಾದನು. ಸುಷೇಣರಾಜನು ಸ್ತ್ರೀಹತ್ಯಾದೋಷದಿಂದ ಪಾರಾದನು.

೧೧. ಋಷಿಗಳು ಹೇಳುತ್ತಾರೆ :—ಬ್ರಹ್ಮನಿಷ್ಠನಾಗಿದ್ದರೂ ಸೌದಾಸ ರಾಜನಿಗೆ ಬ್ರಹ್ಮಹತ್ಯೆಯು ಹೇಗುಂಟಾಯಿತು ? ಅದನ್ನು ನಮಗೆ ಹೇಳು.

೧೨. ಆ ರಾಜನು ವಾಕ್ಕರ್ಮಮನಸ್ಸುಗಳಿಂದ ಬ್ರಾಹ್ಮಣರ ಹಿತದಲ್ಲಿ ಆಸಕ್ತನಾಗಿದ್ದನೆಂದು ಕೇಳಿದ್ದೇವೆ. ಅಂಥವನು ಬ್ರಹ್ಮಘ್ನನು ಹೇಗಾದನು ?

ವಿಮುಕ್ತಶ್ಚ ಕಥಂ ಭೂಯೋ ಭ್ರೂಣಗರ್ತಾಮುಪಾಶ್ರಿತಃ ।
ಸಾಽಪಿ ಗರ್ತಾ ಕಥಂ ಜಾತಾ ಸರ್ವಂ ನೋ ವದ ವಿಸ್ತರಾತ್ ॥ ೧೩ ॥
ಸೂತ ಉವಾಚ :—
ಯದಾ ಲಿಂಗಸ್ಯ ಪಾತೋಽಭೂದ್ದೇವದೇವಸ್ಯ ಶೂಲಿನಃ ।
ತದಾ ಸ ಲಜ್ಜಯಾವಿಷ್ಟೋ ಲಿಂಗಾಭಾವಾದ್ದ್ವಿಜೋತ್ತಮಾಃ ॥ ೧೪ ॥
ಕೃತ್ವಾಽತಿವಿಪುಲಾಂ ಗರ್ತಾಂ ಪ್ರವಿವೇಶ ತತಃ ಪರಂ ।
ನ ಕಸ್ಯಚಿತ್ತದಾತ್ಮಾನಂ ದರ್ಶಯಾಮಾಸ ಶೂಲಧೃಕ್ ॥ ೧೫ ॥
ಏವಂ ಸಾ ತತ್ರ ಸಂಜಾತಾ ಗರ್ತಾ ಬ್ರಾಹ್ಮಣಸತ್ತಮಾಃ ।
ಯಥಾ ತಸ್ಯಾಂ ವಿಪಾಪ್ಮಾಽಭೂತ್ಸೌದಾಸಸ್ತದ್ವದಾಮ್ಯಹಂ ॥ ೧೬ ॥
ಆಸೀನ್ಮಿತ್ರಸಹೋನಾಮ ರಾಜಾ ಪರಮಧಾರ್ಮಿಕಃ ।
ಸೌದಾಸಸ್ತತ್ಸುತಃ ಸಾಕ್ಷಾತ್ಸೂರ್ಯವಂಶ ಸಮುದ್ಭವಃ ॥ ೧೭ ॥
ತೇನೇಷ್ಟಂ ವಿಪುಲೈರ್ಯಜ್ಞೈಃ ಸುವರ್ಣವರದಕ್ಷಿಣೈಃ ।
ಅಸಂಖ್ಯಾತಾನಿ ದಾನಾನಿ ಪ್ರದತ್ತಾನಿ ಮಹಾತ್ಮನಾ ॥ ೧೮ ॥
ಕಸ್ಯಚಿತ್ತ್ವಥ ಕಾಲಸ್ಯ ಸತ್ರೇ ದ್ವಾದಶವಾರ್ಷಿಕೇ ।
ವರ್ತಮಾನೇ ಯಥಾನ್ಯಾಯಂ ವಿಧಿದೃಷ್ಟೇನ ಕರ್ಮಣಾ ॥ ೧೯ ॥
ಕ್ರೂರಾಕ್ಷಃ ಕ್ರೂರಬುದ್ಧಿಶ್ಚ ರಾಕ್ಷಸೌ ಬಲವತ್ತರೌ ।
ಯಜ್ಞವಿಘ್ನಾಯ ಸಂಪ್ರಾಪ್ತೌ ಸಂಪ್ರಾಪ್ತೇ ರಜನೀಮುಖೇ ॥ ೨೦ ॥

---

೧೩. ಭ್ರೂಣಗರ್ತವನ್ನಾಶ್ರಯಿಸಿ ಹೇಗೆ ಮುಕ್ತನಾದನು? ಆ ಗರ್ತವು ಹೇಗಾಯಿತು? ಎಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು.

೧೪–೧೫. ಸೂತನು ಹೇಳುತ್ತಾನೆ:—ಲಿಂಗವು ಭೂಪತನವಾದಕೂಡಲೇ ಶಂಕರನು ಲಜ್ಜೆಗೊಂಡು ವಿಶಾಲವಾದ ಕುಣಿಯನ್ನು ಮಾಡಿ ಅದನ್ನು ಪ್ರವೇಶಿಸಿ ತನ್ನನ್ನು ಯಾರಿಗೂ ತೋರಿಸಿಕೊಳ್ಳಲಿಲ್ಲ.

೧೬. ಬ್ರಾಹ್ಮಣವರ್ಯರೆ! ಹೀಗೆ ಆ ಗರ್ತವುಂಟಾಯಿತು. ಸೌದಾಸನು ಅದರಲ್ಲಿ ಮಿಂದು ಹೇಗೆ ಪಾಪರಹಿತನಾದನೆಂಬುದನ್ನು ಹೇಳುವೆನು.

೧೭. ಸೂರ್ಯವಂಶದಲ್ಲಿ ಪರಮಧಾರ್ಮಿಕನಾದ ಮಿತ್ರಸಹನೆಂಬ ದೊರೆ ಯಿದ್ದನು. ಸೌದಾಸನು ಅವನ ಮಗನು.

೧೮. ಅವನು ಸುವರ್ಣದಕ್ಷಿಣೆಯುಳ್ಳ ಅನೇಕ ಯಜ್ಞಗಳನ್ನುಮಾಡಿ ಅಸಂಖ್ಯಾತ ದಾನಗಳನ್ನು ಕೊಟ್ಟನು.

೧೯–೨೧. ಒಂದಾನೊಂದು ಕಾಲದಲ್ಲಿ ಹನ್ನೆರಡು ವರ್ಷದ ಸತ್ರವು ವಿಧಿಯಂತೆ ನಡೆಯುತ್ತಿರಲು ಸಂಧ್ಯಾಕಾಲದಲ್ಲಿ ಯಜ್ಞವನ್ನು ಹಾಳುಮಾಡಲು

ರಾಕ್ಷಸೈರ್ಬಹುಭಿಃ ಸಾರ್ಧಂ ತಥಾಽನ್ಯೈರ್ಭೂತಸಂಜ್ಞಿತೈಃ ।
ಪಿಶಾಚೈಶ್ಚ ದುರಾಧರ್ಷೈರ್ಯಜ್ಞವಿಧ್ವಂಸತತ್ಪರೈಃ ॥ ೨೧ ॥
ಅಥ ತೇ ರಾಕ್ಷಸಾಃ ಸರ್ವೇ ಕಿಂಚಿಚ್ಛಿದ್ರಮವೇಕ್ಷ್ಯ ಚ ।
ವಿವಿಶುರ್ಯಜ್ಞವಾಟಂ ತಂ ಪ್ರಸರ್ಪಂತಃ ಸಮಂತತಃ ॥ ೨೨ ॥
ನಿಘ್ನಂತೋ ಬ್ರಾಹ್ಮಣಶ್ರೇಷ್ಠಾನ್ ಭಕ್ಷಯಂತೋ ಹವೀಂಷಿ ಚ ।
ತಥಾಽನ್ಯಾನಿ ವಿಚಿತ್ರಾಣಿ ಯಜ್ಞಾರ್ಥೇ ಕಲ್ಪಿತಾನಿ ಚ ॥ ೨೩ ॥
ಏತಸ್ಮಿನ್ನಂತರೇ ತತ್ರ ಹಾಹಾಕಾರೋ ಮಹಾನಭೂತ್ ।
ಭಕ್ಷ್ಯಮಾಣೇಷು ವಿಪ್ರೇಷು ರಾಕ್ಷಸೈರ್ಬಲವತ್ತರೈಃ ॥ ೨೪ ॥
ತತೋ ಮಿತ್ರಸಹಃ ಕ್ರುದ್ಧಸ್ತ್ಯಕ್ತ್ವಾ ದೀಕ್ಷಾವ್ರತಂ ನೃಪಃ ।
ಆದಾಯ ಸಶರಂ ಚಾಪಂ ಧ್ವಂಸಯಾಮಾಸ ವೀಕ್ಷ್ಯ ತಾನ್ ॥ ೨೫ ॥
ಕೃತರಕ್ಷೋ ವಸಿಷ್ಠೇನ ಸ್ವಯಮೇವ ಪುರೋಧಸಾ ।
ಕ್ರೂರಾಕ್ಷಂ ಸೂದಯಾಮಾಸ ರಾಕ್ಷಸೈರ್ಬಹುಭಿಃ ಸಹ ॥ ೨೬ ॥
ಕ್ರೂರಬುದ್ಧಿರಥೋ ವೀಕ್ಷ್ಯ ಹತಂ ಶ್ರೇಷ್ಠಂ ಸಹೋದರಂ ।
ತಂ ಚ ಪಾರ್ಥಿವಶಾರ್ದೂಲಮಗಮ್ಯಂ ಬ್ರಹ್ಮತೇಜಸಾ ॥ ೨೭ ॥
ಹತಶೇಷಾನ್ ಸಮಾದಾಯ ರಾಕ್ಷಸಾನ್ ಬಲಸಂಯುತಃ ।
ಪಲಾಯನಂ ಭಯಾಚ್ಚಕ್ರೇ ಕ್ಷತಾಂಗಸ್ತಸ್ಯ ಸಾಯಕೈಃ ॥ ೨೮ ॥

---

ಕ್ರೂರಾಕ್ಷ, ಕ್ರೂರಬುದ್ಧಿಯೆಂಬ ಬಲಿಷ್ಠರಾದ ಇಬ್ಬರು ರಾಕ್ಷಸರು ಅನೇಕ ಮಂದಿ ರಾಕ್ಷಸರು, ಭೂತಗಳು, ಪಿಶಾಚಗಳು ಇವರೊಡನೆ ಬಂದರು.

೨೨–೨೩. ಬಳಿಕ ಆ ರಾಕ್ಷಸರು ಒಂದಾನೊಂದು ಅವಕಾಶವನ್ನು ನೋಡಿ ಬ್ರಾಹ್ಮಣರನ್ನು ಕೊಲ್ಲುತ್ತ, ಹವಿಸ್ಸುಗಳನ್ನೂ ಯಜ್ಞಕ್ಕಾಗಿ ಕಲ್ಪಿಸಿದ ಇತರ ನಾನಾವಿಧ ವಸ್ತುಗಳನ್ನೂ ಭಕ್ಷಿಸುತ್ತ ಸುತ್ತಲೂ ಸಂಚರಿಸುತ್ತ ಯಜ್ಞಶಾಲೆಯನ್ನು ಹೊಕ್ಕರು.

೨೪. ಬಲಿಷ್ಠರಾದ ರಾಕ್ಷಸರು ಬ್ರಾಹ್ಮಣರನ್ನು ಭಕ್ಷಿಸುತ್ತಿರಲು ದೊಡ್ಡ ಹಾಹಾಕಾರವುಂಟಾಯಿತು.

೨೫–೨೬. ಬಳಿಕ ಸೌದಾಸನು ಕುಪಿತನಾಗಿ ದೀಕ್ಷೆಯನ್ನು ತ್ಯಜಿಸಿ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಪುರೋಹಿತನಾದ ವಸಿಷ್ಠನಿಂದ್ಲ ರಕ್ಷೆಯನ್ನು ಹೊಂದಿ ಅನೇಕ ಮಂದಿ ರಾಕ್ಷಸರೊಡನೆ ಆ ಕ್ರೂರಾಕ್ಷನನ್ನು ಕೊಂದನು.

೨೭–೨೮. ಬಳಿಕ ಕ್ರೂರಬುದ್ಧಿಯು ಮೃತನಾದ ಸಹೋದರನನ್ನೂ, ಬ್ರಹ್ಮತೇಜಸ್ಸಿನಿಂದ ಅಗಮ್ಯನಾದ ರಾಜನನ್ನೂ ಕಂಡು ಮಡಿದುಳಿದ ರಾಕ್ಷಸರನ್ನೂ, ಸೈನ್ಯವನ್ನೂ ಕರೆದುಕೊಂಡು ರಾಜನ ಬಾಣದಿಂದ ಗಾಯಗೊಂಡವನಾಗಿ ಭಯದಿಂದ ಓಡಿಹೋದನು.

ತತಸ್ತದ್ವೈರಮಾಶ್ರಿತ್ಯ ಭ್ರಾತುರ್ಜ್ಯೇಷ್ಠಸ್ಯ ರಾಕ್ಷಸಃ ।
ಛಿದ್ರಮನ್ವೇಷಯಾಮಾಸ ತದ್ವಧಾರ್ಥಂ ದಿವಾನಿಶಂ ॥ ೨೯ ॥
ಏವಂ ಸಂವೀಕ್ಷ್ಯಮಾಣಸ್ಯ ತಸ್ಯ ಛಿದ್ರಂ ಮಹಾತ್ಮನಃ ।
ಸಮಾಪ್ತಿಮಗಮದ್ವಿಪ್ರಾ ಸತ್ರಂ ತದ್ದ್ವಾದಶಾಬ್ದಿಕಂ ॥ ೩೦ ॥
ನ ಸೂಕ್ಷ್ಮಮಪಿ ಸಂಪ್ರಾಪ್ತಂ ಛಿದ್ರಂ ತೇನ ದುರಾತ್ಮನಾ ।
ವಸಿಷ್ಠವಿಹಿತಾ ರಕ್ಷಾ ಸತ್ರೇ ತಸ್ಯ ಮಹೀಪತೇಃ ॥ ೩೧ ॥
ಅಥಾಽಸೌ ಬ್ರಾಹ್ಮಣಾನ್ ಸರ್ವಾನ್ ವಿಸೃಜ್ಯಾಹಿತದಕ್ಷಿಣಾನ್ ।
ಕೃತಾಂಜಲಿಪುಟೋ ಭೂತ್ವಾ ವಸಿಷ್ಠಮಿದಮಬ್ರವೀತ್ ॥ ೩೨ ॥
ಸ್ವಹಸ್ತೇನ ಗುರೋಽದ್ಯಾಽಹಂ ತ್ವಾಂ ಭೋಜಯಿತುಮುತ್ಸಹೇ ।
ಕ್ರಿಯತಾಂ ತತ್ಪ್ರಸಾದೋ ಮೇ ಭುಕ್ತ್ವಾಽದ್ಯ ಮಮ ಮಂದಿರೇ ॥ ೩೩ ॥
ಸೂತ ಉವಾಚ :—
ಸ ತಥೇತಿ ಪ್ರತಿಜ್ಞಾಯ ವಸಿಷ್ಠೋ ಮುನಿಸತ್ತಮಃ ।
ಕ್ಷಾಲಿತಾಂಘ್ರಿಃ ಸ್ವಯಂ ತೇನ ನಿವಿಷ್ಟೋ ಭೋಜನಾಯ ವೈ ॥ ೩೪ ॥
ಕ್ರೂರಬುದ್ಧಿರಥೋ ವೀಕ್ಷ್ಯ ತದರ್ಥಂ ಚಾಮಿಷಂ ಶುಭಂ ।
ಸುಸಂಸ್ಕೃತಂ ವಿಧಾನೇನ ಸೂಪಕಾರೈರ್ದ್ವಿಜೋತ್ತಮಾಃ ॥ ೩೫ ॥
ಉಖಾಂ ಕೃತ್ವಾ ತತಸ್ತಾದೃಕ್ತತ್ಪ್ರಮಾಣಾಮತರ್ಕಿತಾಂ ।
ಮಹಾಮಾಂಸಭೃತಾಂ ಕೃತ್ವಾ ತಾಂ ಜಹಾರಾಮಿಷಾನ್ವಿತಾಂ ॥ ೩೬ ॥

---

೨೯–೩೦. ತರುವಾಯ ಅವನು ಅಣ್ಣನ ವಧೆಯಿಂದ ವೈರವನ್ನು ಹೊಂದಿ ರಾಜನನ್ನು ಕೊಲ್ಲಲು ಹಗಲು ರಾತ್ರಿ ಅವಕಾಶವನ್ನು ಹುಡುಕಿದನು. ಅವನು ಹೀಗೆ ಅವಕಾಶವನ್ನು ನಿರೀಕ್ಷಿಸುತ್ತಿರಲು ಹನ್ನೆರಡುವರ್ಷದ ಆ ಸತ್ರವು ಮುಗಿಯಿತು.

೩೧. ಆ ರಾಜನ ಯಜ್ಞವನ್ನು ವಸಿಷ್ಠನು ರಕ್ಷಿಸುತ್ತಿದ್ದುದರಿಂದ ದುರಾತ್ಮನಾದ ಆ ರಾಕ್ಷಸನು ಸೂಕ್ಷ್ಮವಾದ ಅವಕಾಶವನ್ನೂ ಸಹ ಹೊಂದಲಿಲ್ಲ.

೩೨. ಬಳಿಕ ದೊರೆಯು ಬ್ರಾಹ್ಮಣರಿಗೆ ದಕ್ಷಿಣೆಯನ್ನಿತ್ತು ಕೈಮುಗಿದುಕೊಂಡು ವಸಿಷ್ಠನಿಗೆ ಇಂತೆಂದನು.

೩೩. ಗುರುವೆ! ನಾನು ಈದಿನ ನಿನಗೆ ನನ್ನ ಹಸ್ತದಿಂದಲೇ ಭೋಜನಮಾಡಿಸಲೆಳಸುವೆನು. ಆದ್ದರಿಂದ ನೀನು ನನ್ನ ಮನೆಯಲ್ಲಿ ಭುಂಜಿಸಿ ಅನುಗ್ರಹಮಾಡು.

೩೪. ಸೂತನು ಹೇಳುತ್ತಾನೆ:—ವಸಿಷ್ಠಮುನಿಯು ಹಾಗೆಯೇ ಆಗಲೆಂದು ಒಪ್ಪಿ ಕಾಲನ್ನು ತೊಳೆದುಕೊಂಡು ಭೋಜನಕ್ಕಾಗಿ ಕುಳಿತನು.

೩೫–೩೬. ದ್ವಿಜವರ್ಯರೆ! ತರುವಾಯ ಕ್ರೂರಬುದ್ಧಿಯು ಅಡಿಗೆಯವರು ಮುನಿವರ್ಯನಿಗಾಗಿ ಸಿದ್ಧಮಾಡಿದ ಒಳ್ಳೆಯ ಭೋಜ್ಯವಸ್ತುಗಳನ್ನು ನೋಡಿ ಮನುಷ್ಯಮಾಂಸದಿಂದ ತುಂಬಿದ ಅಂತಹ ಪಾತ್ರೆಯನ್ನು ರಚಿಸಿ ಆ ಸ್ಥಳದಲ್ಲಿಟ್ಟು ಅಡಿಗೆಯವರು ಮಾಡಿದ ಭೋಜನ ವಸ್ತುವನ್ನು ಅಪಹರಿಸಿದನು.

ಅಥಾಽಸೌ ಮುನಿಶಾರ್ದೂಲೋ ಭುಂಜಾನೋ ಬುಬುಧೇ ಹಿ ತತ್ ।
ಮಹಾಮಾಂಸಮಿತಿ ಕ್ರುದ್ಧಸ್ತತ್ರ ಪ್ರೋವಾಚ ಮನ್ಯುವಾನ್ ॥ ೩೭ ॥
ಮಹಾಮಾಂಸಾಶನಂ ಯಸ್ಮಾತ್ಕಾರಿತೋಽಹಂ ತ್ವಯಾಽಧಮ ।
ರಕ್ಷೋವದ್ರಾಕ್ಷಸಸ್ತಸ್ಮಾತ್ತ್ವಮದ್ಯೈವ ಭವಿಷ್ಯಸಿ ॥ ೩೮ ॥
ತತಃ ಸಂಶೋಧಯಾಮಾಸ ತಸ್ಯ ಮಾಂಸಸ್ಯ ಚಾಗಮಂ ।
ನಿಪುಣಂ ಸೂಪಕಾರಾಂಸ್ತಾನ್ ದೃಷ್ಟ್ವಾ ರಾಜಾ ಪೃಥಕ್ ಪೃಥಕ್ ॥೩೯॥
ತೇಽಬ್ರುವನ್ನೈತದಸ್ಮಾಭಿಃ ಶ್ರಪಿತಂ ಮಾಂಸಮೀದೃಶಂ ।
ಶ್ರದ್ಧೇಯತಾಂ ಮಹೀಪಾಲ ನಾಽನ್ಯೇನ ಮನುಜೇನ ವಾ ॥ ೪೦ ॥
ರಾಕ್ಷಸಂ ವಾ ಪಿಶಾಚಂ ವಾ ದಾನವಂ ವಾ ವಿನಾ ವಿಭೋ ।
ಏತಜ್ಜ್ಞಾತ್ವಾ ತತೋ ನಾಥ ಯದ್ಯುಕ್ತಂ ತತ್ಸಮಾಚರ ॥ ೪೧ ॥
ಏತಸ್ಮಿನ್ನಂತರೇ ತಸ್ಯ ನಾರದೋ ಮುನಿಸತ್ತಮಃ ।
ಸಮಾಗತ್ಯಾಽಬ್ರವೀತ್ಸರ್ವಂ ತದ್ರಾಕ್ಷಸವಿಚೇಷ್ಟಿತಂ ॥ ೪೨ ॥
ತಚ್ಛ್ರುತ್ವಾ ಕೋಪಮಾಪನ್ನಃ ಸ ರಾಜಾ ಶಪ್ತುಮುದ್ಯತಃ ।
ವಸಿಷ್ಠಂ ಸ್ವಕರೇ ಕೃತ್ವಾ ಜಲಂ ಸೌದಾಸಭೂಪತಿಃ ।
ಶಾಪೋದ್ಯತಂ ಚ ತಂ ದೃಷ್ಟ್ವಾ ನಾರದೋ ವಾಕ್ಯಮಬ್ರವೀತ್ ॥ ೪೩ ॥

---

೩೭. ವಸಿಷ್ಠಮುನಿಯು ಅದನ್ನು ಭುಂಜಿಸಿ ಮಹಾಮಾಂಸವೆಂದರಿತು ಕುಪಿತನಾಗಿ ಇಂತೆಂದನು.

೩೮. "ನೀಚ! ನೀನು ರಾಕ್ಷಸನಂತೆ ನನಗೆ ಮಹಾಮಾಂಸವನ್ನು ಭೋಜನಮಾಡಿಸಿದ್ದರಿಂದ ಈಗಲೇ ರಾಕ್ಷಸನಾಗುವೆ."

೩೯. ಬಳಿಕ ರಾಜನು ಅಡಿಗೆಯವರನ್ನು ಬೇರೆಬೇರೆಯಾಗಿ ಕರೆಯಿಸಿ ನೋಡಿ ಆ ಮಾಂಸವು ಹೇಗೆ ಬಂದಿತೆಂದು ಶೋಧಿಸಿದನು.

೪೦–೪೧. ಆ ಅಡಿಗೆಯವರು ಹೀಗೆಂದರು. "ಮಹಾರಾಜ! ಇದನ್ನು ನಾವಾಗಲಿ, ಇತರ ಮನುಷ್ಯನಾಗಲಿ ಬೇಯಿಸಲಿಲ್ಲ. ರಾಕ್ಷಸ, ಪಿಶಾಚ ಅಥವಾ ದಾನವನು ಬೇಯಿಸಿರಬೇಕು. ಇದನ್ನರಿತು ಯುಕ್ತವಾದುದನ್ನು ಆಚರಿಸು."

೪೨. ಈ ಸಮಯದಲ್ಲಿ ನಾರದನೆಂಬ ಮುನಿವರ್ಯನು ಅಲ್ಲಿಗೆ ಬಂದು ಆ ಕ್ರೂರಬುದ್ಧಿಯು ಆ ಕೆಲಸವನ್ನು ಮಾಡಿರುವನೆಂದನು.

೪೩. ಸೌದಾಸರಾಜನು ಅದನ್ನು ಕೇಳಿ ಕುಪಿತನಾಗಿ ಕೈಯಲ್ಲಿ ನೀರನ್ನು ಹಿಡಿದುಕೊಂಡು ವಸಿಷ್ಠನನ್ನು ಶಪಿಸಲುದ್ಯುಕ್ತನಾಗಲು ನಾರದನು ಅವನನ್ನು ನೋಡಿ ಹೀಗೆಂದನು.

ನಿಘ್ನಂತೋ ವಾ ಶಪಂತೋ ವಾ ದ್ವಿಷಂತೋ ವಾ ದ್ವಿಜಾತಯಃ ।
ನಮಸ್ಕಾರ್ಯಾ ಮಹೀಪಾಲ ತಥಾಽಪಿ ಸ್ವಹಿತೇಚ್ಛುನಾ ।
ಗುರುರೇಷ ಪುನರ್ಮಾನ್ಯಸ್ತವ ಪಾರ್ಥಿವ ಸತ್ತಮ ॥ ೪೪ ॥
ತಸ್ಮಾನ್ನಾರ್ಹಸಿ ಶಪ್ತುಂ ತ್ವಂ ಪ್ರತಿಶಾಪೇನ ಸನ್ಮುನಿಂ ।
ನಿಷಿದ್ಧಃ ಸ ತಥಾ ಭೂಪಸ್ತತಸ್ತತ್ಸಲಿಲಂ ಕರಾತ್ ।
ಪಾದಯೋಃ ಕೃತ್ಸ್ನಮುಪರಿ ಪ್ರಮುಮೋಚ ತತಃ ಪರಂ ॥ ೪೫ ॥
ಅಥ ತೌ ಚರಣೌ ತಸ್ಯ ತಪ್ತಶಾಪೋದಕಪ್ಲುತೌ ।
ದಗ್ಧೌ ಕೃಷ್ಣತ್ವಮಾಪನ್ನೌ ತತ್ಕ್ಷಣಾದ್ದ್ವಿಜಸತ್ತಮಾಃ ॥ ೪೬ ॥
ಕಲ್ಮಾಷಪಾದ ಇತ್ಯುಕ್ತಸ್ತತಃ ಪ್ರಭೃತಿ ಸ ಕ್ಷಿತೌ ।
ಭೂಪಾಲೋ ದ್ವಿಜಶಾರ್ದೂಲಾ ನಾಮ್ನಾ ತೇನ ವಿಶೇಷತಃ ॥ ೪೭ ॥

ಸೂತ ಉವಾಚ :—

ಏತಸ್ಮಿನ್ನಂತರೇ ವಿಪ್ರೋ ವಸಿಷ್ಠೋ ಲಜ್ಜಯಾನ್ವಿತಃ ।
ಜ್ಞಾತ್ವಾ ದತ್ತಂ ವೃಥಾಶಾಪಂ ತಸ್ಯ ಭೂಮಿಪತೇಸ್ತದಾ ॥ ೪೮ ॥
ಉವಾಚ ವ್ಯರ್ಥಃ ಶಾಪೋಽಯಂ ತವ ದತ್ತೋ ಮಯಾ ನೃಪ ।
ನ ಚ ಮೇ ಜಾಯತೇ ವಾಕ್ಯಮಸತ್ಯಂ ಹಿ ಕಥಂಚ ನ ॥ ೪೯ ॥
ತಸ್ಮಾತ್ತ್ವಂ ರಾಕ್ಷಸೋ ಭೂತ್ವಾ ಕಂಚಿತ್ಕಾಲಂ ನೃಪೋತ್ತಮ ।
ಸ್ವರೂಪಂ ಲಪ್ಸ್ಯಸೇ ಭೂಯೋ ಯಸ್ಮಿನ್ ಕಾಲೇ ಶೃಣುಷ್ವ ತಂ ॥ ೫೦ ॥

---

೪೪. ಮಹಾರಾಜ! ಬ್ರಾಹ್ಮಣರು ಕೊಲ್ಲಲಿ, ಶಪಿಸಲಿ ಅಥವಾ ದ್ವೇಷಿಸಲಿ. ಆದರೂ ತನಗೆ ಹಿತವನ್ನು ಬಯಸುವವನು ಅವರಿಗೆ ನಮಸ್ಕಾರಮಾಡಬೇಕು. ನಿನಗೆ ಗುರುವಾದ ಈ ವಸಿಷ್ಠನಾದರೋ ಪೂಜ್ಯನೇ ಆಗಿರುವನು.

೪೫–೪೬. ಆದ್ದರಿಂದ ಈ ವಸಿಷ್ಠಮುನಿವರ್ಯನಿಗೆ ಪ್ರತಿಶಾಪ ಕೊಡಲು ನೀನು ಅರ್ಹನಲ್ಲ. ಹಾಗೆ ಮುನಿಯು ತಡೆಯಲು ರಾಜನು ಆ ನೀರನ್ನೆಲ್ಲ ತನ್ನ ಕಾಲುಗಳ ಮೇಲೆ ಹಾಕಿದನು. ತರವಾಯ ಅವನ ಕಾಲುಗಳು ಶಾಪೋದಕದಿಂದ ದಗ್ಧವಾಗಿ ಕೂಡಲೇ ಕಪ್ಪಗಾದುವು.

೪೭. ಬ್ರಾಹ್ಮಣೋತ್ತಮರೆ! ಆ ರಾಜನು ಅದು ಮೊದಲ್ಗೊಂಡು ಭೂಮಿಯಲ್ಲಿ ಕಲ್ಮಾಷಪಾದನೆಂಬ ಹೆಸರಿನಿಂದ ಪ್ರಸಿದ್ಧನಾದನು.

೪೮–೪೯. ಸೂತನು ಹೇಳುತ್ತಾನೆ:—ಈ ಸಮಯದಲ್ಲಿ ವಸಿಷ್ಠಮುನಿಯು ತಾನು ಆ ರಾಜನಿಗೆ ವ್ಯರ್ಥವಾಗಿ ಶಾಪವನ್ನಿತ್ತೆನೆಂದು ನಾಚಿಕೆಗೊಂಡು ಅವನನ್ನು ಕುರಿತು ಹೀಗೆಂದನು. "ದೊರೆಯೆ! ನಾನು ನಿನಗೆ ವ್ಯರ್ಥವಾಗಿ ಶಾಪವನ್ನಿತ್ತೆನು. ನನ್ನ ಮಾತು ವ್ಯರ್ಥವಾಗುವುದಿಲ್ಲ.

೫೦. ಮಹಾರಾಜ! ಆದ್ದರಿಂದ ನೀನು ಸ್ವಲ್ಪಕಾಲ ರಾಕ್ಷಸನಾಗಿ ಮರಳಿ ಯಾವಾಗ ನಿನ್ನ ಮೊದಲಿನ ರೂಪವನ್ನು ಹೊಂದುವೆ ಎಂಬುದನ್ನು ಕೇಳು.

ಯದಾ ತ್ವಂ ಕ್ರೂರಬುದ್ಧಿಂ ತಂ ರಾಕ್ಷಸಂ ನಿಹನಿಷ್ಯಸಿ ।
ತದಾ ತ್ವಂ ಲಪ್ಸ್ಯಸೇ ಮೋಕ್ಷಂ ರಾಕ್ಷಸತ್ವಾತ್ಸುದಾರುಣಾತ್ ॥ ೫೧ ॥
ಸೂತ ಉವಾಚ :—
ಏತಸ್ಮಿನ್ನಂತರೇ ರಾಜಾ ಯಾತುಧಾನೋ ಬಭೂವ ಸಃ ।
ಊರ್ಧ್ವಕೇಶೋ ಮಹಾಕಾಯಃ ಕೃಷ್ಣದಂತೋ ಭಯಾನಕಃ ॥ ೫೨ ॥
ತತೋ ಜಘಾನ ವಿಪ್ರೇಂದ್ರಾನ್ರಾಕ್ಷಸಂ ಭಾವಮಾಶ್ರಿತಃ ।
ಯಜ್ಞಾನ್ವಿಧ್ವಂಸಯಾಮಾಸ ಮುನೀನಾಮಾಶ್ರಮಾನಪಿ ॥ ೫೩ ॥
ಕಸ್ಯಚಿತ್ತ್ವಥ ಕಾಲಸ್ಯ ಕ್ರೂರಬುದ್ಧಿಃ ಸ ರಾಕ್ಷಸಃ ।
ಜ್ಞಾತ್ವಾ ತಂ ರಾಕ್ಷಸೀಭೂತಮೇಕದಾಽಽಯುಧವರ್ಜಿತಂ ॥ ೫೪ ॥
ಭ್ರಾತುರ್ವಧಕೃತಂ ವೈರಂ ಸ್ಮರಮಾಣಸ್ತತಃ ಪರಂ ।
ತದ್ವಧಾರ್ಥಂ ಸಮಾಯಾತೋ ರಾಕ್ಷಸೈರ್ಬಹುಭಿರ್ವೃತಃ ॥ ೫೫ ॥
ತತಸ್ತಂ ವೇಷ್ಟಯಿತ್ವಾಽಪಿ ಸಮಂತಾದ್ರಾಕ್ಷಸೋ ನೃಪಂ ।
ಪ್ರೋವಾಚ ವಚನಂ ಕ್ರುದ್ಧೋ ನಾದೇನಾಪೂರಯನ್ ದಿಶಃ ॥ ೫೬ ॥
ತ್ವಯಾ ಯೋ ನಿಹತೋಽಸ್ಮಾಕಂ ಜ್ಯೇಷ್ಠೋ ಭ್ರಾತಾ ಸುದುರ್ಮತೇ ।
ವಸಿಷ್ಠಸ್ಯ ಬಲಾದ್ಯಜ್ಞೇ ತಸ್ಯಾಽದ್ಯ ಫಲಮಾಪ್ನುಹಿ ॥ ೫೭ ॥

---

೫೧. ನೀನು ಯಾವಾಗ ಆ ಕ್ರೂರಬುದ್ಧಿಯನ್ನು ವಧಿಸುವೆಯೋ ಆಗ ಈ ದಾರುಣವಾದ ರಾಕ್ಷಸತನದಿಂದ ಮುಕ್ತನಾಗುವೆ.”

೫೨. ಸೂತನು ಹೇಳುತ್ತಾನೆ :—ಈ ಸಮಯದಲ್ಲಿ ಆ ರಾಜನು ಉರ್ಧ್ವಕೇಶನೂ, ದೊಡ್ಡ ಶರೀರವುಳ್ಳವನೂ, ಕರಿಯ ದಂತವುಳ್ಳವನೂ, ಭಯಂಕರನೂ ಆದ ರಾಕ್ಷಸನಾದನು.

೫೩. ಬಳಿಕ ಆ ರಾಜನು ರಾಕ್ಷಸತ್ವವನ್ನು ಹೊಂದಿ ಬ್ರಾಹ್ಮಣೋತ್ತಮರನ್ನು ಕೊಂದನು. ಯಜ್ಞಗಳನ್ನೂ, ಮುನಿಗಳ ಆಶ್ರಮಗಳನ್ನೂ ಧ್ವಂಸ ಮಾಡಿದನು.

೫೪–೫೫. ಕೆಲವು ಕಾಲದಮೇಲೆ ಆ ಕ್ರೂರಬುದ್ಧಿ ರಾಕ್ಷಸನು ರಾಕ್ಷಸನಾಗಿರುವ ಆ ರಾಜನು ಆಯುಧರಹಿತನಾಗಿರುವುದನ್ನರಿತು ತನ್ನ ಅಣ್ಣನನ್ನು ವಧಿಸಿರುವುದನ್ನು ಸ್ಮರಿಸುತ್ತ ಅನೇಕ ರಾಕ್ಷಸರೊಡನೆ ಅವನನ್ನು ಕೊಲ್ಲಲು ಬಂದನು.

೫೬. ತರುವಾಯ ಆ ಕ್ರೂರಬುದ್ಧಿಯು ಆ ರಾಜನನ್ನು ಸುತ್ತಲೂ ಸುತ್ತಿ ಧ್ವನಿಯಿಂಥ ದಿಕ್ಕುಗಳನ್ನು ತುಂಬುತ್ತ ಕೋಪದಿಂದ ಇಂತೆಂದನು.

೫೭. “ದುರುಳ! ನೀನು ವಸಿಷ್ಠನ ಬಲದಿಂದ ನನ್ನ ಅಣ್ಣನನ್ನು ಕೊಂದಿರುವೆ, ಈಗ ಅದರ ಫಲವನ್ನು ಹೊಂದು.

ರಾಜೋವಾಚ :—

ಯದ್ಬ್ರವೀಷಿ ದುರಾಚಾರ ಕರ್ಮಣಾ ತತ್ಸಮಾಚರ ।
ಶಾರದಸ್ಯೇವ ಮೇಘಸ್ಯ ಗರ್ಜಿತಂ ತವ ನಿಷ್ಫಲಂ ॥ ೫೮ ॥
ಏವಮುಕ್ತ್ವಾ ಸಮಾದಾಯ ತತೋವೃಕ್ಷಂ ಸಪಾರ್ಥಿವಃ ।
ಪ್ರಾದ್ರವತ್ಸಂಮುಖಂ ತಸ್ಯ ಗರ್ಜಮಾನೋ ಯಥಾ ಘನಃ ॥ ೫೯ ॥
ಸೋಽಪಿ ವೃಕ್ಷಂ ಸಮುತ್ಪಾಟ್ಯ ಕ್ರೋಧಸಂರಕ್ತಲೋಚನಃ ।
ತ್ರಿಶಂಖಾಂ ಭೃಕುಟೀಂ ಕೃತ್ವಾ ತಸ್ಯಾಽಪ್ಯಭಿಮುಖಂ ಯಯೌ ॥ ೬೦ ॥
ಏವಂ ದ್ವಾವಪಿ ತೌ ಶೂರೌ ವೃಕ್ಷಯುದ್ಧಂ ಮಹಾಬಲೌ ।
ಕೃತವಂತೌ ವನೇ ತತ್ರ ಬಹುವೃಕ್ಷಕ್ಷಯಾವಹಂ ॥ ೬೧ ॥
ಅಥ ತಂ ಶ್ರಾಂತಮಾಲೋಕ್ಯ ಕ್ರೂರಬುದ್ಧಿಂ ಮಹೀಪತಿಃ ।
ಪ್ರಗೃಹ್ಯ ಪಾದಯೋರ್ವೇಗಾದ್ಭ್ರಾಮಯಾಮಾಸ ಪುಷ್ಕರೇ ॥ ೬೨ ॥
ತತಶ್ಚಾಸ್ಫೋಟಯಾಮಾಸ ಭೂಮೌ ಕೋಪಸಮನ್ವಿತಃ ।
ಚಕ್ರೇ ಚಾಮಿಷಖಂಡಂ ಸ ಪಿಷ್ಟ್ವಾ ಪಿಷ್ಟ್ವಾ ಮುಹುರ್ಮುಹುಃ ॥ ೬೩ ॥
ತಸ್ಮಿಂಸ್ತು ನಿಹತೇ ಶೂರೇ ರಾಕ್ಷಸೇ ಸ ಮಹೀಪತಿಃ ।
ರಾಕ್ಷಸತ್ವಾದ್ವಿನಿರ್ಮುಕ್ತೋ ಲೇಭೇ ಕಾಯಂ ನೃಪೋದ್ಭವಂ ॥ ೬೪ ॥

---

೫೮. ರಾಜನು ಹೇಳುತ್ತಾನೆ:—ದುಷ್ಟ! ನೀನು ಏನನ್ನು ಹೇಳುವೆಯೋ ಅದನ್ನು ಕಾರ್ಯದಿಂದ ತೋರಿಸು. ಶರತ್ಕಾಲದ ಮೋಡದಂತೆ ನಿನ್ನ ಗರ್ಜನೆಯು ನಿಷ್ಫಲವು.

೫೯. ಆ ರಾಜನು ಹೀಗೆ ಹೇಳಿ ಮರವನ್ನು ತೆಗೆದುಕೊಂಡು ಮೇಘದಂತೆ ಗರ್ಜಿಸುತ್ತ ಆ ಕ್ರೂರಬುದ್ಧಿಯ ಎದುರಾಗಿ ಓಡಿದನು.

೬೦. ಆ ಕ್ರೂರಬುದ್ಧಿಯೂ ಮರವನ್ನು ಕಿತ್ತುಕೊಂಡು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಹುಬ್ಬುಗಂಟನ್ನು ಹಾಕಿಕೊಂಡು ಅವನನ್ನು ಎದುರಿಸಿದನು.

೬೧. ಹೀಗೆ ಶೂರರಾದ ಆ ಇಬ್ಬರು ಬಲಿಷ್ಠರೂ ಆ ಕಾಡಿನಲ್ಲಿ ಅನೇಕ ಮರಗಳನ್ನು ನಾಶಗೊಳಿಸುವ ವೃಕ್ಷಯುದ್ಧವನ್ನೆಸಗಿದರು.

೬೨. ತರುವಾಯ ರಾಜನು ಕ್ರೂರಬುದ್ಧಿಯು ಬಳಲಿರುವುದನ್ನು ಕಂಡು ಅವನ ಕಾಲನ್ನು ಹಿಡಿದುಕೊಂಡು ಆಕಾಶದಲ್ಲಿ ತಿರುಗಿಸಿದನು.

೬೩. ಕೋಪದಿಂದ ಅವನನ್ನು ಭೂಮಿಗೆ ಅಪ್ಪಳಿಸಿ ಅನೇಕ ಬಾರಿ ತಿಕ್ಕಿ ಅವನ ಶರೀರವನ್ನು ಮಾಂಸದ ತುಂಡನ್ನಾಗಿಸಿದನು.

೬೪. ಶೂರನಾದ ಆ ರಾಕ್ಷಸನು ಹತನಾಗಲು ರಾಜನು ರಾಕ್ಷಸತ್ವದಿಂದ ಮುಕ್ತನಾಗಿ ರಾಜಶರೀರವನ್ನು ಹೊಂದಿದನು.

ತತಸ್ತೇ ರಾಕ್ಷಸಾಃ ಶೇಷಾಃ ಸಮಂತಾತ್ತಂ ಮಹೀಪತಿಂ ।
ಪರಿವಾರ್ಯ ಮಹಾವೃಕ್ಷೈರ್ಜಘ್ನುಃ ಪಾಷಾಣವೃಷ್ಟಿಭಿಃ ॥ ೬೫ ॥
ತತಸ್ತಾನಪಿ ಭೂಪಾಲೋ ಜಘಾನ ಪ್ರಹಸನ್ನಿವ ।
ವೃಕ್ಷಹಸ್ತಸ್ತು ವಿಶ್ರಬ್ಧೋ ಲೀಲಯಾ ದ್ವಿಜಸತ್ತಮಾಃ ॥ ೬೬ ॥
ತತಶ್ಚ ಸ್ವಪುರಂ ಪ್ರಾಪ್ತಃ ಸಂಪ್ರಹೃಷ್ಟತನೂರುಹಃ ।
ರಾಕ್ಷಸಾನಾಂ ವಧಂ ಕೃತ್ವಾ ಲಬ್ಧ್ವಾ ದೇಹಂ ಪುರಾತನಂ ॥ ೬೭ ॥
ತತಸ್ತಂ ತೇಜಸಾಹೀನಂ ದುರ್ಗಂಧೇನ ಸಮಾವೃತಂ ।
ಬ್ರಹ್ಮಹತ್ಯೋದ್ಭವೈಶ್ಚಿಹ್ನೈರನ್ಯೈರಪಿ ಪೃಥಗ್ವಿಧೈಃ ॥ ೬೮ ॥
ದೃಷ್ಟ್ವಾ ತೇ ಮಂತ್ರಿಣಸ್ತಸ್ಯ ಪುತ್ರಪೌತ್ರಾಸ್ತಥಾಪರೇ ।
ನೋಪಸರ್ಪಂತಿ ಭೂಪಾಲಂ ಪಾಪಸ್ಪರ್ಶಭಯಾನ್ವಿತಾಃ ॥ ೬೯ ॥
ಊಚುಶ್ಚ ಪಾರ್ಥಿವಶ್ರೇಷ್ಠ ನ ತ್ವಮರ್ಹಸಿ ಸಂಗಮಂ ।
ಕರ್ತುಂ ಸಾರ್ಧಮಿಹಾಸ್ಮಾಭಿರ್ಬ್ರಹ್ಮಹತ್ಯಾನ್ವಿತೋ ಯತಃ ॥ ೭೦ ॥
ತಸ್ಮಾದ್ವಸಿಷ್ಠಮಾಹೂಯ ಪ್ರಾಯಶ್ಚಿತ್ತಂ ಸಮಾಚರ ।
ಅಶುದ್ಧಂ ಶುದ್ಧಿಮಾಯಾತಿ ಯೇನ ಗಾತ್ರಮಿದಂ ತವ ॥ ೭೧ ॥
ತತಃ ಸಪಾರ್ಥಿವಸ್ತೂರ್ಣಂ ವಸಿಷ್ಠಂ ಮುನಿಪುಂಗವಂ ।
ಸಮಾಹೂಯಾಽಬ್ರವೀದ್ವಾಕ್ಯಂ ದೂರಸ್ಥೋ ವಿನಯಾನ್ವಿತಃ ॥ ೭೨ ॥

---

೬೫. ಬಳಿಕ ಉಳಿದ ರಾಕ್ಷಸರು ಆ ರಾಜನನ್ನು ಸುತ್ತುವರಿದು ದೊಡ್ಡ ಮರಗಳಿಂದಲೂ, ಕಲ್ಲುಗಳಿಂದಲೂ ಹೊಡೆದರು.

೬೬. ದ್ವಿಜವರ್ಯರೆ! ರಾಜನು ನಗುತ್ತಲೇ ಅವರನ್ನೂ ಮರಗಳಿಂದ ಅನಾಯಾಸವಾಗಿ ಕೊಂದನು.

೬೭. ಹೀಗೆ ರಾಜನು ಆ ರಾಕ್ಷಸರನ್ನು ಕೊಂದು ತನ್ನ ಹಿಂದಿನ ದೇಹವನ್ನು ಹೊಂದಿ ರೋಮಾಂಚಗೊಂಡವನಾಗಿ ತನ್ನ ಪಟ್ಟಣವನ್ನು ಸೇರಿದನು.

೬೮-೬೯. ತರುವಾಯ ತೇಜೋಹೀನನೂ, ದುರ್ಗಂಧಭರಿತನೂ, ಬ್ರಹ್ಮಹತ್ಯೆಯಿಂದುಂಟಾದ ವಿವಿಧ ಚಿಹ್ನೆಗಳಿಂದ ಕೂಡಿದವನೂ ಆದ ಆ ರಾಜನನ್ನು ನೋಡಿ ಅವನ ಮಂತ್ರಿಗಳೂ, ಪುತ್ರಪೌತ್ರರೂ ಪಾಪಸ್ಪರ್ಶಭಯದಿಂದ ಕೂಡಿದವರಾಗಿ ಅವನ ಹತ್ತಿರ ಬರಲಿಲ್ಲ.

೭೦. ಅವರು ಹೀಗೆಂದರು :—ದೊರೆಯೆ! ನೀನು ಬ್ರಹ್ಮಹತ್ಯೆಯಿಂದ ಕೂಡಿರುವುದರಿಂದ ನಮ್ಮೊಡನೆ ಸೇರಲು ಅರ್ಹನಲ್ಲ.

೭೧. ಆದ್ದರಿಂದ ವಸಿಷ್ಠ ಮುನಿಯನ್ನು ಕರೆಯಿಸಿ ಪ್ರಾಯಶ್ಚಿತ್ತವನ್ನಾಚರಿಸು. ಅದರಿಂದ ಅಶುದ್ಧವಾದ ನಿನ್ನೀ ಶರೀರವು ಶುದ್ಧವಾಗುವುದು.

೭೨. ಬಳಿಕ ದೊರೆಯು ವಸಿಷ್ಠಮುನಿವರ್ಯನನ್ನು ಕೂಡಲೇ ಕರೆಯಿಸಿ ದೂರದಲ್ಲಿ ನಿಂತು ವಿನಯದಿಂದ ಇಂತೆಂದನು.

ತವ ಪ್ರಸಾದತೋ ವಿಪ್ರ ಸ ಹತೋ ರಾಕ್ಷಸೋ ಮಯಾ ।
ಮುಕ್ತಶಾಪೋಽಸ್ಮಿ ಸಂಜಾತಃ ಪರಂ ಶೃಣು ವಚೋ ಮುನೇ ॥ ೭೩ ॥
ಮಮ ಗಾತ್ರಾತ್ಸುದುರ್ಗಂಧಃ ಸಮುದ್ಗಚ್ಛತಿ ಸರ್ವತಃ ।
ಭಾರಾಕ್ರಾಂತಾನಿ ಗಾತ್ರಾಣಿ ಸರ್ವಾಣ್ಯೇವಾಽಚಲಾನಿ ಚ ॥ ೭೪ ॥
ತತ್ಕಿಮೇತದ್ದ್ವಿಜಶ್ರೇಷ್ಠ ತೇಜೋಹಾನಿರತೀವ ಮೇ ।
ಮಂತ್ರಿಣೋಽಪಿ ತಥಾ ಪುತ್ರಾ ನ ಸ್ಪೃಶಂತಿ ಯತೋಽದ್ಯ ಮಾಂ ॥ ೭೫ ॥

ವಸಿಷ್ಠ ಉವಾಚ :—

ರಾಕ್ಷಸತ್ವಂ ಪ್ರಪನ್ನೇನ ತ್ವಯಾ ಪಾರ್ಥಿವಸತ್ತಮ ।
ಬ್ರಾಹ್ಮಣಾ ಬಹವೋ ಧ್ವಸ್ತಾಸ್ತಥಾ ವಿಧ್ವಂಸಿತಾ ಮಖಾಃ ।
ತೇಷಾಂ ತ್ವಂ ಪಾರ್ಥಿವಶ್ರೇಷ್ಠ ಸಂಸ್ಪೃಷ್ಟೋ ಬ್ರಹ್ಮಹತ್ಯಯಾ ॥ ೭೬ ॥

ರಾಜೋವಾಚ :—

ತದರ್ಥಂ ದೇಹಿ ಮೇ ವಿಪ್ರ ಪ್ರಾಯಶ್ಚಿತ್ತಂ ವಿಶುದ್ಧಯೇ ।
ಯೇನ ನಿರ್ಮುಕ್ತಪಾಪೋಽಹಂ ರಾಜ್ಯಂ ಪ್ರಾಪ್ನೋಮಿ ಚಾತ್ಮನಃ ॥ ೭೭ ॥

ವಸಿಷ್ಠ ಉವಾಚ :—

ಅತ್ರಾರ್ಥೇ ತೀರ್ಥಯಾತ್ರಾಂ ತ್ವಂ ಕುರು ಪಾರ್ಥಿವ ಸತ್ತಮ ।
ನಿರ್ಮಮೋ ನಿರಹಂಕಾರಸ್ತತಃ ಸಿದ್ಧಿಮವಾಪ್ಸ್ಯಸಿ ॥ ೭೮ ॥

---

೭೩. ಮುನಿಯೆ! ನಿನ್ನ ಅನುಗ್ರಹದಿಂದ ನಾನು ಆ ರಾಕ್ಷಸನನ್ನು ಕೊಂದೆನು. ಈಗ ಶಾಪರಹಿತನಾದೆನು. ಆದರೆ ನನ್ನೀ ಮಾತನ್ನು ಕೇಳು.

೭೪. ನನ್ನ ಶರೀರದಿಂದ ದುರ್ಗಂಧವುಂಟಾಗುತ್ತಿದೆ. ಅವಯವಗಳೆಲ್ಲ ಭಾರವಾಗಿ ನಿಶ್ಚಲವಾಗಿವೆ.

೭೫. ಮುನಿಯೆ! ನನ್ನೀಶರೀರವು ಹೀಗೆ ತೇಜಸ್ಸಿಲ್ಲದ್ದಾಗಲು ಕಾರಣವೇನು? ಮಂತ್ರಿಗಳೂ, ಪುತ್ರರೂ ನನ್ನನ್ನು ಮುಟ್ಟುವುದಿಲ್ಲವಲ್ಲ!

೭೬. ವಸಿಷ್ಠನು ಹೇಳುತ್ತಾನೆ:—ದೊರೆಯೆ! ರಾಕ್ಷಸನಾದ ನೀನು ಬಹು ಮಂದಿ ಬ್ರಾಹ್ಮಣರನ್ನು ಕೊಂದಿರುವೆ. ಹಾಗೆಯೇ ಯಜ್ಞಗಳನ್ನು ಹಾಳುಮಾಡಿರುವೆ. ಆದ್ದರಿಂದ ಬ್ರಹ್ಮಹತ್ಯೆಯನ್ನು ಹೊಂದಿರುವೆ.

೭೭. ರಾಜನು ಹೇಳುತ್ತಾನೆ:—ಮುನಿಯೆ! ಆದ್ದರಿಂದ ನನಗೆ ಅದಕ್ಕಾಗಿ ಪ್ರಾಯಶ್ಚಿತ್ತವನ್ನು ವಿಧಿಸು. ಅದರಿಂದ ನಾನು ಪಾಪರಹಿತನಾಗಿ ನನ್ನ ರಾಜ್ಯವನ್ನು ಪಡೆಯುವೆನು.

೭೮. ವಸಿಷ್ಠನು ಹೇಳುತ್ತಾನೆ:—ಪಾರ್ಥಿವೇಂದ್ರ! ನೀನು ಇದಕ್ಕಾಗಿ ಅಹಂಕಾರ ಮಮಕಾರವಿಲ್ಲದವನಾಗಿ ತೀರ್ಥಯಾತ್ರೆಯನ್ನು ಮಾಡು. ಅದರಿಂದ ಸಿದ್ಧಿಯನ್ನು ಪಡೆಯುವೆ.

ತತಃ ಸ ಪಾರ್ಥಿವಶ್ರೇಷ್ಠಃ ಸಂಯುತಾತ್ಮಾ ಜಿತೇಂದ್ರಿಯಃ ।
ಪ್ರಯಾಗಾದಿಷು ತೀರ್ಥೇಷು ಸ್ನಾನಂ ಚಕ್ರೇ ಸಮಾಹಿತಃ ॥ ೭೯ ॥
ನ ನಶ್ಯತಿ ಸ ದುರ್ಗಂಧೋ ನ ಚ ತೇಜಃ ಪ್ರವರ್ಧತೇ ।
ನ ಕಾಯೋ ಲಘುತಾಂ ಯಾತಿ ನಾಽಽಲಸ್ಯೇನ ವಿಮುಚ್ಯತೇ ॥ ೮೦ ॥
ತತಃ ಸಂಭ್ರಮಮಾಣಶ್ಚ ಕದಾಚಿದ್ದ್ವಿಜಸತ್ತಮಾಃ ।
ಚಮತ್ಕಾರಪುರೇ ಕ್ಷೇತ್ರೇ ಸ್ನಾನಾರ್ಥಂ ಸಮುಪಾಗತಃ ॥ ೮೧ ॥
ಸುಶ್ರಾಂತಃ ಕ್ಷುತ್ಪಿಪಾಸಾರ್ತೋ ನಿಶೀಥೇ ತಮಸಾವೃತೇ ।
ಗರ್ತಾಯಾಂ ಪತಿತೋಽಕಸ್ಮಾತ್ಪೂರ್ಣಾಯಾಂ ಪಯಸಾ ನೃಪಃ ॥ ೮೨ ॥
ಕೃಚ್ಛ್ರಾತ್ತತೋ ವಿನಿಷ್ಕ್ರಾಂತಸ್ತೀರ್ಥಾತ್ತಸ್ಮಾನ್ಮಹೀಪತಿಃ ।
ಯಾವತ್ಪಶ್ಯತಿ ಚಾತ್ಮಾನಂ ದ್ವಾದಶಾರ್ಕ ಸಮಪ್ರಭಂ ॥ ೮೩ ॥
ದುರ್ಗಂಧೇನ ಪರಿತ್ಯಕ್ತಂ ಸೋದ್ಯಮಂ ಲಘುತಾಂ ಗತಂ ।
ದೃಷ್ಟ್ವಾ ಚ ಚಿಂತಯಾಮಾಸ ನೂನಂ ಮುಕ್ತೋಽಸ್ಮಿ ಪಾತಕಾತ್॥ ೮೪ ॥
ಏತಸ್ಮಿನ್ನೇವ ಕಾಲೇತು ವಾಗುವಾಚಾಽಶರೀರಿಣೀ ।
ಹರ್ಷಯಂತೀ ಮಹೀಪಾಲಂ ವಿಮುಕ್ತಂ ಬ್ರಹ್ಮಹತ್ಯಯಾ ॥ ೮೫ ॥
ವಿಮುಕ್ತೋಽಸಿ ಮಹಾರಾಜ ಸಾಂಪ್ರತಂ ಪೂರ್ವಪಾತಕೈಃ ।
ತೀರ್ಥಸ್ಯಾಸ್ಯ ಪ್ರಭಾವೇನ ತಸ್ಮಾದ್ಗಚ್ಛ ನಿಜಂ ಗೃಹಂ ॥ ೮೬ ॥

---

೭೯. ಬಳಿಕ ಆ ನರೇಂದ್ರನು ಸ್ಥಿರಚಿತ್ತನೂ, ಜಿತೇಂದ್ರಿಯನೂ ಆಗಿ ಪ್ರಯಾಗಾದಿ ತೀರ್ಥಗಳಲ್ಲಿ ಸಾವಧಾನಮನಸ್ಸಿನಿಂದ ಮಿಂದನು.

೮೦. ಆದರೂ ದುರ್ಗಂಧವು ತೊಲಗಲಿಲ್ಲ. ತೇಜಸ್ಸು ಹೆಚ್ಚಲಿಲ್ಲ. ಕಾಯವು ಲಘುವಾಗಲಿಲ್ಲ. ಆಲಸ್ಯವು ಕಳೆಯಲಿಲ್ಲ.

೮೧. ದ್ವಿಜವರ್ಯರೆ! ಅವನು ಒಂದಾನೊಂದು ದಿನ ಸಂಚರಿಸುತ್ತ ಚಮತ್ಕಾರಪುರಕ್ಷೇತ್ರಕ್ಕೆ ಸ್ನಾನಕ್ಕಾಗಿ ಬಂದನು.

೮೨. ಬಳಲಿದವನೂ, ಹಸಿವು ಬಾಯಾರಿಕೆಗಳಿಂದ ಕೂಡಿದವನೂ ಆದ ಅವನು ಕತ್ತಲೆಯಿಂದ ಕೂಡಿದ ರಾತ್ರಿಯಲ್ಲಿ ಅಕಸ್ಮಾತ್ತಾಗಿ ನೀರಿನಿಂದ ತುಂಬಿರುವ ಭ್ರೂಣಗರ್ತದಲ್ಲಿ ಬಿದ್ದನು.

೮೩–೮೪. ಅವನು ಆ ತೀರ್ಥದಿಂದ ಅತಿ ಕಷ್ಟದಿಂದ ಹೊರಟು ದ್ವಾದಶಾದಿತ್ಯರಂತೆ ಕಾಂತಿಯುಳ್ಳುದೂ, ದುರ್ಗಂಧವಿಲ್ಲದಿರುವುದೂ, ಹಗುರವಾದುದೂ ಆದ ತನ್ನ ಶರೀರವನ್ನು ನೋಡಿ ಪಾಪಮುಕ್ತನಾಗಿರುವೆನೆಂದಾಲೋಚಿಸಿದನು.

೮೫. ಈ ಸಮಯದಲ್ಲಿ ಅಶರೀರವಾಣಿಯು ಬ್ರಹ್ಮಹತ್ಯೆಯಿಂದ ಮುಕ್ತನಾದ ರಾಜನನ್ನು ಸಂತೋಷಗೊಳಿಸುತ್ತ ಹೀಗೆಂದಿತು.

೮೬. "ಮಹಾರಾಜ! ನೀನು ಈಗ ಈ ತೀರ್ಥದ ಪ್ರಭಾವದಿಂದ ಹಿಂದಿನ ಪಾಪಗಳಿಂದ ವಿಮುಕ್ತನಾಗಿರುವೆ. ಆದ್ದರಿಂದ ನಿನ್ನ ಮನೆಗೆ ತೆರಳು.

ಅತ್ರ ಸನ್ನಿಹಿತೋ ನಿತ್ಯಂ ಭ್ರೂಣರೂಪೇಣ ಶಂಕರಃ ।
ಕೃಷ್ಣಪಕ್ಷೇ ವಿಶೇಷೇಣ ಚತುರ್ದಶ್ಯಾಂ ಮಹೀಪತೇ ॥ ೮೭ ॥
ಯದಾ ಪ್ರಪತಿತಂ ಲಿಂಗಂ ದೇವದೇವಸ್ಯ ಶೂಲಿನಃ ।
ದ್ವಿಜಶಾಪೇನ ಗರ್ತೈಷಾ ತದಾನೇನ ವಿನಿರ್ಮಿತಾ ॥ ೮೮ ॥
ಲಜ್ಜಿತೇನ ಸ್ವವಾಸಾರ್ಥಂ ಮಹದ್ದುಃಖಯುತೇನ ಚ ।
ಸತೀವಿಯೋಗಯುಕ್ತೇನ ಭ್ರೂಣತ್ವಂ ಪ್ರಗತೇನ ಚ ॥ ೮೯ ॥
ಸರ್ವಪಾಪಹರಾ ತೇನ ಗರ್ತೇಯಂ ಪೃಥಿವೀಪತೇ ।
ಭ್ರೂಣಗರ್ತೇತಿ ವಿಖ್ಯಾತಾ ತಸ್ಯ ನಾಮ್ನಾ ಜಗತ್ತ್ರಯೇ ॥ ೯೦ ॥

ಸೂತ ಉವಾಚ :—

ಏವಮುಕ್ತ್ವಾಽಥ ಸಾ ವಾಣೀ ವಿರರಾಮಾಂತರಿಕ್ಷಗಾ ।
ಸೋಽಪಿ ಪಾರ್ಥಿವಶಾರ್ದೂಲಃ ಪ್ರಹೃಷ್ಟಃ ಸ್ವಪುರಂ ಯಯೌ ॥ ೯೧ ॥
ತತಸ್ತಂ ಪಾಪನಿರ್ಮುಕ್ತಂ ತೇಜಸಾ ಭಾಸ್ಕರೋಪಮಂ ।
ದೃಷ್ಟ್ವಾ ಪುತ್ರಾಸ್ತಥಾ ಮರ್ತ್ಯಾಃ ಪ್ರಣೇಮುಸ್ತುಷ್ಟಿಸಂಯುತಾಃ ॥ ೯೨ ॥
ಸೋಽಪಿ ಬ್ರಾಹ್ಮಣಶಾರ್ದೂಲೋ ವಸಿಷ್ಠಸ್ತಂ ಮಹೀಪತಿಂ ।
ಸಮಭ್ಯೇತ್ಯ ತತಃ ಪ್ರಾಹ ಹರ್ಷಗದ್ಗದಯಾ ಗಿರಾ ॥ ೯೩ ॥

---

೮೭. ಇಲ್ಲಿ ಕೃಷ್ಣಪಕ್ಷದ ಚತುರ್ದಶೀದಿನ ಶಂಕರನು ಯಾವಾಗಲೂ ಭ್ರೂಣರೂಪದಿಂದ ಸನ್ನಿಹಿತನಾಗಿರುವನು.

೮೮–೮೯. ಬ್ರಾಹ್ಮಣರ ಶಾಪದಿಂದ ಶಂಕರನ ಲಿಂಗವು ಬೀಳಲು ಲಜ್ಜೆಗೊಂಡವನೂ, ದುಃಖಿತನೂ, ಪತ್ನೀರಹಿತನೂ ಆದ ಅವನು ಭ್ರೂಣತ್ವವನ್ನು ಹೊಂದಿ ತನ್ನ ವಾಸಕ್ಕಾಗಿ ಈ ಗರ್ತವನ್ನು ನಿರ್ಮಿಸಿದನು.

೯೦. ಆದ್ದರಿಂದ ಈ ಗರ್ತವು ಮೂರುಲೋಕಗಳಲ್ಲಿ ಸಕಲಪಾಪಗಳನ್ನು ಪರಿಹರಿಸುವ ಭ್ರೂಣಗರ್ತವೆಂದು ವಿಖ್ಯಾತವಾಯಿತು.

೯೧. ಸೂತನು ಹೇಳುತ್ತಾನೆ:—ಆ ಆಕಾಶವಾಣಿಯು ಹೀಗೆ ಹೇಳಿ ಸುಮ್ಮನಾಯಿತು. ಆ ರಾಜನೂ ಆನಂದಗೊಂಡವನಾಗಿ ತನ್ನ ಪಟ್ಟಣಕ್ಕೆ ಹೋದನು.

೯೨. ತರುವಾಯ ಪಾಪಮುಕ್ತನೂ, ತೇಜಸ್ಸಿನಿಂದ ಸೂರ್ಯನಂತಿರುವವನೂ ಆದ ಆ ರಾಜನನ್ನು ನೋಡಿ ಪುತ್ರರೂ, ಇತರ ನರರೂ ಸಂತೋಷಗೊಂಡವರಾಗಿ ನಮಸ್ಕಾರಮಾಡಿದರು.

೯೩. ಬ್ರಾಹ್ಮಣೋತ್ತಮನಾದ ಆ ವಸಿಷ್ಠ ಮುನಿಯು ಆ ರಾಜನೆಡೆಗೆ ಹೋಗಿ ಸಂತೋಷದ ಗದ್ಗದ ಧ್ವನಿಯಿಂದ ಇಂತೆಂದನು.

ದಿಷ್ಟ್ಯಾ ಮುಕ್ತೋಽಸಿ ರಾಜೇಂದ್ರ ಪಾಪಾದ್ಬ್ರಹ್ಮವಧೋದ್ಭವಾತ್ ।
ದಿಷ್ಟ್ಯಾ ತ್ವಂ ತೇಜಸಾಯುಕ್ತಃ ಪುನಃ ಪ್ರಾಪ್ತೋ ನಿಜಂಪುರಂ ॥ ೯೪ ॥
ತಸ್ಮಾತ್ಕೀರ್ತಯ ಭೂಪಾಲ ಕಸ್ಮಿಂಸ್ತೀರ್ಥೇ ಸಮಾಗತಃ ।
ತ್ವಂ ಮುಕ್ತಃ ಪಾತಕಾದ್ಘೋರಾದ್ಬ್ರಹ್ಮಹತ್ಯಾ ಸಮುದ್ಭವಾತ್ ॥ ೯೫ ॥
ತತಃ ಸ ಕಥಯಾಮಾಸ ಭ್ರೂಣಗರ್ತಾಸಮುದ್ಭವಂ ।
ವೃತ್ತಾಂತಂ ತಸ್ಯ ವಿಪ್ರರ್ಷೇರನುಭೂತಂ ಯಥಾ ತಥಾ ॥ ೯೬ ॥
ತತಸ್ತೇ ಮಂತ್ರಿಣೋ ವೃದ್ಧಾಃ ಸ ಚ ರಾಜಾ ಮುನೀಶ್ವರಃ ।
ಪುತ್ರಂ ಪ್ರತರ್ದನಂ ನಾಮ ರಾಜ್ಯೇ ಸಂಸ್ಥಾಪ್ಯ ತತ್ಕ್ಷಣಾತ್ ॥ ೯೭ ॥
ಭ್ರೂಣಗರ್ತಾಂ ಸಮಾಸಾದ್ಯ ತಾಮೇವ ದ್ವಿಜಸತ್ತಮಾಃ ।
ತಪಶ್ಚೇರುರ್ಮಹಾದೇವಂ ಧ್ಯಾಯಮಾನಾ ದಿವಾನಿಶಂ ॥ ೯೮ ॥
ಗತಾಶ್ಚ ಪರಮಾಂ ಸಿದ್ಧಿಂ ಕಾಲೇನಾಲ್ಪೇನ ದುರ್ಲಭಾಂ ।
ಭ್ರೂಣರೂಪಧರಂ ದೇವಂ ಪೂಜಯಿತ್ವಾ ಮಹೇಶ್ವರಂ ॥ ೯೯ ॥
ತತಃ ಪ್ರಭೃತಿ ಸಾ ಗರ್ತಾ ಪ್ರಖ್ಯಾತಾ ಧರಣೀತಲೇ ।
ಭ್ರೂಣಗರ್ತೇತಿ ವಿಪ್ರೇಂದ್ರಾಃ ಸರ್ವಪಾತಕನಾಶಿನೀ ॥ ೧೦೦ ॥

---

೯೪. ಮಹಾರಾಜ! ನೀನು ಅದೃಷ್ಟವಶದಿಂದ ಬ್ರಹ್ಮಹತ್ಯೆಯಿಂದ ಮುಕ್ತನಾಗಿರುವೆ. ಅದೃಷ್ಟವಶದಿಂದ ತೇಜಸ್ಸಿನಿಂದ ಸಹಿತನಾಗಿ ನಿನ್ನ ಪಟ್ಟಣವನ್ನು ಸೇರಿರುವೆ.

೯೫. ದೊರೆಯೆ! ನೀನು ಯಾವ ತೀರ್ಥಕ್ಕೆ ಬಂದು ಘೋರ ಬ್ರಹ್ಮಹತ್ಯಾದೋಷದಿಂದ ಮುಕ್ತನಾಗಿರುವೆ?

೯೬. ಬಳಿಕ ಅವನು ಆ ಮುನಿಗೆ ತಾನು ಅನುಭವಿಸಿದ ಭ್ರೂಣಗರ್ತದ ಸಮಾಚಾರವನ್ನು ಹೇಳಿದನು.

೯೭–೯೮. ಬಳಿಕ ವೃದ್ಧರಾದ ಆ ಮಂತ್ರಿಗಳೂ, ಆ ರಾಜನೂ, ವಸಿಷ್ಠಮುನಿಯೂ ಕೂಡಲೇ ಪ್ರತರ್ದನನೆಂಬ ಪುತ್ರನನ್ನು ರಾಜ್ಯದಲ್ಲಿ ಸ್ಥಾಪಿಸಿ ಅದೇ ಭ್ರೂಣಗರ್ತಕ್ಕೆ ಹೋಗಿ ಹಗಲು ರಾತ್ರಿ ಮಹೇಶ್ವರನನ್ನು ಧ್ಯಾನಿಸುತ್ತ ತಪಸ್ಸನ್ನು ಮಾಡಿದರು.

೯೯. ಅವರು ಭ್ರೂಣರೂಪವನ್ನು ಧರಿಸಿರುವ ಮಹೇಶ್ವರನನ್ನು ಪೂಜಿಸಿ ಅಲ್ಪಕಾಲದಲ್ಲಿಯೇ ಉತ್ತಮವಾದ ಸಿದ್ಧಿಯನ್ನು ಪಡೆದರು.

೧೦೦. ವಿಪ್ರವರ್ಯರೆ! ಅದು ಮೊದಲ್ಗೊಂಡು ಆ ಗರ್ತವು ಭೂಮಿಯಲ್ಲಿ ಸಕಲಪಾಪಗಳನ್ನು ಪರಿಹರಿಸುವ ಭ್ರೂಣಗರ್ತವೆಂದು ಪ್ರಸಿದ್ಧವಾಯಿತು.

ತತ್ರ ಕೃಷ್ಣ ಚತುರ್ದಶ್ಯಾಂ ಯಃ ಶ್ರಾದ್ಧಂ ಕುರುತೇ ನರಃ ।
ಸ ಪಿತೄಂಸ್ತಾರಯೇಸ್ನೂನಂ ದಶಪೂರ್ವಾನ್ದಶಾಽಪರಾನ್ ॥ ೧೦೧ ॥
ತಸ್ಮಾತ್ಸರ್ವಪ್ರಯತ್ನೇನ ತತ್ರ ಶ್ರಾದ್ಧಂ ಸಮಾಚರೇತ್ ।
ಸ್ನಾನಂ ಚ ಬ್ರಾಹ್ಮಣಶ್ರೇಷ್ಠಾ ದಾನಂ ವಾಽಪಿ ಸ್ವಶಕ್ತಿತಃ ॥ ೧೦೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಭ್ರೂಣಗರ್ತಾಮಾಹಾತ್ಮ್ಯವರ್ಣನಂ"
ನಾಮ ತ್ರಿಪಂಚಾಶತ್ತಮೋಽಧ್ಯಾಯಃ

---

೧೦೧. ಅಲ್ಲಿ ಕೃಷ್ಣಚತುರ್ದಶೀದಿನ ಶ್ರಾದ್ಧಮಾಡಿದ ಮಾನವನು ಮುಂದಿನ ಮತ್ತು ಹಿಂದಿನ ಹತ್ತು ಮಂದಿ ಪಿತೃಗಳನ್ನು ಉದ್ಧರಿಸುವನು.

೧೦೨. ಬ್ರಾಹ್ಮಣವರ್ಯರೆ! ಆದ್ದರಿಂದ ಅಲ್ಲಿ ತನ್ನ ಶಕ್ತ್ಯನುಸಾರ ಶ್ರಾದ್ಧ, ಸ್ನಾನ, ದಾನಗಳನ್ನು ಆಚರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭ್ರೂಣಗರ್ತಾಮಾಹಾತ್ಮ್ಯವರ್ಣನ" ವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಷ್ಪಂಚಾಶತ್ತಮೋಽಧ್ಯಾಯಃ

### ಚರ್ಮಮುಂಡಾಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಚರ್ಮಮುಂಡಾ ತಥಾ ದೇವೀ ತಸ್ಮಿನ್ ಸ್ಥಾನೇ ವ್ಯವಸ್ಥಿತಾ ।
ನಲೇನ ಸ್ಥಾಪಿತಾ ಪೂರ್ವಂ ಸ್ವಯಮೇವ ಮಹಾತ್ಮನಾ ॥ ೧ ॥
ಅಭ್ಯರ್ಚಯತಿ ತಾಂ ಭಕ್ತ್ಯಾ ಯೋ ಮಹಾನವಮೀದಿನೇ ।
ಸ ಕಾಮಾನ್ವಾಂಛಿತಾಂಲ್ಲಬ್ಧ್ವಾ ಪದಂ ಪ್ರಾಪ್ನೋತಿ ಶಾಶ್ವತಂ ॥ ೨ ॥
ವೀರಸೇನಸುತಃ ಪೂರ್ವಂ ನಲೋನಾಮ ಮಹೀಪತಿಃ ।
ಆಸೀತ್ಸರ್ವಗುಣೋಪೇತಃ ಸರ್ವಶತ್ರುಕ್ಷಯಾವಹಃ ॥ ೩ ॥
ಭಾರ್ಯಾ ತಸ್ಯಾಽಭವತ್ಸಾಧ್ವೀ ಪ್ರಾಣೇಭ್ಯೋಽಪಿ ಗರೀಯಸೀ ।
ದಮಯಂತೀತಿ ವಿಖ್ಯಾತಾ ವಿದರ್ಭಾಧಿಪತೇಃ ಸುತಾ ॥ ೪ ॥
ಅಥಾಽಸೌ ಕಲಿನಾವಿಷ್ಟೋ ದ್ಯೂತಂ ಚಕ್ರೇ ಮಹೀಪತಿಃ ।
ಪುಷ್ಕರೇಣ ಸಮಂ ವಿಪ್ರಾ ದಾಯಾದೇನ ದಿವಾನಿಶಂ ॥ ೫ ॥

---

## ಕನ್ನಡದ ಅನುವಾದ

### ಚರ್ಮಮುಂಡಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಅಲ್ಲಿ ಹಿಂದೆ ಮಹಾತ್ಮನಾದ ನಳನು ಸ್ಥಾಪಿಸಿರುವ ಚರ್ಮಮುಂಡಾದೇವಿಯಿರುವಳು.

೨. ಅವಳನ್ನು ಮಹಾನವಮೀದಿನ ಪೂಜಿಸಿದವನು ಇಷ್ಟಾರ್ಥಗಳನ್ನು ಪಡೆದು ಶಾಶ್ವತಸ್ಥಾನವನ್ನು ಹೊಂದುವನು.

೩. ಹಿಂದೆ ಸಕಲಗುಣಗಳಿಂದ ಕೂಡಿದವನೂ, ಸಮಸ್ತಶತ್ರುಗಳನ್ನು ನಾಶಗೊಳಿಸುವವನೂ, ವೀರಸೇನನ ಮಗನೂ ಆದ ನಳನೆಂಬ ರಾಜನಿದ್ದನು.

೪. ಅವನಿಗೆ ವಿದರ್ಭರಾಜನ ಮಗಳಾದ ದಮಯಂತಿಯೆಂಬ ಸಾಧ್ವೀಮಣಿಯು ಪ್ರಾಣಕ್ಕಿಂತ ಪ್ರಿಯಳಾದ ಪತ್ನಿಯಾಗಿದ್ದಳು.

೫. ಕಲಿಯಿಂದ ಆವಿಷ್ಟನಾದ ಅವನು ತನ್ನ ದಾಯಾದಿಯಾದ ಪುಷ್ಕರನೊಡನೆ ಹಗಲು ರಾತ್ರಿ ಜೂಜಾಡಿದನು.

ತತಃ ಸ ವ್ಯಸನಾಸಕ್ತೋ ವಾರ್ಯಮಾಣೋಽಪಿ ಸಜ್ಜನೈಃ ।
ಹಾರಯಾಮಾಸ ಸಪ್ತಾಂಗಂ ರಾಜ್ಯಂ ಮುಕ್ತ್ವಾ ಚ ತಾಂ ಪ್ರಿಯಾಂ॥ ೬ ॥
ಅಥ ತಾಂ ಸ ಸಮಾದಾಯ ಪ್ರವಿಷ್ಟೋ ಗಹನಂ ವನಂ ।
ನಿರ್ಜಲಂ ಲಜ್ಜಯಾವಿಷ್ಟೋ ದುಃಖವ್ಯಾಕುಲಿತೇಂದ್ರಿಯಃ ॥ ೭ ॥
ತತಃ ಸ ಚಿಂತಯಾಮಾಸ ಯದ್ಯೇಷಾ ಭೀಮಮಂದಿರೇ ।
ಯಾತಿ ತನ್ಮುಚ್ಯತೇ ಕಷ್ಟಾದ್ವನವಾಸ ಸಮುದ್ಭವಾತ್ ॥ ೮ ॥
ನ ಮಯಾ ತತ್ರ ಗಂತವ್ಯಂ ಕಥಂಚಿದಪಿ ಮಾನಿನಾ ।
ತಸ್ಮಾದೇನಾಂ ಪರಿತ್ಯಜ್ಯ ರಾತ್ರೌ ಗಚ್ಛಾಮಿ ದೂರತಃ ॥ ೯ ॥
ಯೇನ ತ್ಯಕ್ತ್ವಾ ಮಯಾ ಸಾಧ್ವೀ ಕುಂಡಿನಂ ಯಾತಿ ತತ್ಪುರಂ ।
ಸ ಏವಂ ನಿಶ್ಚಯಂ ಕೃತ್ವಾ ಸುಖಸುಪ್ತಾಂ ವಿಹಾಯ ತಾಂ ।
ಪ್ರಜಗಾಮ ವನಂ ಘೋರಂ ವನ್ಯಶ್ವಾಪದಸಂಕುಲಂ ॥ ೧೦ ॥
ಪ್ರತ್ಯೂಷೇ ಚಾಽಪಿ ಸೋತ್ಥಾಯ ಯಾವತ್ಪಶ್ಯತಿ ಭಾಮಿನೀ ।
ತಾವತ್ಪಶ್ಯತಿ ಶೂನ್ಯಂ ಸ್ವಂ ಪಾರ್ಶ್ವಂ ಯತ್ರ ನಲಃ ಸ್ಥಿತಃ ॥ ೧೧ ॥
ತತೋ ವಿಲಪ್ಯ ದುಃಖಾರ್ತಾ ಕರುಣಂ ತತ್ರ ಕಾನನೇ ।
ಜಗಾಮ ಮಾರ್ಗಮಾಶ್ರಿತ್ಯ ಪಿತುರ್ಹರ್ಮ್ಯಂ ಶನೈಃ ಶನೈಃ ॥ ೧೨ ॥

---

೬. ಬಳಿಕ ದ್ಯೂತವ್ಯಸನಾಸಕ್ತನಾದ ಅವನು ಸಜ್ಜನರು ತಡೆಯುತ್ತಿದ್ದರೂ ಆ ಪತ್ನಿಯನ್ನು ಬಿಟ್ಟು ಸಪ್ತಾಂಗರಾಜ್ಯವನ್ನು ಪಣವಾಗಿಟ್ಟುಕಳೆದುಕೊಂಡನು.

೭. ತರುವಾಯ ಅವನು ಲಜ್ಜಿತನೂ, ದುಃಖಗೊಂಡವನೂ ಆಗಿ ಆ ದಮಯಂತಿಯೊಡನೆ ಜಲವಿಲ್ಲದ ಒಂದಾನೊಂದು ಕಾಡನ್ನು ಪ್ರವೇಶಮಾಡಿದನು.

೮. ಅನಂತರ ಅವನು ಹೀಗೆ ಚಿಂತಿಸಿದನು. "ಇವಳು ಭೀಮರಾಜನ ಮನೆಯನ್ನು ಸೇರಿದರೆ ಈ ವನವಾಸಕಷ್ಟದಿಂದ ಪಾರಾಗುವಳು.

೯. ಮಾನಿಯಾದ ನಾನು ಎಷ್ಟು ಕಷ್ಟವೊದಗಿದರೂ ಅಲ್ಲಿಗೆ ಹೋಗುವುದಿಲ್ಲ. ಆದ್ದರಿಂದ ನಾನು ರಾತ್ರಿಯಲ್ಲಿ ಇವಳನ್ನು ತ್ಯಜಿಸಿ ದೂರ ಹೋಗುವೆನು.

೧೦. ನಾನು ತ್ಯಜಿಸಿದರೆ ಪತಿವ್ರತೆಯಾದ ಇವಳು ಕುಂಡಿನಪುರಕ್ಕೆ ತೆರಳುವಳು." ಅವನು ಹೀಗೆ ಆಲೋಚಿಸಿ ಸುಖವಾಗಿ ಮಲಗಿರುವ ಆ ಪ್ರೇಯಸಿಯನ್ನು ಬಿಟ್ಟು ಹಿಂಸ್ರಮೃಗಗಳಿಂದ ವ್ಯಾಪ್ತವಾದ ಭಯಂಕರವಾದ ಮತ್ತೊಂದು ಕಾಡಿಗೆ ಹೋದನು.

೧೧. ಆ ದಮಯಂತಿಯು ಬೆಳಗ್ಗೆ ಎದ್ದು ನೋಡಲು ನಳನಿದ್ದ ತನ್ನ ಪಾರ್ಶ್ವವು ಶೂನ್ಯವಾಗಿದ್ದಿತು.

೧೨. ಬಳಿಕ ಅವಳು ಆ ಕಾಡಿನಲ್ಲಿ ದುಃಖದಿಂದ ಗೋಳಾಡಿ ದಾರಿಯನ್ನು ಹಿಡಿದು ಮೆಲ್ಲಮೆಲ್ಲನೆ ತಂದೆಯ ಅರಮನೆಗೆ ಹೋದಳು.

ನಲೋಽಪಿ ಚ ವನೇ ತಸ್ಮಿನ್ ಭ್ರಮಮಾಣೋ ಮಹೀಪತಿಃ ।
ಏಕಾಕೀ ವೃಕ್ಷಕುಂಜಾನಿ ಸೇವಯಾಮಾಸ ಸರ್ವದಾ ॥ ೧೩ ॥
ತತಸ್ತದ್ವನಮುತ್ಸೃಜ್ಯ ಜಗಾಮಾಽನ್ಯನ್ಮಹಾವನಂ ।
ನಾನಾವೃಕ್ಷಗಣೈರ್ಯುಕ್ತಂ ಬಹುಶ್ವಾಪದಸಂಕುಲಂ ॥ ೧೪ ॥
ಏವಂ ಸ ಪೃಥಿವೀಪಾಲೋ ಭ್ರಮಮಾಣೋ ವನಾದ್ವನಂ ।
ಹಾಟಕೇಶ್ವರಜಂ ಕ್ಷೇತ್ರಮಾಸಸಾದ ತತಃ ಪರಂ ॥ ೧೫ ॥
ಏತಸ್ಮಿನ್ನಂತರೇ ಪ್ರಾಪ್ತಂ ತನ್ಮಹಾನವಮೀ ದಿನಂ ।
ವಿಶೇಷಾದ್ಯತ್ರ ಭೂಪಾಲಾಃ ಪೂಜಯಂತಿ ಸುರೇಶ್ವರೀಂ ॥ ೧೬ ॥
ತತಃ ಸ ಮೃಣ್ಮಯೀಂ ಕೃತ್ವಾ ಚರ್ಮಮುಂಡಧರಾಂ ನೃಪಃ ।
ವಿಭವಾಭಾವತಃ ಪಶ್ಚಾತ್ಫಲಮೂಲೈರತರ್ಪಯತ್ ॥ ೧೭ ॥
ತತಸ್ತಸ್ಯಾಃ ಸ್ತುತಿಂ ಕೃತ್ವಾ ಪುರಃ ಸ್ಥಿತ್ವಾ ಕೃತಾಂಜಲಿಃ ।
ಶ್ರದ್ಧಯಾ ಪರಯಾ ಯುಕ್ತೋ ನಿಷಧಾಧಿಪತಿಃ ಸ್ವಯಂ ॥ ೧೮ ॥
ಜಯ ಸರ್ವಗತೇ ದೇವಿ ಚರ್ಮಮುಂಡಧರೇ ವರೇ ।
ಜಯ ದೈತ್ಯ ಕುಲೋಚ್ಛೇದದಕ್ಷೇ ದಕ್ಷಾತ್ಮಜೇ ಶುಭೇ ॥ ೧೯ ॥

---

೧೩. ನಳಮಹಾರಾಜನೂ ಆ ವನದಲ್ಲಿ ಒಬ್ಬಂಟಿಗನಾಗಿ ಸಂಚರಿಸುತ್ತ ಯಾವಾಗಲೂ ಮರಗಳಪೊದೆಗಳನ್ನು ಸೇವಿಸತೊಡಗಿದನು.

೧೪. ಅನಂತರ ಅವನು ಆ ವನವನ್ನು ಬಿಟ್ಟು ಅನೇಕ ವೃಕ್ಷಗಳ ಸಮೂಹದಿಂದ ಕೂಡಿರುವುದೂ, ಅನೇಕ ಹಿಂಸ್ರಪ್ರಾಣಿಗಳಿಂದ ತುಂಬಿರುವುದೂ ಆದ ಮತ್ತೊಂದು ಕಾಡಿಗೆ ಹೋದನು.

೧೫. ಹೀಗೆ ಆ ರಾಜನು ವನದಿಂದ ವನಕ್ಕೆ ಸಂಚರಿಸುತ್ತ ಹಾಟಕೇಶ್ವರ ಕ್ಷೇತ್ರಕ್ಕೆ ಬಂದನು.

೧೬. ಇಷ್ಟರಲ್ಲಿ ಮಹಾನವಮಿಯು ಪ್ರಾಪ್ತವಾಯಿತು. ಆ ಮಹಾನವಮಿಯಲ್ಲಿ ರಾಜರು ವಿಶೇಷವಾಗಿ ಚರ್ಮಮುಂಡಾದೇವಿಯನ್ನು ಪೂಜಿಸುವರು.

೧೭–೧೮. ಅನಂತರ ಆ ನಳನು ಐಶ್ವರ್ಯವಿಲ್ಲದಿರುವುದರಿಂದ ಮಣ್ಣಿನಿಂದ ಚರ್ಮಮುಂಡಾದೇವಿಯನ್ನು ನಿರ್ಮಿಸಿ ಹಣ್ಣುಗೆಣಸುಗಳಿಂದ ಅವಳನ್ನು ತೃಪ್ತಿಗೊಳಿಸಿ ಅವಳ ಮುಂದೆ ನಿಂತು ಕೈಮುಗಿದುಕೊಂಡು ಅತಿ ಶ್ರದ್ಧೆಯಿಂದ ಹೀಗೆ ಸ್ತುತಿಸಿದನು.

೧೯. "ಸರ್ವವ್ಯಾಪಿನಿಯೂ, ಚರ್ಮಮುಂಡವನ್ನು ಧರಿಸಿದವಳೂ, ದೈತ್ಯವಂಶವನ್ನು ನಾಶಗೊಳಿಸುವುದರಲ್ಲಿ ಸಮರ್ಥಳೂ, ದಕ್ಷಸುತೆಯೂ ಆದ ಓ ದೇವಿಯೆ! ಭಕ್ತರ ಅಭೀಷ್ಟಸಿದ್ಧಿಗಾಗಿ ಜಯಿಸು.

ಕಾಲರಾತ್ರಿ ಜಯಾಽಚಿಂತ್ಯೇ ನವಮ್ಯಷ್ಟಮಿವಲ್ಲಭೇ ।
ತ್ರಿನೇತ್ರೇ ತ್ರ್ಯಂಬಕಾಽಭೀಷ್ಟೇ ಜಯ ದೇವಿ ಸುರಾರ್ಚಿತೇ ॥ ೨೦ ॥
ಭೀಮರೂಪೇ ಸುರೂಪೇ ಚ ಮಹಾವಿದ್ಯೇ ಮಹಾಬಲೇ ।
ಮಹೋದಯೇ ಮಹಾಕಾಯೇ ಜಯ ದೇವಿ ಮಹಾವ್ರತೇ ॥ ೨೧ ॥
ನಿತ್ಯರೂಪೇ ಜಗದ್ಧಾತ್ರಿ ಸುರಾಮಾಂಸವಸಾಪ್ರಿಯೇ ।
ವಿಕರಾಲ ಮಹಾಕಾಲಿ ಜಯ ಪ್ರೇತಜನಾನುಗೇ ॥ ೨೨ ॥
ಶವಯಾನರತೇ ರಮ್ಯೇ ಭುಜಂಗಾಭರಣಾನ್ವಿತೇ ।
ಪಾಶಹಸ್ತೇ ಮಹಾಹಸ್ತೇ ರುಧಿರೌಘಕೃತಾಸ್ಪದೇ ॥ ೨೩ ॥
ಫೇತ್ಕಾರಾರವ ಶೋಭಿಷ್ಟೇ ಗೀತವಾದ್ಯ ವಿರಾಜಿತೇ ।
ಜಯಾಽನಾದ್ಯೇ ಜಯ ಧ್ಯೇಯೇ ಭರ್ಗದೇಹಾರ್ಧಸಂಶ್ರಯೇ ॥ ೨೪ ॥
ತ್ವಂ ರತಿಸ್ತ್ವಂ ಧೃತಿಸ್ತುಷ್ಟಿಸ್ತ್ವಂ ಗೌರೀ ತ್ವಂ ಸುರೇಶ್ವರೀ ।
ತ್ವಂ ಲಕ್ಷ್ಮೀಸ್ತ್ವಂಚ ಸಾವಿತ್ರೀ ಗಾಯತ್ರೀ ತ್ವಮಸಂಶಯಂ ॥ ೨೫ ॥

---

೨೦. ಕಾಲರಾತ್ರಿರೂಪಳೂ, ಅಚಿಂತ್ಯಳೂ, ನವಮಿ ಮತ್ತು ಅಷ್ಟಮಿಗಳಲ್ಲಿ ಪ್ರೀತಿಯುಳ್ಳವಳೂ, ತ್ರಿಣಯನಳೂ, ಶಂಕರಪ್ರಿಯಳೂ, ಸುರವಂದಿತಳೂ ಆದ ಓ ದೇವಿಯೆ! ಜಯಿಸು.

೨೧. ಭಯಂಕರರೂಪಳೂ, ಸುಂದರಿಯೂ, ಮಹಾವಿದ್ಯೆಯೂ, ಮಹಾಬಲಳೂ, ಮಹೋದಯಳೂ, ಮಹಾಕಾಯಳೂ, ಮಹಾವ್ರತೆಯೂ ಆದ ಎಲೌ ದೇವಿಯೆ! ಜಯಿಸು.

೨೨. ನಿತ್ಯರೂಪಳೂ, ಜಗದ್ಧಾರಕಳೂ, ಮದ್ಯ, ಮಾಂಸ ಮತ್ತು ವಸೆಗಳಲ್ಲಿ ಪ್ರೀತಿಯುಳ್ಳವಳೂ, ಕರಾಳೆಯೂ, ಮಹಾಕಾಳಿಯೂ, ಪ್ರೇತಪರಿವಾರಳೂ ಆದ ದೇವಿಯೆ! ಜಯಿಸು.

೨೩. ಶವಯಾನದಲ್ಲಿ ನಿರತಳೂ, ರಮ್ಯಳೂ, ಸರ್ವಾಭರಣಭೂಷಿತಳೂ, ಪಾಶವನ್ನು ಹಿಡಿದ ಮಹಾಹಸ್ತವುಳ್ಳವಳೂ, ರಕ್ತಸಮೂಹದಿಂದ ಕೂಡಿದವಳೂ ಆದ ದೇವಿಯೆ! ಜಯಿಸು.

೨೪. ಫೇತ್ಕಾರಧ್ವನಿಯಿಂದ ಶೋಭಿಸುವವಳೂ, ಗೀತವಾದ್ಯಗಳಿಂದ ವಿರಾಜಿಸುವವಳೂ, ಅನಾದ್ಯಳೂ, ಧ್ಯಾನಯೋಗ್ಯಳೂ, ಮಹೇಶ್ವರನ ಶರೀರಾರ್ಧವನ್ನು ಆಶ್ರಯಿಸಿದವಳೂ ಆದ ಎಲೌ ದೇವಿಯೆ! ಜಯಿಸು.

೨೫. ರತಿಯೂ, ಧೃತಿಯೂ, ತುಷ್ಟಿಯೂ, ಗೌರಿಯೂ, ಸುರೇಶ್ವರಿಯೂ, ಲಕ್ಷ್ಮಿಯೂ, ಸಾವಿತ್ರಿಯೂ, ಗಾಯತ್ರಿಯೂ ನೀನೇ ಆಗಿರುವೆ.

ಯತ್ಕಿಂಚಿತ್ತ್ರಿಷು ಲೋಕೇಷು ಸ್ತ್ರೀರೂಪಂ ದೇವಿ ದೃಶ್ಯತೇ ।
ತತ್ಸರ್ವಂ ತ್ವನ್ಮಯಂ ನಾಽತ್ರ ವಿಕಲ್ಪೋಽಸ್ತಿ ಮಮ ಕ್ವಚಿತ್ ॥ ೨೬ ॥
ಯೇನ ಸತ್ಯೇನ ತೇನ ತ್ವಮತ್ರಾವಾಸಂ ದ್ರುತಂ ಕುರು ।
ಸಾನ್ನಿಧ್ಯಂ ಭಕ್ತಿತಸ್ತುಷ್ಟಾ ಸುರಾಽಸುರ ನಮಸ್ಕೃತೇ ॥ ೨೭ ॥

ಸೂತ ಉವಾಚ :—

ಏವಂ ಸ್ತುತಾಚ ಸಾ ದೇವೀ ನಲೇನ ಪೃಥಿವೀಭುಜಾ ।
ಪ್ರೋವಾಚ ದರ್ಶನಂ ದತ್ವಾ ತಂ ನೃಪಂ ಭಕ್ತವತ್ಸಲಾ ॥ ೨೮ ॥

ಶ್ರೀದೇವ್ಯುವಾಚ :—

ಪರಿತುಷ್ಟಾಽಸ್ಮಿ ತೇ ವತ್ಸ ಸ್ತೋತ್ರೇಣಾನೇನ ಸಾಂಪ್ರತಂ ।
ತಸ್ಮಾದ್ಗೃಹಾಣ ಮತ್ತಸ್ತ್ವಂ ವರಂ ಮನಸಿ ಸಂಸ್ಥಿತಂ ॥ ೨೯ ॥

ನಲ ಉವಾಚ :—

ದಮಯಂತೀತಿ ಮೇ ಭಾರ್ಯಾ ಪ್ರಾಣೇಭ್ಯೋಽಪಿ ಗರೀಯಸೀ ।
ಸಾ ಮಯಾ ನಿರ್ಜನೇ ಮುಕ್ತಾ ವನೇ ವ್ಯಾಲಗಣಾನ್ವಿತೇ ॥ ೩೦ ॥
ಅಖಂಡಶೀಲಾಂ ನಿರ್ದೋಷಾಂ ಯಥಾಽಹಂ ತ್ವತ್ಪ್ರಸಾದತಃ ।
ಲಭೇ ಭೂಯೋಽಪಿ ತಾಂ ದೇವಿ ತಥಾಽತ್ರ ಕುರು ಸತ್ವರಂ ॥ ೩೧ ॥
ಸ್ತೋತ್ರೇಣಾನೇನ ಯೋ ದೇವಿ ಸ್ತುತಿಂ ಕುರ್ಯಾತ್ಪುರಸ್ತವ ।
ತತ್ರೈವ ದಿವಸೇ ತಸ್ಮೈ ತ್ವಯಾದೇಯಂ ಮನೋಗತಂ ॥ ೩೨ ॥

---

೨೬. ದೇವಿ ! ಮೂರುಲೋಕಗಳಲ್ಲಿ ಕಾಣುವ ಸ್ತ್ರೀರೂಪಗಳೆಲ್ಲ ನಿನ್ನವುಗಳೇ ಆಗಿರುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

೨೭. ಸುರಾಸುರವಂದಿತಳಾದ ದೇವಿಯೆ ! ನೀನು ಭಕ್ತಿಯಿಂದ ತುಷ್ಟಳಾಗಿ ಈ ಪ್ರತಿಮೆಯಲ್ಲಿ ಸನ್ನಿಹಿತಳಾಗಿರು.

೨೮. ಸೂತನು ಹೇಳುತ್ತಾನೆ:—ನಳಮಹಾರಾಜನು ಹೀಗೆ ಸ್ತುತಿಸಲು ಭಕ್ತವತ್ಸಲಳಾದ ಆ ದೇವಿಯು ಆತನಿಗೆ ಪ್ರತ್ಯಕ್ಷಳಾಗಿ ಹೀಗೆಂದಳು.

೨೯. ಶ್ರೀದೇವಿಯು ಹೇಳುತ್ತಾಳೆ:—ಮಗು ! ಈಗ ನಾನು ನಿನ್ನೀಸ್ತೋತ್ರದಿಂದ ಸಂತುಷ್ಟಳಾಗಿರುವೆನು. ಆದ್ದರಿಂದ ನೀನು ಸಂತುಷ್ಟಳಾದ ನನ್ನಿಂದ ಇಷ್ಟವಾದ ವರವನ್ನು ಸ್ವೀಕರಿಸು.

೩೦. ನಳನು ಹೇಳುತ್ತಾನೆ:—ನಾನು ನನ್ನ ಪ್ರಾಣಕ್ಕಿಂತಲೂ ಪ್ರಿಯಳಾದ ಶ್ರೇಷ್ಠಭಾರ್ಯೆ ದಮಯಂತಿಯನ್ನು ದುಷ್ಟಮೃಗಗಳಿಂದ ವ್ಯಾಪ್ತವಾದ ನಿರ್ಜನ ವನದಲ್ಲಿ ತ್ಯಜಿಸಿರುವೆನು.

೩೧–೩೨. ದೇವಿ ! ಸುಶೀಲಳೂ, ನಿರ್ದೋಷಳೂ ಆದ ಅವಳನ್ನು ನಿನ್ನ ಅನುಗ್ರಹದಿಂದ ಮರಳಿ ನಾನು ಪಡೆಯುವಂತೆ ಮಾಡು. ನಿನ್ನ ಮುಂದೆ ಈ ಸ್ತೋತ್ರದಿಂದ ಸ್ತುತಿಸುವವನಿಗೆ ಆ ದಿವಸವೇ ಅಭೀಷ್ಟವನ್ನು ಅನುಗ್ರಹಿಸು.

ಸೂತ ಉವಾಚ:—

ಸಾ ತಥೇತಿ ಪ್ರತಿಜ್ಞಾಯ ಜಗಾಮಾಽದರ್ಶನಂ ತತಃ ।
ಸೋಽಪಿ ಪಾರ್ಥಿವಶಾರ್ದೂಲೋ ಲೇಭೇ ಸರ್ವಂ ತಯೋದಿತಂ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚರ್ಮಮುಂಡಾಮಾಹಾತ್ಮ್ಯವರ್ಣನಂ" ನಾಮ
ಚತುಷ್ಪಂಚಾಶತ್ತಮೋಽಧ್ಯಾಯಃ

---

೩೩. ಆ ದೇವಿಯು ಹಾಗೆಯೇ ಆಗಲೆಂದು ಒಪ್ಪಿ ಅದೃಶ್ಯಳಾದಳು. ಆ ರಾಜನೂ ಅವಳು ಹೇಳಿದ್ದೆಲ್ಲವನ್ನೂ ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚರ್ಮಮುಂಡಾಮಾಹಾತ್ಮ್ಯವರ್ಣನ"ವೆಂಬ
ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಪಂಚಾಶತ್ತಮೋಽಧ್ಯಾಯಃ

## ನಲೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಸ್ಯಾ ಏವ ಸಮೀಪಸ್ಥಂ ದೇವದೇವಂ ನಲೇಶ್ವರಂ ।
ದೃಷ್ಟ್ವಾ ವಿಮುಚ್ಯತೇ ಪಾಪಾತ್ಸ್ಥಾಪಿತಂ ನಲಭೂಭುಜಾ ॥ ೧ ॥
ಯಸ್ತಂ ಪಶ್ಯೇನ್ನರೋ ಭಕ್ತ್ಯಾ ಮಾಘೇ ಷಷ್ಠ್ಯಾಂ ಸಿತೇ ದ್ವಿಜಾಃ ।
ಸರ್ವರೋಗವಿನಿರ್ಮುಕ್ತಃ ಪ್ರಾಪ್ನೋತಿ ಪರಮಂ ಪದಂ ॥ ೨ ॥
ಕಂಡೂಃ ಪಾಮಾಽಥ ದದ್ರೂಣಿ ಮಂಡಲಾನಿ ವಿಚರ್ಚಿಕಾ ।
ದರ್ಶನಾತ್ತಸ್ಯ ನಶ್ಯಂತಿ ಜಂತೂನಾಂ ಭಾವಿತಾತ್ಮನಾಂ ॥ ೩ ॥
ಅಸ್ತಿ ತಸ್ಯಾಗ್ರತಃ ಕುಂಡಂ ಸ್ವಚ್ಛೋದಕಸುಪೂರಿತಂ ।
ಮತ್ಸ್ಯಕೂರ್ಮಸಮಾಕೀರ್ಣಂ ಪದ್ಮಿನೀಖಂಡಮಂಡಿತಂ ॥ ೪ ॥
ಯಸ್ತತ್ರ ಕುರುತೇ ಸ್ನಾನಂ ಪ್ರತ್ಯೂಷೇ ಸೋಮವಾಸರೇ ।
ಅಪಿ ಕುಷ್ಠಾಮಯಗ್ರಸ್ತಃ ಸಭೂಯಃ ಸ್ಯಾತ್ಪುನರ್ನವಃ ॥ ೫ ॥

---

## ಕನ್ನಡದ ಅನುವಾದ

### ನಲೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ದೇವಿಯ ಹತ್ತಿರವಿರುವ ಪ್ರದೇಶದಲ್ಲಿಯೆ ನಳರಾಜನು ಪ್ರತಿಷ್ಠೆಮಾಡಿದ ನಳೇಶ್ವರನನ್ನು ಸಂದರ್ಶಿಸಿದವನು ಪಾಪದಿಂದ ಮುಕ್ತನಾಗುವನು.

೨. ಎಲೈ ದ್ವಿಜರೆ! ಮಾಘಶುಕ್ಲಷಷ್ಠೀದಿನ ಭಕ್ತಿಯಿಂದ ಅವನನ್ನು ದರ್ಶನ ಮಾಡಿದವನು ಸಮಸ್ತರೋಗಮುಕ್ತನಾಗಿ ಉತ್ತಮಸ್ಥಾನವನ್ನು ಹೊಂದುವನು.

೩. ಅವನನ್ನು ನೋಡಿ ಧ್ಯಾನಿಸಿದ ಪ್ರಾಣಿಗಳ ಕಂಡೂತಿ, ಪಾಮ, ದದ್ರು, ಮಂಡಲ, ವಿಚರ್ಚಿಕಾರೋಗಗಳು ಪರಿಹಾರವಾಗುವುವು.

೪. ಅವನ ಮುಂದೆ ನಿರ್ಮಲಜಲದಿಂದ ತುಂಬಿರುವುದೂ, ಮತ್ಸ್ಯ ಕೂರ್ಮಗಳಿಂದ ಕೂಡಿರುವುದೂ, ತಾವರೆಗಳ ಸಮೂಹಗಳಿಂದ ಅಲಂಕಾರ ಗೊಂಡುದೂ ಆದ ಒಂದು ಕುಂಡವಿರುವುದು.

೫. ಸೋಮವಾರ ಪ್ರಾತಃಕಾಲ ಅಲ್ಲಿ ಮಿಂದವನು ಕುಷ್ಠರೋಗಿಯಾಗಿದ್ದರೂ ಅದರಿಂದ ಮುಕ್ತನಾಗಿ ಹೊಚ್ಚಹೊಸಬನಂತಾಗುವನು.

ಯದಾ ಸಂಸ್ಥಾಪಿತಃ ಶಂಭುರ್ನಲೇನ ಪೃಥಿವೀಭುಜಾ ।
ತದಾ ತುಷ್ಟೇನ ಸ ಪ್ರೋಕ್ತೋ ಬ್ರೂಹಿ ಕಿಂ ತೇ ಕರೋಮ್ಯಹಂ ॥ ೬ ॥
ನಲ ಉವಾಚಃ—
ಅತ್ರ ಸ್ಥೇಯಂ ತ್ವಯಾ ದೇವ ಸದಾ ಸನ್ನಿಹಿತೇನ ಚ ।
ಸರ್ವಲೋಕಹಿತಾರ್ಥಾಯ ರೋಗನಾಶಾಯ ಶಂಕರ ॥ ೭ ॥
ಶಂಕರ ಉವಾಚ :—
ಅಹಂ ತ್ವದ್ವಚನಾದ್ರಾಜನ್ ಸಂಪ್ರಾಪ್ತೇ ಸೋಮವಾಸರೇ ।
ಪ್ರತ್ಯೂಷೇ ಚ ನಿವತ್ಸ್ಯಾಮಿ ಪ್ರಾಸಾದೇ ನಾಽತ್ರ ಸಂಶಯಃ ॥ ೮ ॥
ಮಾಘಾಷ್ಟಮ್ಯಾಮಹೋರಾತ್ರಂ ಸಕಲಂ ಚ ಮಹೀಪತೇ ।
ಪ್ರಾಣಿನಾಂ ರೋಗನಾಶಾಯ ಶುಕ್ಲಪಕ್ಷೇ ವಿಶೇಷತಃ ॥ ೯ ॥
ಯೋ ಮಾಮತ್ರ ಸ್ಥಿತಂ ತತ್ರ ದಿವಸೇ ವೀಕ್ಷಯಿಷ್ಯತಿ ।
ಸ್ನಾತ್ವಾ ಸುವಿಮಲೇ ಕುಂಡೇ ಸಮ್ಯಕ್ ಶ್ರದ್ಧಾಸಮನ್ವಿತಃ ।
ತಸ್ಯ ನಾಶಂ ಪ್ರಯಾಸ್ಯಂತಿ ವ್ಯಾಧಯೋ ಗಾತ್ರಸಂಭವಾಃ ॥ ೧೦ ॥
ಯೋಽಸ್ಯ ಕುಂಡಸ್ಯ ಸಂಭೂತಾಂ ಮೃತ್ತಿಕಾಮಪಿ ಮಾನವಃ ।
ಸಂಧಾಸ್ಯತಿ ನಿಜೇ ದೇಹೇ ಸೋಮವಾರೇ ನಿಶಾಕ್ಷಯೇ ।
ಸೋಽಪಿ ರೋಗೈರ್ವಿನಿರ್ಮುಕ್ತಃ ಸಂಭವಿಷ್ಯತಿ ಪುಷ್ಟಿಮಾನ್ ॥ ೧೧ ॥

---

೬. ನಳಮಹಾರಾಜನು ಆ ಶಂಕರನನ್ನು ಸ್ಥಾಪಿಸಲು ಅವನು ಸಂತುಷ್ಟನಾಗಿ ನಿನಗೆ ಯಾವ ಅನುಗ್ರಹವನ್ನು ಮಾಡಲಿ? ಹೇಳು ಎಂದನು.

೭. ನಳನು ಹೇಳುತ್ತಾನೆ:—ಶಂಕರ! ನೀನು ಸಕಲಲೋಕಗಳ ಹಿತಕ್ಕಾಗಿಯೂ, ರೋಗನಾಶಕ್ಕಾಗಿಯೂ ಯಾವಾಗಲೂ ಇಲ್ಲಿ ನೆಲೆಸಿರು.

೮. ಶಂಕರನು ಹೇಳುತ್ತಾನೆ:— ದೊರೆಯೆ! ನಾನು ನಿನ್ನ ಮಾತಿನಂತೆ ಸೋಮವಾರ ಬೆಳಗ್ಗೆ ಈ ದೇವಾಲಯದಲ್ಲಿ ನಿಶ್ಚಯವಾಗಿಯೂ ವಾಸಿಸುವೆನು.

೯. ಮಾಘ ಶುಕ್ಲಾಷ್ಟಮಿಾದಿನ ಪ್ರಾಣಿಗಳ ರೋಗನಾಶಕ್ಕಾಗಿ ಹಗಲು ರಾತ್ರಿ ಇಲ್ಲಿ ನೆಲೆಸಿರುವೆನು.

೧೦. ಆದಿನ ಇಲ್ಲಿರುವ ಶುದ್ಧವಾದ ಕುಂಡದಲ್ಲಿ ಶ್ರದ್ಧೆಯಿಂದ ಮಿಂದು ನನ್ನನ್ನು ದರ್ಶನಮಾಡುವವನ ಶರೀರದಲ್ಲಿರುವ ವ್ಯಾಧಿಗಳೆಲ್ಲ ನಾಶವಾಗುವುವು.

೧೧—೧೨. ಸೋಮವಾರದ ದಿನ ಬೆಳಗ್ಗೆ ಈ ಕುಂಡದ ಮೃತ್ತಿಕೆಯನ್ನು ತನ್ನ ಶರೀರದಲ್ಲಿ ಧರಿಸುವವನು ಸಹ ರೋಗಮುಕ್ತನಾಗಿ ಪುಷ್ಟನಾಗುವನು.

ನಿಷ್ಕಾಮಸ್ತು ಪುನರ್ಯೋ ಮಾಂ ತಸ್ಮಿನ್ ಕಾಲೇ ನೃಪೋತ್ತಮ ।
ಪೂಜಯಿಷ್ಯತಿ ಸದ್ಭಕ್ತ್ಯಾ ಪುಷ್ಪಧೂಪಾನುಲೇಪನೈಃ ।
ಸರ್ವಪಾಪವಿನಿರ್ಮುಕ್ತೋ ಮಮ ಲೋಕಂ ಸ ಯಾಸ್ಯತಿ ॥ ೧೨ ॥

ಸೂತ ಉವಾಚ :—

ಏವಮುಕ್ತ್ವಾ ಸ ಭಗವಾಂಸ್ತ್ರೈಲೋಕ್ಯದೀಪಕೋ ಹರಃ ।
ಅಂತರ್ಧಾನಂ ಗತೋ ವಿಪ್ರಾ ಯಥಾ ದೀಪೋಽತ್ರ ತತ್ಕ್ಷಣಾತ್ ॥ ೧೩ ॥
ನಲೋಽಪಿ ತುಷ್ಟಿಮಾಪನ್ನಸ್ತಮಾರಾಧ್ಯ ಚಿರಂ ನೃಪಃ ।
ತದಾಹೂಯಾಖಿಲಾನ್ವಿಪ್ರಾಂಶ್ಚಮತ್ಕಾರ ಪುರೋದ್ಭವಾನ್ ॥ ೧೪ ॥
ಏಷ ಸಂಸ್ಥಾಪಿತಃ ಶಂಭುರ್ಮಯಾ ಯುಷ್ಮತ್ಪುರೋಽಂತಿಕೇ ।
ಯೇನ ದೃಷ್ಟೇನ ರೋಗಾಣಾಂ ಸರ್ವೇಷಾಂ ಜಾಯತೇ ಕ್ಷಯಃ ॥ ೧೫ ॥
ಅಧುನಾಽಹಂ ಗಮಿಷ್ಯಾಮಿ ಸ್ವರಾಜ್ಯಾಯ ಕೃತೇ ದ್ವಿಜಾಃ ।
ನಿಷಧಾಂ ಚ ಪುರೀಮೇಷ ಸರ್ವೈಃ ಪೂಜ್ಯಃ ಸಮಾಹಿತೈಃ ॥ ೧೬ ॥

ಬ್ರಾಹ್ಮಣಾ ಊಚುಃ :—

ಏವಂ ಪಾರ್ಥಿವ ಶಾರ್ದೂಲ ಕರಿಷ್ಯಾಮಃ ಸಮಾಹಿತಾಃ ।
ತವ ದೇವಕೃತೇ ಯತ್ನಂ ಯಾತ್ರಾದ್ಯಾಸು ಕ್ರಿಯಾಸು ಚ ॥ ೧೭ ॥
ತಥಾ ಪೂಜಾಂ ಕರಿಷ್ಯಾಮಃ ಶ್ರದ್ಧಯಾ ಪರಯಾ ಯುತಾಃ ।
ಅಸ್ಮಾಕಂ ಪುತ್ರಪೌತ್ರಾ ಯೇ ಭವಿಷ್ಯಂತಿ ತಥಾಽಪರೇ ।
ವಂಶಜಾಸ್ತೇ ಕರಿಷ್ಯಂತಿ ಪೂಜಾಮಸ್ಯ ಸುಭಕ್ತಿತಃ ॥ ೧೮ ॥

---

ಆ ಸಮಯದಲ್ಲಿ ನಿಷ್ಕಾಮನಾಗಿ ನನ್ನನ್ನು ಭಕ್ತಿಪೂರ್ವಕವಾಗಿ ಪುಷ್ಪ, ಧೂಪ, ಗಂಧಗಳಿಂದ ಪೂಜಿಸಿದವನು ಸಕಲಪಾಪಮುಕ್ತನಾಗಿ ನನ್ನ ಲೋಕಕ್ಕೆ ತೆರಳುವನು.

೧೩. ಸೂತನು ಹೇಳುತ್ತಾನೆ:—ವಿಪ್ರರೆ! ತ್ರೈಲೋಕ್ಯಪ್ರಕಾಶಕನಾದ ಹರನು ಹೀಗೆ ನುಡಿದು ದೀಪದಂತೆ ಕೂಡಲೆ ಕಣ್ಮರೆಯಾದನು.

೧೪—೧೫. ನಳನೂ ಆ ಶಂಕರನನ್ನು ಆರಾಧಿಸಿ ಸಂತೋಷಗೊಂಡನು. ಅವನು ಚಮತ್ಕಾರಪುರ ಕ್ಷೇತ್ರದ ಬ್ರಾಹ್ಮಣರನ್ನೆಲ್ಲ ಕರೆಯಿಸಿ, "ನಾನು ನಿಮ್ಮ ಪಟ್ಟಣದ ಹತ್ತಿರ ಈ ಶಂಕರನನ್ನು ಸ್ಥಾಪಿಸಿರುವೆನು. ಇವನನ್ನು ದರ್ಶನ ಮಾಡಿದರೆ ಸಮಸ್ತರೋಗಗಳೂ ನಾಶವಾಗುವುವು.

೧೬. ಈಗ ನಾನು ನನ್ನ ರಾಜ್ಯವನ್ನಾಳಲು ನಿಷಧಪುರಿಗೆ ಹೋಗುವೆನು. ನೀವೆಲ್ಲ ಸಾವಧಾನಮನಸ್ಸಿನಿಂದ ಇವನನ್ನು ಪೂಜಿಸಿರಿ.

೧೭. ಬ್ರಾಹ್ಮಣರು ಹೇಳುತ್ತಾರೆ:—ಮಹಾರಾಜ! ನಿನ್ನ ಮಹೇಶ್ವರನ ಯಾತ್ರೆ ಮೊದಲಾದ ಕಾರ್ಯಗಳಲ್ಲಿ ಪ್ರಯತ್ನಮಾಡುವೆವು.

೧೮. ಹಾಗೆಯೇ ಅತಿಶಯಶ್ರದ್ಧೆಯಿಂದ ಪೂಜೆಯನ್ನು ಮಾಡುವೆವು. ನಮ್ಮ ಪುತ್ರಪೌತ್ರರೂ, ವಂಶಿಕರೂ ಇವನ ಪೂಜೆಯನ್ನು ಭಕ್ತಿಯಿಂದ ಮಾಡುವರು.

ಸೂತ ಉವಾಚ :—

ಏವಮುಕ್ತಃ ಸ ಭೂಪಾಲಸ್ತೈರ್ವಿಪ್ರೈಸ್ತುಷ್ಟಿಸಂಯುತಃ ।
ವ್ರತಸ್ಥೇ ತಾನ್ ಪ್ರಣಮ್ಯೋಚ್ಚೈಃ ಸರ್ವೈಸ್ತೈಶ್ಚಾಽಭಿನಂದಿತಃ ॥ ೧೯ ॥
ಏವಂ ಸ ಭಗವಾನ್ ಶಂಭುಸ್ತಸ್ಮಿನ್ ಸ್ಥಾನೇ ವ್ಯವಸ್ಥಿತಃ ।
ಹಿತಾಯ ಸರ್ವಲೋಕಾನಾಂ ಸರ್ವರೋಗಕ್ಷಯಾವಹಃ ॥ ೨೦ ॥
ತಸ್ಮಾತ್ಸರ್ವಪ್ರಯತ್ನೇನ ವೀಕ್ಷಣೀಯಃ ಸದಾ ಹಿ ಸಃ ।
ವಿಶೇಷಾತ್ಸೋಮವಾರೇಣ ಶಾಶ್ವತಂ ಶ್ರೇಯ ಇಚ್ಛತಾ ॥ ೨೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಲೇಶ್ವರಮಾಹಾತ್ಮ್ಯವರ್ಣನಂ" ನಾಮ
ಪಂಚಪಂಚಾಶತ್ತಮೋಽಧ್ಯಾಯಃ

---

೧೯. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣರು ಹೀಗೆ ಹೇಳಲು ಆ ರಾಜನು ಸಂತೋಷಗೊಂಡವನಾಗಿ ಅವರನ್ನು ವಂದಿಸಿ ಅವರಿಂದ ಸ್ತುತಿಸಲ್ಪಟ್ಟು ಹೊರಟು ಹೋದನು.

೨೦. ಹೀಗೆ ಪೂಜ್ಯನೂ ಸಕಲ ರೋಗಗಳನ್ನು ನಾಶಗೊಳಿಸುವವನೂ ಆದ ಆ ಶಂಕರನು ಸಮಸ್ತ ಜನರ ಹಿತಕ್ಕಾಗಿ ಆ ಸ್ಥಳದಲ್ಲಿ ನೆಲೆಸಿದನು.

೨೧. ಆದ್ದರಿಂದ ಶಾಶ್ವತ ಶ್ರೇಯಸ್ಸನ್ನು ಬಯಸುವವನು ಸೋಮವಾರದ ದಿನ ಆ ಶಂಕರನನ್ನು ಸಂದರ್ಶಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಲೇಶ್ವರಮಾಹಾತ್ಮ್ಯವರ್ಣನ" ವೆಂಬ
ಐವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಪಂಚಾಶತ್ತಮೋಽಧ್ಯಾಯಃ

## ಸಾಂಬಾದಿತ್ಯಮಾಹಾತ್ಮ್ಯವರ್ಣನಂ

ಸೂತ ಉವಾಚ:—

ತಸ್ಯಾಽಪಿ ನಾಽತಿದೂರಸ್ಥಂ ಸಾಂಬಾದಿತ್ಯಂ ಸುರೇಶ್ವರಂ ।
ದೃಷ್ಟ್ವಾ ಕಾಮಾನವಾಪ್ನೋತಿ ಸರ್ವಾನ್ ಮರ್ತ್ಯೋ ಹೃದಿ ಸ್ಥಿತಾನ್॥ ೧॥
ಯಸ್ತು ಮಾಘಸ್ಯ ಶುಕ್ಲಾಯಾಂ ಸಪ್ತಮ್ಯಾಂ ರವಿವಾಸರೇ ।
ಭಕ್ತ್ಯಾ ಸಂಪಶ್ಯತೇ ಮರ್ತ್ಯೋ ನರಕಾನ್ನ ಸ ಪಶ್ಯತಿ ॥ ೨ ॥
ಆಸೀತ್ಪೂರ್ವಂ ದ್ವಿಜೋನಾಮ ಗಾಲವಃ ಸ ಮಹಾಮುನಿಃ ।
ಸ್ವಾಧ್ಯಾಯನಿರತೋ ನಿತ್ಯಂ ವೇದವೇದಾಂಗಪಾರಗಃ ॥ ೩ ॥
ಶುಚಿವ್ರತಪರಃ ಶಾಂತೋ ದೇವದ್ವಿಜಪರಾಯಣಃ ।
ಕೃತಜ್ಞಶ್ಚ ಸುಶೀಲಶ್ಚ ಯಜ್ಞಕರ್ಮವಿಚಕ್ಷಣಃ ॥ ೪ ॥
ತಸ್ಯೈವಂ ವರ್ತಮಾನಸ್ಯ ಸಂಪ್ರಾಪ್ತಂ ಪಶ್ಚಿಮಂ ವಯಃ ।
ಅಪುತ್ರಸ್ಯ ದ್ವಿಜಶ್ರೇಷ್ಠಾಸ್ತತೋ ದುಃಖಂ ವ್ಯಜಾಯತ ॥ ೫ ॥
ತತಃ ಸರ್ವಂ ಪರಿತ್ಯಜ್ಯ ಗೃಹಕೃತ್ಯಂ ಸ ಭಕ್ತಿಮಾನ್ ।
ಸೂರ್ಯಮಾರಾಧಯಾಮಾಸ ಕ್ಷೇತ್ರೇಽತ್ರೈವ ಸಮಾಹಿತಃ ॥ ೬ ॥

---

## ಕನ್ನಡದ ಅನುವಾದ

### ಸಾಂಬಾದಿತ್ಯಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಮಾನವನು ಅವನ ಹತ್ತಿರವಿರುವ ಸಾಂಬಾದಿತ್ಯನನ್ನು ನೋಡಿ ಸಕಲ ಮನೋಭೀಷ್ಟಗಳನ್ನೂ ಪಡೆಯುವನು.

೨. ಮಾಘ ಶುಕ್ಲ ಸಪ್ತಮಿ ಭಾನುವಾರದ ದಿನ ಅವನನ್ನು ದರ್ಶನಮಾಡಿದವನು ನರಕವನ್ನು ನೋಡುವುದಿಲ್ಲ.

೩–೪. ಹಿಂದೆ ವೇದಾಧ್ಯಯನ ನಿರತನೂ, ವೇದವೇದಾಂಗ ಪಾರಂಗತನೂ, ಶುಚಿವ್ರತನೂ, ಶಾಂತನೂ, ದೇವದ್ವಿಜನಿರತನೂ, ಕೃತಜ್ಞನೂ, ಸುಶೀಲನೂ, ಯಜ್ಞಕಾರ್ಯದಲ್ಲಿ ಕುಶಲನೂ ಆದ ಗಾಲವನೆಂಬ ಮಹಾಮುನಿಯಿದ್ದನು.

೫. ಪುತ್ರರಿಲ್ಲದ ಅವನಿಗೆ ಮುಪ್ಪುಬರಲು ದುಃಖವುಂಟಾಯಿತು.

೬–೭. ಅನಂತರ ಅವನು ಮನೆಯ ಕೆಲಸವನ್ನೆಲ್ಲ ತ್ಯಜಿಸಿ ಈ ಕ್ಷೇತ್ರದಲ್ಲಿ

ವಟವೃಕ್ಷಂ ಸಮಾಶ್ರಿತ್ಯ ಶ್ರದ್ಧಯಾ ಪರಯಾ ಯುತಃ ।
ಸ್ಥಾಪಯಿತ್ವಾ ರವೇರರ್ಚಾಂ ಯಥೋಕ್ತಾಂ ಪಂಚರಾತ್ರಿಕೇ ॥ ೭ ॥
ವರ್ಷಾಸ್ವಾಕಾಶಶಾಯೀಚ ಹೇಮಂತೇ ಜಲಸಂಶ್ರಯಃ ।
ಪಂಚಾಗ್ನಿಸಾಧಕೋ ಗ್ರೀಷ್ಮೇ ನಿರಾಹಾರೋ ಜಿತೇಂದ್ರಿಯಃ ॥ ೮ ॥
ತತಃ ಪಂಚದಶೇ ವರ್ಷೇ ಸಂಪ್ರಾಪ್ತೇ ಭಗವಾನ್ ರವಿಃ ।
ವಟವೃಕ್ಷಂ ಸಮಾಶ್ರಿತ್ಯ ಸಮೀಪಸ್ಥಮುವಾಚ ತಂ ॥ ೯ ॥

ಶ್ರೀ ಸೂರ್ಯ ಉವಾಚ :—

ವರದೋಽಸ್ಮ್ಯದ್ಯ ಭದ್ರಂತೇ ವರಂ ಪ್ರಾರ್ಥಯ ಗಾಲವ ।
ಅತಿ ದುರ್ಲಭಮಪ್ಯಾಶು ತವ ದಾಸ್ಯಾಮ್ಯಸಂಶಯಂ ॥ ೧೦ ॥

ಗಾಲವ ಉವಾಚ :—

ಅಪುತ್ರೋಽಹಂ ಸುರಶ್ರೇಷ್ಠ ಪಶ್ಚಿಮೇ ವಯಸಿ ಸ್ಥಿತಃ ।
ತಸ್ಮಾದ್ದೇಹಿ ಸುತಂ ಮಹ್ಯಂ ವಂಶವೃದ್ಧಿಕರಂ ಪರಂ ॥ ೧೧ ॥

ಶ್ರೀ ಸೂರ್ಯ ಉವಾಚ :—

ವಂಶವೃದ್ಧಿಕರೋ ವಿಪ್ರ ಪುತ್ರಸ್ತವ ಭವಿಷ್ಯತಿ ।
ತೇಜಸ್ವೀ ಚ ಯಶಸ್ವೀ ಚ ಶಾಸ್ತ್ರಜ್ಞೋ ವೇದಪಾರಗಃ ॥ ೧೨ ॥

---

ವಟವೃಕ್ಷದ ಕೆಳಗೆ ಭಕ್ತಿಯಿಂದ ಸೂರ್ಯನ ಪ್ರತಿಮೆಯನ್ನು ಪಾಂಚರಾತ್ರಾಗಮ ವಿಧಿಯಿಂದ ಪ್ರತಿಷ್ಠೆಮಾಡಿ ಅವನನ್ನು ಅತಿ ಶ್ರದ್ಧೆಯಿಂದ ಆರಾಧಿಸಿದನು.

೮-೯. ಅವನು ಮಳೆಗಾಲದಲ್ಲಿ ಅನಾವರಣ ಪ್ರದೇಶದಲ್ಲಿ ಮಲಗುವವನೂ, ಹೇಮಂತಋತುವಿನಲ್ಲಿ ಜಲವನ್ನಾಶ್ರಯಿಸಿದವನೂ, ಗ್ರೀಷ್ಮಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿರುವವನೂ, ನಿರಾಹಾರನೂ, ಜಿತೇಂದ್ರಿಯನೂ ಆಗಿ ಆರಾಧಿಸುತ್ತಿರಲು ಹದಿನೈದನೆಯ ವರ್ಷದಲ್ಲಿ ಪೂಜ್ಯನಾದ ಭಾಸ್ಕರನು ವಟವೃಕ್ಷವನ್ನಾಶ್ರಯಿಸಿ ಹತ್ತಿರದಲ್ಲಿರುವ ಅವನನ್ನು ಕುರಿತು ಇಂತೆಂದನು.

೧೦. ಶ್ರೀ ಸೂರ್ಯನು ಹೇಳುತ್ತಾನೆ:—ಗಾಲವ! ನಾನು ವರವನ್ನು ಕೊಡಲು ಬಂದಿರುವೆನು. ಆ ವರವನ್ನು ಕೇಳಿಕೋ. ಅದು ದುರ್ಲಭವಾಗಿದ್ದರೂ ನಿಶ್ಚಯವಾಗಿಯೂ ನಿನಗೆ ಕೊಡುವೆನು.

೧೧. ಗಾಲವನು ಹೇಳುತ್ತಾನೆ:—ಸುರೋತ್ತಮ! ನನಗೆ ಪುತ್ರನಿಲ್ಲ, ಮುದುಕನಾಗಿರುವೆನು. ಆದ್ದರಿಂದ ವಂಶವೃದ್ಧಿಯನ್ನುಂಟುಮಾಡುವ ಪುತ್ರನನ್ನು ನನಗೆ ಕೊಡು.

೧೨. ಶ್ರೀ ಸೂರ್ಯನು ಹೇಳುತ್ತಾನೆ:—ಮುನಿಯೆ! ನಿನಗೆ ವಂಶವೃದ್ಧಿ ಕರನೂ, ತೇಜಸ್ವಿಯೂ, ಯಶಸ್ವಿಯೂ, ಶಾಸ್ತ್ರಜ್ಞನೂ, ವೇದಪಾರಂಗತನೂ ಆದ ಪುತ್ರನು ಜನಿಸುವನು.

ಯೇಯಂ ಕೃತಾ ತ್ವಯಾ ಮೇಽರ್ಚಾ ಸಾಂಬಸೂರ್ಯಸ್ಯ ಸನ್ನಿಧೌ ।
ಸಾಂಬಸೂರ್ಯಾಽಭಿಧಾನೋಽಯಂ ಭವಿಷ್ಯತಿ ಧರಾತಲೇ ॥ ೧೩ ॥
ಅನ್ಯೋಽಪಿ ಶ್ರದ್ಧಯೋಪೇತೋ ಯ ಏನಂ ಪೂಜಯಿಷ್ಯತಿ ।
ಸಪ್ತಮ್ಯಾಂ ಸೂರ್ಯವಾರೇಣ ಯಾವದ್ದ್ವಾದಶಭಾಸ್ಕರಾಃ ॥ ೧೪ ॥
ಸಪ್ತಮ್ಯಶ್ಚ ದ್ವಿಜಶ್ರೇಷ್ಠ ನಿರಾಹಾರಸ್ತು ಭಕ್ತಿತಃ ।
ಸ ಪ್ರಾಪ್ಸ್ಯತಿ ನ ಸಂದೇಹಃ ಪುತ್ರಂ ವಂಶವಿವರ್ಧನಂ ॥ ೧೫ ॥
ಏವಮುಕ್ತ್ವಾ ಚ ಸಪ್ತಾಶ್ವೋ ವಿರರಾಮ ದಿವಾಕರಃ ।
ಗಾಲವೋಽಪಿ ಪ್ರಹೃಷ್ಟಾತ್ಮಾ ಜಗಾಮ ನಿಜಮಂದಿರಂ ॥ ೧೬ ॥
ನಾಽತಿದೀರ್ಘೇಣ ಕಾಲೇನ ತತಸ್ತಸ್ಯಾಽಭವತ್ಸುತಃ ।
ಯಥೋಕ್ತಸ್ತೇನ ದೇವೇನ ಸರ್ವಲಕ್ಷಣಲಕ್ಷಿತಃ ॥ ೧೭ ॥
ತತಶ್ಚಕ್ರೇ ಪಿತಾ ನಾಮ ವಟೇಶ್ವರ ಇತಿಸ್ವಯಂ ।
ವಟಸ್ಥೇನ ಯತೋ ದತ್ತಃ ಸಂತುಷ್ಟೇನಾಂಶುಮಾಲಿನಾ ॥ ೧೮ ॥
ವಟೇಶ್ವರ ಸುತಾನ್ ದೃಷ್ಟ್ವಾ ಪೌತ್ರಾಂಶ್ಚ ದ್ವಿಜಸತ್ತಮಾಃ ।
ಗಾಲವಃ ಸೂರ್ಯಮಾಪನ್ನಃ ಕೃತ್ವಾ ಸುವಿಪುಲಂ ತಪಃ ॥ ೧೯ ॥
ವಟೇಶ್ವರೋಽಪಿ ಸಂಜ್ಞಾಯ ಪಿತ್ರಾ ಸಂಸ್ಥಾಪಿತಂ ರವಿಂ ।
ತದರ್ಥಂ ಕಾರಯಾಮಾಸ ಪ್ರಾಸಾದಂ ಸುಮನೋಹರಂ ॥ ೨೦ ॥

---

೧೩. ನೀನು ಸಾಂಬಸೂರ್ಯನ ಹತ್ತಿರ ಸ್ಥಾಪಿಸಿರುವ ಪ್ರತಿಮೆಯು ಭೂಲೋಕದಲ್ಲಿ ಸಾಂಬಸೂರ್ಯ ಎಂದು ಪ್ರಸಿದ್ಧವಾಗುವುದು.

೧೪–೧೫. ಇತರನೂ ಹನ್ನೆರಡು ಭಾನುವಾರ ಸಪ್ತಮಿಗಳಲ್ಲಿ ನಿರಾಹಾರನಾಗಿ ಭಕ್ತಿಯಿಂದ ಇವನನ್ನು ಪೂಜಿಸಿದರೆ ಅವನೂ ವಂಶವರ್ಧಕನಾದ ಪುತ್ರನನ್ನು ಪಡೆಯುವನು.

೧೬. ಸಪ್ತಾಶ್ವನಾದ ಸೂರ್ಯನು ಹೀಗೆ ಹೇಳಿ ಸುಮ್ಮನಾದನು. ಗಾಲವನೂ ಸಂತೋಷಗೊಂಡು ತನ್ನ ಮನೆಗೆ ಹೋದನು.

೧೭. ಸ್ವಲ್ಪಕಾಲದಲ್ಲಿಯೇ ಅವನಿಗೆ ಸೂರ್ಯನು ಹೇಳಿದ ಎಲ್ಲ ಲಕ್ಷಣಗಳಿಂದ ಕೂಡಿದ ಪುತ್ರನು ಜನಿಸಿದನು.

೧೮. ವಟಸ್ಥನಾದ ಸೂರ್ಯನು ಸಂತುಷ್ಟನಾಗಿ ಪುತ್ರನನ್ನು ಕೊಟ್ಟಿರುವುದರಿಂದ ತಂದೆಯು ಅವನಿಗೆ ವಟೇಶ್ವರನೆಂದು ಹೆಸರನ್ನಿಟ್ಟನು.

೧೯. ದ್ವಿಜವರ್ಯರೆ! ಗಾಲವನು ವಟೇಶ್ವರನ ಮಕ್ಕಳನ್ನು ನೋಡಿ ಅತಿಶಯ ತಪಸ್ಸನ್ನು ಮಾಡಿ ಸೂರ್ಯನನ್ನು ಸೇರಿದನು.

೨೦. ವಟೇಶ್ವರನು ತಂದೆಯು ಸ್ಥಾಪಿಸಿದ ಸೂರ್ಯನ ವಿಚಾರವನ್ನರಿತು ಅವನಿಗೆ ರಮ್ಯವಾದ ಆಲಯವನ್ನು ನಿರ್ಮಾಣಮಾಡಿಸಿದನು.

ತತಃ ಪ್ರಭೃತಿ ಲೋಕೇ ಚ ಸ ವಟಾದಿತ್ಯ ಸಂಜ್ಞಿತಃ ।
ಪುತ್ರಪ್ರದೋಹ್ಯಪುತ್ರಾಣಾಂ ವಿಖ್ಯಾತೋ ಭುವನತ್ರಯೇ ॥ ೨೧ ॥
ಸಪ್ತಮ್ಯಾಂ ಸೂರ್ಯವಾರೇಣ ಉಪವಾಸಪರಾಯಣಃ ।
ಯಸ್ತಂ ಪೂಜಯತೇ ಭಕ್ತ್ಯಾ ಸಪ್ತಮಿಾದ್ವಾದಶಕ್ರಮಾತ್ ।
ಸ ಪ್ರಾಪ್ನೋತಿ ಸುತಂ ಶ್ರೇಷ್ಠಂ ಸ್ವವಂಶಸ್ಯ ವಿವರ್ಧನಂ ॥ ೨೨ ॥
ನಿಷ್ಕಾಮೋ ವಾ ನರೋ ಯಸ್ತು ತಂ ಪೂಜಯತಿ ಮಾನವಃ ।
ಸ ಮೋಕ್ಷಮಾಪ್ನುಯಾನ್ನೂನಂ ದುರ್ಲಭಂ ತ್ರಿದಶೈರಪಿ ॥ ೨೩ ॥
ಅಥ ಗಾಥಾ ಪುರಾ ಗೀತಾ ನಾರದೇನ ಸುರರ್ಷಿಣಾ ।
ದೃಷ್ಟ್ವಾ ಪುತ್ರಪ್ರದಂ ದೇವಂ ವಟಾದಿತ್ಯಂ ಸುರೇಶ್ವರಂ ॥ ೨೪ ॥
ಅಪಿ ವರ್ಷಶತಾ ನಾರೀ ವಂಧ್ಯಾ ವಾ ದುರ್ಭಗಾಽಪಿ ವಾ ।
ಸಾಂಬಸೂರ್ಯಪ್ರಸಾದೇನ ಸದ್ಯೋ ಗರ್ಭವತೀ ಭವೇತ್ ॥ ೨೫ ॥
ಕಿಂ ದಾನೈಃ ಕಿಂ ವ್ರತೈರ್ಧ್ಯಾನೈಃ ಕಿಂ ಜಪೈಃ ಸೋಪವಾಸಕೈಃ ।
ಪುತ್ರಾರ್ಥಂ ವಿದ್ಯಮಾನೇಽಥ ಸಾಂಬಸೂರ್ಯೇ ಸುರೇಶ್ವರೇ ॥ ೨೬ ॥
ವರ್ಷಮೇಕಂ ನರೋ ಭಕ್ತ್ಯಾ ಯಃ ಪಶ್ಯೇತ್ಸೂರ್ಯವಾಸರೇ ।
ಕೃತಕ್ಷಣೋಽತ್ರ ಪುತ್ರಂ ಸ ಲಭತೇ ಚೋತ್ತಮಂ ಸುಖಂ ॥ ೨೭ ॥

---

೨೧. ಅದು ಮೊದಲ್ಗೊಂಡು ಅವನು ತ್ರಿಭುವನದಲ್ಲಿ ಅಪುತ್ರರಿಗೆ ಪುತ್ರರನ್ನು ಕೊಡುತ್ತ ವಟಾದಿತ್ಯನೆಂದು ಪ್ರಸಿದ್ಧನಾದನು.

೨೨. ಹನ್ನೆರಡು ಭಾನುವಾರ ಸಪ್ತಮಿಾದಿನಗಳಲ್ಲಿ ಉಪವಾಸಮಾಡಿ ಭಕ್ತಿಯಿಂದ ಆ ವಟಾದಿತ್ಯನನ್ನು ಪೂಜಿಸುವವನು ವಂಶೋದ್ಧಾರಕನಾದ ಪುತ್ರನನ್ನು ಪಡೆಯುವನು.

೨೩. ನಿಷ್ಕಾಮನಾದ ಮಾನವನು ಅವನನ್ನು ಪೂಜಿಸಿದರೆ ದೇವದುರ್ಲಭವಾದ ಮೋಕ್ಷವನ್ನು ಹೊಂದುವನು.

೨೪. ನಾರದ ಮುನಿಯು ಹಿಂದೆ ಪುತ್ರನನ್ನು ಅನುಗ್ರಹಿಸುವ ವಟಾದಿತ್ಯನನ್ನು ನೋಡಿ ಈ ಶ್ಲೋಕವನ್ನು ಹಾಡಿರುವನು.

೨೫. ನೂರು ವರ್ಷ ವಯಸ್ಸಿನ ಬಂಜೆ ಅಥವಾ ದುರ್ಭಗಳಾದ ಹೆಂಗಸೂ ಸಾಂಬಸೂರ್ಯನ ಅನುಗ್ರಹದಿಂದ ಕೂಡಲೇ ಗರ್ಭಿಣಿಯಾಗುವಳು.

೨೬. ಪುತ್ರಪ್ರದಾನಮಾಡಲು ಸಾಂಬಸೂರ್ಯನಿರಲು ದಾನ, ವ್ರತ, ಧ್ಯಾನ, ಜಪ, ಉಪವಾಸಗಳಿಂದೇನು ಪ್ರಯೋಜನ?

೨೭. ಒಂದು ವರ್ಷಕಾಲ ಇಲ್ಲಿ ಭಾನುವಾರದ ದಿನ ಅವಕಾಶವನ್ನು ಮಾಡಿಕೊಂಡು ಈ ಸಾಂಬಸೂರ್ಯನನ್ನು ಭಕ್ತಿಯಿಂದ ನೋಡುವವನು ಪುತ್ರನನ್ನು ಪಡೆದು ಸುಖವನ್ನು ಹೊಂದುವನು.

ತಸ್ಮಾತ್ಸರ್ವಪ್ರಯತ್ನೇನ ತಂ ದೇವಂ ಯತ್ನತೋ ದ್ವಿಜಾಃ ।
ಪಶ್ಯೇದಾತ್ಮಹಿತಾರ್ಥಾಯ ಸ್ವವಂಶ ಪರಿವೃದ್ಧಯೇ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಾಂಬಾದಿತ್ಯಮಾಹಾತ್ಮ್ಯವರ್ಣನಂ" ನಾಮ
ಷಟ್‌ಪಂಚಾಶತ್ತಮೋಽಧ್ಯಾಯಃ

---

೨೮. ಆದ್ದರಿಂದ ತನ್ನ ಹಿತಕ್ಕಾಗಿಯೂ, ವಂಶವೃದ್ಧಿಗಾಗಿಯೂ ಆ ಸಾಂಬ ಸೂರ್ಯನನ್ನು ಸಂದರ್ಶಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಾಂಬಾದಿತ್ಯಮಾಹಾತ್ಮ್ಯವರ್ಣನ" ವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಪಂಚಾಶತ್ತಮೋಽಧ್ಯಾಯಃ

### ಗಾಂಗೇಯ ಯಾತ್ರಾಖ್ಯಾನವರ್ಣನಂ

ಸೂತ ಉವಾಚ :—

ತಸ್ಮಿನ್ ಕ್ಷೇತ್ರೇ ತಥಾದಿತ್ಯಃ ಸ್ಥಾಪಿತೋ ದ್ವಿಜಸತ್ತಮಾಃ ।
ಭೀಷ್ಮೇಣ ಬ್ರಾಹ್ಮಣೇಂದ್ರಾಣಾಂ ಸಂಮತೇನ ತಥಾತ್ಮನಾ ॥ ೧ ॥
ಶಂತನೋರ್ದಯಿತಃ ಪುತ್ರೋ ಗಾಂಗೇಯ ಇತಿ ವಿಶ್ರುತಃ ।
ಆಸೀತ್ಪುರಾ ವರೋ ನೄಣಾಮೂರ್ಧ್ವರೇತಾಃ ಸುವಿಶ್ರುತಃ ॥ ೨ ॥
ತಸ್ಯಾಸೀತ್ತುಮುಲಂ ಯುದ್ಧಂ ಭಾರ್ಗವೇಣ ಸಮಂ ಮಹತ್ ।
ತ್ರಯೋವಿಂಶದ್ದಿನಾನ್ಯೇವ ದೇವಾಽಸುರರಣೋಪಮಂ ।
ಅಂಬಾಕೃತೇ ಶಿತೈಃ ಶಸ್ತ್ರೈರಸ್ತ್ರೈಶ್ಚ ತದನಂತರಂ ॥ ೩ ॥
ತತೋ ಬ್ರಹ್ಮಾದಯೋ ದೇವಾಃ ಸ್ವಯಮೇವ ವ್ಯವಸ್ಥಿತಾಃ ।
ತಾಭ್ಯಾಂ ನಿವಾರಣಾರ್ಥಾಯ ಶಾಂತ್ಯರ್ಥಂ ಸರ್ವದೇಹಿನಾಂ ।
ಗತಾಶ್ಚ ತೇ ಸಮುತ್ಥಾಪ್ಯ ಪುನರೇವ ತ್ರಿವಿಷ್ಟಪಂ ॥ ೪ ॥
ಅಂಬಾಽಪಿ ಪ್ರಾಪ್ಯ ಪರಮಂ ಗಾಂಗೇಯೋತ್ಥಂ ಪರಾಭವಂ ।
ಪ್ರವಿಷ್ಟಾ ಕೋಪ ರಕ್ತಾಕ್ಷೀ ಸುಸಮಿದ್ಧೇ ಹುತಾಶನೇ ॥ ೫ ॥

---

### ಕನ್ನಡದ ಅನುವಾದ

### ಗಾಂಗೇಯ ಯಾತ್ರಾಖ್ಯಾನವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೇ! ಆ ಕ್ಷೇತ್ರದಲ್ಲಿ ಬ್ರಾಹ್ಮಣರಿಗೆ ಅಭಿಮತನಾದ ಭೀಷ್ಮನು ತಾನೇ ಆದಿತ್ಯನನ್ನು ಸ್ಥಾಪಿಸಿರುವನು.

೨. ಹಿಂದೆ ಶಂತನುವಿನ ಮಗನೂ, ಬ್ರಹ್ಮಚಾರಿಯೂ, ನರೋತ್ತಮನೂ ಆದ ಗಾಂಗೇಯನೆಂಬುವನಿದ್ದನು.

೩. ಅವನಿಗೆ ಪರಶುರಾಮನೊಡನೆ ಇಪ್ಪತ್ತಮೂರು ದಿನಗಳು ಅಂಬೆಗಾಗಿ ತೀಕ್ಷ್ಣವಾದ ಶಸ್ತ್ರಾಸ್ತ್ರಗಳಿಂದ ದೇವಾಸುರ ಯುದ್ಧದಂತೆ ಭಯಂಕರ ಯುದ್ಧವು ನಡೆಯಿತು.

೪. ಬಳಿಕ ಬ್ರಹ್ಮಾದಿ ದೇವತೆಗಳು ತಾವೇ ಸಕಲ ಪ್ರಾಣಿಗಳ ಶಾಂತಿಗಾಗಿ ಅವರೀರ್ವರ ಯುದ್ಧವನ್ನು ನಿಲ್ಲಿಸಿದರು. ಹಾಗೆ ಯುದ್ಧವನ್ನು ತಡೆದು ಅವರೆಲ್ಲರೂ ದೇವಲೋಕಕ್ಕೆ ತೆರಳಿದರು.

೫. ಅಂಬೆಯೂ ಗಾಂಗೇಯನಿಂದ ಪರಾಭವವನ್ನು ಹೊಂದಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವಳಾಗಿ ಉರಿಯುವ ಬೆಂಕಿಯನ್ನು ಪ್ರವೇಶಿಸಿದಳು.

ಭರ್ತ್ಸಯಿತ್ವಾ ನದೀಪುತ್ರಂ ಬಾಷ್ಪವ್ಯಾಕುಲಲೋಚನಾ ।
ತತಃ ಪ್ರೋವಾಚ ಮಧ್ಯಸ್ಥಾ ವಹ್ನೇಃ ಕುರು ಪಿತಾಮಹಂ ॥ ೬ ॥
ಯಸ್ಮಾದ್ಭೀಷ್ಮ ತ್ವಯಾ ತ್ಯಕ್ತಾ ಕಾಮಾರ್ತಾಽಹಂ ಸುದುರ್ಮತೇ ।
ತಸ್ಮಾತ್ತವ ವಧಾಯಾಽಽಶು ಭವಿಷ್ಯಾಮಿ ಪುನಃ ಕ್ಷಿತೌ ॥ ೭ ॥
ಸ್ತ್ರೀಹತ್ಯಯಾ ಸಮಾಯುಕ್ತಸ್ತ್ವಂ ಚ ನೂನಂ ಭವಿಷ್ಯಸಿ ।
ಪ್ರಮಾಣಂ ಯದಿ ಧರ್ಮೋಽತ್ರ ಸ್ಮೃತಿಶಾಸ್ತ್ರಸಮುದ್ಭವಃ ॥ ೮ ॥
ತತಃ ಸ ಘೃಣಯಾವಿಷ್ಟೋ ಭೀಷ್ಮಃ ಕುರುಪಿತಾಮಹಃ ।
ಮಾರ್ಕಂಡೇಯಂ ಮುನಿಶ್ರೇಷ್ಠಂ ಪಪ್ರಚ್ಛ ವಿನಯಾನ್ವಿತಃ ॥ ೯ ॥
ಭಗವನ್ ಕಾಶಿರಾಜಸ್ಯ ಸುತಯಾ ಮೇ ಪ್ರಜಲ್ಪಿತಂ ।
ಮಮ ಮೃತ್ಯುಕರಂ ಪಾಪಂ ಸಕಲಂ ತೇ ಭವಿಷ್ಯತಿ ॥ ೧೦ ॥
ತತ್ಕಿಂ ಸ್ಯಾದ್ವಾಕ್ಯಮಾತ್ರೇಣ ನೋ ವಾ ಬ್ರಾಹ್ಮಣ ಸತ್ತಮ ।
ಅತ್ರ ಮೇ ಸಂಶಯಸ್ತತ್ವಂ ಯಥಾವದ್ವಕ್ತುಮರ್ಹಸಿ ॥ ೧೧ ॥

ಶ್ರೀ ಮಾರ್ಕಂಡೇಯ ಉವಾಚ :—

ಆಕ್ಷಿಪ್ತಸ್ತಾಡಿತೋ ವಾಽಪಿ ಯಮುದ್ದಿಶ್ಯ ತ್ಯಜೇದಸೂನ್ ।
ಸ್ತ್ರೀಜನೋ ವಾ ದ್ವಿಜೋವಾಽಪಿ ತಸ್ಯ ಪಾಪಂತು ತದ್ಭವೇತ್ ॥ ೧೨ ॥

---

೬. ಅನಂತರ ಅಗ್ನಿಯ ನಡುವೆ ನಿಂತು ಕೌರವ ಪಿತಾಮಹನಾದ ಗಾಂಗೇಯನನ್ನು ಧಿಕ್ಕರಿಸಿ ಕಣ್ಣೀರನ್ನು ಸುರಿಸುತ್ತ ಇಂತೆಂದಳು.

೭–೮. "ದುರ್ಬುದ್ಧಿಯಾದ ಭೀಷ್ಮನೆ! ನೀನು ಕಾಮಪೀಡಿತಳಾದ ನನ್ನನ್ನು ತ್ಯಜಿಸಿದ್ದರಿಂದ ನಿನ್ನನ್ನು ಕೊಲ್ಲಲು ನಾನು ಶೀಘ್ರವಾಗಿಯೆ ಭೂಮಿಯಲ್ಲಿ ಹುಟ್ಟುವೆನು. ಸ್ಮೃತ್ಯುಕ್ತವಾದ ಧರ್ಮವು ಪ್ರಮಾಣವಾಗಿದ್ದರೆ ನೀನು ನಿಶ್ಚಯ ವಾಗಿಯೂ ಸ್ತ್ರೀಹತ್ಯೆಯಿಂದ ಪೀಡಿತನಾಗುವೆ."

೯. ಅನಂತರ ಆ ಕುರುಪಿತಾಮಹನಾದ ಭೀಷ್ಮನು ದಯೆಗೊಂಡು ವಿನಯ ದಿಂದ ಸಹಿತನಾಗಿ ಮಾರ್ಕಂಡೇಯ ಮುನಿವರ್ಯನನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು.

೧೦. "ಪೂಜ್ಯನೆ! ಕಾಶಿರಾಜನ ಮಗಳಾದ ಅಂಬಿಕೆಯು ನನ್ನ ವಧೆ ಯಿಂದುಂಟಾದ ಪಾಪವು ನಿನಗೆ ಸಂಭವಿಸುವುದೆಂದು ಹೇಳಿದಳು.

೧೧. ಅದು ಕೇವಲ ಮಾತಿನಿಂದಲೇ? ಅಥವಾ ನನಗೆ ನಿಜವಾಗಿಯೂ ಅಂಥ ಪಾಪವುಂಟಾಗುವುದೇ? ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಆದ್ದರಿಂದ ನಿಜವಾದ ವಿಷಯವನ್ನು ಹೇಳು."

೧೨. ಶ್ರೀ ಮಾರ್ಕಂಡೇಯನು ಹೇಳುತ್ತಾನೆ:—ಹೆಂಗಸರು ಅಥವಾ ಬ್ರಾಹ್ಮಣರು ಆಕ್ಷಿಪ್ತರಾಗಿ ಅಥವಾ ತಾಡಿತರಾಗಿ ಯಾವನನ್ನುದ್ದೇಶಿಸಿ ಪ್ರಾಣ ವನ್ನು ತ್ಯಜಿಸುವರೋ ಅವನಿಗೆ ಆ ಪಾಪವುಂಟಾಗುವುದು.

ಸ್ತ್ರಿಯಂ ವಾ ಬ್ರಾಹ್ಮಣಂ ವಾಽಪಿ ತಸ್ಮಾನ್ನೈವ ಪ್ರಕೋಪಯೇತ್ ।
ನಿಘ್ನಂತಂ ವಾ ಶಪಂತಂ ವಾ ಯದೀಚ್ಛೇಚ್ಛುಭಮಾತ್ಮನಃ ॥ ೧೩ ॥
ತ್ವಯಾ ಪುನರ್ವರಾಕೀ ಸಾ ಕಾಮಾರ್ತಾ ಸಮುಪೇಕ್ಷಿತಾ ।
ಜಿತ್ವಾ ಸ್ವಯಂವರೇ ಪೂರ್ವಂ ತತ್ಕಥಂ ಸ್ಯಾನ್ನ ಪಾಪಭಾಕ್ ॥ ೧೪ ॥

ಭೀಷ್ಮ ಉವಾಚ :—

ತದರ್ಥಂ ವದ ಮೇ ಬ್ರಹ್ಮನ್ ಪ್ರಾಯಶ್ಚಿತ್ತಂ ವಿಶುದ್ಧಯೇ ।
ತಪೋ ವಾ ಯದಿ ವಾ ದಾನಂ ವ್ರತಂ ನಿಯಮಮೇವ ವಾ ॥ ೧೫ ॥

ಮಾರ್ಕಂಡೇಯ ಉವಾಚ :—

ದಶಾನಾಂ ಬ್ರಾಹ್ಮಣೇಂದ್ರಾಣಾಂ ಯದ್ವಧೇ ಪಾತಕಂ ಸ್ಮೃತಂ ।
ತತ್ಪಾಪಂ ಸ್ತ್ರೀವಧೇ ಕೃತ್ಸ್ನಂ ಜಾಯತೇ ಭರತರ್ಷಭ ॥ ೧೬ ॥
ತದತ್ರ ವಿಷಯೇ ದಾನಂ ನ ತಪೋ ನ ವ್ರತಾದಿಕಂ ।
ತೀರ್ಥಸೇವಾಂ ಪರಿತ್ಯಜ್ಯ ತಸ್ಮಾತ್ತ್ವಂ ತಾಂ ಸಮಾಚರ ॥ ೧೭ ॥

ಸೂತ ಉವಾಚ :—

ಸ ತಸ್ಯ ವಚನಂ ಶ್ರುತ್ವಾ ಭೀಷ್ಮಃ ಕುರುಪಿತಾಮಹಃ ।
ತೀರ್ಥಯಾತ್ರಾಪರೋ ಭೂತ್ವಾ ಬಭ್ರಾಮ ಕ್ಷಿತಿಮಂಡಲೇ ॥ ೧೮ ॥

---

೧೩. ಆದುದರಿಂದ ತನಗೆ ಶುಭವನ್ನು ಬಯಸುವವನು, ಹೆಂಗಸಾಗಲಿ, ಬ್ರಾಹ್ಮಣನಾಗಲಿ ಹೊಡೆಯುತ್ತಿದ್ದರೂ ಅಥವಾ ಶಪಿಸುತ್ತಿದ್ದರೂ ಅವರನ್ನು ಕೋಪಗೊಳಿಸಬಾರದು.

೧೪. ನೀನು ಹಿಂದೆ ಸ್ವಯಂವರದಲ್ಲಿ ಜಯಿಸಿ ದೀನಳೂ, ಕಾಮಪೀಡಿತಳೂ ಆದ ಆ ಅಂಬಿಕೆಯಲ್ಲಿ ಉದಾಸೀನನಾದ್ದರಿಂದ ಪಾಪವನ್ನು ಹೇಗೆತಾನೆ ಹೊಂದುವುದಿಲ್ಲ.

೧೫. ಭೀಷ್ಮನು ಹೇಳುತ್ತಾನೆ:—ಮುನಿಯೆ! ಆ ಪಾಪದ ಪರಿಶುದ್ಧಿಗಾಗಿ ತಪಸ್ಸು, ದಾನ, ವ್ರತ ಅಥವಾ ನಿಯಮಗಳಲ್ಲಿ ಯಾವುದಾದರೂ ಒಂದನ್ನು ನನಗೆ ವಿಧಿಸು.

೧೬. ಮಾರ್ಕಂಡೇಯನು ಹೇಳುತ್ತಾನೆ:—ಭೀಷ್ಮ! ಹತ್ತು ಮಂದಿ ಬ್ರಾಹ್ಮಣರನ್ನು ಕೊಂದ ಪಾಪವು ಒಬ್ಬ ಸ್ತ್ರೀಯವಧೆಯಿಂದ ಸಂಭವಿಸುವುದು.

೧೭. ಈ ವಿಷಯದಲ್ಲಿ ತೀರ್ಥಸೇವೆಯನ್ನು ಬಿಟ್ಟು ದಾನ, ತಪಸ್ಸು, ವ್ರತಾದಿಗಳಿಲ್ಲ. ಆದುದರಿಂದ ಅದನ್ನಾಚರಿಸು.

೧೮. ಸೂತನು ಹೇಳುತ್ತಾನೆ:—ಕುರುಪಿತಾಮಹನಾದ ಭೀಷ್ಮನು ಅವನ ಆ ಮಾತನ್ನು ಕೇಳಿ ತೀರ್ಥಯಾತ್ರೆಗಾಗಿ ಭೂಮಿಯಲ್ಲಿ ಸಂಚರಿಸಿದನು.

ತತಃ ಕ್ರಮಾತ್ಸಮಾಯಾತೋ ಭ್ರಮಮಾಣೋ ಮಹೀತಲೇ ।
ಚಮತ್ಕಾರಪುರೇ ಕ್ಷೇತ್ರೇ ನಾನಾತೀರ್ಥಸಮಾಕುಲೇ ॥ ೧೯ ॥
ಅಥಾಽಪಶ್ಯನ್ಮಹಾತ್ಮಾ ಸ ಸುಪುಣ್ಯಂ ತದ್ಗಯಾಶಿರಃ ।
ಸ್ನಾತ್ವಾ ಶ್ರಾದ್ಧಂ ಚ ವಿಧಿವದ್ಯಾವಚ್ಛ್ರದ್ಧಾಸಮನ್ವಿತಃ ॥ ೨೦ ॥
ಚಕ್ರೇ ತಾವನ್ನಭೋವಾಣೀ ವಾಕ್ಯಮೇತದುವಾಚ ಹ ।
ಭೀಷ್ಮ ಭೀಷ್ಮ ಮಹಾಬಾಹೋ ನಾಽರ್ಹಸ್ತ್ವಂ ಶ್ರಾದ್ಧಜಂ ವಿಧಿಂ ॥ ೨೧ ॥
ಕರ್ತುಂ ಸ್ತ್ರೀಹತ್ಯಯಾ ಯುಕ್ತಸ್ತಸ್ಮಾಚ್ಛೃಣು ವಚೋ ಮಮ ।
ಶರ್ಮಿಷ್ಠಾತೀರ್ಥಮಿತ್ಯೇವ ಖ್ಯಾತಂ ಪಾತಕನಾಶನಂ ॥ ೨೨ ॥
ಅಸ್ಮಾತ್ಸ್ಥಾನಾತ್ಸಮೀಪಸ್ಥಂ ವಾರುಣ್ಯಾಂ ದಿಶಿ ಪುಣ್ಯಕೃತ್ ।
ಕೃಷ್ಣಾಂಗಾರಕ ಷಷ್ಠ್ಯಾಂ ಯೋ ನರಃ ಸ್ನಾನಂ ಸಮಾಚರೇತ್ ॥ ೨೩ ॥
ಸ ಸ್ತ್ರೀಹತ್ಯಾ ಕೃತಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ।
ತಸ್ಮಾದದ್ಯ ದಿನೇ ಪುತ್ರ ಭೌಮವಾರ ಸಮನ್ವಿತಾ ॥ ೨೪ ॥
ಸೈವ ಷಷ್ಠೀ ತಿಥಿಃ ಪುಣ್ಯಾ ತಸ್ಮಾತ್ತತ್ರ ದ್ರುತಂ ವ್ರಜ ।
ಅಹಂ ತವ ಪಿತಾ ಪುತ್ರ ಶಂತನುಃ ಪೃಥಿವೀಪತಿಃ ॥ ೨೫ ॥
ಸ್ತ್ರೀಹತ್ಯಯಾನ್ವಿತಂ ಜ್ಞಾತ್ವಾ ತತಸ್ತೂರ್ಣಮಿಹಾಗತಃ ।
ತತೋ ಭೀಷ್ಮೋ ದ್ರುತಂ ಗತ್ವಾ ತತ್ರ ಸ್ಥಾನೇ ಸಮಾಹಿತಃ ॥ ೨೬ ॥

---

೧೯. ಅನಂತರ ಕ್ರಮವಾಗಿ ಸಂಚರಿಸುತ್ತ ಅನೇಕ ತೀರ್ಥಗಳಿಂದ ತುಂಬಿರುವ ಚಮತ್ಕಾರಪುರ ಕ್ಷೇತ್ರಕ್ಕೆ ಬಂದನು.

೨೦–೨೫. ಬಳಿಕ ಮಹಾತ್ಮನಾದ ಅವನು ಅತಿ ಪುಣ್ಯಕರವಾದ ಗಯಾಶಿರಸ್ಸನ್ನು ನೋಡಿ ಅಲ್ಲಿ ಮಿಂದು ವಿಧಿಯಂತೆ ಶ್ರದ್ಧೆಯಿಂದ ಶ್ರಾದ್ಧಗೈಯ್ಯತೊಡಗಲು ಆಕಾಶವಾಣಿಯು ಇಂತೆಂದಿತು. "ಮಹಾಬಾಹುವಾದ ಎಲೈ ಭೀಷ್ಮನೆ ! ಸ್ತ್ರೀಹತ್ಯೆಯಿಂದಕೂಡಿದ ನೀನು ಶ್ರಾದ್ಧಗೈಯ್ಯಲರ್ಹನಲ್ಲ. ಆದುದರಿಂದ ನನ್ನ ಮಾತನ್ನು ಕೇಳು. ಈ ಸ್ಥಳದಿಂದ ಪಶ್ಚಿಮದಿಕ್ಕಿಗೆ ಸಮೀಪದಲ್ಲಿ ಪಾಪವನ್ನು ನಿವಾರಿಸುವ ಶರ್ಮಿಷ್ಠಾತೀರ್ಥವಿದೆ. ಇದರಲ್ಲಿ ಕೃಷ್ಣಾಂಗಾರಕ ಷಷ್ಠೀದಿನ ಮಿಂದವನು ಸ್ತ್ರೀಹತ್ಯೆಯಿಂದುಂಟಾದ ಪಾಪದಿಂದ ವಿಮುಕ್ತನಾಗುವನು. ಪುತ್ರ! ಈ ದಿನ ಕೃಷ್ಣಾಂಗಾರಕ ಷಷ್ಠಿಯಾಗಿದೆ. ಆದುದರಿಂದ ನೀನು ಶೀಘ್ರವಾಗಿ ಅಲ್ಲಿಗೆ ಹೋಗು. ನಾನು ನಿನ್ನ ತಂದೆಯಾದ ಶಂತನು ರಾಜನಾಗಿರುವೆನು.

೨೬–೨೭. ನೀನು ಸ್ತ್ರೀಹತ್ಯೆಯಿಂದ ಕೂಡಿರುವುದನ್ನು ತಿಳಿದು ಶೀಘ್ರವಾಗಿ ಇಲ್ಲಿಗೆ ಬಂದೆನು." ಬಳಿಕ ಭೀಷ್ಮನು ಬೇಗನೆ ಹೋಗಿ ಅಲ್ಲಿ ಮಿಂದು ಶ್ರದ್ಧೆಯಿಂದ

ಸ್ನಾನಂ ಕೃತ್ವಾ ತತಃ ಶ್ರಾದ್ಧಂ ಚಕ್ರೇ ಶ್ರದ್ಧಾಸಮನ್ವಿತಃ ।
ತತೋ ಭೂಯಃ ಸಮಾಗತ್ಯ ಸ ತಂ ಪ್ರೋವಾಚ ಶಂತನುಃ ॥ ೨೭ ॥
ವಿಪಾಪ್ಮಾ ತ್ವಂ ಕುರುಶ್ರೇಷ್ಠ ಸಂಜಾತೋಽಸಿ ನ ಸಂಶಯಃ ।
ತಸ್ಮಾನ್ನಿಜ ಗೃಹಂ ಗಚ್ಛ ರಾಜ್ಯಚಿಂತಾಂ ಸಮಾಚರ ॥ ೨೮ ॥
ತತಃ ಸ ವಿಸ್ಮಯಾವಿಷ್ಟೋ ಜ್ಞಾತ್ವಾ ತೀರ್ಥಮನುತ್ತಮಂ ।
ವಾಸುದೇವಾತ್ಮಿಕಾಮರ್ಚಾಂ ತಥಾಽನ್ಯಾಂ ಕುರುಸತ್ತಮಃ ॥ ೨೯ ॥
ಪಾರಿಜಾತಮಯೀಂ ಮೂರ್ತಿಂ ರವೇರ್ಲಕ್ಷಣಲಕ್ಷಿತಾಂ ।
ಸುಪ್ರಮಾಣಾಂ ಸುರೂಪಾಂ ಚ ಶ್ರದ್ಧಾಪೂತೇನ ಚೇತಸಾ ॥ ೩೦ ॥
ತಥಾಽನ್ಯತ್ಸ್ಥಾಪಯಾಮಾಸ ಲಿಂಗಂ ದೇವಸ್ಯ ಶೂಲಿನಃ ।
ದುರ್ಗಾಂ ಚ ಭಕ್ತಿಸಂಯುಕ್ತೋ ವಿಧಿದೃಷ್ಟೇನ ಕರ್ಮಣಾ ॥ ೩೧ ॥
ತತಃ ಸರ್ವಾನ್ ಸಮಾಹೂಯ ಸವಿಪ್ರಾನ್ ಪುರಸಂಭವಾನ್ ।
ಪ್ರೋವಾಚ ಕೌರವೋ ಭೀಷ್ಮೋ ವಿನಯಾಽವನತಃ ಸ್ಥಿತಃ ॥ ೩೨ ॥
ಮಯಾ ವಿನಿರ್ಮಿತಂ ವಿಪ್ರಾ ದೇವಾಗಾರ ಚತುಷ್ಟಯಂ ।
ಏತತ್ಕ್ಷೇತ್ರೇ ಚ ಯುಷ್ಮಾಕಂ ದಯಾಂ ಕೃತ್ವಾ ಮಮೋಪರಿ ॥ ೩೩ ॥
ಪಾಲಯಧ್ವಂ ಪ್ರಯಾಸ್ಯಾಮಿ ಸ್ವಗೃಹಂ ಪ್ರತಿ ಸತ್ವರಂ ।
ಪ್ರೇರಿತಃ ಪಿತೃಭಿರ್ದಿವ್ಯೈಃ ಸ್ವರ್ಗಮಾರ್ಗಸಮಾಶ್ರಿತೈಃ ॥ ೩೪ ॥

---

ಶ್ರಾದ್ಧಮಾಡಲು ಮರಳಿ ಶಂತನುವು ಅಲ್ಲಿಗೆ ಬಂದು ಭೀಷ್ಮನನ್ನು ಕುರಿತು ಇಂತೆಂದನು.

೨೮. "ಕುರುವಂಶಶ್ರೇಷ್ಠನಾದ ಓ ಭೀಷ್ಮ! ನೀನು ನಿಜವಾಗಿಯೂ ಪಾಪ ರಹಿತನಾಗಿರುವೆ. ಆದುದರಿಂದ ನಿನ್ನ ಮನೆಗೆ ಹೋಗಿ ರಾಜ್ಯವನ್ನಾಳು."

೨೯–೩೧. ಬಳಿಕ ಆ ಭೀಷ್ಮನು ಅದು ಉತ್ತಮವಾದ ತೀರ್ಥವೆಂದರಿತು ಆಶ್ಚರ್ಯಗೊಂಡು ಸೂರ್ಯನ ಲಕ್ಷಣದಿಂದ ಕೂಡಿದ ಪಾರಿಜಾತರೂಪವಾದ ಸುಂದರವಾದ ವಾಸುದೇವ ಮೂರ್ತಿಯನ್ನೂ, ಮಹೇಶ್ವರಲಿಂಗವನ್ನೂ, ದುರ್ಗೆಯನ್ನೂ ವಿಧಿಯಂತೆ ಶ್ರದ್ಧೆಯಿಂದ ಪ್ರತಿಷ್ಠೆಮಾಡಿದನು.

೩೨. ತರುವಾಯ ಅವನು ಆ ಪಟ್ಟಣದ ಬ್ರಾಹ್ಮಣರನ್ನೆಲ್ಲ ಕರೆಯಿಸಿ ವಿನಯದಿಂದ ಇಂತೆಂದನು.

೩೩–೩೪. ದ್ವಿಜರೆ! ನಾನು ನಿಮ್ಮ ಈ ಕ್ಷೇತ್ರದಲ್ಲಿ ನಾಲ್ಕು ದೇವಾಲಯಗಳನ್ನು ನಿರ್ಮಿಸಿರುವೆನು. ನೀವು ನನ್ನ ಮೇಲೆ ದಯೆಮಾಡಿ ಇವುಗಳನ್ನು ಕಾಪಾಡಿರಿ. ನಾನು ಸ್ವರ್ಗವನ್ನಾಶ್ರಯಿಸಿದ ಪಿತೃಗಳ ಪ್ರೇರಣೆಯಿಂದ ನನ್ನ ಮನೆಗೆ ಹೋಗುವೆನು.

ಬ್ರಾಹ್ಮಣಾ ಊಚುಃ:—
ಗಚ್ಛ ಗಚ್ಛ ಸುರಶ್ರೇಷ್ಠ ಸುವಿಶ್ರಬ್ಧಃ ಸ್ವಮಾಯಯಾ ।
ವಯಂ ಸರ್ವೇ ಕರಿಷ್ಯಾಮೋ ಯುಷ್ಮಚ್ಛ್ರೇಯೋಽಭಿವರ್ಧನಂ ॥ ೩೫ ॥
ದೇವಶ್ರೇಣಿರಿಯಂ ರಾಜನ್ಯಾ ತ್ವಯಾಽತ್ರ ವಿನಿರ್ಮಿತಾ ।
ಅಸ್ಯಾಃ ಪೂಜಾದಿಕಂ ಸರ್ವಂ ಕರಿಷ್ಯಾಮಃ ಸದಾ ವಯಂ ॥ ೩೬ ॥
ತವಾಽಪಿ ವಿನಯಂ ದೃಷ್ಟ್ವಾ ಪರಿತುಷ್ಟಾ ವಯಂ ನೃಪ ।
ಸರ್ವಾನ್ ಪ್ರಾರ್ಥಯ ತಸ್ಮಾತ್ತ್ವಂ ವರಂ ಸ್ವಂ ಮನಸಿ ಸ್ಥಿತಂ ॥ ೩೭ ॥
ಭೀಷ್ಮ ಉವಾಚ:—
ಏಷ ಏವ ವರೋಽಸ್ಮಾಕಂ ಯತ್ಸಂತುಷ್ಟಾ ದ್ವಿಜೋತ್ತಮಾಃ ।
ತಥಾಪ್ಯಾಶು ವಚಃಕಾರ್ಯಂ ಯುಷ್ಮದೀಯಂ ಮಯಾಽಧುನಾ ॥ ೩೮ ॥
ಏತಾನಿ ದೇವಸದ್ಮಾನಿ ಮದೀಯಾನಿ ನರೋ ಭುವಿ ।
ಯೋ ಯಂ ಕಾಮಮಭಿಧ್ಯಾಯ ಪೂಜಯೇಚ್ಛ್ರದ್ಧಯಾನ್ವಿತಃ ।
ಪ್ರಸಾದಾದೇವ ಯುಷ್ಮಾಕಂ ತಸ್ಯ ತತ್ಸ್ಯಾದಸಂಶಯಂ ॥ ೩೯ ॥
ಬ್ರಾಹ್ಮಣಾ ಊಚುಃ:—
ಆದಿತ್ಯಸ್ಯ ಕರಿಷ್ಯಾಮೋ ಯಾತ್ರಾಂ ಭಾದ್ರಪದೇ ವಯಂ ।
ಸಪ್ತಮ್ಯಾಂ ಸೂರ್ಯವಾರೇಣ ಸರ್ವದೈವ ಸಮಾಹಿತಾಃ ॥ ೪೦ ॥

---

೩೫. ಬ್ರಾಹ್ಮಣರು ಹೇಳುತ್ತಾರೆ:—ಕುರುಶ್ರೇಷ್ಠನಾದ ಭೀಷ್ಮನೇ! ನೀನು ನಂಬಿಕೆಯಿಂದ ಮನೆಗೆ ಹೋಗು. ನಾವೆಲ್ಲ ನಿನ್ನಲ್ಲಿರುವ ಪ್ರೀತಿಯಿಂದ ನಿನ್ನ ಶ್ರೇಯೋಭಿವೃದ್ಧಿಯ ಕಾರ್ಯವನ್ನೆಸಗುವೆವು.

೩೬. ದೊರೆಯೆ! ನೀನು ನಿರ್ಮಿಸಿದ ಈ ದೇವತೆಗಳಿಗೆ ಯಾವಾಗಲೂ ನಾವು ಪೂಜೆ ಮೊದಲಾದುವುಗಳನ್ನು ಮಾಡುವೆವು.

೩೭. ನಾವು ನಿನ್ನ ವಿನಯವನ್ನು ಈಕ್ಷಿಸಿ ಸಂತೋಷಗೊಂಡಿದ್ದೇವೆ. ಆದುದರಿಂದ ನೀನು ನಮ್ಮೆಲ್ಲರಿಂದಲೂ ಇಷ್ಟವಾದ ವರವನ್ನು ಕೇಳಿಕೊ.

೩೮–೩೯. ಭೀಷ್ಮನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಸಂತುಷ್ಟರಾಗಿರುವುದೇ ನನಗೆ ವರವಾಗಿರುವುದು. ಆದರೂ ನಾನು ಈಗ ನಿಮ್ಮ ಮಾತನ್ನು ನಡೆಸಬೇಕು. ಭೂಮಿಯಲ್ಲಿ ನನ್ನೀ ದೇವಾಲಯಗಳಲ್ಲಿರುವ ದೇವತೆಗಳನ್ನು ಮನುಷ್ಯನು ಯಾವ ಯಾವ ಇಷ್ಟಾರ್ಥವನ್ನು ಚಿಂತಿಸಿ ಶ್ರದ್ಧೆಯಿಂದ ಪೂಜಿಸುವನೋ ಅವನಿಗೆ ನಿಮ್ಮ ಅನುಗ್ರಹದಿಂದ ಅದು ನಿಶ್ಚಯವಾಗಿಯೂ ಸಿದ್ಧಿಸಲಿ.

೪೦. ಬ್ರಾಹ್ಮಣರು ಹೇಳುತ್ತಾರೆ:—ನಾವು ಭಾದ್ರಪದಮಾಸದ ಸಪ್ತಮೀ ಭಾನುವಾರದ ದಿನ ಸೂರ್ಯಯಾತ್ರೆಯನ್ನು ಸಾವಧಾನಮನಸ್ಸಿನಿಂದ ಮಾಡುವೆವು.

ತಥಾ ಶಿವಸ್ಯ ಚಾಷ್ಟಮ್ಯಾಂ ಚೈತ್ರಶುಕ್ಲೇ ವಿಶೇಷತಃ ।
ಚತುರ್ದಶ್ಯಾಂ ಮಹಾಭಾಗ ತವಸ್ನೇಹಾನ್ನ ಸಂಶಯಃ ॥ ೪೧ ॥
ಶಯನೇ ಬೋಧನೇ ವಿಷ್ಣೋಃ ಸಂಪ್ರಾಪ್ತೇ ದ್ವಾದಶೀದಿನೇ ।
ವಿಷ್ಣೋರಪಿ ಚ ದುರ್ಗಾಯಾಃ ಸಂಪ್ರಾಪ್ತೇ ನವಮೀದಿನೇ ॥ ೪೨ ॥
ಆಶ್ವಿನೇ ಶುಕ್ಲಪಕ್ಷೇ ಚ ಗೀತವಾದಿತ್ರನಿಃಸ್ವನೈಃ ।
ಮಹೋತ್ಸವಂ ತಥಾ ಚಿತ್ರೈರ್ಹಾಸ್ಯಲಾಸ್ಯೈಃ ಪೃಥಗ್ವಿಧೈಃ ॥ ೪೩ ॥
ಯಸ್ತತ್ರ ಮಾನವೋ ನಿತ್ಯಂ ಶ್ರದ್ಧಯಾ ಪರಯಾ ಯುತಃ ।
ಕರಿಷ್ಯತಿ ಚ ಗೀತಾದಿ ಸ ಯಾಸ್ಯತಿ ಪರಾಂ ಗತಿಂ ॥ ೪೪ ॥
ವಯಂ ತಸ್ಯ ಭವಿಷ್ಯಾಮಃ ಸದೈವ ಪ್ರೀತಮಾನಸಾಃ ।
ಪ್ರದಾಸ್ಯಾಮಸ್ತಥಾ ಕಾಮಾನ್ ಮನಸಾ ವಾಂಛಿತಾನ್ನೃಪ ॥ ೪೫ ॥
ಏವಮುಕ್ತ್ವಾಽಥ ತೇ ವಿಪ್ರಾಃ ಸ್ವಾನಿ ಸ್ಥಾನಾನಿ ಭೇಜಿರೇ ।
ಭೀಷ್ಮೋಽಪಿ ಹರ್ಷಸಂಯುಕ್ತಃ ಸ್ವಗೃಹಂ ಪ್ರಸ್ಥಿತಸ್ತತಃ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಾಂಗೇಯಯಾತ್ರಾಖ್ಯಾನವರ್ಣನಂ" ನಾಮ
ಸಪ್ತಪಂಚಾಶತ್ತಮೋಽಧ್ಯಾಯಃ

---

೪೧. ಹಾಗೆಯೇ ನಿನ್ನಲ್ಲಿರುವ ಸ್ನೇಹದಿಂದ ಚೈತ್ರಶುಕ್ಲಾಷ್ಟಮೀದಿನವೂ, ಚತುರ್ದಶೀದಿನವೂ ಶಿವನನ್ನಾರಾಧಿಸುವೆವು.

೪೨–೪೩. ಶಯನೋತ್ಥಾನದ್ವಾದಶೀ ದಿನಗಳಲ್ಲಿ ಹರಿಯನ್ನೂ, ಆಶ್ವಿನ ಶುಕ್ಲ ಪಕ್ಷದ ನವಮೀದಿನ ದುರ್ಗೆಯನ್ನೂ ಪೂಜಿಸಿ ಗೀತ, ವಾದಿತ್ರ ಧ್ವನಿಗಳಿಂದಲೂ, ಬಗೆಬಗೆಯ ಹಾಸ್ಯಲಾಸ್ಯಗಳಿಂದಲೂ ಮಹೋತ್ಸವವನ್ನಾಚರಿಸುವೆವು.

೪೪. ಆಸಮಯದಲ್ಲಿ ಅತಿಶಯವಾದ ಶ್ರದ್ಧೆಯಿಂದ ಗೀತಾದಿಗಳನ್ನು ಮಾಡುವ ಮಾನವನು ಉತ್ತಮಗತಿಯನ್ನು ಹೊಂದುವನು.

೪೫. ನಾವು ಯಾವಾಗಲೂ ಅವನಲ್ಲಿ ಪ್ರೀತರಾಗಿ ಮನೋಭೀಷ್ಟಗಳನ್ನು ಅನುಗ್ರಹಿಸುವೆವು.

೪೬. ಆ ಬ್ರಾಹ್ಮಣರು ಹೀಗೆ ಹೇಳಿ ತಮ್ಮ ಸ್ಥಳಕ್ಕೆ ಹೊರಟುಹೋದರು. ಭೀಷ್ಮನೂ ಸಂತೋಷದಿಂದ ತನ್ನ ಮನೆಗೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಾಂಗೇಯಯಾತ್ರಾಖ್ಯಾನವರ್ಣನ"ವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ।

## ಅಥಾಽಷ್ಟಪಂಚಾಶತ್ತಮೋಽಧ್ಯಾಯಃ

### ಶಿವಗಂಗಾಮಾಹಾತ್ಮ್ಯವರ್ಣನಂ

**ಸೂತ ಉವಾಚಃ—**

**ಏವಂ ಸಂಸ್ಥಾಪ್ಯ ಗಾಂಗೇಯಃ ಪುಣ್ಯಂ ದೇವಚತುಷ್ಟಯಂ ।**
**ತತಃ ಸಂಸ್ಥಾಪಯಾಮಾಸ ಗಂಗಾಂ ತ್ರಿಪಥಗಾಮಿನೀಂ ॥ ೧ ॥**
**ಕೂಪಿಕಾಯಾಂ ಮಹಾಭಾಗ ಶಿವಲಿಂಗಸ್ಯ ಪೂರ್ವತಃ ।**
**ತತಃ ಪ್ರೋವಾಚ ತಾನ್ ಹೃಷ್ಟಃ ಸಂಪೂಜ್ಯ ದ್ವಿಜಸತ್ತಮಾನ್ ॥ ೨ ॥**
**ಅಸ್ಯಾಂ ಯಃ ಪುರುಷಃ ಸ್ನಾನಂ ಕೃತ್ವಾ ಮಾಂ ವೀಕ್ಷಯಿಷ್ಯತಿ ।**
**ಸರ್ವಪಾಪ ವಿನಿರ್ಮುಕ್ತಃ ಶಿವಲೋಕಂ ಪ್ರಯಾಸ್ಯತಿ ॥ ೩ ॥**
**ಕರಿಷ್ಯತಿ ತಥಾ ಯಸ್ತು ಶಪಥಂ ಚಾಽತ್ರ ಮಾನವಃ ।**
**ಅಸತ್ಯಂ ಯಾಸ್ಯತಿ ಕ್ಷಿಪ್ರಂ ಸ ಯಮಸ್ಯ ಗೃಹಂ ಪ್ರತಿ ॥ ೪ ॥**
**ಏವಮುಕ್ತ್ವಾ ಮಹಾಭಾಗೋ ಭೀಷ್ಮಃ ಕುರುಪಿತಾಮಹಃ ।**
**ಜಗಾಮ ಸ್ವಪುರಂ ತಸ್ಮಾದ್ಧರ್ಷೇಣ ಮಹತಾ ವೃತಃ ॥ ೫ ॥**

---

### ಕನ್ನಡದ ಅನುವಾದ

#### ಶಿವಗಂಗಾಮಾಹಾತ್ಮ್ಯವರ್ಣನ

೧—೨. ಸೂತನು ಹೇಳುತ್ತಾನೆ:—ಗಾಂಗೇಯನು ಹೀಗೆ ಪುಣ್ಯಕರವಾದ ನಾಲ್ಕುಮಂದಿ ದೇವತೆಗಳನ್ನು ಸ್ಥಾಪಿಸಿ ಶಿವಲಿಂಗದ ಪೂರ್ವದಿಕ್ಕಿನಲ್ಲಿರುವ ಕೂಪದಲ್ಲಿ ಗಂಗೆಯನ್ನು ಪ್ರತಿಷ್ಠೆಮಾಡಿ ಸಂತೋಷದಿಂದ ಬ್ರಾಹ್ಮಣರನ್ನು ಪೂಜಿಸಿ ಇಂತೆಂದನು.

೩. "ಈ ಕೂಪಿಕೆಯಲ್ಲಿ ಮಿಂದು ನನ್ನನ್ನು ನೋಡುವ ಮಾನವನು ಸಕಲ ಪಾಪಮುಕ್ತನಾಗಿ ಶಿವಲೋಕಕ್ಕೆ ಹೋಗುವನು.

೪. ಹಾಗೆಯೇ ಇಲ್ಲಿ ಸುಳ್ಳು ಶಪಥಮಾಡುವವನು ಬೇಗನೆ ಯಮಾಲಯಕ್ಕೆ ತೆರಳುವನು."

೫. ಮಹಾ ಭಾಗ್ಯವಂತನಾದ ಭೀಷ್ಮನು ಹೀಗೆ ಹೇಳಿ ಅತಿಶಯವಾದ ಸಂತೋಷದಿಂದ ತನ್ನ ಪಟ್ಟಣಕ್ಕೆ ತೆರಳಿದನು.

ಸೂತ ಉವಾಚ :—

ತತ್ರಾಸೀಚ್ಛೂದ್ರಸಂಭೂತಃ ಪೌಂಡ್ರಕೋ ನಾಮ ನಾಮತಃ ।
ಬಾಲಭಾವೇ ಸಮಂ ಮಿತ್ರೈಃ ಸ ಕ್ರೀಡತಿ ದಿವಾನಿಶಂ ॥ ೬ ॥
ಹಾಸ್ಯಭಾವಾಚ್ಚ ಮಿತ್ರಸ್ಯ ಪುಸ್ತಕಂ ತೇನ ಚೋರಿತಂ ।
ಮಿತ್ರೈಃ ಪೃಷ್ಟಃ ಪೌಂಡ್ರಕಃ ಸ ಪ್ರಾಹ ನೈವ ಮಯಾ ಹೃತಂ ॥ ೭ ॥
ಪುಸ್ತಕಂ ಚೈವ ಯುಷ್ಮಾಕಂ ಚಿಂತನೀಯಂ ಸದೈವ ತತ್ ।
ಭವದ್ಭಿರ್ಯತ್ನಮಾಸ್ಥಾಯ ದೃಶ್ಯತಾಂ ಕ್ವಾಽಪಿ ಪುಸ್ತಕಂ ॥ ೮ ॥
ಕೃತಾಶ್ಚ ಶಪಥಾಸ್ತತ್ರ ಸ್ನಾತ್ವಾ ಭಾಗೀರಥೀ ಜಲೇ ।
ಅದುಷ್ಟ ಚೇತಸಾ ತೇನ ದತ್ತಂ ತತ್ಪುಸ್ತಕಂ ಹೃತಂ ॥ ೯ ॥
ಪುನಶ್ಚ ರುಚಿರಂ ಹಾಸ್ಯಂ ಕೃತ್ವಾ ತೇನ ಸಮಂ ಬಹು ।
ಅಥಾಽಸಾವಭವತ್ಕುಷ್ಠೀ ತತ್ಕ್ಷಣಾದೇವ ಗರ್ಹಿತಃ ॥ ೧೦ ॥
ಸ ತ್ಯಕ್ತೋ ಬಾಂಧವೈಃ ಸರ್ವೈಃ ಕಲತ್ರೈರಪಿ ವಲ್ಲಭೈಃ ।
ತತೋ ವೈರಾಗ್ಯಮಾಪನ್ನೋ ಭೃಗುಪಾತಂ ಪಪಾತ ಸಃ ॥ ೧೧ ॥
ಜಾತಶ್ಚ ತತ್ಪ್ರಭಾವೇನ ಕುಷ್ಠೇನ ಪರಿವರ್ಜಿತಃ ।
ಶಾಸ್ತ್ರಚೌರ್ಯಕೃತಾದ್ದೋಷಾನ್ಮೂಕರೂಪಃ ಸ ಹಾಸ್ಯಕೃತ್ ॥ ೧೨ ॥

---

೬. ಸೂತನು ಹೇಳುತ್ತಾನೆ:—ಅಲ್ಲಿ ಪೌಂಡ್ರಕನೆಂಬ ಶೂದ್ರನ ಮಗ ನಿದ್ದನು. ಅವನು ಬಾಲ್ಯದಲ್ಲಿ ಹಗಲು ರಾತ್ರಿ ಸ್ನೇಹಿತರೊಡನೆ ಆಡುತ್ತಿದ್ದನು.

೭. ಅವನು ಹಾಸ್ಯಕ್ಕಾಗಿ ಮಿತ್ರನ ಪುಸ್ತಕವೊಂದನ್ನು ಕದ್ದನು. ಮಿತ್ರರು ಕೇಳಲು ಪೌಂಡ್ರಕನು ಪುಸ್ತಕವನ್ನು ನಾನು ಕದ್ದೆನೆಂದು ಹೇಳಲಿಲ್ಲ.

೮. ನೀವು ಪುಸ್ತಕವನ್ನು ಯಾವಾಗಲೂ ಚಿಂತಿಸುತ್ತಿರಬೇಕು. ಪ್ರಯತ್ನಿಸಿ ಎಲ್ಲಿಯಾದರೂ ಪುಸ್ತಕವನ್ನು ಹುಡುಕಿ ನೋಡಿರಿ ಎಂದನು.

೯. ಸದ್ಬುದ್ಧಿಯುಳ್ಳ ಅವನು ಭಾಗೀರಥೀ ನೀರಿನಲ್ಲಿ ಮಿಂದು ಶಪಥ ಗಳನ್ನು ಮಾಡಿ ತಾನು ಅಪಹರಿಸಿದ ಆ ಪುಸ್ತಕವನ್ನು ಕೊಟ್ಟನು.

೧೦. ಮರಳಿ ಅವನು ಮಿತ್ರನೊಡನೆ ಮನೋಹರವಾದ ಹಾಸ್ಯವನ್ನುಮಾಡಿ ಕೂಡಲೆ ಕುಷ್ಠರೋಗಿಯಾದನು.

೧೧. ತರುವಾಯ ಅವನನ್ನು ಎಲ್ಲ ಬಂಧುಗಳೂ, ಪ್ರಿಯರಾದ ಪತ್ನಿ ಯರೂ ತ್ಯಜಿಸಲು ಅವನು ವೈರಾಗ್ಯಗೊಂಡು ಭೃಗುಪಾತದಿಂದ ಬಿದ್ದನು.

೧೨. ಅದರ ಪ್ರಭಾವದಿಂದ ಕುಷ್ಠರಹಿತನಾದನು. ಹಾಸ್ಯವನ್ನು ಮಾಡು ತ್ತಿದ್ದ ಅವನು ಶಾಸ್ತ್ರವನ್ನು (ಪುಸ್ತಕವನ್ನು) ಕದ್ದದ್ದರಿಂದ ಮೂಕನಾದನು.

ನ ಕಾರ್ಯಃ ಶಪಥಸ್ತಸ್ಮಾತ್ತಸ್ಯಾಗ್ರೇಽಪಿ ಲಘುರ್ದ್ವಿಜಾಃ ।
ಅಪಿ ಹಾಸ್ಯೋಪಚಾರೇಣ ಆತ್ಮನಃ ಸುಖಮಿಚ್ಛತಾ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶಿವಗಂಗಾಮಾಹಾತ್ಮ್ಯವರ್ಣನಂ"
ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

೧೩. ದ್ವಿಜರೆ! ಆದುದರಿಂದ ತಮಗೆ ಸುಖವನ್ನು ಬಯಸುವವರು ಆ ಗಂಗೆಯ ಮುಂದೆ ಹಾಸ್ಯಕ್ಕಾಗಿಯೂ ಯಾವ ಸಣ್ಣ ಶಪಥವನ್ನು ಸಹ ಮಾಡಬಾರದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶಿವಗಂಗಾಮಾಹಾತ್ಮ್ಯವರ್ಣನ"ವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಷಷ್ಟಿತಮೋಽಧ್ಯಾಯಃ

### ವಿದುರಕೃತದೇವಪ್ರಾಸಾದವೃತ್ತಾಂತವರ್ಣನಂ

ಸೂತ ಉವಾಚ :—

ತಸ್ಮಿನ್ ಕ್ಷೇತ್ರೇ ರವಿಃ ಪೂರ್ವಂ ವಿದುರೇಣ ಪ್ರತಿಷ್ಠಿತಂ ।
ಶಿವಶ್ಚ ಪರಯಾ ಭಕ್ತ್ಯಾ ತಥಾ ವಿಷ್ಣುರ್ದ್ವಿಜೋತ್ತಮಾಃ ॥ ೧ ॥
ಯಸ್ತಾನ್ ಪೂಜಯತೇ ಭಕ್ತ್ಯಾ ಮಾನುಷೋ ಭಕ್ತಿತಸ್ತತಃ ।
ಸ ಯಾಸ್ಯತಿ ಪರಂ ಸ್ಥಾನಂ ಯಜ್ಞೈರಪಿ ಸುದುರ್ಲಭಂ ॥ ೨ ॥
ಹಸ್ತಿನಾಪುರ ಸಂಸ್ಥೇನ ವಿದುರೇಣ ಪುರಾ ದ್ವಿಜಾಃ ।
ಗಾಲವೋ ಮುನಿಶಾರ್ದೂಲಃ ಪೃಷ್ಟಃ ಸ್ವಗೃಹಮಾಗತಃ ॥ ೩ ॥
ಅಪುತ್ರಸ್ಯ ಗತಿರ್ಲೋಕೇ ಕೀದೃಕ್ಸಂಜಾಯತೇ ಪರೇ ।
ಏತನ್ಮೇ ಪೃಚ್ಛತೋ ಬ್ರೂಹಿ ಕೃತ್ವಾ ಸದ್ಭಾವಮುತ್ತಮಂ ॥ ೪ ॥

ಗಾಲವ ಉವಾಚ :—

ಅಪುತ್ರಸ್ಯ ಗತಿರ್ನಾಸ್ತಿ ಮೃತಃ ಸ್ವರ್ಗಂ ನ ಗಚ್ಛತಿ ।
ದ್ವಾದಶಾನಾಮಪಿ ತಥಾ ಯದ್ಯೇಕೋಽಪಿ ನ ವಿದ್ಯತೇ ॥ ೫ ॥

---

## ಕನ್ನಡದ ಅನುವಾದ

### ವಿದುರಕೃತದೇವಪ್ರಾಸಾದವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಆ ಕ್ಷೇತ್ರದಲ್ಲಿ ಹಿಂದೆ ವಿದುರನು ರವಿ, ಶಿವ, ವಿಷ್ಣು ಇವರನ್ನು ಅತಿಶಯ ಭಕ್ತಿಯಿಂದ ಪ್ರತಿಷ್ಠೆ ಮಾಡಿದನು.

೨. ಅವರನ್ನು ಭಕ್ತಿಯಿಂದ ಪೂಜಿಸಿದ ಮನುಷ್ಯನು ಯಜ್ಞಗಳಿಂದಲೂ ದುರ್ಲಭವಾದ ಉತ್ತಮಸ್ಥಾನವನ್ನು ಸೇರುವನು.

೩. ದ್ವಿಜರೆ! ಹಿಂದೆ ಹಸ್ತಿನಾಪುರ ನಿವಾಸಿಯಾದ ವಿದುರನು ತನ್ನ ಮನೆಗೆ ಬಂದ ಗಾಲವನೆಂಬ ಮುನಿವರ್ಯನನ್ನು ಹೀಗೆ ಪ್ರಶ್ನಿಸಿದನು.

೪. "ಪುತ್ರನಿಲ್ಲದವನಿಗೆ ಪರಲೋಕದಲ್ಲಿ ಎಂತಹ ಗತಿಯುಂಟಾಗುವುದು? ಇದನ್ನು ಕೇಳುತ್ತಿರುವ ನನಗೆ ಸಾಧುತನವನ್ನು ಆಶ್ರಯಿಸಿ ಹೇಳು."

೫. ಗಾಲವನು ಹೇಳುತ್ತಾನೆ:—ಹನ್ನೆರಡು ವಿಧ ಪುತ್ರರಲ್ಲಿ ಒಬ್ಬ ಪುತ್ರನೂ ಇಲ್ಲದಿದ್ದವನಿಗೆ ಸದ್ಗತಿಯಾಗುವುದಿಲ್ಲ. ಅವನು ಮೃತನಾಗಿ ಸ್ವರ್ಗವನ್ನು ಸೇರುವುದಿಲ್ಲ.

ಔರಸಃ ಕ್ಷೇತ್ರಜಶ್ಚೈವ ಕ್ರಯಕ್ರೀತಶ್ಚ ಪಾಲಿತಃ ।
ಪೌನರ್ಭವಃ ಪುನರ್ದತ್ತಃ ಕುಂಡೋ ಗೋಲಸ್ತಥಾಪರಃ ।
ಕಾನೀನಶ್ಚ ಸಹೋಢಶ್ಚ ಅಶ್ವತ್ಥೋ ಬ್ರಹ್ಮವೃಕ್ಷಕಃ ॥ ೬ ॥
ಏತೇಷಾಮಪಿ ಯದ್ಯೇಕಃ ಪುರುಷಾಣಾಂ ನ ಜಾಯತೇ ।
ತನ್ನೂನಂ ನರಕೇ ವಾಸಃ ಪುಂಸಜ್ಞೇ ವೈ ಪ್ರಜಾಯತೇ ॥ ೭ ॥

ಸೂತ ಉವಾಚ :—

ತಚ್ಛ್ರುತ್ವಾ ವಚನಂ ತಸ್ಯ ಗಾಲವಸ್ಯ ಮಹಾತ್ಮನಃ
ಅಪುತ್ರತ್ವಾತ್ಪರಂ ದುಃಖಂ ಜಗಾಮ ವಿದುರಸ್ತದಾ ॥ ೮ ॥
ತತಸ್ತಂ ಗಾಲವಃ ಪ್ರಾಹ ಮಾತ್ವಂ ದುಃಖಪದಂ ವ್ರಜ ।
ಮದ್ವಾಕ್ಯಾತ್ಪುತ್ರಕಂ ವೃಕ್ಷಂ ವಿಷ್ಣುಸಂಜ್ಞಂ ದ್ರುತಂ ಕುರು ॥ ೯ ॥
ತಸ್ಮಾತ್ಪ್ರಾಪ್ಸ್ಯಸಿ ನಿಃಶೇಷಂ ಫಲಂ ಪುತ್ರ ಸಮುದ್ಭವಂ ।
ಗತ್ವಾ ಪುಣ್ಯತಮೇ ದೇಶೇ ರಕ್ತಶೃಂಗಸ್ಯ ಮೂರ್ಧನಿ ॥ ೧೦ ॥
ಹಾಟಕೇಶ್ವರಜೇ ಕ್ಷೇತ್ರೇ ಸರ್ವವೃದ್ಧಿ ಶುಭೋದಯೇ ।
ತಸ್ಯ ತದ್ವಚನಂ ಶ್ರುತ್ವಾ ವಿದುರಸ್ತತ್ಕ್ಷಣಾದ್ಯಯೌ ॥ ೧೧ ॥
ತತ್‌ಸ್ಥಾನಂ ಗಾಲವೋದ್ದಿಷ್ಟಂ ಹರ್ಷೇಣ ಮಹತಾನ್ವಿತಃ ।
ತತ್ರಾಶ್ವತ್ಥತರುಂ ಸ್ಥಾಪ್ಯ ಪುತ್ರತ್ವೇ ಚಾಭಿಷೇವ್ಯ ಚ ॥ ೧೨ ॥

---

೬–೭. ಔರಸ, ಕ್ಷೇತ್ರಜ, ಕ್ರಯಕ್ರೀತ, ಪಾಲಿತ, ಪೌನರ್ಭವ, ದತ್ತ, ಕುಂಡ, ಗೋಲ, ಕಾನೀನ, ಸಹೋಢ, ಅಶ್ವತ್ಥ, ಬ್ರಹ್ಮವೃಕ್ಷಕ ಎಂಬ ದ್ವಾದಶ ವಿಧ ಪುತ್ರರಲ್ಲಿ ಒಬ್ಬನೂ ಇಲ್ಲದವನು ನಿಶ್ಚಯವಾಗಿಯೂ ಪುಂಸಜ್ಞಕವಾದ ನರಕದಲ್ಲಿ ಬೀಳುವನು.

೮. ಸೂತನು ಹೇಳುತ್ತಾನೆ:—ಆ ವಿದುರನು ಮಹಾತ್ಮನಾದ ಆ ಗಾಲವನ ಮಾತನ್ನು ಕೇಳಿ ತನಗೆ ಮಕ್ಕಳಿಲ್ಲದಿರುವುದರಿಂದ ಅತ್ಯಂತ ದುಃಖವನ್ನು ಹೊಂದಿದನು.

೯–೧೩. ಗಾಲವನೂ ವ್ಯಥೆಗೊಂಡು ಆ ವಿದುರನನ್ನು ಕುರಿತು ನೀನು ವ್ಯಥೆಗೊಳ್ಳಬೇಡ. ನನ್ನ ಮಾತಿನಂತೆ ಸಕಲವೃದ್ಧಿಶುಭಗಳನ್ನೀಯುವುದೂ ಹಾಟಕೇಶ್ವರಜ ಕ್ಷೇತ್ರದಲ್ಲಿರುವುದೂ ಪುಣ್ಯಕರವಾದ ರಕ್ತ ಶೃಂಗದ ಮೇಲ್ಭಾಗ ದಲ್ಲಿ ವಿಷ್ಣುಸಂಜ್ಞಕವಾದ (ಅಶ್ವತ್ಥ) ವೃಕ್ಷವನ್ನು ಪುತ್ರನನ್ನಾಗಿ ಮಾಡಿಕೊ. ಅದರಿಂದ ಪುತ್ರ ಸಂಬಂಧವಾದ ಸಂಪೂರ್ಣಫಲವನ್ನು ಪಡೆಯುವೆ. ವಿದುರನು ಅವನ ಆಮಾತನ್ನು ಕೇಳಿ ಅತಿ ಸಂತೋಷದಿಂದ ಅವನು ಹೇಳಿದ ಸ್ಥಳಕ್ಕೆ ಹೋಗಿ ಅಶ್ವತ್ಥವೃಕ್ಷವನ್ನು ಪುತ್ರನನ್ನಾಗಿ ಮಾಡಿ ಅದಕ್ಕೆ ವಿವಾಹಮಾಡಿ

ವೈವಾಹಿಕೇನ ವಿಧಿನಾ ಕೃತಕೃತ್ಯೋ ಬಭೂವ ಹ ।
ತತೋ ಬಭ್ರಾಮ ತತ್ಕ್ಷೇತ್ರಂ ತೀರ್ಥಯಾತ್ರಾಪರಾಯಣಃ ॥ ೧೩ ॥
ಕೀರ್ತಿತಾನಿ ವಿಚಿತ್ರಾಣಿ ರಾಜರ್ಷೀಣಾಂ ಮಹಾತ್ಮನಾಂ ।
ಶ್ರುತ್ವಾ ಸ್ಥಾನಾನಿ ಗತ್ವಾ ಚ ದದರ್ಶ ಸ್ಥಾನದೇವತಾಃ ॥ ೧೪ ॥
ಸ ದೃಷ್ಟ್ವಾ ಕುರುವೃದ್ಧಸ್ಯ ಕೀರ್ತನಾನಿ ಮಹಾತ್ಮನಃ ।
ತತಶ್ಚಕ್ರೇ ಮತಿಂ ತತ್ರ ದಿವ್ಯಪ್ರಾಸಾದಕರ್ಮಣಿ ॥ ೧೫ ॥
ತತೋ ಮಾಹೇಶ್ವರಂ ಲಿಂಗಂ ವಟಾಧಸ್ತಾದ್ವಿಧಾಯ ಸಃ ।
ವಿಷ್ಣುಂ ಚ ಸ್ಥಾಪಯಾಮಾಸ ಅಶ್ವತ್ಥಸ್ಯ ತರೋರಧಃ ॥ ೧೬ ॥
ನಿವೇಶ್ಯ ಚ ತಥಾ ದಿವ್ಯಂ ಬ್ರಾಹ್ಮಣೇಭ್ಯೋ ನ್ಯವೇದಯತ್ ।
ಏತದ್ದೇವತ್ರಯಂ ಕ್ಷೇತ್ರೇ ಯುಷ್ಮಾಕಂ ಹಿ ಮಯಾಕೃತಂ ।
ಭವದ್ಭಿಃ ಸಕಲಾಚಾಽಸ್ಯ ಚಿಂತಾ ಕಾರ್ಯಾ ಸದೈವ ಹಿ ॥ ೧೭ ॥

ಬ್ರಾಹ್ಮಣಾ ಊಚುಃ:—

ವಯಮಸ್ಯ ಕರಿಷ್ಯಾಮೋ ಯಾತ್ರಾದ್ಯಾ ಸಕಲಾಃ ಕ್ರಿಯಾಃ ॥ ೧೮ ॥
ತಥಾ ವಂಶೋದ್ಭವಾ ಯೇ ಚ ಪುತ್ರಾಃ ಪೌತ್ರಾಸ್ತಥಾಪರೇ ।
ಕರಿಷ್ಯಂತಿ ಕ್ರಿಯಾಃ ಸರ್ವಾಸ್ತ್ವಂ ಗಚ್ಛ ಸ್ವಗೃಹಂ ಪ್ರತಿ ॥ ೧೯ ॥

---

ಧನ್ಯನಾದನು. ಅನಂತರ ತೀರ್ಥಯಾತ್ರಾನಿರತನಾಗಿ ಆ ಕ್ಷೇತ್ರದಲ್ಲಿ ಸಂಚರಿಸಿದನು.

೧೪. ಮಹಾತ್ಮರಾದ ರಾಜರ್ಷಿಗಳ ವಿಚಿತ್ರವಾದ ಸ್ಥಾನಗಳನ್ನು ಕೇಳಿ ಅಲ್ಲಿಗೆ ಹೋಗಿ ಸ್ಥಾನದೇವತೆಗಳನ್ನು ನೋಡಿದನು.

೧೫. ಅವನು ಮಹಾತ್ಮನಾದ ಭೀಷ್ಮನ ಕೀರ್ತಿಯನ್ನು ಬೀರುವ ಸ್ಥಳಗಳನ್ನು ನೋಡಿ ಅಲ್ಲಿ ದಿವ್ಯಪ್ರಾಸಾದವನ್ನು ರಚಿಸಬೇಕೆಂದು ಆಲೋಚಿಸಿದನು.

೧೬–೧೭. ಅನಂತರ ಅವನು ವಟವೃಕ್ಷದ ಕೆಳಗೆ ಮಾಹೇಶ್ವರ ಲಿಂಗವನ್ನೂ, ಅಶ್ವತ್ಥವೃಕ್ಷದ ಕೆಳಗೆ ದಿವ್ಯವಾದ ವಿಷ್ಣು ವಿಗ್ರಹವನ್ನೂ ಪ್ರತಿಷ್ಠೆಮಾಡಿ ಬ್ರಾಹ್ಮಣರಿಗೆ ಹೀಗೆ ತಿಳಿಸಿದನು. "ನಾನು ನಿಮ್ಮ ಕ್ಷೇತ್ರದಲ್ಲಿ ಈ ಮೂರು ದೇವತೆಗಳನ್ನು ಪ್ರತಿಷ್ಠೆಮಾಡಿರುವೆನು. ನೀವು ಯಾವಾಗಲೂ ಇವರನ್ನು ಚಿಂತಿಸುತ್ತಿರಬೇಕು."

೧೮. ಬ್ರಾಹ್ಮಣರು ಹೇಳುತ್ತಾರೆ:— ನಾವು ಈ ಮೂವರು ದೇವತೆಗಳಿಗೆ ಯಾತ್ರೆ ಮೊದಲಾದ ಕಾರ್ಯಗಳನ್ನು ಮಾಡುವೆವು.

೧೯. ಹಾಗೆಯೇ ನಮ್ಮ ವಂಶದ ಪುತ್ರಪೌತ್ರರೂ ಸಕಲ ಕಾರ್ಯಗಳನ್ನೂ ನೆರವೇರಿಸುವರು. ನೀನು ನಿನ್ನ ಮನೆಗೆ ತೆರಳು.

ತತೋ ಜಗಾಮ ವಿದುರಃ ಸ್ವಪುರಂ ಪ್ರತಿ ಹರ್ಷಿತಃ ।
ಕೃತಕೃತ್ಯೋ ದ್ವಿಜಾಸ್ತೇ ಚ ಚಕ್ರುರ್ವಾಕ್ಯಂ ತದುದ್ಭವಂ ॥ ೨೦ ॥
ಮಾಘಮಾಸಸ್ಯ ಸಪ್ತಮ್ಯಾಂ ಸೂರ್ಯವಾರೇಣ ಯೋ ನರಃ ।
ಪೂಜಯೇದ್ಭಾಸ್ಕರಂ ತತ್ರ ಸ ಯಾತಿ ಪರಮಾಂ ಗತಿಂ ॥ ೨೧ ॥
ಶಿವಂ ವಾ ಸೋಮವಾರೇಣ ಶುಕ್ಲಾಷ್ಟಮ್ಯಾಂ ವಿಶೇಷತಃ ।
ಶಯನೇ ಬೋಧನೇ ವಿಷ್ಣುಂ ಸಮ್ಯಕ್ ಶ್ರದ್ಧಾಸಮನ್ವಿತಃ ॥ ೨೨ ॥
ತಸ್ಮಾತ್ಸರ್ವಪ್ರಯತ್ನೇನ ದೇವಾನಾಂ ತತ್ರಯಂ ಶುಭಂ ।
ಪೂಜನೀಯಂ ವಿಶೇಷೇಣ ನರೈಃ ಸ್ವರ್ಗತಿಮಿಪ್ಸುಭಿಃ ॥ ೨೩ ॥
ತತ್ರ ಸಿದ್ಧಿಂ ಗತಾಃ ಪೂರ್ವಂ ಮುನಯಃ ಶಂಸಿತವ್ರತಾಃ ।
ವಿದುರೇಶ್ವರಮಾರಾಧ್ಯ ಶತಶೋಽಥ ಸಹಸ್ರಶಃ ॥ ೨೪ ॥
ತತಸ್ತತ್ಸಿದ್ಧಿದಂ ಜ್ಞಾತ್ವಾ ಲಿಂಗಂ ವೈ ಪಾಕಶಾಸನಃ ।
ಪಾಂಸುಭಿಃ ಪೂರಯಾಮಾಸ ಯಥಾ ಕಶ್ಚಿನ್ನಬುಧ್ಯತೇ ॥ ೨೫ ॥
ಕಸ್ಯಚಿತ್ತ್ವಥ ಕಾಲಸ್ಯ ವಿದುರಸ್ತತ್ರಚಾಗತಃ ।
ದೃಷ್ಟ್ವಾ ಲೋಪಗತಂ ಲಿಂಗಂ ದುಃಖೇನ ಮಹತಾನ್ವಿತಃ ॥ ೨೬ ॥
ಏತಸ್ಮಿನ್ನೇವ ಕಾಲೇತು ವಾಗುವಾಚಾಽಶರೀರಿಣೀ ।
ಮಾ ತ್ವಂ ಕುರು ವಿಷಾದಂ ಹಿ ಲಿಂಗಾರ್ಥೇ ವಿದುರಾಽಧುನಾ ॥ ೨೭ ॥

---

೨೦. ಬಳಿಕ ವಿದುರನು ಧನ್ಯನಾಗಿ ಸಂತೋಷದಿಂದ ತನ್ನ ಪಟ್ಟಣಕ್ಕೆ ಹೋದನು. ಆ ಬ್ರಾಹ್ಮಣರೂ ಅವನ ಮಾತನ್ನು ನಡೆಯಿಸಿದರು.

೨೧. ಮಾಘ ಮಾಸದ ಸಪ್ತಮಿ ಭಾನುವಾರದ ದಿನ ಸೂರ್ಯನನ್ನು ಪೂಜಿಸಿದವನು ಉತ್ತಮಗತಿಯನ್ನು ಪಡೆಯುವನು.

೨೨–೨೩. ಮಾಘಮಾಸದ ಶುಕ್ಲಾಷ್ಟಮಿ ಸೋಮವಾರದಿನ ಶಿವನನ್ನಾಗಲಿ, ಶಯನೋತ್ಥಾನದ್ವಾದಶೀ ದಿನಗಳಲ್ಲಿ ವಿಷ್ಣುವನ್ನಾಗಲಿ ಪೂಜಿಸಿದವನು ಉತ್ತಮ ಗತಿಯನ್ನು ಹೊಂದುವನು. ಆದುದರಿಂದ ಸ್ವರ್ಗವನ್ನಪೇಕ್ಷಿಸುವ ಮಾನವರು ಮಂಗಳಕರರಾದ ಆ ಮೂವರು ದೇವತೆಗಳನ್ನು ವಿಶೇಷವಾಗಿ ಪೂಜಿಸಬೇಕು.

೨೪. ಅಲ್ಲಿ ಹಿಂದೆ ತೀಕ್ಷ್ಣವ್ರತವನ್ನಾಚರಿಸಿದ ಸಾವಿರಾರುಮಂದಿ ಮುನಿಗಳು ವಿದುರೇಶ್ವರನನ್ನಾರಾಧಿಸಿ ಸಿದ್ಧಿಯನ್ನು ಹೊಂದಿದರು.

೨೫. ಅನಂತರ ಇಂದ್ರನು ಆ ಸಿದ್ಧಿಯನ್ನೀಯುವ ಲಿಂಗವನ್ನು ಕಂಡು ಯಾರೂ ಅರಿಯದಂತೆ ಅದನ್ನು ಧೂಳಿನಿಂದ ತುಂಬಿದನು.

೨೬. ಒಂದಾನೊಂದು ಕಾಲದಲ್ಲಿ ವಿದುರನು ಅಲ್ಲಿಗೆ ಬಂದು ನಷ್ಟವಾಗಿರುವ ಆ ಲಿಂಗವನ್ನು ನೋಡಿ ಅತಿಯಾಗಿ ದುಃಖಗೊಂಡನು.

೨೭. ಈ ಸಮಯದಲ್ಲಿ ಅಶರೀರವಾಣಿಯು ಹೀಗೆಂದಿತು. ವಿದುರ! ಈಗ ನೀನು ಈ ಲಿಂಗಕ್ಕಾಗಿ ವಿಷಾದಗೊಳ್ಳಬೇಡ.

ಯೋಽಯಂ ಸ ದೃಶ್ಯತೇ ಬಾಲೋ ವಟಸ್ತಸ್ಯತಲೇ ಸ್ಥಿತಾ ।
ದೇವದ್ರೋಣಿಃ ಸುರೇಶೇನ ಪಾಂಸುಭಿಃ ಪರಿಪೂರಿತಾ ॥ ೨೮ ॥
ತತೋ ಗಜಾಹ್ವಯಾತ್ತೂರ್ಣಂ ಸಮಾನೀಯ ಧನಂ ಬಹು ।
ಶೋಧಯಾಮಾಸ ತತ್‌ಸ್ಥಾನಂ ದಿವಾರಾತ್ರಮತಂದ್ರಿತಃ ॥ ೨೯ ॥
ತತೋ ವಿಲೋಕ್ಯ ತಾನ್ ದೇವಾನ್ ಹರ್ಷೇಣ ಮಹತಾನ್ವಿತಃ ।
ಪ್ರಾಸಾದಂ ನಿರ್ಮಮೇ ತೇಷಾಂ ಯೋಗ್ಯಂ ಸಾಧ್ವಭಿಸಂಸ್ಥಿತಂ ॥ ೩೦ ॥
ಕೈಲಾಸಶಿಖರಾಕಾರಂ ಭಾಸ್ಕರಾರ್ಥೇ ಮಹಾಮುನಿಃ ।
ಜಟಾಮಧ್ಯಗತಂ ದೃಷ್ಟ್ವಾ ವಟಸ್ಯ ಚ ಮಹೇಶ್ವರಂ ॥ ೩೧ ॥
ಪ್ರಾಸಾದಂ ನಾಽಕರೋತ್ತತ್ರ ಲಿಂಗಂ ಯಾವನ್ನ ಚಾಲಯೇತ್ ।
ವಾಸುದೇವಸ್ಯ ಯೋಗ್ಯಾಂ ಚ ಕೃತ್ವಾ ಶಾಲಾಂ ಬೃಹತ್ತರಾಂ ॥ ೩೨ ॥
ದತ್ವಾ ವೃತ್ತಿಂ ಚ ಸಂಹೃಷ್ಟೋ ಬ್ರಾಹ್ಮಣೇಭ್ಯೋ ನಿವೇದ್ಯ ಚ ।
ಜಗಾಮ ಸ್ವಾಶ್ರಮಂ ಭೂಯೋ ವಿಪ್ರಾನಾಮಂತ್ರ್ಯ ತಾಂಸ್ತತಃ ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿದುರಕೃತದೇವಪ್ರಾಸಾದವೃತ್ತಾಂತವರ್ಣನಂ"
ನಾಮೈಕೋನಷಷ್ಟಿತಮೋಽಧ್ಯಾಯಃ

---

೨೮. ಮುಂದೆ ಕಾಣುತ್ತಿರುವ ಬಾಲಕನಿರುವ ವಟವೃಕ್ಷದ ಕೆಳಗೆ ಇಂದ್ರನು ಹಾಕಿದ ಧೂಳಿನಿಂದ ತುಂಬಿರುವ ದೇವತೆಗಳಸಾಲು ನೆಲಸಿರುವುದು.

೨೯. ಬಳಿಕ ಆ ವಿದುರನು ಹಸ್ತಿನಾವತಿಯಿಂದ ಬಹುಧನವನ್ನು ತಂದು ಆ ಸ್ಥಳವನ್ನು ಹಗಲು ರಾತ್ರಿ ಆಲಸ್ಯವಿಲ್ಲದೆ ಶೋಧಿಸಿದನು.

೩೦. ತರುವಾಯ ಆ ದೇವತೆಗಳನ್ನು ನೋಡಿ ಅತ್ಯಂತ ಸಂತೋಷದಿಂದ ಅವರಿಗೆ ಯೋಗ್ಯವಾದ ಪ್ರಾಸಾದವನ್ನು ನಿರ್ಮಿಸಿದನು.

೩೧–೩೨. ಸೂರ್ಯನಿಗಾಗಿ ಕೈಲಾಸ ಶಿಖರದಂತಿರುವ ಪ್ರಾಸಾದವನ್ನು ರಚಿಸಿದನು. ಮಹೇಶ್ವರನು ವಟವೃಕ್ಷದ ಜಟೆಯ ಮಧ್ಯದಲ್ಲಿರುವುದನ್ನು ಕಂಡು ಲಿಂಗವು ಚಲಿಸಬಾರದೆಂದು ಪ್ರಾಸಾದವನ್ನು ನಿರ್ಮಿಸಲಿಲ್ಲ. ವಿಷ್ಣುವಿಗೆ ಉಚಿತವಾದ ದೊಡ್ಡ ಶಾಲೆಯನ್ನು ರಚಿಸಿದನು.

೩೩. ಬ್ರಾಹ್ಮಣರಿಗೆ ಸಂತೋಷದಿಂದ ವೃತ್ತಿಯನ್ನಿತ್ತು ಅವರನ್ನು ಕೇಳಿಕೊಂಡು ತನ್ನ ಆಶ್ರಮಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿದುರಕೃತದೇವಪ್ರಾಸಾದವೃತ್ತಾಂತವರ್ಣನ" ವೆಂಬ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠಿತಮೋಽಧ್ಯಾಯಃ

## ನರಾದಿತ್ಯಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಮಾಹಿತ್ಥೀಯಂ ತ್ವಯಾ ಖ್ಯಾತಾ ಯಾ ಪುರಾ ಸೂತನಂದನ ।
ಕೇನ ಸಂಸ್ಥಾಪಿತಾ ತತ್ರ ವದ ಸರ್ವಮಶೇಷತಃ ॥ ೧ ॥

ಸೂತ ಉವಾಚ :—

ಶೋಷಣೀ ನಾಮ ಯಾ ವಿದ್ಯಾ ಪುರಾಽಗಸ್ತ್ಯೇನ ಸಾಧಿತಾ ।
ಆಥರ್ವಣೇನ ಮಂತ್ರೇಣ ಸ್ವಯಂ ಚ ಪರಮೇಶ್ವರೀ ॥ ೨ ॥
ತತಃ ಸಂಶೋಷಿತಸ್ತೇನ ಸ ಸಮುದ್ರೋ ಮಹಾತ್ಮನಾ ।
ಮಿತ್ರಾವರುಣಪುತ್ರೇಣ ಸಾ ಪ್ರೋವಾಚ ಪುರಃ ಸ್ಥಿತಾ ॥ ೩ ॥
ಮಾಹಿತ್ಥಂ ಸಾಧಿತಂ ಯಸ್ಮಾತ್ತ್ವಯಾ ಮೇ ಸಕಲಂ ಶುಭಂ ।
ಮಾಹಿತ್ಥಾನಾಮ ತಸ್ಮಾತ್ತ್ವಂ ದೇವತಾ ಸಂಭವಿಷ್ಯಸಿ ॥ ೪ ॥
ಚಮತ್ಕಾರಪುರೇ ಕ್ಷೇತ್ರೇ ಪೂಜಾಂ ಪ್ರಾಪ್ಸ್ಯಸ್ಯನುತ್ತಮಾಂ ।
ಯಸ್ತ್ವಾಮಾಥರ್ವಣೈರ್ಮಂತ್ರೈಸ್ತತ್ರಸ್ಥಾಂ ಭಕ್ತಿಸಂಯುತಃ ॥ ೫ ॥

---

### ಕನ್ನಡದ ಅನುವಾದ

#### ನರಾದಿತ್ಯಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ ! ನೀನು ಹಿಂದೆ ಮಾಹಿತ್ಥಿಯೆಂದು ಹೇಳಿದೆಯಲ್ಲ, ಆ ಮಾಹಿತ್ಥಿಯೆಂಬ ದೇವತೆಯನ್ನು ಯಾರು ಸ್ಥಾಪಿಸಿದರು ? ಅದನ್ನೆಲ್ಲ ಸಂಪೂರ್ಣವಾಗಿ ನಮಗೆ ಹೇಳು.

೨-೩. ಸೂತನು ಹೇಳುತ್ತಾನೆ :—ಹಿಂದೆ ಮಿತ್ರಾವರುಣನ ಮಗನಾದ ಅಗಸ್ತ್ಯಮುನಿಯು ಆಥರ್ವಣಮಂತ್ರದಿಂದ ಶೋಷಣಿಯೆಂಬ ವಿದ್ಯೆಯನ್ನು ಸಾಧಿಸಿ ಸಮುದ್ರವನ್ನು ಒಣಗಿಸಿದ ಬಳಿಕ ಮುಂದಿರುವ ಆ ವಿದ್ಯೆಯನ್ನು ಕುರಿತು ಹೀಗೆಂದನು.

೪. "ನೀನು ನನ್ನ ಸಕಲ ಮಾಹಿತ್ಥವನ್ನು ಸಾಧಿಸಿರುವುದರಿಂದ ಮಾಹಿತ್ಥಿಯೆಂಬ ದೇವತೆಯಾಗುವೆ.

೫-೭. ಮತ್ತು ಚಮತ್ಕಾರಪುರ ಕ್ಷೇತ್ರದಲ್ಲಿ ಉತ್ತಮವಾದ ಪೂಜೆಯನ್ನು ಹೊಂದುವೆ. ಅಲ್ಲಿರುವ ನಿನ್ನನ್ನು ಆಥರ್ವಣ ಮಂತ್ರಗಳಿಂದ ಭಕ್ತಿಪೂರ್ವಕವಾಗಿ ಪೂಜಿಸುವ ಮಾನವನು ಯಾವಾಗಲೂ ವೃದ್ಧಿಯನ್ನು ಹೊಂದುವನು. ಆದ್ದರಿಂದ

ಪೂಜಯಿಷ್ಯತಿ ವೃದ್ಧಿಂ ಚ ಸರ್ವಕಾಲಮವಾಪ್ಸ್ಯತಿ ।
ತಸ್ಮಾತ್ತತ್ರ ದ್ರುತಂ ಗಚ್ಛ ಮಯಾ ಸಾರ್ಧಂ ಪುರೋತ್ತಮೇ ॥ ೬ ॥
ದ್ವಿಜಾನಾಂ ರಕ್ಷಣಾರ್ಥಾಯ ನಿತ್ಯಂ ಸನ್ನಿಹಿತಾ ಭವ ।
ಏವಂ ಸಾ ತತ್ರ ಸಂಭೂತಾ ಮಾಹಿತ್ಥಾ ವರದೇವತಾ ॥ ೭ ॥
ಯಯಾಽಯಂ ಚಲಿತಃ ಶೈಲಃ ಸ್ವಶಕ್ತ್ಯಾ ನಿಶ್ಚಲೀಕೃತಃ ।
ಸ್ಕಂದೇನೇಹ ದ್ವಿಜಶ್ರೇಷ್ಠಾಃ ಶಕ್ತ್ಯಾ ವಿದ್ಧಸ್ತದಗ್ರತಃ ॥ ೮ ॥
ನರಾದಿತ್ಯಸ್ತತಶ್ಚಾಽನ್ಯೋ ಯೋ ನರೇಣ ಪ್ರತಿಷ್ಠಿತಃ ।
ಷಷ್ಠ್ಯಾಂ ತಂ ಸೂರ್ಯವಾರೇಣ ದೃಷ್ಟ್ವಾ ಪಾಪಾತ್ಪ್ರಮುಚ್ಯತೇ ॥ ೯ ॥
ನ ಶತ್ರೂಣಾಂ ಪರಾಭೂತಿಂ ಪ್ರಯಾಸ್ಯತಿ ಯಥಾರ್ಜುನಃ ।
ರೋಗೀ ವಿಮುಚ್ಯತೇ ರೋಗಾದ್ದರಿದ್ರೋ ಧನಮಾಪ್ನುಯಾತ್ ॥ ೧೦ ॥
ತಥಾ ಗೋವರ್ಧನಧರಂ ತತ್ರ ದೇವಂ ಜನಾರ್ದನಂ ।
ಯಃ ಪಶ್ಯೇತ್ಕಾರ್ತಿಕೇ ಶುಕ್ಲೇ ಸಂಪ್ರಾಪ್ತೇ ಪ್ರಥಮೇ ದಿನೇ ।
ತಸ್ಯ ಗಾವಃ ಪ್ರಭೂತಾಃ ಸ್ಯುರ್ನೀರೋಗಾ ದ್ವಿಜಸತ್ತಮಾಃ ॥ ೧೧ ॥
ನರಸಿಂಹವಪುಃ ಸಾಕ್ಷಾತ್ತಥಾ ದೇವೋ ಹರಿಃ ಸ್ವಯಂ ।
ತಥಾ ವಿನಾಯಕಸ್ತತ್ರ ಸರ್ವಕಾಮಪ್ರದಾಯಕಃ ।
ಸರ್ವವಿಘ್ನಹರಶ್ಚೈವ ಸ್ಥಾಪಿತಶ್ಚಾಽರ್ಜುನೇನ ಹಿ ॥ ೧೨ ॥

---

ನನ್ನೊಡನೆ ಬ್ರಾಹ್ಮಣರ ರಕ್ಷಣೆಗಾಗಿ ಆ ಕ್ಷೇತ್ರಕ್ಕೆ ಹೋಗಿ ಯಾವಾಗಲೂ ಸನ್ನಿಹಿತಳಾಗು.” ಹೀಗೆ ಆ ದೇವತೆಯು ಅಲ್ಲಿ ನೆಲೆಸಿದಳು.

೮. ದ್ವಿಜವರ್ಯರೆ! ಇವಳು ತನ್ನ ಮುಂದೆ ಸ್ಕಂದನು ಶಕ್ತಿಯಿಂದ ಚಲಿಸುವಂತೆ ಮಾಡಿದ ಪರ್ವತವನ್ನು ಸ್ವಸಾಮರ್ಥ್ಯದಿಂದ ನಿಶ್ಚಲವಾಗಿ ಮಾಡಿರುವಳು.

೯. ಇಲ್ಲಿ ಅರ್ಜುನನು ಪ್ರತಿಷ್ಠೆಮಾಡಿರುವ ನರಾದಿತ್ಯನಿರುವನು. ಷಷ್ಠೀ ಭಾನುವಾರದ ದಿನ ಇವನನ್ನು ದರ್ಶನಮಾಡಿದವನು ಪಾಪಮುಕ್ತನಾಗುವನು.

೧೦. ಅರ್ಜುನನಂತೆ ಶತ್ರುಗಳಿಂದ ಪರಾಜಯವನ್ನು ಹೊಂದುವುದಿಲ್ಲ. ರೋಗಿಯು ರೋಗಮುಕ್ತನಾಗುವನು. ಬಡವನು ಧನವನ್ನು ಹೊಂದದೆ ವಿಜಯವನ್ನೇ ಪಡೆಯುವನು.

೧೧. ಹಾಗೆಯೇ ಕಾರ್ತಿಕ ಶುಕ್ಲಪಕ್ಷದ ಪಾಡ್ಯದ ದಿನ ಗೋವರ್ಧನೋದ್ಧಾರಕನಾದ ಕೃಷ್ಣನನ್ನು ನೋಡಿದವನ ಗೋವುಗಳು ವೃದ್ಧಿಗೊಂಡು ರೋಗವಿಲ್ಲದವುಗಳಾಗಿ ಆಗುವುವು.

೧೨. ಅರ್ಜುನನು ನರಸಿಂಹರೂಪಿಯಾದ ವಿಷ್ಣುವನ್ನೂ, ಸಕಲೇಷ್ಟಾರ್ಥಗಳನ್ನೀಯುವವನೂ, ಸಮಸ್ತ ವಿಘ್ನನಾಶಕನೂ ಆದ ಗಣೇಶನನ್ನೂ ಅಲ್ಲಿ ಪ್ರತಿಷ್ಠೆ ಮಾಡಿರುವನು.

ಯಸ್ತಂ ಪೂಜಯತೇ ಭಕ್ತ್ಯಾ ಚತುರ್ಥ್ಯಾಂ ಮೋದಕಾಽಶನೈಃ ।
ಸ ಸರ್ವವಿಘ್ನ ನಿರ್ಮುಕ್ತೋ ಲಭತೇ ವಾಂಛಿತಂ ಫಲಂ ।
ತತ್ರ ಸ್ಥಿತೋ ದ್ವಿಜೇಂದ್ರಾಣಾಂ ಹಿತಾಯ ದ್ವಿಜಸತ್ತಮಾಃ ॥ ೧೩ ॥
ಯಸ್ತಮಾಥರ್ವಣೈರ್ಮಂತ್ರೈಃ ಪೂಜಯೇದ್ದ್ವಾದಶೀದಿನೇ ।
ಕಾರ್ತಿಕಸ್ಯ ಸಿತೇ ಪಕ್ಷೇ ಸ ಯಾತಿ ಪರಮಾಂ ಗತಿಂ ॥ ೧೪ ॥
ತಥಾ ತತ್ರ ದ್ವಿಜಶ್ರೇಷ್ಠಾ ನರನಾರಾಯಣಾವುಭೌ ।
ದೇವೌ ಪರಮತೇಜಸ್ವೀ ಯಸ್ತೌ ಪಶ್ಯತಿ ಭಕ್ತಿತಃ ॥ ೧೫ ॥
ಪೂಜಯೇಚ್ಚ ದ್ವಿಜಶ್ರೇಷ್ಠಾ ದ್ವಾದಶ್ಯಾ ದಿವಸೇ ಸ್ವಯಂ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೧೬ ॥
ತೀರ್ಥಯಾತ್ರಾಕೃತಾರಂಭಃ ಕುಂತೀಪುತ್ರೋ ಧನಂಜಯಃ ।
ಹಾಟಕೇಶ್ವರಜೇ ಕ್ಷೇತ್ರೇ ಸಮಾಯಾತೋ ದ್ವಿಜೋತ್ತಮಾಃ ॥ ೧೭ ॥
ದೃಷ್ಟ್ವಾ ತತ್ಪಾವನಂ ಕ್ಷೇತ್ರಂ ತೀರ್ಥಪೂಗಪ್ರಪೂರಿತಂ ।
ಆದಿತ್ಯಂ ಸ್ಥಾಪಯಾಮಾಸ ಪ್ರಾಸಾದೇ ಸುಮನೋಹರೇ ॥ ೧೮ ॥
ನರನಾರಾಯಣೌ ದೇವೌ ತಸ್ಯಾಗ್ರೇ ಸ್ಥಾಪಿತೌ ತತಃ ।
ತಥಾ ಗೋವರ್ಧನಧರಸ್ತತ್ರ ದೇವಃ ಪ್ರತಿಷ್ಠಿತಃ ॥ ೧೯ ॥
ನರಸಿಂಹಂ ತಥೈವಾಽನ್ಯಂ ಶ್ರದ್ಧಯಾ ಪರಯಾ ಯುತಃ ।
ಏವಂ ಸಂಸ್ಥಾಪ್ಯ ಕೌಂತೇಯೋ ದೇವಗೃಹಸುಪಂಚಕಂ ॥ ೨೦ ॥

---

೧೩. ದ್ವಿಜೇಂದ್ರರ ಹಿತಕ್ಕಾಗಿ ಅಲ್ಲಿ ನೆಲೆಸಿರುವ ಆ ವಿಘ್ನನಾಯಕನನ್ನು ಚತುರ್ಥೀ ದಿನ ಮೋದಕ ನೈವೇದ್ಯಗಳಿಂದ ಪೂಜಿಸುವವನು ಸಕಲ ವಿಘ್ನವಿಮುಕ್ತನಾಗಿ ಇಷ್ಟವಾದ ಫಲವನ್ನು ಪಡೆಯುವನು.

೧೪. ಕಾರ್ತಿಕ ಶುಕ್ಲಪಕ್ಷದ ದ್ವಾದಶೀ ದಿನ ಆ ವಿನಾಯಕನನ್ನು ಅಥರ್ವಣ ಮಂತ್ರಗಳಿಂದ ಪೂಜಿಸುವವನು ಉತ್ತಮಗತಿಯನ್ನು ಪಡೆಯುವನು.

೧೫–೧೮. ಹಾಗೆಯೇ ಅಲ್ಲಿರುವ ನರನಾರಾಯಣರೀರ್ವರನ್ನೂ ದ್ವಾದಶೀ ದಿನ ಭಕ್ತಿಯಿಂದ ನೋಡಿ ಪೂಜಿಸುವವನು ಜರಾಮರಣಗಳಿಲ್ಲದ ಉತ್ತಮಸ್ಥಾನಕ್ಕೆ ತೆರಳುವನು. ದ್ವಿಜವರ್ಯರೆ! ತೀರ್ಥಯಾತ್ರೆಯ ನಿಮಿತ್ತವಾಗಿ ಅಲ್ಲಿಗೆ ಬಂದ ಕುಂತೀತನಯನಾದ ಧನಂಜಯನು ತೀರ್ಥಗಳ ಸಮೂಹಗಳಿಂದ ತುಂಬಿದ ಆ ಪಾವನ ಕ್ಷೇತ್ರವನ್ನು ಕಂಡು ಮನೋಹರವಾದ ಪ್ರಾಸಾದದಲ್ಲಿ ಭಾಸ್ಕರನನ್ನು ಪ್ರತಿಷ್ಠೆಮಾಡಿದನು.

೧೯–೨೨. ಅನಂತರ ಆ ಸೂರ್ಯನ ಮುಂಗಡೆಯೆ ನರನಾರಾಯಣರನ್ನೂ, ಗೋವರ್ಧನೋದ್ಧಾರಕನಾದ ವಿಷ್ಣುವನ್ನೂ, ನರಸಿಂಹನನ್ನೂ ಪ್ರತಿಷ್ಠೆಮಾಡಿದನು. ಅರ್ಜುನನು ಹೀಗೆ ಐದು ದೇವಾಲಯಗಳನ್ನು ಸ್ಥಾಪಿಸಿ ಆ ಪಟ್ಟಣದ ಬ್ರಾಹ್ಮಣ

ತತೋ ವಿಪ್ರಾನ್ ಸಮಾಹೂಯ ಸರ್ವಾಂಸ್ತಾನ್ ಪುರಸಂಭವಾನ್ ।
ಪ್ರೋವಾಚ ಪ್ರಣತೋ ಭಕ್ತ್ಯಾ ಧನಂ ದತ್ವಾ ಸುಪುಷ್ಕಲಂ ॥ ೨೧ ॥
ಮಯಾ ಸಂಸ್ಥಾಪಿತಃ ಸೂರ್ಯಃ ಸರ್ವರೋಗಕ್ಷಯಾವಹಃ ।
ತಥಾರ್ಪಿತಶ್ಚ ಯುಷ್ಮಾಕಂ ಚಿಂತನೀಯಂ ಸದೈವ ತು ॥ ೨೨ ॥

ವಿಪ್ರಾ ಊಚುಃ:—

ಗಚ್ಛ ತ್ವಂ ಪಾಂಡವಶ್ರೇಷ್ಠ ಸುವಿಶ್ರಬ್ಧಃ ಸ್ವಮಾಲಯಂ ।
ವಯಂ ಸರ್ವೇ ಕರಿಷ್ಯಾಮಸ್ತವ ಶ್ರೇಯೋಽಭಿವರ್ಧನಂ ॥ ೨೩ ॥
ತತೋಽರ್ಜುನಃ ಪ್ರಹೃಷ್ಟಾತ್ಮಾ ತೇಭ್ಯೋದತ್ವಾ ಧನಂ ಬಹು ।
ತಾನಾಮಂತ್ರ್ಯ ನಮಸ್ಕೃತ್ಯ ಜಗಾಮ ಸ್ವಪುರಂ ಪ್ರತಿ ॥ ೨೪ ॥

ಸೂತ ಉವಾಚ:—

ಏತದ್ವಃ ಸರ್ವಮಾಖ್ಯಾತಂ ನರಾದಿತ್ಯಸ್ಯ ಸಂಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಶೃಣ್ವತಾಂ ಪಾಪನಾಶನಂ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನರಾದಿತ್ಯಮಾಹಾತ್ಮ್ಯವರ್ಣನಂ"
ನಾಮ ಷಷ್ಟಿತಮೋಽಧ್ಯಾಯಃ

---

ರನ್ನೆಲ್ಲ ಕರೆಯಿಸಿ ಭಕ್ತಿಯಿಂದ ಅವರಿಗೆ ಬಹಳವಾಗಿ ಧನವನ್ನಿತ್ತು ನಮಸ್ಕರಿಸಿ ಇಂತೆಂದನು. ನಾನು ಸಕಲ ರೋಗಗಳನ್ನು ನಾಶಗೊಳಿಸುವ ಸೂರ್ಯನನ್ನು ಸ್ಥಾಪಿಸಿ ನಿಮಗೆ ಒಪ್ಪಿಸಿರುವೆನು. ಆದುದರಿಂದ ನೀವು ಯಾವಾಗಲೂ ಅವನನ್ನು ಚಿಂತಿಸುತ್ತಿರಬೇಕು.

೨೩. ಬ್ರಾಹ್ಮಣರು ಹೇಳುತ್ತಾರೆ:—ಧನಂಜಯ! ನೀನು ನಂಬಿಕೆಯಿಂದ ನಿನ್ನ ಮನೆಗೆ ಹೋಗು. ನಾವೆಲ್ಲರೂ ನಿನ್ನ ಶ್ರೇಯೋಭಿವೃದ್ಧಿಯ ಕಾರ್ಯವನ್ನು ಮಾಡುವೆವು.

೨೪. ಬಳಿಕ ಅರ್ಜುನನು ಸಂತೋಷಗೊಂಡು ಅವರಿಗೆ ಬಹು ಧನವನ್ನಿತ್ತು ವಂದಿಸಿ ಅವರನ್ನು ಕೇಳಿಕೊಂಡು ತನ್ನ ನಗರಕ್ಕೆ ಹೋದನು.

೨೫. ಸೂತನು ಹೇಳುತ್ತಾನೆ:—ಬ್ರಾಹ್ಮಣವರ್ಯರೆ! ಕೇಳುವವರ ಪಾಪವನ್ನು ಪರಿಹರಿಸುವ ನರಾದಿತ್ಯನ ಸಕಲಮಾಹಾತ್ಮ್ಯೆಯನ್ನೂ ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನರಾದಿತ್ಯಮಾಹಾತ್ಮ್ಯವರ್ಣನ"ವೆಂಬ
ಅರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕಷಷ್ಠಿತಮೋಽಧ್ಯಾಯಃ

### ವಿಷಕನ್ಯಕೋತ್ಪತ್ತಿವರ್ಣನಂ

ಋಷಯ ಊಚುಃ:—

ಶರ್ವಿರ್ಷಾತೀರ್ಥಮಿತ್ಯುಕ್ತಂ ತ್ವಯಾ ಯಚ್ಚ ಮಹಾಮತೇ ।
ಕಥಂ ಜಾತಂ ಮಹಾಭಾಗ ಕಿಂ ಪ್ರಭಾವಂ ತು ತದ್ವದ ॥ ೧ ॥

ಸೂತ ಉವಾಚ:—

ಆಸೀದ್ರಾಜಾ ವೃಕೋ ನಾಮ ಸೋಮವಂಶಸಮುದ್ಭವಃ ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ಸರ್ವಲೋಕಹಿತೇ ರತಃ ॥ ೨ ॥
ತಸ್ಯ ಭಾರ್ಯಾಽಭವತ್ಸಾಧ್ವೀ ಪ್ರಾಣೇಭ್ಯೋಽಪಿ ಗರೀಯಸೀ ।
ಸರ್ವಲಕ್ಷಣಸಂಪನ್ನಾ ಪತಿವ್ರತಪರಾಯಣಾ ॥ ೩ ॥
ಅಥ ತಸ್ಯಾಂ ಸಮುತ್ಪನ್ನಾ ಪ್ರಾಪ್ತೇ ವಯಸಿ ಪಶ್ಚಿಮೇ ।
ಕನ್ಯಕಾ ದಿವಸೇ ಪ್ರಾಪ್ತೇ ಸರ್ವಶಾಸ್ತ್ರ ವಿಗರ್ಹಿತೇ ॥ ೪ ॥
ತತ ಆನೀಯ ವಿಪ್ರಾನ್ ಸ ಜ್ಯೋತಿಜ್ಞಾನ ವಿಚಕ್ಷಣಾನ್ ।
ಪಪ್ರಚ್ಛ ಕೀದೃಶೀ ಕನ್ಯಾ ಮಮೇಯಂ ಸಂಭವಿಷ್ಯತಿ ॥ ೫ ॥

---

### ಕನ್ನಡದ ಅನುವಾದ

#### ವಿಷಕನ್ಯಕೋತ್ಪತ್ತಿವರ್ಣನ

೧. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ನೀನು ಶರ್ವಿರ್ಷಾತೀರ್ಥವನ್ನು ಹೇಳಿರುವೆಯಲ್ಲ, ಅದು ಹೇಗೆ ಹುಟ್ಟಿತು? ಎಂತಹ ಮಾಹಾತ್ಮ್ಯೆಯುಳ್ಳುದು?

೨. ಸೂತನು ಹೇಳುತ್ತಾನೆ:—ಬ್ರಹ್ಮನಿಷ್ಠನೂ, ಶರಣಾಗತ ಪಾಲಕನೂ, ಸಮಸ್ತ ಜನರ ಹಿತದಲ್ಲಿ ನಿರತನೂ ಆದ ಸೋಮವಂಶದ ವೃಕನೆಂಬ ರಾಜನಿದ್ದನು.

೩. ಅವನಿಗೆ ಪತಿವ್ರತೆಯೂ, ಪ್ರಾಣಗಳಿಗಿಂತ ಶ್ರೇಷ್ಠಳೂ, ಸಕಲ ಲಕ್ಷಣ ಸಂಪನ್ನಳೂ ಆದ ಪತ್ನಿಯಿದ್ದಳು.

೪. ಬಳಿಕ ಅವನಿಗೆ ಆ ಪತ್ನಿಯಲ್ಲಿ ಮುಪ್ಪಿನಲ್ಲಿ ಸಕಲ ಶಾಸ್ತ್ರನಿಂದಿತವಾದ ಒಂದು ದಿನ ಓರ್ವ ಕನ್ಯೆಯು ಜನಿಸಿದಳು.

೫. ಅವನು ಜ್ಯೋತಿಶ್ಶಾಸ್ತ್ರನಿಪುಣರಾದ ಜೋಯಿಸರನ್ನು ಕರೆಯಿಸಿ ನನಗೆ ಹುಟ್ಟಿರುವ ಈ ಕನ್ಯೆಯು ಹೇಗಾಗುವಳು? ಎಂದು ಕೇಳಿದನು.

ಬ್ರಾಹ್ಮಣಾ ಊಚುಃ :—

ಯಾ ಕನ್ಯಾ ಪ್ರಾಪ್ನುಯಾಜ್ಜನ್ಮ ಚಿತ್ರಾಸಂಸ್ಥೇ ದಿವಾಕರೇ ।
ಚಂದ್ರೇವಾಽಪಿ ಚತುರ್ದಶ್ಯಾಂ ಸಾ ಭವೇದ್ವಿಷಕನ್ಯಕಾ ॥ ೬ ॥
ಯಸ್ತಸ್ಯಾಃ ಪ್ರತಿಗೃಹ್ಣಾತಿ ಪಾಣಿಂ ಪಾರ್ಥಿವಸತ್ತಮ ।
ಷಣ್ಮಾಸಾಭ್ಯಂತರೇ ಮೃತ್ಯುಂ ಸ ಪ್ರಾಪ್ನೋತಿ ನರೋ ಧ್ರುವಂ ॥ ೭ ॥
ಯಸ್ಮಿನ್ ಸಾ ಜಾಯತೇ ಹರ್ಮ್ಯೇ ಷಣ್ಮಾಸಾಭ್ಯಂತರೇ ಚ ತತ್ ।
ಕರೋತಿ ವಿಭವೈರ್ಹೀನಂ ಧನದಸ್ಯಾಪ್ಯಸಂಶಯಂ ॥ ೮ ॥
ಸೇಯಂ ತವ ಸುತಾ ರಾಜನ್ ಯಥೋಕ್ತಾ ವಿಷಕನ್ಯಕಾ ।
ಪೈತೃಕಂ ಶ್ವಾಶುರೀಯಂ ಚ ಹನಿಷ್ಯತಿ ಗೃಹದ್ವಯಂ ॥ ೯ ॥
ತಸ್ಮಾದಿಮಾಂ ಪರಿತ್ಯಜ್ಯ ಸುಖೀಭವ ನರಾಧಿಪ ।
ಶ್ರದ್ಧಧಾಸಿ ವಚೋಽಸ್ಮಾಕಂ ಹಿತಮುಕ್ತಂ ಯದಿ ಪ್ರಭೋ ॥ ೧೦ ॥

ರಾಜೋವಾಚ :—

ತ್ಯಕ್ಷ್ಯಾಮಿ ಯದಿ ನಾಮ್ಯೇತಾಂ ಧಾರಯಿಷ್ಯಾಮಿ ವಾ ಗೃಹೇ ।
ಅನ್ಯದೇಹೋದ್ಭವಂ ಕರ್ಮ ಫಲಿಷ್ಯತಿ ತಥಾಽಪಿ ಮೇ ॥ ೧೧ ॥
ಶುಭಂ ವಾ ಯದಿ ವಾ ಪಾಪಂ ನತು ಶಕ್ಯಂ ಪ್ರರಕ್ಷಿತುಂ ।
ತಸ್ಮಾತ್ಕರ್ಮ ಪುರಸ್ಕೃತ್ಯ ನೈವ ತ್ಯಕ್ಷ್ಯಾಮಿ ಕನ್ಯಕಾಂ ॥ ೧೨ ॥

---

೬. ಬ್ರಾಹ್ಮಣರು ಹೇಳುತ್ತಾರೆ:—ಚತುರ್ದಶೀ ದಿನ ಸೂರ್ಯ ಅಥವಾ ಚಂದ್ರನು ಚಿತ್ರಾನಕ್ಷತ್ರದಲ್ಲಿರುವಾಗ ಹುಟ್ಟಿದ ಕನ್ಯೆಯು ವಿಷಕನ್ಯೆಯಾಗುವಳು.

೭. ನರೇಂದ್ರ! ಅವಳನ್ನು ಮದುವೆಮಾಡಿಕೊಂಡವನು ಆರು ತಿಂಗಳಲ್ಲಿಯೇ ನಿಶ್ಚಯವಾಗಿಯೂ ಮಡಿಯುವನು.

೮. ಅವಳು ಯಾವ ಮನೆಯಲ್ಲಿ ಜನಿಸುವಳೋ ಅದು ಕುಬೇರನ ಮನೆಯಾಗಿದ್ದಾಗ್ಗೂ ಆರು ತಿಂಗಳಲ್ಲಿ ಐಶ್ವರ್ಯಹೀನವಾಗುವುದು.

೯. ನಿನ್ನೀ ಮಗಳು ಇಂತಹ ವಿಷಕನ್ಯೆಯಾಗಿರುವುದರಿಂದ ತಂದೆ ಮತ್ತು ಮಾವನ ಮನೆಗಳನ್ನು ಹಾಳುಮಾಡುವಳು.

೧೦. ಮಹಾರಾಜ! ಆದುದರಿಂದ ನಾನು ಹೇಳಿದ ಮಾತು ಹಿತವಾದುದೆಂದು ನಂಬುವುದಾದರೆ ಇವಳನ್ನು ತ್ಯಜಿಸಿ ಸುಖವುಳ್ಳವನಾಗು.

೧೧. ರಾಜನು ಹೇಳುತ್ತಾನೆ:—ಇವಳನ್ನು ತೊರೆದರೂ ಅಥವಾ ಮನೆಯಲ್ಲಿಯೇ ಇಟ್ಟುಕೊಂಡರೂ, ಇನ್ನೊಂದು ಜನ್ಮದಲ್ಲಿಯಾದರೂ ನನ್ನ ಕರ್ಮವು ಫಲಿಸುವುದು.

೧೨. ಒಳ್ಳೆಯದನ್ನಾಗಲಿ, ಕೆಟ್ಟದ್ದನ್ನಾಗಲಿ ತಡೆಯಲು ಸಾಧ್ಯವಿಲ್ಲ. ಆದುದರಿಂದ ಕರ್ಮವನ್ನು ಮುಂದಿರಿಸಿಕೊಂಡು ಈ ಕನ್ಯೆಯನ್ನು ಬಿಡುವುದಿಲ್ಲ.

ಯೇನ ಯೇನ ಶರೀರೇಣ ಯದ್ಯತ್ಕರ್ಮ ಕರೋತಿ ಯಃ ।
ತೇನ ತೇನೈವ ಭೂಯಃ ಸ ಪ್ರಾಪ್ನೋತಿ ಸಕಲಂ ಫಲಂ ॥ ೧೩ ॥
ಯಸ್ಯಾಂ ಯಸ್ಯಾಮವಸ್ಥಾಯಾಂ ಕ್ರಿಯತೇಽತ್ರ ಶುಭಾಶುಭಂ ।
ತಸ್ಯಾಂ ತಸ್ಯಾಂ ಧ್ರುವಂ ತಸ್ಯ ಫಲಂ ತದ್ಭುಜ್ಯತೇ ನರೈಃ ॥ ೧೪ ॥
ನ ನಶ್ಯತಿ ಪುರಾ ಕರ್ಮ ಕೃತಂ ಸರ್ವೇಂದ್ರಿಯೈರಿಹ ।
ಅಕೃತಂ ಜಾಯತೇ ನೈವ ತಸ್ಮಾನ್ನಾಸ್ತಿ ಭಯಂ ಮಮ ॥ ೧೫ ॥
ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ।
ಪಂಚೈತಾನಿ ಹಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥ ೧೬ ॥
ಯಥಾ ವೃಕ್ಷೇಷು ವಲ್ಲೀಷು ಕುಸುಮಾನಿ ಫಲಾನಿ ಚ ।
ಸ್ವಕಾಲಂ ನಾತಿವರ್ತಂತೇ ತದ್ವತ್ಕರ್ಮ ಪುರಾ ಕೃತಂ ॥ ೧೭ ॥
ಯೇನೈವ ಯದ್ಯಥಾ ಪೂರ್ವಂ ಕೃತಂ ಕರ್ಮ ಶುಭಾಽಶುಭಂ ।
ಸ ಏವ ತತ್ತಥಾ ಭುಂಕ್ತೇ ನಿತ್ಯಂ ವಿಹಿತಮಾತ್ಮನಃ ॥ ೧೮ ॥
ಯಥಾ ಧೇನುಸಹಸ್ರೇಷು ವತ್ಸೋ ವಿಂದತಿ ಮಾತರಂ ।
ತಥೈವ ಕೋಟಿಮಧ್ಯಸ್ಥಂ ಕರ್ತಾರಂ ಕರ್ಮ ವಿಂದತಿ ॥ ೧೯ ॥
ಅನ್ಯದೇಹಕೃತಂ ಕರ್ಮ ನ ಕಶ್ಚಿತ್ಪುರುಷೋ ಭುವಿ ।
ಬಲೇನ ಪ್ರಜ್ಞಯಾವಾಽಪಿ ಸಮರ್ಥಃ ಕರ್ತುಮನ್ಯಥಾ ॥ ೨೦ ॥

---

೧೩. ಮಾನವನು ಯಾವ ಯಾವ ಶರೀರದಿಂದ ಯಾವ ಯಾವ ಕೆಲಸವನ್ನು ಮಾಡುವನೋ ಆಆ ಶರೀರದಿಂದಲೇ ಆಆ ಕರ್ಮಗಳ ಫಲವನ್ನು ಪಡೆಯುವನು.

೧೪. ಮಾನವನು ಯಾವ ಯಾವ ಸ್ಥಿತಿಯಲ್ಲಿ ಶುಭಾಶುಭ ಕರ್ಮಗಳನ್ನು ಮಾಡುವನೋ ಆಆ ಸ್ಥಿತಿಯಲ್ಲಿಯೇ ಆಆ ಕರ್ಮಗಳ ಫಲವನ್ನು ಅನುಭವಿಸುವನು.

೧೫. ಸಕಲೇಂದ್ರಿಯಗಳಿಂದೆಸಗಿದ ಹಿಂದಿನ ಜನ್ಮದ ಕರ್ಮವು ಹಾಳಾಗುವುದಿಲ್ಲ. ಮಾಡದಿರುವುದು ಉಂಟಾಗುವುದಿಲ್ಲ. ಆದುದರಿಂದ ನನಗೆ ಭಯವಿಲ್ಲ.

೧೬–೧೮. ಆಯಸ್ಸು, ಕರ್ಮ, ವಿತ್ತ, ವಿದ್ಯಾ, ನಿಧನ ಈ ಐದನ್ನು ಪ್ರಾಣಿಗೆ ಬ್ರಹ್ಮನು ಗರ್ಭದಲ್ಲಿರುವಾಗಲೇ ಸೃಷ್ಟಿಸುವನು. ಮರಗಳು, ಲತೆಗಳು ಇವುಗಳಲ್ಲಿ ಹೂವು ಹಣ್ಣುಗಳು ಆಯಾ ಕಾಲದಲ್ಲಿ ಹೇಗೆ ಉಂಟಾಗುವುವೋ ಹಾಗೆಯೇ ಹಿಂದೆ ಮಾಡಿದ ಕರ್ಮಗಳು ಸಂಭವಿಸುವುವು. ಯಾವನು ಹಿಂದೆ ಹೇಗ್ಹೆಹೇಗೆ ಶುಭಾಶುಭ ಕರ್ಮಗಳನ್ನು ಮಾಡಿರುವನೋ ಅವನು ಹಾಗೆ ಹಾಗೆಯೇ ನಿತ್ಯವೂ ತಾನು ಮಾಡಿದ ಕರ್ಮವನ್ನು ಅನುಭವಿಸುವನು.

೧೯. ಸಾವಿರ ಹಸುಗಳ ನಡುವೆ ಇರುವ ತಾಯಿಯನ್ನು ಕರುವು ಸೇರುವಂತೆ ಕರ್ಮವು ಕೋಟಿ ಮಾನವರ ನಡುವೆ ಇರುವ ಕರ್ಮಕಾರಿಯನ್ನು ಹೊಂದುವುದು.

೨೦. ಲೋಕದಲ್ಲಿ ಯಾವ ಮನುಷ್ಯನೂ ಜನ್ಮಾಂತರದಲ್ಲೆಸಗಿದ ಕರ್ಮವನ್ನು ಬಲ ಅಥವಾ ಬುದ್ಧಿಯಿಂದ ವ್ಯತ್ಯಾಸಗೊಳಿಸಲು ಸಮರ್ಥನಲ್ಲ.

ಅನ್ಯಥಾ ಶಾಸ್ತ್ರಗರ್ಭಿಣ್ಯಾ ಧಿಯಾ ಧೀರೋ ಮಹೀಪತೇ ।
ಸ್ವಾಮಿವತ್ಪ್ರಾಕ್ಕೃತಂ ಕರ್ಮ ವಿದಧಾತಿ ತದನ್ಯಥಾ ॥ ೨೧ ॥
ಸ್ವಕೃತಾನ್ಯುಪತಿಷ್ಠಂತಿ ಸುಖದುಃಖಾನಿ ದೇಹಿನಾಂ ।
ಹೇತುಭೂತೋ ಹಿ ಯಸ್ತೇಷಾಂ ಸೋಽಹಂಕಾರೇಣ ಬಧ್ಯತೇ ॥ ೨೨ ॥
ಸುಶೀಘ್ರಮಭಿಧಾವಂತಂ ನಿಜಂ ಕರ್ಮಾಽನುಧಾವತಿ ।
ಶೇತೇ ಸಹ ಶಯಾನೇನ ತಿಷ್ಠಂತಮನುತಿಷ್ಠತಿ ॥ ೨೩ ॥
ಯಥಾ ಛಾಯಾತಪೌ ನಿತ್ಯಂ ಸುಸಂಬದ್ಧೌ ಪರಸ್ಪರಂ ।
ತಥಾ ಕರ್ಮ ಚ ಕರ್ತಾ ಚ ನಾಽತ್ರ ಕಾರ್ಯಾ ವಿಚಾರಣಾ ॥ ೨೪ ॥
ಯೇನ ಯತ್ರೋಪಭೋಕ್ತವ್ಯಂ ಸುಖಂ ವಾ ದುಃಖಮೇವ ವಾ ।
ನರಃ ಸ ಬದ್ಧೋ ರಜ್ಜ್ವೇವ ಬಲಾತ್ತತ್ರೈವ ನೀಯತೇ ॥ ೨೫ ॥
ಪ್ರಮಾಣಂ ಕರ್ಮಭೂತಾನಾಂ ಸುಖದುಃಖೋಪಪಾದನೇ ।
ಸಾವಧಾನತಯಾ ಯಚ್ಚ ಜಾಗ್ರತಾಂ ಸ್ವಪತಾಮಪಿ ॥ ೨೬ ॥
ತೈಲಕ್ಷಯೇ ಯಥಾ ದೀಪೋ ನಿರ್ವಾಣಮಧಿಗಚ್ಛತಿ ।
ಕರ್ಮಕ್ಷಯೇ ತಥಾ ಜಂತುರ್ನಿರ್ವಾಣಮಧಿಗಚ್ಛತಿ ॥ ೨೭ ॥

---

೨೧. ಹಾಗೆ ಕರ್ಮಬಂಧನವಿಲ್ಲದ ಮಾನವನು ಶಾಸ್ತ್ರನಿಷ್ಣಾತವಾದ ಬುದ್ಧಿಯಿಂದ ಪೂಜ್ಯನಾಗುವನು. ಜನ್ಮಾಂತರಕೃತವಾದ ಕರ್ಮವು ರಾಜನಂತೆ ಮಾನವನ ಬಾಳನ್ನು ವ್ಯತ್ಯಾಸಗೊಳಿಸುವುದು.

೨೨–೨೪. ಪ್ರಾಣಿಗಳನ್ನು ಅವು ಮಾಡಿರುವ ಸುಖದುಃಖಗಳು ಬಂದು ಸೇರುವುವು. ಆ ಪ್ರಾಣಿಗಳನ್ನು ಸುಖದುಃಖಗಳಿಗೆ ಕಾರಣವಾದ ಅಹಂಕಾರವು ಬಂಧಿಸುವುದು. ಶೀಘ್ರವಾಗಿ ಓಡುತ್ತಿರುವವನನ್ನು ಅವನು ಮಾಡಿರುವ ಕರ್ಮವು ಹಿಂಬಾಲಿಸುವುದು. ಮಲಗಿರುವವನೊಡನೆ ಮಲಗಿರುವುದು. ನಿಂತಿರುವಾಗ ನಿಂತಿರುವುದು. ಬಿಸಿಲು ನೆರಳುಗಳು ಒಟ್ಟಿಗೆ ಸೇರಿರುವಂತೆ ಕರ್ಮಕರ್ತೃಗಳು ಒಟ್ಟಿಗೆ ಕೂಡಿರುವರು. ಈ ವಿಷಯದಲ್ಲಿ ವಿಚಾರವಿಲ್ಲ.

೨೫. ಯಾವ ಮನುಷ್ಯನು ಸುಖವನ್ನಾಗಲಿ, ದುಃಖವನ್ನಾಗಲಿ ಎಲ್ಲಿ ಅನುಭವಿಸಬೇಕೋ ಅವನನ್ನು ಕರ್ಮವು ಹಗ್ಗದಂತೆ ಬಂಧಿಸಿ ಅಲ್ಲಿಗೇ ಬಲಾತ್ಕಾರವಾಗಿ ತೆಗೆದುಕೊಂಡು ಹೋಗುವುದು.

೨೬. ಪ್ರಾಣಿಗಳು ಸಾವಧಾನಮನಸ್ಸಿನಿಂದ ಜಾಗರೂಕತೆಯಿಂದಿರಲಿ ಅಥವಾ ನಿದ್ರಿಸುತ್ತಿರಲಿ ಅವುಗಳಿಗೆ ಸುಖದುಃಖಗಳನ್ನುಂಟುಮಾಡುವುದರಲ್ಲಿ ಕರ್ಮವು ಸಮರ್ಥವಾದುದು.

೨೭. ಎಣ್ಣೆಯು ಮುಗಿದಾಗ ದೀಪವು ಆರಿಹೋಗುವಂತೆ ಕರ್ಮವು ನಾಶವಾಗಲು ಪ್ರಾಣಿಯು ಮೋಕ್ಷವನ್ನು ಹೊಂದುವುದು.

ನ ಮಂತ್ರಾ ನ ತಪೋ ದಾನಂ ನ ತೀರ್ಥಂ ನ ಚ ಸಂಯಮಃ ।
ಸಮರ್ಥಾ ರಕ್ಷಿತುಂ ಜಂತುಂ ಪೀಡಿತಂ ಪೂರ್ವಕರ್ಮಭಿಃ ॥ ೨೮ ॥
ಸಂಗತ್ಯಾ ಜಠರೇ ನ್ಯಸ್ತೋ ರೇತೋಬಿಂದುರಚೇತನಃ ।
ಋತುಕಾಲೇ ಮನುಷ್ಯೇಣ ವೃದ್ಧಿಂ ಗಚ್ಛತಿ ಕರ್ಮತಃ ॥ ೨೯ ॥
ಅನ್ನಪಾನಾನಿ ಜೀರ್ಯಂತಿ ಯತ್ರ ಭಕ್ಷ್ಯಂ ಚ ಭಕ್ಷಿತಂ ।
ತಸ್ಮಿನ್ನೇವೋದರೇ ಗರ್ಭಃ ಕಥಂ ನಾಮ ನ ಜೀರ್ಯತಿ ॥ ೩೦ ॥
ತಸ್ಮಾತ್ಕರ್ಮಕೃತಂ ಸರ್ವಂ ದೇಹಿನಾಮತ್ರ ಜಾಯತೇ ।
ಶುಭಂ ವಾ ಯದಿ ವಾ ಪಾಪಮಿತಿ ಮೇ ನಿಶ್ಚಯಃ ಸದಾ ॥ ೩೧ ॥

ಅರಕ್ಷಿತಂ ತಿಷ್ಠತಿ ದೈವರಕ್ಷಿತಂ
ಸುರಕ್ಷಿತಂ ದೈವಹತಂ ವಿನಶ್ಯತಿ ।
ಜೀವತ್ಯನಾಥೋಽಪಿ ವನೇ ವಿಸರ್ಜಿತಃ
ಕೃತಪ್ರಯತ್ನೋಽಪಿ ಗೃಹೇ ನ ಜೀವತಿ ॥ ೩೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಿಷಕನ್ಯಕೋತ್ಪತ್ತಿವರ್ಣನಂ" ನಾಮೈಕಷಷ್ಟಿತಮೋಽಧ್ಯಾಯಃ

---

೨೮. ಪೂರ್ವಕರ್ಮಗಳಿಂದ ಪೀಡಿತವಾದ ಜಂತುವನ್ನು ರಕ್ಷಿಸಲು ಮಂತ್ರ, ತಪಸ್ಸು, ದಾನ, ತೀರ್ಥ, ಸಂಯಮಗಳು ಸಮರ್ಥಗಳಲ್ಲ.

೨೯. ಮನುಷ್ಯನು ಋತುಕಾಲದಲ್ಲಿ ಸಮಾಗಮದಿಂದ ಹೆಂಗಸಿನ ಉದರ ದಲ್ಲಿರಿಸಿದ ಅಚೇತನವಾದ ರೇತಸ್ಸು ಕರ್ಮದಿಂದ ವೃದ್ಧಿಯಾಗುವುದು.

೩೦. ಅನ್ನಪಾನಗಳೂ, ತಿಂದ ಭಕ್ಷ್ಯವೂ ಜೀರ್ಣವಾಗುವ ಹೊಟ್ಟೆಯಲ್ಲಿ ಗರ್ಭವು ಹೇಗೆ ಜೀರ್ಣವಾಗುವುದಿಲ್ಲ?

೩೧. ಆದುದರಿಂದ ಪ್ರಾಣಿಗಳು ಮಾಡಿದ ಶುಭಾಶುಭ ಕರ್ಮಗಳು ಇಲ್ಲಿ ಉಂಟಾಗುವುವು ಎಂದು ನಾನು ನಿಶ್ಚಯಿಸುವೆನು.

೩೨. ಮಾನವನು ಕಾಪಾಡದೆ ಇರುವುದನ್ನು ದೈವವು ರಕ್ಷಿಸಿದರೆ ಅದು ಇರುವುದು. ಚೆನ್ನಾಗಿ ಕಾಪಾಡಲ್ಪಟ್ಟಿರುವುದನ್ನು ದೈವವು ವಧಿಸಿದರೆ ಹಾಳಾಗು ವುದು. ಕಾಡಿನಲ್ಲಿ ಬಿಟ್ಟ ಅನಾಥ ಪ್ರಾಣಿಯೂ ಬದುಕುವುದು. ಮನೆಯಲ್ಲಿ ಪ್ರಯತ್ನದಿಂದ ಕಾಪಾಡಿದರೂ ಜೀವಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಿಷಕನ್ಯಕೋತ್ಪತ್ತಿವರ್ಣನ"ವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಷಷ್ಟಿತಮೋಽಧ್ಯಾಯಃ

## ಶರ್ಮಿಷ್ಠಾತೀರ್ಥಮಾಹಾತ್ಮ್ಯವರ್ಣನಂ

ಸೂತ ಉವಾಚ:—

ಏವಂ ಸ ನಿಶ್ಚಯಂ ಕೃತ್ವಾ ಪಾರ್ಥಿವೋ ದ್ವಿಜಸತ್ತಮಾಃ ।
ನಾಽತ್ಯಜತ್ತಾಂ ತಥೋಕ್ತೋಽಪಿ ದೈವಜ್ಞೈರ್ವಿಷಕನ್ಯಕಾಂ ।
ದೀಯಮಾನಾಮಪಿ ಪ್ರೀತ್ಯಾ ನ ಚ ಗೃಹ್ಣಾತಿ ಭೂಭುಜಾ ॥ ೧ ॥
ಶರ್ಮಣಶ್ಚೀವನಂ ಯಸ್ಮಾತ್ತಯಾ ಸ್ವಪಿತುರಾಹಿತಂ ।
ಶರ್ಮಿಷ್ಠೇತಿ ಸುವಿಖ್ಯಾತಾ ತತಃ ಸಾಽಭವದ್ಭುವಿ ॥ ೨ ॥
ಏತಸ್ಮಿನ್ನಂತರೇ ತಸ್ಯ ಶತ್ರವಃ ಪೃಥಿವೀಪತೇಃ ।
ಸರ್ವತಃ ಪೀಡಯಾಮಾಸೂ ರಾಷ್ಟ್ರಂ ಕ್ರೋಧಸಮನ್ವಿತಾಃ ॥ ೩ ॥
ಅಥಾಽಸೌ ಪಾರ್ಥಿವಃ ಕ್ರುದ್ಧಃ ಸ್ವಸೈನ್ಯ ಪರಿವಾರಿತಃ ।
ಯುದ್ಧಾಯ ನಿರ್ಯಯೌ ಸ್ಥಾನಾನ್ಮೃತ್ಯುಂ ಕೃತ್ವಾ ನಿವರ್ತನೇ ॥ ೪ ॥
ತತಃ ಸಂಪ್ರಾಪ್ಯ ತಾಂ ಛತ್ರೂಂಶ್ಚಕಾರ ಸ ಮಹಾಹವಂ ।
ಚತುರಂಗೇನ ಸೈನ್ಯೇನ ಯಮರಾಷ್ಟ್ರವಿವರ್ಧನಂ ॥ ೫ ॥

---

## ಕನ್ನಡದ ಅನುವಾದ

### ಶರ್ಮಿಷ್ಠಾತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ರಾಜನು ಹೀಗೆ ನಿಶ್ಚಯಿಸಿ ಜೋಯಿಸರು ಎಷ್ಟು ಹೇಳಿದರೂ ಆ ವಿಷಕನ್ಯೆಯನ್ನು ತ್ಯಜಿಸಲಿಲ್ಲ. ರಾಜನು ಕೊಟ್ಟರೂ ಯಾರೂ ಅವಳನ್ನು ಸ್ವೀಕರಿಸಲಿಲ್ಲ.

೨. ಅವಳು ತನ್ನ ತಂದೆಗೆ ಸುಖನಾಶವನ್ನುಂಟುಮಾಡಿದ್ದರಿಂದ ಭೂಮಿಯಲ್ಲಿ ಶರ್ಮಿಷ್ಠೆಯೆಂದು ಪ್ರಸಿದ್ಧಳಾದಳು.

೩. ಈ ಸಮಯದಲ್ಲಿ ಆ ರಾಜನ ಶತ್ರುಗಳು ಕೋಪಗೊಂಡು ರಾಜ್ಯವನ್ನು ಸುತ್ತಲೂ ಪೀಡಿಸಿದರು.

೪. ಬಳಿಕ ಆತನು ಕುಪಿತನಾಗಿ ಚತುರಂಗ ಸೈನ್ಯ ಸಮೇತನಾಗಿ ಶತ್ರುಗಳನ್ನು ಕೊಲ್ಲಲು ಯುದ್ಧಕ್ಕೆ ಹೊರಟನು.

೫. ಅನಂತರ ಅವನು ಶತ್ರುಗಳನ್ನು ಹೊಂದಿ ಚತುರಂಗ ಸೈನ್ಯದೊಡನೆ ಯಮನ ರಾಜ್ಯವನ್ನು ಅಭಿವೃದ್ಧಿಗೊಳಿಸುವ ಘೋರಯುದ್ಧವನ್ನು ಮಾಡಿದನು.

ತತಶ್ಚ ದಶಮೇ ಪ್ರಾಪ್ತೇ ಶತ್ರುಭಿಃ ಸ ಮಹೀಪತಿಃ ।
ನಿಹತೋ ದಿವಸೇ ಸರ್ವೈರ್ವೇಷ್ಟಯಿತ್ವಾ ಸಮಂತತಃ ॥ ೬ ॥
ತತಸ್ತಸ್ಯ ನರೇಂದ್ರಸ್ಯ ಹತಶೇಷಾಶ್ಚ ಯೇ ನರಾಃ ।
ಭಯಾರ್ತಾಸ್ತೇ ದ್ರುತಂ ಜಗ್ಮುಃ ಸ್ವಪುರಂ ಪ್ರತಿ ದುಃಖಿತಾಃ ॥ ೭ ॥
ತೇಽಪಿ ಶತ್ರುಗಣಾಃ ಸರ್ವೇ ಸಂಪ್ರಹೃಷ್ಟಾ ಜಿಗೀಷವಃ ।
ತತ್ಪುರಂ ವೇಷ್ಟಯಾಮಾಸುಸ್ತತ್ಪುತ್ರೋಚ್ಛೇದನಾಯ ವೈ ॥ ೮ ॥
ಏತಸ್ಮಿನ್ನಂತರೇ ಪೌರಾಃ ಸರ್ವೇ ಶೋಕಪರಾಯಣಾಃ ।
ಜಗರ್ಹುಃ ಪರುಷೈರ್ವಾಕ್ಯೈರ್ದುಷ್ಟಾಂ ತಾಂ ವಿಷಕನ್ಯಕಾಂ ॥ ೯ ॥
ಅಸ್ಯಾ ದೋಷೇಣ ಪಾಪಾಯಾ ಮೃತಶ್ಚ ಸ ಮಹೀಪತಿಃ ।
ತಥಾ ರಾಷ್ಟ್ರಸ್ಯ ವಿಧ್ವಂಸೇ ಭವಿಷ್ಯತಿ ಪುರಕ್ಷಯಃ ॥ ೧೦ ॥
ಉಕ್ತಃ ಸ ನೃಪತಿಃ ಪೂರ್ವಂ ಬ್ರಾಹ್ಮಣೈರ್ಜ್ಞಾನಿಭಿಸ್ತದಾ ।
ತ್ಯಜೈನಾಂ ಬಹುದೋಷಾಢ್ಯಾಂ ನಿಂದಿತಾಂ ವಿಷಕನ್ಯಕಾಂ ॥ ೧೧ ॥
ನ ತೇನ ತತ್ಕೃತಂ ವಾಕ್ಯಮಪಿ ತೇಷಾಂ ಹಿತೈಷಿಣಾಂ ।
ಸ್ನೇಹಪಾಶನಿಬದ್ಧೇನ ದಯಾಢ್ಯೇನ ಮಹಾತ್ಮನಾ ॥ ೧೨ ॥

---

೬. ಅನಂತರ ಹತ್ತನೆಯ ದಿನ ಆ ರಾಜನನ್ನು ಸಮಸ್ತ ಶತ್ರುಗಳೂ ಸುತ್ತಲೂ ಸುತ್ತಿಕೊಂಡು ಕೊಂದರು.

೭. ಬಳಿಕ ಆ ರಾಜನ ಮಡಿದುಳಿದ ಜನರು ದುಃಖಭಯಗಳಿಂದ ಪೀಡಿತರಾಗಿ ತಮ್ಮ ಪಟ್ಟಣಕ್ಕೆ ಹೋದರು.

೮. ಆ ಶತ್ರುಗಳೆಲ್ಲರೂ ಸಂತೋಷಗೊಂಡು ಜಯಿಸುವುದಕ್ಕಾಗಿಯೂ, ಆ ರಾಜನ ಮಗನನ್ನು ಕೊಲ್ಲುವುದಕ್ಕಾಗಿಯೂ ಅವನ ರಾಜ್ಯವನ್ನು ಸುತ್ತುವರಿದರು.

೯. ಈ ಸಮಯದಲ್ಲಿ ಸಕಲ ಪೌರರೂ ಶೋಕಾರ್ತರಾಗಿ ಕಟುವಚನಗಳಿಂದ ಆ ವಿಷಕನ್ಯೆಯನ್ನು ನಿಂದಿಸಿದರು.

೧೦. "ಪಾಪಿಷ್ಠಳಾದ ಈ ವಿಷಕನ್ಯೆಯ ದೋಷದಿಂದ ಆ ರಾಜನು ಮೃತನಾದನು. ಅವನ ರಾಜ್ಯವು ಅಳಿಯಲು ಪಟ್ಟಣವೂ ಹಾಳಾಗುವುದು.

೧೧. ಹಿಂದೆ ಜ್ಞಾನಿಗಳಾದ ಬ್ರಾಹ್ಮಣರು ಆ ರಾಜನಿಗೆ ದುಷ್ಟಳೂ, ನಿಂದಿತಳೂ ಆದ ಈ ವಿಷಕನ್ಯೆಯನ್ನು ತ್ಯಜಿಸು ಎಂದು ಹೇಳಿರುವರು.

೧೨. ಸ್ನೇಹಪಾಶದಿಂದ ಬದ್ಧನೂ, ದಯಾಳುವೂ, ಮಹಾತ್ಮನೂ ಆದ ಆ ರಾಜನು ಹಿತವನ್ನು ಬಯಸುವ ಆ ಬ್ರಾಹ್ಮಣರ ಮಾತನ್ನು ಕೇಳಲಿಲ್ಲ.

ತಸ್ಮಾದದ್ಯಾಽಪಿ ಪಾಪೈಷಾ ವಧ್ಯತಾಮಾಶು ಕನ್ಯಕಾ ।
ನಿರ್ಯಾಸ್ಯತಾಂ ಪುರಾದಸ್ಮಾದ್ಯಾವನ್ನ ಸ್ಯಾತ್ಪುರಕ್ಷಯಃ ॥ ೧೩ ॥

ಸೂತ ಉವಾಚ :—

ಸಾಽಪಿ ಶ್ರುತ್ವಾ ಜನೋಕ್ತಾಂಸ್ತಾನಪವಾದಾನ್ ಪೃಥಗ್ವಿಧಾನ್ ।
ವೈರಾಗ್ಯಂ ಪರಮಂ ಗತ್ವಾ ನಿಂದಾಂ ಚಕ್ರೇ ತಥಾತ್ಮನಃ ॥ ೧೪ ॥
ತತೋ ರಾತ್ರೌ ವಿನಿಷ್ಕ್ರಮ್ಯ ಭಯಶೋಕಸಮನ್ವಿತಾ ।
ಪ್ರತಸ್ಥೇಽರಣ್ಯಮಾಸಾದ್ಯ ಮರಣೇ ಕೃತನಿಶ್ಚಯಾ ॥ ೧೫ ॥
ಅಥ ದೃಷ್ಟಂ ತಯಾ ಕ್ಷೇತ್ರಂ ಹಾಟಕೇಶ್ವರಜಂ ಮಹತ್ ।
ತಪಸ್ವಿಭಿಃ ಸಮಾಕೀರ್ಣಂ ಚಿತ್ತಾಹ್ಲಾದ ಪರಂ ಪರಂ ॥ ೧೬ ॥
ಅಥ ತಸ್ಯಾಃ ಸ್ಮೃತಿರ್ಜಾತಾ ಪೂರ್ವಜನ್ಮ ಸಮುದ್ಭವಾ ।
ಚಂಡಾಲತ್ವೇ ಮಯಾ ಪೂರ್ವಂ ಗೌರೇಕಾ ವಿತೃಷೀಕೃತಾ ॥ ೧೭ ॥
ತತ್ಪ್ರಭಾವಾದಹಂ ಜಾತಾ ಸುಪುಣ್ಯೇ ನೃಪಮಂದಿರೇ ।
ಕ್ಷೇತ್ರಸ್ಯಾಽಸ್ಯ ಪ್ರಭಾವೇನ ತಸ್ಮಾದತ್ರೈವ ಮೇ ಸ್ಥಿತಿಃ ॥ ೧೮ ॥

---

೧೩. ಆದುದರಿಂದ ಈಗಲಾದರೂ ಪಾಪಿಷ್ಠಳಾದ ಈ ವಿಷಕನ್ಯೆಯನ್ನು ಕೊಲ್ಲಿರಿ. ಈ ಪಟ್ಟಣವು ನಾಶವಾಗುವುದರೊಳಗಾಗಿ ಪಟ್ಟಣದಿಂದ ಇವಳನ್ನು ಹೊರಡಿಸಿರಿ.''

೧೪. ಸೂತನು ಹೇಳುತ್ತಾನೆ:—ಆ ವಿಷಕನ್ಯೆಯೂ ಜನರು ಹೇಳಿದ ನಾನಾ ವಿಧವಾದ ಅಪವಾದಗಳನ್ನು ಕೇಳಿ ಅತ್ಯಂತ ವೈರಾಗ್ಯಗೊಂಡು ತನ್ನನ್ನು ನಿಂದಿಸಿಕೊಂಡಳು.

೧೫. ಬಳಿಕ ರಾತ್ರಿ ಹೊರಟು ಭಯಶೋಕಗಳಿಂದ ಕೂಡಿ ಮಡಿಯಲು ನಿಶ್ಚಯಿಸಿ ಕಾಡಿನ ದಾರಿಯಿಂದ ಹೊರಟಳು.

೧೬. ಬಳಿಕ ಅವಳು ಮುನಿಗಳಿಂದ ತುಂಬಿರುವುದೂ, ಮನಸ್ಸಿಗೆ ಆನಂದ ವನ್ನುಂಟುಮಾಡುವುದೂ ಆದ ಹಾಟಕೇಶ್ವರಕ್ಷೇತ್ರವನ್ನು ನೋಡಿದಳು.

೧೭. ಬಳಿಕ ಆ ವಿಷಕನ್ಯೆಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು. "ಹಿಂದೆ ನಾನು ಚಂಡಾಲಳಾಗಿ ಒಂದು ಹಸುವಿನ ಬಾಯಾರಿಕೆಯನ್ನು ನಿವಾರಿಸಿರುವೆನು.

೧೮. ಅದರ ಪ್ರಭಾವದಿಂದಲೂ, ಈ ಕ್ಷೇತ್ರದ ಪ್ರಭಾವದಿಂದಲೂ ನಾನು ಪುಣ್ಯಕರವಾದ ರಾಜಭವನದಲ್ಲಿ ಜನಿಸಿದೆನು. ಆದುದರಿಂದ ಈ ಕ್ಷೇತ್ರದಲ್ಲಿ ನೆಲೆಸಿದೆನು.''

ಸೂತ ಉವಾಚ :—

ಅನ್ಯದೇಹಾಂತರೇ ಹ್ಯಾಸೀಚ್ಚಂಡಾಲೀ ಸಾ ವಿಗರ್ಹಿತಾ ।
ಬಹುಪ್ರಸೂತಿಸಂಯುಕ್ತಾ ದರಿದ್ರೇಣ ಕದರ್ಥಿತಾ ॥ ೧೯ ॥
ಅಥ ಸಾ ಭ್ರಮಮಾಣಾऽತ್ರ ಕ್ಷೇತ್ರೇ ಪ್ರಾಪ್ತಾ ತೃಷಾರ್ದಿತಾ ।
ಮಧ್ಯಂದಿನಗತೇ ಸೂರ್ಯೇ ಜ್ಯೇಷ್ಠಮಾಸೇ ಸುದಾರುಣೇ ॥ ೨೦ ॥
ಅಥಾऽಪಶ್ಯತ್ ಸ್ತೋಕಜಲಾಂ ಸಾ ತತ್ರ ಲಘುಕೂಪಿಕಾಂ ।
ತೃಷಾರ್ತಾಂ ಕಪಿಲಾಂ ಗಾಂ ಚ ವರ್ತಮಾನಾಂ ತದಾಂತಿಕೇ ॥ ೨೧ ॥
ತತೋ ದಯಾಂ ಸಮಾಶ್ರಿತ್ಯ ತ್ಯಕ್ತ್ವಾ ಸ್ನೇಹಂ ಸುತೋದ್ಭವಂ ।
ಆತ್ಮನಶ್ಚ ತಥಾ ಪ್ರಾಣಾನ್ ಗಾಂ ವಿತೃಷ್ಣಾಮಥಾಕರೋತ್ ॥ ೨೨ ॥
ಜಲಾಭಾವೇ ತಥಾ ಸಾ ಚ ಸಮಸ್ತೈರ್ಬಾಲಕೈಃ ಸಹ ।
ವೈವಸ್ವತ ಗೃಹಂ ಪ್ರಾಪ್ತಾ ಗೋಭಕ್ತಿಧೃತಮಾನಸಾ ॥ ೨೩ ॥
ತತೋ ನೃಪಗೃಹೇ ಜಾತಾ ತತ್ಪ್ರಭಾವಾದ್ದ್ವಿಜೋತ್ತಮಾಃ ।
ಪೂರ್ವಕರ್ಮವಿಪಾಕೇನ ಸಂಜಾತಾ ವಿಷಕನ್ಯಕಾ ॥ ೨೪ ॥

ಋಷಯ ಊಚುಃ:—

ಕೇನ ಕರ್ಮ ವಿಪಾಕೇನ ಸಂಜಾತಾ ವಿಷಕನ್ಯಕಾ ।
ಸ್ವಕುಲೋಚ್ಛೇದನಕರೀ ಸರ್ವಂ ಸೂತ ಬ್ರವೀಹಿನಃ ॥ ೨೫ ॥

---

೧೯. ಸೂತನು ಹೇಳುತ್ತಾನೆ:—ಅವಳು ಪೂರ್ವಜನ್ಮದಲ್ಲಿ ಅನೇಕ ಮಕ್ಕಳುಳ್ಳವಳೂ, ಬಡವಳೂ, ನಿಂದಿತಳೂ ಆದ ಚಂಡಾಲಸ್ತ್ರೀಯಾಗಿದ್ದಳು.

೨೦. ಅವಳು ಆ ಹಾಟಕೇಶ್ವರ ಕ್ಷೇತ್ರದಲ್ಲಿ ಸಂಚರಿಸುತ್ತ ಜ್ಯೇಷ್ಠಮಾಸದ ಸೂರ್ಯನು ಮಧ್ಯಾಹ್ನದವೇಳೆಯಲ್ಲಿ ದಾರುಣನಾಗಿರಲು ಬಾಯಾರಿಕೆಯಿಂದ ಈ ಕ್ಷೇತ್ರಕ್ಕೆ ಬಂದಳು.

೨೧. ಅಲ್ಲಿ ಸ್ವಲ್ಪ ನೀರುಳ್ಳ ಸಣ್ಣ ಕೂಪವನ್ನೂ, ಅದರ ಹತ್ತಿರದಲ್ಲಿ ಬಾಯಾರಿದ ಕಪಿಲಗೋವನ್ನೂ ನೋಡಿದಳು.

೨೨. ತರುವಾಯ ಅವಳು ದಯೆಗೊಂಡು ಮಕ್ಕಳಲ್ಲಿಯೂ, ತನ್ನ ಪ್ರಾಣದಲ್ಲಿಯೂ ಸ್ನೇಹವನ್ನು ತ್ಯಜಿಸಿ ಹಸುವಿನ ಬಾಯಾರಿಕೆಯನ್ನು ನೀಗಿಸಿದಳು.

೨೩. ನೀರಿಲ್ಲದಿರುವುದರಿಂದ ಹಸುವಿನಲ್ಲಿ ಭಕ್ತಿಯುಳ್ಳ ಅವಳು ಎಲ್ಲ ಮಕ್ಕಳೊಡನೆ ಯಮಾಲಯವನ್ನು ಸೇರಿದಳು.

೨೪. ದ್ವಿಜವರ್ಯರೆ! ಅವಳು ಆ ಪುಣ್ಯವಶದಿಂದ ರಾಜನ ಮನೆಯಲ್ಲಿ ಜನಿಸಿದಳು. ಹಿಂದಿನ ಕರ್ಮಬಲದಿಂದ ವಿಷಕನ್ಯೆಯಾದಳು.

೨೫. ಋಷಿಗಳು ಹೇಳುತ್ತಾರೆ:—ಸೂತ! ಅವಳು ಯಾವ ಕರ್ಮವಿಪಾಕದಿಂದ ತನ್ನ ವಂಶವನ್ನು ನಾಶಗೊಳಿಸುವ ವಿಷಕನ್ಯೆಯಾದಳು ?

ಸೂತ ಉವಾಚ :—

ಚಂಡಾಲತ್ವೇ ತಯಾ ವಿಪ್ರಾ ವರ್ತಂತ್ಯಾ ಭ್ರಮಮಾಣಯಾ ।
ದೇವತಾಯತನೇ ದೃಷ್ಟ್ವಾ ಗೌರೀ ಹೇಮಮಯೀ ಶುಭಾ ॥ ೨೬ ॥
ತತಸ್ತಾಂ ವಿಜನೇ ಪ್ರಾಪ್ಯ ಗತ್ವಾ ದೇಶಾಂತರಂ ಮುದಾ ।
ಯಾವತ್ಕರೋತಿ ಖಂಡಾನಿ ವಿಕ್ರಯಾರ್ಥಂ ಸುನಾದಿತಾ ।
ತಾವದನ್ವೇಷಮಾಣಾಸ್ತಾಂ ಸಂಪ್ರಾಪ್ತಾ ನೃಪಸೇವಕಾಃ ॥ ೨೭ ॥
ಅಥ ತೇ ತಾಂ ಸಮಾಲೋಕ್ಯ ಭರ್ತ್ಸಯಿತ್ವಾ ಮುಹುರ್ಮುಹುಃ ।
ಸಂತಾಡ್ಯ ಲಕುಟಾಘಾತೈರ್ಲೋಷ್ಟಘಾತೈಶ್ಚ ಮುಷ್ಟಿಭಿಃ ॥ ೨೮ ॥
ತತಃ ಸುವರ್ಣಮಾದಾಯ ತ್ಯಕ್ತ್ವಾ ತಾಂ ರುಧಿರಪ್ಲುತಾಂ ।
ಅವಧ್ಯೈಷೇತಿ ಸಂಚಿಂತ್ಯ ಸ್ವಪುರಂ ಪ್ರತಿ ತೇ ಗತಾಃ ॥ ೨೯ ॥
ಯತ್ತಯಾ ಪಾರ್ವತೀ ಸ್ಪೃಷ್ಟ್ವಾ ತತೋ ವೈ ಖಂಡಶಃ ಕೃತಾ ।
ತೇನ ಕರ್ಮವಿಪಾಕೇನ ಸಂಜಾತಾ ವಿಷಕನ್ಯಕಾ ॥ ೩೦ ॥
ತತಃ ಸಂಸ್ಮೃತಿಮಾಸಾದ್ಯ ಪೂರ್ವಜನ್ಮ ಸಮುದ್ಭವಾಂ ।
ಮಾಹಾತ್ಮ್ಯಂ ಜಲದಾನಸ್ಯ ಗೋಪೀತಸ್ಯ ವಿಚಾರ್ಯ ಚ ।
ಚಕಾರ ಕೂಪಿಕಾಸ್ಥಾನೇ ತಡಾಗಂ ವಿಮಲೋದಕಂ ॥ ೩೧ ॥
ಸಮುದ್ರಪ್ರತಿಮಂ ಚಾರು ಪದ್ಮಿನೀಖಂಡಮಂಡಿತಂ ।
ಮತ್ಸ್ಯಕಚ್ಛಪಸಂಕೀರ್ಣಂ ಶಿಶುಮಾರ ವಿರಾಜಿತಂ ॥ ೩೨ ॥

---

೨೬. ಸೂತನು ಹೇಳುತ್ತಾನೆ:—ವಿಪ್ರರೆ! ಚಂಡಾಲಳಾದ ಅವಳು ಸಂಚರಿಸುತ್ತ ದೇವಾಲಯದಲ್ಲಿ ಸುವರ್ಣಮಯಳಾದ ಗೌರಿಯನ್ನು ಕಂಡಳು.

೨೭. ತರುವಾಯ ಅವಳು ಆ ಗೌರೀವಿಗ್ರಹವನ್ನು ತೆಗೆದುಕೊಂಡು ದೇಶಾಂತರಕ್ಕೆ ಹೋಗಿ ನಿರ್ಜನಸ್ಥಳದಲ್ಲಿ ವಿಕ್ರಯಕ್ಕಾಗಿ ತುಂಡುಮಾಡುತ್ತಿರಲು ಆ ಗೌರೀಪ್ರತಿಮೆಯನ್ನು ಹುಡುಕುತ್ತಿರುವ ರಾಜಸೇವಕರು ಅವಳೆಡೆಗೆ ಬಂದರು.

೨೮–೨೯. ಅವರು ಆ ಚಂಡಾಲಕನ್ಯೆಯನ್ನು ಕಂಡು ಬಹುವಾಗಿ ಗದರಿಸಿ ದೊಣ್ಣೆ, ಹೆಂಟೆ, ಮುಷ್ಟಿಗಳಿಂದ ಹೊಡೆದು ರಕ್ತಸಿಕ್ತಳಾದ ಅವಳನ್ನು ಕೊಲ್ಲಲನರ್ಹಳೆಂದು ತ್ಯಜಿಸಿ ಚಿನ್ನವನ್ನು ತೆಗೆದುಕೊಂಡು ತಮ್ಮ ಪಟ್ಟಣಕ್ಕೆ ತೆರಳಿದರು.

೩೦. ಅವಳು ಪಾರ್ವತಿಯ ವಿಗ್ರಹವನ್ನು ಮುಟ್ಟಿ ತುಂಡುಮಾಡಿದ ಪಾಪದಿಂದ ವಿಷಕನ್ಯೆಯಾಗಿ ಜನಿಸಿದಳು.

೩೧–೩೨. ತರುವಾಯ ಅವಳು ಪೂರ್ವಜನ್ಮದ ಸ್ಮರಣೆಯನ್ನು ಹೊಂದಿ ಹಸುವು ಕುಡಿದ ಜಲದಾನದ ಮಾಹಾತ್ಮೆಯನ್ನು ವಿಚಾರಿಸಿ ಆ ಕೂಪಿಕೆಯ ಸ್ಥಳದಲ್ಲಿ ಶುದ್ಧಜಲವುಳ್ಳುದೂ, ಸಮುದ್ರದಂತಿರುವುದೂ, ಕಮಲಗಳ ಸಮೂಹಗಳಿಂದ ಅಲಂಕಾರಗೊಂಡುದೂ, ಮೀನು, ಮೊಸಳೆ, ಶಿಂಶುಮಾರಗಳಿಂದ ವಿರಾಜಿ

ಸೇವಿತಂ ಬಹುಭಿರ್ಹಂಸೈರ್ಬಕೈಶ್ಚಕ್ರೈಃ ಸಮಂತತಃ ।
ಅಗಾಧಸಲಿಲಂ ಪುಣ್ಯಂ ಸೇವಿತಂ ಜಲಜಂತುಭಿಃ ॥ ೩೩ ॥
ಪ್ರಾಸಾದಂ ತತ್ಸಮೀಪಸ್ಥಂ ಸಾಧುದೃಷ್ಟಿಮನೋಹರಂ ।
ಕಾರಯಿತ್ವಾಽತಿಸಂಭಕ್ತ್ಯಾ ಕೈಲಾಸಶಿಖರೋಪಮಂ ॥ ೩೪ ॥
ತತಸ್ತತ್ರ ತಪಸ್ತೇಪೇ ಗೌರೀಂ ಸಂಸ್ಥಾಪ್ಯ ಭಕ್ತಿತಃ ।
ತದಗ್ರೇ ವ್ರತಮಾಸ್ಥಾಯ ಯಥೋಕ್ತಂ ಶಾಸ್ತ್ರಸಂಭವಂ ॥ ೩೫ ॥
ಪ್ರಾತಃ ಸ್ನಾತ್ವಾ ತು ಹೇಮಂತೇ ಗೌರೀಂ ಸಂಪೂಜ್ಯ ಭಕ್ತಿತಃ ।
ಬಲಿಪೂಜೋಪಹಾರೈಶ್ಚ ವಿಪ್ರದಾನಾದಿಭಿಸ್ತಥಾ ॥ ೩೬ ॥
ತತಶ್ಚ ಶಿಶಿರೇ ಪ್ರಾಪ್ತೇ ಸಾಯಂಪ್ರಾತಃ ಸಮಾಹಿತಾ ।
ಏಕಾಂತರೋಪವಾಸೈಃ ಸಾ ಸ್ನಾನಂ ಚಕ್ರೇ ನೃಪಾತ್ಮಜಾ ॥ ೩೭ ॥
ವಸಂತೇ ನೃತ್ಯ ಗೀತೈಶ್ಚ ತೋಷಯಾಮಾಸ ಪಾರ್ವತೀಂ ।
ಷಷ್ಠಕಾಲಾಽಶನಾ ಸಾಧ್ವೀ ಸಸ್ಯದಾನ ಪರಾಯಣಾ ॥ ೩೮ ॥
ಪಂಚಾಗ್ನಿಸಾಧಿಕಾ ಗ್ರೀಷ್ಮೇ ಫಲಾಹಾರಂ ತಪಸ್ವಿನೀ ।
ಚಕಾರ ಶ್ರದ್ಧಯೋಪೇತಾ ವೃಕಭೂಮಿಪತೇಃ ಸುತಾ ॥ ೩೯ ॥

---

ಸುವುದೂ, ಬಹುವಾಗಿ ಹಂಸ, ಬಕ, ಚಕ್ರವಾಕಗಳಿಂದಲೂ ಜಲಜಂತುಗಳಿಂದಲೂ ಸೇವಿಸಲ್ಪಟ್ಟಿದ್ದೂ, ಆಳವಾದ ಪುಣ್ಯಕರವಾದ ನೀರುಳ್ಳುದೂ ಆದ ಸರೋವರವನ್ನು ನಿರ್ಮಿಸಿದಳು.

೩೪–೩೫. ಅದರ ಹತ್ತಿರ ನೋಡುವುದಕ್ಕೆ ರಮ್ಯವೂ, ಕೈಲಾಸಶಿಖರದಂತಿರುವುದೂ ಆದ ದೇವಾಲಯವನ್ನು ಭಕ್ತಿಯಿಂದ ಮಾಡಿಸಿ ಅದರಲ್ಲಿ ಪಾರ್ವತಿಯನ್ನು ಪ್ರತಿಷ್ಠೆಮಾಡಿ ಅವಳ ಮುಂದೆ ಶಾಸ್ತ್ರವಿಧಿಯಂತೆ ವ್ರತವನ್ನಾಶ್ರಯಿಸಿ ತಪವನ್ನಾಚರಿಸಿದಳು.

೩೬–೩೮. ಹೇಮಂತಋತುವಿನಲ್ಲಿ ಬೆಳಗ್ಗೆ ಮಿಂದು ಗೌರಿಯನ್ನು ಬಲಿಪೂಜೋಪಹಾರಗಳಿಂದ ಭಕ್ತಿಯಿಂದ ಪೂಜಿಸಿ ಬ್ರಾಹ್ಮಣರಿಗೆ ದಾನವನ್ನು ಕೊಡುತ್ತಲೂ, ಶಿಶಿರಋತುವಿನಲ್ಲಿ ಬೆಳಗ್ಗೆ ಸಾಯಂಕಾಲಗಳಲ್ಲಿ ಸಾವಧಾನಮನಸ್ಸಿನಿಂದ ಮಿಂದು ಏಕಾಂತರೋಪವಾಸಮಾಡುತ್ತಲೂ, ವಸಂತಋತುವಿನಲ್ಲಿ ಆರನೆ ಕಾಲದಲ್ಲಿ ಭುಂಜಿಸುತ್ತ ಸಸ್ಯದಾನಮಾಡುತ್ತಲೂ ನೃತ್ಯಗೀತಗಳಿಂದ ಪಾರ್ವತಿಯನ್ನು ಆನಂದಗೊಳಿಸಿದಳು.

೩೯. ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿ ಫಲವನ್ನು ಭುಂಜಿಸುತ್ತ ಶ್ರದ್ಧೆಯಿಂದ ತಪವನ್ನಾಚರಿಸಿದಳು.

ವರ್ಷಾಸು ಚ ಜಲಾಹಾರಾ ಭೂತ್ವಾ ಸಾ ವಿಷಕನ್ಯಕಾ ।
ಆಕಾಶೇ ಶಯನಂ ಚಕ್ರೇ ಪರಿತ್ಯಕ್ತಕುಟೀರಕಾ ॥ ೪೦ ॥
ವಾಯುಭಕ್ಷಾ ಸತೀ ಚಾಽಥ ಸಾಽನಯುಚ್ಛರದಂ ತತಃ ।
ಕೃತಜಪ್ಯಪರಾನಿತ್ಯಂ ಪಾರ್ವತೀ ಗತಮಾನಸಾ ॥ ೪೧ ॥
ಏವಮಾರಾಧಯಂತ್ಯಾಶ್ಚ ತಸ್ಯಾ ದೇವೀಂ ಗಿರೇಃ ಸುತಾಂ ।
ಜಗಾಮ ಸುಮಹಾನ್ಕಾಲೋ ನ ಲೇಭೇ ಫಲಮೀಹಿತಂ ॥ ೪೨ ॥
ಮುಖಂ ವಲಿಭಿರಾಕ್ರಾಂತಂ ಪಲಿತೈರಂಕಿತಂ ಶಿರಃ ।
ಕನ್ಯಾಭಾವೇಽಪಿ ವರ್ತಂತ್ಯಾ ನ ಚ ತುಷ್ಟಾ ಹರಪ್ರಿಯಾ ॥ ೪೩ ॥
ಕಸ್ಯಚಿತ್ತ್ವಥ ಕಾಲಸ್ಯ ತತ್ಪರೀಕ್ಷಾರ್ಥಮೇವ ಸಾ ।
ಶಕ್ರಾಣೀ ರೂಪಮಾಸ್ಥಾಯ ತತಃ ಸಂದರ್ಶನಂ ಗತಾ ॥ ೪೪ ॥
ಸುಧಾವದಾತಂ ಸೂರ್ಯಾಭಂ ಕೈಲಾಸಶಿಖರೋಪಮಂ ।
ಸುಪ್ರಲಂಬಕರಂ ಮತ್ತಂ ಚತುರ್ದಂತಂ ಮಹಾಗಜಂ ॥ ೪೫ ॥
ಸಮಾಸ್ಥಾಯ ವೃತಾ ಸ್ತ್ರೀಭಿರ್ದೇವಾನಾಂ ಸರ್ವತೋದಿಶಂ ।
ದಧತೀ ಮುಕುಟಂ ಮೂರ್ಧ್ನಿ ಹಾರಕೇಯೂರಭೂಷಿತಾ ॥ ೪೬ ॥
ಪಾಂಡುರೇಣಾತಪತ್ರೇಣ ಧ್ರಿಯಮಾಣೇನ ಮೂರ್ಧನಿ ।
ಸೇವ್ಯಮಾನಾಽಪ್ಸರೋಭಿಶ್ಚ ಸ್ತೂಯಮಾನಾ ಚ ಕಿನ್ನರೈಃ ॥ ೪೭ ॥

---

೪೦. ಆ ವಿಷಕನ್ಯೆಯು ಮಳೆಗಾಲದಲ್ಲಿ ನೀರನ್ನು ಕುಡಿಯುತ್ತ ಗುಡಿಸಲನ್ನು ಬಿಟ್ಟು ಅನಾವರಣ ಸ್ಥಳದಲ್ಲಿ ಮಲಗಿದಳು.

೪೧. ಶರತ್ಕಾಲವನ್ನು ವಾಯುಭಕ್ಷಳೂ, ಜಪನಿರತಳೂ, ಪಾರ್ವತಿಯನ್ನು ಧ್ಯಾನಮಾಡುವವಳೂ ಆಗಿ ಕಳೆದಳು.

೪೨. ಹೀಗೆ ಅವಳು ಆ ಗಿರಿಸುತೆಯನ್ನು ಪೂಜಿಸುತ್ತಿರಲು ಬಹಳ ಕಾಲವು ಕಳೆಯಿತು. ಆದರೆ ಅವಳು ಇಷ್ಟವಾದ ಫಲವನ್ನು ಹೊಂದಲಿಲ್ಲ.

೪೩. ಅವಳು ಕನ್ಯೆಯಾಗಿದ್ದರೂ ಮುಖವು ಸುಕ್ಕುಗೊಂಡಿತು. ತಲೆ ಕೂದಲು ನೆರೆಯಿತು. ಆದರೆ ಪಾರ್ವತಿಯು ಮಾತ್ರ ಸಂತುಷ್ಟಳಾಗಲಿಲ್ಲ.

೪೪–೪೮. ಕೆಲವು ಕಾಲದ ಮೇಲೆ ಪಾರ್ವತಿಯು ಅವಳನ್ನು ಪರೀಕ್ಷಿಸಲು ಶಚಿಯ ರೂಪವನ್ನು ತಾಳಿ ಸುಣ್ಣದಂತೆ ಬೆಳ್ಳಗೂ, ಸೂರ್ಯನಂತೆ ಕಾಂತಿಯುಳ್ಳುದೂ, ಕೈಲಾಸಶಿಖರದಂತಿರುವುದೂ, ನೀಳವಾದ ಸೊಂಡಿಲುಳ್ಳುದೂ, ನಾಲ್ಕು ದಂತವುಳ್ಳುದೂ ಆದ ಐರಾವತವನ್ನೇರಿ ದೇವತಾಸ್ತ್ರೀಯರಿಂದ ಸಹಿತಳಾಗಿ ತಲೆಯಲ್ಲಿ ಕಿರೀಟವನ್ನು ಧರಿಸಿ, ಹಾರಕೇಯೂರ ಭೂಷಿತಳಾಗಿ, ಶ್ವೇತಚ್ಛತ್ರವನ್ನು ಧರಿಸಿ, ಅಪ್ಸರೆಯರಿಂದ ಸೇವಿಸಲ್ಪಡುತ್ತ, ಕಿನ್ನರರರಿಂದ ಸ್ತುತಿಸಲ್ಪಡುತ್ತ,

ಗಂಧರ್ವೈರ್ಗೀಯಮಾನಾಸೀತ್ತತಃ ಪ್ರೋವಾಚ ಸಾದರಂ ।
ವರಂ ಯಚ್ಛಾಮಿ ತೇ ಪುತ್ರಿ ಪ್ರಾರ್ಥಯಸ್ವ ಯಥೇಪ್ಸಿತಂ ॥ ೪೮ ॥
ಅನೇನ ತಪಸಾ ತುಷ್ಟಾ ಪುಷ್ಕಲೇನ ತವಾಽಧುನಾ ।
ಅಹಂ ಭಾರ್ಯಾ ಸುರೇಂದ್ರಸ್ಯ ಶಚೀತಿ ಪರಿಕೀರ್ತಿತಾ ।
ತ್ರೈಲೋಕ್ಯೇಽಪಿ ಸ್ವಯಂ ಪ್ರಾಪ್ತಾ ದಯಾಂ ಕೃತ್ವಾ ತವೋಪರಿ ॥ ೪೯ ॥
ತ್ವಯಾಮಹತ್ತಪಸ್ತಪ್ತಂ ಧ್ಯಾಯಂತ್ಯಾ ಹರವಲ್ಲಭಾಂ ।
ತಪಸಾ ತುಷ್ಟಿಮಾಯಾತಾ ಭವಾನೀ ನ ಸುನಿಷ್ಠುರಾ ॥ ೫೦ ॥

ಸೂತ ಉವಾಚ :—

ಸಾ ತಸ್ಯಾ ವಚನಂ ಶ್ರುತ್ವಾ ಶಕ್ರಾಣ್ಯಾ ವಿಷಕನ್ಯಕಾ ।
ನಮಸ್ಕೃತ್ವಾಽಥ ತಾಮೂಚೇ ಕೃತಾಂಜಲಿಪುಟಾ ಸ್ಥಿತಾ ॥ ೫೧ ॥

ವಿಷಕನ್ಯೋವಾಚ :—

ನಾಽಹಂ ತ್ವತ್ತೋ ವರಂ ದೇವಿ ಪ್ರಾರ್ಥಯಾಮಿ ಕಥಂಚನ ।
ತಥಾಽನ್ಯಾಸಾಮಪೀಂದ್ರಾಣಿ ದೇವತಾ ನಾಮ ಸಂಶಯಂ ॥ ೫೨ ॥
ಅಪ್ಯಹಂ ನರಕಂ ರೌದ್ರಂ ಪ್ರಗಚ್ಛಾಮೀಂದ್ರವಲ್ಲಭೇ ।
ಹರಕಾಂತಾಸಮಾದೇಶಾನ್ನ ಸ್ವರ್ಗೇಽಪಿ ತವಾಜ್ಞಯಾ ॥ ೫೩ ॥
ಅನಾದಿಮಧ್ಯಪರ್ಯಂತಾ ಜ್ಞಾನೈಶ್ವರ್ಯಸಮನ್ವಿತಾ ।
ಯಾ ದೇವೀ ಪೂಜ್ಯತೇ ದೇವೈರ್ವರಂ ತಸ್ಯಾವೃಣೋಮ್ಯಹಂ ॥ ೫೪ ॥

---

ಗಂಧರ್ವರಿಂದ ಗಾನಮಾಡಲ್ಪಡುತ್ತ ಪ್ರೀತಿಯಿಂದ ಇಂತೆಂದಳು. "ಮಗು! ನೀನು ನಿನಗಿಷ್ಟವಾದ ವರವನ್ನು ಕೇಳಿಕೋ. ನಾನು ಈಗ ನಿನ್ನ ಈ ತಪಸ್ಸಿನಿಂದ ತುಷ್ಟಳಾಗಿದ್ದೇನೆ. ನಾನು ಶಚಿಯೆಂದು ತ್ರೈಲೋಕ್ಯ ವಿಖ್ಯಾತಳಾದ ಸುರೇಂದ್ರನ ಸತಿಯು. ನಿನ್ನಲ್ಲಿ ದಯೆಗೊಂಡು ನಾನೇ ಬಂದಿರುವೆನು.

೫೦. ನೀನು ಪಾರ್ವತಿಯನ್ನು ಧ್ಯಾನಿಸುತ್ತ ಮಹಾತಪಸ್ಸನ್ನು ಮಾಡಿರುವೆ. ಕಠಿನಳಾದ ಗೌರಿಯು ನಿನ್ನಲ್ಲಿ ಸಂತುಷ್ಟಳಾಗಲಿಲ್ಲ".

೫೧. ಸೂತನು ಹೇಳುತ್ತಾನೆ:—ಆ ವಿಷಕನ್ಯೆಯು ಶಚಿಯ ಮಾತನ್ನು ಕೇಳಿ ಕೈಮುಗಿದು ಇಂತೆಂದಳು.

೫೨. ವಿಷಕನ್ಯೆಯು ಹೇಳುತ್ತಾಳೆ:—ದೇವಿ! ನಾನು ನಿನ್ನಿಂದಲೂ, ಇತರ ದೇವತೆಗಳಿಂದಲೂ ನಿಶ್ಚಯವಾಗಿಯೂ ವರವನ್ನು ಕೇಳುವುದಿಲ್ಲ.

೫೩. ಇಂದ್ರಾಣಿ! ನಾನು ಗೌರಿಯ ಆದೇಶದಿಂದ ಭಯಂಕರ ನರಕಕ್ಕಾದರೂ ಹೋಗುವೆನು. ನಿನ್ನ ಆಜ್ಞೆಯಿಂದ ಸ್ವರ್ಗಕ್ಕೆ ಹೋಗುವುದಿಲ್ಲ.

೫೪. ಆದಿಮಧ್ಯಾಂತರಹಿತಳೂ, ಜ್ಞಾನೈಶ್ವರ್ಯಗಳಿಂದ ಕೂಡಿದವಳೂ, ದೇವಪೂಜ್ಯಳೂ ಆದ ಆ ಗೌರಿಯ ವರವನ್ನು ವರಿಸುವೆನು.

ಯಾಮಾರಾಧಯತೇ ವಿಷ್ಣುರ್ಬ್ರಹ್ಮಾ ರುದ್ರಶ್ಚ ವಾಸವಃ ।
ವಾಂಛಿತಾರ್ಥಾಂ ಸದಾ ದೇವೀಂ ವರಂ ತಸ್ಯಾ ವೃಣೋಮ್ಯಹಂ ॥ ೫೫ ॥
ಯಯಾ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಸ್ತ್ರೀರೂಪೈರ್ವಿವಿಧೈರ್ದೇವ್ಯಾ ವರಂ ತಸ್ಯಾ ವೃಣೋಮ್ಯಹಂ ॥ ೫೬ ॥
ಶ್ರೀ ದೇವ್ಯುವಾಚ :—
ಅಹಂ ಭಾರ್ಯಾ ಸುರೇಂದ್ರಸ್ಯ ಪ್ರಾಣೇಭ್ಯೋಽಪಿ ಗರೀಯಸೀ ।
ಮಮಾಜ್ಞಾಂ ಪಾಲಯಂತಿಸ್ಮ ದೇವದಾನವಪನ್ನಗಾಃ ॥ ೫೭ ॥
ಕಿನ್ನರಾ ಗುಹ್ಯಕಾ ಯಕ್ಷಾಃ ಕಿಂ ಪುನರ್ಮರ್ತ್ಯಧರ್ಮಿಣಃ ।
ತಸ್ಮಾತ್ತ್ವಂ ಕಿಂ ನ ಗೃಹ್ಣಾಸಿ ವರಂ ಮತ್ತಃ ಕುತಾಪಸಿ ॥ ೫೮ ॥
ತನ್ನೂನಂ ವಜ್ರಘಾತೇನ ಚೂರ್ಣಯಿಷ್ಯಾಮಿ ತೇ ಶಿರಃ ।
ತಸ್ಯಾಸ್ತದ್ವಚನಂ ಶ್ರುತ್ವಾ ತಾಪಸ್ಯಥ ತತೋ ದ್ವಿಜಾಃ ॥ ೫೯ ॥
ಧೈರ್ಯಮಾಲಂಬ್ಯ ತಾಂ ಪ್ರಾಹ ಭೂಯ ಏವ ಸುರೇಶ್ವರೀಂ ।
ಸ್ವಾಮಿನೀ ತ್ವಂ ಹಿ ದೇವಾನಾಂ ಸತ್ಯಮೇತದಸಂಶಯಂ ॥ ೬೦ ॥
ಯಸ್ಯಾಃ ಪ್ರಾಪ್ತಂ ತ್ವಯೈಶ್ವರ್ಯಂ ಪರಾಂ ತಾಂ ತೋಷಯಾಮ್ಯಹಂ ।
ಸ್ವಲ್ಪಮಪ್ಯಪರಾಧಂತೇ ನ ಕರೋಮಿ ಸುರೇಶ್ವರಿ ॥ ೬೧ ॥

---

೫೫. ಅಭೀಷ್ಟಸಿದ್ಧಿಗಾಗಿ ಬ್ರಹ್ಮವಿಷ್ಣುಮಹೇಶ್ವರರಿಂದ ಆರಾಧಿಸಲ್ಪಡುತ್ತಿರುವ ಆ ದೇವಿಯಿಂದ ವರವನ್ನು ವರಿಸುವೆನು.—

೫೬. ವಿವಿಧ ಸ್ತ್ರೀರೂಪದಿಂದ ಚರಾಚರಾತ್ಮಕವಾದ ತ್ರಿಭುವನವನ್ನು ವ್ಯಾಪಿಸಿರುವ ಆ ದೇವಿಯಿಂದ ವರವನ್ನು ಪಡೆಯುವೆನು.

೫೭–೫೮. ಶ್ರೀ ದೇವಿಯು ಹೇಳುತ್ತಾಳೆ:—ನಾನು ದೇವೇಂದ್ರನಿಗೆ ಪ್ರಾಣಕ್ಕಿಂತಲೂ ಶ್ರೇಷ್ಠಳಾದ ಭಾರ್ಯೆಯು. ನನ್ನ ಅಪ್ಪಣೆಯನ್ನು ದೇವ, ದಾನವ, ಪನ್ನಗರೂ, ಕಿನ್ನರ, ಗುಹ್ಯಕ, ಯಕ್ಷರೂ ಪಾಲಿಸುವರು. ಮಾನವರಿನ್ನೇನು. ದುಷ್ಟ ತಾಪಸಿಯೆ! ಆದುದರಿಂದ ನೀನು ನನ್ನಿಂದ ಏತಕ್ಕೆ ವರವನ್ನು ಸ್ವೀಕರಿಸುವುದಿಲ್ಲ.

೫೯–೬೦. ಆದ್ದರಿಂದ ನಿನ್ನ ತಲೆಯನ್ನು ನಿಶ್ಚಯವಾಗಿಯೂ ವಜ್ರಾಯುಧದಿಂದ ಪುಡಿಗುಟ್ಟುವೆನು. ಅನಂತರ ಆ ತಾಪಸಿಯು ಅವಳ ಆ ಮಾತನ್ನು ಕೇಳಿ ಧೈರ್ಯವನ್ನು ತಾಳಿ ಆ ಶಚಿಯನ್ನು ಕುರಿತು ಮರಳಿ ಇಂತೆಂದಳು. ನೀನು ನಿಶ್ಚಯವಾಗಿಯೂ ದೇವತೆಗಳಿಗೆ ಸ್ವಾಮಿನಿಯು.

೬೧. ನೀನು ಯಾರಿಂದ ಐಶ್ವರ್ಯವನ್ನು ಪಡೆದಿರುವೆಯೊ, ನಾನು ಉತ್ತಮಳಾದ ಅವಳನ್ನು ಸಂತೋಷಗೊಳಿಸುವೆನು. ನಿನ್ನ ವಿಷಯದಲ್ಲಿ ನಾನು ಯಾವ ಸ್ವಲ್ಪ ಅಪರಾಧವನ್ನೂ ಮಾಡಿರುವುದಿಲ್ಲ.

ತಥಾಽಪಿ ವಧಯೋಗ್ಯಾಂ ಮಾಂ ಮನ್ಯಸೇ ವಿಕ್ಷಿಪಾಯುಧಂ ।
ಅನ್ಯಚ್ಚಾಽಪಿ ವಚೋ ಮಹ್ಯಂ ಶಕ್ರಾಣಿ ಶೃಣು ಸಾದರಂ ॥ ೬೨ ॥
ತಚ್ಛ್ರುತ್ವಾ ಕುರು ಯಚ್ಛ್ರೇಯೋ ವಿಚಿಂತ್ಯ ಮನಸಾ ತತಃ ।
ನ ತ್ವಂ ನ ತೇ ಪತಿಃ ಶಕ್ರೋ ನಚಾಽನ್ಯೇಽಪಿ ಸುರಾಽಸುರಾಃ ।
ಮಾಂ ನಿಷೂದಯಿತುಂ ಶಕ್ತಾಃ ಪಾರ್ವತ್ಯಾಂ ಶರಣಂ ಗತಾಂ ॥ ೬೩ ॥
ತಸ್ಮಾದ್ದ್ರುತಂ ದಿವಂ ಗಚ್ಛ ಮಾ ತ್ವಂ ಕೋಪಂ ವೃಥಾ ಕುರು ।
ಸನ್ಮಾರ್ಗೇ ವರ್ತಮಾನಾಯಾಂ ಮಮ ಸರ್ವಸುರೇಶ್ವರಿ ॥ ೬೪ ॥

ಸೂತ ಉವಾಚ :—

ಏವಂ ಸಾ ತಾಂ ಶಚೀಮುಕ್ತ್ವಾ ದುಃಖಿತಾ ವಿಷಕನ್ಯಕಾ ।
ಚಿಂತಯಾಮಾಸ ತದಿದಂ ಮರಣೇ ಕೃತನಿಶ್ಚಯಾ ॥ ೬೫ ॥
ನ ಪ್ರಸೀದತಿ ಮೇ ದೇವೀ ಯಸ್ಮಾತ್ಪರ್ವತನಂದಿನೀ ।
ತಸ್ಮಾನ್ಮಾಂ ಯದಿ ಶಕ್ರಾಣೀ ನೈಷಾ ವ್ಯಾಪಾದಯಿಷ್ಯತಿ ॥ ೬೬ ॥
ತನ್ನೂನಂ ಜ್ವಲನಂ ದೀಪ್ತಂ ಸೇವಯಿಷ್ಯಾಮಿ ಸತ್ವರಂ ।
ಅಥಾಽಪಶ್ಯತ್ಕ್ಷಣೇನೈವ ತಂಚೈರಾವಣವಾರಣಂ ॥ ೬೭ ॥
ದುಗ್ಧಕುಂದೇಂದು ಸಂಕಾಶಂ ಸಂಜಾತಂ ಸಹಸಾವೃಷಂ ।
ತಸ್ಯೋಪರಿ ಸ್ಥಿತಾಂ ದೇವೀಂ ಶಂಭುನಾ ಸಹ ಪಾರ್ವತೀಂ ॥ ೬೮ ॥

---

೬೨. ಹಾಗಾದರೂ ನಾನು ನಿನಗೆ ವಧಾರ್ಹಳೆಂದು ನೀನು ತಿಳಿಯುವು ದಾದರೆ ಆಯುಧವನ್ನು ಪ್ರಯೋಗಿಸು. ಎಲೌ ಶಚಿಯೆ! ನೀನು ನನ್ನ ಮತ್ತೊಂದು ಮಾತನ್ನು ಪ್ರೀತಿಯಿಂದ ಕೇಳು.

೬೩. ಅದನ್ನು ಕೇಳಿ ಮನಸ್ಸಿನಿಂದ ಆಲೋಚಿಸಿ ಯಾವುದು ಶ್ರೇಯಸ್ಸಿಗೆ ಸಾಧನವೋ ಅದನ್ನು ಮಾಡು. ಪಾರ್ವತಿಯನ್ನು ಮರೆಹೊಕ್ಕಿರುವ ನನ್ನನ್ನು ನೀನೂ, ನಿನ್ನ ಪತಿಯಾದ ಇಂದ್ರನೂ, ಇತರ ಸುರಾಸುರರೂ ಕೊಲ್ಲಲು ಶಕ್ತರಲ್ಲ.

೬೪. ಸುರೇಶ್ವರಿ! ಆದುದರಿಂದ ಶೀಘ್ರವಾಗಿ ಸ್ವರ್ಗಕ್ಕೆ ತೆರಳು. ಸನ್ಮಾರ್ಗ ದಲ್ಲಿ ನಡೆಯುತ್ತಿರುವ ನನ್ನಲ್ಲಿ ವ್ಯರ್ಥವಾಗಿ ಕೋಪಮಾಡಬೇಡ.

೬೫. ಸೂತನು ಹೇಳುತ್ತಾನೆ:—ಆ ವಿಷಕನ್ಯೆಯು ಹೀಗೆ ದುಃಖದಿಂದ ಶಚಿಯನ್ನು ಕುರಿತು ಹೇಳಿ ಮಡಿಯಲು ನಿಶ್ಚಯಿಸಿ ಹೀಗೆ ಚಿಂತಿಸಿದಳು.

೬೬—೬೯. ಪರ್ವತ ತನಯಳಾದ ಪಾರ್ವತಿಯು ಪ್ರಸನ್ನಳಾಗದಿರುವುದರಿಂದ ಈ ಶಚಿಯು ನನ್ನನ್ನು ಕೊಲ್ಲದಿದ್ದರೆ ನಿಶ್ಚಯವಾಗಿಯೂ ಉರಿಯುತ್ತಿರುವ ಅಗ್ನಿ ಯನ್ನು ಬೇಗನೆ ಸೇವಿಸುವೆನು. ಬಳಿಕ ಅವಳು ಕ್ಷಣಕಾಲದಲ್ಲಿಯೇ ಹಾಲು, ಮಲ್ಲಿಗೆ, ಹೂವು, ಚಂದ್ರರಂತೆ ಬೆಳ್ಳಗಿರುವ ಐರಾವತವು ವೃಷಭವಾದುದನ್ನೂ, ಅದರ ಮೇಲೆ ಶಿವನೊಡನೆ ಕುಳಿತಿರುವವಳೂ, ಚತುರ್ಭುಜಳೂ, ಪ್ರಸನ್ನ ಮುಖ

ಚತುರ್ಭುಜಾಂ ಪ್ರಸನ್ನಾಸ್ಯಾಂ ದಿವ್ಯರೂಪಸಮನ್ವಿತಾಂ ।
ಶುಕ್ಲಮಾಲ್ಯಾಂಬರಧರಾಂ ಚಂದ್ರಾರ್ಧಕೃತಮಸ್ತಕಾಂ ॥ ೬೯ ॥
ತತಃ ಸಮ್ಯಕ್ ಸಮಾಲೋಕ್ಯ ಜ್ಞಾತ್ವಾ ತಾಂ ಪರ್ವತಾತ್ಮಜಾಂ ।
ವಿಷಕನ್ಯಾ ಸ್ತುತಿಂ ಚಕ್ರೇ ಪ್ರಣಿಪತ್ಯ ಮುಹುರ್ಮುಹುಃ ॥ ೭೦ ॥
ನಮಸ್ತೇ ದೇವದೇವೇಶಿ ನಮಸ್ತೇ ಸರ್ವವಾಸಿನಿ ।
ಸರ್ವಕಾಮಪ್ರದೇ ಸತ್ಯೇ ಜರಾಮರಣವರ್ಜಿತೇ ॥ ೭೧ ॥
ಶಕ್ರಾದಯೋಽಪಿ ದೇವಾಸ್ತೇ ಪರಮಾರ್ಥೇನ ನೋ ವಿದುಃ ।
ಸ್ವರೂಪವರ್ಣನಂ ಕರ್ತುಂ ಕಿಂ ಪುನರ್ದೇವಿ ಮಾನುಷೀ ॥ ೭೨ ॥
ಯಸ್ಯಾಃ ಸರ್ವಂ ಮಹೀ ವ್ಯೋಮ ಜಲಾಗ್ನಿಪವನಾತ್ಮಕಂ ।
ಬ್ರಹ್ಮಾಂಡಮಂಗಸಂಭೂತಂ ಸದೇವಾಸುರಮಾನುಷಂ ॥ ೭೩ ॥
ನ ತಸ್ಯಾ ಜನ್ಮನಿ ಬ್ರಹ್ಮಾ ನ ನಾಶಾಯ ಮಹೇಶ್ವರಃ ।
ಪಾಲನಾಯ ನ ಗೋವಿಂದಸ್ತಾಂ ತ್ವಾಂ ಸ್ತೋಷ್ಯಾಮ್ಯಹಂ ಕಥಂ॥ ೭೪ ॥
ತಥಾಷ್ಟಗುಣಮೈಶ್ವರ್ಯಂ ಯಸ್ಯಾಃ ಸ್ವಾಭಾವಿಕಂ ಪರಂ ।
ನಿರಸ್ತಾತಿಶಯಂ ಲೋಕೇ ಸ್ಪೃಹಣೀಯತಮಂ ಸದಾ ॥ ೭೫ ॥

---

ವುಳ್ಳವಳೂ, ದಿವ್ಯರೂಪಗಳಿಂದ ಕೂಡಿರುವವಳೂ, ಶುಕ್ಲಮಾಲ್ಯವನ್ನು ಧರಿಸಿದವಳೂ, ಅರ್ಧಚಂದ್ರನನ್ನು ತಳೆದಿರುವ ಶಿರಸ್ಸುಳ್ಳವಳೂ ಆದ ಪಾರ್ವತಿಯನ್ನು ಕಂಡಳು.

೭೦. ಬಳಿಕ ಆ ವಿಷಕನ್ಯೆಯು ಸರಿಯಾಗಿ ನೋಡಿ ಅವಳು ಪಾರ್ವತಿಯೆಂದರಿತು ನಮಸ್ಕರಿಸಿ ಈ ರೀತಿ ಸ್ತುತಿಸಿದಳು.

೭೧. ಸರ್ವಾಂತರ್ಯಾಮಿಯೂ, ಸಕಲೇಷ್ಟಾರ್ಥಗಳನ್ನು ನೀಡುವವಳೂ, ಜರಾಮರಣಗಳಿಲ್ಲದವಳೂ ಆದ ಓ ದೇವೇಶಿ! ನಿನಗೆ ನಮಸ್ಕಾರವು.

೭೨. ಶಕ್ರಾದಿ ದೇವತೆಗಳೂ ಪರಮಾರ್ಥದಿಂದ ನಿನ್ನ ಸ್ವರೂಪವನ್ನು ವರ್ಣಿಸಲು ಸಮರ್ಥರಲ್ಲ. ಎಂದಮೇಲೆ ಮನುಷ್ಯಸ್ತ್ರೀಯರ ವಿಷಯವಿನ್ನೇನು.

೭೩–೭೪. ಯಾವಳ ಅಂಗದಿಂದ ಭೂಮಿ, ಆಕಾಶ, ನೀರು, ಬೆಂಕಿ, ಗಾಳಿಗಳ ರೂಪವಾಗಿ, ದೇವಾಸುರಮನುಷ್ಯರಿಂದ ಕೂಡಿರುವುದೂ ಆದ ಬ್ರಹ್ಮಾಂಡವು ಉಂಟಾಯಿತೋ ಅಂತಹ ನಿನ್ನ ಹುಟ್ಟಿನಲ್ಲಿ ಬ್ರಹ್ಮನೂ, ನಾಶದಲ್ಲಿ ಮಹೇಶ್ವರನೂ, ಪಾಲನೆಯಲ್ಲಿ ವಿಷ್ಣುವೂ ಸಮರ್ಥನಲ್ಲ. ಅಂತಹ ನಿನ್ನನ್ನು ನಾನು ಹೇಗೆ ಸಂತೋಷಗೊಳಿಸಲಿ!

೭೫–೭೮. ಯಾವಳ ಅಷ್ಟಗುಣವುಳ್ಳುದೂ, ಸ್ವಾಭಾವಿಕವೂ, ಉತ್ತಮವೂ ಆದ ಐಶ್ವರ್ಯವು ಲೋಕದಲ್ಲಿ ಅಪೇಕ್ಷಿಸಲರ್ಹವಾದುದೋ, ಯಾವಳ ಅನೇಕ

ಯಸ್ಯಾ ರೂಪಾಣ್ಯನೇಕಾನಿ ಸಮ್ಯಗ್ಧ್ಯಾನ ಪರಾಯಣಾಃ ।
ಧ್ಯಾಯಂತಿ ಮುನಯೋ ಭಕ್ತ್ಯಾ ಪ್ರಾಪ್ನುವಂತಿ ಚ ವಾಂಛಿತಂ ॥ ೭೬ ॥
ಹೃದಿ ಸಂಕಲ್ಪ್ಯ ಯದ್ರೂಪಂ ಧ್ಯಾನೇನಾರ್ಚಂತಿ ಯೋಗಿನಃ ।
ಸಮ್ಯಗ್ಭಾವಾತ್ಮಕೈಃ ಪುಷ್ಪೈರ್ಮೋಕ್ಷಾಯ ಕೃತನಿಶ್ಚಯಾಃ ॥ ೭೭ ॥
ತಾಂ ದೇವೀಂ ಮಾನುಷೀ ಭೂತ್ವಾ ಕಥಂ ಸ್ತೌಮಿ ಮಹೇಶ್ವರೀಂ ॥ ೭೮ ॥

ದೇವ್ಯುವಾಚ:—

ಪರಿತುಷ್ಟಾಽಸ್ಮಿ ತೇ ಪುತ್ರಿ ವರಂ ಪ್ರಾರ್ಥಯ ಸುವ್ರತೇ ।
ಅಸಂದಿಗ್ಧಂ ಪ್ರದಾಸ್ಯಾಮಿ ಯತ್ತೇ ಹೃದಿ ಸದಾ ಸ್ಥಿತಂ ॥ ೭೯ ॥

ವಿಷಕನ್ಯೋವಾಚ:—

ಭರ್ತುರರ್ಥೇ ಮಯಾ ದೇವಿ ಕೃತೋಽಯಂ ತಪ ಉದ್ಯಮಃ ।
ತತ್ಕಿಂ ತೇನ ಕರಿಷ್ಯಾಮಿ ಸಾಂಪ್ರತಂ ಜರಯಾವೃತಾ ॥ ೮೦ ॥
ತಸ್ಮಾದತ್ರಾಶ್ರಮೇ ಸಾಕಂ ತ್ವಯಾ ಸ್ಥೇಯಂ ಸದೈವ ತು ।
ಹಿತಾಯ ಸರ್ವನಾರೀಣಾಂ ವಚನಾನ್ಮಮ ಪಾರ್ವತಿ ॥ ೮೧ ॥

ಶ್ರೀ ದೇವ್ಯುವಾಚ:—

ಅದ್ಯ ಪ್ರಭೃತ್ಯಹಂ ಭದ್ರೇ ಶ್ರೇಷ್ಠೇಽಸ್ಮಿನ್ನಾಶ್ರಮೇ ಶುಭೇ ।
ಸ್ವಮಾಶ್ರಮಂ ಕರಿಷ್ಯಾಮಿ ಯತ್ತೇ ಹೃದಿ ಸಮಾಶ್ರಿತಂ ॥ ೮೨ ॥

---

ರೂಪಗಳನ್ನು ಧ್ಯಾನನಿರತರಾದ ಮುನಿಗಳು ಧ್ಯಾನಮಾಡಿ ಇಷ್ಟಾರ್ಥವನ್ನು ಪಡೆಯುವರೋ, ಯಾವಳ ರೂಪವನ್ನು ಮೋಕ್ಷಾರ್ಥಿಗಳಾದ ಯೋಗಿಗಳು ಹೃದಯದಲ್ಲಿ ಚಿಂತಿಸಿ, ಧ್ಯಾನಿಸಿ ಭಾವರೂಪಗಳಾದ ಪುಷ್ಪಗಳಿಂದ ಅರ್ಚಿಸುವರೋ, ಆ ಮಹೇಶ್ವರಿಯನ್ನು ಮನುಷ್ಯಳಾದ ನಾನು ಹೇಗೆ ಸ್ತುತಿಸಲಿ.

೭೯. ದೇವಿಯು ಹೇಳುತ್ತಾಳೆ:—ಮಗಳೆ! ನಾನು ನಿನ್ನ ವಿಷಯದಲ್ಲಿ ಸಂತುಷ್ಟಳಾಗಿರುವೆನು. ವರವನ್ನು ಕೇಳಿಕೋ. ನಿಶ್ಚಯವಾಗಿಯೂ ನಿನ್ನ ಮನಸ್ಸಿನಲ್ಲಿರುವುದನ್ನು ಕೊಡುವೆನು.

೮೦. ವಿಷಕನ್ಯೆಯು ಹೇಳುತ್ತಾಳೆ:—ದೇವಿ! ನಾನು ನನ್ನ ಪತಿಗಾಗಿ ತಪಸ್ಸನ್ನು ಮಾಡಿರುವೆನು. ಈಗ ಮುದುಕಿಯಾದ ನಾನು ಏನನ್ನು ಮಾಡುವೆನು.

೮೧. ಪಾರ್ವತಿ! ಆದುದರಿಂದ ನನ್ನ ಮಾತಿನಂತೆ ನೀನು ಈ ಆಶ್ರಮದಲ್ಲಿ ಸಕಲ ನಾರಿಯರ ಹಿತಕ್ಕಾಗಿ ಯಾವಾಗಲೂ ನೆಲಸಿರಬೇಕು.

೮೨. ಶ್ರೀದೇವಿಯು ಹೇಳುತ್ತಾಳೆ:— ಮಂಗಳಕರಳೆ! ನಾನು ಇದು ಮೊದಲ್ಗೊಂಡು ನಿನ್ನ ಇಷ್ಟದಂತೆ ಈ ಆಶ್ರಮದಲ್ಲಿ ನೆಲೆಸುವೆನು.

ಮಾಘಶುಕ್ಲತೃತೀಯಾಯಾಂ ಯಾಽತ್ರ ಸ್ನಾನಂ ಕರಿಷ್ಯತಿ ।
ನಾರೀ ಸಾ ಮತ್ಪ್ರಸಾದೇನ ಲಪ್ಸ್ಯತೇ ವಾಂಛಿತಂ ಫಲಂ. ॥ ೮೩ ॥
ಅಪಿ ಕೃತ್ವಾ ಮಹಾಪಾಪಂ ನಾರೀ ವಾ ಪುರುಷೋಽಥವಾ ।
ಯತ್ರ ಸ್ನಾತ್ವಾ ಪ್ರಸಾದಾನ್ಮೇ ವಿಪಾಪ್ಮಾ ಸಂಭವಿಷ್ಯತಿ ॥ ೮೪ ॥
ಅತ್ರ ಯೇ ಫಲದಾನಂ ಚ ಪ್ರಕರಿಷ್ಯಂತಿ ಮಾನವಾಃ ।
ಸಫಲಾಃ ಸಕಲಾಸ್ತೇಷಾಮಾಶಾಃ ಸ್ಯುರ್ನಾಽತ್ರ ಸಂಶಯಃ ॥ ೮೫ ॥
ಅಪಿ ಹತ್ವಾ ಸ್ತ್ರಿಯಂ ಮರ್ತ್ಯೋ ಯೋಽತ್ರ ಸ್ನಾನಂ ಕರಿಷ್ಯತಿ ।
ಮಾಘ ಶುಕ್ಲ ತೃತೀಯಾಯಾಂ ವಿಪಾಪ್ಮಾ ಸ ಭವಿಷ್ಯತಿ ॥ ೮೬ ॥
ಯಾ ತತ್ರ ಕನ್ಯಕಾ ಭದ್ರೇ ಸ್ನಾನಂ ಭಕ್ತ್ಯಾ ಕರಿಷ್ಯತಿ ।
ತಸ್ಮಿನ್ದಿನೇ ಪತಿಶ್ರೇಷ್ಠಂ ಲಪ್ಸ್ಯತೇ ನಾಽತ್ರ ಸಂಶಯಃ ॥ ೮೭ ॥
ಸೂತ ಉವಾಚ :—
ಏವಮುಕ್ತ್ವಾ ತತೋ ಗೌರೀ ತಾಂ ಚ ಪಸ್ಪರ್ಶ ಪಾಣಿನಾ ।
ತತಶ್ಚ ತತ್ಕ್ಷಣಾಜ್ಜಾತಾ ದಿವ್ಯರೂಪವಪುರ್ಧರಾ ॥ ೮೮ ॥
ವೃದ್ಧತ್ವೇನ ಪರಿತ್ಯಕ್ತಾ ದಿವ್ಯಮಾಲ್ಯಾನುಲೇಪನಾ ।
ಪೀನೋನ್ನತ ಕುಚಾಭೋಗಾ ಪ್ರಮತ್ತಗಜಗಾಮಿನೀ ॥ ೮೯ ॥
ತತಸ್ತಾಂ ಸಾ ಸಮಾಧಾಯ ವಿಧಾಯ ನಿಜಕಿಂಕರೀಂ ।
ಕೈಲಾಸಂ ಪರ್ವತಶ್ರೇಷ್ಠಂ ಜಗಾಮ ಹರಸಂಯುತಾ ॥ ೯೦ ॥

---

೮೩. ಮಾಘ ಶುಕ್ಲ ತದಿಗೆಯ ದಿನ ಇಲ್ಲಿ ಸ್ನಾನಮಾಡಿದ ನಾರಿಯು ನನ್ನ ಅನುಗ್ರಹದಿಂದ ಇಷ್ಟವಾದ ಫಲವನ್ನು ಪಡೆಯುವಳು.

೮೪. ಇಲ್ಲಿ ನಾರಿಯಾಗಲಿ, ಪುರುಷನಾಗಲಿ ಮಹಾಪಾಪಿಯಾದರೂ ಆಗಲಿ ಮಿಂದರೆ ನನ್ನ ಅನುಗ್ರಹದಿಂದ ಪಾಪರಹಿತರಾಗುವರು.

೮೫. ಇಲ್ಲಿ ಫಲದಾನಮಾಡಿದ ಮಾನವರ ಸಕಲಾಶೆಗಳೂ ನಿಶ್ಚಯವಾಗಿಯೂ ಸಫಲವಾಗುವುವು.

೮೬—೮೭. ಸ್ತ್ರೀಹತ್ಯೆ ಮಾಡಿದ ಮಾನವನು ಇಲ್ಲಿ ಮಾಘ ಶುಕ್ಲ ತದಿಗೆಯ ದಿನ ಮಿಂದರೆ ಪಾಪರಹಿತನಾಗುವನು. ಮಂಗಳಕರಳೆ! ಆ ದಿನ ಇಲ್ಲಿ ಮಿಂದ ಕನ್ಯೆಯು ನಿಶ್ಚಯವಾಗಿಯೂ ಉತ್ತಮನಾದ ಪತಿಯನ್ನು ಪಡೆಯುವಳು.

೮೮—೯೦. ಸೂತನು ಹೇಳುತ್ತಾನೆ:—ಗೌರಿಯು ಹೀಗೆ ಹೇಳಿ ಅವಳನ್ನು ಕೈಯಿಂದ ಮುಟ್ಟಿದಳು. ಕೂಡಲೆ ಅವಳು ದಿವ್ಯರೂಪವನ್ನು ತಾಳಿ, ಮುಪ್ಪಿಲ್ಲದವಳೂ, ದಿವ್ಯಮಾಲ್ಯಗಂಧವನ್ನು ಧರಿಸಿದವಳೂ, ಪೀನೋನ್ನತ ಕುಚಗಳುಳ್ಳವಳೂ, ಮದಿಸಿದ ಆನೆಯಂತೆ ನಡೆಯುವವಳೂ ಆದಳು. ತರುವಾಯ ಗೌರಿಯು ಅವಳನ್ನು ತನ್ನ ಸೇವಕಳನ್ನಾಗಿ ಮಾಡಿ ಕರೆದುಕೊಂಡು ಶಿವನೊಡನೆ ಕೈಲಾಸಪರ್ವತಕ್ಕೆ ತೆರಳಿದಳು.

ತತಃ ಪ್ರಭೃತಿ ತತ್ತೀರ್ಥಂ ಶರ್ಮಿಷ್ಠಾತೀರ್ಥಮುಚ್ಯತೇ ।
ಪ್ರಖ್ಯಾತಂ ತ್ರಿಷು ಲೋಕೇಷು ಸರ್ವಪಾತಕನಾಶನಂ ॥ ೯೧ ॥
ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾನಂ ಸಮಾಚರೇತ್ ।
ಮಾಘಶುಕ್ಲತೃತೀಯಾಯಾಂ ಯಥಾವದ್ದ್ವಿಜಸತ್ತಮಾಃ ॥ ೯೨ ॥
ಏತತ್ಪವಿತ್ರಮಾಯುಷ್ಯಂ ಸರ್ವಪಾತಕನಾಶನಂ ।
ಸ್ತ್ರೀತೀರ್ಥಸಂಭವಂ ನೄಣಾಂ ಮಾಹಾತ್ಮ್ಯಂ ಯನ್ಮಯೋದಿತಂ ॥ ೯೩ ॥
ಯಶ್ಚೈತತ್ಪ್ರಾತರುತ್ಥಾಯ ಸದಾ ಪಠತಿ ಮಾನವಃ ।
ಸ ಸರ್ವಾಂಲ್ಲಭತೇ ಕಾಮಾನ್ಮನಸಾ ವಾಂಛಿತಾನ್ ಸದಾ ॥ ೯೪ ॥
ತಥಾ ಪರ್ವಣಿ ಸಂಪ್ರಾಪ್ತೇ ಯಶ್ಚೈತತ್ಪಠಿತೇ ನರಃ ।
ಶೃಣೋತಿ ಚಾಶು ಭಕ್ತ್ಯಾ ಯಃ ಸ ಯಾತಿ ಶಿವಮಂದಿರಂ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶರ್ಮಿಷ್ಠಾತೀರ್ಥಮಾಹಾತ್ಮ್ಯವರ್ಣನಂ"
ನಾಮ ದ್ವಿಷಷ್ಟಿತಮೋಽಧ್ಯಾಯಃ

---

೯೧. ಅದು ಮೊದಲ್ಗೊಂಡು ಆ ತೀರ್ಥವು ಮೂರು ಲೋಕಗಳಲ್ಲಿಯೂ ಪಾಪವನ್ನು ನಿವಾರಿಸುವ ಶರ್ಮಿಷ್ಠಾತೀರ್ಥವೆಂದು ವಿಖ್ಯಾತವಾಯಿತು.

೯೨. ದ್ವಿಜವರ್ಯರೆ! ಆದುದರಿಂದ ಮಾಘ ಶುಕ್ಲ ತದಿಗೆಯ ದಿನ ಅಲ್ಲಿ ಸ್ನಾನಮಾಡಬೇಕು.

೯೩. ಪವಿತ್ರವೂ, ಆಯುಷ್ಯವನ್ನು ಹೆಚ್ಚಿಸುವುದೂ, ಮಾನವರ ಸಕಲ ಪಾಪಗಳನ್ನು ನಿವಾರಿಸುವುದೂ ಆದ ಆ ಸ್ತ್ರೀತೀರ್ಥದ ಮಾಹಾತ್ಮ್ಯವನ್ನು ಹೇಳಿರುವೆನು.

೯೪. ಬೆಳಗ್ಗೆ ಎದ್ದು ಇದನ್ನು ಪಠಿಸುವ ಮಾನವನು ಮನಸ್ಸಿಗೆ ಇಷ್ಟವಾದುದನ್ನೆಲ್ಲಾ ಹೊಂದುವನು.

೯೫. ಪರ್ವಕಾಲದಲ್ಲಿ ಭಕ್ತಿಯಿಂದ ಇದನ್ನು ಪಠಿಸುವ ಮತ್ತು ಕೇಳುವ ಮಾನವನು ಬೇಗನೆ ಕೈಲಾಸವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶರ್ಮಿಷ್ಠಾತೀರ್ಥಮಾಹಾತ್ಮ್ಯವರ್ಣನ"ವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಷಷ್ಟಿತಮೋಽಧ್ಯಾಯಃ

### ಸೋಮನಾಥೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥ ಸೋಮೇಶ್ವರಾಖ್ಯಂ ಚ ತತ್ರಲಿಂಗಂ ಸುಶೋಭನಂ ।
ಅಸ್ತಿ ಖ್ಯಾತಂ ತ್ರಿಲೋಕೇಽತ್ರ ಸ್ವಯಂ ಸೋಮೇನ ನಿರ್ಮಿತಂ ॥ ೧ ॥
ಸೋಮವಾರೇಣ ಯಸ್ತತ್ರ ವತ್ಸರಂ ಯಾವದರ್ಚಯೇತ್ ।
ಕ್ಷಣಂ ಕೃತ್ವಾ ಸ ರೋಗೇಣ ದಾರುಣೇನಾಽಪಿ ಮುಚ್ಯತೇ ॥ ೨ ॥
ಯಕ್ಷ್ಮಣಾಽಪಿ ನ ಸಂದೇಹಃ ಕಿಂ ಪುನಃ ಕುಷ್ಠಪೂರ್ವಕೈಃ ।
ತಸ್ಮಾತ್ಸರ್ವ ಪ್ರಯತ್ನೇನ ರೋಗಾರ್ತಸ್ತಂ ಪ್ರಪೂಜಯೇತ್ ॥ ೩ ॥
ತದಾರಾಧ್ಯ ಪುರಾ ಸೋಮಃ ಕ್ಷಯವ್ಯಾಧಿಸಮನ್ವಿತಃ ।
ಬಭೂವ ನೀರುಗ್ದೇಹೋಽಸೌ ಯಥಾ ಪಾಂಡ್ಯೋ ನರಾಧಿಪಃ ॥ ೪ ॥

ಋಷಯ ಊಚುಃ :—

ಓಷಧೀನಾಮಧೀಶಸ್ಯ ಕಥಂ ಸೋಮಸ್ಯ ಸೂತಜ ।
ಕ್ಷಯವ್ಯಾಧಿಃ ಪುರಾ ಜಾತ ಉಪಶಾಂತಿಂ ಕಥಂ ಗತಃ ॥ ೫ ॥

---

## ಕನ್ನಡದ ಅನುವಾದ

### ಸೋಮನಾಥೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಅಲ್ಲಿ ಮೂರು ಲೋಕಗಳಲ್ಲಿ ಪ್ರಸಿದ್ಧವೂ, ಸೋಮನು ನಿರ್ಮಿಸಿರುವುದೂ ಆದ ಸೋಮೇಶ್ವರವೆಂಬ ಮಂಗಳಕರವಾದ ಒಂದು ಲಿಂಗವಿದೆ.

೨-೩. ಅಲ್ಲಿ ಒಂದು ವರ್ಷಕಾಲ ಸೋಮವಾರದ ದಿನ ಅವಕಾಶಮಾಡಿಕೊಂಡು ಅವನನ್ನು ಅರ್ಚಿಸಿದವನು ದಾರುಣವಾದ ಕ್ಷಯರೋಗದಿಂದಲೂ ಮುಕ್ತನಾಗುವನು. ಕುಷ್ಠ ಮೊದಲಾದ ರೋಗಗಳಿಂದಿನ್ನೇನು. ಆದುದರಿಂದ ರೋಗಪೀಡಿತನಾದವನು ಪ್ರಯತ್ನಪೂರ್ವಕವಾಗಿ ಅವನನ್ನು ಪೂಜಿಸಬೇಕು.

೪. ಹಿಂದೆ ಕ್ಷಯರೋಗಪೀಡಿತನಾದ ಚಂದ್ರನು ಅವನನ್ನು ಆರಾಧಿಸಿ ಪಾಂಡ್ಯರಾಜನಂತೆ ರೋಗವಿಲ್ಲದವನಾದನು.

೫. ಋಷಿಗಳು ಹೇಳುತ್ತಾರೆ :—ಸೂತ! ಓಷಧೀಶನಾದ ಚಂದ್ರನಿಗೆ ಕ್ಷಯರೋಗವು ಹೇಗೆ ಬಂದಿತು? ಅದು ಹೇಗೆ ಶಾಂತವಾಯಿತು?

ಏತನ್ನಃ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮತೇ ।
ತಥಾ ತಸ್ಯ ಮಹೀಪಸ್ಯ ಪಾಂಡ್ಯಸ್ಯಾಽಪಿ ಕಥಾಂ ಶುಭಾಂ ॥ ೬ ॥
ಸೂತ ಉವಾಚಃ—
ದಕ್ಷಸ್ಯ ಕನ್ಯಕಾಃ ಪೂರ್ವಂ ಸಪ್ತವಿಂಶತಿಸಂಖ್ಯಯಾ ।
ಉಪಯೇಮೇ ನಿಶಾನಾಥೋ ದೇವಾಽಗ್ನಿಗುರುಸನ್ನಿಧೌ ॥ ೭ ॥
ನಕ್ಷತ್ರ ಸಂಜ್ಞಿತಾ ಲೋಕೇ ಕೀರ್ತ್ಯಂತೇ ಯಾ ದ್ವಿಜೋತ್ತಮೈಃ ।
ದೈವಜ್ಞೈರಶ್ವಿನೀಪೂರ್ವಾ ರೂಪೌದಾರ್ಯಗುಣಾನ್ವಿತಾಃ ॥ ೮ ॥
ಅಥ ತಾಸಾಂ ಸಮಸ್ತಾನಾಂ ಮಧ್ಯೇ ತಸ್ಯ ನಿಶಾಪತೇಃ ।
ರೋಹಿಣೀ ವಲ್ಲಭಾ ಜಜ್ಞೇ ಪ್ರಾಣೇಭ್ಯೋಽಪಿ ಗರೀಯಸೀ ॥ ೯ ॥
ತತಃ ಸಮಂ ಪರಿತ್ಯಜ್ಯ ಸರ್ವಾಸ್ತಾ ದಕ್ಷಕನ್ಯಕಾಃ ।
ರೋಹಿಣ್ಯಾ ಸಹ ಸಂಯುಕ್ತಃ ಸಂಬಭೂವ ದಿವಾನಿಶಂ ॥ ೧೦ ॥
ತತಸ್ತಾಃ ಕಾಮಸಂತಪ್ತಾ ದೌರ್ಭಾಗ್ಯೇನ ಸಮನ್ವಿತಾಃ ।
ಪ್ರೋಚುರ್ದುಃಖಾನ್ವಿತಾ ದಕ್ಷಂ ಗತ್ವಾ ಬಾಷ್ಪಪ್ಲುತಾನನಾಃ ॥ ೧೧ ॥
ವಯಂ ಯಸ್ಮೈ ತ್ವಯಾ ದತ್ತಾಃ ಪತ್ನ್ಯರ್ಥಂ ತಾತ ಪಾಪಿನೇ ।
ಋತುಮಾತ್ರಮಪಿ ಪ್ರೀತ್ಯಾ ಸೋಽಸ್ಮಾಕಂ ನ ಪ್ರಯಚ್ಛತಿ ॥ ೧೨ ॥

---

೬. ಪ್ರಾಜ್ಞನೆ! ಈ ವಿಷಯವನ್ನೂ, ಪಾಂಡ್ಯರಾಜನ ಶುಭಕರವಾದ ಕಥೆಯನ್ನೂ ನಮಗೆ ವಿಸ್ತಾರವಾಗಿ ಹೇಳು.

೭–೮. ಸೂತನು ಹೇಳುತ್ತಾನೆ :— ಲೋಕದಲ್ಲಿ ಜ್ಯೋತಿಷ್ಕರಾದ ಬ್ರಾಹ್ಮಣರು ಅಶ್ವಿನೀ ಮೊದಲಾದ ನಕ್ಷತ್ರನಾಮಗಳಿಂದ ಕರೆಯುವ ಸೌಂದರ್ಯೌದಾರ್ಯಗಳಿಂದ ಬೆಳಗುವ ದಕ್ಷಬ್ರಹ್ಮನ ಇಪ್ಪತ್ತೇಳು ಮಂದಿ ಕನ್ಯೆಯರನ್ನು ಹಿಂದೆ ಚಂದ್ರನು ದೇವಾಗ್ನಿ ಗುರುಗಳ ಸನ್ನಿಧಿಯಲ್ಲಿ ಮದುವೆಮಾಡಿಕೊಂಡನು.

೯. ತರುವಾಯ ಆ ಸಕಲ ಕನ್ಯೆಯರಲ್ಲಿ ರೋಹಿಣಿಯು ಚಂದ್ರನಿಗೆ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಪಾತ್ರಳಾದಳು.

೧೦. ಆದುದರಿಂದ ಚಂದ್ರನು ಉಳಿದ ಸಮಸ್ತ ದಕ್ಷಸುತೆಯರನ್ನೂ ತ್ಯಜಿಸಿ ಹಗಲು ರಾತ್ರಿ ರೋಹಿಣಿಯೊಡನೆಯೇ ಇರುತ್ತಿದ್ದನು.

೧೧. ಬಳಿಕ ಆ ಕನ್ಯೆಯರು ಕಾಮಪೀಡಿತರೂ, ದುರ್ಭಗರೂ ಆಗಿ ಕಣ್ಣೀರನ್ನು ಸುರಿಸುತ್ತ ದಕ್ಷನೆಡೆಗೆ ಹೋಗಿ ಇಂತೆಂದರು.

೧೨. ನೀನು ನಮ್ಮನ್ನು ಯಾರಿಗೆ ಮದುವೆಮಾಡಿಕೊಟ್ಟೆಯೋ ಆ ಪಾಪಿಯು ಋತುಕಾಲದಲ್ಲಿಯೂ ನಮ್ಮೊಡನೆ ಸೇರುವುದಿಲ್ಲ.

ತಸ್ಮಾತ್ಪ್ರಾಣಾನ್ವಿಹಾಸ್ಯಾಮಃ ಸಂಪ್ರವಿಶ್ಯ ಹುತಾಶನಂ ।
ಅನಿಲಂಬಾನ್ಮಹಾಭಾಗ ಸತ್ಯಂ ಬ್ರೂಮಸ್ತವಾಗ್ರತಃ ॥ ೧೩ ॥

ಸೂತ ಉವಾಚ:—

ತಾಸಾಂ ತದ್ವಚನಂ ಶ್ರುತ್ವಾ ದಕ್ಷೋ ದುಃಖಸಮನ್ವಿತಃ ।
ಸರ್ವಾಸ್ತಾಃ ಸ್ವಯಮಾದಾಯ ಜಗಾಮ ಶಶಿಸನ್ನಿಧೌ ॥ ೧೪ ॥
ತತಃ ಪ್ರೋವಾಚ ಸೋಽನ್ವಕ್ಷಂ ತಾಸಾಂ ದಕ್ಷಃ ಪ್ರಜಾಪತಿಃ ।
ಭರ್ತ್ಸಯನ್ಪರುಷೈರ್ವಾಕ್ಯೈರ್ನಿಶಾನಾಥಂ ಮುಹುರ್ಮುಹುಃ ॥ ೧೫ ॥
ಕಿಮಿದಂ ಯುಜ್ಯತೇ ಕರ್ತುಂ ತ್ವಯಾ ರಾತ್ರಿಪತೇಽಧಮ ।
ಕರ್ಮಮೂಢ ಸತಾಂ ಬಾಹ್ಯ ಧರ್ಮಶಾಸ್ತ್ರ ವಿಗರ್ಹಿತಂ ॥ ೧೬ ॥
ಋತುಕಾಲೇಽಪಿ ಸಂಪ್ರಾಪ್ತೇ ಸುತಾ ಮಮ ಸಮುದ್ಭವಾಃ ।
ಯನ್ನ ಸಂಭಾಷಸಿ ಪ್ರೀತ್ಯಾ ಧರ್ಮಶಾಸ್ತ್ರಂ ನವೇತ್ಸಿ ಕಿಂ ॥ ೧೭ ॥
ಋತುಸ್ನಾತಾಂ ತು ಯೋ ಭಾರ್ಯಾಂ ಸನ್ನಿಧೌ ನೋಪಗಚ್ಛತಿ ।
ಘೋರಾಯಾಂ ಭ್ರೂಣಹತ್ಯಾಯಾಂ ಯುಜ್ಯತೇ ನಾಽತ್ರ ಸಂಶಯಃ ॥ ೧೮ ॥
ತಸ್ಯ ತದ್ವಚನಂ ಶ್ರುತ್ವಾ ಸಲಜ್ಜೋ ರಾತ್ರಿನಾಯಕಃ ।
ಪ್ರೋವಾಚಾಽಧೋಮುಖೋ ದಕ್ಷಂ ಪ್ರಕರಿಷ್ಯೇ ವಚಸ್ತವ ॥ ೧೯ ॥

---

೧೩. ಆದುದರಿಂದ ನಿಶ್ಚಯವಾಗಿಯೂ ನಿನ್ನ ಮುಂದೆ ಬೇಗನೆ ಅಗ್ನಿಯನ್ನು ಪ್ರವೇಶಿಸಿ ಪ್ರಾಣವನ್ನು ತ್ಯಜಿಸುವೆವು.

೧೪. ಸೂತನು ಹೇಳುತ್ತಾನೆ:—ಅವರ ಆ ಮಾತನ್ನು ಕೇಳಿ ದುಃಖಗೊಂಡ ದಕ್ಷನು ತಾನೇ ಅವರನ್ನೆಲ್ಲ ಕರೆದುಕೊಂಡು ಚಂದ್ರನೆಡೆಗೆ ಹೋದನು.

೧೫. ಅವನು ಆ ತನ್ನ ಮಕ್ಕಳ ಮುಂದೆ ಚಂದ್ರನನ್ನು ಬಹುವಾಗಿ ಕಠಿನ ವಾಕ್ಕುಗಳಿಂದ ಗದರಿಸುತ್ತ ಇಂತೆಂದನು.

೧೬. ನೀಚನಾದ ನಿಶಾಕರನೆ! ಸಜ್ಜನರಿಗನರ್ಹವೂ, ಧರ್ಮಶಾಸ್ತ್ರದಿಂದ ನಿಂದಿತವೂ ಆದ ಈ ಕೆಲಸವನ್ನು ಮಾಡುವುದು ನಿನಗುಚಿತವೇ?

೧೭. ಋತುಕಾಲದಲ್ಲಿಯೂ ನನ್ನ ಪುತ್ರಿಯರನ್ನು ನೀನು ಮಾತಾಡಿಸುತ್ತಿಲ್ಲವಷ್ಟೆ. ನಿನಗೆ ಧರ್ಮಶಾಸ್ತ್ರವು ತಿಳಿಯದೇ?

೧೮. ಹತ್ತಿರದಲ್ಲಿರುವ ಪತಿಯು ಋತುಸ್ನಾತಳಾದ ಪತ್ನಿಯನ್ನು ಸೇರದಿದ್ದರೆ ಭಯಂಕರವಾದ ಶಿಶುಹತ್ಯೆಯಿಂದುಂಟಾಗುವ ದೋಷದಿಂದ ಗ್ರಸ್ತನಾಗುವನು.

೧೯. ಚಂದ್ರನು ದಕ್ಷನ ಆ ಮಾತನ್ನು ಕೇಳಿ ಲಜ್ಜಿತನಾಗಿ ಮುಖವನ್ನು ತಗ್ಗಿಸಿಕೊಂಡು ನಿನ್ನ ಮಾತನ್ನು ನಡೆಯಿಸುವೆನೆಂದನು.

ತತೋ ಹೃಷ್ಟಮನಾ ದಕ್ಷಃ ಸುತಾಃ ಸರ್ವಾ ಹಿಮದ್ಯುತೇ ।
ನಿವೇದ್ಯಾಮಂತ್ರ್ಯ ತಂ ಪಶ್ಚಾಜ್ಜಗಾಮ ನಿಜಮಂದಿರಂ ॥ ೨೦ ॥
ಚಂದ್ರೋಽಪಿ ಪೂರ್ವವತ್ಸರ್ವಾಸ್ತಾಃ ಪರಿತ್ಯಜ್ಯ ದಕ್ಷಜಾಃ ।
ರೋಹಿಣ್ಯಾ ಸಹ ಸಂಸರ್ಗಂ ಪ್ರಚಕಾರಾನುರಾಗತಃ ॥ ೨೧ ॥
ಅಥ ತಾ ದುಃಖಿತಾ ಭೂಯೋ ಜಗ್ಮುರ್ಯತ್ರ ಪಿತಾ ಸ್ಥಿತಃ ।
ಪ್ರೋಚುಶ್ಚ ಬಾಷ್ಪಪೂರ್ಣಾಕ್ಷ್ಯಾಸ್ತತ್ಕಾಲಸದೃಶಂ ವಚಃ ॥ ೨೨ ॥
ಏತತ್ತಾತ ಮಹದ್ದುಃಖಮಸ್ಮಾಕಂ ವರ್ತತೇ ಹೃದಿ ।
ಯದ್ದೌರ್ಭಾಗ್ಯಂ ಪ್ರಸಂಜಾತಂ ಸರ್ವಸ್ತ್ರೀಜನಗರ್ಹಿತಂ ॥ ೨೩ ॥
ಯತ್ಪ್ರಯತ್ನಸ್ತ್ವಂ ಕೃತಸ್ತೇನ ಕಾಮುಕೇನ ದುರಾತ್ಮನಾ ।
ವ್ಯರ್ಥಶ್ರಮೋಽಪ್ರಮಾಣೇವ ಕೃತೇಽಸ್ಮಾಕಂ ಗತಃಸ್ವಯಂ ॥ ೨೪ ॥
ತದ್ದುಃಖಂ ನ ವಯಂ ಶಕ್ತಾ ಹೃದಿ ಧರ್ತುಂ ಕಥಂಚನ ।
ರಮತೇ ಸ ಹಿ ರೋಹಿಣ್ಯಾ ಚಂದ್ರಮಾಃ ಸಹಿತೋಽನಿಶಂ ॥ ೨೫ ॥
ವಿಶೇಷಾತ್ತವ ವಾಕ್ಯೇನ ನಿಷಿದ್ಧೋ ರಾತ್ರಿನಾಯಕಃ ।
ಅನುಜ್ಞಾಂ ದೇಹಿ ತಸ್ಮಾತ್ತ್ವಮಸ್ಮಾಕಂ ತತ್ರ ಸಾಂಪ್ರತಂ ।
ದೌರ್ಭಾಗ್ಯದುಃಖಸಂತಪ್ತಾಸ್ತ್ಯಜಾಮೋ ಯೇನ ಜೀವಿತಂ ॥ ೨೬ ॥

---

೨೦. ಬಳಿಕ ದಕ್ಷನು ಸಂತೋಷಗೊಂಡು ಆ ಪುತ್ರಿಯರನ್ನೆಲ್ಲಾ ಚಂದ್ರನಿಗೆ ಒಪ್ಪಿಸಿ ಅವನನ್ನು ಕೇಳಿಕೊಂಡು ತನ್ನ ಮನೆಗೆ ಹೋದನು.

೨೧. ಚಂದ್ರನೂ ಹಿಂದಿನಂತೆಯೇ ಆ ದಕ್ಷಸುತೆಯರನ್ನೆಲ್ಲ ತ್ಯಜಿಸಿ ರೋಹಿಣಿ ಯೊಡನೆಯೆ ಪ್ರೀತಿಯಿಂದ ಸೇರಿ ಸುಖಿಸುತ್ತಿದ್ದನು.

೨೨. ಮರಳಿ ಆ ದಕ್ಷಕನ್ಯೆಯರು ದುಃಖಗೊಂಡು ತಂದೆಯೆಡೆಗೆ ಹೋಗಿ ಕಣ್ಣೀರನ್ನು ಸುರಿಸುತ್ತ ಆ ಕಾಲಕ್ಕೆ ತಕ್ಕಂತೆ ಮಾತನಾಡಿದರು.

೨೩. ಅಪ್ಪ! ನಮಗೆ ಸಕಲರಿಂದಲೂ ನಿಂದ್ಯವಾದ ದೌರ್ಭಾಗ್ಯವುಂಟಾಗಿರು ವುದರಿಂದ ಮನಸ್ಸಿನಲ್ಲಿ ಅತಿಶಯ ದುಃಖವುಂಟಾಗಿದೆ.

೨೪. ದುರಾತ್ಮನೂ, ಕಾಮುಕನೂ ಆದ ಆ ಚಂದ್ರನೊಡನೆ ನೀನು ನಮಗಾಗಿ ಮಾಡಿದ ಪ್ರಯತ್ನವು ನಿಷ್ಫಲವಾಯಿತು. ಅವನು ಅಪ್ರಾಮಾಣಿಕ ನಾದನು.

೨೫–೨೬. ನಿನ್ನ ಮಾತಿನಿಂದ ನಿಷಿದ್ಧನಾದ ಆ ಚಂದ್ರನು ಆ ರೋಹಿಣಿ ಯೊಡನೆ ಯಾವಾಗಲೂ ಕ್ರೀಡಿಸುತ್ತಿರುವುದರಿಂದ ನಮಗಾದ ದುಃಖವನ್ನು ಸಹಿಸಲು ನಾವು ಶಕ್ತರಲ್ಲ. ಆದುದರಿಂದ ನೀನು ನಮಗೆ ಈಗ ಅನುಜ್ಞೆಯನ್ನು ಕೊಡು. ದುಃಖಗೊಂಡ ನಾವು ಪ್ರಾಣವನ್ನು ತ್ಯಜಿಸುವೆವು.

ಸೂತ ಉವಾಚ :—

ತಾಸಾಂ ತದ್ವಚನಂ ಶ್ರುತ್ವಾ ದಕ್ಷಃ ಕೋಪಸಮನ್ವಿತಃ ।
ಶಶಾಪ ಶರ್ವರೀನಾಥಂ ಗತ್ವಾ ತತ್ಸನ್ನಿಧೌ ತತಃ ॥ ೨೭ ॥
ಯಸ್ಮಾತ್ಪಾಪ ನ ಮೇ ವಾಕ್ಯಂ ತ್ವಯಾ ಧರ್ಮಸಮನ್ವಿತಂ ।
ಕೃತಂ ತಸ್ಮಾತ್ಕ್ಷಯವ್ಯಾಧಿಸ್ತ್ವಾಂ ಗ್ರಸಿಷ್ಯತಿ ದಾರುಣಃ ॥ ೨೮ ॥
ಏವಮುಕ್ತ್ವಾ ಯಯೌ ದಕ್ಷಶ್ಚಂದ್ರೋಽಪಿ ದ್ವಿಜಸತ್ತಮಾಃ ।
ತತ್ಕ್ಷಣಾದ್ಯಕ್ಷ್ಮಣಾಶ್ಲಿಷ್ಟಃ ಕ್ಷಯಂ ಯಾತಿ ದಿನೇ ದಿನೇ ॥ ೨೯ ॥
ತತೋಽಸೌ ಕೃಶತಾಂ ಪ್ರಾಪ್ತಃ ಸಂಪರಿತ್ಯಜ್ಯ ರೋಹಿಣೀಂ ।
ಅಶಕ್ತಃ ಸೇವಿತುಂ ಕಾಮಂ ಬಭ್ರಾಮ ಜಗತೀತಲೇ ॥ ೩೦ ॥
ಕ್ಷಯವ್ಯಾಧಿಪ್ರಣಾಶಾಯ ಪೃಚ್ಛಮಾನಶ್ಚಿಕಿತ್ಸಕಾನ್ ।
ಔಷಧಾನಿ ವಿಚಿತ್ರಾಣಿ ಪ್ರಕುರ್ವಾಣೋ ಜಿತೇಂದ್ರಿಯಃ ॥ ೩೧ ॥
ತಥಾಽಪಿ ಮುಚ್ಯತೇ ನೈವ ಯಕ್ಷ್ಮಣಾ ಸ ನಿಶಾಪತಿಃ ।
ದಕ್ಷಶಾಪೇನ ರೌದ್ರೇಣ ಕ್ಷಯಂ ಯಾತಿ ದಿನೇ ದಿನೇ ॥ ೩೨ ॥
ತತೋ ವೈರಾಗ್ಯಮಾಪನ್ನಸ್ತೀರ್ಥಯಾತ್ರಾಪರಾಯಣಃ ।
ಬಭೂವ ಶ್ರದ್ಧಯಾ ಯುಕ್ತಸ್ತ್ಯಕ್ತ್ವಾ ಭೇಷಜಮುತ್ತಮಂ ॥ ೩೩ ॥

---

೨೭. ಸೂತನು ಹೇಳುತ್ತಾನೆ:—ಬಳಿಕ ದಕ್ಷನು ಮಕ್ಕಳ ಆ ಮಾತನ್ನು ಕೇಳಿ ಕುಪಿತನಾಗಿ ಅವನನ್ನು ಸಮೀಪಿಸಿ ಹೀಗೆ ಶಪಿಸಿದನು.

೨೮. "ಪಾಪಿಯೆ! ನೀನು ಧರ್ಮದಿಂದ ಕೂಡಿರುವ ನನ್ನ ಮಾತನ್ನು ನಡೆಸದೆ ಇರುವುದರಿಂದ ನಿನ್ನನ್ನು ದಾರುಣವಾದ ಕ್ಷಯರೋಗವು ಪೀಡಿಸುವುದು."

೨೯. ದ್ವಿಜವರ್ಯರೆ! ದಕ್ಷನು ಹೀಗೆ ನುಡಿದು ಹೊರಟುಹೋದನು. ಚಂದ್ರನೂ ಕೂಡಲೆ ಕ್ಷಯರೋಗಗ್ರಸ್ತನಾಗಿ ಪ್ರತಿದಿನವೂ ಕ್ಷಯಿಸತೊಡಗಿದನು.

೩೦–೩೧. ಬಳಿಕ ಕೃಶನಾಗಿ ಕಾಮವನ್ನು ಸೇವಿಸಲು ಸಮರ್ಥನಾಗದೆ ಆ ಚಂದ್ರನು ರೋಹಿಣಿಯನ್ನು ತ್ಯಜಿಸಿ ಕ್ಷಯರೋಗದ ನಾಶಕ್ಕಾಗಿ ವೈದ್ಯರನ್ನು ಪ್ರಶ್ನಿಸುತ್ತ, ನಾನಾ ವಿಧವಾದ ಔಷಧಗಳನ್ನು ಸೇವಿಸುತ್ತ, ಜಿತೇಂದ್ರಿಯನಾಗಿ ಪ್ರಪಂಚದಲ್ಲೆಲ್ಲ ಅಲೆದನು.

೩೨. ಹಾಗಾದರೂ ಅವನು ಕ್ಷಯರೋಗದಿಂದ ಮುಕ್ತನಾಗದೆ ಭಯಂಕರವಾದ ದಕ್ಷನ ಶಾಪದಿಂದ ದಿನೇದಿನೇ ಕೃಶನಾಗುತ್ತಿದ್ದನು.

೩೩–೩೪. ಬಳಿಕ ಅವನು ವಿರಕ್ತನಾಗಿ ಔಷಧವನ್ನು ಬಿಟ್ಟು ಶ್ರದ್ಧೆಯಿಂದ

ಅಥಾಽಸೌ ಭ್ರಮಮಾಣಸ್ತು ತೀರ್ಥಾನ್ಯಾಯತನಾನಿಚ ।
ಸಂಪ್ರಾಪ್ತೋ ಬ್ರಾಹ್ಮಣಶ್ರೇಷ್ಠಾಃ ಪ್ರಭಾಸಂ ಕ್ಷೇತ್ರಮುತ್ತಮಂ ॥ ೩೪ ॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಪ್ರಭಾಸಂ ವೀಕ್ಷ್ಯ ರಾತ್ರಿಪಃ ।
ಯಾವತ್ಸಂಪ್ರಸ್ಥಿತೋಽನ್ಯತ್ರ ತಾವದಗ್ರೇ ವ್ಯವಸ್ಥಿತಂ ॥ ೩೫ ॥
ಅಪಶ್ಯದ್ರೋಮಕಂ ನಾಮ ಸ ಮುನಿಂ ಶಂಸಿತವ್ರತಂ ।
ತಪೋವೀರ್ಯಸಮೋಪೇತಂ ಸರ್ವಸತ್ವಾನುಕಂಪಕಂ ॥ ೩೬ ॥
ತಂ ದೃಷ್ಟ್ವಾ ಸ ಪ್ರಣಮ್ಯೋಚ್ಚೈಸ್ತತಃ ಪ್ರೋವಾಚ ಸಾದರಂ ।
ಕ್ಷಯವ್ಯಾಧಿಯುತಶ್ಚಂದ್ರೋ ನಿರ್ವೇದಾದ್ದ್ವಿಜಸತ್ತಮಾಃ ॥ ೩೭ ॥
ಪರಿಕ್ಷೀಣೋಽಸ್ಮಿ ವಿಪ್ರೇಂದ್ರ ಕ್ಷಯವ್ಯಾಧಿಪ್ರಭಾವತಃ ।
ತಸ್ಮಾತ್ಕುರು ಪ್ರತೀಕಾರಮಹಂ ತ್ವಾಂ ಶರಣಂ ಗತಃ ॥ ೩೮ ॥
ಮಯಾ ಚಿಕಿತ್ಸಕಾಃ ಪೃಷ್ಟಾಸ್ತೈರುಕ್ತಂ ಭೇಷಜಂ ಕೃತಂ ।
ಅನೇಕಧಾ ಮಹಾಭಾಗ ಪರಿಕ್ಷೀಣೋ ದಿನೇ ದಿನೇ ॥ ೩೯ ॥
ಯದಿ ನೈವೋಪದೇಶಂ ಮೇ ಕಂಚಿತ್ತ್ವಂ ಸಂಪ್ರದಾಸ್ಯಸಿ ।
ವ್ಯಾಧಿನಾಶಾಯ ತತ್ತೇನ ತ್ಯಕ್ಷ್ಯಾಮ್ಯದ್ಯ ಕಲೇವರಂ ॥ ೪೦ ॥

---

ತೀರ್ಥಯಾತ್ರಾನಿರತನಾದನು. ಅವನು ತೀರ್ಥ, ದೇವಾಲಯಗಳಲ್ಲಿ ಸಂಚರಿಸುತ್ತ ಪ್ರಭಾಸಕ್ಷೇತ್ರಕ್ಕೆ ಬಂದನು.

೩೫–೩೬. ಚಂದ್ರನು ಅಲ್ಲಿ ಮಿಂದು ಶುದ್ಧನಾಗಿ ಬೇರೆ ಕಡೆಗೆ ಹೊರಡುವಷ್ಟರಲ್ಲಿ ಮುಂದೆ ನಿಂತಿರುವವನೂ, ತಪಸ್ಸಾಮರ್ಥ್ಯದಿಂದ ಕೂಡಿರುವವನೂ, ಸಕಲ ಪ್ರಾಣಿಗಳಲ್ಲಿ ದಯೆಯುಳ್ಳವನೂ, ಕಠಿನ ವ್ರತವನ್ನಾಚರಿಸುವವನೂ ಆಗಿರುವ ರೋಮಕನೆಂಬ ಮುನಿವರ್ಯನನ್ನು ನೋಡಿದನು.

೩೭. ದ್ವಿಜವರ್ಯರೆ! ಕ್ಷಯರೋಗಗ್ರಸ್ತನಾದ ಚಂದ್ರನು ಆ ಮುನಿಯನ್ನು ಕುರಿತು ವೈರಾಗ್ಯದಿಂದ ಹೀಗೆಂದನು.

೩೮. "ಬ್ರಾಹ್ಮಣವರ್ಯನೆ! ನಾನು ಕ್ಷಯರೋಗದ ಪ್ರಭಾವದಿಂದ ಕ್ಷೀಣನಾಗಿರುವೆನು. ಆದುದರಿಂದ ಇದಕ್ಕೆ ಪ್ರತಿಕ್ರಿಯೆಯನ್ನು ಮಾಡು. ನಾನು ನಿನ್ನನ್ನು ಮರೆಹೊಕ್ಕಿರುವೆನು.

೩೯. ನಾನು ವೈದ್ಯರನ್ನು ಕೇಳಿದೆನು. ಅವರು ಹೇಳಿದ ಔಷಧವನ್ನು ಅನೇಕ ಬಗೆಯಿಂದ ಸೇವನೆಮಾಡಿದೆನು. ಆದರೂ ಪ್ರತಿನಿತ್ಯವೂ ಕ್ಷೀಣನಾಗುತ್ತಲೇ ಇರುವೆನು.

೪೦. ನೀನು ಈ ನನ್ನ ರೋಗಪರಿಹಾರಕ್ಕೆ ಯಾವ ಉಪದೇಶವನ್ನೂ ಕೊಡದಿದ್ದರೆ ಈಗಲೇ ಈ ದೇಹವನ್ನು ತ್ಯಜಿಸುವೆನು.

ರೋಮಕ ಉವಾಚ :—

ಅನ್ಯಸ್ಯಾಽಪಿ ನಿಶಾನಾಥ ನ ಶಾಪಃ ಕರ್ತುಮನ್ಯಥಾ ।
ಶಕ್ಯತೇ ಕಿಂ ಪುನಸ್ತಸ್ಯ ದಕ್ಷಸ್ಯಾಮಿತತೇಜಸಃ ॥ ೪೧ ॥
ತಸ್ಮಾದತ್ರೋಪದೇಶಂ ತೇ ಪ್ರಯಚ್ಛಾಮಿ ಸುಸಂಮತಂ ।
ಯೇನ ತೇ ಸ್ಯಾದಸಂದಿಗ್ಧಂ ಕ್ಷಯವ್ಯಾಧಿಪರಿಕ್ಷಯಃ ॥ ೪೨ ॥
ನಾಽದೇಯಂ ಕಿಂಚಿದಸ್ತೀಹ ದೇವದೇವಸ್ಯ ಶೂಲಿನಃ ।
ಸಂಪ್ರಹೃಷ್ಟಸ್ಯ ತದ್ವಾಕ್ಯಾತ್ತಸ್ಮಾದಾರಾಧಯಸ್ವ ತಂ ॥ ೪೩ ॥
ಅಷ್ಟಷಷ್ಟಿಷು ತೀರ್ಥೇಷು ಸತ್ಯಂ ವಾಸಃ ಸದಾಕ್ಷಿತೌ ।
ತೇಷು ಸಂಸ್ಥಾಪ್ಯ ತಲ್ಲಿಂಗಂ ತಸ್ಯ ನಾಶಾಯ ರಾತ್ರಿಪ ॥ ೪೪ ॥
ಆರಾಧಯ ತತೋ ನಿತ್ಯಂ ಶ್ರದ್ಧಾಪೂತೇನ ಚೇತಸಾ ।
ಸಂಪ್ರಾಪ್ಸ್ಯಸಿ ನ ಸಂದೇಹಃ ಕ್ಷಯವ್ಯಾಧಿಪರಿಕ್ಷಯಂ ॥ ೪೫ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸಂಪ್ರಹೃಷ್ಟೋ ನಿಶಾಪತಿಃ ।
ತಸ್ಮಿನ್ ಪ್ರಭಾಸಕೇ ಕ್ಷೇತ್ರೇ ದಿವ್ಯಲಿಂಗಾನಿ ಶೂಲಿನಃ ।
ಸಂಸ್ಥಾಪ್ಯ ಪೂಜಯಾಮಾಸ ಸ್ವನಾಮಾಂಕಾನಿ ಭಕ್ತಿತಃ ॥ ೪೬ ॥

---

೪೧. ರೋಮಕನು ಹೇಳುತ್ತಾನೆ:—ಚಂದ್ರ! ಇತರ ಮಾನವರ ಶಾಪವನ್ನೂ ವ್ಯತ್ಯಾಸಗೊಳಿಸಲು ಸಾಧ್ಯವಿಲ್ಲ. ಅತಿ ತೇಜಸ್ವಿಯಾದ ದಕ್ಷನ ಶಾಪವಿನ್ನೇನು.

೪೨. ಆದುದರಿಂದ ನಿನಗೆ ಇಲ್ಲಿ ಇಷ್ಟವಾದ ಉಪದೇಶವನ್ನೀಯುವೆನು. ಅದರಿಂದ ನಿನ್ನ ಕ್ಷಯರೋಗವು ಪರಿಹಾರವಾಗುವುದು.

೪೩. ಈ ಲೋಕದಲ್ಲಿ ಸಂತುಷ್ಟನಾದ ಮಹೇಶ್ವರನಿಗೆ ಕೊಡಲನರ್ಹವಾದ ವರವಾವುದೂ ಇರುವುದಿಲ್ಲ. ಆದುದರಿಂದ ಅವನನ್ನು ಆರಾಧಿಸು.

೪೪—೪೫. ಆ ಮಹೇಶ್ವರನು ಭೂಮಿಯಲ್ಲಿರುವ ಅರುವತ್ತೆಂಟು ತೀರ್ಥಗಳಲ್ಲಿ ನೆಲಸಿರುವನು. ಕ್ಷಯರೋಗದ ಪರಿಹಾರಕ್ಕಾಗಿ ಅವುಗಳಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಶ್ರದ್ಧೆಯಿಂದ ನಿತ್ಯವೂ ಆರಾಧಿಸು. ಅದರಿಂದ ನಿಜವಾಗಿಯೂ ಕ್ಷಯರೋಗವು ಪರಿಹಾರವಾಗುವುದು.

೪೬. ಸೂತನು ಹೇಳುತ್ತಾನೆ:—ಅವನ ಆ ಮಾತನ್ನು ಕೇಳಿ ಸಂತೋಷಗೊಂಡ ಚಂದ್ರನು ಆ ಪ್ರಭಾಸಕ ಕ್ಷೇತ್ರದಲ್ಲಿ ತನ್ನ ಹೆಸರಿನಿಂದ ಮಹೇಶ್ವರನ ಲಿಂಗಗಳನ್ನು ಸ್ಥಾಪಿಸಿ ಭಕ್ತಿಯಿಂದ ಆರಾಧಿಸಿದನು.

ತತಸ್ತುಷ್ಟೋ ಮಹಾದೇವಸ್ತಸ್ಯ ಸಂದರ್ಶನಂ ಗತಃ ।
ಪ್ರೋವಾಚ ವರದೋಽಸ್ಮೀತಿ ಪ್ರಾರ್ಥಯಸ್ವ ಯಥೇಪ್ಸಿತಂ ॥ ೪೭ ॥

ಚಂದ್ರ ಉವಾಚ :—

ಪರಂ ಕ್ಷೀಣೋಽಸ್ಮಿ ದೇವೇಶ ಯಕ್ಷ್ಮಣಾಽಹಂ ಪದಾಂತಿಕಂ ।
ಪ್ರಾಪ್ತಸ್ತಸ್ಮಾತ್ಪರಿತ್ರಾಹಿ ನಾಽನ್ಯತ್ಸಂಪ್ರಾರ್ಥಯಾಮ್ಯಹಂ ॥ ೪೮ ॥
ತಸ್ಯ ತದ್ವಚನಂ ಶ್ರುತ್ವಾ ಭಗವಾನ್ ವೃಷಭಧ್ವಜಃ ।
ದಕ್ಷಮಾಹೂಯ ತತ್ರೈವ ತತಃ ಪ್ರೋವಾಚ ಸಾದರಂ ॥ ೪೯ ॥
ಏಷ ಚಂದ್ರಸ್ತ್ವಯಾ ಶಪ್ತೋ ಜಾಮಾತಾ ನ ಕೃತಂ ಶುಭಂ ।
ತಸ್ಮಾದನುಗ್ರಹಂ ಚಾಽಸ್ಯ ಮಮ ವಾಕ್ಯಾತ್ಸಮಾಚರ ॥ ೫೦ ॥

ದಕ್ಷ ಉವಾಚ :—

ಮಯಾ ಧರ್ಮ್ಯಮಪಿ ಪ್ರೋಕ್ತೋ ವಾಕ್ಯಮೇಷ ಕುಬುದ್ಧಿಮಾನ್ ।
ನಾಽಕರೋನ್ಮೇ ಪುರಃ ಪ್ರೋಚ್ಯ ಕರಿಷ್ಯಾಮೀತ್ಯಸತ್ಯವಾಕ್ ॥ ೫೧ ॥
ತೇನ ಶಪ್ತಸು ಕೋಪೇನ ಸುತಾರ್ಥೇ ವೃಷಭಧ್ವಜ ।
ಹಾಸ್ಯೇನಾಽಪಿ ಮಯಾ ಪ್ರೋಕ್ತಂ ನಾಽನ್ಯಥಾ ಸಂಪ್ರಜಾಯತೇ ॥ ೫೨ ॥

---

೪೭. ಬಳಿಕ ಸಂತುಷ್ಟನಾದ ಮಹೇಶ್ವರನು ಪ್ರತ್ಯಕ್ಷನಾಗಿ ವರವನ್ನು ಕೊಡುವೆನು. ಅಭೀಷ್ಟವಾದುದನ್ನು ಕೇಳಿಕೋ ಎಂದನು.

೪೮. ಚಂದ್ರನು ಹೇಳುತ್ತಾನೆ:—ದೇವೇಶ! ನಾನು ಕ್ಷಯರೋಗದಿಂದ ಅತ್ಯಂತ ಕೃಶನಾಗಿರುವೆನು. ಆದುದರಿಂದ ನಿನ್ನನ್ನು ಮರೆಹೊಕ್ಕಿದ್ದೇನೆ. ನನ್ನನ್ನು ಕಾಪಾಡು. ಬೇರೆ ಯಾವುದನ್ನೂ ಪ್ರಾರ್ಥಿಸುವುದಿಲ್ಲ.

೪೯. ಪೂಜ್ಯನಾದ ಮಹಾದೇವನು ಆ ಚಂದ್ರನ ಆ ಮಾತನ್ನು ಕೇಳಿ ದಕ್ಷನನ್ನು ಅಲ್ಲಿಗೆ ಕರೆಯಿಸಿ ಪ್ರೀತಿಯಿಂದ ಇಂತೆಂದನು.

೫೦. "ನೀನು ಅಳಿಯನಾದ ಚಂದ್ರನನ್ನು ಶಪಿಸಿರುವುದು ಒಳ್ಳೆಯದಲ್ಲ. ಆದುದರಿಂದ ನನ್ನ ಮಾತನ್ನು ಕೇಳಿ ಅವನಿಗೆ ಅನುಗ್ರಹಮಾಡು."

೫೧. ದಕ್ಷನು ಹೇಳುತ್ತಾನೆ:—ಮಹೇಶ್ವರ! ಈ ದುರ್ಬುದ್ಧಿಯಾದ ಚಂದ್ರನು ನನ್ನ ಧಾರ್ಮಿಕ ವಚನವನ್ನು ಕೇಳಿ ನನ್ನ ಮುಂದೆ ಮಾಡುತ್ತೇನೆಂದು ಹೇಳಿ ಮಾಡದೆ ಅಸತ್ಯವಂತನಾಗಿರುವನು.

೫೨. ಮಹೇಶ್ವರ! ಅದರಿಂದ ಕುಪಿತನಾದ ನಾನು ಮಕ್ಕಳಸಲುವಾಗಿ ಈ ಚಂದ್ರನನ್ನು ಶಪಿಸಿದೆನು. ನಾನು ಹಾಸ್ಯದಿಂದ ನುಡಿದ ಮಾತೂ ವ್ಯತ್ಯಾಸವಾಗುವುದಿಲ್ಲ.

ದೇವದೇವ ಉವಾಚ:—

ಅದ್ಯ ಪ್ರಭೃತಿ ಸರ್ವಾಸ್ತಾಃ ಸುತಾ ಏಷ ನಿಶಾಕರಃ ।
ಸಮಾಃ ಸಂವೀಕ್ಷತೇ ನಿತ್ಯಂ ಮಮ ವಾಕ್ಯಾದಸಂಶಯಂ ॥ ೫೩ ॥
ತಸ್ಮಾತ್ಪಕ್ಷಂ ಕ್ಷಯಂ ಯಾತು ಪಕ್ಷಂ ವೃದ್ಧಿಂ ಪ್ರಗಚ್ಛತು ।
ಯೇನ,ತೇ ಸ್ಯಾದ್ವಚಃ ಸತ್ಯಂ ಮತ್ಪ್ರಸಾದಸಮನ್ವಿತಂ ॥ ೫೪ ॥
ತತೋ ದಕ್ಷಸ್ತಥೇತ್ಯುಕ್ತ್ವಾ ಜಗಾಮ ನಿಜಮಂದಿರಂ ।
ದೇವೋಽಪಿ ಶಂಕರೋ ಭೂಯಃ ಪ್ರೋವಾಚ ಶಶಲಾಂಛನಂ ॥ ೫೫ ॥
ಭೂಯೋಽಪಿ ಪ್ರಾರ್ಥಯಾಽಭೀಷ್ಟಂ ಮತ್ತಸ್ತ್ವಂ ಶಶಲಾಂಛನ ।
ಯೇನ ಸರ್ವಂ ಪ್ರಯಚ್ಛಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೫೬ ॥

ಚಂದ್ರ ಉವಾಚ:—

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ತತ್ಸ್ಥಾಪಿತೇಷು ಲಿಂಗೇಷು ಮಯಾ ಸರ್ವೇಷು ಸರ್ವದಾ ।
ಸನ್ನಿಧಾನಂ ತ್ವಯಾ ಕಾರ್ಯಂ ಲೋಕಾನಾಂ ಹಿತಕಾಮ್ಯಯಾ ॥ ೫೭ ॥

ದೇವ ಉವಾಚ:—

ಅಷ್ಟಷಷ್ಟಿಷು ಲಿಂಗೇಷು ಸ್ಥಾಪಿತೇಷು ತ್ವಯಾ ವಿಭೋ ।
ಸೋಮವಾರೇಣ ಸಾನ್ನಿಧ್ಯಂ ಕರಿಷ್ಯೇ ವಚನಾತ್ತವ ॥ ೫೮ ॥

---

೫೩. ಮಹೇಶ್ವರನು ಹೇಳುತ್ತಾನೆ:—ಇದು ಮೊದಲ್ಗೊಂಡು ಈ ಚಂದ್ರನು ನನ್ನ ಮಾತಿನಿಂದ ನಿನ್ನ ಮಕ್ಕಳನ್ನೆಲ್ಲ ಸಮವಾಗಿ ನೋಡುವನು.

೫೪. ಆದುದರಿಂದ ಇವನು ಒಂದು ಪಕ್ಷ ವೃದ್ಧಿಯನ್ನೂ, ಒಂದು ಪಕ್ಷ ಕಾಲ ಕ್ಷಯವನ್ನೂ ಹೊಂದಲಿ. ಅದರಿಂದ ನನ್ನ ಅನುಗ್ರಹದೊಡನೆ ನಿನ್ನ ಮಾತೂ ನಿಜವಾಗುವುದು.

೫೫. ಬಳಿಕ ದಕ್ಷನು ಹಾಗೆಯೇ ಆಗಲೆಂದು ಹೇಳಿ ತನ್ನ ಮನೆಗೆ ತೆರಳಿದನು. ಶಂಕರನು ಮರಳಿ ಆ ಚಂದ್ರನನ್ನು ಕುರಿತು ಇಂತೆಂದನು.

೫೬. "ಚಂದ್ರ! ನೀನು ಮರಳಿ ನನ್ನಿಂದ ಇಷ್ಟಾರ್ಥವನ್ನು ಬೇಡಿಕೋ. ಅದು ದುರ್ಲಭವಾಗಿದ್ದರೂ ಕೊಡುವೆನು."

೫೭. ಚಂದ್ರನು ಹೇಳುತ್ತಾನೆ:—ಶಂಕರ! ನೀನು ಸಂತುಷ್ಟನಾಗಿ ನನಗೆ ವರವನ್ನು ಕೊಡುವುದಾದರೆ ನಾನು ಸ್ಥಾಪಿಸಿದ ಲಿಂಗಗಳಲ್ಲಿ ಯಾವಾಗಲೂ ಜನರ ಹಿತಕ್ಕಾಗಿ ಸನ್ನಿಹಿತನಾಗಿರು.

೫೮. ಶಂಕರನು ಹೇಳುತ್ತಾನೆ:—ಸೋಮವಾರದ ದಿನ ನೀನು ಸ್ಥಾಪಿಸಿರುವ ಅರುವತ್ತೆಂಟು ಲಿಂಗಗಳಲ್ಲಿ ನಿನ್ನ ಮಾತಿನಿಂದ ಸನ್ನಿಹಿತನಾಗಿರುವೆನು.

ಏವಮುಕ್ತ್ವಾ ಸ ದೇವೇಶಸ್ತತಶ್ಚಾದರ್ಶನಂ ಗತಃ ।
ಚಂದ್ರೋಽಪಿ ಹರ್ಷಸಂಯುಕ್ತಃ ಸಮಂ ಪಶ್ಯತಿ ತಾಸ್ತತಃ ॥ ೫೯ ॥
ಸುತಾ ದಕ್ಷಸ್ಯ ವಿಪ್ರೇಂದ್ರಾಃ ಶಂಕರಸ್ಯ ವಚಃ ಸ್ಮರನ್ ।
ತತೋ ಹರ್ಷಸಮಾಯುಕ್ತಾ ಬಭೂವುಸ್ತದನಂತರಂ ॥ ೬೦ ॥
ಏವಂ ಸೋಮೇಶ್ವರಾಸ್ತತ್ರ ಬಭೂವುರ್ದ್ವಿಜಸತ್ತಮಾಃ ।
ಅಷ್ಟಷಷ್ಟಿಷು ತೀರ್ಥೇಷು ತಥಾಽನ್ಯೇಷು ತತಃ ಪರಂ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸೋಮನಾಥೋತ್ಪತ್ತಿಮಾಹಾತ್ಮ್ಯವರ್ಣನಂ"
ನಾಮ ತ್ರಿಷಷ್ಟಿತಮೋಽಧ್ಯಾಯಃ

---

೫೯. ಆ ಶಂಕರನು ಹೀಗೆ ಹೇಳಿ ಅದೃಶ್ಯನಾದನು. ಚಂದ್ರನೂ ಸಂತೋಷದಿಂದ ಆ ದಕ್ಷಸುತೆಯರನ್ನು ಸಮವಾಗಿ ಕಾಣುತ್ತಿದ್ದನು.

೬೦. ಬ್ರಾಹ್ಮಣವರ್ಯರೆ! ದಕ್ಷನ ಮಕ್ಕಳು ಶಂಕರನ ಮಾತನ್ನು ಸ್ಮರಿಸುತ್ತ ಹರ್ಷಗೊಂಡರು.

೬೧. ಹೀಗೆ ಆ ಅರುವತ್ತೆಂಟು ತೀರ್ಥಗಳಲ್ಲಿಯೂ, ಇತರ ತೀರ್ಥಗಳಲ್ಲಿಯೂ ಸೋಮೇಶ್ವರರು ಆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸೋಮನಾಥೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ಅರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಃಷಷ್ಟಿತಮೋಽಧ್ಯಾಯಃ

## ಚಮತ್ಕಾರೀದುರ್ಗಾಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಚಮತ್ಕಾರೀಪುರಾ ದೇವೀ ತತ್ರೈವಾಸ್ತಿ ದ್ವಿಜೋತ್ತಮಾಃ ।
ಚಮತ್ಕಾರ ನರೇಂದ್ರೇಣ ಸ್ಥಾಪಿತಾ ಶ್ರದ್ಧಯಾ ಪುರಾ ॥ ೧ ॥
ಯಯಾ ಸ ಮಹಿಷಃ ಪೂರ್ವಂ ನಿಹತೋ ದಾನವೋ ರಣೇ ।
ಕೌಮಾರವ್ರತಧಾರಿಣ್ಯಾ ಮಾಯಾ ಶತಸಹಸ್ರಧೃಕ್ ॥ ೨ ॥
ಯದಾ ತನ್ನಿರ್ಮಿತಂ ತತ್ರ ಪುರಂ ತೇನ ಮಹಾತ್ಮನಾ ।
ತಸ್ಯ ಸಂರಕ್ಷಣಾರ್ಥಾಯ ತದಾ ಸಾ ಸ್ಥಾಪಿತಾ ದ್ವಿಜಾಃ ॥ ೩ ॥
ಪುರಸ್ಯ ತಸ್ಯ ರಕ್ಷಾರ್ಥಂ ತಥಾ ತತ್ಪುರವಾಸಿನಾಂ ।
ಸರ್ವೇಷಾಂ ಬ್ರಾಹ್ಮಣೇಂದ್ರಾಣಾಂ ಭಕ್ತ್ಯಾ ಭಾವಿತಚೇತಸಾಂ ॥ ೪ ॥
ಯಸ್ತಾಮಭ್ಯರ್ಚಯೇತ್ಸಮ್ಯಙ್ಮಹಾನವಮಿವಾಸರೇ ।
ಕೃತ್ಸ್ನಂ ಸಂವತ್ಸರಂ ತಸ್ಯ ನ ಭಯಂ ಜಾಯತೇ ಕ್ವಚಿತ್ ॥ ೫ ॥
ಭೂತಪ್ರೇತ ಪಿಶಾಚೇಭ್ಯಃ ಶತ್ರುತಶ್ಚ ವಿಶೇಷತಃ ।
ರೋಗೇಭ್ಯಸ್ತಸ್ಕರೇಭ್ಯಶ್ಚ ದುಷ್ಟೇಭ್ಯೋಽನ್ಯೇಭ್ಯ ಏವ ಚ ॥ ೬ ॥

---

## ಕನ್ನಡದ ಅನುವಾದ

### ಚಮತ್ಕಾರೀದುರ್ಗಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ದ್ವಿಜವರ್ಯರೆ ! ಹಿಂದೆ ಚಮತ್ಕಾರರಾಜನು ಶ್ರದ್ಧೆಯಿಂದ ಸ್ಥಾಪಿಸಿರುವ ಚಮತ್ಕಾರೀ ದೇವಿಯು ಅಲ್ಲಿ ನೆಲಸಿರುವಳು.

೨. ಹಿಂದೆ ಕೌಮಾರವ್ರತವನ್ನು ಧರಿಸಿರುವ ಅವಳು ಅನೇಕ ಮಾಯೆಯುಳ್ಳ ಮಹಿಷ ದಾನವನನ್ನು ಕೊಂದಿರುವಳು.

೩–೪. ದ್ವಿಜರೆ ! ಆ ಚಮತ್ಕಾರರಾಜನು ತಾನು ನಿರ್ಮಿಸಿದ ಪಟ್ಟಣ, ಅಲ್ಲಿ ವಾಸಿಸುವ ಜ್ಞಾನಿಗಳಾದ ಸಮಸ್ತ ಬ್ರಾಹ್ಮಣರು ಇವರೆಲ್ಲರ ರಕ್ಷಣೆಗಾಗಿ ಆ ದೇವಿಯನ್ನು ಅಲ್ಲಿ ಪ್ರತಿಷ್ಠೆಮಾಡಿದನು.

೫–೬. ಮಹಾನವಮಿಯ ದಿನ ಆ ದೇವಿಯನ್ನು ಅರ್ಚಿಸಿದ ಮಾನವನಿಗೆ ಭೂತ, ಪ್ರೇತ, ಪಿಶಾಚಗಳಿಂದಲೂ, ಶತ್ರುಗಳಿಂದಲೂ, ರೋಗಗಳಿಂದಲೂ, ಕಳ್ಳರು, ಇತರ ದುಷ್ಟರು ಇವರಿಂದಲೂ ಒಂದು ವರ್ಷಕಾಲ ಭಯವುಂಟಾಗುವುದಿಲ್ಲ.

ಯಂ ಯಂ ಕಾಮಮಭಿಧ್ಯಾಯಂಛುಕ್ಲಾಷ್ಟಮ್ಯಾಂ ನರಃ ಶುಚಿಃ ।
ತಾಂ ಪೂಜಯತಿ ಸದ್ಭಕ್ತ್ಯಾ ಸ ತಮಾಪ್ನೋತ್ಯಸಂಶಯಂ ॥ ೭ ॥
ನಿಷ್ಕಾಮಃ ಸುಖಮಾಪ್ನೋತಿ ಮೋಕ್ಷಂ ನಾಽಸ್ತ್ಯತ್ರ ಸಂಶಯಃ ।
ತಸ್ಯಾ ದೇವ್ಯಾಃ ಪ್ರಸಾದೇನ ಸತ್ಯಮೇತನ್ಮಯೋದಿತಂ ॥ ೮ ॥
ತಾಮಾರಾಧ್ಯ ಗತಾಃ ಪೂರ್ವಂ ಸಿದ್ಧಿಂ ಭೂರಿಮಹೀಭುಜಃ ।
ಬ್ರಾಹ್ಮಣಾಶ್ಚ ತಥಾಽನ್ಯೇಽಪಿ ಯೋಗಿನಃ ಪರಮೇಶ್ವರೀಂ ॥ ೯ ॥
ಯಸ್ತಸ್ಯಾಃ ಶ್ರದ್ಧಯೋಪೇತಃ ಪ್ರಕರೋತಿ ಪ್ರದಕ್ಷಿಣಾಂ ।
ನಿತ್ಯಂ ಸಂವತ್ಸರಂ ಯಾವತ್ತಿರ್ಯಗ್ಯೋನೌ ನ ಸ ವ್ರಜೇತ್ ॥ ೧೦ ॥
ತಸ್ಯಾ ಆಯತನೇ ಪೂರ್ವಮಾಶ್ಚರ್ಯಮಭವನ್ಮಹತ್ ।
ಯತ್ತದ್ವಃ ಕೀರ್ತಯಿಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೧೧ ॥
ಆಸೀಚ್ಚಿತ್ರರಥೋ ನಾಮ ಪೂರ್ವಂ ಪಾರ್ಥಿವಸತ್ತಮಃ ।
ದಶಾರ್ಣಾಧಿಪತಿಃ ಖ್ಯಾತಃ ಸರ್ವಶತ್ರುನಿಬರ್ಹಣಃ ॥ ೧೨ ॥
ಶುಕ್ಲಾಷ್ಟಮ್ಯಾಂ ಸದಾ ಭಕ್ತ್ಯಾ ಸ ತಸ್ಯಾಃ ಶ್ರದ್ಧಯಾನ್ವಿತಃ ।
ಅಷ್ಟೋತ್ತರಶತಂ ಯಾವತ್ಪ್ರಚಕಾರ ಪ್ರದಕ್ಷಿಣಾಂ ॥ ೧೩ ॥
ತತಃ ಪ್ರಣಮ್ಯ ತಾಂ ದೇವೀಂ ಸಂಪ್ರಯಾತಿ ಪುನರ್ಗೃಹಂ ।
ಸೈನ್ಯೇನ ಚತುರಂಗೇಣ ಸಮಂತಾತ್ಪರಿವಾರಿತಃ ॥ ೧೪ ॥

---

೭. ನರನು ಶುಕ್ಲಪಕ್ಷದ ಅಷ್ಟಮಿ ದಿನ ಯಾವ ಯಾವ ಇಷ್ಟಾರ್ಥವನ್ನು ಚಿಂತಿಸುತ್ತ ಆ ದೇವಿಯನ್ನು ಭಕ್ತಿಯಿಂದ ಪೂಜಿಸುವನೋ ನಿಶ್ಚಯವಾಗಿಯೂ ಅದನ್ನು ಹೊಂದುವನು.

೮. ನಿಷ್ಕಾಮನು ಆ ದೇವಿಯ ಅನುಗ್ರಹದಿಂದ ಮೋಕ್ಷಸುಖವನ್ನು ಪಡೆಯುವನು. ನಾನು ಹೇಳಿರುವ ಈ ವಿಷಯವು ನಿಶ್ಚಯವು.

೯. ಹಿಂದೆ ಆ ಪರಮೇಶ್ವರಿಯನ್ನು ಪೂಜಿಸಿ ಅನೇಕ ಮಂದಿ ರಾಜರೂ, ಬ್ರಾಹ್ಮಣರೂ, ಇತರ ಯೋಗಿಗಳೂ ಸಿದ್ಧಿಯನ್ನು ಪಡೆದಿರುವರು.

೧೦. ಒಂದು ವರ್ಷಕಾಲ ನಿತ್ಯವೂ ಶ್ರದ್ಧೆಯಿಂದ ಅವಳನ್ನು ಪ್ರದಕ್ಷಿಣೆ ಗೈಯುವವನು ತಿರ್ಯಗ್ಯೋನಿಯನ್ನು ಹೊಂದುವುದಿಲ್ಲ.

೧೧. ಹಿಂದೆ ಅವಳ ಆಲಯದಲ್ಲಿ ನಡೆದ ಆಶ್ಚರ್ಯವನ್ನು ನಿಮಗೆ ಹೇಳುವೆನು. ಅದನ್ನು ಸಾವಧಾನ ಮನಸ್ಸಿನಿಂದ ಕೇಳಿರಿ.

೧೨–೧೪. ಹಿಂದೆ ಶತ್ರುನಾಶಕನೂ, ದಶಾರ್ಣಾಧಿಪತಿಯೂ ಆದ ಚಿತ್ರರಥನೆಂಬ ದೊರೆಯಿದ್ದನು. ಅವನು ಶುಕ್ಲಪಕ್ಷದ ಅಷ್ಟಮಿ ದಿನ ಶ್ರದ್ಧೆಯಿಂದ ಆ ಮಹೇಶ್ವರಿಗೆ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಿ ನಮಸ್ಕರಿಸಿ ಚತುರಂಗ ಸೈನ್ಯದೊಡನೆ ಮನೆಗೆ ಹೋಗುತ್ತಿದ್ದನು.

ಏವಂ ತಸ್ಯ ನರೇಂದ್ರಸ್ಯ ಪ್ರದಕ್ಷಿಣರತಸ್ಯ ಚ ।
ಜಗಾಮ ಸುಮಹಾನ್ಕಾಲೋ ದೇವ್ಯಾ ಭಕ್ತಿರತಸ್ಯ ಚ ॥ ೧೫ ॥
ಕಸ್ಯಚಿತ್ತ್ವಥ ಕಾಲಸ್ಯ ಸ ರಾಜಾ ತತ್ರ ಸಂಗತಃ ।
ಅಪಶ್ಯದ್ಬ್ರಾಹ್ಮಣಶ್ರೇಷ್ಠಾನ್ದೇವೀಗೃಹಸಮಾಶ್ರಿತಾನ್ ॥ ೧೬ ॥
ತತಃ ಪ್ರದಕ್ಷಿಣಾಂ ಕೃತ್ವಾ ತಾಂ ದೇವೀಂ ಸ ಮಹೀಪತಿಃ ।
ಅಗ್ರಸ್ಥಾಂಸ್ತಾನ್ದ್ವಿಜಾನ್ ಸರ್ವಾನ್ನಮಶ್ಚಕ್ರೇ ಸಮಾಹಿತಃ ॥ ೧೭ ॥
ತತಸ್ತೈಃ ಸಹಿತೈಸ್ತತ್ರ ಸಹಾಸೀನಃ ಕಥಾಃ ಶುಭಾಃ ।
ರಾಜರ್ಷೀಣಾಂ ಪುರಾಣಾನಾಂ ವಿಪ್ರರ್ಷೀಣಾಂ ಚಕಾರ ಹ ॥ ೧೮ ॥
ತತಃ ಕಸ್ಮಿನ್ ಕಥಾಂತೇ ಸ ಪೃಷ್ಟಸ್ತೈರ್ದ್ವಿಜಸತ್ತಮೈಃ ।
ಕೌತೂಹಲಸಮೋಪೇತೈರ್ವಿನಯಾಽವನತಃ ಸ್ಥಿತಃ ॥ ೧೯ ॥
ರಾಜನ್ ಪೃಚ್ಛಾಮಹೇ ಸರ್ವೇ ತ್ವಾಂ ವಯಂ ಕೌತುಕಾನ್ವಿತಾಃ ।
ತಸ್ಮಾತ್ಕೀರ್ತಯ ಚೇದ್ಗುಹ್ಯಂ ನ ತತ್ತ್ವವ್ಯವಸ್ಥಿತಂ ॥ ೨೦ ॥
ಮಾಸಿ ಮಾಸಿ ಸದಾಷ್ಟಮ್ಯಾಂ ತ್ವಂ ಶುಕ್ಲಾಯಾಂ ಸುದೂರತಃ ।
ಆಗತ್ಯ ದೇವತಾಯಾಶ್ಚ ಪ್ರಕರೋಷಿ ಪ್ರದಕ್ಷಿಣಾಂ ॥ ೨೧ ॥
ಯತ್ನೇನಾನ್ಯಾಃ ಪರಿತ್ಯಜ್ಯ ಸರ್ವಾಃ ಪೂಜಾದಿಕಾಃ ಕ್ರಿಯಾಃ ।
ನೂನಂ ವೇತ್ಸಿ ಫಲಂ ಕೃತ್ಸ್ನಂ ಯತ್ಪ್ರದಕ್ಷಿಣ ಸಂಭವಂ ॥ ೨೨ ॥

---

೧೫. ಹೀಗೆ ದೇವಿಯಲ್ಲಿ ಭಕ್ತಿಯುಳ್ಳ ಆ ಅರಸನು ಪ್ರದಕ್ಷಿಣೆ ಮಾಡುತ್ತಿರಲು ಬಹಳ ಕಾಲವು ಕಳೆಯಿತು.

೧೬. ಒಂದಾನೊಂದು ದಿನ ಆ ದೊರೆಯು ಅಲ್ಲಿಗೆ ಬಂದು ದೇವೀಗೃಹದಲ್ಲಿರುವ ಬ್ರಾಹ್ಮಣೋತ್ತಮರನ್ನು ಕಂಡನು.

೧೭. ಬಳಿಕ ಅವನು ದೇವಿಗೆ ಪ್ರದಕ್ಷಿಣೆಗೈದು ಮುಂದಿರುವ ಸಕಲ ಬ್ರಾಹ್ಮಣರಿಗೂ ನಮಸ್ಕಾರ ಮಾಡಿದನು.

೧೮. ಅನಂತರ ಆ ಬ್ರಾಹ್ಮಣರೊಡನೆ ಅಲ್ಲಿ ಕುಳಿತು ಹಿಂದಿನ ರಾಜರ್ಷಿ ವಿಪ್ರರ್ಷಿಗಳ ಶುಭಕಥೆಗಳನ್ನು ಹೇಳಿದನು.

೧೯. ಆ ಬ್ರಾಹ್ಮಣರು ಯಾವುದೋ ಒಂದು ಕಥೆಯ ಕೊನೆಯಲ್ಲಿ ವಿನೀತನಾದ ಆ ರಾಜನನ್ನು ಕುತೂಹಲದಿಂದ ಹೀಗೆ ಪ್ರಶ್ನೆಮಾಡಿದರು.

೨೦–೨೨. ದೊರೆಯೆ! ನಾವೆಲ್ಲ ನಿನ್ನನ್ನು ಕುತೂಹಲದಿಂದ ಕೇಳುತ್ತೇವೆ. ಆದುದರಿಂದ ಅದು ರಹಸ್ಯವಲ್ಲದಿದ್ದರೆ ಹೇಳು. ನೀನು ಪ್ರತಿತಿಂಗಳು ಶುಕ್ಲಪಕ್ಷದ ಅಷ್ಟಮೀ ದಿನ ಯಾವಾಗಲೂ ಪೂಜಾದಿ ಇತರ ಕಾರ್ಯಗಳನ್ನು ತ್ಯಜಿಸಿ ದೂರದಿಂದ ಇಲ್ಲಿಗೆ ಬಂದು ಈ ದೇವಿಗೆ ಪ್ರದಕ್ಷಿಣೆ ಮಾಡುತ್ತಿರುವೆ. ಈ ಪ್ರದಕ್ಷಿಣೆಯ ಸಂಪೂರ್ಣಫಲವನ್ನು ನೀನು ನಿಶ್ಚಯವಾಗಿಯೂ ಅರಿತಿರುವೆ.

ರಾಜೋವಾಚ :—

ಸತ್ಯಮೇತದ್ದ್ವಿಜಶ್ರೇಷ್ಠಾ ಯದ್ಭವದ್ಭಿರುದಾಹೃತಂ ।
ರಹಸ್ಯಮಪಿ ವಕ್ತವ್ಯಂ ಯುಷ್ಮಾಕಂ ಸಾಂಪ್ರತಂ ಮಯಾ ॥ ೨೩ ॥
ಅಹಮಾಸ ಶುಕಃ ಪೂರ್ವಮಸ್ಮಿನ್ನಾಯತನೇ ಶುಭೇ ।
ದೇವ್ಯಾಃ ಪಶ್ಚಿಮದಿಗ್ಭಾಗೇ ಕುಲಾಯಕೃತಸಂಶ್ರಯಃ ॥ ೨೪ ॥
ತತ್ರ ನಿರ್ಗಚ್ಛತೋ ನಿತ್ಯಂ ಕುರ್ವತಶ್ಚ ಪ್ರವೇಶನಂ ।
ಪ್ರದಕ್ಷಿಣಾಭವದ್ದೇವ್ಯಾ ನಿತ್ಯಮೇವ ದ್ವಿಜೋತ್ತಮಾಃ ॥ ೨೫ ॥
ತತಃ ಕಾಲೇನ ಮೇ ಮೃತ್ಯುಃ ಸಂಜಾತೋಽತ್ರೈವ ಮಂದಿರೇ ।
ತತ್ಪ್ರಭಾವೇಣ ಸಂಜಾತೋ ರಾಜಾ ಜಾತಿಸ್ಮರೋಽತ್ರ ಹಿ ॥ ೨೬ ॥
ಏತಸ್ಮಾತ್ಕಾರಣಾದ್ದೂರಾತ್ಸಮಭ್ಯೇತ್ಯ ಪ್ರದಕ್ಷಿಣಾಂ ।
ಕರೋಮ್ಯಸ್ಯಾ ದ್ವಿಜಶ್ರೇಷ್ಠಾ ದೇವತಾಯಾಃ ಸಮಾಹಿತಃ ॥ ೨೭ ॥
ಪುರಾ ಭಕ್ತಿವಿಹೀನೇನ ಕುಲಾಯೇ ವಸತಾ ಮಯಾ ।
ಕೃತಾ ಪ್ರದಕ್ಷಿಣಾ ದೇವ್ಯಾಸ್ತೇನ ಜಾತೋಽಸ್ಮಿ ಭೂಪತಿಃ ॥ ೨೮ ॥
ಅಧುನಾ ಶ್ರದ್ಧಯಾ ಯುಕ್ತೋ ಯತ್ಕರೋಮಿ ಪ್ರದಕ್ಷಿಣಾಂ ।
ಕಿಂ ಮೇ ಭವಿಷ್ಯತಿ ಶ್ರೇಯಸ್ತನ್ನ ವೇದ್ಮಿ ದ್ವಿಜೋತ್ತಮಾಃ ॥ ೨೯ ॥

---

೨೩. ರಾಜನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಹೇಳಿರುವುದು ನಿಜ. ಅದು ರಹಸ್ಯವಾಗಿದ್ದರೂ ಈಗ ನಾನು ನಿಮಗೆ ಹೇಳಬೇಕಾಗಿದೆ.

೨೪. ನಾನು ಹಿಂದೆ ಶುಭಕರವಾದ ಈ ದೇವಾಲಯದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಗೂಡನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದೆನು.

೨೫. ದ್ವಿಜವರ್ಯರೆ! ನಿತ್ಯವೂ ನಾನು ಆ ಗೂಡಿನಿಂದ ಹೊರಡುವುದರಿಂದಲೂ, ಪ್ರವೇಶಮಾಡುವುದರಿಂದಲೂ ದೇವಿಗೆ ಪ್ರದಕ್ಷಿಣೆಯಾಗುತ್ತಿತ್ತು.

೨೬. ಬಳಿಕ ಕಾಲಾಂತರದಲ್ಲಿ ನಾನು ಈ ದೇವಾಲಯದಲ್ಲಿ ಮಡಿಯಲು ಆ ಪ್ರದಕ್ಷಿಣೆಯ ಪ್ರಭಾವದಿಂದ ಪೂರ್ವಜನ್ಮದ ಸ್ಮರಣೆಯುಳ್ಳ ರಾಜನಾಗಿ ಜನಿಸಿದೆನು.

೨೭. ಈ ಕಾರಣದಿಂದ ದೂರದಿಂದ ಇಲ್ಲಿಗೆ ಬಂದು ಈ ದೇವತೆಗೆ ಸಾವಧಾನ ಮನಸ್ಸಿನಿಂದ ಪ್ರದಕ್ಷಿಣೆಗೈಯುವೆನು.

೨೮. ಹಿಂದೆ ಗೂಡಿನಲ್ಲಿ ವಾಸಮಾಡುತ್ತಿದ್ದ ನಾನು ಭಕ್ತಿಯಿಲ್ಲದೆ ಈ ದೇವಿಗೆ ಪ್ರದಕ್ಷಿಣೆ ಮಾಡಿದ್ದರಿಂದ ರಾಜನಾಗಿ ಜನಿಸಿದೆನು.

೨೯. ಈಗ ಶ್ರದ್ಧೆಯಿಂದ ಪ್ರದಕ್ಷಿಣೆ ಮಾಡುತ್ತಿರುವೆನು. ಇದಕ್ಕೆ ಯಾವ ಶ್ರೇಯಸ್ಸುಂಟಾಗುವುದೆಂಬುದನ್ನರಿಯೆನು.

ಸೂತ ಉವಾಚ :—

ತಚ್ಛ್ರುತ್ವಾ ತಸ್ಯ ತೇ ವಿಪ್ರಾ ವಿಸ್ಮಯೋತ್ಫುಲ್ಲಲೋಚನಾಃ ।
ಸಾಧುವಾದಂ ತಥಾ ಚಕ್ರುಸ್ತಸ್ಯ ಭೂಪಸ್ಯ ಹರ್ಷಿತಾಃ ॥ ೩೦ ॥
ತತಃ ಸ ಪಾರ್ಥಿವಃ ಸರ್ವಾನ್ ಪ್ರಣಮ್ಯ ದ್ವಿಜಸತ್ತಮಾನ್ ।
ಅನುಜ್ಞಾಪ್ಯ ಯಯೌ ತೂರ್ಣಂ ಸ್ವಗೃಹಾಯ ಸಸೈನಿಕಃ ॥ ೩೧ ॥
ಅಧುನಾ ಶ್ರದ್ಧಯಾ ಯುಕ್ತೋ ಯಃ ಕರೋತಿ ಪ್ರದಕ್ಷಿಣಾಂ ।
ಸರ್ವಪಾಪವಿನಿರ್ಮುಕ್ತೋ ಲಭತೇ ವಾಂಛಿತಂ ಫಲಂ ॥ ೩೨ ॥
ತತಃ ಪ್ರಭೃತಿ ತೇ ವಿಪ್ರಾಃ ಸರ್ವೇ ಭಕ್ತಿಪುರಸ್ಸರಾಃ ।
ತಸ್ಯಾಃ ಪ್ರದಕ್ಷಿಣಾಂ ಚಕ್ರುಸ್ತಥಾಽನ್ಯೇ ಮುಕ್ತಿಹೇತವೇ ॥ ೩೩ ॥
ಪ್ರಾಪ್ತಾಶ್ಚ ಪರಮಾಂ ಸಿದ್ಧಿಂ ವಾಂಛಿತಾಂ ತತ್ಪ್ರಭಾವತಃ ।
ಇಹಲೋಕೇ ಪರೇ ಚೈವ ದುರ್ಲಭಾಂ ತ್ರಿದಶೈರಪಿ ॥ ೩೪ ॥
ತಸ್ಮಾತ್ಸರ್ವಪ್ರಯತ್ನೇನ ತಾಂ ದೇವೀಮಿಹ ಸಂಶ್ರಯೇತ್ ।
ಸರ್ವಕಾಮಪ್ರದಾಂ ನೄಣಾಂ ತಸ್ಮಿನ್‌ಕ್ಷೇತ್ರೇ ವ್ಯವಸ್ಥಿತಾಂ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ.
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಮತ್ಕಾರೀದುರ್ಗಾಮಾಹಾತ್ಮ್ಯವರ್ಣನಂ" ನಾಮ ಚತುಃಷಷ್ಟಿತಮೋಽಧ್ಯಾಯಃ

---

೩೦. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣರು ಅವನ ಆ ಮಾತನ್ನು ಕೇಳಿ ಆಶ್ಚರ್ಯಗೊಂಡು ಸಂತೋಷದಿಂದ ಅವನನ್ನು ಶ್ಲಾಘಿಸಿದರು.

೩೧. ಅನಂತರ ಆ ರಾಜನು ಎಲ್ಲ ಬ್ರಾಹ್ಮಣರನ್ನು ವಂದಿಸಿ ಅವರನ್ನು ಕೇಳಿಕೊಂಡು ಸೈನ್ಯದೊಡನೆ ತನ್ನ ಮನೆಗೆ ತೆರಳಿದನು.

೩೨. ಈಗ ಶ್ರದ್ಧೆಯಿಂದ ಪ್ರದಕ್ಷಿಣೆಮಾಡುವವನು ಸಕಲಪಾಪಮುಕ್ತ ನಾಗಿ ಇಷ್ಟವಾದ ಫಲವನ್ನು ಪಡೆಯುವನು.

೩೩. ಅದು ಮೊದಲ್ಗೊಂಡು ಆ ಬ್ರಾಹ್ಮಣರೂ, ಇತರ ಜನರೂ ಮುಕ್ತಿ ಗಾಗಿ ಭಕ್ತಿಯಿಂದ ಆ ದೇವಿಗೆ ಪ್ರದಕ್ಷಿಣೆಗೈದರು.

೩೪. ಅದರ ಪ್ರಭಾವದಿಂದ ಇಹಪರಲೋಕಗಳಲ್ಲಿ ದೇವತೆಗಳಿಗೂ ದುರ್ಲಭವಾದ ಉತ್ತಮವಾದ ಇಷ್ಟಸಿದ್ಧಿಯನ್ನು ಹೊಂದಿದರು.

೩೫. ಆದುದರಿಂದ ಆ ಕ್ಷೇತ್ರದಲ್ಲಿ ನೆಲೆಸಿರುವ ಸಕಲೇಷ್ಟಾರ್ಥಗಳನ್ನೀಯುವ ಆ ದೇವಿಯನ್ನು ಆಶ್ರಯಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಮತ್ಕಾರೀದುರ್ಗಾಮಾಹಾತ್ಮ್ಯವರ್ಣನ"ವೆಂಬ
ಅರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಷಷ್ಠಿತಮೋಽಧ್ಯಾಯಃ

## ಆನರ್ತಕೇಶ್ವರ ಶೂದ್ರಕೇಶ್ವರಮಾಹಾತ್ಮ್ಯವರ್ಣನಂ

ಸೂತ ಉವಾಚ :—

ತಥಾಽನ್ಯದಪಿ ತತ್ರಾಽಸ್ತಿ ತಡಾಗಂ ದೇವನಿರ್ಮಿತಂ ।
ಯತ್ರಾನರ್ತೋ ನೃಪಃ ಸಿದ್ಧಃ ಸುಹಯೋ ನಾಮ ನಾಮತಃ ॥ ೧ ॥
ತೇನೈವ ಭೂಭುಜಾ ತತ್ರ ಲಿಂಗಂ ಸಂಸ್ಥಾಪಿತಂ ಶುಭಂ ।
ಆನರ್ತೇಶ್ವರಸಂಜ್ಞಂ ಚ ಸರ್ವಸಿದ್ಧಿಪ್ರದಂ ನೃಣಾಂ ॥ ೨ ॥
ತತ್ರಾಂಗಾರಕ ಷಷ್ಠ್ಯಾಂ ಯಸ್ತಡಾಗೇ ಸ್ನಾನಮಾಚರೇತ್ ।
ಸ ಪ್ರಾಪ್ನೋತಿ ನರಃ ಸಿದ್ಧಿಂ ಯಥಾನರ್ತಾಧಿಪೇನ ಚ ॥ ೩ ॥

ಋಷಯ ಊಚುಃ :—

ಕಥಂ ಸಿದ್ಧಿಸ್ತು ಸಂಪ್ರಾಪ್ತಾ ಆನರ್ತೇನ ಮಹಾತ್ಮನಾ ।
ಸರ್ವಂ ಕಥಯ ತತ್ಸೂತ ಸರ್ವಂ ವೇತ್ಸಿ ನ ಸಂಶಯಃ ॥ ೪ ॥

ಸೂತ ಉವಾಚ :—

ಆನರ್ತಃ ಸುಹಯೋ ನಾಮ ಪುರಾಽಽಸೀತ್ಪೃಥಿವೀಪತಿಃ ।
ಸರ್ವಾರಿಭಿರ್ಹತೋ ಯುದ್ಧೇ ಪಲಾಯನಪರಾಯಣಃ ।
ಉಚ್ಛಿಷ್ಟೋ ಮ್ಲೇಚ್ಛಸಂಸ್ಪೃಷ್ಟ ಏಕಾಕೀ ಬಹುಭಿರ್ವೃತಃ ॥ ೫ ॥

---

## ಕನ್ನಡದ ಅನುವಾದ

### ಆನರ್ತಕೇಶ್ವರ ಶೂದ್ರಕೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಅಲ್ಲಿ ದೇವನಿರ್ಮಿತವಾದ ಇನ್ನೊಂದು ಕೊಳವಿರುವುದು. ಅಲ್ಲಿ ಸುಹಯನೆಂಬ ಆನರ್ತರಾಜನು ಸಿದ್ಧಿಯನ್ನು ಹೊಂದಿರುವನು.

೨-೩. ಆ ರಾಜನು ಅಲ್ಲಿ ಮಾನವರಿಗೆ ಸಿದ್ಧಿಯನ್ನೀಯುವ ಆನರ್ತೇಶ್ವರವೆಂಬ ಲಿಂಗವನ್ನು ಸ್ಥಾಪಿಸಿರುವನು. ಅಲ್ಲಿ ಅಂಗಾರಕ ಷಷ್ಠೀ ದಿನ ಸ್ನಾನ ಮಾಡಿದವನು ಆನರ್ತರಾಜನಂತೆ ಸಿದ್ಧಿಯನ್ನು ಹೊಂದುವನು.

೪. ಋಷಿಗಳು ಹೇಳುತ್ತಾರೆ:—ಮಹಾತ್ಮನಾದ ಆನರ್ತರಾಜನು ಹೇಗೆ ಸಿದ್ಧಿಯನ್ನು ಪಡೆದನು? ಅದನ್ನೆಲ್ಲ ಹೇಳು. ನೀನು ಎಲ್ಲವನ್ನೂ ಅರಿತಿರುವೆ.

೫. ಸೂತನು ಹೇಳುತ್ತಾನೆ:—ಹಿಂದೆ ಆನರ್ತನೆಂಬ ಒಬ್ಬ ರಾಜನಿದ್ದನು. ಉಚ್ಛಿಷ್ಟನೂ, ಮ್ಲೇಚ್ಛರನ್ನು ಮುಟ್ಟಿರುವವನೂ, ಒಬ್ಬಂಟಿಗನೂ ಆದ ಅವನು ಯುದ್ಧದಲ್ಲಿ ಓಡುತ್ತಿರಲು ಬಹುಮಂದಿ ಶತ್ರುಗಳು ಅವನನ್ನು ಕೊಂದರು.

ಅಥ ತಸ್ಯ ಕಪಾಲಂ ಚ ಕಾಪಾಲಿಕವ್ರತಾನ್ವಿತಃ ।
ಜಗೃಹೇ ನಿಜಕರ್ಮಾರ್ಥಂ ಜ್ಞಾತ್ವಾ ತಂ ವೀರಸಂಭವಂ ॥ ೬ ॥
ಆನರ್ತೇಶ್ವರಸಾನ್ನಿಧ್ಯೇ ವಸಮಾನೋ ವನೇ ಸ್ಥಿತಃ ।
ಸ ರಾತ್ರೌ ತೇನ ತೋಯೇನ ಸರ್ವದೇವಮಯೇನ ಚ ॥ ೭ ॥
ತಡಾಗೋತ್ಥೇನ ಸಂಪೂರ್ಣಂ ರಾತ್ರೌ ಕೃತ್ವಾ ಪ್ರಮುಂಚತಿ ।
ಆಸೀತ್ಪೂರ್ವಂ ವಣಿಜ್ನಾಮ್ನಾ ಸಿದ್ಧಸೇನ ಇತಿಸ್ಮೃತಃ ।
ಧನೀ ಭೃತ್ಯಸಮೋಪೇತಃ ಸದಾ ಪುಣ್ಯಪರಾಯಣಃ ॥ ೮ ॥
ಕಸ್ಯಚಿತ್ತ್ವಥ ಕಾಲಸ್ಯ ಪಣ್ಯಬುದ್ಧ್ಯಾ ದ್ವಿಜೋತ್ತಮಾಃ ।
ಪ್ರಸ್ಥಿತಶ್ಚೋತ್ತರಾಂ ಕಾಷ್ಠಾಂ ಸ ಸಾರ್ಥೇನ ಸಮನ್ವಿತಃ ॥ ೯ ॥
ಅಥ ಪ್ರಾಪ್ತಃ ಕ್ರಮಾತ್ಸರ್ವೈಃ ಸ ಗಚ್ಛನ್ಮರುಮಂಡಲಂ ।
ವೃಕ್ಷೋದಕಪರಿತ್ಯಕ್ತಂ ಸರ್ವಸತ್ವವಿವರ್ಜಿತಂ ॥ ೧೦ ॥
ತತ್ರ ರಾತ್ರಿಂ ಸಮಾಸಾದ್ಯ ಶ್ರಾಂತಾಃ ಪಾಂಥಾಃ ಸಮಂತತಃ ।
ಸುಪ್ತಾಃ ಸ್ಥಾನಾನಿ ಸಂಶ್ರಿತ್ಯ ಗತಾ ನಿದ್ರಾವಶಂ ತಥಾ ॥ ೧೧ ॥
ತತಃ ಪ್ರತ್ಯೂಷಮಾಸಾಧ್ಯ ಸಮುತ್ಥಾಯ ಚ ಸತ್ವರಂ ।
ಪ್ರಸ್ಥಿತಾ ಉತ್ತರಾಂ ಕಾಷ್ಠಾಂ ಮುಕ್ತ್ವೈಕಂ ಶೂದ್ರಸೇವಕಂ ॥ ೧೨ ॥

---

೬. ಬಳಿಕ ಅವನ ಕಪಾಲವನ್ನು ಒಬ್ಬ ಕಾಪಾಲಿಕನು ತನ್ನ ಕೆಲಸಕ್ಕಾಗಿ ತೆಗೆದುಕೊಂಡನು.

೭-೯. ಆ ಕಾಪಾಲಿಕನು ಆನರ್ತೇಶ್ವರನ ಹತ್ತಿರ ಕಾಡಿನಲ್ಲಿ ವಾಸಿಸುತ್ತ ರಾತ್ರಿಯವೇಳೆ ಆ ಸರೋವರದ ಸಕಲ ದೇವತಾರೂಪವಾದ ನೀರನ್ನು ಕಪಾಲದಲ್ಲಿ ತುಂಬಿ ಕೆಳಗೆ ಬಿಡುತ್ತಿದ್ದನು. ಹಿಂದೆ ಧನಿಕನೂ, ಭೃತ್ಯರಿಂದ ಕೂಡಿದವನೂ, ವ್ಯಾಪಾರದಲ್ಲಿ ನಿರತನೂ ಆದ ಸಿದ್ಧಸೇನನೆಂಬ ವರ್ತಕನಿದ್ದನು. ದ್ವಿಜವರ್ಯರೆ! ಒಂದಾನೊಂದು ದಿನ ಅವನು ವ್ಯಾಪಾರಕ್ಕಾಗಿ ವೈಶ್ಯರ ಗುಂಪಿನೊಡನೆ ಉತ್ತರ ದಿಕ್ಕಿಗೆ ಪ್ರಯಾಣಮಾಡಿದನು.

೧೦. ಬಳಿಕ ಅವನು ಕ್ರಮವಾಗಿ ಮರ, ಜಲಗಳಿಲ್ಲದಿರುವುದೂ, ಸಕಲ ಪ್ರಾಣಿಗಳಿಂದ ಶೂನ್ಯವೂ ಆದ ಮರುಭೂಮಿಯನ್ನು ಸೇರಿದನು.

೧೧. ಅಲ್ಲಿ ಆ ಬಳಲಿದ ಮಾರ್ಗಸ್ಥರು ರಾತ್ರಿಯವೇಳೆ ಆ ಸ್ಥಳಗಳನ್ನಾಶ್ರಯಿಸಿ ಮಲಗಿ ನಿದ್ರೆಮಾಡಿದರು.

೧೨. ಅನಂತರ ಅವರು ಬೆಳಗ್ಗೆ ಎದ್ದು ಒಬ್ಬ ಶೂದ್ರ ಸೇವಕನನ್ನು ಮಾತ್ರ ಬಿಟ್ಟು ಉತ್ತರದಿಕ್ಕಿಗೆ ಪ್ರಯಾಣಮಾಡಿದರು.

ಸ ವೈ ಮಾರ್ಗಪರಿಶ್ರಾಂತೋ ಗತ್ವಾ ನಿದ್ರಾವಶಂ ಭೃಶಂ ।
ನ ಜಜಾಗಾರ ಜಾತೇಽಪಿ ಪ್ರಯಾಣೇ ಬಹುಶಬ್ದಿತೇ ॥ ೧೩ ॥
ನ ಚ ತೈಃ ಸಸ್ಮೃತಃ ಸಾರ್ಥ್ಯೈರ್ಯೈಃ ಸಮಂ ಪ್ರಸ್ಥಿತೋ ಗೃಹಾತ್ ।
ನ ಚ ಕೇನಾಽಪಿ ಸಂಹೃಷ್ಟಃ ಸ ತು ರೋಧಸಿ ಸಂಸ್ಥಿತಃ ॥ ೧೪ ॥
ಏವಂ ಗತೇ ತತಃ ಸಾರ್ಥೇ ಪ್ರೋದ್ಗತೇ ಸೂರ್ಯಮಂಡಲೇ ।
ತೀವ್ರತಾಪಪರಿಸ್ಪೃಷ್ಟೋ ಜಜಾಗಾರ ತತಃ ಪರಂ ॥ ೧೫ ॥
ಯಾವತ್ಪಶ್ಯತಿ ನೋ ಕಿಂಚಿತ್ತಸ್ಮಿನ್ ಸ್ಥಾನೇ ಸ ಸಾರ್ಥಕಂ ।
ನ ಚ ತೇಷಾಂ ಮರೌ ತಸ್ಮಿಂಲ್ಲಕ್ಷ್ಯತೇ ಪದಪದ್ಧತಿಃ ॥ ೧೬ ॥
ತತೋ ದುಃಖಪರೀತಾತ್ಮಾ ಧಾವಮಾನ ಇತಸ್ತತಃ ।
ಪತಿತೋ ಮೇದಿನೀ ಪೃಷ್ಠೇ ಮಧ್ಯಾಹ್ನೇ ಕ್ಷುತ್ತೃಷಾರ್ದಿತಃ ॥ ೧೭ ॥
ಏವಂ ತಸ್ಯ ತೃಷಾರ್ತಸ್ಯ ಪತಿತಸ್ಯ ಧರಾತಲೇ ।
ಧೃತಪ್ರಾಣಸ್ಯ ಕೃಚ್ಛ್ರೇಣ ಸಂಯಾತೋಽಸ್ತಾಚಲಂ ರವಿಃ ॥ ೧೮ ॥
ತತಃ ಕಿಂಚಿತ್ಸಸಂಜ್ಞೋಽಭೂನ್ಮಂದೀಭೂತೇ ದಿವಾಕರೇ ।
ಚಿಂತಯಾಮಾಸ ಚಿತ್ತೇನ ಕ್ವಾಽಹಂ ಗಚ್ಛಾಮಿ ಸಾಂಪ್ರತಂ ॥ ೧೯ ॥

---

೧೩. ದಾರಿ ನಡೆದು ಬಳಲಿದ ಅವನು ಅತ್ಯಂತ ನಿದ್ರೆಯನ್ನು ಹೊಂದಿ ಜೊತೆಯವರು ಅತಿಶಯ ಶಬ್ದವನ್ನು ಮಾಡುತ್ತ ಪ್ರಯಾಣಮಾಡಿದರೂ ಎಚ್ಚರಗೊಳ್ಳಲಿಲ್ಲ.

೧೪. ಆ ವೈಶ್ಯರು ತಮ್ಮೊಡನೆ ಮನೆಯಿಂದ ಹೊರಟ ಆ ಶೂದ್ರನನ್ನು ಸ್ಮರಿಸಲಿಲ್ಲ. ಕೊನೆಯಲ್ಲಿದ್ದ ಅವನನ್ನು ಯಾರೂ ನೋಡಲಿಲ್ಲ.

೧೫. ಹೀಗೆ ವೈಶ್ಯರು ಹೊರಟು ಹೋಗಲು ಸೂರ್ಯನು ಉದಯಿಸಲು ಬಿಸಿಲಿನಿಂದ ಅತ್ಯಂತ ಸಂತಪ್ತನಾದ ಆ ಶೂದ್ರನು ಎಚ್ಚರಗೊಂಡನು.

೧೬. ಅವನು ನೋಡುವಷ್ಟರಲ್ಲಿ ಆ ಸ್ಥಳದಲ್ಲಿ ಆ ವೈಶ್ಯರಿರಲಿಲ್ಲ. ಮರುಭೂಮಿಯಲ್ಲಿ ಅವರ ಹೆಜ್ಜೆಯ ಸಾಲೂ ಕಾಣಿಸಲಿಲ್ಲ.

೧೭. ಅನಂತರ ಆ ಶೂದ್ರನು ದುಃಖಗೊಂಡು ಇಲ್ಲಿ ಅಲ್ಲಿ ಓಡುತ್ತ ಮಧ್ಯಾಹ್ನದ ವೇಳೆಯಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಅವನು ನೆಲದಮೇಲೆ ಬಿದ್ದುಬಿಟ್ಟನು.

೧೮. ಹೀಗೆ ಬಾಯಾರಿದ ಅವನು ನೆಲದಮೇಲೆ ಬಿದ್ದು ಜೀವಸಹಿತನಾಗಿರಲು ಸೂರ್ಯನು ಮುಳುಗಿದನು.

೧೯. ಬಳಿಕ ಸೂರ್ಯನು ಅಸ್ತಂಗತನಾಗಲು ಅವನು ಚೇತರಿಸಿಕೊಂಡು ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. "ಈಗ ನಾನು ಎಲ್ಲಿಗೆ ಹೋಗಲಿ.

ನ ಲಕ್ಷ್ಯತೇ ಕ್ವಚಿನ್ಮಾರ್ಗೋ ದೃಶ್ಯತೇ ನ ಚ ಮಾನುಷಂ ।
ನಾಽತ್ರ ತೋಯಂ ನ ಚ ಛಾಯಾ ನೂನಂ ಮೇ ಮೃತ್ಯುರಾಗತಃ ॥ ೨೦ ॥
ಏವಂ ಚಿಂತಾಪ್ರಸನ್ನಸ್ಯ ತಸ್ಯ ಶೂದ್ರಸ್ಯ ನಿರ್ಜನೇ ।
ಮರೌ ತಸ್ಮಿನ್ ಸಮಾಯಾತಾ ಶರ್ವರೀ ತದನಂತರಂ ॥ ೨೧ ॥
ಅಥ ಕ್ಷಣೇನ ಶುಶ್ರಾವ ಸಂಗೀತಂ ಮಧುರಧ್ವನಿ ।
ಪಠತಾಂ ಸಂದಿವೃದ್ಧಾನಾಂ ತಥಾ ಶಬ್ದಂ ಮನೋಹರಂ ॥ ೨೨ ॥
ಅಥಾಽಪಶ್ಯತ್ಕ್ಷಣೇನೈವ ಪ್ರೇತಸಂಘೈಃ ಸಮಾವೃತಂ ।
ಪ್ರೇತಮೇಕಂ ಚ ಸರ್ವೇಷಾಮಾಧಿಪತ್ಯೇ ವ್ಯವಸ್ಥಿತಂ ॥ ೨೩ ॥
ತತಸ್ತೇ ಪಾರ್ಶ್ವಗಾಃ ಪ್ರೇತಾ ಏಕೇ ನೃತ್ಯಂ ಪ್ರಚಕ್ರಿರೇ ।
ತತ್ಪರೋ ಗೀತಮನ್ಯೇ ತು ಸ್ತುತಿಂ ಚೈವ ತಥಾಽಪರೇ ॥ ೨೪ ॥
ಅಥಾಽಸೌ ಪ್ರಾಹ ತಂ ಶೂದ್ರಮತಿಥೇ ಕುರು ಭೋಜನಂ ।
ಸ್ವೇಚ್ಛಯಾ ಪಿಬ ತೋಯಂ ಚ ಶ್ರೇಯೋ ಯೇನ ಭವೇನ್ಮಮ ॥ ೨೫ ॥
ತತಃ ಸ ಭೋಜನಂ ಚಕ್ರೇ ಕ್ಷುಧಾರ್ತಶ್ಚ ಪಪೌ ಜಲಂ ।
ಭಯಂ ತ್ಯಕ್ತ್ವಾ ಸುವಿಶ್ರಬ್ಧಃ ಪ್ರೇತರಾಜಸ್ಯ ಶಾಸನಾತ್ ॥ ೨೬ ॥

---

೨೦. ಎಲ್ಲಿಯೂ ದಾರಿಯು ತೋರುವುದಿಲ್ಲ. ಮನುಷ್ಯನೂ ಕಾಣುವುದಿಲ್ಲ. ನೀರು ನೆರಳುಗಳೂ ಇಲ್ಲ. ನಿಶ್ಚಯವಾಗಿಯೂ ನನಗೆ ಮರಣವು ಸಂಭವಿಸುವುದು.”

೨೧. ಆ ಶೂದ್ರನು ನಿರ್ಜನವಾದ ಮರುಭೂಮಿಯಲ್ಲಿ ಹೀಗೆ ಚಿಂತಾಕ್ರಾಂತನಾಗಿರಲು ರಾತ್ರಿಯಾಯಿತು.

೨೨. ಬಳಿಕ ಕ್ಷಣಕಾಲದಲ್ಲಿಯೇ ಅವನು ಇಂಪಾದ ಸಂಗೀತವನ್ನೂ, ಪಠಿಸುತ್ತಿರುವ ಸಂದಿವೃದ್ಧರ ಮನೋಹರಶಬ್ದವನ್ನೂ ಕೇಳಿದನು.

೨೩. ಸ್ವಲ್ಪ ಹೊತ್ತಿನಲ್ಲಿಯೇ ಪ್ರೇತಗಳ ಸಮೂಹಗಳಿಂದ ಕೂಡಿರುವವನೂ, ಸಕಲಪ್ರೇತಗಳ ಒಡೆಯನೂ ಆದ ಒಬ್ಬ ಪ್ರೇತರಾಜನನ್ನು ಕಂಡನು.

೨೪. ಅಲ್ಲಿ ಕೆಲವು ಪ್ರೇತಗಳು ಅವನ ಹತ್ತಿರದಲ್ಲಿ ಕುಣಿಯುತ್ತಿದ್ದುವು. ಇನ್ನು ಕೆಲವು ಪ್ರೇತಗಳು ಹಾಡುತ್ತಿದ್ದುವು. ಇನ್ನು ಕೆಲವು ಪ್ರೇತಗಳು ಸ್ತೋತ್ರಮಾಡುತ್ತಿದ್ದುವು.

೨೫. ಬಳಿಕ ಆ ಪ್ರೇತರಾಜನು ಆ ಶೂದ್ರನನ್ನು ಕುರಿತು, “ಅತಿಥಿಯೆ! ಭುಂಜಿಸು. ಸ್ವೇಚ್ಛೆಯಾಗಿ ನೀರನ್ನು ಕುಡಿ. ಅದರಿಂದ ನನಗೆ ಶ್ರೇಯಸ್ಸಾಗುವುದು” ಎಂದನು.

೨೬. ಹಸಿವುಗೊಂಡ ಆ ಶೂದ್ರನು ಭಯವನ್ನು ತ್ಯಜಿಸಿ ಪ್ರೇತರಾಜನ ಅಪ್ಪಣೆಯಿಂದ ವಿಶ್ವಾಸದಿಂದ ಭುಂಜಿಸಿ ನೀರನ್ನು ಕುಡಿದನು.

ತತಃ ಪ್ರೇತಾಶ್ಚ ತೇ ಸರ್ವೇ ಪ್ರೇತತ್ವೇನ ಸಮನ್ವಿತಾಃ ।
ಯಥಾ ಜ್ಯೇಷ್ಠಂ ಯಥಾ ನ್ಯಾಯಂ ಪ್ರಚಕ್ರುರ್ಭೋಜನಕ್ರಿಯಾಂ ॥ ೨೭ ॥
ಏವಂ ತೇಷಾಂ ಸಮಸ್ತಾನಾಂ ವಿಲಾಸೈಃ ಪಾರ್ಥಿವೋಚಿತೈಃ ।
ಅತಿಕ್ರಾಂತಾ ನಿಶಾ ಸರ್ವಾ ಕ್ರೀಡತಾಂ ದ್ವಿಜಸತ್ತಮಾಃ ॥ ೨೮ ॥
ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ಯಾವತ್ಪಶ್ಯತಿ ಶೂದ್ರಃ ಸ ತಾವತ್ತತ್ರ ನ ಕಿಂಚನ ॥ ೨೯ ॥
ತತಶ್ಚ ಚಿಂತಯಾಮಾಸ ಕಿಮೇತತ್ಸ್ವಪ್ನದರ್ಶನಂ ।
ಚಿತ್ತಭ್ರಮೋಽಥವಾಽಸ್ಮಾಕಮಿಂದ್ರಜಾಲಮಥಾಽಪಿ ವಾ ॥ ೩೦ ॥
ಅಥವಾ ಸತ್ಯಮೇತದ್ಧಿ ಯತೋ ಮೇ ತೃಪ್ತಿರುತ್ತಮಾ ।
ಸಂಜಾತೇಯಂ ಕ್ಷುಧಾರ್ತಸ್ಯ ಪಿಪಾಸಾಕುಲಿತಸ್ಯ ಚ ॥ ೩೧ ॥
ಏವಂ ಚಿಂತಯಮಾನಸ್ಯ ಭಾಸ್ಕರೋ ಗಗನಾಂಗಣಂ ।
ಸಮಾರುರೋಹ ತಾಪೇನ ತಾಪಯನ್ಧರಣೀತಲಂ ॥ ೩೨ ॥
ತತಃ ಕಂಚಿತ್ಸಮಾಶ್ರಿತ್ಯ ಸ್ವಲ್ಪಚ್ಛಾಯಂ ಮಹೀರುಹಂ ।
ಪ್ರಾಪ್ತವಾನ್ದಿವಸಸ್ಯಾಂತಂ ಕ್ಷುತ್ಪಿಪಾಸಾಪ್ರಪೀಡಿತಃ ॥ ೩೩ ॥
ತತೋ ನಿಶಾಮುಖೇ ಪ್ರಾಪ್ತೇ ಭೂಯೋಽಪಿ ಪ್ರೇತರಾಜಕಂ ।
ಪ್ರೇತೈಸ್ತೈಶ್ಚ ಸಮೋಪೇತಂ ತಥಾ ರೂಪಂ ವ್ಯಲೋಕಯತ್ ॥ ೩೪ ॥

---

೨೭. ಬಳಿಕ ಆ ಸಮಸ್ತ ಪ್ರೇತಗಳೂ ಜ್ಯೇಷ್ಠಕ್ರಮದಿಂದಲೂ, ನ್ಯಾಯದಂತೆಯೂ ಭೋಜನವನ್ನು ಮಾಡಿದುವು.

೨೮. ದ್ವಿಜವರ್ಯರೆ! ಹೀಗೆ ವಿನೋದಪಡುತ್ತಿರುವ ಆ ಸಕಲ ಪ್ರೇತಗಳಿಗೆ ರಾಜೋಚಿತವಾದ ವಿಲಾಸಗಳಿಂದ ರಾತ್ರಿಯು ಕಳೆಯಿತು.

೨೯–೩೦. ಅನಂತರ ಬೆಳಗ್ಗೆ ಸೂರ್ಯನು ಉದಯಿಸಲು ಆ ಶೂದ್ರನು ನೋಡುವಲ್ಲಿ ಏನೂ ಕಾಣಿಸಲಿಲ್ಲ. ಅನಂತರ ಅವನು ಹೀಗೆ ಚಿಂತಿಸಿದನು. "ಇದು ಸ್ವಪ್ನವೋ? ಚಿತ್ತಭ್ರಾಂತಿಯೋ? ಇಂದ್ರಜಾಲವೋ?

೩೧. ಅಥವಾ ಹಸಿವು ಬಾಯಾರಿಕೆಯಿಂದ ಪೀಡಿತನಾದ ನನಗೆ ಅತಿಶಯ ತೃಪ್ತಿಯಾಗಿರುವುದರಿಂದ ಇದು ಸತ್ಯವೋ?"

೩೨. ಅವನು ಹೀಗೆ ಚಿಂತಿಸುತ್ತಿರಲು ಸೂರ್ಯನು ಭೂಮಂಡಲವನ್ನು ಕಾಯಿಸುತ್ತ ಆಕಾಶವನ್ನೇರಿದನು.

೩೩. ಬಳಿಕ ಸ್ವಲ್ಪನೆರಳುಳ್ಳ ಒಂದು ವೃಕ್ಷವನ್ನಾಶ್ರಯಿಸಿ ಹಸಿವು ಬಾಯಾರಿಕೆಯಿಂದ ಪೀಡಿತನಾಗಿ ಸಾಯಂಕಾಲವನ್ನು ಕಂಡನು.

೩೪. ರಾತ್ರಿಯ ಆರಂಭದಲ್ಲಿ ಆ ಪ್ರೇತಗಳಿಂದ ಕೂಡಿರುವ ಅಂತಹ ಪ್ರೇತರಾಜನನ್ನು ಮತ್ತೆ ನೋಡಿದನು.

ತಥೈವ ಭೋಜನಂ ಚಕ್ರೇ ತಸ್ಯಾತಿಥ್ಯಸಮುದ್ಭವಂ ।
ಭಯೇನ ರಹಿತಃ ಶೂದ್ರೋ ಹರ್ಷೇಣ ಮಹತಾನ್ವಿತಃ ॥ ೩೫ ॥
ಏವಂ ತಸ್ಯ ನಿಶಾವಕ್ತ್ರೇ ನಿತ್ಯಮೇವ ಸ ಭೂಪತಿಃ ।
ಆತಿಥ್ಯಂ ಪ್ರಕರೋತ್ಯೇವ ಸಮಾಗತ್ಯ ತಥೈವ ಚ ॥ ೩೬ ॥
ತತೋಽನ್ಯದಿವಸೇ ಪ್ರಾಪ್ತೇ ತೇನ ಶೂದ್ರೇಣ ಭೂಪತಿಃ ।
ಪೃಷ್ಟಃ ಕಿಮೇತದಾಶ್ಚರ್ಯಂ ದೃಶ್ಯತೇ ರಜನೀಮುಖೇ ॥ ೩೭ ॥
ವಿಭವಸ್ತೇ ಮಹಾಭಾಗ ಪ್ರಣಶ್ಯತಿ ನಿಶಾಕ್ಷಯೇ ।
ಏತತ್ಕೀರ್ತಯ ಮೇ ಗುಹ್ಯಂ ನ ಚೇತ್ತ್ರೇತಪ ಸಂಸ್ಥಿತಂ ।
ಅತ್ರ ಕೌತೂಹಲಂ ಜಾತಂ ದೃಷ್ಟ್ವೇದಂ ಸುವಿಚೇಷ್ಟಿತಂ ॥ ೩೮ ॥

ಪ್ರೇತ ಉವಾಚ:—

ಅಸ್ತಿ ಪುಣ್ಯಂ ಮಹಾಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ಗಂಗಾ ಚ ಯಮುನಾಚೈವ ಸ್ಥಿತೇ ತತ್ರ ಚ ಸಂಗಮೇ ॥ ೩೯ ॥
ತಾಭ್ಯಾಮತಿ ಸಮೀಪಸ್ಥಂ ಶಿವಸ್ಯಾಯತನಂ ಶುಭಂ ।
ಮಹಾವ್ರತಧರಸ್ತತ್ರ ತಪಸ್ಯತಿ ಸುನೈಷ್ಠಿಕಃ ॥ ೪೦ ॥
ಸ ಸದಾ ರಾತ್ರಿಶೌಚಾರ್ಥಂ ಕಪಾಲಂ ಜಲಪೂರಿತಂ ।
ಮದೀಯಂ ಶಯನೇ ಚಕ್ರೇ ತತ್ರ ಕೃತ್ವಾ ನಿಜಾಂ ಕ್ರಿಯಾಂ ॥ ೪೧ ॥

---

೩೫. ಹಾಗೆಯೇ ಭಯವಿಲ್ಲದೆ ಅತಿ ಸಂತೋಷದಿಂದ ಪ್ರೇತರಾಜನ ಆತಿಥ್ಯವನ್ನು ಸ್ವೀಕರಿಸಿ ಭುಂಜಿಸಿದನು.

೩೬. ಹೀಗೆಯೇ ಆ ಪ್ರೇತರಾಜನು ನಿತ್ಯವೂ ರಾತ್ರಿಯ ಆರಂಭದಲ್ಲಿ ಬಂದು ಆ ಶೂದ್ರನಿಗೆ ಆತಿಥ್ಯವನ್ನು ಮಾಡುತ್ತಿದ್ದನು.

೩೭–೩೮. ಅನಂತರ ಒಂದು ದಿನ ರಾತ್ರಿಯ ಆರಂಭಕಾಲದಲ್ಲಿ ಆ ಶೂದ್ರನು ರಾಜನನ್ನು ಕುರಿತು, "ಮಹಾರಾಜ! ಇಲ್ಲಿ ಕಾಣುತ್ತಿರುವ ಈ ಆಶ್ಚರ್ಯವೇನು? ನಿನ್ನ ವೈಭವವು ಬೆಳಗಾದಕೂಡಲೆ ನಾಶವಾಗುವುದು. ಇದು ರಹಸ್ಯವಲ್ಲದಿದ್ದರೆ ನನಗೆ ಹೇಳು. ಈ ಕಾರ್ಯಗಳನ್ನೆಲ್ಲ ನೋಡಿ ನನಗೆ ಕುತೂಹಲವುಂಟಾಗಿದೆ.

೩೯. ಪ್ರೇತನು ಹೇಳುತ್ತಾನೆ:—ಹಾಟಕೇಶ್ವರವೆಂಬ ಪುಣ್ಯಕ್ಷೇತ್ರವೊಂದಿದೆ. ಅಲ್ಲಿ ಗಂಗಾ ಯಮುನಾ ನದಿಗಳು ಸೇರಿರುವುವು.

೪೦. ಆ ಸಂಗಮದ ಹತ್ತಿರ ಶುಭಕರವಾದ ಶಿವಾಲಯವಿರುವುದು. ಅಲ್ಲಿ ಮಹಾವ್ರತವನ್ನು ಆಚರಿಸುವ ನೈಷ್ಠಿಕನು ತಪಸ್ಸನ್ನುಮಾಡುತ್ತಿರುವನು.

೪೧. ಅವನು ಯಾವಾಗಲೂ ತನ್ನ ಕಾರ್ಯವನ್ನು ಮುಗಿಸಿ ರಾತ್ರಿ ಶೌಚಕ್ಕಾಗಿ ನನ್ನ ಕಪಾಲದಲ್ಲಿ ನೀರನ್ನು ತುಂಬಿ ಹಾಸಿಗೆಯ ಹತ್ತಿರ ಇಡುತ್ತಾನೆ.

ತತ್ಪ್ರಭಾವಾನ್ಮಮೇಯಂ ಹಿ ವಿಭೂತಿರ್ಜಾಯತೇ ನಿಶಿ ।
ದಿವಾರಿಕ್ತೇ ಕೃತೇ ಯಾತಿ ಭೂಯ ಏವ ಮಹಾಮತೇ ॥ ೪೨ ॥
ತಸ್ಮಾತ್ಕುರು ಪ್ರಸಾದಂ ಮೇ ತತ್ರ ಗತ್ವಾ ಕಪಾಲಕಂ ।
ಚೂರ್ಣಂ ಕೃತ್ವಾ ಮದೀಯಂ ತತ್ತಸ್ಮಿಂಸ್ತೋಯೇ ವಿನಿಕ್ಷಿಪ ॥ ೪೩ ॥
ಯೇನ ಮೇ ಜಾಯತೇ ಮೋಕ್ಷಃ ಪ್ರೇತಭಾವಾತ್ಸುದಾರುಣಾತ್ ॥ ೪೪ ॥
ತಥಾ ತತ್ರಾಸ್ತಿ ಪೂರ್ವಸ್ಯಾಂ ದಿಶಿ ತತ್ತೀರ್ಥಮುತ್ತಮಂ ।
ಗಯಾಶಿರ ಇತಿ ಖ್ಯಾತಂ ಪ್ರೇತತ್ವಾನ್ಮುಕ್ತಿದಾಯಕಂ ॥ ೪೫ ॥
ತತ್ರ ಗತ್ವಾ ಕುರು ಶ್ರಾದ್ಧಂ ಸರ್ವೇಷಾಂ ತ್ವಂ ಮಹಾಮತೇ ।
ದೃಶ್ಯತೇ ತವ ಪಾರ್ಶ್ವಸ್ಥಾ ಭದ್ರಸಂಪುಟಿಕಾ ಶುಭಾ ॥ ೪೬ ॥
ಅಸ್ಯಾಂ ನಾಮಾನಿ ಸರ್ವೇಷಾಂ ಯಥಾ ಜ್ಯೇಷ್ಠಂ ಸಮಾಲಿಖ ।
ತತಃ ಶ್ರಾದ್ಧಂ ಕುರುಷ್ವಾಶು ದಯಾಂ ಕೃತ್ವಾ ಗರೀಯಸೀಂ ॥ ೪೭ ॥
ವಯಂ ತ್ವಾಂ ತತ್ರ ನೇಷ್ಯಾಮಃ ಸುಖೋಪಾಯೇನ ಭದ್ರಕ ।
ನಿಧಿಂ ಚ ದರ್ಶಯಿಷ್ಯಾಮಃ ಶ್ರಾದ್ಧಾರ್ಥಂ ಸುಮಹತ್ತರಂ ॥ ೪೮ ॥
ತಥೇತಿ ಸಮನುಜ್ಞಾತೇ ತೇನ ಶೂದ್ರೇಣ ಸತ್ವರಂ ।
ನಿನ್ಯುಸ್ತಂ ಸ್ಕಂಧಮಾರೋಪ್ಯ ಶೂದ್ರಂ ಕ್ಷೇತ್ರೇ ಯಥೋದಿತಂ ॥ ೪೯ ॥

---

೪೨. ಅದರ ಪ್ರಭಾವದಿಂದ ನನಗೆ ರಾತ್ರಿಯಲ್ಲಿ ಈ ವೈಭವವು ಉಂಟಾಗುವುದು. ಹಗಲು ಕಪಾಲವನ್ನು ಬರಿದುಮಾಡುವುದರಿಂದ ವೈಭವವು ನಾಶವಾಗುವುದು.

೪೩. ಆದುದರಿಂದ ನೀನು ಅನುಗ್ರಹಮಾಡಿ ಅಲ್ಲಿಗೆ ಹೋಗಿ ಆ ಕಪಾಲವನ್ನು ಪುಡಿಮಾಡಿ ಆ ನೀರಿನಲ್ಲಿ ಹಾಕು.

೪೪–೪೫. ಅದರಿಂದ ನನಗೆ ದಾರುಣವಾದ ಪ್ರೇತತ್ವದಿಂದ ಮೋಕ್ಷವಾಗುವುದು. ಹಾಗೆಯೇ ಅಲ್ಲಿ ಪೂರ್ವದಿಕ್ಕಿನಲ್ಲಿ ಪ್ರೇತತ್ವವನ್ನು ಪರಿಹರಿಸುವ ಗಯಾಶಿರವೆಂಬ ಉತ್ತಮತೀರ್ಥವಿರುವುದು.

೪೬–೪೮. ಪ್ರಾಜ್ಞನೆ! ಅಲ್ಲಿಗೆ ಹೋಗಿ ಎಲ್ಲರಿಗೂ ಶ್ರಾದ್ಧವನ್ನು ಮಾಡು. ನಿನ್ನ ಹತ್ತಿರ ಪತ್ರಾತ್ಮಕವಾದ ಪುಸ್ತಕವು ಕಾಣಿಸುವುದು. ಇದರಲ್ಲಿ ಜ್ಯೇಷ್ಠಾನುಕ್ರಮದಿಂದ ಎಲ್ಲರ ಹೆಸರನ್ನೂ ಬರೆ. ಬಳಿಕ ದಯೆಯಿಟ್ಟು ಎಲ್ಲರಿಗೂ ಶ್ರಾದ್ಧವನ್ನು ಮಾಡು. ಮಂಗಳಕರನೆ! ನಾವು ನಿನ್ನನ್ನು ಅಲ್ಲಿಗೆ ಸುಖವಾಗಿ ಕರೆದುಕೊಂಡು ಹೋಗುವೆವು. ಶ್ರಾದ್ಧಕ್ಕಾಗಿ ನಿನಗೆ ದೊಡ್ಡ ನಿಧಿಯನ್ನು ತೋರಿಸುವೆವು.

೪೯. ಆ ಶೂದ್ರನು ಹಾಗೆಯೇ ಆಗಲೆಂದು ಒಪ್ಪಲು ಕೂಡಲೆ ಪ್ರೇತಗಳು ಅವನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಆ ಕ್ಷೇತ್ರಕ್ಕೆ ಕರೆದುಕೊಂಡು ಹೋದುವು.

ದರ್ಶಯಾಮಾಸುರೇವಾಽಸ್ಯ ನಿಧಾನಂ ಭೂರಿವಿತ್ತಜಂ ।
ತದಾದಾಯ ಗತಸ್ತತ್ರ ಯತ್ರಾಽಸೌ ನೈಷ್ಠಿಕಃ ಸ್ಥಿತಃ ॥ ೫೦ ॥
ತತಃ ಪ್ರಣಮ್ಯ ತಂ ಭಕ್ತ್ಯಾ ಕಥಯಾಮಾಸ ವಿಸ್ತರಾತ್ ।
ತಸ್ಯ ಭೂತಪತೇಃ ಸರ್ವಂ ವೃತ್ತಾಂತಂ ವಿನಯಾನ್ವಿತಃ ॥ ೫೧ ॥
ತತೋ ಲಬ್ಧ್ವಾ ಕಪಾಲಂ ತಚ್ಚೂರ್ಣಯಿತ್ವಾ ಸಮಾಹಿತಃ ।
ಗಂಗಾಯಮುನಯೋರ್ಮಧ್ಯೇ ಪ್ರಚಿಕ್ಷೇಪ ಮುದಾನ್ವಿತಃ ॥ ೫೨ ॥
ಏತಸ್ಮಿನ್ನಂತರೇ ಪ್ರೇತೋ ದಿವ್ಯರೂಪ ವಪುರ್ಧರಃ ।
ವಿಮಾನಸ್ಥೋಽಬ್ರವೀದ್ವಾಕ್ಯಂ ಶೂದ್ರಂ ತಂ ಹರ್ಷಸಂಯುತಃ ॥ ೫೩ ॥
ಪ್ರಸಾದಾತ್ತವ ಮುಕ್ತೋಽಹಂ ಪ್ರೇತತ್ವಾದ್ದಾರುಣಾದಿತಃ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಸಾಂಪ್ರತಂ ತ್ರಿದಿವಾಲಯಂ ॥ ೫೪ ॥
ಏತೇಷಾಮೇವ ಸರ್ವೇಷಾಮಿದಾನೀಂ ಶ್ರಾದ್ಧಮಾಚರ ।
ಗತ್ವಾ ಗಯಾಶಿರಃ ಪುಣ್ಯಂ ಯೇನ ಮುಕ್ತಿಃ ಪ್ರಜಾಯತೇ ॥ ೫೫ ॥
ತತಃ ಸ ವಿಸ್ಮಯಾವಿಷ್ಟಸ್ತೇಷಾಮೇವ ಪೃಥಕ್ ಪೃಥಕ್ ।
ಶ್ರಾದ್ಧಂ ಚಕ್ರೇ ಚ ಭೂತಾನಾಂ ನಿತ್ಯಮೇವ ಸಮಾಹಿತಃ ॥ ೫೬ ॥

---

೫೦. ಇವನಿಗೆ ಅತಿಶಯ ದ್ರವ್ಯವುಳ್ಳ ನಿಧಿಯನ್ನು ತೋರಿಸಿದುವು. ಆ ಶೂದ್ರನು ಅದನ್ನು ತೆಗೆದುಕೊಂಡು ನೈಷ್ಠಿಕನೆಡೆಗೆ ಹೋದನು.

೫೧. ಬಳಿಕ ಅವನನ್ನು ಭಕ್ತಿಯಿಂದ ವಂದಿಸಿ ವಿನಯದಿಂದ ಆ ಪ್ರೇತ ರಾಜನ ಸಕಲ ವೃತ್ತಾಂತವನ್ನೂ ವಿಸ್ತಾರವಾಗಿ ಹೇಳಿದನು.

೫೨. ಆ ಕಪಾಲವನ್ನು ತೆಗೆದುಕೊಂಡು ಪುಡಿಮಾಡಿ ಸಂತೋಷದಿಂದ ಗಂಗಾ ಯಮುನಾ ನದಿಗಳ ನಡುವೆ ಹಾಕಿದನು.

೫೩. ಇಷ್ಟರಲ್ಲಿ ಆ ಪ್ರೇತವು ದಿವ್ಯರೂಪವನ್ನು ಧರಿಸಿ ವಿಮಾನದಲ್ಲಿ ಕುಳಿತು ಸಂತೋಷದಿಂದ ಆ ಶೂದ್ರನನ್ನು ಕುರಿತು ಇಂತೆಂದಿತು.

೫೪. "ನಿನ್ನ ಅನುಗ್ರಹದಿಂದ ನಾನು ಈ ದಾರುಣವಾದ ಪ್ರೇತತ್ವದಿಂದ ಮುಕ್ತನಾಗಿರುವೆನು. ನಿನಗೆ ಮಂಗಳವಾಗಲಿ. ಈಗ ನಾನು ದೇವಲೋಕಕ್ಕೆ ತೆರಳುವೆನು.

೫೫. ಪುಣ್ಯಕರವಾದ ಗಯಾಶಿರಸ್ಸಿಗೆ ಹೋಗಿ ಇವರೆಲ್ಲರಿಗೂ ಶಾದ್ಧವನ್ನಾಚರಿಸು. ಅದರಿಂದ ಮುಕ್ತಿಯುಂಟಾಗುವುದು."

೫೬. ತರುವಾಯ ಅವನು ಆಶ್ಚರ್ಯಗೊಂಡು ಆ ಭೂತಗಳಿಗೆ ನಿತ್ಯವೂ ಬೇರೆ ಬೇರೆಯಾಗಿ ಸಾವಧಾನ ಮನಸ್ಸಿನಿಂದ ಶ್ರಾದ್ಧವನ್ನು ಮಾಡಿದನು.

ತೇಽಪಿ ಸರ್ವೇ ಗತಾಃ ಸ್ವರ್ಗಂ ಪ್ರೇತಾಸ್ತಸ್ಯ ಪ್ರಭಾವತಃ ।
ದದೃಶ್ಚ ದರ್ಶನಂ ತಸ್ಯ ಸ್ವಪ್ನೇ ಹರ್ಷಸಮನ್ವಿತಾಃ ॥ ೫೭ ॥
ತತಃ ಶೂದ್ರಃ ಸ ವಿಜ್ಞಾಯ ತತ್ಕ್ಷೇತ್ರಂ ಪುಣ್ಯವರ್ಧನಂ ।
ನ ಜಗಾಮ ಗೃಹಂ ಭೂಯಸ್ತತ್ರೈವ ತಪಸಿ ಸ್ಥಿತಃ ॥ ೫೮ ॥
ಗಂಗಾಯಮುನಯೋಃ ಪಾರ್ಶ್ವೇ ಶೂದ್ರಕೇಶ್ವರಸಂಜ್ಞಿತಂ ।
ಲಿಂಗಂ ಸಂಸ್ಥಾಪಿತಂ ತೇನ ಸರ್ವಪಾತಕನಾಶನಂ ॥ ೫೯ ॥
ಯಸ್ತಯೋರ್ವಿಧಿವತ್ಸ್ನಾನಂ ಕೃತ್ವಾ ಪೂಜಯತೇ ನರಃ ।
ಶೂದ್ರಕೇಶ್ವರಸಂಜ್ಞಂ ಚ ಲಿಂಗಂ ಶ್ರದ್ಧಾ ಸಮನ್ವಿತಃ ॥ ೬೦ ॥
ಸ ಸರ್ವೈಃ ಪಾತಕೈರ್ಮುಕ್ತಃ ಪ್ರಯಾತಿ ಶಿವಮಂದಿರಂ ।
ಸ್ತೂಯಮಾನಶ್ಚ ಗಂಧರ್ವೈರ್ವಿಮಾನವರಮಾಶ್ರಿತಃ ॥ ೬೧ ॥
ಯಸ್ತತ್ರ ತ್ಯಜತಿ ಪ್ರಾಣಾನ್ ಕೃತ್ವಾ ಪ್ರಾಯೋಪವೇಶನಂ ।
ನ ಚ ಭೂಯೋಽತ್ರ ಸಂಸಾರೇ ಸ ಜನ್ಮಾಪ್ನೋತಿ ಮಾನವಃ ॥ ೬೨ ॥
ಗಂಡೂಷಮಪಿ ತೋಯಸ್ಯ ಯಸ್ತಸ್ಯ ನಿವಸನ್ಪಿಬೇತ್ ।
ಸೋಽಪಿ ಸಂಮುಚ್ಯತೇ ಪಾಪಾದಾಜನ್ಮಮರಣಾಂತಿಕಾತ್ ॥ ೬೩ ॥
ಯಸ್ತತ್ರ ಬ್ರಾಹ್ಮಣೇಂದ್ರಾಣಾಂ ಸಂಪ್ರಯಚ್ಛತಿ ಭೋಜನಂ ।
ಪಿತರಸ್ತಸ್ಯ ತೃಪ್ಯಂತಿ ಯಾವತ್ಕಲ್ಪಶತತ್ರಯಂ ॥ ೬೪ ॥

---

೫೭. ಅದರ ಪ್ರಭಾವದಿಂದ ಆ ಸಮಸ್ತಪ್ರೇತಗಳು ಸ್ವರ್ಗಕ್ಕೆ ತೆರಳಿ ಸ್ವಪ್ನದಲ್ಲಿ ಸಂತೋಷದಿಂದ ಅವನಿಗೆ ದರ್ಶನವಿತ್ತುವು.

೫೮. ಅನಂತರ ಆ ಶೂದ್ರನು ಅದು ಪುಣ್ಯಕರವಾದ ಕ್ಷೇತ್ರವೆಂದರಿತು ಅಲ್ಲಿಯೇ ತಪವನ್ನಾಚರಿಸುತ್ತಿದ್ದನು. ಮರಳಿ ಮನೆಗೆ ಹೋಗಲಿಲ್ಲ.

೫೯. ಅವನು ಗಂಗಾ ಯಮುನಾ ನದಿಗಳ ಪಕ್ಕದಲ್ಲಿ ಸಕಲ ಪಾಪಗಳನ್ನು ಪರಿಹರಿಸುವ ಶೂದ್ರಕೇಶ್ವರವೆಂಬ ಲಿಂಗವನ್ನು ಪ್ರತಿಷ್ಠೆಮಾಡಿದನು.

೬೦–೬೨. ಆ ಗಂಗಾ ಯಮುನಾ ನದಿಗಳಲ್ಲಿ ವಿಧಿಯಂತೆ ಮಿಂದು ಆ ಶೂದ್ರಕೇಶ್ವರ ಲಿಂಗವನ್ನು ಶ್ರದ್ಧೆಯಿಂದ ಪೂಜಿಸುವ ಮಾನವನು ಸಕಲ ಪಾಪಗಳಿಂದ ಮುಕ್ತನೂ, ಗಂಧರ್ವರಿಂದ ಸ್ತುತಿಸಲ್ಪಡುವವನೂ ಆಗಿ ಉತ್ತಮವಾದ ವಿಮಾನವನ್ನೇರಿ ಶಿವಮಂದಿರಕ್ಕೆ ಹೋಗುವನು. ಅಲ್ಲಿ ಪ್ರಾಯೋಪವೇಶಮಾಡಿ ಮಡಿಯುವ ಮನುಷ್ಯನು ಮರಳಿ ಈ ಸಂಸಾರದಲ್ಲಿ ಜನಿಸುವುದಿಲ್ಲ.

೬೩. ಅಲ್ಲಿ ವಾಸಿಸುತ್ತ ನೀರಿನ ಒಂದು ಗುಟುಕನ್ನು ಕುಡಿಯುವವನೂ ಹುಟ್ಟಿಸಾಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೬೪. ಅಲ್ಲಿ ಬ್ರಾಹ್ಮಣೋತ್ತಮರಿಗೆ ಭೋಜನವನ್ನು ನೀಡುವವನ ಪಿತೃಗಳು ಮುನ್ನೂರುಕಲ್ಪಗಳವರೆಗೆ ತೃಪ್ತಿಗೊಳ್ಳುವರು.

ತ್ರುಟಿಮಾತ್ರಂ ಚ ಯೋ ದದ್ಯಾತ್ತತ್ರಸ್ವರ್ಣಂ ಸಮಾಹಿತಃ ।
ಸ ಪ್ರಾಪ್ನೋತಿ ಫಲಂ ಕೃತ್ಸ್ನಂ ರಾಜಸೂಯಾಶ್ವಮೇಧಯೋಃ ॥ ೬೫ ॥
ತಸ್ಮಾತ್ಸರ್ವಪ್ರಯತ್ನೇನ ತತ್ತೀರ್ಥವರಮಾಶ್ರಯೇತ್ ।
ಯ ಇಚ್ಛೇಚ್ಛಾಶ್ವತಂ ಸ್ವರ್ಗಂ ಸದೈವ ಮನುಜೋ ದ್ವಿಜಾಃ ॥ ೬೬ ॥
ಅತ್ರ ಗಾಥಾ ಪುರಾ ಗೀತಾ ಗೌತಮೇನ ಮಹರ್ಷಿಣಾ ।
ಗಂಗಾಯಮುನಯೋಸ್ತಂ ಚ ಪ್ರಭಾವಂ ವೀಕ್ಷ್ಯವಿಸ್ಮಯಾತ್ ॥ ೬೭ ॥
ಗಂಗಾ ಯಮುನಯೋಃ ಸಂಗೇ ನರಃ ಸ್ನಾತ್ವಾ ಸಮಾಹಿತಃ ।
ಶೂದ್ರೇಶ್ವರಂ ಸಮಾಲೋಕ್ಯ ಸದ್ಯಃ ಸ್ವರ್ಗಮವಾಪ್ನುಯಾತ್ ॥ ೬೮ ॥
ಏತದ್ವಃ ಸರ್ವಮಾಖ್ಯಾತಂ ಗಂಗಾ ಯಮುನಯೋರ್ಮಯಾ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಆನರ್ತಕೇಶ್ವರ ಶೂದ್ರಕೇಶ್ವರಮಾಹಾತ್ಮ್ಯವರ್ಣನಂ" ನಾಮ
ಪಂಚಷಷ್ಠಿತಮೋಽಧ್ಯಾಯಃ

---

೬೫. ಅಲ್ಲಿ ಸ್ವಲ್ಪಮಾತ್ರ ಚಿನ್ನವನ್ನು ದಾನಮಾಡುವವನು ರಾಜಸೂಯಾಶ್ವಮೇಧಯಾಗಗಳ ಸಂಪೂರ್ಣಫಲವನ್ನು ಪಡೆಯುವನು.

೬೬. ದ್ವಿಜರೆ! ಶಾಶ್ವತಸ್ವರ್ಗವನ್ನು ಇಚ್ಛಿಸುವ ನರನು ಪ್ರಯತ್ನಿಸಿ ಆ ತೀರ್ಥವನ್ನು ಆಶ್ರಯಿಸಬೇಕು.

೬೭. ಹಿಂದೆ ಇಲ್ಲಿ ಗೌತಮ ಮಹರ್ಷಿಯು ಗಂಗಾ ಯಮುನಾ ನದಿಗಳ ಪ್ರಭಾವವನ್ನು ನೋಡಿ ಆಶ್ಚರ್ಯದಿಂದ ಹೀಗೆ ಪದ್ಯವನ್ನು ಹಾಡಿರುವನು.

೬೮. ಗಂಗಾ ಯಮುನಾ ನದಿಗಳ ಸಂಗಮದಲ್ಲಿ ಸಾವಧಾನ ಮನಸ್ಸಿನಿಂದ ಮಿಂದು ಶೂದ್ರೇಶ್ವರನನ್ನು ನೋಡಿದ ಮಾನವನು ಕೂಡಲೆ ಸ್ವರ್ಗವನ್ನು ಹೊಂದುವನು.

೬೯. ಬ್ರಾಹ್ಮಣವರ್ಯರೆ! ನಾನು ಗಂಗಾ ಯಮುನಾ ನದಿಗಳ ಸಕಲ ಪಾಪಗಳನ್ನು ಪರಿಹರಿಸುವ ಮಾಹಾತ್ಮ್ಯವನ್ನೆಲ್ಲ ನಿಮಗೆ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಆನರ್ತಕೇಶ್ವರ ಶೂದ್ರಕೇಶ್ವರಮಾಹಾತ್ಮ್ಯವರ್ಣನ" ವೆಂಬ
ಅರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಷಷ್ಠಿತಮೋಽಧ್ಯಾಯಃ

### ಜಮದಗ್ನಿವಧವರ್ಣನಂ

ಸೂತ ಉವಾಚ :—

ತಥಾ ತತ್ರಾಸ್ತಿ ವಿಖ್ಯಾತಂ ರಾಮಹ್ರದ ಇತಿ ಸ್ಮೃತಂ ।
ಯತ್ರ ತೇ ಪಿತರಸ್ತೇನ ರುಧಿರೇಣ ಪ್ರತರ್ಪಿತಾಃ ॥ ೧ ॥
ತತ್ರ ಭಾದ್ರಪದೇ ಮಾಸಿ ಯೋಽಮಾವಾಸ್ಯಾಮುಪಾಪ್ಯ ಚ ।
ಪಿತೄನ್ ಸಂತರ್ಪಯೇದ್ಭಕ್ತ್ಯಾ ಸೋಽಶ್ವಮೇಧಫಲಂ ಲಭೇತ್ ॥ ೨ ॥

ಋಷಯ ಊಚುಃ :—

ಅತ್ಯಾಶ್ಚರ್ಯಮಿದಂ ಸೂತ ಯದ್ಬ್ರವೀಷಿ ಮಹಾಮತೇ ।
ಯತ್ತೇನ ಪಿತರಸ್ತತ್ರ ರುಧಿರೇಣ ಪ್ರತರ್ಪಿತಾಃ ॥ ೩ ॥
ಪಿತೄಣಾಂ ತರ್ಪಣಾರ್ಥಾಯ ಮೇಧ್ಯಾಃ ಸಂಕೀರ್ತಿತಾ ಬುಧೈಃ ।
ತದಾರ್ಥಾ ರುಧಿರಂ ಪ್ರೋಕ್ತಂ ರಾಕ್ಷಸಾನಾಂ ಪ್ರತರ್ಪಣೇ ॥ ೪ ॥
ಶ್ರುತಿಸ್ಮೃತಿವಿರುದ್ಧಂ ಚ ಕರ್ಮ ಸದ್ಭಿರ್ವಿಗರ್ಹಿತಂ ।
ಜಾಮದಗ್ನ್ಯೇನ ತಚ್ಚೀರ್ಣಂ ಕಸ್ಮಾತ್ಸೂತ ವದಸ್ವ ನಃ ॥ ೫ ॥

---

## ಕನ್ನಡದ ಅನುವಾದ

### ಜಮದಗ್ನಿವಧವರ್ಣನ

೧. ಸೂತನು ಹೇಳುತ್ತಾನೆ :—ಅಲ್ಲಿ ಪ್ರಸಿದ್ಧವಾದ ರಾಮಹ್ರದವಿರುವುದು. ಅಲ್ಲಿ ಪರಶುರಾಮನು ರಕ್ತದಿಂದ ಪಿತೃಗಳಿಗೆ ತರ್ಪಣಮಾಡಿರುವನು.

೨. ಅಲ್ಲಿ ಭಾದ್ರಪದ ಮಾಸದ ಅಮಾವಾಸ್ಯೆಯ ದಿನ ಭಕ್ತಿಯಿಂದ ಪಿತೃಗಳಿಗೆ ತರ್ಪಣಮಾಡಿದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೩. ಋಷಿಗಳು ಹೇಳುತ್ತಾರೆ :—ಪ್ರಾಜ್ಞನಾದ ಸೂತನೆ! ಪರಶುರಾಮನು ರಕ್ತದಿಂದ ಪಿತೃಗಳನ್ನು ತೃಪ್ತಿಗೊಳಿಸಿದನೆಂದು ನೀನು ಹೇಳಿರುವುದು ಅತ್ಯಾಶ್ಚರ್ಯವನ್ನುಂಟುಮಾಡುವುದು.

೪. ವಿದ್ವಾಂಸರು ಪಿತೃತರ್ಪಣಕ್ಕೆ ಪವಿತ್ರವಾದ ವಸ್ತುಗಳನ್ನು ವಿಧಿಸಿರುವರು. ರಾಕ್ಷಸರ ತರ್ಪಣಕ್ಕೆ ರಕ್ತವು ವಿಹಿತವಾಗಿದೆ.

೫. ಸೂತ! ಪರಶುರಾಮನು ಶ್ರುತಿಸ್ಮೃತಿ ವಿರುದ್ಧವಾದ ಕರ್ಮವನ್ನು ಏಕೆ ಮಾಡಿದನು? ಅದನ್ನು ನಮಗೆ ಹೇಳು.

ಸೂತ ಉವಾಚ :—

ತೇನ ಕೋಪವಶಾತ್ಕರ್ಮ ಪ್ರತಿಜ್ಞಾಂ ಪರಿರಕ್ಷಿತಾ ।
ತತ್ಕೃತಂ ತರ್ಪಿತಾ ಯೇನ ಪಿತರೋ ರುಧಿರೇಣ ತೇ ॥ ೬ ॥
ಪಿತಾ ತಸ್ಯ ಪುರಾ ವಿಪ್ರಾ ಜಮದಗ್ನಿರ್ನಿಪಾತಿತಃ ।
ಕ್ಷತ್ರಿಯೇಣ ಸ್ವಧರ್ಮಸ್ಥೋ ವಿನಾ ದೋಷಂ ದ್ವಿಜೋತ್ತಮಾಃ ॥ ೭ ॥
ತತಃ ಕೋಪಪರೀತೇನ ತೇನ ಪ್ರೋಕ್ತಂ ಮಹಾತ್ಮನಾ ।
ರಕ್ತೇನ ಕ್ಷತ್ರಿಯೋತ್ಥೇನ ಸಂತರ್ಪ್ಯಾಃ ಪಿತರೋ ಮಯಾ ॥ ೮ ॥
ಏತಸ್ಮಾತ್ಕಾರಣಾತ್ತೇನ ರುಧಿರೇಣ ಮಹಾತ್ಮನಾ ।
ಪಿತರಸ್ತರ್ಪಿತಾಃ ಸಮ್ಯಕ್ತಿಲಮಿಶ್ರೇಣ ಭಕ್ತಿತಃ ॥ ೯ ॥

ಋಷಯ ಊಚುಃ :—

ಜಮದಗ್ನಿರ್ಹತಃ ಕಸ್ಮಾತ್ಕ್ಷತ್ರಿಯೇಣ ಮಹಾಮುನಿಃ ।
ಕಿಂ ನಾಮಾ ಸ ಚ ಭೂಪಾಲೋ ವಿಸ್ತರಾದ್ವದ ಸೂತ ತತ್ ॥ ೧೦ ॥

ಸೂತ ಉವಾಚ :—

ಋಚೀಕ ತನಯಃ ಪೂರ್ವಂ ಜಮದಗ್ನಿರಿತಿಸ್ಮೃತಃ ।
ಹಾಟಕೇಶ್ವರಜೇ ಕ್ಷೇತ್ರೇ ತತ್ರಾಸೀದ್ದಗ್ಧಕಲ್ಮಷಃ ॥ ೧೧ ॥

---

೬. ಸೂತನು ಹೇಳುತ್ತಾನೆ:—ಪ್ರತಿಜ್ಞೆಯನ್ನು ಪಾಲಿಸುವ ಅವನು ಕೋಪದಿಂದ ಪಿತೃಗಳಿಗೆ ರಕ್ತದಿಂದ ತರ್ಪಣಮಾಡಿದನು.

೭. ದ್ವಿಜರೆ! ಹಿಂದೆ ಆ ಪರಶುರಾಮನ ತಂದೆಯೂ ಸ್ವಕರ್ಮಾಸಕ್ತನೂ ಆದ ಜಮದಗ್ನಿಯನ್ನು ದೋಷವಿಲ್ಲದೆ ಕ್ಷತ್ರಿಯನು ಕೊಂದನು.

೮. ಆದರಿಂದ ಕುಪಿತನಾದ ಪರಶುರಾಮನು ನಾನು ಕ್ಷತ್ರಿಯ ರಕ್ತದಿಂದ ಪಿತೃಗಳಿಗೆ ತರ್ಪಣಮಾಡುವೆನು ಎಂದು ಹೇಳಿದನು.

೯. ಈ ಕಾರಣದಿಂದ ಮಹಾತ್ಮನಾದ ಅವನು ತಿಲಮಿಶ್ರವಾದ ರಕ್ತದಿಂದ ಪಿತೃಗಳಿಗೆ ಭಕ್ತಿಯಿಂದ ತರ್ಪಣಮಾಡಿದನು.

೧೦. ಋಷಿಗಳು ಹೇಳುತ್ತಾರೆ:—ಕ್ಷತ್ರಿಯನು ಮಹಾಮುನಿಯಾದ ಜಮದಗ್ನಿಯನ್ನು ಏಕೆ ಕೊಂದನು? ಆ ರಾಜನ ಹೆಸರೇನು? ಅದನ್ನು ನಮಗೆ ವಿಸ್ತಾರವಾಗಿ ಹೇಳು.

೧೧. ಸೂತನು ಹೇಳುತ್ತಾನೆ:—ಹಿಂದೆ ಋಚೀಕನ ಪುತ್ರನೂ, ಪಾಪರಹಿತನೂ ಆದ ಜಮದಗ್ನಿಯೆಂಬ ಮಹರ್ಷಿಯು ಹಾಟಕೇಶ್ವರಕ್ಷೇತ್ರದಲ್ಲಿ ವಾಸಮಾಡುತ್ತಿದ್ದನು.

ಚತ್ವಾರಸ್ತಸ್ಯ ಪುತ್ರಾಶ್ಚ ಬಭೂವುರ್ಗುಣಸಂಯುತಾಃ ।
ಜಘನ್ಯೋಽಪಿ ಗುಣಜ್ಯೇಷ್ಠಸ್ತೇಷಾಂ ರಾಮೋ ಬಭೂವ ಹ ॥ ೧೨ ॥
ಕದಾಚಿದ್ವಸತಸ್ತಸ್ಯ ಜಮದಗ್ನೇರ್ಮಹಾವನೇ ।
ಪುತ್ರೇಷು ಕಂದಮೂಲಾರ್ಥಂ ನಿರ್ಗತೇಷು ವನಾದ್ಬಹಿಃ ॥ ೧೩ ॥
ಏತಸ್ಮಿನ್ನಂತರೇ ಪ್ರಾಪ್ತೋ ಹೈಹಯಾಧಿಪತಿರ್ಬಲೀ ।
ಸಹಸ್ರಾರ್ಜುನ ಇತ್ಯೇವ ವಿಖ್ಯಾತೋ ಯೋ ಮಹೀತಲೇ ॥ ೧೪ ॥
ಮೃಗಲಿಪ್ಸುರ್ವನೇ ತಸ್ಮಿನ್ ಭ್ರಮಮಾಣ ಇತಸ್ತತಃ ।
ಶ್ರಮಾರ್ತೋ ವೃಷರಾಶಿಸ್ಥೇ ಭಾಸ್ಕರೇ ದಿನಮಧ್ಯಗೇ ॥ ೧೫ ॥
ತತಸ್ತಮಾಶ್ರಮಂ ದೃಷ್ಟ್ವಾ ನಾನಾದ್ರುಮಸಮಾಕುಲಂ ।
ಚತುರಂಗೇನ ಸೈನ್ಯೇನ ಸಹಿತಃ ಪ್ರವಿವೇಶ ಹ ॥ ೧೬ ॥
ಅಥಾಪಶ್ಯತ್ಸ ತತ್ರಸ್ಥಂ ಜಮದಗ್ನಿಂ ಮಹಾಮುನಿಂ ।
ಉಪವಿಷ್ಟಂ ಕೃತಸ್ನಾನಂ ದೇವಾರ್ಚನಪರಾಯಣಂ ॥ ೧೭ ॥
ಅಥ ತಂ ಪಾರ್ಥಿವಂ ದೃಷ್ಟ್ವಾ ಸ ಮುನಿಸ್ತುಷ್ಟಿಸಂಯುತಃ ।
ಅರ್ಘ್ಯಂ ದತ್ವಾ ಯಥಾನ್ಯಾಯಂ ಸ್ವಾಗತೇನಾಭಿನಂದ್ಯ ಚ ॥ ೧೮ ॥
ಸೋಽಪಿ ತಂ ಪ್ರಣಿಪತ್ಯೋಚ್ಚೈರ್ವಿನಯೇನ ಸಮನ್ವಿತಃ ।
ಪ್ರತಿಸಂಭಾಷಯಾಮಾಸ ಕುಶಲಂ ಪರ್ಯಪೃಚ್ಛತ ॥ ೧೯ ॥

---

೧೨. ಆವನಿಗೆ ಗುಣಶಾಲಿಗಳಾದ ನಾಲ್ಕು ಮಂದಿ ಮಕ್ಕಳಿದ್ದರು. ಅವರಲ್ಲಿ ಪರಶುರಾಮನು ಕಿರಿಯವನಾದರೂ ಗುಣಗಳಿಂದ ಹಿರಿಯವನಾಗಿದ್ದನು.

೧೩—೧೪. ಒಂದಾನೊಂದು ದಿನ ಕಾಡಿನಲ್ಲಿ ಜಮದಗ್ನಿಯು ವಾಸಮಾಡುತ್ತಿರಲು ಪುತ್ರರು ಗಡ್ಡೆಗೆಣಸುಗಳಿಗಾಗಿ ಕಾಡಿನಿಂದ ಹೊರಗೆ ಹೋಗಿರಲು ಭೂಮಂಡಲದಲ್ಲಿ ಸಹಸ್ರಾರ್ಜುನ ಎಂದು ವಿಖ್ಯಾತನಾದ ಹೇಹಯರಾಜನು ಅಲ್ಲಿಗೆ ಬಂದನು.

೧೫—೧೬. ಅವನು ಆ ಕಾಡಿನಲ್ಲಿ ಮೃಗಗಳನ್ನು ಪಡೆಯಲು ಇಲ್ಲಿ ಅಲ್ಲಿ ಸಂಚರಿಸುತ್ತ ವೃಷಭರಾಶಿಯಲ್ಲಿರುವ ಸೂರ್ಯನು ಮಧ್ಯಾಹ್ನದ ವೇಳೆಯಲ್ಲಿ ತಪಿಸುತ್ತಿರಲು ಆಯಾಸಗೊಂಡು ಅನೇಕ ಮರಗಳಿಂದ ವ್ಯಾಪ್ತವಾದ ಆ ಆಶ್ರಮವನ್ನು ಕಂಡು ಚತುರಂಗ ಸೈನ್ಯದೊಡನೆ ಅದನ್ನು ಪ್ರವೇಶಮಾಡಿದನು.

೧೭—೧೮. ಅಲ್ಲಿ ಸ್ನಾನಮಾಡಿ ಕುಳಿತುಕೊಂಡು ದೇವಪೂಜೆಯನ್ನು ಮಾಡುತ್ತಿರುವ ಜಮದಗ್ನಿಯನ್ನು ಕಂಡನು. ತರುವಾಯ ಆ ಜಮದಗ್ನಿಯು ರಾಜನನ್ನು ನೋಡಿ ಸಂತೋಷದಿಂದ ನ್ಯಾಯದಂತೆ ಅರ್ಘ್ಯವನ್ನಿತ್ತು ಸ್ವಾಗತಿಸಿದನು.

೧೯. ಆ ರಾಜನೂ ಆ ಮುನಿಯನ್ನು ವಂದಿಸಿ ವಿನಯದಿಂದ ಕುಶಲಪ್ರಶ್ನೆಯನ್ನು ಮಾಡಿದನು.

ರಾಜೋವಾಚ :—

ಕಚ್ಚಿತ್ತೇ ಕುಶಲಂ ವಿಪ್ರ ಪುತ್ರಶಿಷ್ಯಾನ್ವಿತಸ್ಯ ಚ ।
ಸಾಗ್ನಿಹೋತ್ರಕಲತ್ರಸ್ಯ ಪರಿವಾರಯುತಸ್ಯ ಚ ॥ ೨೦ ॥
ಅದ್ಯ ಮೇ ಸಫಲಂ ಜನ್ಮ ಜೀವಿತಂ ಸಫಲಂ ಚ ಮೇ ।
ಯತ್ತ್ವಂ ತಪೋನಿಧಿರ್ದೃಷ್ಟಃ ಸರ್ವಲೋಕನಮಸ್ಕೃತಃ ॥ ೨೧ ॥
ಏವಮುಕ್ತ್ವಾ ಸ ರಾಜರ್ಷಿರ್ವಿಶ್ರಮ್ಯ ಸುಚಿರಂ ತತಃ ।
ಪೀತ್ವಾಪಸ್ತಮುವಾಚೇದಂ ಪ್ರಣಿಪತ್ಯ ಮಹಾಮುನಿಂ ॥ ೨೨ ॥
ಅನುಜ್ಞಾಂ ದೇಹಿ ಮೇ ಬ್ರಹ್ಮನ್ಪ್ರಯಾಸ್ಯಾಮಿ ನಿಜಂ ಗೃಹಂ ।
ಮಮ ಕೃತ್ಯಂ ಸಮಾದೇಶ್ಯಂ ಯೇನ ತೇ ಸ್ಯಾತ್ಪ್ರಯೋಜನಂ ॥ ೨೩ ॥

ಜಮದಗ್ನಿರುವಾಚ :—

ದೇವತಾರ್ಚನವೇಲಾಯಾಂ ತ್ವಂ ಮೇ ಗೃಹಮುಪಾಗತಃ ।
ಮನೋರಥ ಇವ ಧ್ಯಾತಃ ಸರ್ವದೇವಮಯೋಽತಿಥಿಃ ॥ ೨೪ ॥
ತಸ್ಮಾನ್ಮೇಽಸ್ತಿ ಪರಾ ಪ್ರೀತಿರ್ಭಕ್ತಿಶ್ಚ ನೃಪಸತ್ತಮ ।
ತತ್ಕುರುಷ್ವ ಮಯಾ ದತ್ತಂ ಸ್ವಹಸ್ತೇನೈವ ಭೋಜನಂ ॥ ೨೫ ॥

---

೨೦. ರಾಜನು ಹೇಳುತ್ತಾನೆ:—ಮುನಿಯೆ! ಮಕ್ಕಳು ಶಿಷ್ಯರಿಂದ ಕೂಡಿದವನೂ, ಅಗ್ನಿಹೋತ್ರಿಯೂ, ಪತ್ನೀಪರಿವಾರಗಳಿಂದ ಸಹಿತನೂ ಆದ ನೀನು ಕುಶಲನೇ?

೨೧. ಈ ದಿನ ನಾನು ಸಕಲ ಲೋಕವಂದಿತನಾದ ನಿನ್ನನ್ನು ನೋಡಿದ್ದರಿಂದ ನನ್ನ ಜನ್ಮ ಜೀವಿತಗಳು ಸಫಲವಾದುವು.

೨೨. ಆ ರಾಜರ್ಷಿಯು ಹೀಗೆ ಹೇಳಿ ಬಹಳ ಹೊತ್ತು ವಿಶ್ರಮಿಸಿಕೊಂಡು ನೀರನ್ನು ಕುಡಿದು ನಮಸ್ಕರಿಸಿ ಇಂತೆಂದನು.

೨೩. "ಮುನಿಯೆ! ನನಗೆ ಅನುಮತಿಯನ್ನು ಕೊಡು. ನನ್ನ ಮನೆಗೆ ಹೋಗುವೆನು. ನಿನಗೆ ಪ್ರಯೋಜನವನ್ನುಂಟುಮಾಡುವ ಕಾರ್ಯವನ್ನೂ ನನಗೆ ನೇಮಿಸು."

೨೪. ಜಮದಗ್ನಿಯು ಹೇಳುತ್ತಾನೆ:—ದೊರೆಯೆ! ನಾನು ಚಿಂತಿಸುತ್ತಿರುವ ಮನೋರಥದಂತೆ ನೀನು ದೇವಪೂಜೆಯ ಸಮಯದಲ್ಲಿ ನನ್ನ ಮನೆಗೆ ಬಂದಿರುವೆ. ಅತಿಥಿಯು ಸಕಲ ದೇವತಾ ಸ್ವರೂಪನಾಗಿರುವನು.

೨೫. ಮಹಾರಾಜ! ಆದುದರಿಂದ ನನಗೆ ಅತಿಶಯ ಪ್ರೀತಿಯೂ, ಭಕ್ತಿಯೂ ಉಂಟಾಗಿದೆ. ನನ್ನ ಕೈಯಿಂದಲೇ ಕೊಡಲಾಗುವ ಭೋಜನವನ್ನು, ಸ್ವೀಕರಿಸು.

ರಾಜಾ ವಾ ಬ್ರಾಹ್ಮಣೋವಾಽಥ ಶೂದ್ರೋವಾಽಪ್ಯಂತ್ಯಜೋಽಪಿ ವಾ ।
ವೈಶ್ವದೇವಾಂತಸಂಪ್ರಾಪ್ತಃ ಸೋಽತಿಥಿಃ ಸ್ವರ್ಗಸಂಕ್ರಮಃ ॥ ೨೬ ॥

ರಾಜೋವಾಚ :—

ಮಮೈತೇ ಸೈನಿಕಾ ಬ್ರಹ್ಮಂಛತಶೋಽಥ ಸಹಸ್ರಶಃ ।
ತೈರಭುಕ್ತೈಃ ಕಥಂ ಭೋಕ್ತುಂ ಯುಜ್ಯತೇ ಮಮ ಕೀರ್ತಯ ॥ ೨೭ ॥

ಜಮದಗ್ನಿರುವಾಚ :—

ಸರ್ವೇಷಾಂ ಸೈನಿಕಾನಾಂ ತೇ ಸಂಪ್ರದಾಸ್ಯಾಮಿ ಭೋಜನಂ ।
ನಾಽತ್ರ ಚಿಂತಾ ತ್ವಯಾ ಕಾರ್ಯಾ ಮುನಿರ್ನಿಷ್ಕಿಂಚನೋಽಹ್ಯಹಂ ॥ ೨೮ ॥
ಯೈಷಾ ಪಶ್ಯತಿ ರಾಜೇಂದ್ರ ಧೇನುರ್ಬದ್ಧಾ ಮಮಾಂತಿಕೇ ।
ಏಷಾ ಸೂತೇ ಮನೋಽಭೀಷ್ಟಂ ಪ್ರಾರ್ಥಿತಾ ಸರ್ವದೈವ ಹಿ ॥ ೨೯ ॥

ಸೂತ ಉವಾಚ :—

ತತಶ್ಚ ಕೌತುಕಾವಿಷ್ಟಃ ಸ ನೃಪೋ ದ್ವಿಜಸತ್ತಮಾಃ ।
ಬಾಢಮಿತ್ಯೇವ ಸಂಪ್ರೋಚ್ಯ ತಸ್ಮಿನ್ನೇವಾಶ್ರಮೇ ಸ್ಥಿತಃ ॥ ೩೦ ॥
ತತಃ ಸಂತರ್ಪ್ಯ ದೇವಾಂಶ್ಚ ಪಿತೄಂಶ್ಚ ತದನಂತರಂ ।
ಪೂಜಯಿತ್ವಾ ಹವಿರ್ವಾಹಂ ಬ್ರಾಹ್ಮಣಾಂಶ್ಚ ತತಃ ಪರಂ ॥ ೩೧ ॥
ಉಪವಿಷ್ಟಸ್ತತಃ ಸಾರ್ಧಂ ಸರ್ವೈರ್ಭೃತ್ಯೈರ್ಬುಭುಕ್ಷಿತೈಃ ।
ಶ್ರಮಾರ್ತೈರ್ವಿಸ್ಮಯಾವಿಷ್ಟೈಃ ಕೃತೇ ತಸ್ಯ ದ್ವಿಜೋತ್ತಮಾಃ ॥ ೩೨ ॥

---

೨೬. ವೈಶ್ವದೇವದ ಕೊನೆಯಲ್ಲಿ ಬಂದ ರಾಜನಾಗಲಿ, ಬ್ರಾಹ್ಮಣನಾಗಲಿ, ಶೂದ್ರನಾಗಲಿ, ಚಂಡಾಲನಾಗಲಿ ಸ್ವರ್ಗಕ್ಕೆ ಸೇತುವೆಯಂತಿರುವ ಅತಿಥಿಯಾಗಿರುವನು.

೨೭. ರಾಜನು ಹೇಳುತ್ತಾನೆ:—ಮುನಿಯೆ! ನನ್ನ ಸಾವಿರಾರು ಮಂದಿ ಸೈನಿಕರು ಭುಂಜಿಸದೆ ನಾನು ಭೋಜನಮಾಡುವುದು ಹೇಗೆ ಉಚಿತ? ನೀನೇ ಹೇಳು.

೨೮—೨೯. ಜಮದಗ್ನಿಯು ಹೇಳುತ್ತಾನೆ:—ಅರಸ! ನಾನು ನಿನ್ನ ಎಲ್ಲ ಸೈನಿಕರಿಗೂ ಭೋಜನವನ್ನು ನೀಡುವೆನು. ನಾನು ಬಡವನಾದ ಮುನಿಯೆಂದು ಆಲೋಚಿಸಬೇಡ. ನನ್ನ ಹತ್ತಿರ ಕಟ್ಟಲ್ಪಟ್ಟು ಕಾಣಿಸುತ್ತಿರುವ ಈ ಧೇನುವು ಯಾವಾಗಲೂ ಮನೋಭೀಷ್ಟವನ್ನುಂಟುಮಾಡುವುದು.

೩೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಬಳಿಕ ರಾಜನು ಕುತೂಹಲಗೊಂಡು ಹಾಗೆಯೇ ಆಗಲೆಂದು ಆ ಆಶ್ರಮದಲ್ಲಿಯೇ ಇದ್ದನು.

೩೧—೩೨. ಅವನು ಅಲ್ಲಿ ದೇವಪಿತೃಗಳಿಗೆ ತರ್ಪಣಗೈದು ಅಗ್ನಿ ಮತ್ತು ಬ್ರಾಹ್ಮಣರನ್ನು ಪೂಜಿಸಿ ಹಸಿವುಗೊಂಡವರೂ, ಆಯಾಸಗೊಂಡವರೂ, ಆಶ್ಚರ್ಯಗೊಂಡವರೂ ಆದ ಎಲ್ಲ ಸೇವಕರೊಡನೆ ಆ ಮುನಿಗಾಗಿ ಕಾದು ಕುಳಿತನು.

ತತಃ ಸ ಪ್ರಾರ್ಥಯಾಮಾಸ ತಾಂ ಧೇನುಂ ಮುನಿಸತ್ತಮಃ ।
ಯೋ ಯತ್ಪ್ರಾರ್ಥಯತೇ ದೇಹಿ ಭೋಜ್ಯಾರ್ಥಂ ತಸ್ಯ ತಚ್ಛುಭೇ ॥ ೩೩ ॥
ತತಃ ಸಾ ಸುಷುವೇ ಧೇನುರನ್ನಮುಚ್ಚಾವಚಂ ಶುಭಂ ।
ಪಕ್ವಾನ್ನಂ ಚ ವಿಶೇಷೇಣ ಚಿತ್ತಾಹ್ಲಾದಕರಂ ಪರಂ ॥ ೩೪ ॥
ತತಃ ಖಾದ್ಯಂ ಚ ಚರ್ವ್ಯಂ ಚ ಲೇಹ್ಯಂ ಚೋಷ್ಯಂ ತಥೈವ ಚ ।
ವ್ಯಂಜನಾನಿ ವಿಚಿತ್ರಾಣಿ ಕಷಾಯಕಟುಕಾನಿ ಚ ।
ಅಮ್ಲಾನಿ ಮಧುರಾಣ್ಯೇವ ತಿಕ್ತಾನಿ ಗುಣವಂತಿ ಚ ॥ ೩೫ ॥
ಏವಂ ಪ್ರಾಪ್ಯ ಪರಾಂ ತೃಪ್ತಿಂ ತಯಾ ಧೇನ್ವಾ ಸ ಭೂಪತಿಃ ।
ಸೇವಕೈಃ ಸಬಲೈಃ ಸಾರ್ಧಮನ್ನೈರಮೃತಸಂಭವೈಃ ॥ ೩೬ ॥
ತತೋ ಭುಕ್ತ್ಯವಸಾನೇತು ಪ್ರಾರ್ಥಯಾಮಾಸ ಭೂಪತಿಃ ।
ತಾಂ ಧೇನುಂ ವಿಸ್ಮಯಾವಿಷ್ಟೋ ಜಮದಗ್ನಿಂ ಮಹಾಮುನಿಂ ॥ ೩೭ ॥
ಕಾಮಧೇನುರಿಯಂ ಬ್ರಹ್ಮನ್ನಾಽರ್ಹಾಽರಣ್ಯನಿವಾಸಿನಾಂ ।
ಮುನೀನಾಂ ಶಾಂತಚಿತ್ತಾನಾಂ ತಸ್ಮಾದ್ಯಚ್ಛ ಮಮ ಸ್ವಯಂ ॥ ೩೮ ॥
ಯೇನಾಽಕರಾನ್ ಕರೋಮ್ಯದ್ಯ ಲೋಕಾಂಸ್ತಸ್ಯಾಃ ಪ್ರಭಾವತಃ ।
ಸಾಧಯಾಮಿ ಚ ದುರ್ಗಸ್ಥಾಂಛತ್ರೂನ್ಭೂರಿ ಬಲಾನ್ವಿತಾನ್ ॥ ೩೯ ॥

---

೩೩. ಬಳಿಕ ಆ ಜಮದಗ್ನಿಯು ಆ ಧೇನುವನ್ನು, "ಮಂಗಳಕರಳೆ! ಇಲ್ಲಿ ಯಾವನು ಭೋಜನಕ್ಕಾಗಿ ಏನನ್ನು ಕೇಳುವನೋ ಅವನಿಗೆ ಅದನ್ನು ಕೊಡು" ಎಂದು ಪ್ರಾರ್ಥಿಸಿದನು.

೩೪–೩೫. ಅನಂತರ ಆ ಧೇನುವು ಮನಸ್ಸಿಗೆ ಆನಂದವನ್ನುಂಟುಮಾಡುವ ಬಗೆಬಗೆಯ ಪಕ್ವಾನ್ನಗಳನ್ನೂ, ಖಾದ್ಯ, ಚರ್ವ್ಯ, ಲೇಹ್ಯ, ಚೋಷ್ಯಗಳನ್ನೂ, ಒಗರು, ಕಾರ, ಹುಳಿ, ಸಿಹಿ, ಕಹಿಯಾದ ನಾನಾ ವಿಧ ವ್ಯಂಜನಗಳನ್ನೂ ಉಂಟುಮಾಡಿತು.

೩೬–೩೭. ಹೀಗೆ ಆ ರಾಜನು ಸೇವಕರಿಂದಲೂ, ಸೈನ್ಯದವರಿಂದಲೂ ಸಹಿತನಾಗಿ ಆ ಧೇನುವಿನಿಂದ ಉಂಟುಮಾಡಲ್ಪಟ್ಟ ಅಮೃತದಂತಿರುವ ಅನ್ನಗಳಿಂದ ಅತ್ಯಂತ ತೃಪ್ತಿಯನ್ನು ಹೊಂದಿ ಭೋಜನದ ಕೊನೆಯಲ್ಲಿ ಆಶ್ಚರ್ಯಗೊಂಡು ಮುನಿಯನ್ನು ಆ ಧೇನುವಿಗಾಗಿ ಹೀಗೆ ಬೇಡಿಕೊಂಡನು.

೩೮. "ಮುನಿಯೆ! ಈ ಕಾಮಧೇನುವು ಅರಣ್ಯದಲ್ಲಿ ವಾಸಿಸುವ ಶಾಂತಚಿತ್ತರಾದ ಮುನಿಗಳಿಗೆ ಅರ್ಹವಾದುದಲ್ಲ. ಆದುದರಿಂದ ನನಗೆ ಕೊಟ್ಟುಬಿಡು.

೩೯. ನಾನು ಈ ಕಾಮಧೇನುವಿನ ಪ್ರಭಾವದಿಂದ ಜನರನ್ನು ಕಂದಾಯ ಕೊಡದವರನ್ನಾಗಿ ಮಾಡುವೆನು. ದುರ್ಗಗಳಲ್ಲಿರುವ ಅತಿ ಬಲಿಷ್ಠರಾದ ಶತ್ರುಗಳನ್ನೆಲ್ಲ ಕೊಲ್ಲುವೆನು.

ಏವಂ ಕೃತೇ ತವ ಶ್ರೇಯೋ ಭವಿಷ್ಯತಿ ಚ ಸದ್ಯಶಃ ।
ಇಹಲೋಕೇ ಪರೇ ಚೈವ ತಸ್ಮಾತ್ಕುರು ಮಯೋದಿತಂ ॥ ೪೦ ॥

ಜಮದಗ್ನಿರುವಾಚ :—

ಹೋಮಧೇನುರಿಯಂ ರಾಜನ್ಮನ್ಮೈಕಾ ಪ್ರಾಣಸಮ್ಮತಾ ।
ಅದೇಯಾ ಸರ್ವದಾ ಪೂಜ್ಯಾ ತಸ್ಮಾನ್ನಾಽರ್ಹಸಿ ಯಾಚಿತುಂ ॥ ೪೧ ॥

ರಾಜೋವಾಚ :—

ಅಹಂ ಶತಸಹಸ್ರಂ ತೇ ಯಚ್ಛಾಮ್ಯಸ್ಯಾಃ ಕೃತೇ ದ್ವಿಜ ।
ಧೇನೂನಾಮಪರಂ ವಿತ್ತಂ ಯಾವನ್ಮಾತ್ರಂ ಪ್ರವಾಂಛಸಿ ॥ ೪೨ ॥

ಜಮದಗ್ನಿರುವಾಚ :—

ಅವಿಕ್ರೇಯಾ ಮಹಾರಾಜ ಸಾಮಾನ್ಯಾಽಪಿ ಹಿ ಗೌಃ ಸ್ಮೃತಾ ।
ಕಿಂ ಪುನರ್ಹೋಮಧೇನುರ್ಯಾ ಪ್ರಭಾವೈರೀದೃಶೈರ್ಯುತಾ ॥ ೪೩ ॥
ವಿಮೋಹಾದ್ಬ್ರಾಹ್ಮಣೋ ಯೋ ಗಾಂ ವಿಕ್ರೀಣಾತಿ ಧನೇಚ್ಛಯಾ ।
ವಿಕ್ರೀಣಾತಿ ನ ಸಂದೇಹಃ ಸ ನಿಜಾಂ ಜನನೀಮಿಹ ॥ ೪೪ ॥
ಸುರಾಂ ಪೀತ್ವಾ ದ್ವಿಜಂ ಹತ್ವಾ ದ್ವಿಜಾನಾಂ ನಿಷ್ಕೃತಿಃ ಸ್ಮೃತಾ ।
ಧೇನುವಿಕ್ರಯ ಕರ್ತ್ತೄಣಾಂ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೪೫ ॥

---

೪೦. ಹೀಗೆ ಮಾಡಿದರೆ ನಿನಗೆ ಇಹಪರ ಲೋಕಗಳಲ್ಲಿ ಶ್ರೇಯಸ್ಸೂ, ಕೀರ್ತಿಯೂ ಉಂಟಾಗುವುದು. ಆದುದರಿಂದ ನಾನು ಹೇಳಿದ್ದನ್ನು ಮಾಡು.''

೪೧. ಜಮದಗ್ನಿಯು ಹೇಳುತ್ತಾನೆ:—ಮಹಾರಾಜ! ನನ್ನ ಪ್ರಾಣದಂತೆ ಇರುವ ಈ ಹೋಮಧೇನುವು ಕೊಡಲರ್ಹವಲ್ಲ. ಆದುದರಿಂದ ಬೇಡಬೇಡ.

೪೨. ರಾಜನು ಹೇಳುತ್ತಾನೆ:—ಮುನಿಯೆ! ಈ ಧೇನುವಿಗಾಗಿ ನಾನು ಒಂದು ಲಕ್ಷ ಬೇರೆ ಹಸುಗಳನ್ನೂ, ನೀನು ಕೇಳುವಷ್ಟು ದ್ರವ್ಯವನ್ನೂ ಕೊಡುವೆನು.

೪೩. ಜಮದಗ್ನಿಯು ಹೇಳುತ್ತಾನೆ:—ಮಹಾರಾಜ! ಸಾಮಾನ್ಯ ಗೋವನ್ನೂ ಮಾರಬಾರದೆಂದು ಸ್ಮೃತಿಯು ಸಾರುವುದು. ಇಂತಹ ಮಾಹಾತ್ಮ್ಯಗಳಿಂದ ಕೂಡಿದ ಹೋಮಧೇನುವಿನ ವಿಷಯವಿನ್ನೇನು.

೪೪. ಬ್ರಾಹ್ಮಣನು ಭ್ರಾಂತಿಯಿಂದ ಧನಸಂಪಾದನೆಯ ಅಪೇಕ್ಷೆಯಿಂದ ಹಸುವನ್ನು ಮಾರಿದರೆ ಅವನು ನಿಜವಾಗಿಯೂ ತನ್ನ ತಾಯಿಯನ್ನು ಮಾರಿದವನಿಗೆ ಸಮಾನನಾದ ಪಾಪಿಯಾಗುವನು.

೪೫. ಸುರಾಪಾನ, ಬ್ರಹ್ಮಹತ್ಯೆಗಳನ್ನು ಮಾಡಿದ ಬ್ರಾಹ್ಮಣರಿಗೆ ಪ್ರಾಯಶ್ಚಿತ್ತವು ವಿಹಿತವಾಗಿರುವುದು. ಹಸುವನ್ನು ಮಾರಿದವರಿಗೆ ಪ್ರಾಯಶ್ಚಿತ್ತವಿಲ್ಲ.

ರಾಜೋವಾಚ :—

ಯದಿ ಯಚ್ಛಸಿ ನೋ ವಿಪ್ರ ಸಾಮ್ನಾ ಧೇನುಮಿಮಾಂ ಮಮ ।
ಬಲಾದಪಿ ಹರಿಷ್ಯಾಮಿ ತಸ್ಮಾತ್ಸಾಮ್ನಾ ಪ್ರದೀಯತಾಂ ॥ ೪೬ ॥

ಸೂತ ಉವಾಚ :—

ತಚ್ಛ್ರುತ್ವಾ ಕೋಪಸಂಯುಕ್ತೋ ಜಮದಗ್ನಿರ್ದ್ವಿಜೋತ್ತಮಾಃ ।
ಅಸ್ತ್ರಮಸ್ತ್ರಮಿತಿಪ್ರೋಚ್ಯ ಸಮುತ್ತಸ್ಥೌ ಸಭಾತಲಾತ್ ॥ ೪೭ ॥
ತತಸ್ತೇ ಸೇವಕಾಸ್ತಸ್ಯ ನೃಪತೇಶ್ಚಿತ್ತವೇದಿನಃ ।
ಅಸ್ತ್ರಾಪ್ತಶಸ್ತ್ರಂ ತಂ ವಿಪ್ರಂ ನಿಜಘ್ನುರ್ನಿಶಿತಾಯುಧೈಃ ॥ ೪೮ ॥
ತಸ್ಯೈವಂ ವಧ್ಯಮಾನಸ್ಯ ಜಮದಗ್ನೇರ್ಮಹಾತ್ಮನಃ ।
ರೇಣುಕಾಖ್ಯಾ ಪ್ರಿಯಾ ಭಾರ್ಯಾ ಪಪಾತೋಪರಿದುಃಖಿತಾ ॥ ೪೯ ॥
ಸಾಽಪಿ ನಾನಾವಿಧೈಸ್ತೀಕ್ಷ್ಣೈಃ ಖಂಡಿತಾವರವರ್ಣಿನೀ ।
ಆಯುಃ ಶೇಷತಯಾ ಪ್ರಾಣೈರ್ನ ಕಥಂಚಿದ್ವಿಯೋಜಿತಾ ॥ ೫೦ ॥
ಏವಂ ಹತ್ವಾ ಸ ವಿಪ್ರೇಂದ್ರಂ ಜಮದಗ್ನಿಂ ಮಹೀಪತಿಃ ।
ತಾಂ ಧೇನುಂ ಕಾಲಯಾಮಾಸ ಯತ್ರ ಮಾಹಿಷ್ಮತೀ ಪುರೀ ॥ ೫೧ ॥
ಅಥ ಸಾ ಕಾಲ್ಯಮಾನಾ ಚ ಧೇನುಃ ಕೋಪಸಮನ್ವಿತಾ ।
ಜಮದಗ್ನಿಂ ಹತಂ ದೃಷ್ಟ್ವಾ ರರಂಭ ಕರುಣಂ ಮುಹುಃ ॥ ೫೨ ॥

---

೪೬. ರಾಜನು ಹೇಳುತ್ತಾನೆ:—ಮುನಿಯೆ! ನೀನು ಸಾಮೋಪಾಯದಿಂದ ಈ ಧೇನುವನ್ನು ಕೊಡದಿದ್ದರೆ ಬಲಾತ್ಕಾರದಿಂದ ಕಸಿದುಕೊಳ್ಳುವೆನು. ಆದುದರಿಂದ ಸಮಾಧಾನದಿಂದ ಕೊಡು.

೪೭. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಜಮದಗ್ನಿಯು ಆ ಮಾತನ್ನು ಕೇಳಿ ಕೋಪಗೊಂಡು ಅಸ್ತ್ರ ಅಸ್ತ್ರ ಎಂದು ಸಭೆಯಿಂದ ಎದ್ದನು.

೪೮. ಬಳಿಕ ಆ ರಾಜನ ಮನಸ್ಸನ್ನರಿತ ಸೇವಕರು ಶಸ್ತ್ರವಿಲ್ಲದ ಆ ಮುನಿಯನ್ನು ಹರಿತವಾದ ಆಯುಧಗಳಿಂದ ಕೊಂದರು.

೪೯. ಹೀಗೆ ಜಮದಗ್ನಿಯು ಕೊಲ್ಲಲ್ಪಡುತ್ತಿರಲು ಅವನ ಪ್ರಿಯೆಯಾದ ರೇಣುಕೆಯೆಂಬ ಭಾರ್ಯೆಯು ದುಃಖದಿಂದ ಅವನ ಮೇಲೆ ಬಿದ್ದಳು.

೫೦–೫೧. ಅವಳನ್ನು ರಾಜನ ಸೇವಕರು ಹರಿತವಾದ ಅನೇಕ ವಿಧ ಬಾಣಗಳಿಂದ ಹೊಡೆಯಲು ಅವಳು ಆಯುಸ್ಸು ಉಳಿದಿರುವುದರಿಂದ ಹೇಗೋ ಸಾಯಲಿಲ್ಲ. ಆ ರಾಜನು ಹೀಗೆ ಜಮದಗ್ನಿಯನ್ನು ಕೊಂದು ಮಾಹಿಷ್ಮತೀ ಪಟ್ಟಣಕ್ಕೆ ಆ ಧೇನುವನ್ನು ತೆಗೆದುಕೊಂಡು ಹೋಗಲು ಎಳೆದನು.

೫೨. ಹೀಗೆ ಎಳೆಯಲ್ಪಡುತ್ತಿರುವ ಆ ಧೇನುವು ಜಮದಗ್ನಿಯು ಮೃತನಾಗಿರುವುದನ್ನು ನೋಡಿ ಕೋಪಗೊಂಡು ದೈನ್ಯದಿಂದ ಕೂಗಿತು.

ತಸ್ಯಾಃ ಸಂರಂಭಮಾಣಾಯಾ ವಕ್ತ್ರಮಾರ್ಗೇಣ ನಿರ್ಗತಾಃ ।
ಪುಲಿಂದಾ ದಾರುಣಾ ಮೇದಾಃ ಶತಶೋಽಥ ಸಹಸ್ರಶಃ ॥ ೫೩ ॥
ನಾನಾಶಸ್ತ್ರಧರಾಃ ಸರ್ವೇ ಯಮದೂತಾ ಇವಾಽಪರಾಃ ।
ಪ್ರೋಚುಸ್ತಾಂ ಸಾದರಂ ಧೇನುಮಾಜ್ಞಾಂ ದೇಹಿ ದ್ರುತಂ ಹಿ ನಃ ॥ ೫೪ ॥
ಸಾಽಬ್ರವೀದ್ಧನ್ಯತಾಮೇತದ್ಧೈಹಯಾಧಿಪತೇರ್ಬಲಂ ।
ಅಥ ತೈಃ ಕೋಪಸಂಯುಕ್ತೈರ್ದಾರುಣೈರ್ಮ್ಲೇಚ್ಛಜಾತಿಭಿಃ ।
ವಿನಾಶಯಿತುಮಾರಬ್ಧಂ ಶಿತೈಃ ಶಸ್ತ್ರೈರ್ನಿರರ್ಗಲಂ ॥ ೫೫ ॥
ನ ಕಶ್ಚಿತ್ಪುರುಷಸ್ತೇಷಾಂ ಸಮ್ಮುಖೋಽಪ್ಯಭವದ್ರಣೇ ।
ಕಿಂ ಪುನಃ ಸಹಸಾ ಯೋದ್ಧುಂ ಭಯೇನ ಮಹತಾನ್ವಿತಃ ॥ ೫೬ ॥
ಅಥ ಭಗ್ನಂ ಬಲಂ ದೃಷ್ಟ್ವಾ ವಧ್ಯಮಾನಂ ಸಮಂತತಃ ।
ಪುಲಿಂದೈರ್ದಾರುಣಾಕಾರೈಃ ಪ್ರೋಚುಸ್ತಂ ಮಂತ್ರಿಣೋ ನೃಪಂ ॥ ೫೭ ॥
ತೇಜೋಹಾನಿಃ ಪರಾ ತೇಽದ್ಯ ಜಾತಾ ಬ್ರಹ್ಮವಧಾದ್ವಿಭೋ ।
ತಸ್ಮಾದ್ಧೇನುಂ ಪರಿತ್ಯಜ್ಯ ಗಮ್ಯತಾಂ ನಿಜಮಂದಿರಂ ॥ ೫೮ ॥
ಯಾವನ್ನಾಗಚ್ಛತೇ ತಸ್ಯ ರಾಮೋ ನಾಮ ಸುತೋ ಬಲೀ ।
ನೋ ಚೇತ್ತೇನ ಹತೋಽತ್ರೈವ ಸಬಲೋ ವಧಮೇಷ್ಯಸಿ ॥ ೫೯ ॥

---

೫೩. ಆ ಧೇನುವು ಕೂಗುತ್ತಿರಲು ಅದರ ಬಾಯಿಯಿಂದ ಭಯಂಕರರಾದ ಸಾವಿರಾರು ಮಂದಿ ಕಿರಾತರೂ, ಮೇಧರೂ ಹೊರಟರು.

೫೪. ಅನೇಕ ಶಸ್ತ್ರಗಳನ್ನು ಧರಿಸಿರುವ ಇತರ ಯಮದೂತರಂತಿರುವ ಅವರು ಪ್ರೀತಿಯಿಂದ ಆ ಧೇನುವನ್ನು ಕುರಿತು ಶೀಘ್ರವಾಗಿ ಅಪ್ಪಣೆಯನ್ನು ಕೊಡು ಎಂದರು.

೫೫. ಆ ಧೇನುವು ಹೈಹಯ ರಾಜನ ಸೈನ್ಯವನ್ನು ಕೊಲ್ಲಿರಿ ಎಂದಿತು. ಬಳಿಕ ಕೋಪಗೊಂಡ ಭಯಂಕರವಾದ ಆ ಮ್ಲೇಚ್ಛರು ಹರಿತವಾದ ಆಯುಧಗಳಿಂದ ಅಡ್ಡಿಯಿಲ್ಲದೆ ಆ ಸೈನಿಕರನ್ನು ಕೊಲ್ಲಲು ಆರಂಭಿಸಿದರು.

೫೬. ಯುದ್ಧದಲ್ಲಿ ಆ ಸೈನ್ಯದಲ್ಲಿರುವ ಒಬ್ಬ ಪುರುಷನೂ ಅತ್ಯಂತ ಭಯದಿಂದ ಅಭಿಮುಖನಾಗಲಿಲ್ಲ.

೫೭. ತರುವಾಯ ಭಯಂಕರವಾದ ಆಕಾರವುಳ್ಳ ಮ್ಲೇಚ್ಛರು ಕೊಲ್ಲುತ್ತಿರುವ ಸೈನ್ಯವನ್ನು ಮಂತ್ರಿಗಳು ನೋಡಿ ರಾಜನನ್ನು ಕುರಿತು ಹೀಗೆಂದರು.

೫೮–೫೯. "ಎಲೈ ಸ್ವಾಮಿಯೆ! ನೀನು ಮುನಿಯನ್ನು ಕೊಂದುದರಿಂದ ನಿನ್ನ ತೇಜಸ್ಸು ನಷ್ಟವಾಗಿದೆ. ಆದುದರಿಂದ ಧೇನುವನ್ನು ತ್ಯಜಿಸಿ ಬಲಿಷ್ಠನಾದ ಈ ಜಮದಗ್ನಿಯ ಸುತನಾದ ರಾಮನು ಬರುವಷ್ಟರಲ್ಲಿ ನಿನ್ನ ಮನೆಗೆ ಹೋಗು. ಹಾಗಿಲ್ಲದಿದ್ದರೆ ಸೈನ್ಯದೊಡನೆ ಇಲ್ಲಿಯೇ ಹತನಾಗುವೆ.

ನೈಷಾ ಶಕ್ಯಾ ಬಲಾನ್ನೇತುಂ ಕಾಮಧೇನುರ್ಮಹೋದಯಾ ।
ಶಕ್ತಿರೂಪಾ ಕರೋತ್ಯೇವಂ ಯಾ ಸೃಷ್ಟಿಂ ಸ್ವಯಮೇವ ಹಿ ॥ ೬೦ ॥
ತತಃ ಸ ಪಾರ್ಥಿವೋ ಭೀತಸ್ತೇಷಾಂ ವಾಕ್ಯಾದ್ವಿಶೇಷತಃ ।
ಜಗಾಮ ಹಿತ್ವಾ ತಾಂ ಧೇನುಂ ಸ್ವಸ್ಥಾನಂ ಹತಸೇವಕಃ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಜಮದಗ್ನಿವಧವರ್ಣನಂ" ನಾಮ
ಷಟ್‌ಷಷ್ಟಿತಮೋಽಧ್ಯಾಯಃ

---

೬೦. ತಾನೇ ಸೃಷ್ಟಿಸುವ ಶಕ್ತಿರೂಪವಾದ ಈ ಕಾಮಧೇನುವನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗಲು ಸಾಧ್ಯವಿಲ್ಲ.

೬೧. ಅನಂತರ ಆ ಮಂತ್ರಿಗಳ ಮಾತಿನಿಂದ ಭೀತನೂ, ಹತಸೇವಕನೂ ಆದ ಆ ರಾಜನು ಆ ಹಸುವನ್ನು ಅಲ್ಲಿಯೇ ಬಿಟ್ಟು ತನ್ನ ಸ್ಥಾನಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಜಮದಗ್ನಿವಧವರ್ಣನ" ವೆಂಬ
ಅರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಷಷ್ಟಿತಮೋಽಧ್ಯಾಯಃ

### ಸಹಸ್ರಾರ್ಜುನವಧವರ್ಣನಂ

ಸೂತ ಉವಾಚ :—

ಏತಸ್ಮಿನ್ನಂತರೇ ಪ್ರಾಪ್ತೋ ರಾಮೋ ಭ್ರಾತೃಭಿರನ್ವಿತಃ ।
ಫಲಾನಿ ಕಂದಮೂಲಾನಿ ಗೃಹೀತ್ವಾಶ್ರಮಸಮ್ಮುಖಃ ॥ ೧ ॥
ಸದೃಷ್ಟ್ವಾ ಸ್ವಾಶ್ರಮಂ ಧ್ವಸ್ತಂ ಪುಲಿಂದ್ಯೈರ್ಬಹುಶೋವೃತಂ ।
ಲಕುಟಾಶ್ಮ ಪ್ರಹಾರೈಸ್ತು ತಾಂ ಧೇನುಂ ಜರ್ಜರೀಕೃತಾಂ ॥ ೨ ॥
ಪಪ್ರಚ್ಛ ಕಿಮಿದಂ ಸರ್ವಂ ವ್ಯಾಕುಲತ್ವಮುಪಾಗತಂ ।
ಆಶ್ರಮಾಸ್ಪದಮಾಭೀರೈಃ ಪುಲಿಂದ್ಯೈಶ್ಚ ಸಮಾವೃತಂ ॥ ೩ ॥
ಕೇನೈಷಾ ಮಾಮಿಕಾ ಧೇನುಃ ಪ್ರಹಾರೈರ್ಜರ್ಜರೀಕೃತಾ ।
ತಾಪಸ್ಯಸ್ತಾಪಸಾಃ ಸರ್ವೇ ಕಸ್ಮಾದೇತೇ ರುದಂತಿ ಚ ॥ ೪ ॥
ಕ್ವ ಸ ಮೇಽದ್ಯ ಪಿತಾ ವೃದ್ಧೋ ಮಾತಾ ಚ ಸುತವತ್ಸಲಾ ।
ನ ಮಾಮದ್ಯ ಯಥಾ ಪೂರ್ವಂ ಸ್ನೇಹಾಚ್ಛಾಯಾತಿ ಸಮ್ಮುಖೀ ॥ ೫ ॥

---

### ಕನ್ನಡದ ಅನುವಾದ

#### ಸಹಸ್ರಾರ್ಜುನವಧವರ್ಣನ

೧. ಸೂತನು ಹೇಳುತ್ತಾನೆ :—ಇಷ್ಟರಲ್ಲಿ ರಾಮನು ಕಂದಮೂಲ ಫಲಗಳನ್ನು ತೆಗೆದುಕೊಂಡು ಸಹೋದರರೊಡನೆ ಆಶ್ರಮಾಭಿಮುಖವಾಗಿ ಬಂದನು.

೨–೩. ಅವನು ತನ್ನ ಆಶ್ರಮವು ಅನೇಕ ಮಂದಿ ಪುಲಿಂದರಿಂದ ಕೂಡಿರುವುದನ್ನೂ, ದೊಣ್ಣೆ, ಕಲ್ಲುಗಳ ಏಟುಗಳಿಂದ ಶಿಥಿಲವಾದ ಆ ಕಾಮಧೇನುವನ್ನೂ ನೋಡಿ, "ಇದೇನು ಎಲ್ಲವೂ ವ್ಯಾಕುಲಗೊಂಡಿವೆ? ಆಶ್ರಮಸ್ಥಾನವು ಶೂದ್ರರಿಂದಲೂ, ಬೇಡರಿಂದಲೂ ಏಕೆ ತುಂಬಿದೆ?

೪. ನನ್ನೀ ಧೇನುವನ್ನು ಪ್ರಹಾರಗಳಿಂದ ಯಾರು ಶಿಥಿಲವಾಗಿ ಮಾಡಿದರು? ಈ ತಾಪಸ ತಾಪಸಿಯರು ಏಕೆ ಅಳುತ್ತಿರುವರು.

೫. ಆ ವೃದ್ಧನಾದ ನನ್ನ ತಂದೆಯೂ, ಸುತಪ್ರಿಯಳಾದ ತಾಯಿಯೂ ಎಲ್ಲಿಗೆ ಹೋದರು? ಈದಿನ ಏಕೆ ಮೊದಲಿನಂತೆ ಸ್ನೇಹದಿಂದ ನನ್ನನ್ನು ಎದುರುಗೊಳ್ಳುವುದಿಲ್ಲ?" ಎಂದು ಕೇಳಿದನು.

ಅಥ ತಸ್ಯ ಸಮಾಚಖ್ಯುರ್ವೃತ್ತಾಂತಂ ಸರ್ವತಾಪಸಾಃ ।
ಯಥಾದೃಷ್ಟಂ ಸುದುಃಖಾರ್ತಾಃ ಸಹಸ್ರಾರ್ಜುನಚೇಷ್ಟಿತಂ ॥ ೬ ॥
ತತಸ್ತೇ ಭ್ರಾತರಃ ಸರ್ವೇ ವಜ್ರಪಾತೋಪಮಂ ವಚಃ ।
ಶ್ರುತ್ವಾ ದೃಷ್ಟ್ವಾ ಚ ತಂ ಶಸ್ತ್ರೈಃ ಖಂಡಿತಂ ಜನಕಂ ನಿಜಂ ॥ ೭ ॥
ಮಾತರಂ ಕ್ಷತಸರ್ವಾಂಗೀಂ ಪ್ರಾಣಶೇಷಾಂ ವ್ಯಥಾನ್ವಿತಾಂ ।
ರುರುದುಃ ಶೋಕಸಂತಪ್ತಾ ಮುಕ್ತ್ವಾ ರಾಮಂ ಮಹಾಬಲಂ ॥ ೮ ॥
ರುದಿತ್ವಾಽಥ ಚಿರಂ ಕಾಲಂ ವಿಪ್ರಲಪ್ಯ ಮುಹುರ್ಮುಹುಃ ।
ಅಂತ್ಯೇಷ್ಟಿಂ ಚಕ್ರಿರೇ ತಸ್ಯ ವೇದೋಕ್ತವಿಧಿನಾ ತತಃ ॥ ೯ ॥
ಅಥ ದಾಹಾಽವಸಾನೇ ತೇ ಕೃತ್ವಾ ಗರ್ತಾಂ ಯಥೋಚಿತಾಂ ।
ಮುಕ್ತ್ವಾ ರಾಮಂ ದದುಸ್ತೋಯಂ ಪಿತುಃ ಪುತ್ರಾಸ್ತಿಲಾನ್ವಿತಂ ॥ ೧೦ ॥
ಅಥಾಽನ್ಯೈಸ್ತಾಪಸೈಃ ಪ್ರೋಕ್ತೋ ರಾಮಃ ಶಸ್ತ್ರಭೃತಾಂ ವರಃ ।
ನ ಪ್ರಯಚ್ಛಸಿ ಕಸ್ಮಾತ್ತ್ವಂ ಪ್ರೇತಪಿತ್ರೇ ಜಲಾಂಜಲಿಂ ॥ ೧೧ ॥
ಅಥಾಽಸೌ ಬಹುಧಾ ಪ್ರೋಕ್ತಸ್ತಾಪಸೈರ್ಜಾಮದಗ್ನಿಜಃ ।
ಪ್ರಹರಾನ್ಗಣಯನ್ಮಾತುಃ ಶಿತಶಸ್ತ್ರವಿನಿರ್ಮಿತಾನ್ ॥ ೧೨ ॥
ತತಸ್ತಾನಬ್ರವೀದ್ರಾಮೋ ವಿನಿಃಶ್ವಸ್ಯ ಮುನೀಶ್ವರಾನ್ ।
ನಿಷೇಧಸ್ತೋಯದಾನಸ್ಯ ಶ್ರೂಯತಾಂ ಯನ್ಮಯಾ ಕೃತಃ ॥ ೧೩ ॥

---

೬. ತರುವಾಯ ಎಲ್ಲ ಮುನಿಗಳೂ ತಾವು ನೋಡಿದಂತೆ ದುಃಖದಿಂದ ಸಹಸ್ರಾರ್ಜುನನ ಕಾರ್ಯವನ್ನು ಹೇಳಿದರು.

೭–೮. ರಾಮನ ಸಹೋದರರೆಲ್ಲ ವಜ್ರಪಾತಕ್ಕೆ ಸಮಾನವಾದ ಆ ಮಾತನ್ನು ಕೇಳಿ ಶಸ್ತ್ರದಿಂದ ಹತನಾದ ತಂದೆಯನ್ನೂ ಗಾಯಗೊಂಡು ಪ್ರಾಣಮಾತ್ರ ಉಳಿದು ವ್ಯಥೆಗೊಂಡಿರುವ ತಾಯಿಯನ್ನೂ ನೋಡಿ ಬಲಿಷ್ಠನಾದ ರಾಮನನ್ನು ಬಿಟ್ಟು ದುಃಖದಿಂದ ಗೋಳಾಡಿದರು.

೯. ಹೀಗೆ ಅವರು ಬಹುಕಾಲ ಅತ್ತು ತಂದೆಗೆ ವೇದೋಕ್ತವಿಧಿಯಿಂದ ಔರ್ಧ್ವದೇಹಿಕಕ್ರಿಯೆಗಳನ್ನುಮಾಡಿದರು.

೧೦. ಅನಂತರ ಅವರು ದಹನಮಾಡಿದಮೇಲೆ ಉಚಿತವಾದ ಕುಣಿಯನ್ನು ನಿರ್ಮಿಸಿ ರಾಮನ ಹೊರತು ಎಲ್ಲರೂ ತಿಲತರ್ಪಣವನ್ನುಮಾಡಿದರು.

೧೧. ಇತರ ತಾಪಸರು ಧಾನುಷ್ಕರಲ್ಲಿ ಉತ್ತಮನಾದ ರಾಮನನ್ನು ಕುರಿತು ನೀನು ಪ್ರೇತನಾದ ತಂದೆಗೆ ಏಕೆ ತರ್ಪಣಮಾಡುವುದಿಲ್ಲ? ಎಂದು ಕೇಳಿದರು.

೧೨–೧೩. ಅವರು ಅನೇಕಸಾರಿ ಕೇಳಲು ರಾಮನು ತಾಯಿಗೆ ಹರಿತವಾದ ಶಸ್ತ್ರದಿಂದುಂಟಾದ ಏಟುಗಳನ್ನು ಎಣಿಸುತ್ತ ಆ ಮುನಿವರ್ಯರನ್ನು ಕುರಿತು ನಿಟ್ಟುಸಿರನ್ನು ಬಿಟ್ಟು ಇಂತೆಂದನು. ನಾನು ತರ್ಪಣಮಾಡದಿರಲು ಕಾರಣವನ್ನು ಕೇಳಿರಿ.

ಅಪರಾಧಂ ವಿನಾ ತಾತಃ ಕ್ಷತ್ರಿಯೇಣ ಹತೋ ಮಮ ।
ಏಕವಿಂಶತಿಃ ಪ್ರಹಾರಾಣಾಂ ಮಾತುರಂಗೇ ಸ್ಥಿತಾ ಮಮ ॥ ೧೪ ॥
ತಸ್ಮಾನ್ನಿಃ ಕ್ಷತ್ರಿಯಾಮುರ್ವೀಂ ಯದ್ಯಹಂ ನ ಕರೋಮಿ ವೈ ।
ಪ್ರಹಾರ ಸಂಖ್ಯಯಾ ವಿಪ್ರಾಸ್ತನ್ಮೇಸ್ಯಾತ್ಸರ್ವಪಾತಕಂ ॥ ೧೫ ॥
ಪಿತೃಮಾತೃವಧಾಜ್ಜಾತಂ ಯತ್ಕೃತಂ ತೇನ ಪಾಪ್ಮನಾ ।
ಕ್ಷತ್ರಿಯಾಪಸದೇನಾಽತ್ರ ತಥಾಽನ್ಯದಪಿ ಕುತ್ಸಿತಂ ॥ ೧೬ ॥
ತತಸ್ತಸ್ಯೈವ ಚಾಽನ್ಯೇಷಾಂ ಕ್ಷತ್ರಿಯಾಣಾಂ ದುರಾತ್ಮನಾಂ ।
ರುಧಿರೈಃ ಪೂರಯಿತ್ವೇಮಾಂ ಗರ್ತಾಂ ಪಿತೃಜಲೋಚಿತಾಂ ।
ತರ್ಪಯಿಷ್ಯಾಮಿ ರಕ್ತೇನ ಪಿತರಂ ನಾಽಹಮಂಭಸಾ ॥ ೧೭ ॥

ಸೂತ ಉವಾಚ :—

ಶ್ರುತ್ವಾ ತೇ ದಾರುಣಾಂ ತಸ್ಯ ಪ್ರತಿಜ್ಞಾಂ ತಾಪಸೋತ್ತಮಾಃ ।
ಪರಂ ವಿಸ್ಮಯಮಾಪನ್ನಾ ನೋಚುಃ ಕಿಂಚಿತ್ತತಃ ಪರಂ ॥ ೧೮ ॥
ಅಥಾಶೌಚಾಂತಮಾಸಾದ್ಯ ರಾಮಃ ಕ್ರೋಧಸಮನ್ವಿತಃ ।
ತೀಕ್ಷ್ಣಂ ಪರಶುಮಾದಾಯ ಮಾಹಿಷ್ಮತ್ಯುನ್ಮುಖಂ ಯಯೌ ॥ ೧೯ ॥
ಸರ್ವೈಸ್ತೈಃ ಶಬರೈಃ ಸಾರ್ಧಂ ಪುಲಿಂದೈರ್ಮೇದಕೈಸ್ತಥಾ ।
ಬದ್ಧ ಗೋಧಾಂಗುಲಿತ್ರಾಣೈರ್ವರಬಾಣಧನುರ್ಧರೈಃ ॥ ೨೦ ॥

---

೧೪. ಕ್ಷತ್ರಿಯನು ತಪ್ಪಿಲ್ಲದೆ ನನ್ನ ತಂದೆಯನ್ನು ಕೊಂದನು. ತಾಯಿಯ ಶರೀರದಲ್ಲಿ ಇಪ್ಪತ್ತೊಂದು ಏಟುಗಳು ಇವೆ.

೧೫. ಆದುದರಿಂದ ಆ ಏಟುಗಳ ಸಂಖ್ಯೆಯಷ್ಟುಸಾರಿ ನಾನು ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡದಿದ್ದರೆ ನನಗೆ ಸಕಲಪಾಪಗಳು ಸಂಭವಿಸುವುವು.

೧೬–೧೭. ಪಾಪಿಯಾದ ಆ ನೀಚಕ್ಷತ್ರಿಯನು ಪಿತೃಮಾತೃವಧೆಯನ್ನೂ, ಇತರ ನೀಚಕಾರ್ಯವನ್ನೂ ಮಾಡಿದ್ದರಿಂದ ಅವನ ಮತ್ತು ಇತರ ದುಷ್ಟ ಕ್ಷತ್ರಿಯರ ರಕ್ತದಿಂದ ಪಿತೃತರ್ಪಣಕ್ಕೆ ಯೋಗ್ಯವಾದ ಈ ಕುಣಿಯನ್ನು ತುಂಬಿ ರಕ್ತದಿಂದ ತಂದೆಗೆ ತರ್ಪಣಮಾಡುವೆನು. ನೀರಿನಿಂದ ಮಾಡುವುದಿಲ್ಲ.

೧೮. ಸೂತನು ಹೇಳುತ್ತಾನೆ:—ಆ ಮುನಿವರ್ಯರು ಅವನ ದಾರುಣ ಪ್ರತಿಜ್ಞೆಯನ್ನು ಕೇಳಿ ಅತ್ಯಂತ ಆಶ್ಚರ್ಯಗೊಂಡು ಮುಂದೇನೂ ಮಾತಾಡಲಿಲ್ಲ.

೧೯–೨೦. ತರುವಾಯ ರಾಮನು ಪಿತ್ರಾಶೌಚವನ್ನು ಕಳೆದುಕೊಂಡು ಕೋಪದಿಂದ ಹರಿತವಾದ ಕೊಡಲಿಯನ್ನು ತೆಗೆದುಕೊಂಡು ಬಿಲ್ಲುಬಾಣಗಳನ್ನು ಹಿಡಿದವರೂ, ಉಡುವಿನ ತೊಗಲಿನ ಚೀಲವನ್ನು ಬೆರಳಿಗೆ ಹಾಕಿಕೊಂಡವರೂ ಆದ ಶಬರರು, ಪುಲಿಂದರು, ಮೇದಕರು ಇವರೆಲ್ಲರೊಡನೆ ಮಾಹಿಷ್ಮತೀ ನಗರಾಭಿಮುಖವಾಗಿ ಹೋದನು.

ತಥಾಽರ್ಜುನೋಽಪಿ ತಂ ಶ್ರುತ್ವಾ ಸಮಾಯಾಂತಂ ಭೃಗೂತ್ತಮಂ ।
ಸೈನ್ಯೇನ ಮಹತಾಯುಕ್ತಂ ಪ್ರತಿಜ್ಞಾಧಾರಿಣಂ ತಥಾ ॥ ೨೧ ॥
ತತಸ್ತು ಸಮ್ಮುಖೋ ಹೃಷ್ಟೋ ಯುದ್ಧಾರ್ಥಂ ಸ ವಿನಿರ್ಯಯೌ ।
ಸಾರ್ಧಂ ನಾನಾವಿಧೈರ್ಯೋಧೈಃ ಸರ್ವೈರ್ದೇವಾಸುರೋಪಮೈಃ ॥ ೨೨ ॥
ಅಥಾಽಭವನ್ಮಹಾಯುದ್ಧಂ ಪುಲಿಂದಾನಾಂ ದ್ವಿಜೋತ್ತಮಾಃ ।
ಹೈಹಯಾಧಿಪತೇರ್ಯೋಧೈಃ ಸಾರ್ಧಂ ದೇವಾಸುರೋಪಮೈಃ ॥ ೨೩ ॥
ತತಸ್ತೇ ಹೈಹಯಾಃ ಸರ್ವೇ ಶರೈರಾಶೀವಿಷೋಪಮೈಃ ।
ವಧ್ಯಂತೇ ಶಬರೈಃ ಸಂಖ್ಯೇ ಗರ್ಜಮಾನೈರ್ಮುಹುರ್ಮುಹುಃ ॥ ೨೪ ॥
ಬ್ರಹ್ಮಹತ್ಯಾ ಸಮುತ್ಥೇನ ಪಾತಕೇನ ತತಶ್ಚ ತೇ ।
ಜಾತಾ ನಿಸ್ತೇಜಸಃ ಸರ್ವೇ ಪ್ರಪತಂತಿ ಧರಾತಲೇ ॥ ೨೫ ॥
ನ ಕಶ್ಚಿತ್ಪೌರುಷಂ ತತ್ರ ಸಂಪ್ರದರ್ಶಯಿತುಂ ಕ್ಷಮಃ ।
ಪಲಾಯನಪರಾಃ ಸರ್ವೇ ವಧ್ಯಂತೇ ನಿಶಿತೈಃ ಶರೈಃ ॥ ೨೬ ॥
ಅಥ ಭಗ್ನಂ ಬಲಂ ದೃಷ್ಟ್ವಾ ಹೈಹಯಾಧಿಪತಿಃ ಕ್ರುಧಾ ।
ಸ್ವಚಾಪಂ ನಾಂಥಯಾಮಾಸ ಸಜ್ಯಂ ಕರ್ತುಂ ತ್ವರಾನ್ವಿತಃ ।
ಶಕ್ನೋತಿ ನಾರೋಪಯಿತುಂ ಸುಯತ್ನಮಪಿ ಚಾಶ್ರಿತಃ ॥ ೨೭ ॥
ತತಶ್ಚಾಕರ್ಷಯಾಮಾಸ ಖಡ್ಗಂ ಕೋಶಾತ್ಸುನಿರ್ಮಲಂ ।
ಆಕ್ರಷ್ಟುಂ ನ ಚ ಶಕ್ನೋತಿ ವೈಲಕ್ಷ್ಯಂ ಪರಮಂ ಗತಃ ॥ ೨೮ ॥

---

೨೧–೨೨. ಹಾಗೆಯೇ ಅರ್ಜುನನೂ ಪ್ರತಿಜ್ಞೆಮಾಡಿ ದೊಡ್ಡ ಸೈನ್ಯದೊಡನೆ ಪರಶುರಾಮನು ಬಂದಿರುವುದನ್ನು ಕೇಳಿ ದೇವಾಸುರರಂತಿರುವ ಸಮಸ್ತ ಭಟರೊಡನೆ ಸಂತೋಷದಿಂದ ಯುದ್ಧಕ್ಕಾಗಿ ಹೊರಟನು.

೨೩. ತರುವಾಯ ಪುಲಿಂದರಿಗೆ ಸಹಸ್ರಾರ್ಜುನನ ಮಹಾವೀರರಾದ ಭಟರೊಡನೆ ಭಯಂಕರವಾದ ಯುದ್ಧವು ನಡೆಯಿತು.

೨೪–೨೫. ಯುದ್ಧದಲ್ಲಿ ಶಬರರು ಗರ್ಜಿಸುತ್ತ ಸರ್ಪದಂತಿರುವ ಬಾಣಗಳಿಂದ ಸಹಸ್ರಾರ್ಜುನನ ಯೋಧರನ್ನು ಕೊಂದರು. ಅವರು ಬ್ರಹ್ಮಹತ್ಯೆಯಿಂದುಂಟಾದ ಪಾಪದಿಂದ ತೇಜೋಹೀನರಾಗಿ ನೆಲದಮೇಲೆ ಬಿದ್ದರು.

೨೬. ಅವರಲ್ಲೊಬ್ಬನೂ ತನ್ನ ಪೌರುಷವನ್ನು ತೋರಿಸಲು ಶಕ್ತನಾಗಲಿಲ್ಲ. ಎಲ್ಲರೂ ಓಡಿಹೋಗುತ್ತ ಹರಿತವಾದ ಬಾಣಗಳಿಂದ ಹೊಡೆಯಲ್ಪಟ್ಟರು.

೨೭–೨೮. ಅನಂತರ ಸಹಸ್ರಾರ್ಜುನನು ತನ್ನ ಬಲವು ನಷ್ಟವಾದುದನ್ನು ನೋಡಿ ಕೋಪದಿಂದ ಬೇಗನೆ ತನ್ನ ಬಿಲ್ಲಿಗೆ ಹೆದೆಯೇರಿಸಲು ಇಚ್ಛಿಸಿದನು. ಎಷ್ಟು ಪ್ರಯತ್ನಿಸಿದರೂ ಅದು ಆಗಲಿಲ್ಲ. ಒರೆಯಿಂದ ಕತ್ತಿಯನ್ನು ಎಳೆಯಲು ಯತ್ನಿಸಿದನು. ಆದರೆ ಎಳೆಯಲು ಶಕ್ತನಾಗದೆ ಅತ್ಯಂತ ಲಜ್ಜಿತನಾದನು.

ಗದಯಾ ನಿರ್ಜಿತೋ ರೌದ್ರೋ ರಾವಣೋ ಲೋಕರಾವಣಃ ।
ಯಯಾ ಸಾಸ್ಯಪತದ್ಧಸ್ತಾತ್ತತ್ಕ್ಷಣಾತ್ಪೃಥಿವೀತಲೇ ॥ ೨೯ ॥
ನರ್ಮದಾಯಾಃ ಪ್ರವಾಹೋ ಯೈಃ ಸಹಸ್ರಾಖ್ಯೈಃ ಕರೈಃ ಶುಭೈಃ ।
ವಿಧೃತಸ್ತೇನ ತೇ ಸರ್ವೇ ಬಭೂವುಃ ಕಂಪವಿಹ್ವಲಾಃ ॥ ೩೦ ॥
ನ ಶಸ್ತ್ರಂ ಶೇಕುರುದ್ಧರ್ತುಂ ದೈವಯೋಗಾತ್ಕಥಂಚನ ।
ದಿವ್ಯಾಸ್ತ್ರಾಣಾಂ ತಥಾ ಸರ್ವೇ ಮಂತ್ರಾ ವಿಸ್ಮೃತಿಮಾಗತಾಃ ॥ ೩೧ ॥
ಏತಸ್ಮಿನ್ನಂತರೇ ರಾಮಃ ಸಂಪ್ರಾಪ್ತಃ ಕ್ರೋಧಮೂರ್ಛಿತಃ ।
ತೀಕ್ಷ್ಣಂ ಪರಶುಮುದ್ಯಮ್ಯ ತತಸ್ತಂ ಪ್ರಾಹ ನಿಷ್ಠುರಂ ॥ ೩೨ ॥
ಹೈಹಯಾಧಿಪತೇ ಪಾಪ ಯೈಃಕರೈರ್ಜನಕೋ ಮಮ ।
ತ್ವಯಾ ವಿನಿಹತಸ್ತಾನ್ಮೇ ಶೀಘ್ರಂ ದರ್ಶಯ ಸಾಂಪ್ರತಂ ॥ ೩೩ ॥
ಬ್ರಹ್ಮತೇಜೋಹತಃ ಸೋಽಪಿ ಪ್ರೋಕ್ತಸ್ತೇನ ಸುನಿಷ್ಠುರಂ ।
ನೋವಾಚ ಚೋತ್ತರಂ ಕಿಂಚಿದಾಲೇಖ್ಯೋ ಲಿಖಿತೋ ಯಥಾ ॥ ೩೪ ॥
ತತೋ ಭುಜವನಂ ತಸ್ಯ ರಾಮಃ ಶಸ್ತ್ರಭೃತಾಂ ವರಃ ।
ಮುಹುರ್ಮುಹುರ್ವಿನಿರ್ಭರ್ತ್ಸ್ಯ ಪ್ರಚಕರ್ತ ಶನೈಃ ಶನೈಃ ॥ ೩೫ ॥
ತತಶ್ಛಿತ್ವಾ ಶಿರಸ್ತಸ್ಯ ಕುಠಾರೇಣ ಭೃಗೂದ್ವಹಃ ।
ಜಗ್ರಾಹ ರುಧಿರಂ ಯತ್ನಾತ್ಪ್ರಹಾರೇಭ್ಯಃ ಸ್ವಯಂ ದ್ವಿಜಾಃ ॥ ೩೬ ॥

---

೨೯. ಜಗತ್ತನ್ನೆಲ್ಲ ಭಯಗೊಳಿಸಿದ ರಾವಣನನ್ನು ಜಯಿಸಿದ ಗದೆಯೂ ಕೂಡಲೆ ನೆಲದಲ್ಲಿ ಬಿದ್ದಿತು.

೩೦–೩೧. ನರ್ಮದಾ ನದಿಯ ಪ್ರವಾಹವನ್ನು ತಡೆದ ಸಾವಿರ ತೋಳುಗಳೂ ನಡುಗುತ್ತ ಶಸ್ತ್ರವನ್ನು ಎತ್ತಲೂ ಸಮರ್ಥವಾಗಲಿಲ್ಲ. ದಿವ್ಯಾಸ್ತ್ರಮಂತ್ರಗಳೆಲ್ಲವೂ ಮರೆತುಹೋದುವು.

೩೨. ಇಷ್ಟರಲ್ಲಿ ಕ್ರುದ್ಧನಾದ ರಾಮನು ಹರಿತವಾದ ಒಂದು ಕೊಡಲಿಯನ್ನು ಎತ್ತಿ ಸಹಸ್ರಾರ್ಜುನನನ್ನು ಕುರಿತು ಕಠಿನವಾಗಿ ಹೀಗೆಂದನು.

೩೩. "ಪಾಪಿಯಾದ ಹೈಹಯರಾಜನೆ! ನನ್ನ ತಂದೆಯನ್ನು ವಧಿಸಿದ ನಿನ್ನ ಕೈಗಳನ್ನು ನನಗೀಗ ತೋರಿಸು."

೩೪–೩೫. ರಾಮನು ಹೀಗೆ ನುಡಿದರೂ ಬ್ರಹ್ಮತೇಜಸ್ಸಿನಿಂದ ಹತನಾದ ಆ ಸಹಸ್ರಾರ್ಜುನನು ಚಿತ್ರದಲ್ಲಿ ಬರೆದ ಬೊಂಬೆಯಂತೆ ಯಾವ ಉತ್ತರವನ್ನೂ ಹೇಳಲಿಲ್ಲ. ಬಳಿಕ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ರಾಮನು ಅನೇಕಬಾರಿ ಆ ಅರ್ಜುನನನ್ನು ಹೆದರಿಸಿ ಮೆಲ್ಲಮೆಲ್ಲನೆ ಅವನ ತೋಳುಗಳೆಂಬ ವನವನ್ನು ಕತ್ತರಿಸಿದನು.

೩೬–೩೭. ಅನಂತರ ರಾಮನು ಕೊಡಲಿಯಿಂದ ಹೈಹಯನ ತಲೆಯನ್ನು

ಪೂರಯಿತ್ವಾ ಮಹಾಕುಂಭಾಂಛಬರೇಭ್ಯೋ ದದೌ ತತಃ ।
ಮ್ಲೇಚ್ಛೇಭ್ಯೋ ಲುಬ್ಧಕೇಭ್ಯಶ್ಚ ತತಃ ಪ್ರೋವಾಚ ಸಾದರಂ ॥ ೩೭ ॥
ಹಾಟಕೇಶ್ವರಜೇ ಕ್ಷೇತ್ರೇ ಗರ್ತಾ ಮೇ ಭ್ರಾತೃಭಿಃ ಕೃತಾ ।
ಪಿತೃಸಂತರ್ಪಣಾರ್ಥಾಯ ಸಲಿಲೇನ ಪರಿಪ್ಲುತಾ ॥ ೩೮ ॥
ಪ್ರಕ್ಷಿಪಧ್ವಂ ದ್ರುತಂ ಗತ್ವಾ ತಸ್ಯಾಂ ರಕ್ತಮಿದಂ ಮಹತ್ ।
ಪಾಪಸ್ಯಾಸ್ಯ ಸಪತ್ನಸ್ಯ ಮಮಾದೇಶಾದಸಂಶಯಂ ॥ ೩೯ ॥
ಯೇನ ತಾತಂ ನಿಜಂ ಭಕ್ತ್ಯಾ ತರ್ಪಯಿತ್ವಾ ವಿಧಾನತಃ ।
ಋಣಸ್ಯ ಮುಕ್ತಿರ್ಭವತಿ ಯೇನ ಮೇ ಪೈತೃಕಸ್ಯ ಚ ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಹಸ್ರಾರ್ಜುನವಧವರ್ಣನಂ" ನಾಮ
ಸಪ್ತಷಷ್ಟಿತಮೋಽಧ್ಯಾಯಃ

---

ಕತ್ತರಿಸಿ ತಾನೇ ರಕ್ತವನ್ನು ತೆಗೆದು ಕಲಶಗಳಲ್ಲಿ ತುಂಬಿ ಶಬರರು, ಮ್ಲೇಚ್ಛರು, ಲುಬ್ಧಕರು ಇವರಿಗೆ ಕೊಟ್ಟು ಹೀಗೆಂದನು.

೩೮. "ನನ್ನ ಸಹೋದರರು ಹಾಟಕೇಶ್ವರ ಕ್ಷೇತ್ರದಲ್ಲಿ ಪಿತೃತರ್ಪಣಕ್ಕಾಗಿ ನೀರಿನಿಂದ ತುಂಬಿದ ಕುಣಿಯನ್ನು ರಚಿಸಿದ್ದಾರೆ.

೩೯. ನನ್ನ ಅಪ್ಪಣೆಯಿಂದ ನೀವು ಬೇಗನೆ ಹೋಗಿ ಆ ಕುಣಿಯಲ್ಲಿ ಪಾಪಿಯೂ, ನನ್ನ ಶತ್ರುವೂ ಆದ ಇವನ ರಕ್ತವನ್ನು ಹಾಕಿರಿ.

೪೦. ಆದರಿಂದ ಭಕ್ತಿಯಿಂದ ವಿಧಿಯಂತೆ ತಂದೆಗೆ ತರ್ಪಣಮಾಡುವೆನು. ಅದರಿಂದ ನನ್ನ ಪಿತೃಋಣವು ಮುಕ್ತವಾಗುವುದು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಹಸ್ರಾರ್ಜುನವಧವರ್ಣನ"ವೆಂಬ
ಅರುವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಷಷ್ಠಿತಮೋಽಧ್ಯಾಯಃ

## ಸಮುದ್ರಾಪಸಾರಣವೃತ್ತಾಂತವರ್ಣನಂ

ಸೂತ ಉವಾಚ :—

ಅಥ ತೇ ಶಬರಾ ಯತ್ನಾದ್ರಕ್ತಂ ತದ್ಧೈಹಯೋದ್ಭವಂ ।
ತತ್ರ ನಿನ್ಯುಃ ಸ್ಥಿತಾ ಯತ್ರ ಗರ್ತಾ ಸಾ ಪಿತೃಸಂಭವಾ ॥ ೧ ॥
ಭಾರ್ಗವೋಽಪಿ ಚ ತಂ ಹತ್ವಾ ರಕ್ತಮಾದಾಯ ಕೃತ್ಸ್ನಶಃ ।
ತತಃ ಸಂಪ್ರೇಷಯಾಮಾಸ ಯತ್ರ ಗರ್ತಾಽಥ ಪೈತೃಕೀ ॥ ೨ ॥
ನ ಸ ಬಾಲಂ ನ ವೃದ್ಧಂ ಚ ಪರಿತ್ಯಜತಿ ಭಾರ್ಗವಃ ।
ಯೌವನಸ್ಥಂ ವಿಶೇಷೇಣ ಗರ್ಭಸ್ಥಂ ವಾಽಥ ಕ್ಷತ್ರಿಯಂ ॥ ೩ ॥
ಸ್ವಯಂ ಜಘಾನ ಭೂಪಾನ್ ಸ ತೇಷಾಂ ಪಾರ್ಶ್ವೇ ತಥಾ ಪರಾನ್ ।
ವಿಧ್ವಂಸಯತಿ ಕ್ರುದ್ಧಃ ಸಸೈನಿಕೈಶ್ಚ ಸಮಂತತಃ ॥ ೪ ॥
ತಥೈವಾಽಸೃಕ್ಪ್ರಗೃಹ್ಣಾತಿ ಗೃಹ್ಣಾಪಯತಿ ಚಾದರಾತ್ ।
ತೇಷಾಂ ಪಾರ್ಶ್ವೈಸ್ತತಸ್ತೂರ್ಣಂ ಪ್ರೇಷಯಾಮಾಸ ತತ್ರ ಚ ॥ ೫ ॥
ಏವಂ ನಿಃ ಕ್ಷತ್ರಿಯಾಂ ಕೃತ್ವಾ ಕೃತ್ಸ್ನಾಂ ಪೃಥ್ವೀಂ ಭೃಗೂದ್ವಹಃ ।
ಹಾಟಕೇಶ್ವರಜೇ ಕ್ಷೇತ್ರೇ ಜಗಾಮ ತದನಂತರಂ ॥ ೬ ॥

---

## ಕನ್ನಡದ ಅನುವಾದ

### ಸಮುದ್ರಾಪಸಾರಣವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ :—ಬಳಿಕ ಆ ಶಬರರು ಹೈಹಯನ ರಕ್ತವನ್ನು ಪಿತೃಗರ್ತಕ್ಕೆ ತೆಗೆದುಕೊಂಡು ಹೋದರು.

೨. ಹೀಗೆ ಪರಶುರಾಮನು ಆ ಸಹಸ್ರಾರ್ಜುನನನ್ನು ಕೊಂದು ಸಂಪೂರ್ಣ ರಕ್ತವನ್ನು ತೆಗೆದುಕೊಂಡು ಪಿತೃಗರ್ತಕ್ಕೆ ಕಳುಹಿಸಿದನು..

೩. ಅವನು ಬಾಲಕರು, ವೃದ್ಧರು, ಯುವಕರು, ಗರ್ಭಸ್ಥರು ಆದ ಕ್ಷತ್ರಿಯರನ್ನು ಕೂಡ ಬಿಡಲಿಲ್ಲ.

೪. ತಾನೇ ಕ್ರುದ್ಧನಾಗಿ ಸೈನಿಕರೊಡನೆ ರಾಜರನ್ನೂ ಅವರ ಹತ್ತಿರವಿರುವ ಇತರರನ್ನೂ ಕೊಂದನು.

೫. ಹಾಗೆಯೇ ತಾನು ರಕ್ತವನ್ನು ತೆಗೆದುಕೊಂಡನು. ಹತ್ತಿರದಲ್ಲಿರುವವರಿಂದಲೂ ರಕ್ತವನ್ನು ಬೇಗನೆ ಪಿತೃಗರ್ತಕ್ಕೆ ಕಳುಹಿಸಿದನು.

೬. ಹೀಗೆ ರಾಮನು ಸಕಲಭೂಮಿಯನ್ನೂ ಕ್ಷತ್ರಿಯರಿಲ್ಲದ್ದನ್ನಾಗಿ ಮಾಡಿ ಹಾಟಕೇಶ್ವರ ಕ್ಷೇತ್ರಕ್ಕೆ ಹೋದನು.

ತತಸ್ತ್ರೈರುಧಿರೈಃ ಸ್ನಾತ್ವಾ ಸಮಾದಾಯ ತಿಲಾನ್ ಬಹೂನ್ ।
ಅಪಸವ್ಯಂ ಸಮಾದಾಯ ಪ್ರಚಕ್ರೇ ಪಿತೃತರ್ಪಣಂ ॥ ೭ ॥
ಪ್ರತ್ಯಕ್ಷಂ ಸರ್ವವಿಪ್ರಾಣಾಂ ತಥಾಽನ್ಯೇಷಾಂ ತಪಸ್ವಿನಾಂ ।
ಪ್ರತಿಜ್ಞಾಂ ಪೂರಯಿತ್ವಾಽಥ ವಿಶೋಕಃ ಸ ಬಭೂವ ಹ ॥ ೮ ॥
ತತೋ ನಿಃಕ್ಷತ್ರಿಯೇ ಲೋಕೇ ಕೃತ್ವಾ ಹಯಮುಖಂ ಚ ಸಃ ।
ಪ್ರಾಯಚ್ಛತ್ಸಕಲಾಮುರ್ವೀಂ ಬ್ರಾಹ್ಮಣೇಭ್ಯಶ್ಚ ದಕ್ಷಿಣಾಂ ॥ ೯ ॥
ಅಥ ಲಬ್ಧವರಾ ವಿಪ್ರಾಸ್ತಮೂಚುರ್ಭೃಗುಸತ್ತಮಂ ।
ನಾಽಸ್ಮದ್ಭೂಮೌ ತ್ವಯಾ ಸ್ಥೇಯಮೇಕೋ ರಾಜಾ ಯುತಃಸ್ಮೃತಃ ॥೧೦॥
ಸೋಽಪಿ ಬಾಢಮಿತಿ ಪ್ರೋಚ್ಯ ಹರ್ಷೇಣ ಮಹತಾನ್ವಿತಃ ।
ಮಹೀಪರ್ಯಂತಮಾಸಾದ್ಯ ಪ್ರೋವಾಚಾಽಥ ನದೀಪತಿಂ ॥ ೧೧ ॥
ಆರೋಪ್ಯ ಸುಮಹಚ್ಚಾಪಮಾಗ್ನೇಯಾಸ್ತ್ರಂ ಪ್ರಯುಜ್ಯ ಚ ।
ತ್ರಿಶಿಖಾಂ ಭ್ರುಕುಟೀಂ ಕೃತ್ವಾ ಕೋಪೇನ ಮಹತಾನ್ವಿತಃ ॥ ೧೨ ॥

ರಾಮ ಉವಾಚ :—

ಮಯಾ ನಿಃಕ್ಷತ್ರಿಯಾ ಭೂಮಿಃ ಕೃತಾ ಶೈಲವನಾನ್ವಿತಾ ।
ಬ್ರಾಹ್ಮಣೇಭ್ಯಸ್ತತೋ ದತ್ತಾ ವಾಜಿಮೇಧೇ ಮಹಾಮಖೇ ॥ ೧೩ ॥

---

೭. ಬಳಿಕ ಆ ರಕ್ತದಿಂದ ಮಿಂದು ಬಹಳ ಎಳ್ಳನ್ನು ತೆಗೆದುಕೊಂಡು ಅಪಸವ್ಯದಿಂದ ಪಿತೃತರ್ಪಣಮಾಡಿದನು.

೮. ಆ ರಾಮನು ಸಕಲ ಬ್ರಾಹ್ಮಣರು ಋಷಿಗಳು ಇವರ ಮುಂದೆ ಪ್ರತಿಜ್ಞೆಯನ್ನು ಪೂರಯಿಸಿ ದುಃಖರಹಿತನಾದನು.

೯-೧೦. ಹೀಗೆ ಲೋಕವು ಕ್ಷತ್ರಿಯರಿಂದ ಶೂನ್ಯವಾಗಲು ಪರಶುರಾಮನು ಅಶ್ವಮೇಧಯಾಗವನ್ನು ಮಾಡಿ ಸಮಸ್ತಭೂಮಿಯನ್ನು ದಕ್ಷಿಣೆಯೊಡನೆ ಬ್ರಾಹ್ಮಣರಿಗೆ ದಾನಮಾಡಿದನು. ಬಳಿಕ ವರವನ್ನು ಪಡೆದ ವಿಪ್ರರು ಆ ಭಾರ್ಗವನನ್ನು ಕುರಿತು "ರಾಜನೊಬ್ಬನೇ ಪ್ರಪಂಚದಲ್ಲಿರಬೇಕಾದುದರಿಂದ ನೀನು ನಮ್ಮ ಭೂಮಿಯಲ್ಲಿರಬಾರದು" ಎಂದರು.

೧೧-೧೨. ಆ ಭಾರ್ಗವನೂ ಹಾಗೆಯೇ ಆಗಲೆಂದು ಅತ್ಯಂತ ಸಂತೋಷಗೊಂಡವನಾಗಿ ಭೂಮಿಯ ಎಲ್ಲೆಗೆ ಹೋಗಿ ಸಮುದ್ರನನ್ನು ಕುರಿತು ಮಹಾಚಾಪಕ್ಕೆ ಆಗ್ನೇಯಾಸ್ತ್ರವನ್ನು ಜೋಡಿಸಿ ಅತ್ಯಂತ ಕೋಪದಿಂದ ಹುಬ್ಬುಗಂಟನ್ನು ಹಾಕಿಕೊಂಡು ಇಂತೆಂದನು.

೧೩. ರಾಮನು ಹೇಳುತ್ತಾನೆ:—ನಾನು ಶೈಲವನಗಳಿಂದ ಕೂಡಿದ ಭೂಮಿಯನ್ನು ಕ್ಷತ್ರಿಯರಿಲ್ಲದ್ದನ್ನಾಗಿ ಮಾಡಿ ಅಶ್ವಮೇಧಯಾಗದಲ್ಲಿ ಬ್ರಾಹ್ಮಣರಿಗೆ ಆ ಭೂಮಿಯನ್ನು ದಾನಮಾಡಿದೆನು.

ತಸ್ಮಾತ್ತ್ವಂ ದೇಹಿ ಮೇ ಸ್ಥಾನಂ ಕೃತ್ವಾಪಸರಣಂ ಸ್ವಯಂ ।
ನ ಹಿ ದತ್ವಾ ಗ್ರಹೀಷ್ಯಾಮಿ ವಿಪ್ರೇಭ್ಯೋ ಮೇದಿನೀಂ ಪುನಃ ॥ ೧೪ ॥
ನ ಕರೋಷ್ಯಥವಾ ವಾಕ್ಯಂ ಮಮಾದ್ಯತ್ವಂ ನದೀಪತೇ ।
ಸ್ಥಲರೂಪಂ ಕರಿಷ್ಯಾಮಿ ವಹ್ನ್ಯಸ್ತ್ರಪರಿಶೋಷಿತಂ ॥ ೧೫ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸಮುದ್ರೋ ಭಯಸಂಕುಲಃ ।
ಅಪಸಾರಂ ತತಶ್ಚಕ್ರೇ ಯಾವತ್ತಸ್ಯಾಭಿವಾಂಛಿತಂ ॥ ೧೬ ॥
ತತಶ್ಚಕಾರ ತತ್ರೈವ ವಸತಿಂ ಸ ಭೃಗೂದ್ವಹಃ ।
ತಪಶ್ಚರ್ಯಾ ಸಮಾಯುಕ್ತಃ ಪಿತುರ್ವಧಮನುಸ್ಮರನ್ ॥ ೧೭ ॥
ತತಃ ಸರ್ವಾನ್ ಪುಲಿಂದಾಂಶ್ಚ ಶಬರಾನ್ಮೇದ ಸಂಯುತಾನ್ ।
ಭೂಮ್ಯಂತೇ ಧಾರಯಾಮಾಸ ಪರ್ವತೇಷು ಸ ಭಾರ್ಗವಃ ॥ ೧೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸಮುದ್ರಾಪಸಾರಣವೃತ್ತಾಂತವರ್ಣನಂ"
ನಾಮಾಷ್ಟಷಷ್ಟಿತಮೋಽಧ್ಯಾಯಃ

---

೧೪. ಆದುದರಿಂದ ನೀನು ಹಿಂದಕ್ಕೆ ಸರಿದು ನನಗೆ ಸ್ಥಳವನ್ನು ಕೊಡು. ಬ್ರಾಹ್ಮಣರಿಗಿತ್ತ ಭೂಮಿಯನ್ನು ಮರಳಿ ತೆಗೆದುಕೊಳ್ಳಲಾರೆನು.

೧೫. ಅಥವಾ ನೀನು ನನ್ನ ಮಾತನ್ನು ನಡೆಯಿಸದಿದ್ದರೆ ಆಗ್ನೇಯಾಸ್ತ್ರದಿಂದ ನಿನ್ನನ್ನು ಒಣಗಿಸಿ ಸ್ಥಳದಂತೆ ಮಾಡುವೆನು.

೧೬. ಸೂತನು ಹೇಳುತ್ತಾನೆ:—ಸಮುದ್ರನು ರಾಮನ ಆ ಮಾತನ್ನು ಕೇಳಿ ಭಯದಿಂದ ಅವನಿಗಿಷ್ಟವಾದಷ್ಟು ದೂರ ಹಿಂದಕ್ಕೆಸರಿದನು.

೧೭. ಬಳಿಕ ಆ ಪರಶುರಾಮನು ತಂದೆಯ ವಧೆಯನ್ನು ಸ್ಮರಿಸುತ್ತಲೂ, ತಪವನ್ನಾಚರಿಸುತ್ತಲೂ ಅಲ್ಲಿಯೇ ವಾಸಮಾಡಿದನು.

೧೮. ಸಕಲ ಪುಲಿಂದರು, ಶಬರರು, ಮೇದರು ಇವರನ್ನು ಭೂಮಿಯ ಎಲ್ಲೆಯಲ್ಲಿರುವ ಪರ್ವತಗಳಲ್ಲಿರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಮುದ್ರಾಪಸಾರಣವೃತ್ತಾಂತವರ್ಣನ" ವೆಂಬ
ಅರುವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಸಪ್ತತಿತಮೋಽಧ್ಯಾಯಃ

### ರಾಮಹ್ರದೋತ್ಪತ್ತಿವೃತ್ತಾಂತವರ್ಣನಂ

ಸೂತ ಉವಾಚ:—

ತತೋ ನಿಃಕ್ಷತ್ರಿಯೇ ಲೋಕೇ ಕ್ಷತ್ರಿಣ್ಯೋ ವಂಶಕಾರಣಾತ್ ।
ಕ್ಷೇತ್ರಜಾನ್ ಬ್ರಾಹ್ಮಣೇಭ್ಯಶ್ಚ ಸುಷುವುಸ್ತನಯಾನ್ವರಾನ್ ॥ ೧ ॥
ತೇ ವೃದ್ಧಿಂ ಚ ಸಮಾಸಾದ್ಯ ಕ್ಷೇತ್ರಜಾಃ ಕ್ಷತ್ರಿಯೋಪಮಾಃ ।
ಜಗೃಹುರ್ಮೇದಿನೀಂ ವೀರ್ಯಾತ್ಸಂನಿರಸ್ಯ ದ್ವಿಜೋತ್ತಮಾನ್ ॥ ೨ ॥
ತತಸ್ತೇ ಬ್ರಾಹ್ಮಣಾಃ ಸರ್ವೇ ಪರಿಪೂತಿಪದಂ ಗತಾಃ ।
ಪ್ರೋಚುರ್ಭಾರ್ಗವಮಭ್ಯೇತ್ಯ ದುಃಖೇನ ಮಹತಾನ್ವಿತಾಃ ॥ ೩ ॥
ರಾಮ ರಾಮ ಮಹಾಬಾಹೋ ಯಾ ತ್ವಯಾ ವಸುಧಾ ಚ ನಃ ।
ವಾಜಿಮೇಧೇ ಮಖೇ ದತ್ತಾ ಕ್ಷತ್ರಿಯೈಃ ಸಾ ಹೃತಾ ಬಲಾತ್ ॥ ೪ ॥
ತಸ್ಮಾನ್ನೋ ದೇಹಿ ತಾಂ ಭೂಯೋ ಹತ್ವಾ ತಾನ್ ಕ್ಷತ್ರಿಯಾಧಮಾನ್ ।
ಕುರು ಶ್ರೇಯೋಽಭಿವೃದ್ಧಿಂ ತಾಂ ಯದ್ಯಸ್ತಿ ತವ ಪೌರುಷಂ ॥ ೫ ॥

---

### ಕನ್ನಡದ ಅನುವಾದ

### ರಾಮಹ್ರದೋತ್ಪತ್ತಿವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ತರುವಾಯ ಲೋಕವು ಕ್ಷತ್ರಿಯರಿಲ್ಲದ್ದಾಗಲು ಕ್ಷತ್ರಿಯರ ಹೆಂಗಸರು ವಂಶವೃದ್ಧಿಗಾಗಿ ಬ್ರಾಹ್ಮಣರಿಂದ ಕ್ಷೇತ್ರಜಪುತ್ರರನ್ನು ಪಡೆದರು.

೨. ಕ್ಷೇತ್ರಜರಾದ ಆ ಪುತ್ರರು ಕ್ಷತ್ರಿಯರಂತೆ ಬೆಳೆದು ಬ್ರಾಹ್ಮಣರನ್ನು ಸ್ವಶಕ್ತಿಯಿಂದ ಓಡಿಸಿ ಭೂಮಿಯನ್ನು ಸ್ವಾಧೀನಮಾಡಿಕೊಂಡರು.

೩. ಅನಂತರ ಪರಾಜಿತರಾದ ಬ್ರಾಹ್ಮಣರೆಲ್ಲ ಅತಿ ದುಃಖದಿಂದ ಪರಶುರಾಮನೆಡೆಗೆ ಹೋಗಿ ಇಂತೆಂದರು.

೪. ಮಹಾಬಾಹುವಾದ ರಾಮನೆ! ನೀನು ಅಶ್ವಮೇಧಯಾಗದಲ್ಲಿ ನಮಗೆ ಕೊಟ್ಟ ಭೂಮಿಯನ್ನು ಕ್ಷತ್ರಿಯರು ಬಲಾತ್ಕಾರದಿಂದ ಅಪಹರಿಸಿರುವರು.

೫. ಆದುದರಿಂದ ನಿನ್ನಲ್ಲಿ ಪೌರುಷವಿದ್ದರೆ ಆ ನೀಚ ಕ್ಷತ್ರಿಯರನ್ನು ಕೊಂದು ಮರಳಿ ನಮಗೆ ಭೂಮಿಯನ್ನಿತ್ತು ಶ್ರೇಯೋಭಿವೃದ್ಧಿಯನ್ನು ಮಾಡು.

ತತೋ ರಾಮಃ ಕ್ರುಧಾವಿಷ್ಟೋ ಭೂಯಸ್ತೈಃ ಶಬರೈಃ ಸಹ ।
ಪುಲಿಂದೈರ್ಮೇದಕೈಶ್ಚೈವ ಕ್ಷತ್ರಿಯಾಂತಾಯ ನಿರ್ಯಯೌ ॥ ೬ ॥
ತತ್ರೈವ ಕ್ಷತ್ರಿಯಾನ್ ಹತ್ವಾ ರಕ್ತಮಾದಾಯ ತದ್ಬಹು ।
ತಾಂ ಗರ್ತಾಂ ಪೂರಯಾಮಾಸ ಚಕಾರ ಪಿತೃತರ್ಪಣಂ ॥ ೭ ॥
ಪ್ರದದೌ ಬ್ರಾಹ್ಮಣೇಭ್ಯಶ್ಚ ವಾಜಿಮೇಧೇ ಧರಾಂ ಪುನಃ ।
ತೈಶ್ಚ ನಿರ್ವಾಸಿತಸ್ತತ್ರ ಜಗಾಮೋದಧಿಸನ್ನಿಧೌ ॥ ೮ ॥
ಏವಂ ತೇನ ಕೃತಾ ಪೃಥ್ವೀ ಸರ್ವ ಕ್ಷತ್ರ ವಿವರ್ಜಿತಾ ।
ತ್ರಿಃ ಸಪ್ತವಾರಂ ವಿಪ್ರೇಂದ್ರಾ ದ್ವಿಜೇಭ್ಯಶ್ಚ ನಿವೇದಿತಾ ॥ ೯ ॥
ತರ್ಪಿತಾಃ ಪಿತರಶ್ಚೈವ ರುಧಿರೇಣ ಮಹಾತ್ಮನಾ ।
ಪ್ರತಿಜ್ಞಾ ಪಾಲಿತಾ ತಸ್ಮಾದ್ವಿಕೋಪಶ್ಚ ಬಭೂವ ಸಃ ॥ ೧೦ ॥
ಏಕವಿಂಶತಿಮೇ ಪ್ರಾಪ್ತೇ ತತಶ್ಚ ಪಿತೃತರ್ಪಣೇ ।
ಅಶರೀರಾಽಭವದ್ವಾಣೀ ಖಸ್ಥಾ ಪಿತೃಸಮುದ್ಭವಾ ॥ ೧೧ ॥
ರಾಮ ರಾಮ ಮಹಾಭಾಗ ತ್ಯಜೈತತ್ಕರ್ಮ ಗರ್ಹಿತಂ ।
ವಯಂ ತೇ ತುಷ್ಟಿಮಾಪನ್ನಾಃ ಸ್ವವಾಕ್ಯ ಪರಿಪಾಲನಾತ್ ॥ ೧೨ ॥

---

೬. ಅನಂತರ ರಾಮನು ಕುಪಿತನಾಗಿ ತಿರುಗಿ ಆ ಶಬರ, ಪುಲಿಂದ, ಮೇದಕರೊಡನೆ ಕ್ಷತ್ರಿಯರ ನಾಶಕ್ಕಾಗಿ ಹೊರಟನು.

೭. ಅಲ್ಲಿಯೇ ಕ್ಷತ್ರಿಯರನ್ನು ಕೊಂದು ಬಹಳ ರಕ್ತವನ್ನು ತೆಗೆದುಕೊಂಡು ಆ ಪಿತೃಗರ್ತವನ್ನು ತುಂಬಿ ಪಿತೃತರ್ಪಣವನ್ನು ಮಾಡಿದನು.

೮. ಮರಳಿ ಅಶ್ವಮೇಧಯಾಗವನ್ನು ಮಾಡಿ ಬ್ರಾಹ್ಮಣರಿಗೆ ಭೂಮಿಯನ್ನಿತ್ತು ಅವರಿಂದ ಹೊರಡಿಸಲ್ಪಟ್ಟವನಾಗಿ ಸಮುದ್ರದೆಡೆಗೆ ಹೋದನು.

೯. ಬ್ರಾಹ್ಮಣೋತ್ತಮರೆ! ಅವನು ಹೀಗೆ ಭೂಮಿಯನ್ನು ಇಪ್ಪತ್ತೊಂದು ಸಾರಿ ಕ್ಷತ್ರಿಯರಿಲ್ಲದ್ದನ್ನಾಗಿ ಮಾಡಿ ಅದನ್ನು ಬ್ರಾಹ್ಮಣರಿಗಿತ್ತನು.

೧೦. ರಕ್ತದಿಂದ ಪಿತೃಗಳಿಗೆ ತರ್ಪಣಮಾಡಿ ಪ್ರತಿಜ್ಞೆಯನ್ನು ನೆರವೇರಿಸಿ ಕೋಪವಿಲ್ಲದವನಾದನು.

೧೧. ಇಪ್ಪತ್ತೊಂದನೆಯ ಪಿತೃತರ್ಪಣದಲ್ಲಿ ಪಿತೃಗಳ ಅಶರೀರವಾಣಿ ಯಾಯಿತು.

೧೨. ಮಹಾಭಾಗನಾದ ರಾಮನೆ! ನಿಂದಿತವಾದ ಈ ಕರ್ಮವನ್ನು ಇನ್ನು ತ್ಯಜಿಸು. ಪ್ರತಿಜ್ಞೆಯನ್ನು ಪಾಲಿಸಿದ್ದರಿಂದ ನಾವು ನಿನ್ನಲ್ಲಿ ಸಂತುಷ್ಟ ರಾಗಿದ್ದೇವೆ.

ಯತ್ತ್ವಯಾ ವಿಹಿತಂ ಕರ್ಮ ನೈತದನ್ಯಃ ಕರಿಷ್ಯತಿ ।
ನ ಕೃತಂ ಕೇನಚಿತ್ಪೂರ್ವಂ ಪಿತೃವೈರಸಮುದ್ಭವಂ ॥ ೧೩ ॥
ತಸ್ಮಾತ್ತುಷ್ಟಾ ವಯಂ ವತ್ಸ ದಾಸ್ಯಾಮಶ್ಚಿತ್ತವಾಂಛಿತಂ ।
ಪ್ರಾರ್ಥಯಸ್ವ ದ್ರುತಂ ತಸ್ಮಾದ್ದುರ್ಲಭಂ ತ್ರಿದಶೈರಪಿ ॥ ೧೪ ॥
ರಾಮ ಉವಾಚ :—

ಪಿತರೋ ಯದಿ ತುಷ್ಟಾ ಮೇ ಯಚ್ಛಂತಿ ಯದಿ ವಾಂಛಿತಂ ।
ತಸ್ಮಾತ್ತೀರ್ಥಮಿದಂ ಪುಣ್ಯಂ ಮನ್ನಾಮ್ನಾ ಲೋಕವಿಶ್ರುತಂ ।
ರಕ್ತದೋಷ ವಿನಿರ್ಮುಕ್ತಂ ಸೇವಿತಂ ವರತಾಪಸೈಃ ॥ ೧೫ ॥
ಪಿತರ ಊಚುಃ :—

ಪಿತೃತರ್ಪಣಜಾ ಗರ್ತಾ ತ್ವಯಾ ಯೇಯಂ ವಿನಿರ್ಮಿತಾ ।
ರಾಮಹ್ರದ ಇತಿಖ್ಯಾತಿಂ ಪ್ರಯಾಸ್ಯತಿ ಜಗತ್ತ್ರಯೇ ॥ ೧೬ ॥
ಯತ್ರ ಭಕ್ತಿಯುತಾ ಲೋಕಾಸ್ತರ್ಪಯಿಷ್ಯಂತಿ ವೈ ಪಿತೄನ್ ।
ತೇಽಶ್ವಮೇಧಫಲಂ ಪ್ರಾಪ್ಯ ಪ್ರಯಾಸ್ಯಂತಿ ಪರಾಂ ಗತಿಂ ॥ ೧೭ ॥
ಕೃಷ್ಣಪಕ್ಷೇ ಚತುರ್ದಶ್ಯಾಂ ಮಾಸಿ ಭಾದ್ರಪದೇ ನರಃ ।
ಕರಿಷ್ಯತಿ ಚ ಯಃ ಶ್ರಾದ್ಧಂ ಭಕ್ತ್ಯಾ ಶಸ್ತ್ರಹತಸ್ಯ ಚ ॥ ೧೮ ॥
ಅಪಿ ಪ್ರೇತತ್ವಮಾಪನ್ನಂ ನರಕೇ ವಾ ಸಮಾಶ್ರಿತಂ ।
ಉದ್ಧರಿಷ್ಯತಿ ಸ ಪ್ರೇತಮಪಿ ಪಾಪಸಮನ್ವಿತಂ ॥ ೧೯ ॥

---

೧೩. ನೀನು ಪಿತೃವೈರದಿಂದ ಮಾಡಿದ ಈ ಕಾರ್ಯವನ್ನು ಹಿಂದೆ ಬೇರೆ ಯಾರೂ ಮಾಡಲಿಲ್ಲ. ಮುಂದೆ ಮಾಡುವುದೂ ಇಲ್ಲ.

೧೪. ಆದುದರಿಂದ ಸಂತುಷ್ಟರಾದ ನಾವು ನಿನ್ನ ಮನೋಭೀಷ್ಟವನ್ನು ನೆರವೇರಿಸಿಕೊಡುವೆವು. ದೇವತೆಗಳಿಗೂ ದುರ್ಲಭವಾದ ಅದನ್ನು ಬೇಗನೆ ಬೇಡಿಕೊ.

೧೫. ರಾಮನು ಹೇಳುತ್ತಾನೆ :—ಪಿತೃಗಳು ಸಂತುಷ್ಟರಾಗಿ ನನಗೆ ಇಷ್ಟಾರ್ಥವನ್ನು ನೀಡುವುದಾದರೆ ಈ ತೀರ್ಥವು ರಕ್ತದೋಷವಿಲ್ಲದೆ ಉತ್ತಮ ತಾಪಸರಿಂದ ಸೇವಿಸಲ್ಪಟ್ಟದ್ದಾಗಿ ನನ್ನ ಹೆಸರಿನಿಂದ ಲೋಕಪ್ರಸಿದವಾಗಲಿ.

೧೬. ಪಿತೃಗಳು ಹೇಳುತ್ತಾರೆ :—ನೀನು ನಿರ್ಮಿಸಿದ ಈ ಪಿತೃತರ್ಪಣಗರ್ತವು ಮೂರು ಲೋಕಗಳಲ್ಲಿಯೂ ರಾಮಹ್ರದವೆಂದು ಪ್ರಸಿದ್ಧವಾಗಲಿ.

೧೭. ಇಲ್ಲಿ ಭಕ್ತಿಯಿಂದ ಪಿತೃಗಳಿಗೆ ತರ್ಪಣಮಾಡಿದವರು ಅಶ್ವಮೇಧಯಾಗದ ಫಲವನ್ನು ಹೊಂದಿ ಉತ್ತಮಗತಿಯನ್ನು ಪಡೆಯಲಿ.

೧೮–೧೯. ಭಾದ್ರಪದ ಮಾಸದ ಕೃಷ್ಣಪಕ್ಷದ ಚತುರ್ದಶೀದಿನ ಶಸ್ತ್ರಹತನಿಗೆ ಭಕ್ತಿಯಿಂದ ಶ್ರಾದ್ಧಮಾಡಿದವನು ಆ ಶಸ್ತ್ರಹತನು ಪ್ರೇತನಾಗಿರಲಿ ಅಥವಾ ನರಕವನ್ನಾಶ್ರಯಿಸಿರಲಿ ಪಾಪಿಷ್ಠನಾದ ಅವನನ್ನು ಉದ್ಧರಿಸುವನು.

ಸೂತ ಉವಾಚ :—

ಏವಮುಕ್ತ್ವಾ ತು ರಾಮಂ ತೇ ವಿರೇಮುಸ್ತದನಂತರಂ ।
ರಾಮೋಽಪಿ ಚ ತಪಸ್ತೇಪೇ ತತ್ರೈವ ಕ್ರೋಧವರ್ಜಿತಃ ॥ ೨೦ ॥
ತಸ್ಮಾತ್ಸರ್ವಪ್ರಯತ್ನೇನ ತತ್ರ ಶಸ್ತ್ರಹತಸ್ಯ ಚ ।
ತಸ್ಮಿನ್ದಿನೇ ಪ್ರಕರ್ತವ್ಯಂ ಶ್ರಾದ್ಧಂ ಶ್ರದ್ಧಾಸಮನ್ವಿತೈಃ ॥ ೨೧ ॥
ಉಪಸರ್ಗಮೃತಾನಾಂ ಚ ಸರ್ಪಾಗ್ನಿವಿಷಬಂಧನೈಃ ।
ತತ್ರ ಮುಕ್ತಿಪ್ರದಂ ಶ್ರಾದ್ಧಂ ದಿನೇ ತಸ್ಮಿನ್ನುದಾಹೃತಂ ॥ ೨೨ ॥
ಯಃ ಪಿತೄಂಸ್ತರ್ಪಯೇತ್ತತ್ರ ಪ್ರೇತಪಕ್ಷೇ ಜಲೈರಪಿ ।
ಸ ತೇಷಾಮನೃಣೋ ಭೂತ್ವಾ ಪಿತೃಲೋಕೇ ಮಹೀಯತೇ ॥ ೨೩ ॥
ಏತದ್ವಃ ಸರ್ವಮಾಖ್ಯಾತಂ ರಾಮಹ್ರದಸಮುದ್ಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೨೪ ॥
ಶ್ರಾದ್ಧಕಾಲೇ ನರೋ ಭಕ್ತ್ಯಾ ಯಶ್ಚೈತತ್ಪಠತಿ ಸ್ವಯಂ ।
ಸ ಗಯಾಶ್ರಾದ್ಧಜಂ ಕೃತ್ಸ್ನಂ ಫಲಮಾಪ್ನೋತ್ಯಸಂಶಯಂ ॥ ೨೫ ॥
ಪರ್ವಕಾಲೇಽಥವಾ ಪ್ರಾಪ್ತೇ ಪಠೇದ್ಬ್ರಾಹ್ಮಣಸನ್ನಿಧೌ ।
ಪಿತೃಮೇಧಸ್ಯ ಯಜ್ಞಸ್ಯ ಸ ಫಲಂ ಲಭತೇಽಖಿಲಂ ॥ ೨೬ ॥

---

೨೦. ಸೂತನು ಹೇಳುತ್ತಾನೆ :— ಅವರು ರಾಮನನ್ನು ಕುರಿತು ಹೀಗೆ ಹೇಳಿ ಸುಮ್ಮನಾದರು. ರಾಮನೂ ಅಲ್ಲಿಯೇ ಕೋಪವಿಲ್ಲದೆ ತಪವನ್ನು ಆಚರಿಸಿದನು.

೨೧. ಆದ್ದರಿಂದ ಅಲ್ಲಿ ಶಸ್ತ್ರಹತರಾದವರಿಗೆ ಆದಿನ ಶ್ರದ್ಧೆಯಿಂದ ಶ್ರಾದ್ಧ ಮಾಡಬೇಕು.

೨೨. ಅಲ್ಲಿ ಆದಿನ ಮಾಡಿದ ಶ್ರಾದ್ಧವು ಉತ್ಪಾತಗಳಿಂದಲೂ, ಸರ್ಪ, ಅಗ್ನಿ, ವಿಷ, ಬಂಧನಗಳಿಂದಲೂ ಮೃತರಾದವರಿಗೆ ಮುಕ್ತಿಯನ್ನೀಯುವುದು.

೨೩. ಅಲ್ಲಿ ಪ್ರೇತಪಕ್ಷದಲ್ಲಿ ನೀರಿನಿಂದ ಪಿತೃತರ್ಪಣಮಾಡಿದವನು ಪಿತೃ ಋಣಮುಕ್ತನಾಗಿ ಪಿತೃಲೋಕದಲ್ಲಿ ಪೂಜ್ಯನಾಗುವನು.

೨೪. ಬ್ರಾಹ್ಮಣವರ್ಯರೆ! ಸಕಲ ಪಾಪಗಳನ್ನು ನಿವಾರಿಸುವ ಈ ರಾಮ ಹ್ರದದ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ನಿಮಗೆ ಹೇಳಿದ್ದೇನೆ.

೨೫. ಶ್ರಾದ್ಧಕಾಲದಲ್ಲಿ ಭಕ್ತಿಯಿಂದ ಇದನ್ನು ಪಠಿಸುವ ಮಾನವನು ನಿಶ್ಚಯವಾಗಿಯೂ ಗಯಾಶ್ರಾದ್ಧದ ಸಂಪೂರ್ಣ ಫಲವನ್ನು ಪಡೆಯುವನು.

೨೬. ಅಥವಾ ಪರ್ವಕಾಲದಲ್ಲಿ ಬ್ರಾಹ್ಮಣರ ಹತ್ತಿರ ಇದನ್ನು ಪಠಿಸಿದವನು ಪಿತೃಮೇಧಯಜ್ಞದ ಸಂಪೂರ್ಣ ಫಲವನ್ನು ಹೊಂದುವನು.

ಶೃಣುಯಾದ್ವಾಽಪಿ ಯೋ ಭಕ್ತ್ಯಾ ಕೀರ್ತ್ಯಮಾನಮಿದಂ ನರಃ ।
ಸೌತ್ರಾಮಣೌ ಕೃತೇ ಕೃತ್ಸ್ನಂ ಫಲಮಾಪ್ನೋತ್ಯಸಂಶಯಂ ॥ ೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಾಮಹ್ರದೋತ್ಪತ್ತಿವೃತ್ತಾಂತವರ್ಣನಂ"
ನಾಮೈಕೋನಸಪ್ತತಿತಮೋಽಧ್ಯಾಯಃ

---

೨೭. ಹೇಳಲ್ಪಡುತ್ತಿರುವ ಇದನ್ನು ಭಕ್ತಿಯಿಂದ ಕೇಳುವವನು ಸೌತ್ರಾಮಣಿ ಯಾಗವನ್ನು ಮಾಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಾಮಹ್ರದೋತ್ಪತ್ತಿವೃತ್ತಾಂತವರ್ಣನ"ವೆಂಬ
ಅರುವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತಿತಮೋಽಧ್ಯಾಯಃ

### ಕಾರ್ತಿಕೇಯೋತ್ಪತ್ತಿವೃತ್ತಾಂತವರ್ಣನಂ

ಸೂತ ಉವಾಚ :—

ತಥಾಽನ್ಯಾಽಪಿ ಚ ತತ್ರಾಽಸ್ತಿ ಶಕ್ತಿಃ ಪಾಪಪ್ರಣಾಶಿನೀ ।
ಕಾರ್ತಿಕೇಯೇನ ನಿರ್ಮುಕ್ತಾ ಹತ್ವಾ ವೈ ತಾರಕಂ ರಣೇ ॥ ೧ ॥
ತಥಾಽಸ್ತಿ ಸುಮಹತ್ಕುಂಡಂ ಸ್ವಚ್ಛೋದಕಸಮಾವೃತಂ ।
ತೇನೈವ ನಿರ್ಮಿತಂ ತತ್ರ ಯಃ ಸ್ನಾತ್ವಾ ತಾಂ ಪ್ರಪೂಜಯೇತ್ ।
ಸ ಪಾಪಾನ್ಮುಚ್ಯತೇ ಸದ್ಯ ಆಜನ್ಮ ಮರಣಾಂತಿಕಾತ್ ॥ ೨ ॥

ಋಷಯ ಊಚುಃ :—

ಕಸ್ಮಿನ್ಕಾಲೇ ವಿನಿರ್ಮುಕ್ತಾ ಸಾ ಶಕ್ತಿಸ್ತೇನ ನೋ ವದ ।
ಕಿಮರ್ಥಂ ಸ್ವಾಮಿನಾ ತತ್ರ ಕಿಂ ಪ್ರಭಾವಾ ವದ ಸ್ವಯಂ ॥ ೩ ॥

ಸೂತ ಉವಾಚ :—

ಪುರಾಽಽಸೀತ್ತಾರಕೋ ನಾಮ ದಾನವೋಽತಿಬಲಾನ್ವಿತಃ ।
ಹಿರಣ್ಯಾಕ್ಷಸ್ಯ ದಾಯಾದಸ್ತ್ರೈಲೋಕ್ಯಸ್ಯ ಭಯಾವಹಃ ॥ ೪ ॥

---

## ಕನ್ನಡದ ಅನುವಾದ

### ಕಾರ್ತಿಕೇಯೋತ್ಪತ್ತಿವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಅಲ್ಲಿ ಕಾರ್ತಿಕೇಯನು ಯುದ್ಧದಲ್ಲಿ ತಾರಕಾಸುರನನ್ನು ಕೊಂದು ತೊರೆದುದೂ, ಪಾಪವನ್ನು ನಿವಾರಿಸುವುದೂ ಆದ ಶಕ್ತಿಯು ಇದೆ.

೨. ಆ ಕಾರ್ತಿಕೇಯನು ನಿರ್ಮಿಸಿದ ನಿರ್ಮಲ ಜಲವುಳ್ಳ ಕುಂಡದಲ್ಲಿ ಮಿಂದು ಆ ಶಕ್ತಿಯನ್ನು ಪೂಜಿಸಿದವನು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೩. ಋಷಿಗಳು ಹೇಳುತ್ತಾರೆ:—ಆ ಸ್ಕಂದನು ಅಲ್ಲಿ ಯಾವಾಗ ಏಕೆ ಶಕ್ತಿಯನ್ನು ಬಿಟ್ಟನು? ಅದು ಎಂತಹ ಮಾಹಾತ್ಮ್ಯವುಳ್ಳುದು? ಅದನ್ನು ನಮಗೆ ಹೇಳು.

೪. ಸೂತನು ಹೇಳುತ್ತಾನೆ:—ಹಿಂದೆ ಅತಿ ಬಲಿಷ್ಠನೂ, ಹಿರಣ್ಯಾಕ್ಷನ ಸುತನೂ, ತ್ರೈಲೋಕ್ಯಕ್ಕೆ ಭಯವನ್ನುಂಟುಮಾಡುವವನೂ ಆದ ತಾರಕನೆಂಬ ದಾನವನಿದ್ದನು.

ಸ ಜ್ಞಾತ್ವಾ ಜನಕಂ ಧ್ವಸ್ತಂ ವಿಷ್ಣುನಾ ಪ್ರಭವಿಷ್ಣುನಾ ।
ತಪಸ್ತೇಪೇ ತತಸ್ತೀವ್ರಂ ಗೋಕರ್ಣಂ ಪ್ರಾಪ್ಯ ಪರ್ವತಂ ॥ ೫ ॥
ಯಾವದ್ವರ್ಷಸಹಸ್ರಾಂತಂ ಶೀರ್ಣಪರ್ಣಾಽಶನಃ ಸ್ಥಿತಃ ।
ಧ್ಯಾಯಮಾನೋ ಮಹಾದೇವಂ ಕಾಯೇನ ಮನಸಾ ಗಿರಾ ॥ ೬ ॥
ವರಪೂಜೋಪಹಾರೈಶ್ಚ ನೈವೇದ್ಯೈರ್ವಿವಿಧೈಸ್ತತಃ ।
ತತೋ ವರ್ಷಸಹಸ್ರಾಂತೇ ಸ ದೈತ್ಯೋ ದುಃಖಸಂಯುತಃ ॥ ೭ ॥
ಜ್ಞಾತ್ವಾ ರುದ್ರಮಸಂತುಷ್ಟಂ ತತೋ ರೌದ್ರಂ ತಪೋಽಕರೋತ್ ।
ವಿನಿಷ್ಕೃತ್ಯಾತ್ಮಮಾಂಸಾನಿ ಜುಹೋತಿಸ್ಮ ಹುತಾಶನೇ ॥ ೮ ॥
ತತಸ್ತುಷ್ಟೋ ಮಹಾದೇವೋ ವೃಷಾರೂಢ ಉಮಾಪತಿಃ ।
ಸರ್ವೈರೇವ ಗಣೈಃ ಸಾರ್ಧಂ ತಸ್ಯ ಸಂದರ್ಶನಂ ಯಯೌ ॥ ೯ ॥
ತತ್ರ ಪ್ರೋವಾಚ ಸಂಹೃಷ್ಟಸ್ತಾರ ನಾದೇನ ನಾದಯನ್ ।
ದಿಶಃ ಸರ್ವಾ ಮಹಾದೇವೋ ಹರ್ಷಗದ್ಗದಯಾ ಗಿರಾ ॥ ೧೦ ॥
ಭೋ ಭೋಸ್ತಾರಕ ತುಷ್ಟೋಽಸ್ಮಿ ಸಾಹಸಂ ಮೇದೃಶಂ ಕುರು ।
ಪ್ರಾರ್ಥಯಸ್ವ ಮನೋಽಭೀಷ್ಟಂ ಯೇನ ತೇ ಪ್ರದದಾಮ್ಯಹಂ ॥ ೧೧ ॥

ತಾರಕ ಉವಾಚ :—

ಅಜೇಯಃ ಸರ್ವದೇವಾನಾಂ ತ್ವತ್ಪ್ರಸಾದಾದಹಂ ವಿಭೋ ।
ಯಥಾ ಭವಾಮಿ ಸಂಗ್ರಾಮೇ ತ್ವಾಂ ವಿಹಾಯ ತಥಾ ಕುರು ॥ ೧೨ ॥

---

೫. ಅವನು ತನ್ನ ತಂದೆಯನ್ನು ಸಮರ್ಥನಾದ ವಿಷ್ಣುವು ಕೊಂದುದನ್ನು ಅರಿತು ಗೋಕರ್ಣ ಪರ್ವತವನ್ನು ಸೇರಿ ಕಠಿನ ತಪವನ್ನಾಚರಿಸಿದನು.

೬–೮. ಅವನು ಒಂದು ಸಾವಿರ ವರ್ಷಗಳವರೆಗೆ ಒಣಗಿದ ಎಲೆಗಳನ್ನು ತಿನ್ನುತ್ತ ಮಹೇಶ್ವರನನ್ನು ಪೂಜೆ, ಉಪಹಾರ, ನಾನಾವಿಧ ನೈವೇದ್ಯಗಳನ್ನಿತ್ತು ವಾಕ್ಕಾಯ ಮನಸ್ಸುಗಳಿಂದ ಧ್ಯಾನಿಸುತ್ತ ಒಂದು ಸಾವಿರ ವರ್ಷಗಳ ಅಂತ್ಯದಲ್ಲಿಯೂ ರುದ್ರನು ಸಂತುಷ್ಟನಾಗದಿರುವುದನ್ನರಿತು ಭಯಂಕರವಾದ ತಪವನ್ನು ಆಚರಿಸಿದನು. ತನ್ನ ಶರೀರ ಮಾಂಸಗಳನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮಿಸಿದನು.

೯–೧೦. ಬಳಿಕ ಸಂತುಷ್ಟನಾದ ಮಹಾದೇವನು ವೃಷಭವನ್ನೇರಿ ಸಕಲ ಗಣಗಳೊಡನೆ ಅವನಿಗೆ ಪ್ರತ್ಯಕ್ಷನಾಗಿ ಸಂತೋಷದಿಂದ ಸಕಲ ದಿಕ್ಕುಗಳನ್ನೂ ಧ್ವನಿಗೊಳಿಸುತ್ತ ಗದ್ಗದ ಧ್ವನಿಯಿಂದ ಇಂತೆಂದನು.

೧೧. ಎಲೈ ತಾರಕನೆ! ನಿನ್ನಲ್ಲಿ ಸಂತುಷ್ಟನಾಗಿರುವೆನು. ಇಂತಹ ಸಾಹಸವನ್ನು ಮಾಡಬೇಡ. ನಿನ್ನ ಅಭೀಷ್ಟವನ್ನು ಕೇಳಿಕೋ. ಅದನ್ನು ಕೊಡುವೆನು.

೧೨. ತಾರಕನು ಹೇಳುತ್ತಾನೆ:—ನಾನು ಯುದ್ಧದಲ್ಲಿ ನಿನ್ನನ್ನು ಬಿಟ್ಟು ಉಳಿದ ದೇವತೆಗಳಿಗೆ ಅಜೇಯನಾಗುವಂತೆ ಅನುಗ್ರಹಮಾಡು.

ಭಗವಾನುವಾಚ :—

ಮತ್ಪ್ರಸಾದಾದಸಂದಿಗ್ಧಂ ಸರ್ವಮೇತದ್ಭವಿಷ್ಯತಿ ।
ತ್ವಯಾ ಯತ್ಪ್ರಾರ್ಥಿತಂ ದೈತ್ಯ ತ್ವಮೇಕೋ ಬಲವಾನಿಹ ॥ ೧೩ ॥
ಏವಮುಕ್ತ್ವಾ ಮಹಾದೇವಃ ಸ್ವಮೇವ ಭವನಂ ಗತಃ ।
ತಾರಕಶ್ಚಾಽಪಿ ಸಂಹೃಷ್ಟಸ್ತಥೈವ ನಿಜಮಂದಿರಂ ॥ ೧೪ ॥
ತತೋ ದಾನವ ಸೈನ್ಯೇನ ಮಹತಾ ಪರಿವಾರಿತಃ ।
ಗತಃ ಶಕ್ರಪುರೀಂ ಯೋದ್ಧುಂ ವಿಖ್ಯಾತಾಮಮರಾವತೀಂ ॥ ೧೫ ॥
ಅಥಾಽಭವನ್ಮಹಾಯುದ್ಧಂ ದೇವಾನಾಂ ದಾನವೈಃ ಸಹ ।
ಯಾವದ್ವರ್ಷಸಹಸ್ರಾಂತೇ ಮೃತ್ಯುಂ ಕೃತ್ವಾ ನಿವರ್ತನಂ ॥ ೧೬ ॥
ತತ್ರಾಽಭವತ್ಕ್ಷಯೋ ನಿತ್ಯಂ ದೇವಾನಾಂ ರಣಮೂರ್ಧನಿ ।
ವಿಜಯೋ ದಾನವಾನಾಂ ಚ ಪ್ರಸಾದಾಚ್ಛೂಲಪಾಣಿನಃ ॥ ೧೭ ॥
ತತಶ್ಚಕ್ರುರುಪಾಯಾಂಸ್ತೇ ವಿಜಯಾಯ ದಿವೌಕಸಃ ।
ವರ್ಮಾಣಿ ಸುವಿಚಿತ್ರಾಣಿ ಯಂತ್ರಾಣಿ ಪರಿಖಾಸ್ತಥಾ ॥ ೧೮ ॥
ಅನ್ಯಾನ್ಯಪಿ ಶರೀರಸ್ಯ ರಕ್ಷಣಾರ್ಥಂ ಪ್ರಯತ್ನತಃ ।
ತಥೈವ ಯೋಧಮುಖ್ಯಾನಾಂ ವಿಶೇಷಾದ್ದ್ವಿಜಸತ್ತಮಾಃ ॥ ೧೯ ॥
ಸಸೃಜುಸ್ತೇ ಸುರಾಧೀಶಾ ದಾನವೇಭ್ಯೋ ದಿವಾನಿಶಂ ॥ ೨೦ ॥

---

೧೩. ಭಗವಂತನು ಹೇಳುತ್ತಾನೆ:—ಎಲೈ ದೈತ್ಯನೆ! ನೀನು ಕೇಳಿದುದೆಲ್ಲ ನನ್ನ ಅನುಗ್ರಹದಿಂದ ಆಗುವುದು. ಈ ಲೋಕದಲ್ಲಿ ನೀನೊಬ್ಬನೇ ಬಲಿಷ್ಠನಾಗಿರುವೆ.

೧೪. ಮಹೇಶ್ವರನು ಹೀಗೆಂದು ತನ್ನ ಮನೆಗೆ ಹೋದನು. ತಾರಕನೂ ಹಾಗೆಯೇ ಸಂತೋಷದಿಂಡ ತನ್ನ ಮನೆಗೆ ತೆರಳಿದನು.

೧೫. ತರುವಾಯ ದೊಡ್ಡ ಸೈನ್ಯದೊಡನೆ ಪ್ರಖ್ಯಾತವಾದ ಇಂದ್ರನ ಅಮರಾವತೀಪಟ್ಟಣಕ್ಕೆ ಯುದ್ಧಮಾಡಲು ಹೋದನು.

೧೬. ಅಲ್ಲಿ ದೇವದಾನವರಿಗೆ ಘೋರ ಯುದ್ಧವಾಯಿತು. ಸಾವಿರ ವರ್ಷಗಳ ಅಂತ್ಯದಲ್ಲಿ ತಾರಕನು ದೇವತೆಗಳನ್ನು ಕೊಂದು ಹಿಂದಿರುಗಿದನು.

೧೭. ಆ ಯುದ್ಧದಲ್ಲಿ ಶಂಕರನ ಅನುಗ್ರಹದಿಂದ ದಾನವರಿಗೆ ಜಯವೂ, ದೇವತೆಗಳಿಗೆ ನಾಶವೂ ಉಂಟಾಯಿತು.

೧೮-೧೯. ಬಳಿಕ ದಿವಿಜರು ದಾನವರನ್ನು ಜಯಿಸಲೋಸುಗ ಬಗೆಬಗೆಯ ಕವಚಗಳನ್ನೂ, ಯಂತ್ರಗಳನ್ನೂ, ಕಂದಕಗಳನ್ನೂ ಯೋಧರ ಶರೀರವನ್ನು ರಕ್ಷಿಸುವುದಕ್ಕಾಗಿ ಇತರ ವಸ್ತುಗಳನ್ನೂ ನಿರ್ಮಿಸಿದರು.

೨೦-೨೧. ಆ ದೇವತೆಗಳು ದಾನವರಿಗಾಗಿ ಹಗಲು ರಾತ್ರಿ ಮುದ್ಗರ,

ಮುದ್ಗರಾ ಭಿಂಡಿಪಾಲಾಶ್ಚ ಶತಘ್ನ್ಯೋಽಥ ವರೇಷವಃ ।
ಪ್ರಾಸಾಃ ಕುಂತಾಶ್ಚ ಭಲ್ಲಾಶ್ಚ ತಸ್ಮಿನ್‌ಕಾಲೇ ವಿನಿರ್ಮಿತಾಃ ।
ವಿಶೇಷಾಹವಸಂಬಂಧವ್ಯೂಹಾನಾಂ ಪ್ರಕ್ರಿಯಾಶ್ಚಯಾಃ ॥ ೨೧ ॥
ತಥಾಽನ್ಯಾನಿ ವಿಚಿತ್ರಾಣಿ ಕೂಟಯುದ್ಧಾನ್ಯನೇಕಶಃ ।
ಭೀಷಿಕಾಃ ಕುಹಕಾಶ್ಚೈವ ಶಕ್ರಜಾಲಾನಿ ಕೃತ್ಸ್ನಶಃ ॥ ೨೨ ॥
ನ ಚ ತೇ ವಿಜಯಂ ಪ್ರಾಪುಸ್ತಥಾಽಪಿ ದ್ವಿಜಸತ್ತಮಾಃ ।
ದಾನವೇಭ್ಯೋ ಮಹಾಯುದ್ಧೇ ಪ್ರಹಾರೈರ್ಜರ್ಜರೀಕೃತಾಃ ॥ ೨೩ ॥
ಅಥ ಪ್ರಾಹ ಸಹಸ್ರಾಕ್ಷೋ ಭಯತ್ರಸ್ತೋ ಬೃಹಸ್ಪತಿಂ ।
ದಿನೇ ದಿನೇ ವಯಂ ದೈತ್ಯೈರ್ವಿಜಯಾಪೋ ದ್ವಿಜೋತ್ತಮ ॥ ೨೪ ॥
ಯಥಾ ಯಥಾ ರಣಾರ್ಥಾಯ ಸದುಪಾಯಾನ್ಕರೋಮ್ಯಹಂ ।
ತಥಾ ತಥಾ ಪರಾ ಭೂತಿರ್ಜಾಯತೇ ಮೇ ಮಹಾಹವೇ ॥ ೨೫ ॥
ತದುಪಾಯಂ ಸುರಾಚಾರ್ಯ ಸ್ವ ಬುದ್ಧ್ಯಾ ತ್ವಂ ಪ್ರಚಿಂತಯ ।
ಯೇನ ಮೇ ಸ್ಯಾಜ್ಜಯೋ ಯುದ್ಧೇ ತವ ಕೀರ್ತಿರನಿಂದಿತಾ ॥ ೨೬ ॥

ಸೂತ ಉವಾಚ :—

ತತೋ ಬೃಹಸ್ಪತಿಃ ಪ್ರಾಹ ಚಿರಂ ಧ್ಯಾತ್ವಾ ಶಚೀಪತಿಂ ।
ಪ್ರಹೃಷ್ಟವದನೋ ಜ್ಞಾತ್ವಾ ಜಯೋಪಾಯಂ ಮಹಾಹವೇ ॥ ೨೭ ॥

---

ಬಿಂಡಿಪಾಲ, ಶತಘ್ನಿ, ಪ್ರಾಸ, ಕುಂತ, ಭಲ್ಲ ಇವುಗಳನ್ನೂ ಯುದ್ಧ ಸಂಬಂಧವಾದ ವ್ಯೂಹಕ್ರಮಗಳನ್ನೂ ಪ್ರಯೋಗಿಸಿದರು.

೨೨. ಹಾಗೆಯೇ ಇತರ ಆಶ್ಚರ್ಯಕರವಾದ ಕೂಟ ಯುದ್ಧಗಳನ್ನೂ, ಭಯೋತ್ಪಾದಕ ವಸ್ತುಗಳನ್ನೂ, ಕೃತ್ರಿಮ ಇಂದ್ರಜಾಲಗಳನ್ನೂ ಪ್ರಯೋಗಿಸಿದರು.

೨೩. ದ್ವಿಜವರ್ಯರೆ! ಹಾಗಾದರೂ ಆ ದೇವತೆಗಳು ಜಯವನ್ನು ಹೊಂದಲಿಲ್ಲ. ಅವರು ಮಹಾಯುದ್ಧದಲ್ಲಿ ದಾನವರ ಏಟುಗಳಿಂದ ಶಿಥಿಲಾಂಗರಾದರು.

೨೪. ಬಳಿಕ ಇಂದ್ರನು ಭಯಗೊಂಡು ಬೃಹಸ್ಪತಿಯನ್ನು ಕುರಿತು ಇಂತೆಂದನು. ನಾವು ಪ್ರತಿದಿನವೂ ದೈತ್ಯರಿಂದ ಸೋಲನ್ನು ಪಡೆಯುತ್ತಿದ್ದೇವೆ.

೨೫. ನಾನು ಹೇಗೆ ಹೇಗೆ ಯುದ್ಧಕ್ಕಾಗಿ ಒಳ್ಳೆಯ ಉಪಾಯಗಳನ್ನು ಮಾಡುವೆನೋ ಹಾಗೆ ಹಾಗೆ ನನಗೆ ಸೋಲುಂಟಾಗುತ್ತಿದೆ.

೨೬. ಬೃಹಸ್ಪತಿಯೆ! ಆದುದರಿಂದ ನಿನ್ನ ಬುದ್ಧಿಯಿಂದ ಉಪಾಯವನ್ನು ಚಿಂತಿಸು. ಅದರಿಂದ ಯುದ್ಧದಲ್ಲಿ ನನಗೆ ಜಯವಾದೀತು. ನಿನಗೆ ಶ್ಲಾಘ್ಯವಾದ ಕೀರ್ತಿಯುಂಟಾದೀತು.

೨೭. ಸೂತನು ಹೇಳುತ್ತಾನೆ:—ಬಳಿಕ ಬೃಹಸ್ಪತಿಯು ಬಹಳ ಹೊತ್ತು ಆಲೋಚಿಸಿ ಯುದ್ಧದಲ್ಲಿ ಜಯಿಸುವ ಉಪಾಯವನ್ನು ತಿಳಿದು ಸಂತೋಷದಿಂದ ಇಂದ್ರನನ್ನು ಕುರಿತು ಹೀಗೆಂದನು.

ಮಯಾ ಶಕ್ರ ಪರಿಜ್ಞಾತಃ ಸ ಉಪಾಯೋ ಮಹಾಹವೇ ।
ಜೇಯಂತೇ ಶತ್ರವೋ ಯೇನ ಲೀಲಯೈವಾಽಪಿ ಭೂರಿಶಃ ॥ ೨೮ ॥
ಯದಾಭೀಷ್ಟಂ ವರಂ ತೇನ ಪ್ರಾರ್ಥಿತಸ್ತ್ರಿಪುರಾಂತಕಃ ।
ತದೈವಂ ವಚನಂ ಪ್ರಾಹ ಪ್ರಣಿಪತ್ಯ ಮುಹುರ್ಮುಹುಃ ॥ ೨೯ ॥
ಅಜೇಯಃ ಸರ್ವದೇವಾನಾಂ ತ್ವತ್ಪ್ರಸಾದಾದಹಂ ವಿಭೋ ।
ಯಥಾ ಭವಾಮಿ ಸಂಗ್ರಾಮೇ ತ್ವಾಂ ವಿಹಾಯ ತಥಾ ಕುರು ॥ ೩೦ ॥
ನ ತಂ ಸ್ವಯಂ ಮಹಾದೇವಃ ಸ್ವಶಿಷ್ಯಂ ಸೂದಯಿಷ್ಯತಿ ।
ವಿಷವೃಕ್ಷಮಪಿ ಸ್ಥಾಪ್ಯ ಕಶ್ಚಿನ್ನತ್ತಿ ಪುನಃ ಸ್ವಯಂ ॥ ೩೧ ॥
ಯೋ ವೈ ಪಿತಾ ಸ ಪುತ್ರಃ ಸ್ಯಾಚ್ಛ್ರುತಿವಾಕ್ಯಮಿದಂ ಸ್ಮೃತಂ ।
ತಸ್ಮಾಜ್ಜನಯತು ಕ್ಷಿಪ್ರಂ ಹರಸ್ತನ್ನಾಶಕೃತ್ಸುತಂ ॥ ೩೨ ॥
ಯೇನ ಸೇನಾಧಿಪತ್ಯೇ ತಂ ವಿನಿಯೋಜ್ಯ ಮಹಾಹವಂ ।
ಕುರ್ಮೋ ದೈತ್ಯೈಃ ಸಮಂ ಶಸ್ತ್ರೈಃ ಪ್ರಾಪ್ನುಯಾಮ ತತೋ ಜಯಂ ॥ ೩೩ ॥
ಏಷ ಏವ ಉಪಾಯೋಽತ್ರ ಮಯಾ ತೇ ಪರಿಕೀರ್ತಿತಃ ।
ವಿಜಯಾಯ ಸಹಸ್ರಾಕ್ಷ ನಾಽನ್ಯೋಽಸ್ತಿ ಭುವನತ್ರಯೇ ॥ ೩೪ ॥
ತತೋ ದೇವಗಣೈಃ ಸರ್ವೈಃ ಸಮೇತಃ ಪಾಕಶಾಸನಃ ।
ತಮರ್ಥಂ ಪ್ರೋಕ್ತವಾಂಛಂಭುಂ ವಿನಯಾಽವನತಃ ಸ್ಥಿತಃ ॥ ೩೫ ॥

---

೨೮. ಇಂದ್ರ! ನಾನು ಯುದ್ಧದಲ್ಲಿ ಈ ತಾರಕನನ್ನು ಜಯಿಸುವ ಉಪಾಯ ವನ್ನು ಅರಿತೆನು. ಆದರಿಂದ ನೀನು ಶತ್ರುಗಳನ್ನು ಅನಾಯಾಸವಾಗಿ ಜಯಿಸುವೆ.

೨೯. ಆ ತಾರಕನು ಮಹಾದೇವನನ್ನು ಕುರಿತು ವರವನ್ನು ಬೇಡುವಾಗ ಅವನನ್ನು ವಂದಿಸಿ ಹೀಗೆಂದನು.

೩೦. "ಸ್ವಾಮಿ! ನಾನು ನಿನ್ನ ಹೊರತು ಸಕಲ ದೇವತೆಗಳಿಗೂ ಯುದ್ಧ ದಲ್ಲಿ ಅಜೇಯನಾಗುವಂತೆ ವರವನ್ನು ನೀಡು."

೩೧. ಮಹಾದೇವನು ತನ್ನ ಶಿಷ್ಯನಾದ ಆ ತಾರಕನನ್ನು ತಾನೇ ಕೊಲ್ಲು ವುದಿಲ್ಲ. ವಿಷವೃಕ್ಷವಾದರೂ ಅದನ್ನು ನೆಟ್ಟ ಯಾವ ಮನುಷ್ಯನು ತಾನೇ ಅದನ್ನು ಕತ್ತರಿಸುವನು?

೩೨. ತಂದೆಯೇ ಮಗನಾಗುವನೆಂದು ಶ್ರುತಿವಾಕ್ಯವಿರುವುದು. ಆದುದ ರಿಂದ ಬೇಗನೆ ಹರನು ಆ ತಾರಕನನ್ನು ಕೊಲ್ಲುವ ಮಗನನ್ನು ಉಂಟುಮಾಡಲಿ.

೩೩. ಅದರಿಂದ ಆ ಕುಮಾರನನ್ನು ಸೇನಾಪತಿಯನ್ನಾಗಿ ಮಾಡಿ ದೈತ್ಯ ರೊಡನೆ ಶಸ್ತ್ರದಿಂದ ಕಾಳೆಗಮಾಡಿ ಜಯವನ್ನು ಪಡೆಯುವೆವು.

೩೪–೩೫. ಇಂದ್ರ! ತಾರಕನನ್ನು ಜಯಿಸಲು ಒಂದೇ ಉಪಾಯವೆಂದರೆ ಇದೇ! ತ್ರಿಭುವನದಲ್ಲಿ ಬೇರೊಂದುಪಾಯವಿಲ್ಲ. ಬಳಿಕ ಇಂದ್ರನು ದೇವತೆ ಗಳೊಡನೆ ಶಂಕರನಲ್ಲಿ ಆ ವಿಷಯವನ್ನು ವಿನಯದಿಂದ ಹೇಳಿಕೊಂಡನು.

ಸುತಸ್ಯ ಜನನಾರ್ಥಾಯ ಕುರು ಯತ್ನಂ ವೃಷಧ್ವಜ ।
ಯೇನ ಸೇನಾಧಿಪತ್ಯೇ ತಂ ಯೋಜಯಾಮಿ ದಿವೌಕಸಾಂ ॥ ೩೬ ॥
ಪ್ರಾಪ್ನೋಮ್ಯಹಂ ಚ ಸಂಗ್ರಾಮೇ ವಿಜಯಂ ತ್ವತ್ಪ್ರಸಾದತಃ ।
ನಿಹತ್ಯ ದಾನವಾನ್ ಸರ್ವಾಂಸ್ತಾರಕೇಣ ಸಮನ್ವಿತಾನ್ ॥ ೩೭ ॥
ನಾಽನ್ಯಥಾ ವಿಜಯೋ ಮೇ ಸ್ಯಾತ್ಸಂಗ್ರಾಮೇ ದಾನವೈಃ ಸಹ ।
ಇತಿ ಮಾಂ ಪ್ರಾಹ ದೇವೇಜ್ಯೋ ಜ್ಞಾತ್ವಾ ಸಮ್ಯಙ್ಮಹಾಮತಿಃ ॥ ೩೮ ॥
ಅಥೋವಾಚ ವಿಹಸ್ಯೋಚ್ಚೈಃ ಶಂಕರಸ್ತ್ರಿದಶೇಶ್ವರಂ ।
ಕರಿಷ್ಯಾಮಿ ವಚಃ ಕ್ಷಿಪ್ರಂ ತವ ಶಕ್ರ ನ ಸಂಶಯಃ ॥ ೩೯ ॥
ಪುತ್ರಮುತ್ಪಾದಯಿಷ್ಯಾಮಿ ಸರ್ವದೈತ್ಯ ವಿನಾಶಕಂ ।
ಯಂ ತ್ವಂ ಸೇನಾಪತಿಂ ಕೃತ್ವಾ ಜಯಂ ಪ್ರಾಪ್ಸ್ಯಸಿ ಸರ್ವದಾ ॥ ೪೦ ॥
ಏವಮುಕ್ತ್ವಾ ಮಹಾದೇವೋ ಗತ್ವಾ ಕೈಲಾಸಪರ್ವತಂ ।
ಗೌರ್ಯಾ ಸಮಂ ತತಶ್ಚಕ್ರೇ ಕಾಮಧರ್ಮಂ ಯಥೋಚಿತಂ ॥ ೪೧ ॥
ಹಾವೈರ್ಭಾವೈಃ ಸಮೋಪೇತಂ ಹಾಸ್ಯೈರನ್ಯೈಸ್ತದಾತ್ಮಕೈಃ ।
ಯಾವದ್ವರ್ಷಸಹಸ್ರಾಂತಂ ದಿವ್ಯಂ ಚೈವ ನಿಮೇಷವತ್ ॥ ೪೨ ॥
ಅಥ ದೇವಗಣಾಃ ಸರ್ವೇ ಭಯಸಂತ್ರಸ್ತಮಾನಸಾಃ ।
ಚಕ್ರುರ್ಮಂತ್ರಂ ತದರ್ಥಂ ಹಿ ತಾರಕೇಣ ಪ್ರಪೀಡಿತಾಃ ॥ ೪೩ ॥

---

೩೬. ಶಂಕರ! ಪುತ್ರೋತ್ಪತ್ತಿಗಾಗಿ ಪ್ರಯತ್ನಮಾಡು. ಆ ಪುತ್ರನನ್ನು ದೇವ ಸೇನೆಗಳಿಗೆ ಅಧಿಪತಿಯನ್ನಾಗಿ ಮಾಡುವೆನು.

೩೭. ಯುದ್ಧದಲ್ಲಿ ನಿನ್ನ ಅನುಗ್ರಹದಿಂದ ತಾರಕನೊಡನೆ ಸಕಲ ದಾನವರನ್ನೂ ಕೊಂದು ಜಯವನ್ನು ಹೊಂದುವೆನು.

೩೮. ಬೇರೆ ವಿಧದಿಂದ ನನಗೆ ಯುದ್ಧದಲ್ಲಿ ದಾನವರನ್ನು ಜಯಿಸಲು ಸಾಧ್ಯವಿಲ್ಲ. ಹೀಗೆಂದು ಪ್ರಾಜ್ಞನಾದ ಬೃಹಸ್ಪತಿಯು ನನಗೆ ಹೇಳಿರುತ್ತಾನೆ.

೩೯. ಬಳಿಕ ಶಂಕರನು ಗಟ್ಟಿಯಾಗಿ ನಕ್ಕು ಇಂದ್ರ! ಬೇಗನೆ ನಿಶ್ಚಯವಾಗಿಯೂ ನಿನ್ನ ಮಾತನ್ನು ನಡೆಸುವೆನು.

೪೦. ಸಕಲ ದೈತ್ಯರನ್ನು ಕೊಲ್ಲುವ ಪುತ್ರನನ್ನು ಸೃಷ್ಟಿಸುವೆನು. ನೀನು ಅವನನ್ನು ಸೇನಾಪತಿಯನ್ನಾಗಿ ಮಾಡಿ ಯಾವಾಗಲೂ ಜಯಶೀಲನಾಗು ಎಂದನು.

೪೧—೪೨. ಶಂಕರನು ಹೀಗೆ ಹೇಳಿ ಕೈಲಾಸಪರ್ವತಕ್ಕೆ ಹೋಗಿ ಗೌರಿಯೊಡನೆ ಹಾವಭಾವಗಳಿಂದಲೂ, ಇತರ ಹಾಸ್ಯಗಳಿಂದಲೂ ಕೂಡಿ ಉಚಿತವಾದ ಕಾಮಧರ್ಮವನ್ನು ದಿವ್ಯಸಾವಿರ ವರ್ಷಗಳವರೆಗೆ ನಿಮಿಷದಂತೆ ಆಚರಿಸಿದನು.

೪೩. ತರುವಾಯ ಭಯಗೊಂಡವರೂ ತಾರಕನಿಂದ ಪೀಡಿತರೂ ಆದ ಸಮಸ್ತ ದೇವತೆಗಳೂ ಹೀಗೆ ಮಂತ್ರಾಲೋಚನೆ ಮಾಡಿದರು.

ಸಹಸ್ರಂ ವತ್ಸರಾಣಾಂ ತು ರತಾಸಕ್ತಸ್ಯ ಶೂಲಿನಃ ।
ಅತಿಕ್ರಾಂತಂ ನ ದೇವಾನಾಂ ತೇನ ಕೃತ್ಯಂ ವಿನಿರ್ಮಿತಂ ॥ ೪೪ ॥
ತಸ್ಮಾದ್ಗಚ್ಛಾಮಹೇ ತತ್ರ ಯತ್ರ ದೇವೋ ಮಹೇಶ್ವರಃ ।
ಸಂತಿಷ್ಠತೇ ಸಮಂ ಗೌರ್ಯಾ ಕೈಲಾಸೇ ವಿಜನೇ ಸ್ಥಿತಃ ॥ ೪೫ ॥
ತತಸ್ತತ್ರೈವ ಸಂಜಗ್ಮುಃ ಸರ್ವೇ ದೇವಾಃ ಸವಾಸವಾಃ ।
ಉದ್ವಹಂತಃ ಪರಾಮಾರ್ತಿಂ ತಾರಕಾರಿಸಮುದ್ಭವಾಂ ॥ ೪೬ ॥
ಅಥ ಕೈಲಾಸಮಾಸಾದ್ಯ ಯಾವದ್ಯಾಂತಿ ಭವಾಂತಿಕಂ ।
ನಿಷಿದ್ಧಾ ನಂದಿನಾ ತಾವನ್ನ ಗಂತವ್ಯಮತಃ ಪರಂ ॥ ೪೭ ॥
ರಹಸ್ಯೇ ಭಗವಾನ್ ಸಾರ್ಧಂ ಪಾರ್ವತ್ಯಾ ಸಮವಸ್ಥಿತಃ ।
ಅಸ್ಮಾಕಮಪಿ ನೋ ಗಮ್ಯಂ ತಸ್ಮಾತ್ತಾವನ್ನ ಗಮ್ಯತಾಂ ॥ ೪೮ ॥
ತತಸ್ತೈರ್ವಿಬುಧೈಃ ಸರ್ವೈಃ ಪ್ರೇಷಿತಸ್ತತ್ರ ಚಾನಿಲಃ ।
ಕಿಂ ಕರೋತಿ ಮಹಾದೇವಃ ಶೀಘ್ರಂ ವಿಜ್ಞಾಯತಾಮಿತಿ ॥ ೪೯ ॥
ಅಥ ವಾಯುರ್ಗತಸ್ತತ್ರ ಯತ್ರಾಸ್ತೇ ಭಗವಾಂಛಿವಃ ।
ಗೌರ್ಯಾಸಹ ರತಾಸಕ್ತ ಆನಂದಂ ಪರಮಂ ಗತಃ ॥ ೫೦ ॥
ಅಥ ಪ್ರಚಲಿತೇ ಶುಕ್ರೇ ಸ್ಥಾನಾದಪ್ರಾಪ್ತಯೋನಿಕೇ ।
ದೇವೇನ ವೀಕ್ಷಿತೋ ವಾಯುರ್ನಾತಿದೂರೇ ವ್ಯವಸ್ಥಿತಃ ॥ ೫೧ ॥

---

೪೪–೪೫. ಶಂಕರನು ಸುರತಾಸಕ್ತನಾಗಿ ಸಾವಿರ ವರ್ಷಗಳಾದುವು. ಅವನು ದೇವತೆಗಳ ಕಾರ್ಯವನ್ನೆಸಗಲಿಲ್ಲ. ಆದುದರಿಂದ ಕೈಲಾಸದಲ್ಲಿ ಗೌರಿಯೊಡನೆ ರಹಸ್ಯದಲ್ಲಿರುವ ಶಂಕರನೆಡೆಗೆ ಹೋಗೋಣ.

೪೬. ಅನಂತರ ಇಂದ್ರಾದಿದೇವತೆಗಳು ತಾರಕನಿಂದುಂಟಾದ ಅತಿಶಯ ದುಃಖದಿಂದ ಸಂತಪ್ತರಾಗಿ ಆ ಕೈಲಾಸಕ್ಕೆ ಹೋದರು.

೪೭–೪೮. ಅವರು ಕೈಲಾಸವನ್ನು ಸೇರಿ ಶಿವನೆಡೆಗೆ ಹೋಗುವಷ್ಟರಲ್ಲಿ ನಂದಿಯು ನೀವು ಮುಂದಕ್ಕೆ ಹೋಗಬಾರದು. ಶಂಕರನು ಪಾರ್ವತಿಯೊಡನೆ ರಹಸ್ಯದಲ್ಲಿದ್ದಾನೆ. ನಾವೂ ಅಲ್ಲಿಗೆ ಹೋಗಕೂಡದು ಎಂದು ತಡೆದನು.

೪೯. ಅನಂತರ ಸಮಸ್ತ ದೇವತೆಗಳೂ ಮಹಾದೇವನು ಏನನ್ನು ಮಾಡುತ್ತಿರುವನೆಂದು ತಿಳಿ ಎಂದು ವಾಯುದೇವನನ್ನು ಶಿವನೆಡೆಗೆ ಕಳುಹಿಸಿದರು.

೫೦. ವಾಯುದೇವನು ಗೌರಿಯೊಡನೆ ರತಾಸಕ್ತನಾಗಿ ಆನಂದಗೊಂಡಿರುವ ಶಿವನೆಡೆಗೆ ಹೋದನು.

೫೧. ತರುವಾಯ ಶಂಕರನು ತನ್ನ ವೀರ್ಯವು ಸ್ವಸ್ಥಾನದಿಂದ ಹೊರಟು ಯೋನಿಯನ್ನು ಸೇರದಿರುವಷ್ಟರಲ್ಲಿಯೇ ಸಮೀಪದಲ್ಲಿರುವ ವಾಯುದೇವನನ್ನು ಕಂಡನು.

ತತೋ ವ್ರೀಡಾಸಮೋಪೇತಸ್ತತ್ಕ್ಷಣಾದೇವ ಚೋತ್ಥಿತಃ ।
ಭಾವಾಸಕ್ತಾಂ ಪ್ರಿಯಾಂ ತ್ಯಕ್ತ್ವಾ ಮಾಮೋತ್ತಿಷ್ಠೇತಿವಾದಿನೀಂ ॥ ೫೨ ॥
ಅಬ್ರವೀದಥ ತಂ ವಾಯುಂ ವಿನಯಾವನತಂ ಸ್ಥಿತಂ ।
ಕಿಮರ್ಥಂ ತ್ವಮಿಹಾಯಾತಃ ಕಚ್ಚಿತ್ಕ್ಷೇಮಂ ದಿವೌಕಸಾಂ ॥ ೫೩ ॥

ವಾಯುರುವಾಚ :—

ಏತೇ ಶಕ್ರಾದಯೋ ದೇವಾ ನಂದಿನಾ ವಿನಿವಾರಿತಾಃ ।
ತಾರಕೇಣ ಹತೋತ್ಸಾಹಾಸ್ತಿಷ್ಠಂತಿ ಗಿರಿರೋಧಸಿ ॥ ೫೪ ॥
ತಸ್ಮಾದೇತಾನ್ ಸಮಾಭಾಷ್ಯ ಸಮಾಶ್ವಾಸ್ಯಚ ಸಾದರಂ ।
ಪ್ರೇಷಯಸ್ವ ದ್ರುತಂ ತತ್ರ ಯತ್ರ ತೇ ದಾನವಾಃ ಸ್ಥಿತಾಃ ॥ ೫೫ ॥
ಅಥ ತಾನಾಹ್ವಯಾಮಾಸ ತತ್ಕ್ಷಣಾತ್ತ್ರಿಪುರಾಂತಕಃ ।
ಸಂಪ್ರಾಹ ಚ ವಿಷಣ್ಣಾಸ್ಯಃ ಕೃತಾಂಜಲಿಪುಟಾನ್ ಸ್ಥಿತಾನ್ ॥ ೫೬ ॥

ಶ್ರೀ ಭಗವಾನುವಾಚ :—

ಯುಷ್ಮತ್ಕೃತೇ ಸಮಾರಂಭಃ ಪುತ್ರಾರ್ಥಂ ಯೋ ಮಯಾಕೃತಃ ।
ಸ್ವಸ್ಥಾನಾಚ್ಚಲಿತೇ ಶುಕ್ರೇ ಕೃತೋ ಮೋಘೋಽದ್ಯ ವಾಯುನಾ ॥ ೫೭ ॥

---

೫೨. ಕೂಡಲೆ ನಾಚಿಕೆಗೊಂಡು ಏಳಬೇಡವೆಂದು ಹೇಳುತ್ತಿರುವ ಅನುರಾಗವತಿಯಾದ ಪ್ರಿಯೆಯನ್ನು ತ್ಯಜಿಸಿ ಮೇಲಕ್ಕೆದ್ದನು.

೫೩. ಅವನು ವಿನಯದಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಿರುವ ವಾಯುದೇವನನ್ನು ನೀನಿಲ್ಲಿಗೆ ಏಕೆ ಬಂದಿರುವೆ? ದೇವತೆಗಳು ಕ್ಷೇಮವಾಗಿರುವರೆ? ಎಂದು ಕೇಳಿದನು.

೫೪. ವಾಯುವು ಹೇಳುತ್ತಾನೆ:—ತಾರಕನಿಂದ ನಷ್ಟೋತ್ಸಾಹರಾದ ಈ ಇಂದ್ರಾದಿದೇವತೆಗಳು ನಂದಿಯಿಂದ ತಡೆಯಲ್ಪಟ್ಟು ಕೈಲಾಸಪರ್ವತದ ತಪ್ಪಲಲ್ಲಿರುವರು.

೫೫. ಆದುದರಿಂದ ಇವರನ್ನು ಮಾತಾಡಿಸಿ ಪ್ರೀತಿಯಿಂದ ಸಮಾಧಾನಗೊಳಿಸಿ ದಾನವರೆಡೆಗೆ ಶೀಘ್ರವಾಗಿ ಕಳುಹಿಸು.

೫೬. ಕೂಡಲೆ ಮಹೇಶ್ವರನು ವಿಷಾದಗೊಂಡ ಮುಖವುಳ್ಳವನಾಗಿ ಆ ದೇವತೆಗಳನ್ನು ಕರೆದು ಕೈಮುಗಿದು ನಿಂತಿರುವ ಅವರನ್ನು ಕುರಿತು ಇಂತೆಂದನು.

೫೭. ಶ್ರೀ ಭಗವಂತನು ಹೇಳುತ್ತಾನೆ:—ದೇವತೆಗಳೆ! ನಾನು ನಿಮಗೋಸ್ಕರ ಪುತ್ರನನ್ನು ಪಡೆಯಲು ಮಾಡಿದ ಪ್ರಯತ್ನವನ್ನು ವೀರ್ಯವು ತನ್ನ ಸ್ಥಳದಿಂದ ಚಲಿಸಿದ್ದ ಕೂಡಲೆ ವಾಯುದೇವನು ಈಗ ನಿಷ್ಫಲಗೊಳಿಸಿದನು.

ಏತದ್ವೀರ್ಯಂ ಮಯಾ ಧೈರ್ಯಾತ್ಸ್ತಂಭಿತಂ ಲಿಂಗಮಧ್ಯಗಂ ।
ಅಮೋಘಂ ತಿಷ್ಠತೇ ಸರ್ವಂ ಕ್ವ ದಧಾಮಿ ನಿವೇದ್ಯತಾಂ ॥ ೫೮ ॥
ಯೇನ ಸಂಜಾಯತೇ ಪುತ್ರೋ ದಾನವಾಂತಕರಃ ಪರಃ ।
ಸೇನಾನಾಥಶ್ಚ ಯುಷ್ಮಾಕಂ ದುರ್ಧರಃ ಸಮರೇ ಪರೈಃ ॥ ೫೯ ॥
ಏತತ್ಕಲ್ಪಾಗ್ನಿ ಸಂಕಾಶಂ ಧರ್ತುಂ ಶಕ್ನೋತಿ ನಾಽಪರಃ ।
ವಿನಾ ವೈಶ್ವಾನರಂ ತಸ್ಮಾದ್ದಧಾತ್ವೇಷ ಸನಾತನಂ ॥ ೬೦ ॥
ಯೇನ ತತ್ರ ಪ್ರಮುಂಚಾಮಿ ಸುತಾಯ ವಿಜಯಾಯ ಚ ।
ಏತದ್ವೀರ್ಯಂ ಮಹಾ ತೀವ್ರಂ ದ್ವಾದಶಾರ್ಕಸಮಪ್ರಭಂ ॥ ೬೧ ॥
ಅಥ ಪ್ರಾಹುಃ ಸುರಾಃ ಸರ್ವೇ ವಹ್ನಿಂ ಸಂಶ್ಲಾಘ್ಯಸಾದರಾಃ ।
ತ್ವಂ ಧಾರಯಾಗ್ನೇ ವಕ್ತ್ರಾಂತೇ ವೀರ್ಯಮೇತದ್ಭವೋದ್ಭವಂ ॥ ೬೨ ॥
ತತಃ ಪ್ರಸಾರಯಾಮಾಸ ಸ್ವವಕ್ತ್ರಂ ಪಾವಕೋ ದ್ರುತಂ ।
ಪುರಂಧರಸ್ಯ ಸಮಾದೇಶಮವಿಕಲ್ಪೇನ ಚೇತಸಾ ॥ ೬೩ ॥
ಶಂಕರೋಽಪ್ಯಕ್ಷಿಪತ್ತತ್ರ ಕಾಮಬಾಣಪ್ರಪೀಡಿತಃ ।
ಗೌರೀಂ ಭಗವತೀಂ ಧ್ಯಾಯನ್ನಾನಂದಂ ಪರಮಂ ಗತಃ ॥ ೬೪ ॥

---

೫೮. ನಾನು ಧೈರ್ಯದಿಂದ ತಡೆದ ವೀರ್ಯವು ಲಿಂಗಮಧ್ಯದಲ್ಲಿದೆ. ಅಮೋಘವಾದ ಈ ವೀರ್ಯವನ್ನು ಎಲ್ಲಿಬಿಡಲಿ, ತಿಳಿಸಿರಿ.

೫೯. ಅದರಿಂದ ದಾನವರನ್ನು ಕೊಲ್ಲುವವನೂ, ಸೇನಾನಾಯಕನೂ, ಸಮರದಲ್ಲಿ ಇತರರಿಂದ ತಡೆಯಲಶಕ್ಯನೂ ಆದ ಪುತ್ರನು ಜನಿಸುವನು.

೬೦. ಆದುದರಿಂದ ಪ್ರಳಯಕಾಲದ ಅಗ್ನಿಗೆ ಸಮಾನವಾದ ಈ ವೀರ್ಯವನ್ನು ಅಗ್ನಿಯನ್ನುಳಿದು ಇತರರು ಧರಿಸಲು ಶಕ್ತರಲ್ಲವಾದ್ದರಿಂದ ಅವನು ಧರಿಸಲಿ.

೬೧. ಅತಿ ತೀವ್ರವೂ, ದ್ವಾದಶಾದಿತ್ಯರಂತೆ ಕಾಂತಿಯುಳ್ಳುದೂ ಆದ ಈ ವೀರ್ಯವನ್ನು ಪುತ್ರನಿಗಾಗಿಯೂ, ಜಯಕ್ಕಾಗಿಯೂ ಆ ಅಗ್ನಿಯಲ್ಲಿ ಬಿಡುವೆನು.

೬೨. ಬಳಿಕ ಸಕಲ ದೇವತೆಗಳೂ ಪ್ರೀತಿಯಿಂದ ಅಗ್ನಿಯನ್ನು ಹೊಗಳಿ ಈಶ್ವರನ ಈ ವೀರ್ಯವನ್ನು ನೀನು ಬಾಯಿಯಲ್ಲಿ ಧರಿಸೆಂದರು.

೬೩. ಅನಂತರ ಅಗ್ನಿಯು ನಿಶ್ಚಲಮನಸ್ಸಿನಿಂದ ಇಂದ್ರನ ಆಜ್ಞೆಯಂತೆ ಬೇಗನೆ ತನ್ನ ಬಾಯಿಯನ್ನು ತೆರೆದನು.

೬೪. ಕಾಮಬಾಣದಿಂದ ಪೀಡಿತನಾದ ಶಂಕರನೂ ಪೂಜ್ಯಳಾದ ಪಾರ್ವತಿಯನ್ನು ಚಿಂತಿಸುತ್ತ ಅತ್ಯಾನಂದದಿಂದ ಆ ಅಗ್ನಿಯ ಬಾಯಿಯಲ್ಲಿ ವೀರ್ಯವನ್ನು ಬಿಟ್ಟನು.

ಪಾವಕೋಽಪಿ ಭೃಶಂ ತೇನ ಕಲ್ಪಾಗ್ನಿಸದೃಶೇನ ಚ ।
ದಹ್ಯಮಾನೋಽಕ್ಷಿಪದ್ಭೂಮೌ ಶರಸ್ತಂಬೇ ಸುವಿಸ್ತರೇ ॥ ೬೫ ॥
ಏತಸ್ಮಿನ್ನಂತರೇ ಪ್ರಾಪ್ತಾ ಭ್ರಮಮಾಣಾ ಇತಸ್ತತಃ ।
ಭಾರ್ಯಾಸ್ತತ್ರ ಮುನೀನಾಂ ತಾಃ ಷಣ್ಣಾಂ ಷಟ್ಕೃತ್ತಿಕಾಃ ಶುಭಾಃ ॥ ೬೬ ॥
ತಾಸಾಂ ನಿರ್ದೇಶಯಾಮಾಸ ಸ್ವಯಮೇವ ಶತಕ್ರತುಃ ।
ಏತದ್ಬೀಜಂ ತ್ರಿನೇತ್ರಸ್ಯ ಪರಿಪಾಲ್ಯಂ ಪ್ರಯತ್ನತಃ ॥ ೬೭ ॥
ಅತ್ರ ಸಂಪತ್ಸ್ಯತೇ ಪುತ್ರೋ ದ್ವಾದಶಾರ್ಕಸಮಪ್ರಭಃ ।
ಭವತೀನಾಮಪಿ ಪ್ರಾಯಃ ಪುತ್ರತ್ವಂ ಸಂಪ್ರಯಾಸ್ಯತಿ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಾರ್ತಿಕೇಯೋತ್ಪತ್ತಿವೃತ್ತಾಂತವರ್ಣನಂ"
ನಾಮ ಸಪ್ತತಿತಮೋಽಧ್ಯಾಯಃ

---

೬೫. ಅಗ್ನಿಯೂ ಪ್ರಳಯಾಗ್ನಿಯಂತಿರುವ ಆ ವೀರ್ಯದಿಂದ ಅತ್ಯಂತವಾಗಿ ಸುಡಲ್ಪಡುವವನಾಗಿ ಅದನ್ನು ವಿಸ್ತಾರವಾದ ನಸೆ ಹುಲ್ಲಿನ ಸಮೂಹವುಳ್ಳ ನೆಲದಮೇಲೆ ಎಸೆದನು.

೬೬. ಇಷ್ಟರಲ್ಲಿ ಇಲ್ಲಿ ಅಲ್ಲಿ ಸಂಚರಿಸುತ್ತಿರುವ ಮುನಿಪತ್ನಿಯರಾದ ಆರು ಮಂದಿ ಕೃತ್ತಿಕೆಯರು ಅಲ್ಲಿಗೆ ಬಂದರು.

೬೭. ಇಂದ್ರನು ಮಹೇಶ್ವರನ ಈ ವೀರ್ಯವನ್ನು ಪ್ರಯತ್ನದಿಂದ ಪಾಲಿಸಿರಿ ಎಂದು ಆ ಮುನಿಪತ್ನಿಯರಿಗೆ ಅಪ್ಪಣೆಮಾಡಿದನು.

೬೮. ಇಲ್ಲಿ ಹುಟ್ಟಿ ದ್ವಾದಶಾದಿತ್ಯರಂತೆ ಪ್ರಕಾಶಿಸುವ ಪುತ್ರನು ನಿಮಗೂ ಪುತ್ರನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ-
ಮಾಹಾತ್ಮ್ಯದಲ್ಲಿ "ಕಾರ್ತಿಕೇಯೋತ್ಪತ್ತಿವೃತ್ತಾಂತವರ್ಣನ"ವೆಂಬ
ಎಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಸಪ್ತತಿತಮೋಽಧ್ಯಾಯಃ

## ಸ್ಕಂದಸ್ಥಾಪಿತಶಕ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚಃ—

ತಾಸ್ತಥೇತಿ ಪ್ರತಿಜ್ಞಾಯ ಚಕ್ರುಸ್ತಚ್ಛಕ್ರಶಾಸನಂ ।
ಸೂತಿಕಾಗೃಹಧರ್ಮೇ ಯತ್ತಚ್ಚ ಚಕ್ರುಸ್ತಸ್ಯ ಸರ್ವಶಃ ॥ ೧ ॥
ಅಥಾಽನ್ಯದಿವಸೇ ಬಾಲೋ ದ್ವಾದಶಾರ್ಕಸಮದ್ಯುತಿಃ ।
ಸಂಜಜ್ಞೇ ತೇನ ವೀರ್ಯೇಣ ದ್ವಿಭುಜೈಕಮುಖಃ ಶುಭಃ ॥ ೨ ॥
ಯಥಾಽಸೌ ಜಾತಮಾತ್ರಸ್ತು ಪ್ರರುರೋದ ಸುದುಃಖಿತಃ ।
ತಚ್ಛ್ರುತ್ವಾ ರುದಿತಂ ಸರ್ವಾಃ ಕೃತ್ತಿಕಾಸ್ತಮುಪಾಗತಾಃ ॥ ೩ ॥
ಮಹಾಸೇನೋಽಪಿ ಸಂವೀಕ್ಷ್ಯ ಮಾತೄಸ್ತಾಃ ಸಮುಪಾಗತಾಃ ।
ಸೋತ್ಕಂಠಃ ಷಣ್ಮುಖೋ ಜಾತೋ ದ್ವಾದಶಾಕ್ಷಭುಜಾಸ್ತಥಾ ॥ ೪ ॥
ಏಕೈಕಸ್ಯಾಃ ಪೃಥಕ್ತೇನ ಪ್ರಪಪೌ ಪ್ರಯತಃ ಸ್ತನಂ ।
ದ್ವಾಭ್ಯಾಮಾಲಿಂಗಯಾಮಾಸ ಭುಜಾಭ್ಯಾಂ ಸ್ನೇಹಪೂರ್ವಕಂ ॥ ೫ ॥

---

## ಕನ್ನಡದ ಅನುವಾದ

### ಸ್ಕಂದಸ್ಥಾಪಿತಶಕ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಆ ಕೃತ್ತಿಕೆಯರು ಹಾಗೆಯೇ ಆಗಲೆಂದು ಒಪ್ಪಿ ಇಂದ್ರನ ಅಪ್ಪಣೆಯನ್ನು ನೆರವೇರಿಸಿದರು. ಹಾಗೆಯೇ ಸೂತಿಕಾಗೃಹ ಕಾರ್ಯವನ್ನೂ ಮಾಡಿದರು.

೨. ಬಳಿಕ ಮತ್ತೊಂದು ದಿನ ಆ ವೀರ್ಯದಿಂದ ದ್ವಾದಶಸೂರ್ಯರಂತೆ ಕಾಂತಿಯುಳ್ಳವನೂ, ಎರಡು ತೋಳು ಒಂದು ಮುಖವುಳ್ಳವನೂ ಆದ ಒಬ್ಬ ಬಾಲಕನು ಜನಿಸಿದನು.

೩. ಅವನು ಹುಟ್ಟಿದ ಕೂಡಲೆ ದುಃಖದಿಂದ ಅಳುತ್ತಿರಲು ಆ ರೋದನ ಧ್ವನಿಯನ್ನು ಕೇಳಿ ಕೃತ್ತಿಕೆಯರು ಅಲ್ಲಿಗೆ ಬಂದರು.

೪. ಮಹಾಸೇನನೂ ಬಂದಿರುವ ಆರು ಮಂದಿ ತಾಯಂದಿರನ್ನು ನೋಡಿ ಕುತೂಹಲದಿಂದ ಆರು ಮುಖಗಳುಳ್ಳವನೂ, ಹನ್ನೆರಡು ಕಣ್ಣು ತೋಳುಗಳುಳ್ಳವನೂ ಆದನು.

೫. ಅವನು ಶುದ್ಧನಾಗಿ ಒಂದೊಂದು ಮುಖದಿಂದ ಒಬ್ಬೊಬ್ಬಳ ಸ್ತನ್ಯವನ್ನು ಕುಡಿದನು. ಎರಡು ತೋಳುಗಳಿಂದ ಪ್ರೀತಿಯಿಂದ ಅವರನ್ನು ಅಪ್ಪಿಕೊಂಡನು.

ಏತಸ್ಮಿನ್ನಂತರೇ ಪ್ರಾಪ್ತಾ ಬ್ರಹ್ಮವಿಷ್ಣುಶಿವಾದಯಃ ।
ಸರ್ವೇ ದೇವಾಃ ಸಹೇಂದ್ರೇಣ ಗಂಧರ್ವಾಪ್ಸರಸಸ್ತಥಾ ॥ ೬ ॥
ಮಹೋತ್ಸವೋಽಥ ಸಂಜಜ್ಞೇ ತಸ್ಮಿನ್‌ಸ್ಥಾನೇ ನಿರರ್ಗಲಃ ।
ಗೀತವಾದ್ಯಪ್ರಣಾದೇನ ಯೇನ ವಿಶ್ವಂ ಪ್ರಪೂರಿತಂ ॥ ೭ ॥
ರಂಭಾದ್ಯಾ ನನೃತುಸ್ತಸ್ಯ ವಿಲಾಸಿನ್ಯೋ ದಿವೌಕಸಾಂ ।
ಜಗುಶ್ಚ ಮುಖ್ಯಗಂಧರ್ವಾಶ್ಚಿತ್ರಾಂಗದಮುಖಾಶ್ಚಯೇ ॥ ೮ ॥
ತತಸ್ತು ದೇವತಾಃ ಸರ್ವಾಸ್ತಸ್ಯ ನಾಮ ಪ್ರಚಕ್ರಿರೇ ।
ಸ್ಕಂದನಾದ್ರೇತಸೋ ಭೂಮೌ ಸ್ಕಂದ ಇತ್ಯೇವ ಸಾದರಂ ॥ ೯ ॥
ಅಥ ತಸ್ಯ ಕುಮಾರಸ್ಯ ತದಾ ತತ್ರಾಭಿಷೇಚನಂ ।
ಸೇನಾಪತ್ಯಂ ಕೃತಂ ಸಾಕ್ಷಾದ್ದೇವಾನಾಂ ಶಂಭುನಾ ಸ್ವಯಂ ॥ ೧೦ ॥
ತಸ್ಯ ಶಕ್ತಿಃ ಸ್ವಯಂ ದತ್ತಾ ವಿಧಿನಾದ್ಭುತದರ್ಶನಾ ।
ಅಮೋಘಾ ವಿಜಯಾರ್ಥಾಯ ದೈತ್ಯಪಕ್ಷಕ್ಷಯಾಯ ಚ ॥ ೧೧ ॥
ಮಯೂರೋ ವಾಹನಾರ್ಥಾಯ ತ್ರ್ಯಂಬಕೇಣ ಸುಶೀಘ್ರತಃ ।
ದಿವ್ಯಾಸ್ತ್ರಾಣಿ ಮಹೇಂದ್ರೇಣ ವಿಷ್ಣುನಾಽಥ ಮಹಾತ್ಮನಾ ॥ ೧೨ ॥
ತತೋಽಭೀಷ್ಟಾನಿ ಶಸ್ತ್ರಾಣಿ ದೇವೈಃ ಸರ್ವೈಃ ಪೃಥಕ್ ಪೃಥಕ್ ।
ತಸ್ಯ ದತ್ತಾನಿ ಸಂತುಷ್ಟೈಸ್ತಥಾ ಮಾತೃಗಣೈರಪಿ ॥ ೧೩ ॥

---

೬. ಇಷ್ಟರಲ್ಲಿ ಬ್ರಹ್ಮ, ವಿಷ್ಣು, ಶಿವಾದಿ ಸಕಲದೇವತೆಗಳೂ, ಅಪ್ಸರರೂ ಇಂದ್ರನೊಡನೆ ಅಲ್ಲಿಗೆ ಬಂದರು.

೭. ಆ ಸ್ಥಳದಲ್ಲಿ ಮಹೋತ್ಸವವು ತಡೆಯಿಲ್ಲದೆ ನಡೆಯಿತು. ಗೀತವಾದ್ಯ ಧ್ವನಿಗಳಿಂದ ಪ್ರಪಂಚವು ತುಂಬಿತು.

೮. ರಂಭೆ ಮೊದಲಾದ ದೇವವೇಶ್ಯೆಯರು ನೃತ್ಯಮಾಡಿದರು. ಚಿತ್ರಾಂಗದನೇ ಮೊದಲಾದ ಗಂಧರ್ವಮುಖ್ಯರು ಗಾನಮಾಡಿದರು.

೯. ತರುವಾಯ ಸಮಸ್ತ ದೇವತೆಗಳೂ ರೇತಸ್ಸು ಭೂಮಿಯಲ್ಲಿ ಬಿದ್ದು ಜನಿಸಿದವನಾದ್ದರಿಂದ ಅವನಿಗೆ ಸ್ಕಂದ ಎಂದು ಹೆಸರನ್ನಿಟ್ಟರು.

೧೦. ಶಂಕರನು ತಾನೇ ಆ ಕುಮಾರನನ್ನು ದೇವತೆಗಳ ಸೇನಾಪತಿಯ ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿದನು.

೧೧. ಅವನಿಗೆ ಆ ಶಂಕರನು ಆಶ್ಚರ್ಯಕರವೂ, ಸಫಲವೂ ಆದ ಶಕ್ತಿಯೆಂಬ ಆಯುಧವನ್ನು ದೈತ್ಯರನ್ನು ಜಯಿಸುವುದಕ್ಕಾಗಿ ಕೊಟ್ಟನು.

೧೨-೧೩. ಮತ್ತು ಶೀಘ್ರವಾಗಿ ಹೋಗುವುದಕ್ಕಾಗಿ ನವಿಲನ್ನು ವಾಹನವಾಗಿತ್ತನು. ಮಹಾತ್ಮನಾದ ವಿಷ್ಣುವೂ, ಇಂದ್ರನೂ ದಿವ್ಯಾಸ್ತ್ರಗಳನ್ನೂ, ಸಕಲ ದೇವತೆಗಳೂ ಸಂತುಷ್ಟರಾದ ಮಾತೃಗಣಗಳೂ ಅಭೀಷ್ಟವಾದ ಶಸ್ತ್ರಗಳನ್ನೂ ಅವನಿಗೆ ಕೊಟ್ಟರು.

ತತಸ್ತಮುಗ್ರತಃ ಕೃತ್ವಾ ಸೇನಾನಾಥಂ ಸುರೇಶ್ವರಾಃ ।
ಜಗ್ಮುಃ ಸ ಸೈನಿಕಾಸ್ತತ್ರ ತಾರಕೋ ಯತ್ರ ಸಂಸ್ಥಿತಃ ॥ ೧೪ ॥
ತಾರಕೋಽಪಿ ಸಮಾಲೋಕ್ಯ ದೇವಾನ್ ಸ್ವಯಮುಪಾಗತಾನ್ ।
ಯುದ್ಧಾರ್ಥಂ ಹರ್ಷಸಂಯುಕ್ತಃ ಸಮ್ಮುಖಃ ಸತ್ವರಂ ಯಯೌ ॥ ೧೫ ॥
ತತೋಽಭೂತ್ಸುಮಹದ್ಯುದ್ಧಂ ದೇವಾನಾಂ ದಾನವೈಃ ಸಹ ।
ಕೋಪಸಂರಕ್ತನೇತ್ರಾಣಾಂ ಮೃತ್ಯುಂ ಕೃತ್ವಾ ನಿವರ್ತನಂ ॥ ೧೬ ॥
ಅಥ ಸ್ಕಂದೇನ ಸಂವೀಕ್ಷ್ಯ ದೂರಸ್ಥಂ ತಾರಕಂ ರಣೇ ।
ಸಮಾಹೂಯ ತತೋ ಮುಕ್ತಾ ಸಾ ಶಕ್ತಿಸ್ತಸ್ಯ ಮೃತ್ಯವೇ ॥ ೧೭ ॥
ಅಥಾಽಸೌ ಹೃದಯಂ ಭಿತ್ವಾ ತಸ್ಯ ದೈತ್ಯಸ್ಯ ದಾರುಣಾ ।
ಚಮತ್ಕಾರಪುರೋಪಾಂತೇ ಪತಿತಾ ರುಧಿರೋಕ್ಷಿತಾ ॥ ೧೮ ॥
ತಾರಕಸ್ತು ಗತೋ ನಾಶಂ ಮುಕ್ತಃ ಪ್ರಾಣೈಶ್ಚ ತತ್ಕ್ಷಣಾತ್ ।
ತತೋ ದೇವಗಣಾಃ ಸರ್ವೇ ಸಂಹೃಷ್ಟಾಸ್ತಂ ಮಹಾಬಲಂ ॥ ೧೯ ॥
ಸ್ತೋತ್ರೈರ್ಬಹುವಿಧೈಃ ಸ್ತುತ್ವಾ ಪ್ರೋಚುಸ್ತಸ್ಮಿನ್ ಹತೇ ಸತಿ ।
ಗತಾಶ್ಚ ತ್ರಿದಿವಂ ತೂರ್ಣಂ ಸಹ ಶಕ್ರೇಣ ನಿರ್ಭಯಾಃ ॥ ೨೦ ॥
ಸ್ಕಂದೋಽಪಿ ತಾಂ ಸಮಾದಾಯ ಶಕ್ತಿಂ ತತ್ರ ಪುರೋತ್ತಮೇ ।
ಸ್ಥಾಪಯಾಮಾಸ ಯೇನೈವ ರಕ್ತಶೃಂಗೋಽಭವದ್ದೃಢಃ ॥ ೨೧ ॥

---

೧೪. ತರುವಾಯ ಸುರೇಶ್ವರರು ಸೇನಾಪತಿಯಾದ ಅವನನ್ನು ಮುಂದಿರಿಸಿಕೊಂಡು ಸೈನ್ಯದೊಡನೆ ತಾರಕನೆಡೆಗೆ ಹೋದರು.

೧೫. ತಾರಕನೂ ತಾವಾಗಿಯೇ ಬಂದ ದೇವತೆಗಳನ್ನು ಕಂಡು ಸಂತೋಷಗೊಂಡು ಯುದ್ಧಕ್ಕಾಗಿ ಬೇಗನೆ ಎದುರುಗೊಂಡನು.

೧೬. ಬಳಿಕ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳ ದೇವತೆಗಳು ದಾನವರೊಡನೆ ಮರಣವನ್ನುಂಟುಮಾಡುವ ಯುದ್ಧವನ್ನುಮಾಡಿ ಹಿಂದಿರುಗಿದರು.

೧೭. ತರುವಾಯ ಸ್ಕಂದನು ಯುದ್ಧದಲ್ಲಿ ದೂರದಲ್ಲಿರುವ ತಾರಕಾಸುರನನ್ನು ನೋಡಿ ಅವನನ್ನು ಕೊಲ್ಲುವುದಕ್ಕಾಗಿ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.

೧೮. ಭಯಂಕರವಾದ ಶಕ್ತಿಯು ತಾರಕಾಸುರನ ಎದೆಯನ್ನು ಸೀಳಿ ರಕ್ತದಿಂದ ಒದ್ದೆಯಾಗಿ ಚಮತ್ಕಾರಪುರದ ಹತ್ತಿರ ಬಿದ್ದಿತು.

೧೯–೨೦. ತಾರಕನೂ ಅಸುವನ್ನು ನೀಗಿದನು. ಅನಂತರ ದೇವತೆಗಳು ಸಂತೋಷದಿಂದ ಅತಿಬಲಿಷ್ಠನಾದ ಸ್ಕಂದನನ್ನು ಬಹುವಿಧ ಸ್ತೋತ್ರಗಳಿಂದ ಸ್ತುತಿಸಿ ಭಯರಹಿತರಾಗಿ ಇಂದ್ರನೊಡನೆ ಅಮರಾವತಿಗೆ ಬೇಗನೆ ತೆರಳಿದರು.

೨೧. ಸ್ಕಂದನೂ ಆ ಶಕ್ತಿಯನ್ನು ತೆಗೆದುಕೊಂಡು ಆ ಚಮತ್ಕಾರಪುರದಲ್ಲಿ ಸ್ಥಾಪಿಸಿದನು. ಅದರಿಂದ ರಕ್ತಶೃಂಗಪರ್ವತವು ದೃಢವಾಯಿತು.

ಋಷಯ ಊಚುಃ :—

ರಕ್ತಶೃಂಗಃ ಕಥಂ ತೇನ ನಿಶ್ಚಲೋಽಪಿ ದೃಢೀಕೃತಃ ।
ಕಸ್ಯ ವಾಕ್ಯೇನ ನೋ ಬ್ರೂಹಿ ವಿಸ್ತರೇಣ ಮಹಾಮತೇ ॥ ೨೨ ॥

ಸೂತ ಉವಾಚ :—

ಯದಾ ವೈ ಭೂಮಿಕಂಪಸ್ತು ಸಂಪ್ರಜಾತಃ ಸುದಾರುಣಃ ।
ರಕ್ತಶೃಂಗಃ ಪ್ರಚಲಿತಃ ಸ್ವಸ್ಥಾನಾದತಿವೇಗತಃ ॥ ೨೩ ॥
ತಸ್ಯ ದೈತ್ಯಸ್ಯ ಪಾತೇನ ಯಥಾಽನ್ಯೇ ಪರ್ವತೋತ್ತಮಾಃ ।
ಅಥ ಹರ್ಮ್ಯಾಣಿ ಸರ್ವಾಣಿ ಚಮತ್ಕಾರಪುರೇ ತದಾ ॥ ೨೪ ॥
ಶೀರ್ಣಾನಿ ಚಲಿತೇ ತಸ್ಮಿನ್ಪರ್ವತೇ ವ್ಯಥಿತಾ ದ್ವಿಜಾಃ ।
ಪ್ರಾಯಶೋ ನಿಧನಂ ಪ್ರಾಪ್ತಾಸ್ತಥಾಽನ್ಯೇ ಮೂರ್ಛಯಾರ್ದಿತಾಃ ॥ ೨೫ ॥
ಹತಶೇಷಾಸ್ತತೋ ವಿಪ್ರಾ ಗತ್ವಾ ಸ್ಕಂದಂ ಕ್ರುಧಾನ್ವಿತಾಃ ।
ಪ್ರೋಚುಶ್ಚ ಕಿಮಿದಂ ಪಾಪ ತ್ವಯಾ ಕೃತಮಬುದ್ಧಿನಾ ॥ ೨೬ ॥
ನಾಶಂ ನೀತಾ ವಯಂ ಸರ್ವೇ ಸಪುತ್ರಪಶುಬಾಂಧವಾಃ ।
ತಸ್ಮಾಚ್ಛಾಪಂ ಪ್ರದಾಸ್ಯಾಮೋ ವಯಂ ದುಃಖೇನ ದುಃಖಿತಾಃ ॥ ೨೭ ॥

ಸ್ಕಂದ ಉವಾಚ :—

ಹಿತಾಯ ಸರ್ವಲೋಕಾನಾಂ ಮಯೈತತ್ಸಮನುಷ್ಠಿತಂ ।
ಯದ್ಧತೋ ದಾನವೋ ರೌದ್ರೋ ನಾಽನ್ಯಥಾ ದ್ವಿಜಸತ್ತಮಾಃ ॥ ೨೮ ॥

---

೨೨. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ಆ ಸ್ಕಂದನು ನಿಶ್ಚಲವಾದ ರಕ್ತಶೃಂಗಪರ್ವತವನ್ನು ಯಾರ ಮಾತಿನಿಂದ ಹೇಗೆ ದೃಢಗೊಳಿಸಿದನು? ವಿಸ್ತಾರವಾಗಿ ನಮಗೆ ಹೇಳು.

೨೩–೨೬. ಸೂತನು ಹೇಳುತ್ತಾನೆ:—ಆ ತಾರಕಾಸುರನು ನೆಲಕ್ಕೆ ಬೀಳಲು ಭಯಂಕರವಾಗಿ ಭೂಮಿಯು ನಡುಗಿತು. ಅದರಿಂದ ಇತರ ಪರ್ವತಗಳಂತೆ ರಕ್ತಶೃಂಗಪರ್ವತವೂ ಅತಿ ವೇಗದಿಂದ ತನ್ನ ಸ್ಥಳದಿಂದ ಚಲಿಸಿತು. ಅದು ಚಲಿಸಿದ ಕೂಡಲೆ ಚಮತ್ಕಾರಪುರದಲ್ಲಿರುವ ಸಕಲ ಸೌಧಗಳೂ ಉರುಳಿದುವು. ಬ್ರಾಹ್ಮಣರು ವ್ಯಥೆಗೊಂಡರು. ಬಹಳ ಮಂದಿ ಮೃತರಾದರು. ಇತರರು ಮೂರ್ಛೆಗೊಂಡರು. ಮಡಿದುಳಿದ ಬ್ರಾಹ್ಮಣರು ಕುಪಿತರಾಗಿ ಸ್ಕಂದನೆಡೆಗೆ ಹೋಗಿ, "ಪಾಪಿಯೆ! ಮೂಢನಾದ ನೀನು ಹೀಗೇಕೆ ಮಾಡಿದೆ?

೨೭. ಪುತ್ರ, ಪಶು, ಬಾಂಧವರೊಡನೆ ನಮ್ಮನ್ನು ನಾಶಗೊಳಿಸಿದೆಯಲ್ಲ. ಆದುದರಿಂದ ದುಃಖಿತರಾದ ನಾವು ನಿನಗೆ ಶಾಪವನ್ನು ಕೊಡುವೆವು."

೨೮. ಸ್ಕಂದನು ಹೇಳುತ್ತಾನೆ:—ದ್ವಿಜವರ್ಯರೆ! ನಾನು ಸಕಲ ಲೋಕಗಳ ಹಿತಕ್ಕಾಗಿ ಭಯಂಕರನಾದ ಈ ದಾನವನನ್ನು ಕೊಂದೆನು. ಬೇರೆ ಕಾರ್ಯಕ್ಕಾಗಿ ಅಲ್ಲ.

ಪ್ರಸಾದಃ ಕ್ರಿಯತಾಂ ತಸ್ಮಾನ್ಮಾನ್ಯಾ ಮೇ ಬ್ರಾಹ್ಮಣಾಃ ಸದಾ ।
ಮೃತಾನಪಿ ದ್ವಿಜಾನ್ ಸರ್ವಾನಹಂ ತಾನಮೃತಾಶ್ರಯಾತ್ ॥ ೨೯ ॥
ಪುನರ್ಜೀವಿತಸಂಯುಕ್ತಾನ್ ಕರಿಷ್ಯಾಮಿ ನ ಸಂಶಯಃ ।
ತಥಾ ಸುನಿಶ್ಚಲಂ ಶೈಲಂ ಕರಿಷ್ಯಾಮಿ ಸ್ವಶಕ್ತಿತಃ ॥ ೩೦ ॥
ಏವಮುಕ್ತ್ವಾ ಸಮಾದಾಯ ತಾಂ ಶಕ್ತಿಂ ರುಧಿರೋಕ್ಷಿತಾಂ ।
ಚಕ್ರೇ ಸ್ಥಾಪನಮಸ್ಯಾಸ್ತು ರಕ್ತಶೃಂಗಸ್ಯ ಮೂರ್ಧನಿ ॥ ೩೧ ॥
ತತಃ ಪ್ರೋವಾಚ ಸಂಹೃಷ್ಟೋ ದೇವತಾನಾಂ ಚತುಷ್ಟಯಂ ।
ಆಂಬವೃದ್ಧಾಂ ತಥೈವಾಮ್ರಾಂ ಮಾಹಿತ್ಥಾಂ ಚ ಚಮತ್ಕರೀಂ ॥ ೩೨ ॥
ಯುಷ್ಮಾಭಿರ್ನಿಶ್ಚಲಃ ಕಾರ್ಯೋ ಭೂಯೋಽಯಂ ನಗಸತ್ತಮಃ ।
ಪ್ರಲಯೇಽಪಿ ಯಥಾ ಸ್ಥಾನಾದ್ರಕ್ತಶೃಂಗಶ್ಚಲೇನ್ನಹಿ ॥ ೩೩ ॥
ಸದೈವ ಖ್ಯಾತಿಮಾಯಾತು ಮನ್ನಾಮ್ನಾ ಪುರಮುತ್ತಮಂ ।
ಯುಷ್ಮಾಕಂ ಬ್ರಾಹ್ಮಣಾಃ ಸರ್ವೇ ಪೂಜಾಂ ದಾಸ್ಯಂತಿ ಸರ್ವದಾ ॥ ೩೪ ॥
ಬಾಢಮಿತ್ಯೇವ ತಾಃ ಪ್ರೋಚ್ಯ ಚತುರ್ದಿಕ್ಷು ತತಶ್ಚ ತಂ ।
ಶೂಲಾಗ್ರೈಃ ಸುದೃಢಂ ಚಕ್ರುಃ ಸ್ಕಂದವಾಕ್ಯೇನ ಹರ್ಷಿತಾಃ ॥ ೩೫ ॥
ತತಶ್ಚಾಽಮೃತಮಾದಾಯ ಮೃತಾನಪಿ ದ್ವಿಜೋತ್ತಮಾನ್ ।
ಸ್ಕಂದೋ ಜೀವಾಪಯಾಮಾಸ ದ್ವಿಜಭಕ್ತಿಪರಾಯಣಃ ॥ ೩೬ ॥

---

೨೯–೩೦. ಆದುದರಿಂದ ನೀವು ನನ್ನಲ್ಲಿ ಅನುಗ್ರಹಮಾಡಿರಿ. ನನಗೆ ಬ್ರಾಹ್ಮಣರು ಯಾವಾಗಲೂ ಪೂಜ್ಯರು. ನಾನು ಮೃತರಾದ ಬ್ರಾಹ್ಮಣರನ್ನೆಲ್ಲ ಅಮೃತದ ಆಶ್ರಯದಿಂದ ನಿಶ್ಚಯವಾಗಿಯೂ ಬದುಕಿಸುವೆನು. ಹಾಗೆಯೇ ನನ್ನ ಶಕ್ತ್ಯಾಯುಧದಿಂದ ಆ ಪರ್ವತವನ್ನು ದೃಢಗೊಳಿಸುವೆನು.

೩೧. ಹೀಗೆ ನುಡಿದು ರಕ್ತದಿಂದ ಒದ್ದೆಯಾದ ಆ ಶಕ್ತ್ಯಾಯುಧವನ್ನು ತೆಗೆದುಕೊಂಡು ರಕ್ತಶೃಂಗಪರ್ವತದ ಶಿಖರದಲ್ಲಿರಿಸಿದನು.

೩೨. ಬಳಿಕ ಸಂತೋಷದಿಂದ ಆಂಬವೃದ್ಧಾ, ಆಮ್ರಾ, ಮಾಹಿತ್ಥಾ, ಚಮತ್ಕರೀ ಎಂಬ ನಾಲ್ಕು ದೇವತೆಗಳನ್ನು ಕುರಿತು ಇಂತೆಂದನು.

೩೩. ಪ್ರಳಯ ಕಾಲದಲ್ಲಿಯೂ ಈ ರಕ್ತಶೃಂಗಪರ್ವತವು ಸ್ವಸ್ಥಾನದಿಂದ ಚಲಿಸದಂತೆ ನೀವು ದೃಢಗೊಳಿಸಬೇಕು.

೩೪. ಈ ಉತ್ತಮವಾದ ಪಟ್ಟಣವು ನನ್ನ ಹೆಸರಿನಿಂದ ಯಾವಾಗಲೂ ವಿಖ್ಯಾತವಾಗಲಿ. ಬ್ರಾಹ್ಮಣರೆಲ್ಲ ನಿಮ್ಮನ್ನು ಯಾವಾಗಲೂ ಪೂಜಿಸುವರು.

೩೫–೩೬. ಆ ದೇವತೆಗಳು ಸ್ಕಂದನ ಮಾತಿನಿಂದ ಸಂತೋಷಗೊಂಡವರಾಗಿ ಹಾಗೆಯೇ ಆಗಲೆಂದು ಹೇಳಿ ಆ ಪರ್ವತವನ್ನು ನಾಲ್ಕು ದಿಕ್ಕುಗಳಲ್ಲಿಯೂ ಶೂಲದ ಕೊನೆಗಳಿಂದ ದೃಢಗೊಳಿಸಿದರು. ತರುವಾಯ ದ್ವಿಜರಲ್ಲಿ ಭಕ್ತಿಯುಳ್ಳ ಸ್ಕಂದನು ಅಮೃತವನ್ನು ತಂದು ಮೃತಬ್ರಾಹ್ಮಣರನ್ನು ಬದುಕಿಸಿದನು.

ತತಸ್ತೇ ಬ್ರಾಹ್ಮಣಾಸ್ತತ್ರ ಸಂಹೃಷ್ಟಾ ವರಮುತ್ತಮಂ ।
ದದುಸ್ತಸ್ಯ ಸ ಚ ಪ್ರಾಹ ಮಸ್ನಾನ್ನೈತತ್ಪುರೋತ್ತಮಂ ।
ಸದೈವ ಖ್ಯಾತಿಮಾಯಾತು ಏತನ್ಮೇ ಹೃದಿ ವಾಂಛಿತಂ ॥ ೩೭ ॥
ಋಷಯ ಊಚುಃ:—
ಏತತ್ಸ್ಕಂದಪುರಂ ನಾಮ ತವ ನಾಮ್ನಾ ಭವಿಷ್ಯತಿ ।
ಚಮತ್ಕಾರಪುರಂ ತದ್ವತ್ಸಾಂಪ್ರತಂ ಸುರಸತ್ತಮ ॥ ೩೮ ॥
ಪೂಜಾಂ ತವ ಕರಿಷ್ಯಾಮಃ ಕೃತ್ವಾ ಪ್ರಾಸಾದಮುತ್ತಮಂ ।
ತಥೈವ ದೇವತಾಃ ಸರ್ವಾಶ್ಚತಸ್ರೋಽಪಿ ತ್ವಯಾ ಧೃತಾಃ ॥ ೩೯ ॥
ಸರ್ವಾಃ ಸಂಪೂಜಯಿಷ್ಯಾಮಃ ಸರ್ವಕೃತ್ಯೇಷು ಸಾದರಂ ।
ಏತಾಂ ಚ ತಾವಕೀಂ ಶಕ್ತಿಂ ಸದಾ ಸುರವರೋತ್ತಮ ।
ವಿಶೇಷಾತ್ಪೂಜಯಿಷ್ಯಾಮಃ ಷಷ್ಠ್ಯಾಂ ಶ್ರದ್ಧಾಸಮನ್ವಿತಾಃ ॥ ೪೦ ॥
ಸೂತ ಉವಾಚ:—
ಏವಂ ಸ ಬ್ರಾಹ್ಮಣೈಃ ಪ್ರೋಕ್ತೋ ಮಹಾಸೇನೋ ಮಹಾಬಲಃ ।
ಸ್ಥಿತಸ್ತತ್ರೈವ ತದ್ವಾಕ್ಯಾಜ್ಜ್ಞಾತ್ವಾತತ್ಕ್ಷೇತ್ರಮುತ್ತಮಂ ॥ ೪೧ ॥
ಯಸ್ತಂ ಪೂಜಯತೇ ಭಕ್ತ್ಯಾ ಚೈತ್ರಷಷ್ಠ್ಯಾಂ ಸುಭಾವತಃ ।
ಶುಕ್ಲಾಯಂ ತಸ್ಯ ಸಂತುಷ್ಟಿಂ ಕುರುತೇ ಬರ್ಹಿವಾಹನಃ ॥ ೪೨ ॥

---

೩೭. ಬ್ರಾಹ್ಮಣರು ಸಂತುಷ್ಟರಾಗಿ ಆ ಸ್ಕಂದನಿಗೆ ವರವನ್ನಿತ್ತರು. ಆ ಸ್ಕಂದನು "ಈ ಪಟ್ಟಣವು ನನ್ನ ಹೆಸರಿನಿಂದ ಖ್ಯಾತವಾಗಲಿ. ಇದೇ ನನ್ನ ಹೃದಯಾಭಿಲಾಷೆಯಾಗಿರುವುದು" ಎಂದನು.

೩೮—೪೦. ಋಷಿಗಳು ಹೇಳುತ್ತಾರೆ:—ಸುರಶ್ರೇಷ್ಠನೆ! ಈ ಚಮತ್ಕಾರ ಪುರವು ನಿನ್ನ ಹೆಸರಿನಿಂದ ಸ್ಕಂದಪುರವೆಂದು ಪ್ರಸಿದ್ಧವಾಗುವುದು. ಹಾಗೆಯೇ ನಾವು ಈಗ ನಿನಗೆ ಉತ್ತಮವಾದ ಪ್ರಾಸಾದವನ್ನು ರಚಿಸಿ ಪೂಜಿಸುವೆವು. ನೀನು ಸ್ಥಾಪಿಸಿರುವ ನಾಲ್ಕು ದೇವತೆಗಳನ್ನು ಎಲ್ಲ ಕಾರ್ಯಗಳಲ್ಲಿಯೂ ಆರಾಧಿಸುವೆವು. ಈ ನಿನ್ನ ಶಕ್ತಿಯನ್ನು ಯಾವಾಗಲೂ ಷಷ್ಠೀ ದಿನ ಶ್ರದ್ಧೆಯಿಂದ ಪೂಜಿಸುವೆವು.

೪೧. ಸೂತನು ಹೇಳುತ್ತಾನೆ:—ಬ್ರಾಹ್ಮಣರು ಹೀಗೆ ಹೇಳಲು ಅತಿಬಲಿಷ್ಠನಾದ ಮಹಾಸೇನನು ಆ ಬ್ರಾಹ್ಮಣರ ಮಾತಿನಂತೆ ಅದು ಉತ್ತಮಕ್ಷೇತ್ರವೆಂದು ಅರಿತು ಅಲ್ಲಿಯೇ ಇದ್ದನು.

೪೨. ಚೈತ್ರ ಶುಕ್ಲ ಷಷ್ಠೀ ದಿನ ಭಕ್ತಿಯಿಂದ ಆ ಸ್ಕಂದನನ್ನು ಪೂಜಿಸಿದವನಲ್ಲಿ ಸ್ಕಂದನು ಸಂತುಷ್ಟನಾಗುವನು.

ತಸ್ಯಾಂ ಶಕ್ತೌ ನರೋ ಯಶ್ಚ ಕುರ್ಯಾತ್ಪೃಷ್ಠಿನಿಘರ್ಷಣಂ ।
ಪೂಜಯಿತ್ವಾ ತು ಪುಷ್ಪಾದ್ಯೈಃ ಸಮ್ಯಕ್ ಶ್ರದ್ಧಾಸಮನ್ವಿತಃ ।
ಸ ನಸ್ಯಾದ್ರೋಗಸಂಯುಕ್ತೋ ಯಾವತ್ಸಂವತ್ಸರಂ ದ್ವಿಜಾಃ ॥ ೪೩ ॥
ಏವಂ ತತ್ರ ಧೃತಾಶಕ್ತಿಸ್ತೇನ ಸ್ಕಂದೇನ ಧೀಮತಾ ।
ರಕ್ತಶೃಂಗಸ್ಯ ರಕ್ಷಾರ್ಥಂ ತತ್ಪುರಸ್ಯ ವಿಶೇಷತಃ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸ್ಕಂದಸ್ಥಾಪಿತಶಕ್ತಿಮಾಹಾತ್ಮ್ಯವರ್ಣನಂ"
ನಾಮೈಕಸಪ್ತತಿತಮೋಽಧ್ಯಾಯಃ

---

೪೩. ಶ್ರದ್ಧೆಯಿಂದ ಆ ಶಕ್ತಿಯನ್ನು ಪುಷ್ಪ ಮೊದಲಾದುವುಗಳಿಂದ ಪೂಜಿಸಿ ಬೆನ್ನನ್ನು ಉಜ್ಜಿಕೊಳ್ಳುವ ಮಾನವನು ಒಂದು ವರ್ಷದವರೆಗೆ ರೋಗವಿಲ್ಲದವನಾಗುವನು.

೪೪. ಹೀಗೆ ಆ ಸ್ಕಂದನು ರಕ್ತಶೃಂಗಪರ್ವತದ ಮತ್ತು ಆ ಪಟ್ಟಣದ ರಕ್ಷಣೆಗಾಗಿ ಶಕ್ತಿಯನ್ನು ಸ್ಥಾಪಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸ್ಕಂದಸ್ಥಾಪಿತಶಕ್ತಿಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತಿತಮೋಽಧ್ಯಾಯಃ

### ಧೃತರಾಷ್ಟ್ರಾದಿಕೃತ ಹಾಟಕೇಶ್ವರಕ್ಷೇತ್ರದರ್ಶನವರ್ಣನಂ

**ಸೂತ ಉವಾಚ:—**

**ತತ್ರೈವ ಸ್ಥಾಪಿತಂ ಲಿಂಗಂ ಧೃತರಾಷ್ಟ್ರೇಣ ಭೂಭುಜಾ ।**
**ದುರ್ಯೋಧನೇನ ಚಾಲೋಕ್ಯ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥**

**ಋಷಯ ಊಚುಃ:—**

**ಕಸ್ಮಿನ್‌ಕಾಲೇ ನರೇಂದ್ರೇಣ ಧೃತರಾಷ್ಟ್ರೇಣ ಭೂಭುಜಾ ।**
**ತತ್ರ ಸಂಸ್ಥಾಪಿತಂ ಲಿಂಗಂ ವದ ತ್ವಂ ರೌಮಹರ್ಷಣೇ ॥ ೨ ॥**

**ಸೂತ ಉವಾಚ:—**

**ಆಸೀದ್ಭಾನುಮತೀ ನಾಮ ಬಲಭದ್ರಸುತಾ ಪುರಾ ।**
**ಸರ್ವಲಕ್ಷಣಸಂಪನ್ನಾ ರೂಪೌದಾರ್ಯಗುಣಾನ್ವಿತಾ ॥ ೩ ॥**
**ತಾಂ ದದಾವಥ ಪತ್ನ್ಯರ್ಥೇ ಧಾರ್ತರಾಷ್ಟ್ರಾಯ ಧೀಮತೇ ।**
**ದುರ್ಯೋಧನಾಯ ಸಂಮಂತ್ರ್ಯ ವಿಷ್ಣುನಾ ಸಹ ಯಾದವಃ ॥ ೪ ॥**
**ಅಥ ನಾಗಪುರಾತ್ಸರ್ವೇ ಭೀಷ್ಮದ್ರೋಣಾದಯಶ್ಚ ಯೇ ।**
**ಕೌರವಾಃ ಪ್ರಸ್ಥಿತಾಸ್ತೂರ್ಣಂ ಪುರೀಂ ದ್ವಾರವತೀಂ ಪ್ರತಿ ॥ ೫ ॥**

---

### ಕನ್ನಡದ ಅನುವಾದ

#### ಧೃತರಾಷ್ಟ್ರಾದಿಕೃತ ಹಾಟಕೇಶ್ವರಕ್ಷೇತ್ರದರ್ಶನವರ್ಣನ

೧. ಸೂತನು ಹೇಳುತ್ತಾನೆ:—ಅಲ್ಲಿಯೇ ಧೃತರಾಷ್ಟ್ರ ಮತ್ತು ದುರ್ಯೋಧನರಿಂದ ಸ್ಥಾಪಿಸಲ್ಪಟ್ಟ ಶಿವಲಿಂಗವನ್ನು ಸಂದರ್ಶಿಸಿದವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೨. ಋಷಿಗಳು ಹೇಳುತ್ತಾರೆ:—ಸೂತ! ಧೃತರಾಷ್ಟ್ರನು ಯಾವಾಗ ಶಿವಲಿಂಗವನ್ನು ಅಲ್ಲಿ ಸ್ಥಾಪಿಸಿದನು? ನೀನು ಅದನ್ನು ಹೇಳು.

೩. ಸೂತನು ಹೇಳುತ್ತಾನೆ:— ಹಿಂದೆ ಸಕಲ ಲಕ್ಷಣಗಳಿಂದ ಕೂಡಿದವಳೂ, ರೂಪೌದಾರ್ಯಸಮನ್ವಿತಳೂ ಆದ ಭಾನುಮತಿಯೆಂಬ ಬಲಭದ್ರನ ಮಗಳೊಬ್ಬಳಿದ್ದಳು.

೪. ಬಲಭದ್ರನು ಕೃಷ್ಣನೊಡನೆ ಆಲೋಚಿಸಿ ಆ ಕನ್ಯೆಯನ್ನು ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ಮದುವೆಮಾಡಿಕೊಟ್ಟನು.

೫. ಬಳಿಕ ಹಸ್ತಿನಾವತಿಯಿಂದ ಭೀಷ್ಮದ್ರೋಣಾದಿ ಕೌರವರು ಬೇಗನೆ ದ್ವಾರವತೀ ಪಟ್ಟಣಕ್ಕೆ ಹೊರಟರು.

ತಥಾ ಪಾಂಡುಸುತಾಃ ಪಂಚ ಪರಿವಾರಸಮನ್ವಿತಾಃ ।
ಸೌಭ್ರಾತ್ರಂ ಮನ್ಯಮಾನಾಸ್ತೇ ದುರ್ಯೋಧನಸಮನ್ವಿತಾಃ ।
ಜಗ್ಮುರ್ದ್ವಾರವತೀಂ ಹೃಷ್ಟಾಃ ಸೈನ್ಯೇನ ಮಹತಾನ್ವಿತಾಃ ॥ ೬ ॥
ಅಥ ಕ್ರಮೇಣ ಗಚ್ಛಂತಸ್ತೇ ಸರ್ವೇ ಕುರುಪಾಂಡವಾಃ ।
ಆನರ್ತವಿಷಯಂ ಪ್ರಾಪ್ತಾ ಧನಧಾನ್ಯಸಮಾಕುಲಂ ॥ ೭ ॥
ಸರ್ವಪಾಪಹರಂ ಪುಣ್ಯಂ ಯತ್ರ ತತ್ಕ್ಷೇತ್ರಮುತ್ತಮಂ ।
ಹಾಟಕೇಶ್ವರದೇವಸ್ಯ ವಿಖ್ಯಾತಂ ಭುವನತ್ರಯೇ ॥ ೮ ॥
ಅಥ ಪ್ರಾಹ ವಿಶುದ್ಧಾತ್ಮಾ ವೃದ್ಧಃ ಕುರುಪಿತಾಮಹಃ ।
ಧೃತರಾಷ್ಟ್ರಂ ಮಹೀಪಾಲಂ ಸಪುತ್ರಂ ಪ್ರಹಸನ್ನಿವ ॥ ೯ ॥

ಭೀಷ್ಮ ಉವಾಚ :—

ಏತದ್ವತ್ಸ ಪುರಾ ದೃಷ್ಟಂ ಮಯಾ ಕ್ಷೇತ್ರಮನುತ್ತಮಂ ।
ಹಾಟಕೇಶ್ವರ ದೇವಸ್ಯ ಸರ್ವಪಾತಕ ನಾಶನಂ ॥ ೧೦ ॥
ಅತ್ರಾಹಂ ಚೈವ ನಿರ್ಮುಕ್ತಃ ಸ್ತ್ರೀಹತ್ಯೋದ್ಭವ ಪಾತಕಾತ್ ।
ತಸ್ಮಾದತ್ರೈವ ರಾಜೇಂದ್ರ ತಿಷ್ಠಾಮಃ ಪಂಚ ವಾಸರಾನ್ ॥ ೧೧ ॥
ಯೇನ ಸರ್ವಾಣಿ ಪಶ್ಯಾಮಸ್ತೀರ್ಥಾನ್ಯಾಯತನಾನಿ ಚ ।
ಯಾನ್ಯತ್ರ ಸಂತಿ ಪುಣ್ಯಾನಿ ಮುನೀನಾಂ ಭಾವಿತಾತ್ಮನಾಂ ॥ ೧೨ ॥

---

೬. ಹಾಗೆಯೇ ಐದು ಮಂದಿ ಪಾಂಡವರೂ ದುರ್ಯೋಧನನೊಡನೆ ಭ್ರಾತೃಸ್ನೇಹದಿಂದ ಸೈನ್ಯಪರಿವಾರ ಸಹಿತರಾಗಿ ಹೊರಟರು.

೭–೮. ಬಳಿಕ ಆ ಕುರುಪಾಂಡವರೆಲ್ಲ ಕ್ರಮವಾಗಿ ಹೋಗುತ್ತ ಧನಧಾನ್ಯಗಳಿಂದ ತುಂಬಿರುವುದೂ ಸಕಲ ಪಾಪಗಳನ್ನು ನಿವಾರಿಸುವುದೂ, ಪುಣ್ಯಕರವೂ, ತ್ರೈಲೋಕ್ಯ ವಿಖ್ಯಾತವೂ ಆದ ಹಾಟಕೇಶ್ವರ ಕ್ಷೇತ್ರವಿರುವ ಆನರ್ತದೇಶಕ್ಕೆ ಹೋದರು.

೯. ತರುವಾಯ ಶುದ್ಧಾಂತಃಕರಣವುಳ್ಳ ಕುರುಪಿತಾಮಹನಾದ ಭೀಷ್ಮನು ಪುತ್ರರಿಂದ ಕೂಡಿರುವ ಧೃತರಾಷ್ಟ್ರನನ್ನು ಕುರಿತು ನಗುತ್ತ ಇಂತೆಂದನು.

೧೦. ಭೀಷ್ಮನು ಹೇಳುತ್ತಾನೆ:—ಮಗು! ನಾನು ಹಿಂದೆ ಉತ್ತಮವೂ, ಸಕಲ ಪಾಪಗಳನ್ನು ನಿವಾರಿಸುವುದೂ ಆದ ಹಾಟಕೇಶ್ವರ ದೇವನ ಕ್ಷೇತ್ರವನ್ನು ನೋಡಿರುವೆನು.

೧೧. ನಾನು ಇಲ್ಲಿಯೇ ಸ್ತ್ರೀಹತ್ಯೆಯಿಂದುಂಟಾದ ಪಾಪದಿಂದ ಮುಕ್ತನಾದೆನು. ಆದ್ದರಿಂದ ಇಲ್ಲಿಯೇ ಐದು ದಿನಗಳು ಇರೋಣ.

೧೨. ಆಗ ಸಕಲ ತೀರ್ಥಗಳನ್ನೂ, ಜ್ಞಾನಿಗಳಾದ ಮುನಿಗಳ ಪುಣ್ಯಕರವಾದ ಆಶ್ರಮಗಳನ್ನೂ ನೋಡೋಣ.

ಅಥ ತದ್ವಚನಾದ್ರಾಜಾ ಧೃತರಾಷ್ಟ್ರೋಽಂಬಿಕಾಸುತಃ ।
ಶತಸಂಖ್ಯೈಃ ಸುತೈಃ ಸಾರ್ಧಂ ಕೌತೂಹಲಸಮನ್ವಿತಃ ॥ ೧೩ ॥
ಜಗಾಮ ಸತ್ವರಂ ತತ್ರ ಯತ್ರ ತತ್ಕ್ಷೇತ್ರಮುತ್ತಮಂ ।
ತಪಸ್ವಿಗಣಸಂಕೀರ್ಣಂ ಯುಕ್ತಂ ಚೈವಾಶ್ರಮೈಃ ಶುಭೈಃ ॥ ೧೪ ॥
ಬ್ರಹ್ಮಘೋಷೇಣ ಮಹತಾ ನಾದಿತಂ ಸರ್ವತೋ ದಿಶಂ ।
ವಹ್ನಿಪೂಜೋತ್ಥಧೂಮ್ರೇಣ ಕಲುಷೀಕೃತಪಾದಪಂ ।
ಕ್ರೀಡಾಮೃಗೈಶ್ಚ ಸಂಕೀರ್ಣಂ ಧಾವದ್ಭಿರ್ಬಹುಭಿಸ್ತಥಾ ॥ ೧೫ ॥
ತತೋ ನಿವಾರ್ಯ ಸೈನ್ಯಂ ಸ್ವಮುಪದ್ರವಭಯಾನ್ನೃಪಃ ।
ಪಂಚಭಿಃ ಪಾಂಡವೈಃ ಸಾರ್ಧಂ ಶತಸಂಖ್ಯೈಸ್ತಥಾ ಸುತೈಃ ॥ ೧೬ ॥
ಭೀಷ್ಮೇಣ ಸೋಮದತ್ತೇನ ಬಾಹ್ಲೀಕೇನ ಸಮನ್ವಿತಃ ।
ದ್ರೋಣಾಚಾರ್ಯೇಣ ವೀರೇಣ ತತ್ಪುತ್ರೇಣ ಕೃಪೇಣ ಚ ॥ ೧೭ ॥
ಸೌಬಲೇನ ಚ ಕರ್ಣೇನ ತಥಾಽನ್ಯೈರಪಿ ಪಾರ್ಥಿವೈಃ ।
ಪರಿವಾರಪರಿತ್ಯಕ್ತೈಸ್ತಸ್ಮಿನ್ ಕ್ಷೇತ್ರೇ ಚಚಾರ ಸಃ ॥ ೧೮ ॥
ತೇಽಪಿ ಸರ್ವೇ ಮಹಾತ್ಮಾನಃ ಕ್ಷತ್ರಿಯಾಸ್ತತ್ರ ಸಂಸ್ಥಿತಾಃ ।
ಚಕ್ರುರ್ಧರ್ಮಕ್ರಿಯಾಃ ಸರ್ವಾಃ ಶ್ರದ್ಧಾಪೂತೇನ ಚೇತಸಾ ॥ ೧೯ ॥

---

೧೩–೧೫. ತರುವಾಯ ಭೀಷ್ಮನ ಮಾತಿನಿಂದ ಅಂಬಿಕೆಯ ಮಗನಾದ ಧೃತರಾಷ್ಟ್ರನು ಕುತೂಹಲಗೊಂಡು ನೂರು ಮಂದಿ ಮಕ್ಕಳೊಡನೆ ಮುನಿಗಳ ಸಮೂಹದಿಂದ ತುಂಬಿರುವುದೂ, ಮಂಗಳಕರವಾದ ಆಶ್ರಮಗಳಿಂದ ಕೂಡಿರುವುದೂ, ಎಲ್ಲೆಡೆಯಲ್ಲಿಯೂ ಅತಿಶಯವಾದ ವೇದಘೋಷದಿಂದ ಶಬ್ದಗೊಂಡುದೂ ಅಗ್ನಿಪೂಜೆಯಿಂದುಂಟಾದ ಹೊಗೆಯಿಂದ ಮಲಿನವಾಗಿ ಮಾಡಲ್ಪಟ್ಟ ಮರಗಳುಳ್ಳುದೂ, ಓಡುತ್ತಿರುವ ಅನೇಕ ಕ್ರೀಡಾಮೃಗಗಳಿಂದ ತುಂಬಿರುವುದೂ ಆದ ಆ ಕ್ಷೇತ್ರಕ್ಕೆ ಹೋದನು.

೧೬–೧೮. ಬಳಿಕ ಧೃತರಾಷ್ಟ್ರನು ಉಪದ್ರವದ ಭಯದಿಂದ ಸೈನ್ಯವನ್ನು ತಡೆದು ಪಂಚ ಪಾಂಡವರು, ನೂರು ಮಂದಿ ಸುತರು, ಭೀಷ್ಮ, ಸೋಮದತ್ತ, ಬಾಹ್ಲೀಕ, ದ್ರೋಣಾಚಾರ್ಯ, ಅಶ್ವತ್ಥಾಮ, ಕೃಪಾಚಾರ್ಯ, ಸೌಬಲ, ಕರ್ಣ, ಇವರಿಂದಲೂ, ಪರಿವಾರವಿಲ್ಲದ ಇತರ ರಾಜರಿಂದಲೂ ಕೂಡಿ ಆ ಕ್ಷೇತ್ರದಲ್ಲಿ ಸಂಚರಿಸಿದನು.

೧೯. ಮಹಾತ್ಮರಾದ ಆ ಸಕಲ ಕ್ಷತ್ರಿಯರು ಅಲ್ಲಿದ್ದು ಶ್ರದ್ಧೆಗೊಂಡ ಮನಸ್ಸಿನಿಂದ ಸಮಸ್ತ ಧರ್ಮಕಾರ್ಯಗಳನ್ನು ಮಾಡಿದರು.

ಸ್ನಾನಂ ಚಕ್ರುರ್ವಿಧಾನೇನ ತೀರ್ಥೇಷು ದ್ವಿಜಸತ್ತಮಾಃ ।
ಭ್ರಾಂತ್ವಾ ಭ್ರಾಂತ್ವಾ ಸುಪುಣ್ಯೇಷು ಶ್ರುತ್ವಾ ಶ್ರುತ್ವಾ ದ್ವಿಜನ್ಮನಾಂ ॥ ೨೦ ॥
ದಾನಾನಿ ಚ ವಿಶಿಷ್ಟಾನಿ ದದುರಿಷ್ಟಾನಿ ಚಾಽಪರೇ ।
ದೀನೇಭ್ಯಃ ಕೃಪಣೇಭ್ಯಶ್ಚ ತಪಸ್ವಿಭ್ಯೋ ವಿಶೇಷತಃ ॥ ೨೧ ॥
ಚಕ್ರುಃ ಶ್ರಾದ್ಧಕ್ರಿಯಾಶ್ಚಾಽನ್ಯೇ ಪಿತೄನುದ್ದಿಶ್ಯ ಭಕ್ತಿತಃ ।
ಪಿತೄಣಾಂ ತರ್ಪಣಂ ಚಾಽನ್ಯೇ ತಿಲಮಿಶ್ರಜಲೇನ ಚ ॥ ೨೨ ॥
ಅನ್ಯೇ ಹೋಮಕ್ರಿಯಾ ಭೂಪಾ ಜಪಮನ್ಯೇ ನಿರರ್ಗಲಂ ।
ಸ್ವಾಧ್ಯಾಯಮಪರೇ ಶಾಂತಾಃ ಸಮ್ಯಕ್ ಶ್ರದ್ಧಾಸಮನ್ವಿತಾಃ ॥ ೨೩ ॥
ದೇವತಾಯತನಾನ್ಯನ್ಯೇ ಮಾಹಾತ್ಮ್ಯಸಹಿತಾನಿ ಚ ।
ಶ್ರುತ್ವಾ ಪೂರ್ವನೃಪಾಣಾಂ ಚ ಪೂಜಯಂತಿ ವಿಶೇಷತಃ ॥ ೨೪ ॥
ಬಲಿದಾನೈಃ ಸುವಸ್ತ್ರೈಶ್ಚ ಗಂಧಪುಷ್ಪೋಪಲೇಪನೈಃ ।
ಮಾರ್ಜನೈರ್ಧ್ವಜದಾನೈಶ್ಚ ತಥಾ ಪ್ರೇಕ್ಷಣಕೈಃ ಶುಭೈಃ ॥ ೨೫ ॥
ಮಂಡನೈಃ ಪುಷ್ಪಮಾಲಾಭಿಃ ಸಮಂತಾದ್ದ್ವಿಜಸತ್ತಮಾಃ ।
ಹಸ್ತ್ಯಶ್ವರಥದಾನೈಶ್ಚ ಗೋಭಿರ್ವಸ್ತ್ರೈಶ್ಚ ಕಾಂಚನೈಃ ।
ಕೃತಾರ್ಥಾ ಬ್ರಾಹ್ಮಣಾಃ ಸರ್ವೇ ಕೃತಾರ್ಥೈಸ್ತತ್ರ ಭಕ್ತಿತಃ ॥ ೨೬ ॥
ಏವಂ ಸ್ನಾತ್ವಾ ತಥಾಽಭ್ಯರ್ಚ್ಯ ದೇವಾನ್ವಿಪ್ರಾನ್ದ್ವಿಜೋತ್ತಮಾಃ ।
ಧೃತರಾಷ್ಟ್ರ ಸಮಾಯುಕ್ತಾ ಜಗ್ಮುಃ ಸ್ವಶಿಬಿರಂ ತತಃ ॥ ೨೭ ॥

---

೨೦–೨೧. ದ್ವಿಜವರ್ಯರೆ! ಅವರು ಪುಣ್ಯಕರವಾದ ತೀರ್ಥಗಳಲ್ಲಿ ಮಿಂದು ಸಂಚರಿಸಿ ಬ್ರಾಹ್ಮಣರಿಗೂ, ದೀನ ಕೃಪಣರಿಗೂ, ಮುನಿಗಳಿಗೂ ಇಷ್ಟವಾದ ದಾನಗಳನ್ನಿತ್ತರು.

೨೨–೨೩. ಇನ್ನು ಕೆಲವರು ಪಿತೃಗಳನ್ನುದ್ದೇಶಿಸಿ ಭಕ್ತಿಯಿಂದ ಶ್ರಾದ್ಧಗಳನ್ನು ಮಾಡಿದರು. ಮತ್ತೆ ಕೆಲವರು ತಿಲಮಿಶ್ರಜಲದಿಂದ ಪಿತೃಗಳಿಗೆ ತರ್ಪಣ ಮಾಡಿದರು. ಇತರರು ಹೋಮವನ್ನೂ, ಇತರರು ಜಪವನ್ನೂ, ಇತರರು ವೇದಾಧ್ಯಯನವನ್ನೂ ಶ್ರದ್ಧೆಯಿಂದ ಮಾಡಿದರು.

೨೪. ಇತರರು ಹಿಂದಿನ ರಾಜರ ಮಾಹಾತ್ಮ್ಯೆಯಿಂದ ಕೂಡಿದ ದೇವಾಲಯ ವಿಚಾರವನ್ನು ಕೇಳಿ ಅತಿಶಯವಾಗಿ ಪೂಜಿಸಿದರು.

೨೫–೨೬. ಅವರು ಅಲ್ಲಿ ಭಕ್ತಿಯಿಂದ ಬ್ರಾಹ್ಮಣರನ್ನು ಬಲಿದಾನ, ವಸ್ತ್ರ, ಗಂಧ, ಪುಷ್ಪ, ಮಾರ್ಜನ, ಧ್ವಜದಾನ, ಪ್ರೋಕ್ಷಣಕ, ಅಲಂಕಾರ, ಪುಷ್ಪ ಮಾಲೆ, ಆನೆ, ಕುದುರೆ, ರಥಗಳ ದಾನ, ಗೋವು, ಸುವರ್ಣ ಇವುಗಳಿಂದ ಕೃತಕೃತ್ಯರನ್ನಾಗಿ ಮಾಡಿದರು.

೨೭–೨೮. ಆ ರಾಜರು ಹೀಗೆ ಮಿಂದು ದೇವಬ್ರಾಹ್ಮಣರನ್ನು ಪೂಜಿಸಿ

ಶಂಸಂತೋ ವಿಸ್ಮಯಾವಿಷ್ಟಾಸ್ತೀರ್ಥಾನ್ಯಾಯತನಾನಿ ಚ ।
ತಸ್ಮಿನ್ ಕ್ಷೇತ್ರೇ ದ್ವಿಜಾಂಶ್ಚೈವ ತಾಪಸಾನ್ ಶಂಸಿತವ್ರತಾನ್ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧೃತರಾಷ್ಟ್ರಾದಿಕೃತ ಹಾಟಕೇಶ್ವರಕ್ಷೇತ್ರದರ್ಶನವರ್ಣನಂ"
ನಾಮ ದ್ವಿಸಪ್ತತಿತಮೋಽಧ್ಯಾಯಃ

---

ಧೃತರಾಷ್ಟ್ರನೊಡನೆ ಆಶ್ಚರ್ಯದಿಂದ ತೀರ್ಥ ದೇವಾಲಯಗಳನ್ನೂ ಆ ಕ್ಷೇತ್ರದಲ್ಲಿ ಇರುವ ವ್ರತಿಗಳಾದ ಮುನಿಗಳನ್ನೂ ಹೊಗಳುತ್ತ ತಮ್ಮ ಶಿಬಿರಕ್ಕೆ ತೆರಳಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧೃತರಾಷ್ಟ್ರಾದಿಕೃತ ಹಾಟಕೇಶ್ವರಕ್ಷೇತ್ರದರ್ಶನವರ್ಣನ" ವೆಂಬ
ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಸಪ್ತತಿತಮೋಽಧ್ಯಾಯಃ

### ಧೃತರಾಷ್ಟ್ರಾದಿಕೃತ ಪ್ರಾಸಾದಸ್ಥಾಪನೋದ್ಯಮವರ್ಣನಂ

ಸೂತ ಉವಾಚಃ—

ಏವಂ ತೇ ಕೌರವಾಃ ಸರ್ವೇ ಪಾಂಡೋಃ ಪುತ್ರಾಶ್ಚಶಾಲಿನಃ ।
ತಸ್ಮಾತ್ಸ್ಥಾನಾತ್ತತೋ ಜಗ್ಮುರ್ಯತ್ರ ದ್ವಾರವತೀ ಪುರೀ ॥ ೧ ॥
ತತ್ರ ಗತ್ವಾ ವಿವಾಹಂತು ಚಕ್ರುಃ ಸಂಹೃಷ್ಟಮಾನಸಾಃ ।
ದುರ್ಯೋಧನಸ್ಯ ಭೂಪಸ್ಯ ಭಾನುಮತ್ಯಾ ಸಮಂ ತದಾ ॥ ೨ ॥
ನಾನಾವಾದಿತ್ರ ಘೋಷೇಣ ವೇದಧ್ವನಿ ಯುತೇನ ಚ ।
ಗೀತೈರ್ಮನೋಹರೈಃ ಪಾಠೈರ್ಬಂದಿನಾಂ ಚ ಸಹಸ್ರಶಃ ॥ ೩ ॥
ಏವಂ ಮಹೋತ್ಸವೋ ಜಜ್ಞೇ ತತ್ರ ಯಾವದ್ದಿನಾಷ್ಟಕಂ ।
ಯಾದವಾನಾಂ ಕುರೂಣಾಂ ಚ ಮಿಲಿತಾನಾಂ ಪರಸ್ಪರಂ ॥ ೪ ॥
ಕೃತಾರ್ಥಾಸ್ತತ್ರ ಸಂಜಾತಾಃ ಸೂತಮಾಗಧಬಂದಿನಃ ।
ಚಾರಣಾ ಬ್ರಾಹ್ಮಣೇಂದ್ರಾಶ್ಚ ತಥಾಽನ್ಯೇಽಪಿ ಚ ತಾರ್ಕಿಕಾಃ ॥ ೫ ॥
ತತಸ್ತು ನವಮೇ ಪ್ರಾಪ್ತೇ ದಿವಸೇ ಕುರುಪಾಂಡವಾಃ ।
ಭೀಷ್ಮಾದ್ಯಾಃ ಪುಂಡರೀಕಾಕ್ಷಮಿದಮೂಚುಃ ಸ ಸೌಹೃದಂ ॥ ೬ ॥

---

### ಕನ್ನಡದ ಅನುವಾದ

#### ಧೃತರಾಷ್ಟ್ರಾದಿಕೃತ ಪ್ರಾಸಾದಸ್ಥಾಪನೋದ್ಯಮವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಆ ಕೌರವ ಪಾಂಡವರು ಆ ಸ್ಥಳದಿಂದ ದ್ವಾರವತೀನಗರಿಗೆ ತೆರಳಿದರು.

೨. ಅಲ್ಲಿ ಸಂತೋಷದಿಂದ ಭಾನುಮತಿಯೊಡನೆ ದುರ್ಯೋಧನನಿಗೆ ವಿವಾಹ ಮಹೋತ್ಸವವನ್ನು ಮಾಡಿದರು.

೩–೪. ಯಾದವ ಕೌರವರು ಸೇರಿರಲು ನಾನಾ ವಾದ್ಯಧ್ವನಿ, ವೇದಘೋಷ, ಮನೋಹರ ಸಂಗೀತ, ಸ್ತುತಿಪಾಠಕರ ಸ್ತುತಿಪಾಠ ಇವುಗಳಿಂದ ಎಂಟು ದಿನದ ವರೆಗೆ ಮಹೋತ್ಸವವು ನಡೆಯಿತು.

೫. ಅಲ್ಲಿ ಸೂತಮಾಗಧಬಂದಿಗಳೂ, ಚಾರಣರೂ, ಬ್ರಾಹ್ಮಣೋತ್ತಮರೂ, ಇತರ ತಾರ್ಕಿಕರೂ ಕೃತಾರ್ಥರಾದರು.

೬. ಅನಂತರ ಒಂಬತ್ತನೆಯ ದಿನ ಕೌರವ ಪಾಂಡವರೂ ಭೀಷ್ಮಾದಿಗಳೂ ಪ್ರೀತಿಯಿಂದ ಕೃಷ್ಣನನ್ನು ಕುರಿತು ಇಂತೆಂದರು.

ನ ವಯಂ ಪುಂಡರೀಕಾಕ್ಷ ತವ ರಾಮಸ್ಯ ಚಾಶ್ರಯಂ ।
ಕಥಂ ಚಿತ್ತ್ಯಕ್ತುಮಿಚ್ಛಾಮಃ ಸ್ನೇಹಪಾಶನಿಯಂತ್ರಿತಾಃ ॥ ೭ ॥
ತಥಾಽಪಿ ಚ ಪ್ರಗಂತವ್ಯಂ ಸ್ವಪುರಂ ಪ್ರತಿ ಮಾಧವ ।
ಬಲಭದ್ರಸಮಾಯುಕ್ತಸ್ತಸ್ಮಾನ್ನಃ ಕುರು ಮೋಕ್ಷಣಂ ॥ ೮ ॥

ವಿಷ್ಣುರುವಾಚ :—

ನ ತಾವದ್ವತ್ಸರೋ ಜಾತೋ ನ ಮಾಸಃ ಪಕ್ಷ ಏವ ಚ ।
ಸ್ಥಿತಾನಾಮತ್ರ ಯುಷ್ಮಾಕಂ ತತ್ಕಿಮೌತ್ಸುಕ್ಯಮಾಗತಂ ॥ ೯ ॥
ತಸ್ಮಾದತ್ರೈವ ತಿಷ್ಠಾಮಃ ಸಹಿತಾಃ ಕುರುಪಾಂಡವಾಃ ।
ಯೂಯಂ ವಯಂ ವಿನೋದೇನ ಮೃಗಯಾಕ್ಷೋದ್ಭವೇನ ಚ ॥ ೧೦ ॥
ಶಸ್ತ್ರ ಶಿಕ್ಷಾ ಕ್ರಿಯಾಭಿಶ್ಚ ದಮನೇನ ಚ ದಂತಿನಾಂ ।
ತಥಾಽಭಿವಾಂಛಿತೈರನ್ಯೈಃ ಸ್ನೇಹೋಽಸ್ತಿ ಯದಿ ವೋ ಮಯಿ ॥ ೧೧ ॥

ಭೀಷ್ಮ ಉವಾಚ :—

ಉಪಪನ್ನಮಿದಂ ವಿಷ್ಣೋ ಯತ್ತ್ವಯಾ ವ್ಯಾಹೃತಂ ವಚಃ ।
ಪರಂ ಶೃಣುಷ್ವ ಮೇ ವಾಕ್ಯಂ ಯದರ್ಥಂ ಹ್ಯುತ್ಸುಕಾ ವಯಂ ॥ ೧೨ ॥
ಆನರ್ತ ವಿಷಯೇಽಸ್ಮಾಭಿರಾಗಚ್ಛದ್ಭಿಸ್ತ್ವದಾಂತಿಕಂ ।
ದೃಷ್ಟಮತ್ಯದ್ಭುತಂ ಕ್ಷೇತ್ರಂ ಹಾಟಕೇಶ್ವರಜಂ ಮಹತ್ ।
ತತ್ರ ಲಿಂಗಾನಿ ದೃಷ್ಟಾನಿ ಭೂಪತೀನಾಂ ಮಹಾತ್ಮನಾಂ ॥ ೧೩ ॥

---

೭. ಕೃಷ್ಣ! ನಾವು ನಿನ್ನ ಮೇಲಣ ಪ್ರೀತಿಯಿಂದ ಬದ್ಧರಾಗಿರುವುದರಿಂದ ನಿನ್ನನ್ನೂ, ಬಲರಾಮನನ್ನೂ ಬಿಟ್ಟುಹೋಗಲು ಬಯಸುವುದಿಲ್ಲ.

೮. ಹಾಗಾದರೂ ನಾವು ನಮ್ಮ ಪಟ್ಟಣಕ್ಕೆ ಹೋಗಬೇಕಾಗಿದೆ. ಆದುದರಿಂದ ನೀನು ಬಲರಾಮನೊಡನೆ ನಮ್ಮನ್ನು ಬೀಳ್ಕೊಡು.

೯. ವಿಷ್ಣುವು ಹೇಳುತ್ತಾನೆ:—ಇಲ್ಲಿರುವ ನಿಮಗೆ ಒಂದು ವರ್ಷವಾಗಲಿ, ಒಂದು ತಿಂಗಳಾಗಲಿ, ಒಂದು ಪಕ್ಷವಾಗಲಿ ಆಗಲಿಲ್ಲ. ಆದುದರಿಂದ ಏಕೆ ಹೋಗಲು ಉತ್ಸುಕರಾಗಿರುವಿರಿ.

೧೦–೧೧. ಕುರುಪಾಂಡವರೆ! ಆದದುರಿಂದ ನಿಮಗೆ ನನ್ನಲ್ಲಿ ಪ್ರೀತಿಯಿದ್ದರೆ ಇಲ್ಲಿಯೇ ಒಟ್ಟಿಗೆ ಬೇಟೆ, ಅಕ್ಷಕ್ರೀಡೆಗಳಿಂದಲೂ, ಅಸ್ತ್ರಾಭ್ಯಾಸಗಳಿಂದಲೂ, ಆನೆಗಳನ್ನು ಪಳಗಿಸುವುದರಿಂದಲೂ, ಇತರ ಇಷ್ಟವಾದ ವಿನೋದಗಳಿಂದಲೂ ವಾಸಿಸೋಣ.

೧೨. ಭೀಷ್ಮನು ಹೇಳುತ್ತಾನೆ:—ಕೃಷ್ಣ! ನೀನು ಹೇಳಿದ ಮಾತು ಯುಕ್ತವಾದುದು. ಆದರೆ ನಾವು ಏಕೆ ಉತ್ಸುಕರಾಗಿದ್ದೇವೆ ಎಂಬುದನ್ನು ಕೇಳು.

೧೩–೧೫. ನಿನ್ನ ಬಳಿಗೆ ಬರುತ್ತಿರುವ ನಾವು ಆನರ್ತದೇಶದಲ್ಲಿ ಆಶ್ಚರ್ಯಕರವಾದ ಹಾಟಕೇಶ್ವರಕ್ಷೇತ್ರವನ್ನೂ, ಅಲ್ಲಿ ಮಹಾತ್ಮರಾದ ಸೂರ್ಯ ಚಂದ್ರ

ಸೂರ್ಯ ಚಂದ್ರಾನ್ವಯೋತ್ಥಾನಾಮನ್ಯೇಷಾಂ ಚ ಮಹಾತ್ಮನಾಂ ॥ ೧೪ ॥
ದೇವಾನಾಂ ದಾನವಾನಾಂ ಚ ಮುನೀನಾಂ ಚ ವಿಶೇಷತಃ ।
ಸಾಕಾರಾಣಿ ಸುತೇಜಾಂಸಿ ನಾನಾ ಪ್ರಾಸಾದಭಾಂಜಿ ಚ ॥ ೧೫ ॥
ತತಶ್ಚ ಕುರುಮುಖ್ಯಾನಾಂ ಪಾಂಡವಾನಾಂ ಚ ಮಾಧವ ।
ಲಿಂಗಸಂಸ್ಥಾಪನಾರ್ಥಾಯ ತತ್ರ ಜಾತಾ ಮತಿರ್ದೃಢಾ ॥ ೧೬ ॥
ತೇ ವಯಂ ತತ್ರ ಗತ್ವಾಽಽಶು ಯಥಾಶಕ್ತ್ಯಾ ಯಥೇಚ್ಛಯಾ ।
ಲಿಂಗಾನಿ ಸ್ಥಾಪಯಿಷ್ಯಾಮಃ ಸ್ವಾನಿ ಸ್ವಾನಿ ಪೃಥಕ್ ಪೃಥಕ್ ॥ ೧೭ ॥
ಏತಸ್ಮಾತ್ಕಾರಣಾತ್ತೂರ್ಣಂ ಚಲಿತಾ ವಯಮಚ್ಯುತ ।
ನ ವಯಂ ತವ ಸಂಗಸ್ಯ ತೃಪ್ಯಾಮೋಽಬ್ದಶತೈರಪಿ ॥ ೧೮ ॥
ತಸ್ಮಾದಾಜ್ಞಾಪಯಸ್ವಾದ್ಯ ಕೃತ್ವಾ ಚಿತ್ತಂ ದೃಢಂ ವಿಭೋ ।
ಭೂಯೋಽಪ್ಯತ್ರಾಗಮಿಷ್ಯಾಮಸ್ತವ ದರ್ಶನ ಲಾಲಸಾಃ ॥ ೧೯ ॥

ಶ್ರೀ ಭಗವಾನುವಾಚ :—

ಅಹಂ ಜಾನಾಮಿ ತತ್ಕ್ಷೇತ್ರಂ ಸುಪುಣ್ಯಂ ಪಾಪನಾಶನಂ ।
ತಾಪಸೈಃ ಕೀರ್ತಿತಂ ನಿತ್ಯಂ ಮಮಾಽನ್ಯೈಸ್ತೀರ್ಥಯಾತ್ರಿಕೈಃ ॥ ೨೦ ॥
ತಸ್ಮಾತ್ತತ್ರ ಸಮೇಷ್ಯಾಮೋ ಯುಷ್ಮಾಭಿಃ ಸಹಿತಾ ವಯಂ ।
ಲಿಂಗ ಸಂಸ್ಥಾಪನಾರ್ಥಾಯ ಕ್ಷೇತ್ರದರ್ಶನವಾಂಛಯಾ ॥ ೨೧ ॥

---

ವಂಶದ ರಾಜರ, ಇತರ ದೇವದಾನವ ಮುನಿಗಳ ಆಕಾರದಿಂದ ಕೂಡಿರುವುವೂ, ತೇಜಸ್ಸುಳ್ಳವೂ, ಅನೇಕ ದೇವಾಲಯಗಳಲ್ಲಿರುವುವೂ ಆದ ಪಾರಮೇಶ್ವರ ಲಿಂಗಗಳನ್ನೂ ನೋಡಿದೆವು.

೧೬. ಕೃಷ್ಣ! ಅದರಿಂದ ಕುರುಪಾಂಡವರಿಗೆ ಅಲ್ಲಿ ಶಿವಲಿಂಗಸ್ಥಾಪನೆ ಮಾಡಲು ಅಪೇಕ್ಷೆಯುಂಟಾಯಿತು.

೧೭. ಆ ನಾವು ಅಲ್ಲಿಗೆ ಶೀಘ್ರವಾಗಿ ಹೋಗಿ ಶಕ್ತ್ಯನುಸಾರವಾಗಿ ಅಪೇಕ್ಷೆಯಂತೆ ನಮ್ಮ ನಮ್ಮ ಮಹೇಶ್ವರಲಿಂಗಗಳನ್ನು ಬೇರೆಬೇರೆಯಾಗಿ ಸ್ಥಾಪಿಸುವೆವು.

೧೮. ಅಚ್ಯುತ! ನಾವು ಇದಕ್ಕಾಗಿ ಬೇಗನೆ ಹೊರಟೆವು. ನಿನ್ನೊಡನೆ ಇರುತ್ತಿರುವ ನಮಗೆ ನೂರು ವರ್ಷಗಳಾದರೂ ತೃಪ್ತಿಯುಂಟಾಗುವುದಿಲ್ಲ.

೧೯. ಸ್ವಾಮಿ! ಆದುದರಿಂದ ಈಗ ಮನಸ್ಸನ್ನು ದೃಢಪಡಿಸಿಕೊಂಡು ನಮಗೆ ಆಜ್ಞೆಮಾಡು. ಮರಳಿ ನಿನ್ನನ್ನು ನೋಡುವುದಕ್ಕಾಗಿ ಬರುವೆವು.

೨೦–೨೧. ಶ್ರೀ ಭಗವಂತನು ಹೇಳುತ್ತಾನೆ:—ನಾನು ಮುನಿಗಳೂ, ಇತರ ತೀರ್ಥಯಾತ್ರಿಕರೂ ಹೇಳಿರುವುದೂ, ಪಾಪವನ್ನು ನಿವಾರಿಸುವುದೂ ಆದ ಆ ಹಾಟಕೇಶ್ವರ ಕ್ಷೇತ್ರವನ್ನರಿತಿರುವೆನು. ಆದುದರಿಂದ ನಾವೂ ನಿಮ್ಮೊಡನೆ ಶಿವಲಿಂಗವನ್ನು ಸ್ಥಾಪಿಸುವುದಕ್ಕೂ, ಕ್ಷೇತ್ರವನ್ನು ನೋಡುವುದಕ್ಕೂ ಆಲ್ಲಿಗೆ ಬರುವೆವು.

ಸೂತ ಉವಾಚ:—

ತಚ್ಛ್ರುತ್ವಾ ಕೌರವಾಃ ಸರ್ವೇ ಪರಂ ಹರ್ಷಮುಪಾಗತಾಃ ।
ತಥಾ ಪಾಂಡುಸುತಾಶ್ಚೈವ ಯೇ ಚಾಽನ್ಯೇ ತತ್ರ ಪಾರ್ಥಿವಾಃ ॥ ೨೨ ॥
ತೇ ತು ಸಂಪ್ರಸ್ಥಿತಾಃ ಸರ್ವೇ ಮಿಲಿತಾಃ ಕುರುಪಾಂಡವಾಃ ।
ಗಜವಾಜಿವಿಮರ್ದೇನ ಕಂಪಯಂತೋ ವಸುಂಧರಾಂ ॥ ೨೩ ॥
ಅಥ ತತ್ಕ್ಷೇತ್ರಮಾಸಾದ್ಯ ದೂರೇ ಕೃತ್ವಾ ನಿವೇಶನಂ ।
ಕೌರವಾ ಯಾದವಾ ಮುಖ್ಯಾಶ್ಚಮತ್ಕಾರಪುರಂ ಗತಾಃ ॥ ೨೪ ॥
ತತ್ರ ಸರ್ವಾನ್ ಸಮಾಹೂಯ ಬ್ರಾಹ್ಮಣಾನ್ವಿನಯಾನ್ವಿತಾಃ ।
ಪ್ರೋಚುರ್ದತ್ವಾ ವಿಚಿತ್ರಾಣಿ ಭೂಷಣಾಚ್ಛಾದನಾನಿ ಚ ॥ ೨೫ ॥
ವಯಂ ಸರ್ವೇಽತ್ರ ವಾಂಛಾಮೋ ಲಿಂಗಸಂಸ್ಥಾಪನಕ್ರಿಯಾಂ ।
ಕರ್ತುಂ ಪ್ರಾಸಾದಮುಖ್ಯಾನಾಂ ಪೃಥಕ್ತ್ವೇನ ಸ್ವಶಕ್ತಿತಃ ॥ ೨೬ ॥
ತಸ್ಮಾತ್ಕೃತ್ವಾ ಪ್ರಸಾದಂ ನೋ ದಯಾಂ ಚ ದ್ವಿಜಸತ್ತಮಾಃ ।
ಆಜ್ಞಾಪಯತ ಶೀಘ್ರಂ ಹಿ ಯೇನ ಕರ್ಮ ಪ್ರವರ್ತತೇ ॥ ೨೭ ॥
ಭವಿಷ್ಯಥ ತಥಾ ಯೂಯಂ ಹೋತಾರಃ ಸರ್ವಕರ್ಮಸು ।
ನ ಚಾಽನ್ಯೋ ಬ್ರಾಹ್ಮಣೋ ಬಾಹ್ಯೋ ಯದ್ಯಪಿ ಸ್ಯಾದ್ಬೃಹಸ್ಪತಿಃ ॥೨೮॥
ಯತೋಽಸ್ಮಾಭಿಃ ಶ್ರುತಾ ವಾರ್ತಾ ಕೀರ್ತ್ಯಮಾನಾ ಪುರಾತನೀ ।
ವಿಷ್ಣುನಾ ತಸ್ಯ ರಾಜರ್ಷೇಃ ಪ್ರೇತಶ್ರಾದ್ಧಸಮುದ್ಭವಾ ॥ ೨೯ ॥

---

೨೨. ಸೂತನು ಹೇಳುತ್ತಾನೆ:—ಅದನ್ನು ಕೇಳಿ ಕುರುಪಾಂಡವರೂ, ಅಲ್ಲಿರುವ ಇತರ ರಾಜರೂ ಅತ್ಯಂತ ಸಂತೋಷಗೊಂಡರು.

೨೩. ಆ ಸಮಸ್ತ ಕುರುಪಾಂಡವರು ಆನೆ ಕುದುರೆಗಳ ಸಂಘರ್ಷಣೆಯಿಂದ ಧರೆಯನ್ನು ನಡುಗಿಸುತ್ತ ಒಟ್ಟಿಗೆ ಸೇರಿದರು.

೨೪. ಬಳಿಕ ಆ ಕುರುಯಾದವರು ಆ ಹಾಟಕೇಶ್ವರಕ್ಷೇತ್ರವನ್ನು ಸೇರಿ ದೂರದಲ್ಲಿ ಶಿಬಿರವನ್ನು ರಚಿಸಿ ಚಮತ್ಕಾರಪುರಕ್ಕೆ ಹೋದರು.

೨೫. ಅಲ್ಲಿ ಅವರು ಸಕಲ ಬ್ರಾಹ್ಮಣರನ್ನೂ ಕರೆಯಿಸಿ ನಾನಾವಿಧವಾದ ಒಡವೆವಸ್ತ್ರಗಳನ್ನು ಕೊಟ್ಟು ವಿನಯದಿಂದ ಇಂತೆಂದರು.

೨೬. "ನಾವೆಲ್ಲರೂ ಇಲ್ಲಿ ಪ್ರತ್ಯೇಕವಾಗಿ ಶಿವಲಿಂಗಗಳನ್ನು ಸ್ಥಾಪಿಸಿ ಶಕ್ತ್ಯನುಸಾರ ಪ್ರಾಸಾದಗಳನ್ನು ರಚಿಸಲು ಇಚ್ಛಿಸುವೆವು.

೨೭. ದ್ವಿಜವರ್ಯರೆ! ಆದುದರಿಂದ ನಮ್ಮಲ್ಲಿ ದಯೆ ಅನುಗ್ರಹಗಳನ್ನು ಮಾಡಿ ಆಜ್ಞಾಪಿಸಿರಿ. ಅದರಿಂದ ಬೇಗನೆ ಕಾರ್ಯವು ಆರಂಭವಾಗಲಿ.

೨೮–೨೯. ನೀವು ಸಕಲ ಕಾರ್ಯಗಳಲ್ಲಿ ಹೋತೃಗಳಾಗುವಿರಿ. ಬಾಹ್ಯ ಬ್ರಾಹ್ಮಣನು ಬೃಹಸ್ಪತಿಯಾಗಿದ್ದರೂ ಹೋತೃವಾಗುವುದಿಲ್ಲ. ನಾವು ವಿಷ್ಣುವು ಹೇಳಿದ ಆ ರಾಜನ ಪುರಾತನ ವೃತ್ತಾಂತವನ್ನು ಕೇಳಿದ್ದೇವೆ.

ಯಥಾ ತೇನ ಕೃತಂ ಶ್ರಾದ್ಧಂ ಪಿತುಃ ಪ್ರೇತಸ್ಯ ಯತ್ನತಃ ।
ಬ್ರಾಹ್ಮಣಾನಾಂ ಪುರೋಽನ್ಯೇಷಾಂ ಯಥೋಕ್ತಾನಾಮಪಿ ದ್ವಿಜಾಃ ॥ ೩೦ ॥
ಯಥೋಕ್ತವಿಧಿನಾ ತೀರ್ಥೇ ನಾಗಾನಾಂ ಪಂಚಮೀ ದಿನೇ ।
ಶ್ರಾವಣೇ ಮಾಸಿ ನೋ ಮುಕ್ತಃ ಪಿತಾ ತಸ್ಯ ತಥಾಽಪಿ ಸಃ ॥ ೩೧ ॥
ಪ್ರೇತತ್ವಾತ್ಸರ್ಪದೋಷೇಣ ಸಂಜಾತಾದ್ದ್ವಿಜಸತ್ತಮಾಃ ।
ದೇವಶರ್ಮ ಪುರೋ ಯಾವತ್ತತ್ಕೃತಂ ಶ್ರಾದ್ಧಮಾದರಾತ್ ।
ತಾವತ್ಪಿತಾ ವಿನಿರ್ಮುಕ್ತಃ ಪ್ರೇತತ್ವಾದ್ದಾರುಣಾದ್ದ್ವಿಜಾಃ ॥ ೩೨ ॥
ಯದತ್ರ ಕ್ರಿಯತೇ ಕಿಂಚಿತ್ಕರ್ಮ ಧರ್ಮ್ಯಂ ದ್ವಿಜೋತ್ತಮಾಃ ।
ತದ್ಬಾಹ್ಯಂ ಚ ಭವೇದ್ವ್ಯರ್ಥಮೇತದ್ವಿದ್ಮಃ ಸ್ಫುಟಂ ವಯಂ ॥ ೩೩ ॥
ಪ್ರಾರ್ಥಯಾಮೋ ವಿಶೇಷೇಣ ತೇನ ದೈನ್ಯಂ ಸಮಾಗತಾಃ ।
ಪ್ರಸಾದಃ ಕ್ರಿಯತಾಂ ತಸ್ಮಾದಾಜ್ಞಾಂ ಯಚ್ಛತ ಮಾ ಚಿರಂ ॥ ೩೪ ॥

ಸೂತ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಬ್ರಾಹ್ಮಣಾಸ್ತೇ ಪರಸ್ಪರಂ ।
ಮಂತ್ರಂ ಚಕ್ರುಸ್ತದರ್ಥಂ ಹಿ ಕಿಂ ಕೃತಂ ಸುಕೃತಂ ಭವೇತ್ ॥ ೩೫ ॥
ಏಕೇ ಪ್ರೋಚುರ್ನ ದಾಸ್ಯಾಮಃ ಪ್ರಾಸಾದಾರ್ಥಂ ವಸುಂಧರಾಂ ।
ಏತೇಷಾಮಪಿ ಚೈಕಸ್ಯ ತಸ್ಮಾದ್ಗಚ್ಛಂತು ಸತ್ವರಂ ॥ ೩೬ ॥

---

೩೦–೩೨. ಆ ರಾಜನು ಇತರ ಬ್ರಾಹ್ಮಣರ ಮುಂದೆ ಪ್ರೇತನಾದ ತಂದೆಗೆ ವಿಧಿಯಂತೆ ಶ್ರಾವಣ ಮಾಸದಲ್ಲಿ ನಾಗಪಂಚಮೀ ದಿನ ಶ್ರಾದ್ಧವನ್ನು ಮಾಡಿದರೂ ತಂದೆಯು ಸರ್ಪದೋಷದಿಂದುಂಟಾದ ಪ್ರೇತತ್ವದಿಂದ ಮುಕ್ತನಾಗಲಿಲ್ಲ. ಆದುದರಿಂದ ಅವನು ದೇವಶರ್ಮನ ಮುಂದೆ ಶ್ರಾದ್ಧಮಾಡಿದನು. ಅದರಿಂದ ಅವನ ತಂದಯು ಪ್ರೇತತ್ವದಿಂದ ಮುಕ್ತನಾದನು.

೩೩. ದ್ವಿಜವರ್ಯರೆ! ಇಲ್ಲಿ ಮಾಡಿದ ಧರ್ಮಕಾರ್ಯವು ಬಾಹ್ಯವೂ, ವ್ಯರ್ಥವೂ ಆಗುವುದೆಂಬುದನ್ನು ನಾವು ಅರಿತಿದ್ದೇವೆ.

೩೪. ಆದುದರಿಂದ ದೀನರಾಗಿ ಅತಿಶಯವಾಗಿ ಪ್ರಾರ್ಥಿಸುತ್ತೇವೆ. ಅದರಿಂದ ಅನುಗ್ರಹಿಸಿ ಶೀಘ್ರವಾಗಿ ಅಪ್ಪಣೆಯನ್ನು ಕೊಡಿರಿ.”

೩೫. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣರು ಆ ಕುರುಪಾಂಡವರ ಆ ಮಾತನ್ನು ಕೇಳಿ ಯಾವುದನ್ನು ಮಾಡಿದರೆ ಒಳ್ಳೆಯದಾಗುವುದೆಂದು ಪರಸ್ಪರ ವಾಗಿ ಆಲೋಚಿಸಿದರು.

೩೬. ಕೆಲವರು ಇವರಲ್ಲಿ ಒಬ್ಬನಿಗೂ ಪ್ರಾಸಾದವನ್ನು ನಿರ್ಮಿಸಲು ಭೂಮಿಯನ್ನು ಕೊಡುವುದಿಲ್ಲ. ಇವರು ಬೇಗನೆ ಇಲ್ಲಿಂದ ಹೊರಡಲಿ.

ಪಂಚಕ್ರೋಶಪ್ರಮಾಣೇನ ಕ್ಷೇತ್ರಮೇತದ್ವ್ಯವಸ್ಥಿತಂ ।
ಪೂರ್ವೇಷಾಮಪಿ ದೇವಾನಾಂ ಪ್ರಾಸಾದೈಸ್ತತ್ಸಮಾವೃತಂ ॥ ೩೭ ॥
ಅನ್ಯೇ ಪ್ರೋಚುರ್ಧನೋನ್ಮತ್ತಾ ಯೂಯಂ ಚ ಸುಖಮಾಶ್ರಿತಾಃ ।
ದಾರಿದ್ರ್ಯಾರ್ತಿಂ ನ ಜಾನೀಥ ಬ್ರೂಥ ತೇನ ಭೃಶಂ ವಚಃ ॥ ೩೮ ॥
ತಸ್ಮಾದ್ದ್ವಯಂ ಪ್ರದಾಸ್ಯಾಮ ಏತೇಷಾಂ ಹಿ ವಸುಂಧರಾಂ ।
ಅರ್ಥಸಿದ್ಧಿರ್ಭವೇದ್ಯೇನ ಭೂಷಾ ಸ್ಥಾನಸ್ಯ ಜಾಯತೇ ॥ ೩೯ ॥
ತಥಾಽನ್ಯೇ ಮಧ್ಯಮಾಃ ಪ್ರೋಚುರ್ಯತ್ರ ಸಾಕ್ಷಾಜ್ಜನಾರ್ದನಃ ।
ಸ್ವಯಂ ಪ್ರಾರ್ಥಯತೇ ಭೂಮಿಂ ತತ್ಕಸ್ಮಾನ್ನಪ್ರದೀಯತೇ ॥ ೪೦ ॥
ತಸ್ಮಾದ್ಯತ್ರ ಸಮಾಯಾತಾಃ ಕುರುಪಾಂಡವಯಾದವಾಃ ।
ಪ್ರಾಧಾನ್ಯೇನ ಪ್ರಕುರ್ವಂತು ಪ್ರಾಸಾದಾಂಸ್ತೇನ ಚಾಽಪರೇ ॥ ೪೧ ॥
ಯಾಚತೇ ಯತ್ರ ಗಾಂಗೇಯಃ ಸ್ವಯಮೇವ ತಥಾ ಪರಃ ।
ಧೃತರಾಷ್ಟ್ರಃ ಸಪುತ್ರಶ್ಚ ಪಾಂಡವಾಶ್ಚ ಮಹಾಬಲಾಃ ।
ಲಿಂಗಸಂಸ್ಥಾಪನಾರ್ಥಾಯ ನಿಷೇಧಸ್ತತ್ರ ನಾಽರ್ಹತಿ ॥ ೪೨ ॥
ತೇಷಾಂ ತದ್ವಚನಂ ಶ್ರುತ್ವಾ ಪ್ರತಿಪನ್ನಂ ದ್ವಿಜೋತ್ತಮೈಃ ।
ನಿರ್ಧನೈಃ ಸಧನೈಶ್ಚಾಽಪಿ ಸಸ್ಪೃಹೈರ್ನಿಸ್ಪೃಹೈರಪಿ ॥ ೪೩ ॥

---

೩೭. ಹಿಂದಿನ ದೇವತೆಗಳ ಪ್ರಾಸಾದಗಳಿಂದ ಕೂಡಿದ ಈ ಕ್ಷೇತ್ರವು ಹತ್ತು ಮೈಲಿ ಪ್ರಮಾಣವಾಗಿರುವುದು ಎಂದರು.

೩೮. ಇನ್ನು ಕೆಲವರು ಹೀಗೆಂದರು. ಧನಮದಾಂಧರೂ, ಸುಖಿಗಳೂ ಆದ ನೀವು ಬಡತನದ ಕಷ್ಟವನ್ನು ಅರಿಯುವುದಿಲ್ಲ. ಆದುದರಿಂದ ಹೀಗೆ ಹೇಳುತ್ತೀರಿ.

೩೯. ಆದುದರಿಂದ ನಾವು ಇವರಿಗೆ ಭೂಮಿಯನ್ನು ಕೊಡುವೆವು. ಇದರಿಂದ ನಮಗೆ ಹಣವು ಬರುವುದು. ಈ ಸ್ಥಳವೂ ಅಲಂಕಾರಗೊಳ್ಳುವುದು. ಎಂದರು.

೪೦. ಹಾಗೆಯೇ ಇತರ ಮಧ್ಯಮರು ಇಂತೆಂದರು. ಕೃಷ್ಣನೇ ಪ್ರತ್ಯಕ್ಷವಾಗಿ ಕೇಳುವಾಗ ಏಕೆ ಕೊಡುವುದಿಲ್ಲ?

೪೧. ಆದ್ದರಿಂದ ಇಲ್ಲಿಗೆ ಬಂದಿರುವ ಕುರುಪಾಂಡವ ಯಾದವರೂ, ಇತರರೂ, ಮುಖ್ಯವಾಗಿ ದೇವಾಲಯಗಳನ್ನು ನಿರ್ಮಿಸಲಿ.

೪೨. ಭೀಷ್ಮನೂ, ಪುತ್ರರಿಂದ ಸಹಿತನಾದ ಧೃತರಾಷ್ಟ್ರನೂ, ಅತಿಬಲಿಷ್ಠರಾದ ಪಾಂಡವರೂ ಲಿಂಗವನ್ನು ಸ್ಥಾಪಿಸಲು ಸ್ಥಳವನ್ನು ಬೇಡುತ್ತಿದ್ದಾರೆ. ಅವರಿಗೆ ಅಡ್ಡಿಯನ್ನು ಮಾಡುವುದು ಉಚಿತವಲ್ಲ.

೪೩. ಅವರ ಆ ಮಾತನ್ನು ಕೇಳಿ ಬಡವರೂ, ಧನಿಕರೂ, ಆಶೆಯುಳ್ಳವರೂ, ಆಶೆಯಿಲ್ಲದವರೂ ಆದ ಬ್ರಾಹ್ಮಣೋತ್ತಮರು ಒಪ್ಪಿದರು.

ತತಃ ಸಮೇತ್ಯ ತೇ ಸರ್ವೇ ಬ್ರಾಹ್ಮಣಾಃ ಕುರುಸತ್ತಮಾನ್ ।
ಯಾದವಾನ್ ಪಾಂಡವಾನ್ ಪ್ರೋಚುಃ ಕೃತ್ವಾನ್ಯೈ ಮಂತ್ರನಿಶ್ಚಯಂ॥೪೪॥

ಬ್ರಾಹ್ಮಣಾ ಊಚುಃ:–

ಏತತ್ಸ್ವಲ್ಪತರಂ ಕ್ಷೇತ್ರಂ ಸರ್ವೇಷಾಮಪಿ ಭೂಭುಜಾಂ ।
ಪ್ರಾಸಾದೈಃ ಸರ್ವತೋ ವ್ಯಾಪ್ತಂ ತತ್ಕಿಂ ಬ್ರೂಮೋಽಧುನಾ ವಯಂ ॥೪೫॥
ತದ್ಭವಂತಃ ಪ್ರಕುರ್ವಂತು ಪ್ರಾಧಾನ್ಯೇನ ಯದೃಚ್ಛಯಾ ।
ಕ್ಷೇತ್ರೇಽತ್ರೈವಾಽಭಿಮುಖ್ಯೇನ ಪ್ರಾಸಾದಾನ್ ಸುಮನೋಹರಾನ್ ।
ಯಥಾಜ್ಯೇಷ್ಠಂ ಯಥಾಶ್ರೇಷ್ಠಂ ಪೃಥಕ್ತ್ವೇನ ವ್ಯವಸ್ಥಿತಾಃ ॥ ೪೬ ॥
ಅಥ ಹರ್ಷಸಮಾಯುಕ್ತಾ ಧೃತರಾಷ್ಟ್ರಮುಖಾಃ ಕ್ರಮಾತ್ ।
ಪ್ರಾಧಾನ್ಯೇನ ಯಥಾ ಶ್ರೇಷ್ಠಂ ಚಕ್ರುಃ ಪ್ರಾಸಾದ ಪದ್ಧತಿಂ ॥ ೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧೃತರಾಷ್ಟ್ರಾದಿಕೃತ ಪ್ರಾಸಾದಸ್ಥಾಪನೋದ್ಯಮವರ್ಣನಂ"
ನಾಮ ತ್ರಿಸಪ್ತತಿತಮೋಽಧ್ಯಾಯಃ

---

೪೪. ಬಳಿಕ ಆ ಎಲ್ಲ ಬ್ರಾಹ್ಮಣರೂ ಒಟ್ಟಿಗೆ ಸೇರಿ ಮಂತ್ರಾಲೋಚನೆಮಾಡಿ ಕೌರವ ಯಾದವ ಪಾಂಡವರನ್ನು ಕುರಿತು ಇಂತೆಂದರು.

೪೫. ಬ್ರಾಹ್ಮಣರು ಹೇಳುತ್ತಾರೆ:—ಸಕಲ ರಾಜರ ಪ್ರಸಾದಗಳಿಂದ ವ್ಯಾಪ್ತವಾದ ಈ ಕ್ಷೇತ್ರವು ಸಣ್ಣದಾಗಿರುವುದು. ಈಗ ನಾವು ಏನನ್ನು ಹೇಳೋಣ.

೪೬. ಆದುದರಿಂದ ನೀವು ಸ್ವೇಚ್ಛೆಯಿಂದ ಈ ಕ್ಷೇತ್ರದಲ್ಲಿ ಮನೋಹರವಾದ ಪ್ರಾಸಾದಗಳನ್ನು ಜ್ಯೇಷ್ಠರನ್ನೂ, ಶ್ರೇಷ್ಠರನ್ನೂ ಅನುಸರಿಸಿ ನಿರ್ಮಿಸಿರಿ.

೪೭. ಬಳಿಕ ಧೃತರಾಷ್ಟ್ರ ಮೊದಲಾದವರು ಸಂತೋಷದಿಂದ ಶ್ರೇಷ್ಠರನ್ನು ಅನುಸರಿಸಿ ಪ್ರಾಸಾದಗಳ ಸಾಲುಗಳನ್ನು ರಚಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧೃತರಾಷ್ಟ್ರಾದಿಕೃತ ಪ್ರಾಸಾದಸ್ಥಾಪನೋದ್ಯಮವರ್ಣನ"ವೆಂಬ
ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಸಪ್ತತಿತಮೋಽಧ್ಯಾಯಃ

### ಕೌರವಪಾಂಡವಯಾದವಕೃತ ಲಿಂಗಪ್ರತಿಷ್ಠಾವೃತ್ತಾಂತವರ್ಣನಂ

ಸೂತ ಉವಾಚ :—

ಧೃತರಾಷ್ಟ್ರೇಣ ಭೂಪೇನ ಶತಪುತ್ರಾನ್ವಿತೇನ ಚ ।
ಲಿಂಗಾನಾಂ ಸ್ಥಾಪಿತಂ ತತ್ರ ಶತಮೇಕೋತ್ತರಂ ದ್ವಿಜಾಃ ॥ ೧ ॥
ತಥಾ ಚ ಪಾಂಡವೈಃ ಸರ್ವೈಃ ಸ್ಥಾಪಿತಂ ಲಿಂಗಪಂಚಕಂ ।
ದ್ರೌಪದ್ಯಾ ಚಾಽಥ ಕುಂತ್ಯಾಽಥ ಗಾಂಧಾರ್ಯಾಽಥ ಯದೃಚ್ಛಯಾ ॥ ೨ ॥
ಭಾನುಮತ್ಯಾ ಚ ಗೌರೀಣಾಂ ಸ್ಥಾಪಿತಂ ಚ ಚತುಷ್ಟಯಂ ।
ವಿದುರೇಣಾಽಥ ಶಲ್ಯೇನ ಕಲಿಂಗೇನ ಯುಯುತ್ಸುನಾ ॥ ೩ ॥
ಬಾಹ್ಲೀಕೇನ ಸಪುತ್ರೇಣ ಕರ್ಣೇನಾಽಥ ಸಸೂನುನಾ ।
ತಥಾ ಶಕುನಿನಾ ತತ್ರ ದ್ರೋಣೇನ ಚ ಕೃಪೇಣ ಚ ॥ ೪ ॥
ಅಶ್ವತ್ಥಾಮ್ನಾ ಪೃಥಕ್‌ತ್ವೇನ ಲಿಂಗಮೇಕೈಕಮುತ್ತಮಂ ।
ಸ್ಥಾಪಿತಂ ಪರಯಾ ಭಕ್ತ್ಯಾ ವರಪ್ರಾಸಾದಮಾಶ್ರಿತಂ ॥ ೫ ॥
ತಥಾ ಸಂಸ್ಥಾಪಿತಂ ತತ್ರ ವಿಷ್ಣುನಾ ಪ್ರಭವಿಷ್ಣುನಾ ।
ಲಿಂಗಂ ಪ್ರಾಸಾದಮಾದಾಯ ಪ್ರೋತ್ತುಂಗಶಿಖರಾನ್ವಿತಂ ॥ ೬ ॥

---

## ಕನ್ನಡದ ಅನುವಾದ

### ಕೌರವಪಾಂಡವಯಾದವಕೃತ ಲಿಂಗಪ್ರತಿಷ್ಠಾವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜರೆ! ಅಲ್ಲಿ ಧೃತರಾಷ್ಟ್ರನು ತನ್ನ ಶತಪುತ್ರರೊಡನೆ ನೂರೊಂದು ಲಿಂಗಗಳನ್ನು ಸ್ಥಾಪಿಸಿದನು.

೨–೫. ಹಾಗೆಯೇ ಪಾಂಡವರು ಐದು ಲಿಂಗಗಳನ್ನು ಪ್ರತಿಷ್ಠೆಮಾಡಿದರು. ದ್ರೌಪದಿ, ಕುಂತಿ, ಗಾಂಧಾರಿ, ಭಾನುಮತಿ ಇವರು ನಾಲ್ಕು ಗೌರೀ ಪ್ರತಿಮೆಗಳನ್ನು ಪ್ರತಿಷ್ಠೆಮಾಡಿದರು. ವಿದುರ, ಶಲ್ಯ, ಕಲಿಂಗ, ಯುಯುತ್ಸು, ಬಾಹ್ಲೀಕ, ಕರ್ಣ, ಶಕುನಿ, ದ್ರೋಣ, ಕೃಪ, ಅಶ್ವತ್ಥಾಮ ಇವರು ಪ್ರತ್ಯೇಕವಾಗಿ ಒಂದೊಂದು ಲಿಂಗಗಳನ್ನು ಸ್ಥಾಪಿಸಿ ಉತ್ತಮ ಪ್ರಾಸಾದವನ್ನು ರಚಿಸಿದರು.

೬. ಸಮರ್ಥನಾದ ಕೃಷ್ಣನೂ ಉನ್ನತ ಶಿಖರಗಳಿಂದಕೂಡಿದ ಪ್ರಾಸಾದವನ್ನು ನಿರ್ಮಿಸಿ ಒಂದು ಲಿಂಗವನ್ನು ಸ್ಥಾಪಿಸಿದನು.

ಸಾತ್ವತೇನಾಽಪಿ ಸಾಂಬೇನ ಬಲಭದ್ರೇಣ ಧೀಮತಾ ।
ಪ್ರದ್ಯುಮ್ನೇನಾನಿರುದ್ಧೇನ ತಥಾಽನ್ಯೈರ್ಮುಖ್ಯಯಾದವೈಃ ॥ ೭ ॥
ಚಾರುದೇಷ್ಣಾದಿಭಿಃ ಪುತ್ರೈ ರುಕ್ಮಿಣ್ಯಾ ದಶಭಿಃ ಸುತೈಃ ।
ಲಿಂಗಾನಾಂ ದಶಕಂ ಮುಖ್ಯಂ ಸ್ಥಾಪಿತಂ ಶ್ರದ್ಧಯಾನ್ವಿತೈಃ ॥ ೮ ॥
ಏವಂ ಸಂಸ್ಥಾಪ್ಯ ಲಿಂಗಾನಿ ತೇ ಸರ್ವೇ ಕುರುಪಾಂಡವಾಃ ।
ಯಾದವಾಶ್ಚ ಸುಸಂಹೃಷ್ಟಾಃ ಕೃತಕೃತ್ಯಾಸ್ತದಾಽಭವನ್ ॥ ೯ ॥
ತತ್ರ ಸ್ಥಿತ್ವಾ ಚಿರಂ ಕಾಲಂ ದತ್ವಾ ದಾನಾನ್ಯನೇಕಶಃ ।
ಧನಾಢ್ಯಾನ್ ಬ್ರಾಹ್ಮಣಾನ್ ಕೃತ್ವಾ ಚಮತ್ಕಾರಪುರೋದ್ಭವಾನ್ ॥ ೧೦ ॥
ದತ್ವಾ ತೇಭ್ಯೋ ವರಾನ್ನಾಗಾನ್ ಹಯಾಂ ಜಾತ್ಯಾನನೇಕಶಃ ।
ಸದ್ಗ್ರಾಮಾಣಿ ವಿಚಿತ್ರಾಣಿ ಕ್ಷೇತ್ರಾಣಿ ಚ ಸುಧೇನವಃ ॥ ೧೧ ॥
ಮಹೋಕ್ಷಾಂಶ್ಚ ಸುವಸ್ತ್ರಾಣಿ ಭೂಸ್ಥಾನಾನ್ಯಾಶ್ರಯಾಂಸ್ತಥಾ ।
ದಾಸೀ ದಾಸಾಂಸ್ತಥಾ ಭೃತ್ಯಾನ್ ದಾನಾನಿ ವಿವಿಧಾನಿ ಚ ॥ ೧೨ ॥
ತತ ಆಮಂತ್ರ್ಯ ತಾನ್ ಸರ್ವಾನ್ ಪ್ರಣಿಪತ್ಯ ಮುಹುರ್ಮುಹುಃ ।
ಸ್ವಸ್ಥಾನಂ ಪ್ರತಿ ಸಂಹೃಷ್ಟಾಃ ಪ್ರಜಗ್ಮುಃ ಸರ್ವ ಏವ ತೇ ॥ ೧೩ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಸ್ಥಾಪಿತಂ ತೇನ ಭೂಭುಜಾ ।
ತಥಾ ತದ್ಧೃತರಾಷ್ಟ್ರೇಣ ಲಿಂಗಂ ಪಾತಕ ನಾಶನಂ ॥ ೧೪ ॥

---

೭. ಸಾತ್ವತ, ಸಾಂಬ, ಬಲರಾಮ, ಪ್ರದ್ಯುಮ್ನ, ಅನಿರುದ್ಧ, ಇವರೂ ಇತರ ಯಾದವರೂ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿದರು.

೮. ರುಕ್ಮಿಣಿಯ ಚಾರುದೇಷ್ಣ ಮೊದಲಾದ ಹತ್ತು ಮಂದಿ ಪುತ್ರರು ಶ್ರದ್ಧೆಯಿಂದ ಹತ್ತು ಶಿವಲಿಂಗಗಳನ್ನು ಸ್ಥಾಪಿಸಿದರು.

೯. ಆ ಕುರುಪಾಂಡವರೂ, ಯಾದವರೂ ಸಂತೋಷದಿಂದ ಹೀಗೆ ಶಿವಲಿಂಗಗಳನ್ನು ಸ್ಥಾಪಿಸಿ ಧನ್ಯರಾದರು.

೧೦–೧೩. ಅವರು ಅಲ್ಲಿ ಬಹಳಕಾಲವಿದ್ದು ಚಮತ್ಕಾರಪುರದ ಬ್ರಾಹ್ಮಣರಿಗೆ ಉತ್ತಮ ಆನೆಗಳನ್ನೂ, ಉತ್ತಮಜಾತಿಯ ಕುದುರೆಗಳನ್ನೂ, ಗ್ರಾಮ, ಕ್ಷೇತ್ರ, ಗೋವು, ಎತ್ತು, ವಸ್ತ್ರ, ಭೂಮಿ, ದಾಸಿ, ದಾಸ, ಸೇವಕ ಮೊದಲಾದ ಅನೇಕ ವಸ್ತುಗಳನ್ನೂ ದಾನವಾಗಿ ಕೊಟ್ಟು ಅವರನ್ನು ಧನವಂತರನ್ನಾಗಿ ಮಾಡಿ ಅವರನ್ನು ಕರೆಯಿಸಿ ನಮಸ್ಕಾರ ಮಾಡಿ ಸಂತೋಷದಿಂದ ಎಲ್ಲರೂ ತಮ್ಮ ಸ್ಥಳಕ್ಕೆ ತೆರಳಿದರು.

೧೪–೧೫. ಸೂತನು ಹೇಳುತ್ತಾನೆ:—ಹೀಗೆ ನಿಮಗೆ ಆ ಧೃತರಾಷ್ಟ್ರನೂ,

ತಥಾಽನ್ಯೈರಪಿ ಭೂಪಾಲೈಃ ಪ್ರಾಧಾನ್ಯೇನ ವ್ಯವಸ್ಥಿತೈಃ ।
ಪಾಂಡವೈರ್ಯಾದವೈಶ್ಚೈವ ಪೃಥಕ್ತ್ವೇನ ವ್ಯವಸ್ಥಿತೈಃ ॥ ೧೫ ॥
ಯಸ್ತಾನಿ ಪುರುಷಃ ಸಮ್ಯಕ್ಪೂಜಯೇದ್ಭಕ್ತಿಭಾವಿತಃ ।
ಸ ಲಭೇಚ್ಛಾಽಖಿಲಾನ್ ಕಾಮಾನ್ವಾಂಛಿತಾನ್ ಸ್ವೇನ ಚೇತಸಾ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕೌರವಪಾಂಡವಯಾದವಕೃತ ಲಿಂಗಪ್ರತಿಷ್ಠಾ ವೃತ್ತಾಂತವರ್ಣನಂ"
ನಾಮ ಚತುಃಸಪ್ತತಿತಮೋಽಧ್ಯಾಯಃ

---

ಇತರ ಪ್ರಧಾನರಾಜರೂ, ಪಾಂಡವ ಯಾದವರೂ ಲಿಂಗಗಳನ್ನು ಸ್ಥಾಪಿಸಿರುವುದನ್ನು ಹೇಳಿರುವೆನು.

೧೬. ಅವುಗಳನ್ನು ಚೆನ್ನಾಗಿ ಭಕ್ತಿಯಿಂದ ಪೂಜಿಸುವ ಮಾನವನು ತಾನು ಅಪೇಕ್ಷಿಸಿದ ವಿಷಯುಗಳನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕೌರವಪಾಂಡವಯಾದವಕೃತ ಲಿಂಗಪ್ರತಿಷ್ಠಾವೃತ್ತಾಂತವರ್ಣನ"ವೆಂಬ
ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಪಂಚಸಪ್ತತಿತಮೋಽಧ್ಯಾಯಃ

## ಯಜ್ಞಭೂಮಿ ಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

ಪುರಾ ಕಲ್ಪೇ ಭಗವತಾ ಏತತ್ಕ್ಷೇತ್ರಮನುತ್ತಮಂ ।
ರುದ್ರೇಣ ಬ್ರಹ್ಮಣೇ ದತ್ತಂ ತುಷ್ಟೇನ ದ್ವಿಜಸತ್ತಮಾಃ ॥ ೧ ॥
ಯದಾತು ಸ್ಥಾಪಿತಂ ಲಿಂಗಂ ಹಾಟಕೇಶ್ವರ ಸಂಜ್ಞಿತಂ ।
ದೇವೈಃ ಪ್ರೀತೇನ ರುದ್ರೇಣ ಪ್ರದತ್ತಂ ಬ್ರಹ್ಮಣೇ ಪುನಃ ॥ ೨ ॥
ಏತತ್ಕ್ಷೇತ್ರಂ ತದಾ ದತ್ತಂ ಶಂಭುನಾ ಷಣ್ಮುಖಸ್ಯ ಹ ।
ರಕ್ಷಣಾರ್ಥಂ ಹಿ ವಿಪ್ರಾಣಾಂ ಕಲಿಕಾಲಾದಿ ದೋಷತಃ ॥ ೩ ॥
ಬ್ರಹ್ಮಣಾ ಪ್ರಾರ್ಥಿತೇನೇದಂ ಸ್ವಯಮಾದಿಮಮುತ್ತಮಂ ।
ಪಿತ್ರಾದಿಷ್ಟಸ್ತು ಗಾಂಗೇಯಸ್ತತ್ರ ವಾಸಮಥಾಕರೋತ್ ॥ ೪ ॥
ಕಾರ್ತಿಕ್ಯಾಂ ಕೃತ್ತಿಕಾಯೋಗೇ ಯಃ ಕುರ್ಯಾತ್ಸ್ವಾಮಿ ದರ್ಶನಂ ।
ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ॥ ೫ ॥
ಮಹಾಸೇನಸ್ಯ ದೇವಸ್ಯ ಪ್ರಾಸಾದಂ ಸುಮನೋಹರಂ ।
ಉಚ್ಚೈಃ ಸ್ಥಿತಂ ಸರ್ವಲೋಕೇ ಪಾತುಕಾಮಮಿವಾಂಬರಂ ॥ ೬ ॥

---

## ಕನ್ನಡದ ಅನುವಾದ

### ಯಜ್ಞಭೂಮಿ ಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಹಿಂದಿನ ಕಲ್ಪದಲ್ಲಿ ಪೂಜ್ಯನಾದ ರುದ್ರನು ಸಂತುಷ್ಟನಾಗಿ ಈ ಕ್ಷೇತ್ರವನ್ನು ಬ್ರಹ್ಮನಿಗಿತ್ತನು.

೨. ದೇವತೆಗಳು ಹಾಟಕೇಶ್ವರವೆಂಬ ಲಿಂಗವನ್ನು ಪ್ರತಿಷ್ಠೆಮಾಡಲು ರುದ್ರನು ಆ ಕ್ಷೇತ್ರವನ್ನು ಬ್ರಹ್ಮನಿಗೆ ಕೊಟ್ಟನು.

೩—೪. ಮತ್ತು ಕಲಿಕಾಲದ ದೋಷದಿಂದ ಬ್ರಾಹ್ಮಣರನ್ನು ರಕ್ಷಿಸುವುದಕ್ಕಾಗಿ ಬ್ರಹ್ಮನ ಪ್ರಾರ್ಥನೆಯಿಂದ ಷಣ್ಮುಖನಿಗೂ ಕೊಟ್ಟನು. ಭೀಷ್ಮನು ತಂದೆಯ ಅಪ್ಪಣೆಯಿಂದ ಅಲ್ಲಿ ವಾಸಮಾಡಿದನು.

೫—೬. ಕಾರ್ತಿಕ ಪೂರ್ಣಿಮಾದಿನ ಕೃತ್ತಿಕಾನಕ್ಷತ್ರದ ಯೋಗವಿರುವಾಗ ಆಕಾಶವನ್ನು ಕುಡಿಯುವುದಕ್ಕೋ ಎಂಬಂತೆ ಸಕಲ ಲೋಕಗಳಿಗಿಂತ ಉನ್ನತವಾಗಿರುವ ಮಹಾಸೇನನ ಪ್ರಾಸಾದವನ್ನೂ, ಅದರಲ್ಲಿರುವ ಲಿಂಗವನ್ನೂ ದರ್ಶನಮಾಡಿದ ಬ್ರಾಹ್ಮಣನು ಏಳು ಜನ್ಮಗಳಲ್ಲಿ ಹಣಗಾರನೂ, ವೇದಾಧ್ಯಯನಸಂಪನ್ನನೂ ಆಗುವನು.

ತಚ್ಛ್ರುತ್ವಾ ವಿಬುಧಾಃ ಸರ್ವೇ ಕೌತುಕಾದೇತ್ಯ ಸತ್ವರಂ ।
ವೀಕ್ಷಾಂಚಕ್ರುಸ್ತತೋ ಗತ್ವಾ ದೃಷ್ಟ್ವಾ ಮೇಧ್ಯತಮಂ ಪುರಂ ॥ ೭ ॥
ಪ್ರಾಸಾದಸ್ಯೋತ್ತರೇ ದೇಶೇ ಪ್ರಾಚ್ಯೇ ದೇಶೇ ತಥಾ ದ್ವಿಜಾಃ ।
ಯಜ್ಞಕ್ರಿಯಾ ಸಮಾರಂಭಾಂಶ್ಚಕ್ರುರ್ವಿಪ್ರೈರ್ಯಥೋದಿತಾನ್ ॥ ೮ ॥
ಇಷ್ಟ್ವಾ ಚ ವಿಬುಧಾಃ ಸರ್ವೇ ದತ್ವಾ ತೇಭ್ಯಶ್ಚ ದಕ್ಷಿಣಾಂ ।
ಜಗ್ಮುಸ್ತ್ರಿವಿಷ್ಟಪಂ ಹೃಷ್ಟಾ ಲಬ್ಧ್ವಾ ತತ್ ಸ್ಥಾನಜಂ ಫಲಂ ॥ ೯ ॥
ತತಸ್ತು ದೇವಯಜನಂ ನಾಮ ತಸ್ಯ ಬಭೂವ ಹ ।
ಯದನ್ಯತ್ರ ಶತಂ ಕೃತ್ವಾ ಕ್ರತೂನಾಂ ಫಲಮಾಪ್ನುಯಾತ್ ।
ತದತ್ರೈಕೇನ ಲಭತೇ ಕ್ರತುನಾ ದಕ್ಷಿಣಾವತಾ ॥ ೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಜ್ಞಭೂಮಿಮಾಹಾತ್ಮ್ಯವರ್ಣನಂ"
ನಾಮ ಪಂಚಸಪ್ತತಿತಮೋಽಧ್ಯಾಯಃ

---

೭. ಸಕಲ ಬ್ರಾಹ್ಮಣರು ಅದನ್ನು ಕೇಳಿ ಬೇಗನೆ ಕುತೂಹಲದಿಂದ ಅಲ್ಲಿಗೆ ಬಂದು ಪವಿತ್ರವಾದ ಆ ಪಟ್ಟಣವನ್ನು ಕಂಡರು.

೮–೯. ಆ ಬ್ರಾಹ್ಮಣರು ಪ್ರಾಸಾದದ ಉತ್ತರ ಪೂರ್ವದಿಕ್ಕುಗಳಲ್ಲಿ ಬ್ರಾಹ್ಮಣರಿಂದ ಶಾಸ್ತ್ರವಿಧಿಯಂತೆ ಯಜ್ಞಗಳನ್ನುಮಾಡಿ ದಕ್ಷಿಣೆಗಳನ್ನಿತ್ತು ಆ ಸ್ಥಳದ ಫಲವನ್ನು ಪಡೆದು ಸಂತೋಷದಿಂದ ದೇವಲೋಕಕ್ಕೆ ತೆರಳಿದರು.

೧೦. ಅನಂತರ ಆ ಕ್ಷೇತ್ರಕ್ಕೆ ದೇವಯಜನ ಎಂದು ಹೆಸರಾಯಿತು. ಇತರ ಕಡೆಯಲ್ಲಿ ಮಾಡಿದ ನೂರು ಯಜ್ಞಗಳ ಫಲವು ಇಲ್ಲಿ ದಕ್ಷಿಣೆಯುಳ್ಳ ಒಂದು ಯಾಗದಿಂದಲೇ ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಜ್ಞಭೂಮಿಮಾಹಾತ್ಮ್ಯವರ್ಣನ"ವೆಂಬ
ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.

